# ಈ ಗ್ರಂಥವನ್ನು ಕುರಿತು....

........ಯಾವ ಮತದವರಿಗೂ ಮನಸ್ಸು ನೋಯಿಸಲು ಅವಕಾಶವಿಲ್ಲದಂತೆ ಪಾಮರರಿಗೂ ಸಹ ಚೆನ್ನಾಗಿ ತಿಳಿಯುವಂತೆ ಬರೆದಿರುತ್ತಾರೆ.

—ಶ್ರೀ ಶ್ರೀ ಜಗದ್ಗುರು ಮಹಾಸ್ವಾಮಿಗಳವರು,
ಶೃಂಗೇರಿ ಮಠ.

... ... ಹಿಂದೂಧರ್ಮದ ತತ್ತ್ವ ಮತ್ತು ಅನುಷ್ಠಾನದ ಬಗ್ಗೆ ಇಷ್ಟೊಂದು ಉಪಯುಕ್ತ ಮಾಹಿತಿಗಳಿಂದ ಕೂಡಿ ಸರಳ ಸುಂದರ ನಿರೂಪಣೆಯನ್ನು ಒಳಗೊಂಡ ಈ ಗ್ರಂಥ ಕನ್ನಡ ಧಾರ್ಮಿಕ ವಾಙ್ಮಯದಲ್ಲಿ ಅಪೂರ್ವವೇ ಸರಿ.

—ಶ್ರೀ ಶ್ರೀ ಜಗದ್ಗುರು ಮಹಾಸ್ವಾಮಿಗಳವರು,
ಶ್ರೀಮದ್ ರಾಮಚಂದ್ರಾಪುರ ಮಠ.

.... . ಯಾವ ಮತದವರಿಗೂ ಉದ್ವೇಗವಾಗದಂತೆ ಆಯಾಯ ಮತವನ್ನು ನಿರೂಪಣೆ ಮಾಡಿರುವುದು ಕಂಡುಬಂದಿದ್ದು ಅದು ಶ್ಲಾಘನೀಯ.

—ಶ್ರೀ ಶ್ರೀ ಜಗದ್ಗುರು ಮಹಾಸ್ವಾಮಿಗಳವರು,
ಶ್ರೀ ಬ್ರಹ್ಮತಂತ್ರಪರಕಾಲ ಮಠ.

........ಹಿಂದೂಧರ್ಮದ ಎಲ್ಲ ಮುಖಗಳ ಸಂಕ್ಷಿಪ್ತ ಪರಿಚಯ ವನ್ನು ಮಾಡಿರುವ ಈ ಪುಸ್ತಕವು ಅತ್ಯಂತ ಉಪಯುಕ್ತವಾದ ಕೃತಿ ಯಾಗಿದೆ.

—ಶ್ರೀ ಶ್ರೀ ಜಗದ್ಗುರು ಮಹಾಸ್ವಾಮಿಗಳವರು,
ಶ್ರೀ ಪೇಜಾವರ ಮಠ.

.... .ಎಲ್ಲಾ ದರ್ಶನಗಳ ಉಪಯುಕ್ತವಾದ ವಿಷಯಗಳನ್ನೂ ಸಾಮರಸ್ಯದಿಂದ ಮತ್ತು ಸಹಾನುಭೂತಿಯಿಂದ ವಿವರಿಸಿರುತ್ತಾರೆ.

—ಶ್ರೀಮತ್ ಸ್ವಾಮಿ ಆದಿದೇವಾನಂದಜಿ ಮಹಾರಾಜ್,
ಶ್ರೀ ರಾಮಕೃಷ್ಣ ಮಠ.

........ಜನಸಾಮಾನ್ಯರಿಗೂ ಕೂಡ ಹಿಂದೂಧರ್ಮದ ಪರಿಚಯ ಮಾಡಿಕೊಳ್ಳಲು ಇದು ಯೋಗ್ಯವಾದ ಪುಸ್ತಕವಾಗಿದೆ.

—ಧರ್ಮಾಧಿಕಾರಿ ಶ್ರೀಮಾನ್ ಡಿ. ವೀರೇಂದ್ರ
ಹೆಗ್ಗಡೆಯವರು, ಧರ್ಮಸ್ಥಳ.

........ಈ ಗ್ರಂಥವು ಕೇವಲ ಪಾಂಡಿತ್ಯದ ಕಬ್ಬಿಣದ ಕಡಲೆ ಯಾಗಿರದೆ ಪಾಮರರಿಗೂ ಅರ್ಥವಾಗುವ ರೀತಿಯಲ್ಲಿ ರಚಿತವಾಗಿದೆ. ಸಾಹಿತ್ಯಾಭ್ಯಾಸಿಗಳಿಗಂತೂ ಇದು ಒಂದು ವರವೇ ಆಗಿದೆ.

—ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು.

---

# ಹಿಂದೂಧರ್ಮದ ಪರಿಚಯ

**ಎದುರ್ಕಳ ಕೆ. ಶಂಕರನಾರಾಯಣ ಭಟ್**




ಶ್ರೀರಾಮಕೃಷ್ಣ ಪ್ರಕಾಶನ
**ಭಾಗಮಂಡಲ ೫೭೧ ೨೪೭**
**ಕೊಡಗು, ಕರ್ನಾಟಕ ರಾಜ್ಯ**
**೧೯೯೫**

*HINDU DHARMADA PARICHAYA*—An Introduction to Hindu Religion and Philosophy by Aedurkala K. Shankaranarayana Bhat. Published by Sri Ramakrishna Prakashana, Bhagamandala - 571 247. Kodagu Dist. Karnataka State.

First Edition 1968
Popular Edition 1995

Subsidized Price : Rs. Twenty



ಮೊದಲನೆಯ ಮುದ್ರಣ ೧೯೬೮
ಎರಡನೆಯ ಮುದ್ರಣ ೧೯೭೧
ತಿದ್ದಿ ಬೆಳೆಸಿದ ಮೂರನೆಯ ಆವೃತ್ತಿ ೧೯೮೨
ರಿಯಾಯಿತಿ ಬೆಲೆಯ ಜನಪ್ರಿಯ ಆವೃತ್ತಿ ೧೯೯೫



ಹತ್ತು ಸಂವತ್ಸರ ಆರ್ಥಿಕ ಸಹಕಾರದಿಂದ ಈ ಗ್ರಂಥದ ರಿಯಾಯಿತಿ ಬೆಲೆಯ
ಈ ಜನಪ್ರಿಯ ಆವೃತ್ತಿಯನ್ನು ಪ್ರಕಟಿಸಲಾಗಿದೆ.

ರಿಯಾಯಿತಿ ಬೆಲೆ ರೂಪಾಯಿ ಇಪ್ಪತ್ತು

ಮುದ್ರಕರು : ಜಿ. ಎಸ್. ನಾಗೇಂದ್ರ
ಕರ್ನಾಟಕ ಪ್ರೆಸ್, ಈಜುಕೊಳದ ರಸ್ತೆ, ಸರಸ್ವತೀಪುರಂ, ಮೈಸೂರು-೫೭೦೦೦೯

ಓಂ

**ಮಾತ್ರೇ ಪಿತ್ರೇ ದೇಶಿಕಾಯ ಪರಸ್ಮೈ ಬ್ರಹ್ಮಣೇ ತಥಾ ।**
**ಯತೀಶ್ವರಾಯ ಗುರವೇ ಭೂಯೋ ಭೂಯೋ ನಮೋ ನಮಃ ॥**

ನನ್ನ ಧರ್ಮಗುರುಗಳಾದ ಪರಮಪೂಜ್ಯ
ಶ್ರೀಮತ್ ಸ್ವಾಮಿ ಶ್ರೀಶ್ರೀ ಯತೀಶ್ವರಾನಂದ ಮಹಾಸ್ವಾಮಿಗಳವರ
ಪವಿತ್ರ ಪಾದಪದ್ಮಗಳಿಗೆ
ಈ ಕೃತಿಯನ್ನು ಸಾಷ್ಟಾಂಗಪ್ರಣಾಮಪೂರ್ವಕವಾಗಿ
ಅರ್ಪಣೆ ಮಾಡಲಾಗಿದೆ.

—ಎದುರ್ಕಳ ಕೆ. ಶಂಕರನಾರಾಯಣ ಭಟ್

# ಗ್ರಂಥದ ಒಳಗಿನ ಅಧ್ಯಾಯಗಳು

# ಜನಪ್ರಿಯ ಆವೃತ್ತಿಯ ಮುನ್ನುಡಿ

ಹಿಂದೂಧರ್ಮದ ಪರಿಚಯ ಗ್ರಂಥದ ಈ ಜನಪ್ರಿಯ ಆವೃತ್ತಿಯನ್ನು ಹತ್ತು ಸಮಸ್ತರ ಸಹಕಾರದಿಂದ ಪ್ರಕಟಿಸಿ ಇದೀಗ ಓದುಗರ ಮುಂದಿಡಲು ತುಂಬ ಸಂತೋಷ ಪಡುತ್ತೇನೆ.

ಹಿಂದೂ ಸಮಾಜದಲ್ಲಿ ಇಂದು ಧರ್ಮವು ಜೀವನಕ್ಕೆ ಬೇಕೇ ಬೇಡವೇ ಎಂಬ ವಿಚಾರವಾಗಿ ಸಾಕಷ್ಟು ಚರ್ಚೆ, ಚಿಂತನೆಗಳು ನಡೆಯುತ್ತಿವೆ. ಅನೇಕರು ಭೌತಿಕ ಸುಖ-ಸಂಪತ್ತುಗಳ ಸಂಪಾದನೆ, ಸಂತೋಷಗಳ ಮುಂದೆ ಧರ್ಮವು ಲೆಕ್ಕಕ್ಕಿಲ್ಲ—ಅದರ ಅಗತ್ಯವೂ ಇಲ್ಲ ಎಂದು ಭಾವಿಸಿ ಬಾಳುತ್ತಿದ್ದಾರೆ. ಆದರೆ ಧರ್ಮವು ಜಗತ್ತಿನ ಜೀವನದ ಆಧಾರಶಕ್ತಿ; ಅದು ಜೀವನದಲ್ಲಿ ಇದ್ದರೆ ಮಾತ್ರ ಉಳಿದುದೆಲ್ಲಕ್ಕೂ ಬಲ ಮತ್ತು ಬೆಲೆ ಬರುತ್ತದೆ ಎಂಬುದಾಗಿ ಭಾವಿಸಿ ಬಾಳುತ್ತಿರುವವರು ನಮ್ಮ ರಾಷ್ಟ್ರಸಮಾಜದಲ್ಲಿ ಸಾಕಷ್ಟು ಮಂದಿ ಇದ್ದಾರೆ. ಎಂದಿದ್ದರೂ ಧರ್ಮಕ್ಕೇ ಜಯ ಎನ್ನುವುದು ಭಾರತದಲ್ಲಿ ಪರಂಪರಾಗತವಾದ ಜೀವನಸತ್ಯವಾಗಿರುವುದರಿಂದ ಧರ್ಮದ ವಿರುದ್ಧವಾದ ಭಾವನೆಗಳಿಗೆ ಧರ್ಮಾಭಿಮಾನಿಗಳು ಅಂಜಬೇಕಾಗಿಲ್ಲ. ಆದರೆ ಈ ಸಂದರ್ಭದಲ್ಲಿ ಧರ್ಮದ ಅರಿವು ಅನುಷ್ಠಾನವುಳ್ಳ ಧರ್ಮನಿಷ್ಠರ ಸಂಖ್ಯೆಯು ಸಮಾಜದಲ್ಲಿ ಹೆಚ್ಚಾಗುವಂತೆ ಮಾಡಬೇಕಾದುದು ಧರ್ಮಾಭಿಮಾನಿಗಳೆಲ್ಲರ ಇಂದಿನ ಮಹತ್ವದ ಜವಾಬ್ದಾರಿ ಹಾಗೂ ಅಗತ್ಯದ ಕರ್ತವ್ಯವಾಗಿರುತ್ತದೆ.

ಹಿಂದೂಧರ್ಮದ ತೌರೂರಾದ ಭಾರತದಲ್ಲಿ ಹಿಂದೂಧರ್ಮವು ವಿಶೇಷವಾಗಿ ಜನಜೀವನದಲ್ಲಿ ಪ್ರಾಯೋಗಿಕವಾಗಿ ನೆಲೆಗೊಳ್ಳದಿದ್ದರೆ ಹಿಂದೂದೇಶಕ್ಕೆ ಭದ್ರವಾದ ಭವಿಷ್ಯ ಇರಲಾರದು. ಮಾತ್ರವಲ್ಲ, ಧರ್ಮಗ್ಲಾನಿಯಾದರೆ ಅದರಿಂದ ಲೋಕಶಾಂತಿಗೂ ಬಹಳ ಅಪಾಯ ಉಂಟಾದೀತು. ಅದಕ್ಕಾಗಿ ಹಿಂದೂಧರ್ಮದ ತತ್ತ್ವ ಮತ್ತು ಅನುಷ್ಠಾನ ವಿಚಾರಗಳ ಸಾಕಷ್ಟು ಪರಿಚಯವು ಹಿಂದುಗಳಿಗೆ, ಅದರಲ್ಲೂ ಮುಖ್ಯವಾಗಿ ವಿದ್ಯಾವಂತರಾದ ಹಿಂದುಗಳಿಗೆ, ವಿಶೇಷವಾಗಿ ಆಗಬೇಕಾಗಿದೆ. ಈ ದಿಸೆಯಲ್ಲಿ ಹಿಂದೂ ಸಮಾಜದವರಿಗೆ, ಧರ್ಮಾಭಿಮಾನಿಗಳಿಗೆ ಸ್ವಲ್ಪಮಟ್ಟಿಗೆ ಸಹಕಾರಿ ಆಗಲಿ ಎಂಬ ದೃಷ್ಟಿಯಿಂದ ಈ ರಿಯಾಯಿತಿ ಬೆಲೆಯ ಜನಪ್ರಿಯ ಆವೃತ್ತಿಯನ್ನು ಹತ್ತು ಸಮಸ್ತರ ಆರ್ಥಿಕ ನೆರವಿನಿಂದ ಹೊರತರುವಂತಹ ಒಂದು ವಿಶೇಷವಾದ ಹಿಂದೂಧರ್ಮಪ್ರಚಾರಸೇವಾಯೋಜನೆಯನ್ನು ಗುರು-ಹಿರಿಯರು ಹಾಗೂ ಇಷ್ಟಮಿತ್ರರೊಡನೆ ಸಮಾಲೋಚಿಸಿ ರೂಪಿಸಿದ್ದಾಯಿತು. ಆ

ಯೋಜನೆಯಂತೆ ಹಿಂದೂಧರ್ಮದ ಪರಿಚಯ ಗ್ರಂಥವ ಸಹಸ್ರ ಪ್ರತಿಗಳನ್ನು ಮುದ್ರಿಸಿ ಪ್ರತಿ ಒಂದರ ಮೂಲ ಬೆಲೆ ರೂಪಾಯಿ ಇನ್ನೂರರ ಬದಲಿಗೆ ರಿಯಾಯಿತಿಯಾಗಿ ಕೇವಲ ರೂಪಾಯಿ ಇಪ್ಪತ್ತು ಎಂಬುದಾಗಿ ಬೆಲೆಯನ್ನು ನಿಗದಿ ಮಾಡಿ ಪ್ರತಿಗಳನ್ನು ಸಾಧ್ಯವಾದಷ್ಟು ಹೆಚ್ಚಿನ ಮಟ್ಟಿಗೆ ಗುರುಮಠಗಳು, ವಿದ್ಯಾಲಯಗಳ ಹಾಗೂ ಸಾರ್ವಜನಿಕ ಪುಸ್ತಕ ಭಂಡಾರಗಳು, ಸಾರ್ವಜನಿಕ ಕಲ್ಯಾಣಕಾರಿ ಧಾರ್ಮಿಕ ಹಾಗೂ ಸಾಮಾಜಿಕ ಸಂಘಸಂಸ್ಥೆಗಳು ಇವುಗಳ ಮುಖ್ಯಸ್ಥರಿಗೆ ತಲಪಿಸಿ ತನ್ಮೂಲಕ ಹಿಂದೂಧರ್ಮಜಾಗೃತಿ ಹಾಗೂ ಪ್ರಚಾರಕ್ಕೆ ಅನುಕೂಲ ಮಾಡುವುದು ಎಂದು ಸಂಕಲ್ಪಮಾಡಿದ್ದಾಯಿತು.

ಈ ಯೋಜನೆಯ ಪೂರ್ತಿಕೆಗೆ ಧನಸಹಕಾರವನ್ನು ದೇಣಿಗೆ ರೂಪದಲ್ಲಿ ಹಿಂದೂ ಸಮಾಜದಿಂದ ವಿಜ್ಞಾಪಿಸಿ ಪಡೆಯಲು ನಾನು ನಾಡಿನ ವಿವಿಧ ಎಡೆಗಳಲ್ಲಿ ಅನೇಕ ಬಾರಿ ಪ್ರವಾಸ ಕೈಕೊಂಡದ್ದಾಯಿತು. ಒಂದೇ ಬಾರಿಯಲ್ಲಿ ಒಂದು ಸ್ಥಳದಲ್ಲಿ ಸಂಬಂಧ ಪಟ್ಟ ಹಿರಿಯರು, ಆಸಕ್ತರು, ಅಭಿಮಾನಿಗಳು ಭೇಟಿಗೆ ಸಿಗುವಂತಿರಲಿಲ್ಲವಾದ್ದರಿಂದ ಸಹಜವಾಗಿ ನಾನು ಕೆಲವು ಸ್ಥಳಗಳಿಗೆ ಅನೇಕ ಬಾರಿ ಹೋಗಿಬರಬೇಕಾಯಿತು. ಆ ಸಂದರ್ಭಗಳಲ್ಲಿ ಬಹಳ ಕಡೆಗಳಲ್ಲಿ ಹಿಂದೂಧರ್ಮದ ಕುರಿತಾಗಿ ಉಪನ್ಯಾಸಗಳನ್ನು ಮಾಡಿದ್ದಾಯಿತು. ಇದೇ ರೀತಿ, ನಾಡಿನ ಕೆಲವು ಪ್ರಸಿದ್ಧ ಗುರುಮಠಗಳಿಗೆ ಭೇಟಿ ನೀಡಿ ಅಲ್ಲಿ ಪೂಜ್ಯ ಪೀಠಾಧಿಪತಿ ಸ್ವಾಮಿಗಳನ್ನು ದರ್ಶನ ಮಾಡಿ ಅವರೊಡನೆ ಮಾತನಾಡಿ ಈ ಯೋಜನೆಗೆ ಅವರ ಮತಿಯಿಂದ ಧನಬೆಂಬಲ ಹಾಗೂ ಆಶೀರ್ವಾದವನ್ನು ಕೋರಿರುತ್ತೇನೆ. ಅದರಂತೆ ಅಲ್ಲಲ್ಲಿನ ಗುರುಮಠದ ಪೂಜ್ಯಪೀಠಾಧಿಪತಿ ಸ್ವಾಮಿಗಳವರು ಹಿಂದೂಧರ್ಮ ಪ್ರಚಾರಯೋಜನೆ ಬಗೆಗೆ ಸಂತೋಷ ವ್ಯಕ್ತಪಡಿಸಿ ನನಗೆ ಸಾಧ್ಯವಾದ ಎಲ್ಲ ಸೌಕರ್ಯ ಗಳನ್ನು ಒದಗಿಸಿಕೊಟ್ಟು, ಮಠದ ಕೆಲವು ಪ್ರಮುಖ ಭಕ್ತರ ಪರಿಚಯವನ್ನು ಕೂಡಿಸಿ ಕೊಟ್ಟು ತುಂಬ ಪ್ರೀತಿಯಿಂದ ಸುವರ್ಣಮಂತ್ರಾಕ್ಷತೆಯನ್ನು ನೀಡಿ ಯೋಜನೆಯ ಯಶಸ್ಸಿಗೆ ವಿಶೇಷವಾಗಿ ಶುಭವನ್ನು ಹಾರೈಸಿ ನನ್ನನ್ನು ಆಶೀರ್ವದಿಸಿರುತ್ತಾರೆ. ಹಾಗೆಯೇ ಕೆಲವು ಪ್ರಸಿದ್ಧ ದೇವಾಲಯಗಳ ಧರ್ಮದರ್ಶಿಗಳು ಈ ಯೋಜನೆಯನ್ನು ಸ್ವಾಗತಿಸಿ ಸಕ್ರಿಯವಾಗಿ ಧನಸಹಕಾರವನ್ನು ನೀಡಿ, ಶುಭಹಾರೈಸಿ, ದೇವತಾಪ್ರಸಾದವನ್ನು ನೀಡಿ ರುತ್ತಾರೆ. ಅಲ್ಲದೆ ಕೆಲವು ಸಾಮಾಜಿಕ ಸಂಘಸಂಸ್ಥೆಗಳ ಪ್ರಮುಖರು ಈ ಯೋಜನೆಗೆ ಹಾರ್ದಿಕವಾಗಿ ದೇಣಿಗೆಯನ್ನು ನೀಡಿ, ಶುಭಹಾರೈಸಿ, ಸಹಕರಿಸಿರುತ್ತಾರೆ. ಅದರಂತೆ ಅನೇಕ ಮಂದಿ ಧರ್ಮಾಭಿಮಾನಿ ಸಜ್ಜನಬಂಧುಗಳು, ನನ್ನ ಆಪ್ತಮಿತ್ರರು, ಹಿತೈಷಿಗಳು, ಅಭಿಮಾನಿಗಳು ದೇಣಿಗೆಯನ್ನು ಕೊಟ್ಟು ಈ ಧರ್ಮಪ್ರಚಾರಯೋಜನೆಯನ್ನು ಬೆಂಬಲಿಸಿ ಪ್ರೋತ್ಸಾಹಿಸಿರುತ್ತಾರೆ. ಇವರೆಲ್ಲರನ್ನು ಈ ಸಂದರ್ಭದಲ್ಲಿ ಪ್ರತ್ಯೇಕಪ್ರತ್ಯೇಕ ವಾಗಿ ಕೃತಜ್ಞತೆಯಿಂದ ಸ್ಮರಿಸುತ್ತಾ ನನ್ನ ವಂದನೆಗಳನ್ನು ಅವರಿಗೆ ಸಲ್ಲಿಸುತ್ತೇನೆ.

ಈ ಜನಪ್ರಿಯ ಆವೃತ್ತಿಯ ಪ್ರಕಾಶನ ಯೋಜನೆ ಸಂಬಂಧವಾಗಿ ನಾಡಿನಲ್ಲಿ ನಾನು ಪ್ರವಾಸ ಕೈಗೊಂಡು ಜನಸಂಪರ್ಕಮಾಡಿದ ಸಂದರ್ಭಗಳಲ್ಲಿ ಅನೇಕ ಎಡೆಗಳಲ್ಲಿ ನನ್ನ ಮಿತ್ರರು, ಅಭಿಮಾನಿಗಳು, ಧರ್ಮಾಭಿಮಾನಿಗಳಾದ ಹಿರಿಯ ಕಿರಿಯ ಮಹನೀಯರು ಎಂಬುದಾಗಿ ಅನೇಕ ಮಂದಿ ಅಲ್ಲಲ್ಲಿ ನನ್ನ ಪ್ರವಚನಕಾರ್ಯಕ್ರಮಗಳಿಗೆ ವ್ಯವಸ್ಥೆ ಮಾಡುವುದು, ದೇಣಿಗೆಸಂಗ್ರಹಕಾರ್ಯ ಸಂಬಂಧವಾಗಿ ಜೊತೆಗೂಡಿ ಬಂದು ಊರಿನ

ಪ್ರಮುಖರನ್ನು ಭೇಟಿಮಾಡಿಸುವುದೂ, ತಮ್ಮ ಬಂಧುಮಿತ್ರರಿಗೆ ಪರಿಚಯಪತ್ರಗಳನ್ನು ನೀಡುವುದು, ತಮ್ಮ ಮನೆಗಳಿಗೆ ಕರೆದುಕೊಂಡು ಹೋಗಿ ಆತಿಥ್ಯ ನೀಡುವುದು, ತಾವೇ ಸ್ವತಃ ಪ್ರೀತಿಯಿಂದ ದೇಣಿಗೆ ಕೊಟ್ಟು ಶುಭವನ್ನು ಹಾರೈಸುವುದೂ ಎಂಬಿತ್ಯಾದಿ ಹಲವು ರೀತಿಗಳಲ್ಲಿ ತುಂಬ ಆದರಾಭಿಮಾನದಿಂದ ಸಹಕಾರವನ್ನು ನೀಡಿರುತ್ತಾರೆ. ಅವರೆಲ್ಲರನ್ನೂ ವೈಯಕ್ತಿಕವಾಗಿ ಸ್ಮರಿಸುತ್ತಾ ಅವರಿಗೆಲ್ಲ ಆತ್ಮೀಯವಾದ ಕೃತಜ್ಞತಾನಮನಗಳನ್ನು ಈ ಮೂಲಕ ವ್ಯಕ್ತಪಡಿಸುತ್ತೇನೆ.

ಈ ಜನಪ್ರಿಯ ಆವೃತ್ತಿಯ ಪ್ರಕಟಣಾ ಯೋಜನೆಯನ್ನು "ಸತ್ಕಾರ್ಯಕ್ಕೆ ಸಹಸ್ರ ವಿಘ್ನಗಳು" ಎಂಬ ಹಿರಿಯರ ಮಾತಿನಂತೆ ಹಲವು ಅನಿವಾರ್ಯ ಅಡಚಣೆಗಳಿಂದಾಗಿ ಯೋಜಿಸಿದಂತೆ ಸಕಾಲದಲ್ಲಿ ಪೂರೈಸಲಾಗಲಿಲ್ಲ. ಹಾಗಿದ್ದರೂ ಕೂಡ ಶ್ರೀಗುರುದೇವತಾ ಕೃಪೆಯಿಂದ ಈಗಲಾದರೂ ಜನಪ್ರಿಯ ಆವೃತ್ತಿಯ ಪ್ರಕಾಶನ ಯೋಜನೆಯು ಪೂರೈಕೆಗೊಂಡಿದೆ ಎಂಬುದು ಸಂತೃಪ್ತಿಯ ಸಂಗತಿಯಾಗಿದೆ. ಈ ಸಂಬಂಧವಾಗಿ ಗ್ರಂಥದ ಮುದ್ರಣಕಾರ್ಯವನ್ನು ಅಂದವಾಗಿ ನೆರವೇರಿಸಿ ಕೊಟ್ಟಿರುವ ಕರ್ನಾಟಕ ಪ್ರೆಸ್ಸಿನ ಮಾಲೀಕರಾದ ಶ್ರೀ ಜಿ. ಎಸ್. ನಾಗೇಂದ್ರರವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಮುಂಬರುವ ವರ್ಷಗಳಲ್ಲಿ ನಮ್ಮ ಹಿಂದೂ ಸಮಾಜವು ಇನ್ನಷ್ಟು ಧಾರ್ಮಿಕ ಆಚಾರ ಶಕ್ತಿಸಂಪನ್ನವಾಗಿ ಲೌಕಿಕ ಹಾಗೂ ಪಾರಮಾರ್ಥಿಕವಾಗಿ ಹೆಚ್ಚು ಅಭಿವೃದ್ಧಿಹೊಂದು ವಂತಾಗಿ, ತನ್ಮೂಲಕ ರಾಷ್ಟ್ರದ ಏಳಿಗೆಯಾಗಿ ಅದರಿಂದ ಲೋಕಕಲ್ಯಾಣಕ್ಕೆ ಸಹಾಯ ವಾಗುವಂತಾಗಲಿ ಎಂದು ಹಾರೈಸುತ್ತಾ ಭಗವಂತನನ್ನು ಪ್ರಾರ್ಥಿಸುತ್ತೇನೆ.

ಶ್ರೀ ರಾಮಕೃಷ್ಣ ನಿಲಯ
ಭಾಗಮಂಡಲ-೫೭೧೨೪೭
ಕೊಡಗು ಜಿಲ್ಲೆ, ಕರ್ನಾಟಕ ರಾಜ್ಯ
ಮಾಘ ಪೂರ್ಣಿಮಾ : ೧೫-೨-೧೯೮೫

ಎಡನೀರು ಕೆ. ಶಂಕರನಾರಾಯಣ ಭಟ್

# ಮುನ್ನುಡಿ

## (ಮೊದಲ ಮುದ್ರಣ)

---

'ಹಿಂದೂಧರ್ಮ ಎಂದರೇನು ?' ಎಂದು ಇತರ ಮತದವರು ಕೇಳುವಂತೆ ಹಿಂದೂ ಸಮಾಜದಲ್ಲಿಯೂ ಕೂಡ ಇಂದು ಅದೇ ಪ್ರಶ್ನೆಯನ್ನು ಕೇಳುವ ಹಿಂದೂಗಳೂ ಇದ್ದು ಅವರ ಸಂಖ್ಯೆ ದೊಡ್ಡದಾಗಿರುತ್ತದೆ. ಹಿಂದೂಧರ್ಮದ ಕುರಿತಾದ ವಿವರಗಳು ತಿಳಿಯದೆ ಇತರ ಮತಗಳನ್ನು ಉತ್ತಮವಾದುದು ಎಂದು ಹೇಳಿ ಹೊಗಳಿ ಅವುಗಳೆಡೆಗೆ ಆಕರ್ಷಿತರಾಗುವ ಹಿಂದೂಗಳೂ ಇರುವಂತೆ ಹಿಂದೂಮತವನ್ನು ಸತ್ವಶೂನ್ಯ, ಅಪ್ರಾಯೋಗಿಕ ಎಂದೆಲ್ಲ ತೆಗಳಿ ಅನ್ಯಮತಗಳನ್ನು ಅವಲಂಬನೆ ಮಾಡಲು ಮುನ್ನಡಿಯಿಡುವವರೂ ಹಿಂದೂಸಮಾಜದಲ್ಲಿ ಇದ್ದಾರೆ. ಹಾಗೆಯೇ ಹಿಂದೂಧರ್ಮದ ಕುರಿತಾಗಿ ಇತರರಿಂದ ಕೇಳಿಬರುವ ಹಲವಾರು ರೀತಿಯ ಅವಹೇಳನವಾದ ಆರೋಪ-ಆಕ್ಷೇಪಗಳನ್ನು ನ್ಯಾಯಬದ್ಧವೂ ತರ್ಕಯುಕ್ತವೂ ಆದ ರೀತಿಯಲ್ಲಿ ಎದುರಿಸಲಾಗದೆ ಆತ್ಮಗೌರವವನ್ನು ಕಳೆದುಕೊಳ್ಳುವಂತಹ ಶೋಚನೀಯಸ್ಥಿತಿಗೆ ಸಿಲುಕುವ ಹಿಂದೂಗಳ ಸಂಖ್ಯೆ ನಮ್ಮ ಸಮಾಜದಲ್ಲಿ ಸಾಕಷ್ಟು ದೊಡ್ಡದೇ ಆಗಿದೆ. ಅದರಂತೆಯೇ ಹಿಂದೂಧರ್ಮದ ವಿವಿಧ ಒಳಪಂಥಗಳಿಗೆ ಸೇರಿದವರಲ್ಲಿ ಪರಸ್ಪರ ಬೇರೆ ಬೇರೆ ಪಂಗಡಗಳ-ಮತಗಳ ಪರಿಚಯ ಸಾಕಷ್ಟು ಇಲ್ಲದೆ ಹಿಂದೂಸಮಾಜದ ಒಳಗೆಯೇ ಮತಕಲಹ, ದ್ವೇಷ ಇತ್ಯಾದಿಗಳು ಉದ್ಭವಿಸಿ ಅದರಿಂದಾಗಿ ಹಲವು ರೀತಿಯ ತೊಂದರೆಗಳುಂಟಾಗಲು ಅವಕಾಶವಾಗಿರುತ್ತದೆ.

ರತ್ನದ ಹಿರಿಮೆ, ಮೌಲ್ಯಗಳನ್ನು ತಿಳಿದಾಗ ಅದನ್ನು ಹೊಂದಿರುವವನು ಅದರ ರಕ್ಷಣೆಗೆ ಅಭಿಮಾನದಿಂದ, ಆಸಕ್ತಿಯಿಂದ ಜಾಗರೂಕನಾಗಿದ್ದು ಆ ಕುರಿತಾಗಿ ಸದಾ ಯತ್ನಶೀಲನಾಗಿರುತ್ತಾನೆ ಎನ್ನುವುದು ಅನುಭವಸತ್ಯವಾದುದಾಗಿದೆ. ಹಾಗೆಯೇ ಹಿಂದೂಧರ್ಮವೆಂದರೇನು ? ಎಂಬುದರ ಕುರಿತಾಗಿ ಯಥೋಚಿತವಾದ ಪರಿಚಯವಿದ್ದರೆ ಆ ಹಿಂದುವು ಆಗ ಧರ್ಮ ಹಾಗೂ ಸಮಾಜದ ಅಭಿಮಾನಿಯೂ ರಕ್ಷಕನೂ ಮಾತ್ರವಲ್ಲದೆ ಪೋಷಕನೂ ಆಗುತ್ತಾನೆ. ಹಿಂದೂಸಮಾಜದಲ್ಲಿ ಇಂದು ಕಂಡುಬರುವ ಹಲವು ರೀತಿಯ ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕವಾದ ಅನಕ್ಷರತೆ, ಅನೈಕ್ಯ, ಅಹಿತವಾದ ಪರಿಸ್ಥಿತಿಗಳಿಗೆಲ್ಲಾ ಮುಖ್ಯವಾದ ಒಂದು ಕಾರಣವೇ ಹಿಂದೂಧರ್ಮದ ಕುರಿತಾದ ಸಾಕಷ್ಟು ಪರಿಜ್ಞಾನ, ಅಭಿಮಾನಗಳು ಇಲ್ಲದಿರುವುದು ಮತ್ತು ಹಿಂದೂಧರ್ಮದ ತತ್ತ್ವಗಳನ್ನು ಜೀವನದಲ್ಲಿ ಅನುಷ್ಠಾನ ಮಾಡದಿರುವುದೇ ಆಗಿದೆ ಎಂದರೆ ತಪ್ಪಾಗಲಾರದು.

ಹಿಂದೂಧರ್ಮದ ಕುರಿತಾಗಿ ಈಗಾಗಲೇ ಅನೇಕ ಗ್ರಂಥಗಳು ಪ್ರಕಟಗೊಂಡಿವೆ. ಹಿಂದೂಧರ್ಮದ ವಿವಿಧ ಒಳಪಂಥಗಳ ಸಂಬಂಧದ ಗ್ರಂಥಗಳು ಬಹುಸಂಖ್ಯೆಯಲ್ಲಿ ಈಗಾಗಲೇ ಪ್ರಕಟಗೊಂಡಿರುತ್ತವೆ. ಹಾಗಿದ್ದರೂ ಹಿಂದೂಧರ್ಮದ ಒಳಪಂಥಗಳು–ವಿವಿಧ ಸಾಧನಾಮಾರ್ಗಗಳು–ತತ್ತ್ವವಿಚಾರಗಳು ಇತ್ಯಾದಿಗಳನ್ನೆಲ್ಲ ನಿಷ್ಪಕ್ಷಪಾತದೃಷ್ಟಿಯಿಂದ ಪರಿಚಯಮಾಡಿಕೊಡುವ ಗ್ರಂಥವೊಂದರ ಅಗತ್ಯವಿದೆ ಎಂಬುದು ನನಗೆ ಕೆಲವು ವರ್ಷಗಳ ಹಿಂದೆ ಕಂಡುಬಂದಿತು. ಅನುಸಾರವಾಗಿ, ಹಿಂದೂಧರ್ಮದ ಪರಿಚಯಾತ್ಮಕ ಕೃತಿಯೊಂದನ್ನು ರಚಿಸಬೇಕೆಂದು ಪ್ರಾರ್ಥನಾಪೂರ್ವಕವಾಗಿ ಸಂಕಲ್ಪಮಾಡಿಕೊಂಡೆನು. ಆ ವಿಚಾರಾಂಶವನ್ನು ನನ್ನ ಧರ್ಮಗುರುಗಳಾದ ಶ್ರೀರಾಮಕೃಷ್ಣ ಮಠ ಮತ್ತು ಮಿಶನ್ ಸಂಸ್ಥೆಯ ಪೂಜ್ಯಪಾದರಾದ ಶ್ರೀಮಂತ್ ಸ್ವಾಮಿ ಯತೀಶ್ವರಾನಂದಮಹಾಸ್ವಾಮಿಗಳವರ ಶ್ರೀಸನ್ನಿಧಿಯಲ್ಲಿ ವ್ಯಕ್ತಪಡಿಸಿದೆ. ಪೂಜ್ಯಪಾದರಾದ ಮಹಾಸ್ವಾಮಿಗಳವರು ಅದನ್ನು ಪುಷ್ಟೀಕರಿಸಿ ಪುಸ್ತಕದ ರಚನೆಗೆ ಬೇಕಾದ ಸಲಹೆಗಳನ್ನು ನೀಡಿ ನನ್ನನ್ನು ಆಶೀರ್ವದಿಸಿದರು. ಹೀಗೆ ಶ್ರೀಗುರುದೇವತಾನುಗ್ರಹದ ಬಲದಿಂದ ಈ ಗ್ರಂಥವು ಇದೀಗ ರೂಪುಗೊಂಡಿರುತ್ತದೆ.

ಹಿಂದೂಧರ್ಮದ ವಿವಿಧ ಒಳಪಂಥಗಳು, ಅವುಗಳ ತತ್ತ್ವಗಳು, ಸಾಧನಾಮಾರ್ಗಗಳು, ಸಿದ್ಧಾಂತಗಳು ಇತ್ಯಾದಿ ಅನೇಕ ವಿಚಾರಗಳನ್ನು ಯಥಾರ್ಥವಾದ ರೀತಿಯಲ್ಲಿ ಪರಿಚಯಮಾಡಿಕೊಡಲು ಈ ಗ್ರಂಥದಲ್ಲಿ ಪ್ರಯತ್ನವನ್ನು ಮಾಡಿರುತ್ತೇನೆ. ವಿಸ್ತಾರವೂ ಗಹನವೂ ಮತ್ತು ಆಳವೂ ಆದ ಹಿಂದೂಧರ್ಮದ ತತ್ತ್ವ–ಸಿದ್ಧಾಂತ–ಸಾಧನಾ ಇತ್ಯಾದಿ ವಿಚಾರಗಳ ಕುರಿತಾಗಿ ಇಂತಹ ಒಂದು ಗ್ರಂಥವನ್ನು ರಚಿಸಲು ಬೇಕಾದ ಅಗತ್ಯದ ಪಾಂಡಿತ್ಯ ಮತ್ತು ಸಾಮರ್ಥ್ಯಗಳ ಬಗೆಗೆ ನನ್ನ ಇತಿಮಿತಿಗಳ ಅರಿವು ನನಗಿದೆ. ಆದುದರಿಂದ ಈ ಗ್ರಂಥದಲ್ಲಿ ವಿಷಯಗಳ ವಿವರಣೆ, ನಿರೂಪಣೆಗಳಲ್ಲಿ ಅಸಮರ್ಪಕತೆಗಳು ಏನಾದರೂ ಕಂಡುಬರುವುದಾದರೆ ಅವು ನನ್ನ ಅಜ್ಞಾನದ ಕುರುಹೇ ವಿನಾ ಅಪಾರ್ಥ, ಅನಗತ್ಯವಾದ ವಾದಪ್ರತಿವಾದಗಳು ಇಲ್ಲವೇ ಅವಹೇಳನಾಸ್ಪದವಾದ ರೀತಿಯಲ್ಲಿ ವಿಚಾರಗಳ ನಿರೂಪಣೆ ಅಥವಾ ನಮ್ಮೊಳಗೆ ಯಾವುದೇ ಒಂದು ವರ್ಗದವರಿಗೆ ಪಂಥದವರಿಗೆ ಗುರುಪೀಠದವರಿಗೆ ಅಗೌರವವನ್ನುಂಟುಮಾಡಬೇಕೆಂಬ ಉದ್ದೇಶದಿಂದ ಬರೆಯಲ್ಪಟ್ಟಿರುವುದಿಲ್ಲ ಎಂದು ಹೃತ್ಪೂರ್ವಕವಾಗಿ ಓದುಗರಿಗೆ ಸ್ಪಷ್ಟಪಡಿಸುತ್ತಾ ಹಂಸ ಕ್ಷೀರ ನ್ಯಾಯದಂತೆ ಕ್ಷೀರವನ್ನು ಮಾತ್ರ ತೆಗೆದುಕೊಂಡು ನೀರನ್ನು ತ್ಯಜಿಸಬೇಕೆಂದು ವಿನಯಪೂರ್ವಕವಾಗಿ ವಿನಂತಿಮಾಡುತ್ತೇನೆ.

ಹಿಂದೂಧರ್ಮದ ತತ್ತ್ವಪ್ರಚಾರಕರೂ ಗ್ರಂಥರಚಯಿತರೂ ಆದ ಪರಮಪೂಜ್ಯರಾದ ಮಹರ್ಷಿಗಳೆಲ್ಲರಿಗೆ, ಪೂಜ್ಯಪಾದರೂ ಗುರುಪೀಠಾಧಿಪತಿಗಳೂ ಆದ ಮಹಾಸ್ವಾಮಿಗಳೆಲ್ಲರಿಗೆ, ಸಾಧುಸತ್ಪುರುಷರುಗಳೆಲ್ಲರಿಗೆ, ಗೌರವಪಾತ್ರರಾದ ವಿದ್ವಾಂಸರೆಲ್ಲರಿಗೆ—ಕಿರಿಯನಾದ ನಾನು ಈ ಕೃತಿರಚನೆ ಮಾಡಿದ ಸಂದರ್ಭದಲ್ಲಿ ಪ್ರೀತಿಗೌರವಗಳಿಂದ ಶಿರಬಾಗಿ ನಮಿಸಿ ಅವರೆಲ್ಲರ ಆಶೀರ್ವಾದವನ್ನು ಈ ಮೂಲಕ ಬೇಡುತ್ತೇನೆ.

ನನ್ನ ಧರ್ಮಗುರುಗಳಾದ ಪರಮಪೂಜ್ಯ ಶ್ರೀಮತ್ ಸ್ವಾಮಿ ಯತೀಶ್ವರಾನಂದ ಮಹಾಸ್ವಾಮಿಗಳವರು ನನ್ನ ಬಾಳಿನ ಬೆಳಕು ಹಾಗೂ ಚೇತನವಾಗಿರುತ್ತಾರೆ. ನನ್ನ ಪೂಜ್ಯ ಗುರುಗಳ ಕೃಪೆ, ಆಶೀರ್ವಾದಗಳ ಬಲದಿಂದಲೇ ನಾನು ಈ ಕೃತಿಯನ್ನು ರಚಿಸಲು ಸಾಧ್ಯವಾಯಿತು ವಿನಾ ನನ್ನ ಬಲದಿಂದಾಯಿತು ಎಂದು ನಾನು ಎಂದಿಗೂ ಹೇಳಿಕೊಳ್ಳು ವಂತಿಲ್ಲ. ಅನುಸಾರವಾಗಿ, ಇದೀಗ ರೂಪುಗೊಂಡಿರುವ 'ಹಿಂದೂಧರ್ಮದ ಪರಿಚಯ' ಎಂಬ ಈ ಕೃತಿಯನ್ನು ನನ್ನ ಪರಮಪೂಜ್ಯ ಗುರುದೇವರಾದ ಶ್ರೀಮತ್ ಸ್ವಾಮಿ ಯತೀಶ್ವರಾನಂದ ಮಹಾಸ್ವಾಮಿಗಳವರ ಪವಿತ್ರಪಾದಪದ್ಮಗಳಲ್ಲಿ ಸಾಷ್ಟಾಂಗಪ್ರಣಾಮ ಪೂರ್ವಕವಾಗಿ ಸಮರ್ಪಿಸುತ್ತೇನೆ.

ಈ ಗ್ರಂಥದಲ್ಲಿ ವಿವರಿಸಿರುವ ವಿವಿಧ ವಿಚಾರಗಳ ನಿರೂಪಣೆಯ ಕುರಿತಾಗಿ ಬೋಧ ನೆಯ ಶೈಲಿಯನ್ನೇ ನಾನು ಹೆಚ್ಚುಕಡಿಮೆ ಉಪಯೋಗಿಸಿರುತ್ತೇನೆ. ಹಿಂದೂಧರ್ಮ ಎಂದರೇನೆಂದು ಪರಿಚಯ ಇರದವರಿಗಾಗಿಯೇ ರಚಿಸಿದ ಗ್ರಂಥ ಇದಾದ್ದರಿಂದ ಈ ರೀತಿ ಬೋಧನೆಯ ಶೈಲಿಯನ್ನು ಅನುಸರಿಸುವುದು ಅನಿವಾರ್ಯವೂ ಅಗತ್ಯವೂ ಆಯಿತು. ಹಾಗೆ ಕೆಲವು ವಿಚಾರಗಳು ಗ್ರಂಥದ ಎಡೆಗಳಲ್ಲಿ ಪುನರುಕ್ತಿ ಎಂಬಂತೆ ಬರೆಯ ಲ್ಪಟ್ಟಿವೆ. ಆಯಾಯ ಅಧ್ಯಾಯದ ವಿಷಯಗಳ ಪರಿಣಾಮಕಾರಿಯಾದ ವಿವರಣೆಗಳ ದೃಷ್ಟಿಯಿಂದಲೂ, ಆಯಾಯ ಸಂದರ್ಭಗಳಲ್ಲಿ ಬೇರೆ ಬೇರೆ ವಿಚಾರಗಳ ಪೂರ್ಣ ಪರಿಚಯಕ್ಕೆ ಸಹಾಯಕವಾಗುವ ದೃಷ್ಟಿಯಿಂದಲೂ ಆ ರೀತಿ ಕೆಲವು ಪುನರುಕ್ತಿಗಳನ್ನು ಗ್ರಂಥದಲ್ಲಿ ಸೇರಿಸಿರುತ್ತೇನೆ. ಹಾಗೆಯೇ ಕೆಲವು ವಿಚಾರಗಳನ್ನು ಹೆಚ್ಚು ವಿವರವಾಗಿಯೂ, ಇನ್ನು ಕೆಲವು ವಿಷಯಗಳನ್ನು ಸೂಕ್ಷ್ಮವಾಗಿಯೂ ಬರೆದಿರುತ್ತೇನೆ. ಸಂದಿಗ್ಧವೂ ವಿವಾದಾಸ್ಪದವೂ ಆದ ಅನೇಕ ವಿಚಾರಗಳ ಕುರಿತಾಗಿ ವಿಷಯಸ್ಪಷ್ಟೀಕರಣೆ–ವಿವರಗಳ ಪರಿಚಯಗಳನ್ನು ಮಾತ್ರ ಮಾಡಿ ತೀರ್ಮಾನವನ್ನು ನಾನು ಹೇಳದೆ ಓದುಗರ ವಿವೇಚ ನೆಗೆ ಅವುಗಳನ್ನು ಬಿಟ್ಟಿರುತ್ತೇನೆ.

ಈ ಗ್ರಂಥರಚನೆಯ ಸಂಬಂಧವಾಗಿ ಪೂಜ್ಯಪಾದರಾದ ಗುರುಸ್ವಾಮಿಗಳವರು ಅನೇಕರೂ ಮತ್ತು ಹಿಂದೂಧರ್ಮದ ಕುರಿತಾಗಿ ಪರಿಜ್ಞಾನವಿರುವ ಪಂಡಿತರೂ, ಪ್ರತಿಷ್ಠಿತ ಮಹನೀಯರೂ ಹಲವರು ನನಗೆ ಸೂಕ್ತವಾದ ಸಲಹೆ, ಮಾರ್ಗದರ್ಶನಗಳನ್ನು ನೀಡಿರುತ್ತಾರೆ. ಅವರೆಲ್ಲರಿಗೂ ನಾನು ಅತ್ಯಂತಕೃತಜ್ಞನಾಗಿರುತ್ತೇನೆ ಎಂದು ಹೇಳುತ್ತಾ ಈ ಸಂದರ್ಭದಲ್ಲಿ ಅವರಿಗೆಲ್ಲಾ ನನ್ನ ಭಕ್ತಿಗೌರವಪೂರ್ಣವಾದ ಕೃತಜ್ಞತಾಪ್ರಣಾಮ ಗಳನ್ನು ಈ ಮೂಲಕ ಅರ್ಪಿಸುತ್ತೇನೆ.

ಈ ಗ್ರಂಥದ ರಚನೆ ಮತ್ತು ಮುದ್ರಣದ ಸಂಬಂಧವಾಗಿ ನನ್ನ ಕೆಲವು ಹಿರಿಯರು, ಹಿತೈಷಿಗಳು, ಬಂಧುಗಳು ಮತ್ತು ಮಿತ್ರರು ಸಂತೋಷದಿಂದ ಮುಂಬಂದು ನನಗೆ ಆರ್ಥಿಕ ನೆರವನ್ನು ನೀಡಿ ಸಹಕರಿಸಿ ಉಪಕರಿಸಿರುತ್ತಾರೆ. ಇಂತಹ ಉದಾರಿಗಳೂ, ಸತ್ಕಾರ್ಯಗಳಿಗೆ ಪ್ರೋತ್ಸಾಹ ನೀಡುವವರೂ ಸಮಾಜದಲ್ಲಿ ಇರುವುದೆಂದರೆ ನಿಜಕ್ಕೂ ಧಾರ್ಮಿಕವಾದ ಕಾರ್ಯಗಳನ್ನು ಕೈಕೊಳ್ಳುವವರಿಗೆ ಉತ್ಸಾಹ–ಪ್ರೋತ್ಸಾಹ ಹಾಗೂ

ಭರವಸೆಗಳ ನೆಲೆ ಇದ್ದಂತೆಯೇ ಸರಿ. ನನಗೆ ಈ ಗ್ರಂಥದ ಸಂಬಂಧವಾಗಿ ಆರ್ಥಿಕ ದೃಷ್ಟಿಯಿಂದ ನೆರವು ನೀಡಿರುವ ಹಿರಿಯರು–ಹಿತೈಷಿಗಳು,ಬಂಧುಮಿತ್ರವರ್ಗದವರೆಲ್ಲ ರಿಗೂ ಭಗವಂತನು ಇತೋಪ್ಯತಿಶಯ ಅಭಿವೃದ್ಧಿಯನ್ನು ಕರುಣಿಸಿ ಕಾಪಾಡಲಿ ಎಂದು ಹಾರೈಸುತ್ತಾ ನನ್ನ ಹಾರ್ದಿಕ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತಾ ಈ ಮೂಲಕ ವಂದನೆ ಗಳನ್ನು ಸಲ್ಲಿಸುತ್ತೇನೆ.

ಈ ಗ್ರಂಥದ ರಚನೆ ಹಾಗೂ ಮುದ್ರಣದ ಸಂದರ್ಭಗಳಲ್ಲಿ ಹೆಚ್ಚುಹೆಚ್ಚಾಗೂ ಎಂಬಂತೆ ಸಲಹೆ–ಮಾರ್ಗದರ್ಶನಗಳನ್ನು ಪ್ರೀತಿಯಿಂದ ನೀಡಿ ಈ ಕೃತಿಯು ರೂಪು ಗೊಳ್ಳುವುದರಲ್ಲಿ ಅನೇಕ ರೀತಿಯಲ್ಲಿ ನನಗೆ ನೆರವಾಗಿ ನನ್ನನ್ನು ಆಶೀರ್ವದಿಸಿರುವ ಶ್ರೀರಾಮಕೃಷ್ಣಾಶ್ರಮದ ಪೂಜ್ಯ ಸ್ವಾಮಿಗಳಾದ ಶ್ರೀಮತ್ ಸ್ವಾಮಿ ಹರ್ಷಾನಂದ ಮಹಾಸ್ವಾಮಿಗಳವರಿಗೆ ನಾನು ಚಿರಋಣಿಯಾಗಿರುತ್ತೇನೆ. ಪೂಜ್ಯ ಸ್ವಾಮಿಗಳವರು ನನಗೆ ಸಕಾಲದಲ್ಲಿ ಸೂಕ್ತವಾದ ರೀತಿಯಲ್ಲಿ ಸಲಹೆ–ಸಹಕಾರಗಳನ್ನು ನೀಡದೇ ಹೋಗಿ ದ್ದರೆ ಈ ಕೃತಿಯು ರೂಪುಗೊಳ್ಳಲು ತುಂಬಾ ತೊಂದರೆಯುಂಟಾಗುತ್ತಿತ್ತು. ಆದುದ ರಿಂದ ಪೂಜ್ಯ ಸ್ವಾಮಿಗಳವರ ಸಹಾಯವು ನನ್ನ ಮಟ್ಟಿಗೆ ನೆಟ್ಟ ಪೈರಿಗೆ ಸಕಾಲದಲ್ಲಿ ಮಳೆ, ಬಿಸಿಲು ಮತ್ತಿತರ ಆರೈಕೆಯನ್ನು ನೀಡಿ ರಕ್ಷಿಸಿದಂತಾಗಿರುತ್ತದೆ ಎಂದು ಹೇಳುತ್ತಾ ಪೂಜ್ಯ ಶ್ರೀಗಳವರ ನೆರವನ್ನು ಪ್ರೀತಿ-ಕೃತಜ್ಞತೆಗಳಿಂದ ಸ್ಮರಿಸಿಕೊಳ್ಳುತ್ತೇನೆ. ಪೂಜ್ಯ ಸ್ವಾಮಿಗಳಾದ ಶ್ರೀಮತ್ ಸ್ವಾಮಿ ಹರ್ಷಾನಂದ ಮಹಾಸ್ವಾಮಿಗಳವರಿಗೆ ನನ್ನ ಭಕ್ತಿ–ಪ್ರೀತಿಪೂರ್ವಕವಾದ ಕೃತಜ್ಞತೆಗಳನ್ನು ಪ್ರತ್ಯೇಕವಾಗಿ ವ್ಯಕ್ತಪಡಿಸುತ್ತಾ ಈ ಮೂಲಕ ನನ್ನ ಸಾಷ್ಟಾಂಗಪ್ರಣಾಮಗಳನ್ನು ಅರ್ಪಿಸುತ್ತೇನೆ.

ಪುಸ್ತಕದ ರಕ್ಷಾಕವಚದಲ್ಲಿರುವ ಮುಖಚಿತ್ರವನ್ನು ನನ್ನ ಅಪೇಕ್ಷೆಗೆ ಅನುಸಾರವಾಗಿ ಅಂದವಾಗಿ ಚಿತ್ರಿಸಿಕೊಟ್ಟ ಕಲಾವಿದರನ್ನು ನಾನು ಎಂದಿಗೂ ಮರೆಯಲು ಸಾಧ್ಯವಿಲ್ಲ. ಬೆಂಗಳೂರಿನ ಕೆ.ಎಫ್.ಎ.ಇ. ಸೊಸೈಟಿಯ ಚಿತ್ರಕಲಾಶಾಲೆಯ ಸೂಪರಿಂಟೆಂಡೆಂಟರೂ, ಮೇಲಾಗಿ ನಾಡಿನ ಸುಪ್ರಸಿದ್ಧ ಕಲಾವಿದರಲ್ಲಿ ಒಬ್ಬರೂ ಆಗಿರುವ ಸನ್ಮಾನ್ಯರಾದ ಶ್ರೀಮಾನ್ ಆರ್. ಎಂ. ಹಡಪದ್‌ರವರು ಮುಖಚಿತ್ರವನ್ನು ಸುಂದರವಾಗಿ ಬಿಡಿಸಿ ಕೊಟ್ಟು ನನಗೆ ವಿಶೇಷವಾದ ರೀತಿಯಲ್ಲಿ ಉಪಕರಿಸಿರುತ್ತಾರೆ. ಶ್ರೀಯುತರಿಗೆ ನನ್ನ ಹಾರ್ದಿಕ ಕೃತಜ್ಞತಾವಂದನೆಗಳನ್ನು ಈ ಮೂಲಕ ಸಲ್ಲಿಸುತ್ತೇನೆ.

ಈ ಗ್ರಂಥದ ಮುದ್ರಣದ ವಿಚಾರವಾಗಿ ವಿಶೇಷವಾಗಿ ಆಸಕ್ತಿವಹಿಸಿ ವಿಶ್ವಾಸಪೂರ್ವಕ ವಾಗಿ ಸಹಕರಿಸಿ ಈಪುಸ್ತಕವನ್ನು ಸುಂದರವಾಗಿ ಮುದ್ರಿಸಿಕೊಟ್ಟಿರುವ ಶ್ರೀಯುತ ಆರ್. ವಿ. ಶ್ರೀ ನಿವಾಸಮೂರ್ತಿಗಳವರ ಉಪಕಾರವನ್ನು ನಾನು ಎಷ್ಟು ಸ್ಮರಿಸಿದರೂ ಸಾಲದು. ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್ಸಿನ ಮಾಲೀಕರಾದ ಶ್ರೀಯುತರಿಗೆ. ಅವರ ವಿಶ್ವಾಸ ವನ್ನು ಸ್ಮರಿಸಿಕೊಳ್ಳುತ್ತಾ ಹಾರ್ದಿಕವಾದ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತಾ ಅವರ ಮುದ್ರಣಾಲಯದ ನೌಕರವರ್ಗದವರು ಎಲ್ಲರಿಗೂ ನನ್ನ ನೆನಕೆಗಳನ್ನು ಈ ಮೂಲಕ ಸಲ್ಲಿಸುತ್ತೇನೆ.

ಮಂಗಳೂರಿನ ಶ್ರೀ ಶಾರದಾ ಪ್ರೆಸ್ಸಿನ ಮಾಲೀಕರಾದ ಶ್ರೀ ಅಚ್ಯುತ ಕಾಮತ್ ರವರು ಪುಸ್ತಕದ ರಕ್ಷಾಕವಚವನ್ನು ಸರ್ವಾಂಗಸುಂದರವಾಗಿ ಮುದ್ರಿಸಿಕೊಡುವುದರಲ್ಲಿ ವಿಶ್ವಾಸಪೂರ್ವಕವಾಗಿ ಸಹಕರಿಸಿರುತ್ತಾರೆ. ಶ್ರೀಯುತರಿಗೆ ಅವರ ವಿಶ್ವಾಸವನ್ನು ಸ್ಮರಿಸಿ ಕೊಳ್ಳುತ್ತಾ, ಹಾರ್ದಿಕವಾದ ಕೃತಜ್ಞತೆಯನ್ನು ಈ ಮೂಲಕ ಸಲ್ಲಿಸುತ್ತೇನೆ.

ಈ ಗ್ರಂಥದ ಸಂಬಂಧವಾಗಿ ಮೆಚ್ಚುಗೆಯ ಮಾತನ್ನು ಹೇಳಿ ಅನುಗ್ರಹಸಂದೇಶ ಗಳನ್ನು ನೀಡಿ ಅನೇಕ ಗುರುಪೀಠಗಳ ಪೂಜ್ಯ ಗುರುಸ್ವಾಮಿಗಳು ನನ್ನನ್ನು ಆಶೀರ್ವದಿ ಸಿರುತ್ತಾರೆ. ಅವರೆಲ್ಲರ ಶ್ರೀಚರಣಗಳಿಗೆ ನನ್ನ ಕೃತಜ್ಞತಾಪೂರ್ವಕವಾದ ಸಾಷ್ಟಾಂಗ ವಂದನೆಗಳನ್ನು ಸಲ್ಲಿಸುತ್ತೇನೆ.

ಅದರಂತೆ ಸಮಾಜದ ಕೆಲವು ಹಿರಿಯ ಪ್ರತಿಷ್ಠಿತ ಮಹನೀಯರು ಮತ್ತು ವಿದ್ವಾಂಸರು ಗಳು ಈ ಕೃತಿಯ ಕುರಿತಾಗಿ ಸಂದೇಶವನ್ನು ನೀಡಿ ನನ್ನನ್ನು ಆಶೀರ್ವದಿಸಿರುತ್ತಾರೆ. ಅವರೆಲ್ಲರಿಗೂ ನನ್ನ ಗೌರವಪೂರ್ಣವಾದ ಹಾರ್ದಿಕ ಕೃತಜ್ಞತೆಗಳನ್ನು ಈ ಮೂಲಕ ವ್ಯಕ್ತಪಡಿಸುತ್ತಾ, ವಂದನೆಗಳನ್ನು ಸಲ್ಲಿಸುತ್ತೇನೆ.

ಈ ಗ್ರಂಥರಚನಾಕಾಲದಲ್ಲಿ ನಾನು ಧಾರ್ಮಿಕವಾದ ಅನೇಕ ಗ್ರಂಥಗಳು, ಹಲವು ಮಹನೀಯರ ಲೇಖನಗಳು, ಮಾಸಿಕ, ಪಾಕ್ಷಿಕ ಪತ್ರಿಕೆಗಳು ಇವುಗಳಿಂದೆಲ್ಲ ಒಂದಲ್ಲ ಒಂದು ವಿಧದಲ್ಲಿ ನೆರವನ್ನು ಪಡೆದಿರುತ್ತೇನೆ. ಅವುಗಳೆಲ್ಲವನ್ನೂ ವಿವರವಾಗಿ ಇಲ್ಲಿ ಸೂಚಿಸಲು ಸಾಧ್ಯವಿಲ್ಲ. ಹಾಗಿದ್ದರೂ ಅವುಗಳಲ್ಲಿ ಮುಖ್ಯವಾದ ಕೆಲವು ಗ್ರಂಥಗಳ ಮತ್ತು ಪತ್ರಿಕೆಗಳ ಹೆಸರುಗಳನ್ನು ಪುಸ್ತಕದಲ್ಲಿ ಬೇರೆ ಕಡೆ ಪ್ರತ್ಯೇಕವಾಗಿ ನಮೂದಿಸಿರುತ್ತೇನೆ. ನಾನು ನೆರವು ಪಡೆದ ಗ್ರಂಥಗಳ ಕರ್ತೃಗಳೆಲ್ಲರಿಗೂ, ಲೇಖನಗಳ ಲೇಖಕರು ಎಲ್ಲರಿಗೂ ಈ ಮೂಲಕ ಕೃತಜ್ಞತೆ ಮತ್ತು ವಂದನೆಗಳನ್ನು ಸಲ್ಲಿಸುತ್ತೇನೆ.

ಈ ಪುಸ್ತಕವು ಹಿಂದೂಧರ್ಮದ ಕುರಿತಾದ ಅತಿಸೂಕ್ಷ್ಮವೂ ಅತಿವಿಸ್ತಾರವೂ ಅಲ್ಲದ ಪರಿಚಯಾತ್ಮಕವಾದ ಕೃತಿಯಷ್ಟೇ ವಿನಾ ಪರಿಪೂರ್ಣವಾದ ಗ್ರಂಥ ಖಂಡಿತ ಅಲ್ಲ. ಹಿಂದೂಧರ್ಮದ ಕುರಿತಾಗಿ ಆಳವಾಗಿ ಅಧ್ಯಯನ ನಡೆಸಲು ಓದುಗರಿಗೆ ಈ ಕೃತಿಯು ಪ್ರಚೋದನೆಯನ್ನು ನೀಡಿ ಸೂಚಕರೂಪದಲ್ಲಿ ಮಾರ್ಗದರ್ಶನ ನೀಡುವುದರಲ್ಲಿ ಯಶಸ್ವಿ ಯಾದೀತು ಎಂಬುದೇ ನನ್ನ ನಂಬಿಕೆಯಾಗಿರುತ್ತದೆ. ಸಾಮಾನ್ಯವಾಗಿ ನಮ್ಮ ಧರ್ಮದ ಪರಿಚಯವನ್ನು ಮಾಡಿಕೊಂಡು ಜೀವನದಲ್ಲಿ ಅದನ್ನು ಅನುಷ್ಠಾನಕ್ಕೆ ತರಲು ಬೇಕಾದ ಕನಿಷ್ಠತಮವಾದ ಪರಿಜ್ಞಾನವು ಈ ಪುಸ್ತಕದಿಂದ ದೊರೆಯಲು ಅನುಕೂಲವಾದೀತು ಎಂದು ನಾನು ನಂಬಿರುತ್ತೇನೆ.

ಈ ಕೃತಿಯ ಸಂಬಂಧವಾಗಿ ರಚನಾತ್ಮಕವಾದ ಸಲಹೆ, ಅಭಿಪ್ರಾಯಗಳು ಮತ್ತು ತಿದ್ದುಪಡಿಗಳನ್ನು ಸಹೃದಯರಾದ ಓದುಗರು ಗ್ರಂಥಕರ್ತನಿಗೆ ಹೇಳಿ ಅಥವಾ ಬರೆದು ತಿಳಿಸಿ ತನ್ಮೂಲಕ ಈ ಕೃತಿಯ ಸೌಂದರ್ಯ, ವಿಷಯಸಂಪತ್ತು, ಉಪಯುಕ್ತತೆ ಮತ್ತು ಅಸ್ತಿತ್ವದ ಔಚಿತ್ಯಗಳ ಸಂವರ್ಧನೆಗೆ ಸಹಕರಿಸಬೇಕಾಗಿ ವಿನಯಪೂರ್ವಕವಾಗಿ ವಿನಂತಿಸಿ ಕೊಳ್ಳುತ್ತೇನೆ.

ಇಂದು ಹಿಂದೂಸಮಾಜದಲ್ಲಿ ಕಂಡುಬರುತ್ತಿರುವ ಅನೇಕ ವಿಧವಾದ ಅವ್ಯವಸ್ಥೆಗಳು ಬೇಗನೇ ನಿರ್ಮೂಲವಾಗಿ ಹಿಂದೂಗಳೆಲ್ಲರೂ ಸಂಘಟಿತರಾಗಿ ತನ್ಮೂಲಕ ಸದೃಢ, ಸಮರ್ಥ, ಸಬಲಸಂಪನ್ನವಾದ ಸಮಾಜ ರೂಪುಗೊಳ್ಳುವಂತಾಗಿ ಅದು ಹಿಂದೂ ದೇಶ ಹಾಗೂ ಸಮಸ್ತ ಪ್ರಪಂಚದ ಕಲ್ಯಾಣಕ್ಕೆ ಸಹಾಯಕವಾಗುವಂತಾಗಲಿ ಎಂದು ಹಾರೈಸುತ್ತಾ ತತ್ಸಂಬಂಧವಾಗಿ ಪರಮಾತ್ಮನನ್ನು ಪ್ರಾರ್ಥಿಸುತ್ತೇನೆ.

ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾನ್ತಿನೋ
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ ।
ಅರ್ಹನ್ನಿತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ
ಸೋಽಯಂ ನೋ ವಿದಧಾತು ವಾಂಛಿತ ಫಲಂ ತ್ರೈಲೋಕ್ಯನಾಥೋ ಹರಿಃ ॥

ಎರ್ಮಾಳು ಕೆ. ಶಂಕರನಾರಾಯಣ ಭಟ್

ಶ್ರೀ ರಾಮಕೃಷ್ಣ ಜಯಂತಿ
ಫಾಲ್ಗುಣ ಶುಕ್ಲ ದ್ವಿತೀಯಾ ೧೮೯೮
೧–೩–೧೯೭೭

# ಮುನ್ನುಡಿ
## (ಎರಡನೆಯ ಮುದ್ರಣ)

---

ಗುರುದೇವತಾನುಗ್ರಹ ಮತ್ತು ಮಹಾಜನರ ಪ್ರೋತ್ಸಾಹದಿಂದಾಗಿ ಈ ಗ್ರಂಥದ ಪ್ರಥಮ ಮುದ್ರಣದ ಪ್ರತಿಗಳೆಲ್ಲವೂ ಮುಗಿದುಹೋಗಿ ಇದೀಗ ದ್ವಿತೀಯ ಮುದ್ರಣದ ಅವಕಾಶ ಒದಗಿಬಂದಿರುತ್ತದೆ. ಈ ವಿಚಾರವಾಗಿ ಸಂತೋಷಪಡುತ್ತಾ ಗ್ರಂಥದ ಯಶಸ್ವೀ ಪ್ರಚಾರ ಹಾಗೂ ಮಾರಾಟಕ್ಕೆ ಕಾರಣರಾಗಿ ಸಹಕರಿಸಿದವರೆಲ್ಲರನ್ನೂ ನಾನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತೇನೆ.

'ಹಿಂದೂಧರ್ಮ ಎಂದರೇನು ?' ಎಂದು ಕೇಳುವವರ ಸಂಖ್ಯೆ ಕಡಿಮೆಯಾದಷ್ಟೂ ಹಿಂದೂಧರ್ಮದ ರಕ್ಷಣೆ, ಹಿಂದೂ ಸಮಾಜದ ಹಿತ ಹಾಗೂ ಭದ್ರತೆಗಳು ಬಲವಾಗುತ್ತವೆ. ಆದಕ್ಕಾಗಿ ಹಿಂದೂಧರ್ಮದ ತತ್ತ್ವಗಳ ಕ್ರಮವಾದ ಅನುಷ್ಠಾನ, ಅರ್ಥಪೂರ್ಣ ಪ್ರಚಾರಗಳು ಹಿಂದುಗಳೆಲ್ಲರ ಜೀವನದಲ್ಲಿ ಕಾರ್ಯಗತಗೊಂಡು ಹಿಂದೂದೇಶ ಜಗತ್ತಿನ ಅಧ್ಯಾತ್ಮಗುರುವಾಗಿ ತನ್ನ ನಿಜವಾದ ಸ್ಥಾನಗೌರವವನ್ನು ಬೆಳಗಿಸಬೇಕು—ತನ್ಮೂಲಕ ವಿಶ್ವದಲ್ಲಿ ಶಾಂತಿಯ ಸ್ಥಾಪನೆಗೆ ಕಾರಣವಾಗಬೇಕು. ಈ ದಿಸೆಯಲ್ಲಿ ಈ ಗ್ರಂಥದ ಎರಡನೆಯ ಮುದ್ರಣವು ಹಿಂದಿನಂತೆಯೇ ತನ್ನದೆ ಆದ ರೀತಿಯಲ್ಲಿ ಓದುಗರಿಗೆ ನೆರವಾದೀತು ಎಂದು ನಂಬುತ್ತೇನೆ.

ಗ್ರಂಥದ ದ್ವಿತೀಯ ಮುದ್ರಣ ಹಾಗೂ ಪ್ರಕಾಶನದ ವಿಶೇಷ ಜವಾಬ್ದಾರಿಯನ್ನು ತುಂಬು ಉತ್ಸಾಹದಿಂದ ನಿರ್ವಹಿಸಿರುವ ಮಿತ್ರರಾದ ಶ್ರೀಯುತ ಡಿ. ವಿ. ಕೆ. ಮೂರ್ತಿಯವರು ಪ್ರಕಾಶನದ ಕುರಿತಾಗಿ ವ್ಯಕ್ತಪಡಿಸಿದ ಆಸಕ್ತಿ ಅಪಾರ. ಧಾರ್ಮಿಕವಾದ ಅನೇಕ ಗ್ರಂಥಗಳನ್ನು ಪ್ರಕಾಶಪಡಿಸಿ ಧರ್ಮಜಾಗೃತಿಗಾಗಿ ತಮ್ಮಿಂದಾದ ಸೇವೆ ಸಲ್ಲಿಸುತ್ತಿರುವ ಶ್ರೀಯುತ ಮೂರ್ತಿಯವರ ಕೆಲಸ ಅಭಿನಂದನಾರ್ಹವಾದುದು ಎಂಬುದಕ್ಕೆ ಈ ಗ್ರಂಥವನ್ನು ಅತ್ಯಲ್ಪಕಾಲಾವಧಿಯಲ್ಲಿ ಮುದ್ರಣಾಲಯದಿಂದ ಪ್ರಕಾಶನಕ್ಕೆ ಹೊರತಂದಿರುವ ಅವರ ಸಾಮರ್ಥ್ಯವು ಸಾಕ್ಷಿಯಾಗಿದೆ. ಶ್ರೀಯುತ ಡಿ. ವಿ. ಕೆ. ಮೂರ್ತಿಯವರ ಸ್ನೇಹಪೂರ್ಣ ಸಹಕಾರಕ್ಕಾಗಿ ನಾನು ಅವರಿಗೆ ಕೃತಜ್ಞನಾಗಿರುತ್ತೇನೆ.

ಹಿಂದೂ ಸಮಾಜ ಇನ್ನೂ ಜಾಗೃತವಾಗಿ ಸುಸಂಘಟಿತವಾಗಲಿ.

ಹಿಂದೂಧರ್ಮದ ಜ್ಯೋತಿ ಜಗತ್ತಿನಲ್ಲಿನ ಧಾರ್ಮಿಕ ಪರವಾದ ಅನ್ಯಾಯ, ಅಸತ್ಯ,

ಅವ್ಯವಸ್ಥೆಗಳ ಕತ್ತಲನ್ನು ಪರಿಹರಿಸುವಂತಾಗಲಿ.

ಹಿಂದೂದೇಶ ಜಗತ್ತಿನ ಇತರ ರಾಷ್ಟ್ರಗಳ ಮಧ್ಯೆ ದಿವ್ಯತೆ ಮತ್ತು ಭವ್ಯತೆಗಳ ಉನ್ನತ ಪ್ರತೀಕವಾಗಿ ಉಪಯುಕ್ತ ರೀತಿಯಲ್ಲಿ ಬೆಳಗಿ ಬಾಳುವಂತಾಗಲಿ.

ಸರ್ವಸ್ತರತು ದುರ್ಗಾಣಿ ಸರ್ವೋ ಭದ್ರಾಣಿ ಪಶ್ಯತು ।
ಸರ್ವಃ ಸದ್ಬುದ್ಧಿಮಾಪ್ನೋತು ಸರ್ವಃ ಸರ್ವತ್ರ ನಂದತು ॥

ಎದುರ್ಕಳ ಕೆ. ಶಂಕರನಾರಾಯಣ ಭಟ್

"ಗೀತಾಜಯಂತಿ"
ಮಾರ್ಗಶಿರ ಶುಕ್ಲ ಏಕಾದಶಿ ೧೮೯೨
೯-೧೨-೧೯೭೦

# ಮುನ್ನುಡಿ

## (ಮೂರನೆಯ ಮುದ್ರಣ)

---

ಹಿಂದೂಧರ್ಮಾಭಿಮಾನಿಗಳ ಉತ್ಸಾಹ-ಪ್ರೋತ್ಸಾಹಗಳಿಂದಾಗಿ ಈ ಗ್ರಂಥ ಇದೀಗ ಮೂರನೆಯ ಮುದ್ರಣದ ಅವಕಾಶವನ್ನು ಪಡೆದಿರುತ್ತದೆ. ಈ ಸಂದರ್ಭದಲ್ಲಿ ಅಭಿಮಾನಿ ಓದುಗರು, ಪ್ರೋತ್ಸಾಹಕರಿಗೆಲ್ಲ ನಾನು ಹಾರ್ದಿಕ ಕೃತಜ್ಞತೆಯನ್ನು ಅರ್ಪಿಸುತ್ತೇನೆ.

ಸ್ವತಂತ್ರ ಭಾರತದಲ್ಲಿ ಇದೀಗ ಜೀವನ ದೃಷ್ಟಿ ಬದಲಾಗಬೇಕು. ಬಾಳಿನ ಗುರಿ ಪ್ರಾಚೀನ ಕಾಲದಂತೆಯೇ ಈಗ ಇರಲು ಸಾಧ್ಯವಿಲ್ಲ. ಪಾಶ್ಚಾತ್ಯ ದೇಶಗಳು ಸಾಂಪತ್ತಿಕವಾಗಿ ಸಮೃದ್ಧವಾಗಿ ಸುಖಸೌಕರ್ಯಗಳನ್ನು ಹೊಂದಿರುವಂತೆ ನಾವೂ ಹೊಂದಿರಬೇಕು. ಅದಕ್ಕಾಗಿ ಶ್ರಮಿಸುವುದೇ ಜೀವನ ಕಾರ್ಯಕ್ರಮ ; ಸಿದ್ಧಿ ಹೊಂದುವುದೇ ಬದುಕಿನ ಗುರಿ ಎಂದು ಅನೇಕರು ನಂಬಿದ್ದಾರೆ. ಮತ್ತಿನ್ನು ಅನೇಕರಿಗೆ ಜೀವನದಲ್ಲಿ ರಾಜಕೀಯ ಸುಖ-ಸೌಕರ್ಯಗಳಿದ್ದರೆ ಎಲ್ಲ ಇದ್ದಂತೆ. ಆದುದರಿಂದ ದೇಶದಲ್ಲಿ ರಾಜಕೀಯ ಜೀವನ ಸಮೃದ್ಧವಾಗಬೇಕು. ರಾಜಕೀಯದಿಂದ ಮಾತ್ರ ಸರ್ವಾಂಗೀಣ ಕಲ್ಯಾಣ ಸಾಧ್ಯ ಎಂದು ನಂಬಿದ್ದಾರೆ. ಅದಕ್ಕೆ ಅನುಗುಣವಾಗಿ ಸಮಾಜದಲ್ಲಿ ಅನೇಕರು ರಾಜಕೀಯವಾಗಿ ಜೀವನ ಸಿದ್ಧಿಗಾಗಿ ದುಡಿಯುವುದೊಂದೇ ಬದುಕಿನ ಹಿರಿದಾದ ಧರ್ಮ ಎಂದು ನಿಶ್ಚಯಿಸಿಕೊಂಡಿರುತ್ತಾರೆ. ಅದರ ಪರಿಣಾಮವಾಗಿ ಬಾಳಿನ ಗುರಿ ಅಧಿಕಾರ–ಸಂಪತ್ತುಗಳ ಆರ್ಜನೆ, ಅನುಭವಿಸುವಿಕೆ ಎಂಬುದು ಮನದಲ್ಲಿ ತುಂಬಿಬಂದು ಧರ್ಮ ಎನ್ನುವುದು ಬದುಕಿಗೆ ಬೇಕಾದ ಮೊದಲ ಹಾಗೂ ಮೂಲವಾದ ವಿಚಾರವಲ್ಲ, ಬದಲು ರಾಜಕೀಯ ಸಿದ್ಧಿಯ ನಂತರ ವಿರಾಮವಾಗಿ ಅನುಭವಿಸಲು ಬಳಸಬಹುದಾದ ವಿಚಾರ ಎಂದಾಗಿದೆ. ಇನ್ನು ಕೆಲವರಿಗೆ, ಧರ್ಮ ಎಂದರೆ ಜೀವನದಲ್ಲಿ ಎಲ್ಲಾ ವಿಚಾರಗಳಂತೆ ವೈವಿಧ್ಯತೆಯನ್ನು ಅನುಭವಿಸಲು ಬೇಕಾದ ಒಂದು ವಿಚಾರ ಎಂದಾಗಿದೆ. ಮತ್ತಿನ್ನು ಕೆಲವರು ಧರ್ಮ ಎಂದರೆ ಮೂಢನಂಬಿಕೆಗಳಿಂದ ಕೂಡಿದ ವಿಚಾರ. ಅದು ವೈಜ್ಞಾನಿಕವಾದುದಲ್ಲ. ವಿಜ್ಞಾನಯುಗದಲ್ಲಿ ಅದಕ್ಕೆ ಸ್ಥಾನವಿಲ್ಲ. ಅಷ್ಟೇ ಅಲ್ಲ, ಅದರ ಅಗತ್ಯವೂ ಇಲ್ಲ ಎಂದು ಭಾವಿಸಿದ್ದಾರೆ. ಇನ್ನು ಅನೇಕರು ಧರ್ಮ ಎಂದರೆ ಬದುಕಿಗೆ ಪ್ರಯೋಗಸಾಧ್ಯವಾದ ತತ್ತ್ವಗಳಿಂದ ಕೂಡಿಲ್ಲ ಎಂದರೆ ಮತ್ತೆ ಹಲವರು ಧರ್ಮ ಎಂದರೆ ಎಲ್ಲರಿಗೂ ಆಚರಿ

ಸಲು ಅನುಕೂಲವಾದುದಲ್ಲ ಎಂದೂ ಹೇಳುತ್ತಾರೆ. ಹೀಗೆ ಧರ್ಮದ ಬಗ್ಗೆ ವಿವಿಧ ರೀತಿಯ ಅಭಿಪ್ರಾಯ-ದೃಷ್ಟಿಕೋನಗಳನ್ನು ತಳೆದಿರುವವರಿಂದ ಧರ್ಮಭೂಮಿಯಾದ ಭಾರತದಲ್ಲಿ ಸನಾತನ ಹಿಂದೂಧರ್ಮದ ಅರಿವು–ಅನುಷ್ಠಾನಗಳಿಗೆ ಅಗತ್ಯದ ಉತ್ಸಾಹ-ಪ್ರೋತ್ಸಾಹಗಳೂ ಕ್ರಮವಾಗಿ ಕೂಡಿಬರಲೂ ಅಡ್ಡಿಯಾಗಿದೆ. ಆದರೂ ಸನಾತನಧರ್ಮದಲ್ಲಿ ಸತ್ತ್ವವಿದೆ, ನಿತ್ಯನೂತನತೆ ಅಡಗಿದೆ ಎಂಬುದನ್ನು ಅರಿತು–ಅನುಷ್ಠಾನ ಮಾಡುತ್ತಾ ಬಾಳುವುದರ ಮೂಲಕ ಧರ್ಮದ ರಕ್ಷಣೆ ಹಾಗೂ ಪೋಷಣೆಗಳಿಗೆ ನೆರವಾಗುವವರು ಬಹುಮಂದಿ ಇದ್ದಾರೆ. ಹಾಗೆಯೇ ಧರ್ಮದ ಬಗ್ಗೆ ಸರಿಯಾದ ತಿಳಿವಳಿಕೆಯನ್ನು ಪಡೆಯಲು ಆಸಕ್ತರಾಗಿರುವವರೂ, ಧರ್ಮದ ಬಗ್ಗೆ ತುಂಬ ಅಭಿಮಾನ ಇದ್ದು ಅರಿವು ಸಾಕಷ್ಟು ಇಲ್ಲದವರು ಎಂಬವರ ಸಂಖ್ಯೆಯೂ ಸಾಕಷ್ಟು ಇದೆ. ಅನುಸಾರವಾಗಿ, ನಮ್ಮ ದೇಶದಲ್ಲಿ ಒಂದೆಡೆ ಧರ್ಮ ಬೇಡ, ಅದು ಅನುಪಯುಕ್ತ ಎಂದು ಹೇಳುವವರಿದ್ದಂತೆ ಇನ್ನೊಂದೆಡೆ ಅದು ಬೇಕು ಮಾತ್ರವಲ್ಲ ಅದು ಅತ್ಯಂತ ಅರ್ಥಪೂರ್ಣ ಹಾಗೂ ಉಪಯುಕ್ತ ಎಂದು ಪರಿಗಣಿಸಿ ಧರ್ಮದ ಬಗ್ಗೆ ಗೌರವ-ಆದರ–ಅಭಿಮಾನ ಉಳ್ಳವರೂ ಇದ್ದಾರೆ. ಅದಕ್ಕೆ ಅನುಗುಣವಾಗಿ ದೇಶದಾದ್ಯಂತ ಹಿಂದೂಧರ್ಮದ ತತ್ತ್ವಗಳ ಪ್ರಚಾರಕ್ಕೆ ದೇಗುಲಗಳು, ಗುರುಪೀಠಗಳು, ಸಂಘಸಂಸ್ಥೆಗಳು ವಿಶೇಷ ಪ್ರಮಾಣದಲ್ಲಿ ಶ್ರಮಿಸುತ್ತಿವೆ.

ಹಿಂದೂಧರ್ಮ ಈ ಕಾಲಕ್ಕೆ ಪ್ರಯೋಗಸಾಧ್ಯವಲ್ಲ, ಅಗತ್ಯವಿಲ್ಲ, ಜೀವನದ ಬೇಕು ಬೇಡಿಕೆಗಳ ಪೂರೈಕೆಗೆ ಸಮರ್ಥವಾದುದಲ್ಲ, ಅದು ಮೂಢನಂಬಿಕೆಗಳಿಂದ ಕೂಡಿದೆ ಎಂದೆಲ್ಲ ಭಾವಿಸುವವರಿಗೆ ಹಿಂದೂಧರ್ಮದ ತತ್ತ್ವ ಮತ್ತು ಅನುಷ್ಠಾನಗಳ ಬಗ್ಗೆ ಸರಿಯಾದ ಅರಿವು, ಅನುಭವಗಳು ಸಾಲದು ಎಂಬುದರಲ್ಲಿ ಸಂದೇಹವಿಲ್ಲ. ಹಾಗೆಯೇ ಹಿಂದೂಧರ್ಮದ ತತ್ತ್ವಸೂತ್ರಗಳನ್ನು ವಿಧಿಪ್ರಕಾರವಾಗಿ ಅನುಷ್ಠಾನ ಮಾಡಿದರೆ ಹಿಂದೂಧರ್ಮ ಹಿಂದಿನಂತೆ ಇಂದೂ ಕೂಡ ಅತ್ಯಂತ ಅರ್ಥಪೂರ್ಣ, ಜೀವನೋಪಯೋಗಿ ಹಾಗು ನಿತ್ಯನೂತನ ದಿವ್ಯಶಕ್ತಿಪ್ರಕಾಶಕವಾದ ಧರ್ಮ ಎಂಬುದರ ಅನುಭೂತಿ ಅಂತರಂಗದಲ್ಲಿ ಮೂಡುವುದರಲ್ಲಿ ಅನುಮಾನವಿಲ್ಲ.

ಇರುವ ಒಂದೇ ಸತ್ಯದ ಬಗ್ಗೆ ವಿವಿಧ ದೃಷ್ಟಿಕೋನಗಳಿಂದ ವಿಚಾರಮಾಡಿ ವಿವರವನ್ನು ಹೇಳಿರುವ ಹಿಂದೂಧರ್ಮದಲ್ಲಿ ಅನೇಕದಲ್ಲಿ ಏಕತೆ ಎಂಬ ಸೂತ್ರ ಅಡಗಿರುವುದು ಅದರ ವೈಶಿಷ್ಟ್ಯ ಹಾಗೂ ಬಲವಾಗಿರುತ್ತದೆ. ಹಾಗೆಯೇ ಅತ್ಯಂತ ವೈಜ್ಞಾನಿಕವಾದ ವಿಶ್ಲೇಷಣೆಗೆ ಒಳಗಾಗಿ ಶಾಶ್ವತ ದರ್ಶನ ಮಾಡಿಸಲು ಸಾಧ್ಯವಿರುವ ನಿತ್ಯನೂತನವಾದ ಸಾಮರ್ಥ್ಯ ಹಿಂದೂಧರ್ಮಕ್ಕಿದೆ. ಹಾಗಾಗಿ ಅದು ಸನಾತನಧರ್ಮ ಎಂದು ಸಹಜವಾಗಿ ಪ್ರಸಿದ್ಧವಾಗಿದೆ. ಈ ಸತ್ಯದ ಅರಿವು ಇಂದು ವಿದೇಶೀಯರಲ್ಲಿ ಬಹುಮಂದಿಯ ಹೃದಯದಲ್ಲಿ ಮೂಡಿಬಂದು ಅವರು ಭಾರತದ ಎಡೆಗೆ ತಿರುಗಿ ಧರ್ಮದ ನೆಲೆನಾಡು ಎಂದು ಗೌರವ ಸೂಚಿಸಿ ಸನಾತನಧರ್ಮದ ತತ್ತ್ವಗಳನ್ನು ಅನುಷ್ಠಾನಮಾಡಿ ಬದುಕಿಗೆ ಬಲ ಹಾಗೂ ಬೆಳಕನ್ನು ಪಡೆದುಕೊಳ್ಳಲು ಉತ್ಸುಕರಾಗಿದ್ದಾರೆ ಎನ್ನುವುದು ಪ್ರತ್ಯೇಕವಾಗಿ

ಹಿಂದುಗಳೆಲ್ಲರೂ ಗಮನಿಸಬೇಕಾದ ಅಭಿಮಾನದ ಅಂಶವಾಗಿದೆ.

ಈ ದೃಷ್ಟಿಯಿಂದ ನೋಡಿದರೆ ಹಿಂದುಗಳೆಲ್ಲರ ಮೇಲೆ ಧರ್ಮದ ಕುರಿತು ಈ ಕಾಲದಲ್ಲಿ ಹಿಂದಿಗಿಂತಲೂ ಹೆಚ್ಚಿನ ಜವಾಬ್ದಾರಿ ಇದೆ ಎನ್ನುವುದರಲ್ಲಿ ಸಂಶಯವಿಲ್ಲ. ಆದರೆ ದೇಶದಲ್ಲಿ ಇಂದು ಹಿಂದುಗಳ ಬಾಳಿನಲ್ಲಿ ಎಷ್ಟು ಅಗತ್ಯವೋ ಅಷ್ಟರ ಮಟ್ಟಿಗೆ ಧರ್ಮ ಆಧಾರವಾಗಿ ನೆಲೆ ನಿಂತಿರುವುದಿಲ್ಲ ಎಂಬುದು ಪ್ರಸ್ತುತದ ನಮ್ಮ ಸಮಾಜ ಜೀವನದಲ್ಲಿ ಕಂಡುಬರುವ ಅಸತ್ಯ, ಅನ್ಯಾಯ, ಅನೀತಿಗಳಿಂದ ಸ್ಪಷ್ಟವಾಗುತ್ತದೆ. ನಮ್ಮ ದೇಶದ ರಾಜಕೀಯ, ಆರ್ಥಿಕ, ಸಾಮಾಜಿಕ ಜೀವನರಂಗಗಳಲ್ಲಿ ಇಂದು ಕಂಡುಬರುವ ಅನ್ಯಾಯ, ಅವ್ಯವಸ್ಥೆ ಹಾಗೂ ಭ್ರಷ್ಟಾಚಾರಗಳಿಗೆ ಮೂಲಕಾರಣ ಧರ್ಮದ ಬಗ್ಗೆ ಅಭಿಮಾನ ಹಾಗೂ ಸರಿಯಾದ ಅರಿವು-ಅನುಷ್ಠಾನಗಳು ಇಲ್ಲದಿರುವುದೇ ಆಗಿದೆ.

ಸಾಮಾಜಿಕ ಹಾಗೂ ರಾಜಕೀಯ ಜೀವನ ಧರ್ಮದಿಂದ ಪರಿಪೋಷಿತವಾಗಿರಬೇಕು ಎನ್ನುವುದು ನಮ್ಮ ಪಾವನ ದೇಶದಲ್ಲಿ ಪ್ರಾಚೀನ ಕಾಲದಿಂದಲೂ ನಡೆದುಬಂದ ಸತ್ಸಂಪ್ರದಾಯ. ಶ್ರೀರಾಮ, ಶ್ರೀಕೃಷ್ಣ ಇವರೆಲ್ಲ ಪ್ರಾತಃಸ್ಮರಣೀಯ ಪುಣ್ಯಪುರುಷರು. ಧರ್ಮದ ಬಗ್ಗೆ ತತ್ತ್ವ-ಅನುಷ್ಠಾನಗಳ ವಿಚಾರವಾಗಿ ಲೋಕಕ್ಕೆ ಸನಾತನಸಂದೇಶವನ್ನು ಸಾರಿ ರಾಜಕೀಯ ರಂಗದಲ್ಲಿ ತುಂಬ ಯಶಸ್ವಿಯಾಗಿ ಬೆಳೆದು ಆದರ್ಶವಾಗಿ ಬಾಳಿ ಬೆಳಗಿದ ಮಹಾನುಭಾವರು, ಅಶೋಕ, ಹರ್ಷ, ವಿಕ್ರಮಾದಿತ್ಯ, ಕೃಷ್ಣದೇವರಾಯ, ಶಿವಾಜಿ ಇತ್ಯಾದಿ ಅನೇಕ ರಾಜಮಹಾರಾಜರು ನಮ್ಮ ದೇಶದಲ್ಲಿ ರಾಜಕೀಯ ಜೀವನವನ್ನು ಧರ್ಮದ ಆಧಾರದಲ್ಲಿ ನಡೆಸಿ ಇಳೆಗೆ ಸಾರ್ಥಕ ಜೀವನದ ಆದರ್ಶವನ್ನು ನೀಡಿದರು. ಆಧುನಿಕ ಕಾಲದಲ್ಲಿ ಲೋಕಮಾನ್ಯ ತಿಲಕರು, ಸುಭಾಸ್‌ಚಂದ್ರ ಬೋಸರು, ಮದನ ಮೋಹನ ಮಾಳವೀಯರು, ರಾಜೇಂದ್ರ ಪ್ರಸಾದರು, ಮಹಾತ್ಮಾ ಗಾಂಧೀಜಿಯವರು ಇತ್ಯಾದಿ ಅನೇಕ ಹಿರಿಯ ರಾಜಕಾರಣಿಗಳು ಧರ್ಮದ ಆಧಾರದಲ್ಲಿ ಸಾರ್ಥಕವಾದ ರೀತಿಯಲ್ಲಿ ರಾಜಕಾರಣ ನಡೆಸಿ ಹಿರಿದಾದ ಆದರ್ಶವನ್ನು ಬೆಳಗಿದರು. ಇವರೆಲ್ಲರ ಬದುಕು-ಬೋಧನೆಗಳನ್ನು ಪರಿಶೀಲಿಸಿದರೆ, ಬಾಳಿನ ಯಾವ ಕ್ಷೇತ್ರವೇ ಇರಲಿ, ಜೀವನ ಸಾರ್ಥಕಗೊಳ್ಳುವುದು ಅದಕ್ಕೆ ಧರ್ಮದ ಆಧಾರವಿದ್ದಾಗ ಮಾತ್ರ. ಧರ್ಮದ ಬೆಂಬಲದಿಂದ ಅರಳಿಬಂದ ರಾಜಕಾರಣವೇ ನಿಜವಾದ ರಾಜಕಾರಣ. ಅದರಿಂದ ಮಾತ್ರ ರಾಷ್ಟ್ರಕ್ಕೆ-ಲೋಕಕ್ಕೆ ಕ್ಷೇಮ ಎನ್ನುವುದು ಸ್ಪಷ್ಟವಾಗುತ್ತದೆ.

ಈ ದೃಷ್ಟಿಯಿಂದ ಹೇಳುವುದಾದರೆ ಭಾರತದ ಜೀವನದ ಆಧಾರ, ಗುರಿ ಹಾಗೂ ಶಕ್ತಿ ಧರ್ಮವಾಗಿರುತ್ತದೆ. ಧರ್ಮದ ಬೆಳಕನ್ನು ಇಲ್ಲಿ ಬೆಳಗಿಸಿ ಲೋಕಕ್ಕೆ ಹರಡುವ ಗುರುತರವಾದ ಜವಾಬ್ದಾರಿ, ಸೌಭಾಗ್ಯವಿಶೇಷ ಭಾರತದ್ದಾಗಿದೆ. ಅದರಂತೆ ಧರ್ಮದ ಬಗ್ಗೆ ಈ ದೇಶದಲ್ಲಿ ನಡೆದಷ್ಟು ಪ್ರಯೋಗ, ಸಿದ್ಧಿಸಾಕ್ಷಾತ್ಕಾರಗಳು, ಹುಟ್ಟಿದಷ್ಟು ಮಹಾಪುರುಷರು ಜಗತ್ತಿನಲ್ಲಿ ಬೇರೆ ಯಾವ ಎಡೆಯಲ್ಲೂ ಕಂಡುಬರುವುದಿಲ್ಲ. ಹಾಗೆಯೇ ಇನ್ನೂ ಕೂಡ ಆ ಪರಂಪರೆ ಈ ದೇಶದಲ್ಲಿ ಮುಂದುವರಿಯುತ್ತಾಬಂದಂತೆ ಬೇರೆಲ್ಲೂ ಕಂಡುಬರುತ್ತಿಲ್ಲ ಎಂಬುದು ಭಾರತದ ಸನಾತನಧರ್ಮದ ಪರಂಪರೆ-ಶಕ್ತಿಗಳ ಬಗ್ಗೆ ನಿದರ್ಶನವಾಗಿದೆ. ಹಾಗಾಗಿ ಭಾರತದಲ್ಲಿ ನಡೆಯುವ ಎಲ್ಲ ರಾಜಕೀಯ-ಸಾಮಾಜಿಕ

ಕೆಲಸಕಾರ್ಯಗಳು ಧರ್ಮದ ಆಧಾರದಲ್ಲಿಯೇ ನಡೆಯಬೇಕಿರುವುದು ಪರಂಪರೆಯ ಕರೆಯೂ ಹೌದು, ವರ್ತಮಾನಕಾಲದ ಜೀವನಸಾರ್ಥಕತೆಯ ದೃಷ್ಟಿಯಿಂದ ಅಗತ್ಯವೂ ಹೌದು. ಇದನ್ನು ಅನುಸರಿಸದಿದ್ದರೆ ಭಾರತಕ್ಕೆ ಎಂದಿಗೂ ಸುಖ, ಶಾಂತಿ, ಭದ್ರತೆಗಳು ಕೂಡಿಬರಲಾರವು. ಈ ವಿಚಾರವಾಗಿ ಯುಗಾಚಾರ್ಯ ಸ್ವಾಮಿ ವಿವೇಕಾನಂದರು ಹೇಳಿದ ನುಡಿಗಳು ನಮಗಿಲ್ಲಿ ಸ್ಮರಣೀಯವಾಗಿವೆ :

"ಧರ್ಮವೊಂದೇ ಭಾರತದ ಜೀವನಸತ್ವ. ಅದಿಲ್ಲದೆ ಬದಲಿಗೆ ಎಷ್ಟೇ ರಾಜಕೀಯ ವಿರಲಿ, ಸಾಮಾಜಿಕ ಸುಧಾರಣೆಗಳಿರಲಿ, ಕುಬೇರನ ಸಂಪತ್ತನ್ನೇ ಭಾರತದ ಪ್ರತಿಯೊಂದು ಮಗುವಿನ ತಲೆಯ ಮೇಲೆ ಸುರಿದರೂ ಭಾರತ ನಾಶಹೊಂದುವುದು ಖಂಡಿತ." (ಸ್ವಾಮಿ ವಿವೇಕಾನಂದರ ರಾಮನಾಡಿನ ಉಪನ್ಯಾಸ)

ಈ ಹಿನ್ನೆಲೆಯೊಡನೆ ಹಿಂದೂಧರ್ಮದ ಪರಿಚಯ, ವಿಚಾರವಿನಿಮಯ, ಆಚಾರ ಪ್ರಚಾರಗಳು ಹಿಂದೂ ಸಮಾಜದಲ್ಲಿ ಹಳ್ಳಿಯಿಂದ ದಿಲ್ಲಿಯವರೆಗೆ, ಎಳೆಯರಿಂದ ಹಿರಿಯರವರೆಗೆ ಎಂದಿಗಿಂತಲೂ ಹೆಚ್ಚು ಅಗತ್ಯವಾಗಿ ಇಂದಿನ ಕಾಲಘಟ್ಟದಲ್ಲಿ ಆಗಬೇಕಾಗಿದೆ. ಜೊತೆಗೆ ಅನ್ಯಮತೀಯರು ಹಿಂದೂಧರ್ಮದ ಬಗ್ಗೆ ಮಾಡುವ ಅಪಪ್ರಚಾರ, ಹಿಂದುಗಳನ್ನು ತಮ್ಮ ಮತಕ್ಕೆ ಹಲವು ರೀತಿಯ ಆಮಿಷಗಳನ್ನು ತೋರಿಸಿ ಪ್ರಭಾವ ಬೀರಿ ಮತಾಂತರಗೊಳಿಸಲು ಪ್ರಯತ್ನಿಸುವುದು, ಮೇಲಾಗಿ ಮತೀಯವಾದ ವೈಮನಸ್ಸು ಕಲಹ, ಸಾಮಾಜಿಕ ಅನೈಕ್ಯತೆ, ಕೋಮುವಾರು ಭಾವನೆ ಇತ್ಯಾದಿ ದುಷ್ಟಶಕ್ತಿಗಳ ಪ್ರಕಾಶ–ಪ್ರಭಾವಗಳಿಗೆ ಅನುಕೂಲವನ್ನು ಉಂಟುಮಾಡುವುದು ಇತ್ತೀಚಿಗಿನ ವರ್ಷಗಳಲ್ಲಿ ಹೆಚ್ಚಾಗಹತ್ತಿದೆ. ಇದಕ್ಕೆ ಕಾರಣವಾದರೂ ಏನು ? ಮೂಲತಃ ಹಿಂದುಗಳು ಅನೇಕರು ತಮ್ಮ ಧರ್ಮದ ಬಗ್ಗೆ ಸರಿಯಾದ ಅರಿವು ಉಳ್ಳವರಾಗಿ, ಅನುಷ್ಠಾನಬಲ ಸಂಪನ್ನರಾಗಿ, ಅಭಿಮಾನಧನರಾಗಿ ಸಾಮಾಜಿಕವಾಗಿ ಐಕ್ಯತಾಮನೋಭಾವದಿಂದ ಸಮೃದ್ಧರಾಗಿ ಇಲ್ಲದೆ ಬಹುಮಟ್ಟಿಗೆ ದುರ್ಬಲರಾಗಿರುವುದೇ ಕಾರಣವಾಗಿದೆ. ಹಾಗಾಗಿ ವ್ಯಷ್ಟಿ ಹಾಗೂ ಸಮಷ್ಟಿಯ ದೃಷ್ಟಿಯಿಂದ ಹಿಂದೂಸಮಾಜದ ಧರ್ಮಸಮ್ಮತವಾದ ಸಂಘಟನೆ, ಸಂವರ್ಧನೆಗಳಿಗೆ ಉಪಯುಕ್ತವಾಗುವಂತೆ, ಈ ಗ್ರಂಥವನ್ನು ರಚಿಸಿ ಪ್ರಕಟಪಡಿಸಿದ್ದಾಗಿದೆ. ಗ್ರಂಥವು ಸರ್ವಾಂಗೀಣ ಪರಿಪೂರ್ಣ ಹಾಗೂ ಸಮರ್ಥವಾಗಿದೆ ಎನ್ನುವಂತಿಲ್ಲವಾದರೂ ಹಿಂದುಗಳಿಗೆ, ಹಿಂದೂಧರ್ಮಾಭಿಮಾನಿಗಳಿಗೆ ಇದರಿಂದ ಸ್ವಲ್ಪಮಟ್ಟಿಗೆ ಪ್ರಯೋಜನವಾಗಿರುತ್ತದೆ ಎನ್ನುವುದು ನನಗೆ ಸಂತುಷ್ಟಿಯನ್ನುಂಟುಮಾಡಿರುತ್ತದೆ. ಅದರಂತೆ ಈ ತೃತೀಯ ಆವೃತ್ತಿಯಲ್ಲಿ ಗ್ರಂಥವನ್ನು ಪರಿಷ್ಕರಿಸಿ ಓದುಗರಿಗೆ ಮತ್ತಷ್ಟು ಹೆಚ್ಚಿನ ರೀತಿಯಲ್ಲಿ ಉಪಯುಕ್ತವೆಂದಾಗಲು ಪ್ರಯತ್ನಮಾಡಿರುತ್ತೇನೆ. ಧರ್ಮಪೀಠಾಧಿಪತಿಗಳು, ಧರ್ಮಾಭಿಮಾನಿಗಳು, ಹಿರಿಯ-ಕಿರಿಯ ವಿಚಾರವಂತ ಮಿತ್ರರು ಸೂಚಿಸಿದಂತೆ ಗ್ರಂಥದ ಈ ಹೊಸ ಮುದ್ರಣದಲ್ಲಿ ಅನೇಕ ನೂತನ ಬದಲಾವಣೆಗಳನ್ನು ಮಾಡಿ ಜೊತೆಗೆ ಹಿಂದೂಧರ್ಮದ ಒಳಪಂಥಗಳು, ಸಂಘಸಂಸ್ಥೆಗಳು, ಆಚಾರವಿಚಾರಗಳು, ಹಿಂದೂಧರ್ಮಕ್ಕೆ ಪರೋಕ್ಷವಾಗಿ ಸಂಬಂಧವಿರುವ ಪಂಥಗಳು ಎಂಬಿತ್ಯಾದಿ ವಿಷಯ

ಗಳನ್ನು ಹೊಸದಾಗಿ ಅಳವಡಿಸಲಾಗಿದೆ. ಹಿಂದೂಧರ್ಮದ ಬಗೆಗೆ ಇರುವ ಆಕ್ಷೇಪ-ಸಮಸ್ಯೆಗಳು, ಅವಕ್ಕೆ ಸಮಾಧಾನ-ಪರಿಹಾರಗಳು ಎಂಬ ಸುದೀರ್ಘವಾದ ಒಂದು ಹೊಸ ಅಧ್ಯಾಯವನ್ನೇ ಸೇರಿಸಲಾಗಿದೆ. ಹಾಗೆಯೇ ಹಿಂದೂ ಸಂಘಟನೆಯ ಬಗೆಗೆ ಪ್ರತ್ಯೇಕವಾಗಿ ವಿವೇಚನೆಯನ್ನು ಮಾಡಲಾಗಿದೆ. ಜೊತೆಗೆ ವಿಸ್ತಾರವಾದ ವಿಷಯ ಸೂಚಿಯನ್ನು ಈ ಆವೃತ್ತಿಯಲ್ಲಿ ಜೋಡಿಸಲಾಗಿದೆ.

ತೃತೀಯ ಆವೃತ್ತಿಯನ್ನು ಹೊರತರುವ ಸಂದರ್ಭದಲ್ಲಿ ಅನುಗ್ರಹಸಂದೇಶವನ್ನು ನೀಡಿ ವಿಶೇಷವಾಗಿ ಆಶೀರ್ವಾದ ಮಾಡಿರುವ ಶ್ರೀಮಜ್ಜಗದ್ಗುರು ಶಂಕರಾಚಾರ್ಯ ಶ್ರೀಮದ್ರಾಮಚಂದ್ರಾಪುರ ಮಠದ ಮಹಾಸ್ವಾಮಿಗಳಾದ ಶ್ರೀಮದ್ ರಾಘವೇಂದ್ರ ಭಾರತಿ ಮಹಾಸ್ವಾಮಿಗಳವರಿಗೆ ನಾನು ಸಾಷ್ಟಾಂಗಪ್ರಣಾಮಪೂರ್ವಕ ಗೌರವಪೂರ್ಣ ಕೃತಜ್ಞತೆಯನ್ನು ಈ ಮೂಲಕ ಸಮರ್ಪಿಸುತ್ತೇನೆ. ಹಾಗೆಯೇ ಶ್ರೀಕ್ಷೇತ್ರ ಧರ್ಮಸ್ಥಳದ ಧರ್ಮಾಧಿಕಾರಿಗಳಾಗಿರುವ ಬಹುಮಾನ್ಯರಾದ ಶ್ರೀ ಡಿ. ವಿರೇಂದ್ರ ಹೆಗ್ಗಡೆಯವರಿಗೆ ಗೌರವಪೂರ್ಣ ವಂದನೆಗಳೊಡನೆ ಕೃತಜ್ಞತೆಯನ್ನು ಅರ್ಪಿಸುತ್ತೇನೆ. ಅದರಂತೆ ಈ ಸಂದರ್ಭದಲ್ಲಿ ತುಂಬುವಿಶ್ವಾಸದಿಂದ ಸಂದೇಶವನ್ನು ನೀಡಿ ಪ್ರೋತ್ಸಾಹಿಸಿರುವ ವಿದ್ಯಾವಾಚಸ್ಪತಿ ಶ್ರೀ ಬನ್ನಂಜೆ ಗೋವಿಂದಾಚಾರ್ಯರಿಗೆ ನನ್ನ ಹಾರ್ದಿಕ ಕೃತಜ್ಞತಾ ವಂದನೆಗಳನ್ನು ಸಲ್ಲಿಸುತ್ತೇನೆ.

ಗ್ರಂಥಮುದ್ರಣದ ಬಗ್ಗೆ ಅತ್ಯಂತ ಆಸಕ್ತಿವಹಿಸಿ ಬಹಳ ವಿಶ್ವಾಸದಿಂದ ಸಹಕಾರ ನೀಡಿರುವ ಮಂಗಳೂರಿನ ಶ್ರೀ ಶಾರದಾ ಪ್ರೆಸ್‌ನ ಮ್ಯಾನೇಜಿಂಗ್ ಡೈರೆಕ್ಟರ್ ಆದ ಶ್ರೀ ವಿ. ದೇವದಾಸ್ ಕಾಮತ್‌ರವರಿಗೂ ಮತ್ತು ಅವರ ಸಹಾಯಕವರ್ಗದವರಿಗೆಲ್ಲ ನಾನು ಈ ಸಂದರ್ಭದಲ್ಲಿ ಹಾರ್ದಿಕ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತೇನೆ. ಗ್ರಂಥಕ್ಕೆ ಸಂಬಂಧಿಸಿದಂತೆ ರಕ್ಷಾಪುಟವನ್ನು ಸುಂದರವಾಗಿ ಚಿತ್ರಿಸಿಕೊಟ್ಟಿರುವ ಕಲಾವಿದ ಶ್ರೀ ರಾಮದಾಸ ಶೆವಗೂರ್ ಅವರಿಗೆ ನನ್ನ ಹಾರ್ದಿಕ ಕೃತಜ್ಞತೆಗಳು ಸಲ್ಲುತ್ತವೆ.

ಹಿಂದೂಧರ್ಮ ಸನಾತನವಾಗಿದ್ದು ಅದು ಯಾವ ಕಾಲದಲ್ಲೂ ಕೂಡ ನಿರ್ಮೂಲವಾಗಲು, ನಿಸ್ತೇಜವಾಗಲು ಸಾಧ್ಯವಿಲ್ಲ. ಇದು ವೈದಿಕ ಮಹರ್ಷಿಗಳಿಂದ, ಅವತಾರ ಪುರುಷರಿಂದ, ಸಂತಮಹಾತ್ಮರು, ಪ್ರಾಚೀನ ರಾಜಮಹಾರಾಜರಿಂದ ಹಿಡಿದು ಆಧುನಿಕ ಕಾಲದ ಅವತಾರಪುರುಷರು, ಸಾಧುಸಂತರು, ಆಳರಸರ ಬದುಕಿನ ಮೂಲಕ ಪ್ರಕಟಗೊಳ್ಳುತ್ತಾ ಬಂದಿರುವ ಸನಾತನ ಸತ್ಯ. ಅದೆಷ್ಟೋ ರಾಜಮಹಾರಾಜರುಗಳ ದಾಳಿ, ಅನ್ಯಾಯ—ಅತ್ಯಾಚಾರ, ಬಲ-ದರ್ಪಗಳನ್ನು ಎದುರಿಸಿ ಅಳಿಯದೆ ಶಕ್ತಿಪೂರ್ಣವಾಗಿ ಬೆಳೆದುನಿಂತಿರುವ ಮೃತ್ಯುಂಜಯಧರ್ಮ ಹಿಂದೂಧರ್ಮ !

ಈ ಅರಿವು-ಅಭಿಮಾನ, ಧೈರ್ಯಶ್ರದ್ಧೆಗಳು ಹಿಂದುಗಳೆಲ್ಲರ ಹೃದಯಮಂದಿರದಲ್ಲಿ ನಿತ್ಯನಂದಾದೀಪಿಗೆಯಾಗಿ ಬೆಳಗುತ್ತಿರಲಿ ! ಸನಾತನ ಹಿಂದೂಧರ್ಮದ ತತ್ತ್ವಾನುಷ್ಠಾನ ಸೂತ್ರಗಳು ಜಗದ ಜನಕೋಟಿಯ ಜೀವನೋತ್ಕರ್ಷಕ್ಕೆ ವಿಶೇಷ ಬೆಳಕು ಮತ್ತು ಬಲ

ವನ್ನು ಎಲ್ಲ ಕಾಲದಲ್ಲೂ ಬೀರುವಂತಾಗಲಿ, ಸರ್ವರಿಗೂ ಐಹಿಕಾಮುಷ್ಮಿಕ ಸುಖಶಾಂತಿಗಳು ಲಭಿಸುವಂತಾಗಲಿ ಎಂದು ಪರಮಾತ್ಮನನ್ನು ಪ್ರಾರ್ಥಿಸುತ್ತೇನೆ.

**ಸರ್ವೇ ಭವಂತು ಸುಖಿನಃ**
**ಸರ್ವೇ ಸಂತು ನಿರಾಮಯಾಃ**
**ಸರ್ವೇ ಭದ್ರಾಣಿ ಪಶ್ಯಂತು**
**ಮಾ ಕಶ್ಚಿತ್ ದುಃಖಭಾಗ್ ಭವೇತ್ ॥**

**ಓಂ ಶಾಂತಿಃ ಶಾಂತಿಃ ಶಾಂತಿಃ ॥**

**ಎದುರ್ಕಳ ಕೆ. ಶಂಕರನಾರಾಯಣ ಭಟ್**

**ಶ್ರೀ ಶಾಲಿವಾಹನ ಶಕ ೧೯೦೩**
**ಮಹಾಶಿವರಾತ್ರಿ**
**ದಿ॥ ೨೨-೨-೧೯೮೨**
**ಶ್ರೀರಾಮಕೃಷ್ಣ ನಿಲಯ**
**ಭಾಗಮಂಡಲ—೫೭೧ ೨೪೭**
**ಕೊಡಗು**

# ವಿಷಯಾನುಕ್ರಮಣಿಕೆ

* *

ಓಂ

ಗುರುರ್ಬ್ರಹ್ಮಾ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ ।
ಗುರುರೇವ ಪರಂ ಬ್ರಹ್ಮ ತಸ್ಮೈ ಶ್ರೀಗುರವೇ ನಮಃ ॥

ಸರ್ವವಿಘ್ನವಿನಾಶಾಯ ಸರ್ವಮಂಗಲಹೇತವೇ ।
ಪಾರ್ವತೀಪ್ರಿಯಪುತ್ರಾಯ ಗಣೇಶಾಯ ನಮೋ ನಮಃ ॥

ಬ್ರಹ್ಮಸ್ವರೂಪಾ ಪರಮಾ ಜ್ಯೋತಿರೂಪಾ ಸನಾತನೀ ।
ಸರ್ವವಿದ್ಯಾಧಿದೇವೀ ಯಾ ತಸ್ಯೈ ವಾಣ್ಯೈ ನಮೋ ನಮಃ ॥

ನಮೋಽಸ್ತು ತೇ ವ್ಯಾಸ ವಿಶಾಲಬುದ್ಧೇ
ಫುಲ್ಲಾರವಿಂದಾಯತಪತ್ರನೇತ್ರ ।
ಯೇನ ತ್ವಯಾ ಭಾರತತೈಲಪೂರ್ಣಃ
ಪ್ರಜ್ವಾಲಿತೋ ಜ್ಞಾನಮಯಪ್ರದೀಪಃ ॥

ಓಂ ಸಹನಾವವತು । ಸಹನೌ ಭುನಕ್ತು ।
ಸಹವೀರ್ಯಂ ಕರವಾವಹೈ ।
ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ ॥

ಓಂ ಶಾಂತಿಃ ಶಾಂತಿಃ ಶಾಂತಿಃ

ಭಗವಂತನು ನಮ್ಮನ್ನು ರಕ್ಷಿಸಲಿ. ಆತನು ನಮ್ಮನ್ನು ಪೋಷಿಸಲಿ. ಆತನ ಕೃಪೆಯಿಂದ ನಮ್ಮ ಕೆಲಸವು ವೀರ್ಯವತ್ತಾಗಿ ನಡೆಯಲಿ. ನಮ್ಮ ಅಧ್ಯಯನವು ತೇಜಸ್ವಿಯಾಗಿರಲಿ. ನಮ್ಮಲ್ಲಿ ಶಾಂತಿಯೂ ಸೌಹಾರ್ದವೂ ನೆಲಸಿರಲಿ.

ಓಂ ಭದ್ರಂ ಕರ್ಣೇಭಿಶ್ಶೃಣುಯಾಮ ದೇವಾಃ
ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ
ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿಃ
ವ್ಯಶೇಮ ದೇವಹಿತಂ ಯದಾಯುಃ ॥

ಸ್ವಸ್ತಿ ನ ಇಂದ್ರೋ ವೃದ್ಧಶ್ರವಾಃ
ಸ್ವಸ್ತಿ ನಃ ಪೂಷಾ ವಿಶ್ವವೇದಾಃ।
ಸ್ವಸ್ತಿ ನಸ್ತಾರ್ಕ್ಷ್ಯೋ ಅರಿಷ್ಟನೇಮಿಃ
ಸ್ವಸ್ತಿ ನೋ ಬೃಹಸ್ಪತಿರ್ದಧಾತು ॥

ಓಂ ಶಾಂತಿಃ ಶಾಂತಿಃ ಶಾಂತಿಃ

ಎಲೈ ದೇವತೆಗಳೇ, ನಮ್ಮ ಕಿವಿಗಳಿಂದ ಶುಭವಾದುದನ್ನು ಆಲಿಸುವಂತಾಗಲಿ. ಪೂಜಾರ್ಹರೇ, ನಮ್ಮ ಕಣ್ಣುಗಳಿಂದ ಶುಭವಾದುದನ್ನು ನೋಡುವಂತಾಗಲಿ. ನಾವು ನಿಮ್ಮನ್ನು ಸ್ತುತಿಸಿ,ನಿಮ್ಮಿಂದ ಅನುಗೃಹೀತವಾದ ಆಯುಸ್ಸನ್ನು ದೃಢಾಂಗರಾಗಿ ಅನುಭವಿಸುವಂತಾಗಲಿ. ಮಹತ್‌ಕೀರ್ತಿಯ ಇಂದ್ರ, ಸರ್ವಜ್ಞನಾದ ಆದಿತ್ಯ, ಕ್ಷೇಮಕಾರಕನಾದ ತಾರ್ಕ್ಷ್ಯ ಮತ್ತು ಬೃಹಸ್ಪತಿ—ಇವರುಗಳೆಲ್ಲರೂ ನಮಗೆ ಶುಭವನ್ನು ಕೊಡಲಿ.

ಸ್ವಸ್ತಿ ಪ್ರಜಾಭ್ಯಃ ಪರಿಪಾಲಯಂತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ||
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವಂತು |

ಸರ್ವರೂ ಕ್ಷೇಮವಾಗಿರಲಿ. ರಾಜರೆಲ್ಲರೂ ಭೂಮಿಯನ್ನು ನ್ಯಾಯಮಾರ್ಗದಲ್ಲಿ ಪಾಲಿಸಲಿ. ಸಕಲ ಜೀವಿಗಳಿಗೂ ಸದಾಕಾಲವೂ ಶುಭವಾಗಲಿ. ಸಮಸ್ತ ಲೋಕಗಳೂ ಸುಖದಿಂದ ಇರಲಿ.

ಓಂ ಶಾಂತಿಃ ಶಾಂತಿಃ ಶಾಂತಿಃ

|| ಹರಿಃ ಓಂ ತತ್ಸತ್ ||

# ೧

# ಹಿಂದೂಧರ್ಮ ಎಂದರೇನು?

ಹಿಂದೂಧರ್ಮವು ಜಗತ್ತಿನ ಪ್ರಮುಖ ಧರ್ಮಗಳಲ್ಲಿ ಒಂದಾಗಿದ್ದು ಇತರ ಎಲ್ಲ ಧರ್ಮಗಳಿಗಿಂತ ಪ್ರಾಚೀನವಾಗಿರುತ್ತದೆ. ಭಾರತ ದೇಶವು ಹಿಂದೂಧರ್ಮದ ತವರು ಮನೆ. ಹಾಗಾಗಿ ಈ ದೇಶಕ್ಕೆ ಹಿಂದೂಸ್ಥಾನ ಎಂಬ ಹೆಸರೂ ಬಂದಿರುತ್ತದೆ. ಜಗತ್ತಿನಲ್ಲಿರುವ ಇತರ ಧರ್ಮಗಳನ್ನು ಬೇರೆಬೇರೆ ಮಹಾಪುರುಷರು ಸ್ಥಾಪಿಸಿರುವಂತೆ ಹಿಂದೂ ಧರ್ಮವನ್ನು ಯಾರೊಬ್ಬ ವ್ಯಕ್ತಿಯೂ ಸ್ಥಾಪಿಸಿರುವುದಿಲ್ಲ. ಆದುದರಿಂದ ಹಿಂದೂ ಧರ್ಮವು ಅಪೌರುಷೇಯವಾದ ಧರ್ಮವಾಗಿದ್ದು ಇದನ್ನು 'ಸನಾತನಧರ್ಮ' ಎಂದೂ ಕರೆಯುತ್ತಾರೆ.

ಹಿಂದೂಧರ್ಮದ ಅನುಯಾಯಿಗಳು ಜಗತ್ತಿನ ಉದ್ದಗಲಕ್ಕೂ ಎಂಬಂತೆ ಅಲ್ಲಲ್ಲಿ ಹರಡಿದ್ದರೂ ಅವರು ಬಹುತೇಕವಾಗಿ ನೆಲೆನಿಂತಿರುವುದು ಅವರ ಧರ್ಮದ ಮೂಲನೆಲೆಯಾಗಿರುವ ಪುಣ್ಯಭೂಮಿಯಾದ ಭರತಖಂಡದಲ್ಲಿಯೇ. ಹಿಂದೂಗಳ ನಿಜವಾದ ಹೆಸರು ಆರ್ಯರು ಎಂದಾಗಿದ್ದು, ಆರ್ಯರಿಗೆ ಕೊನೆಗೆ 'ಹಿಂದೂ' ಎಂಬ ಹೆಸರು ಕೂಡಿ ಬಂದು ಅವರ ಧರ್ಮ ಹಿಂದೂಧರ್ಮ ಎಂದಾಯಿತು. ಆರ್ಯರ ಈ ಭೂಮಿಯ ಹೆಸರು ಆರ್ಯಾವರ್ತ ಎಂದಾಗಿದ್ದುದು ಕೊನೆಗೆ ಕಾರಣಾಂತರದಿಂದ ಹಿಂದೂಸ್ಥಾನ ಎಂದಾಯಿತು.

ಆರ್ಯರು ಎಂದರೆ ಯಾರು? ಆರ್ಯಾವರ್ತದಲ್ಲಿ ಮೂಲತಃ ಇದ್ದವರೇ? ಹೊರಗಿನಿಂದ ಬಂದವರೇ? ಎಂಬ ವಿಚಾರಗಳ ಬಗೆಗೆ ಇತಿಹಾಸತಜ್ಞರಲ್ಲಿ ಮತಭೇದ ಇದೆ. ಕೆಲವರು ಆರ್ಯರು ಉತ್ತರಧ್ರುವದಿಂದ ಬಂದವರು ಎಂದು ಹೇಳಿದರೆ, ಕೆಲವರು ಮಧ್ಯ ಏಷ್ಯಾದಿಂದ ಬಂದವರು ಎಂದು ಹೇಳುತ್ತಾರೆ. ಮತ್ತೆ ಕೆಲವರು ದೂರದ ಸಮುದ್ರತೀರದ ಪ್ರದೇಶದಿಂದ ಬಂದವರು ಎಂದೂ ಅಭಿಪ್ರಾಯಪಡುತ್ತಾರೆ. ಇನ್ನು ಕೆಲವರು ಆರ್ಯರೆಂದರೆ ಒಂದು ಪಂಗಡದ ಹೆಸರಾಗಿರದೆ ಅದೊಂದು ಉತ್ತಮ, ಉದಾತ್ತ ಜೀವನಕ್ರಮದ, ಸುಸಂಸ್ಕೃತಿಯ ಸೂಚಕವಾದ ಹೆಸರಾಗಿರುತ್ತದೆ ಎಂದೂ ಹೇಳುತ್ತಾರೆ. ಸ್ವಾಮಿ ವಿವೇಕಾನಂದರು ಈ ಬಗ್ಗೆ ಹೇಳುತ್ತಾ ಆರ್ಯರೆಂದರೆ ಭಾರತ ದೇಶದಲ್ಲೇ ಇದ್ದವರು, ಹೊರಗಿನಿಂದ ಬಂದವರು ಅಲ್ಲವೇ ಅಲ್ಲ ಎಂದು ದೃಢವಾಗಿ ಹೇಳಿ ತಮ್ಮ ಅಭಿಪ್ರಾಯವನ್ನು ಹೀಗೆ ಸ್ಪಷ್ಟಪಡಿಸಿರುತ್ತಾರೆ:

> ಈ ತತ್ತ್ವಗಳ ಸತ್ಯದ ಕುರಿತಾಗಿ ಹೇಳುವುದಾದರೆ, ಆರ್ಯರು ಹೊರಗಡೆಯಿಂದ ಭಾರತಕ್ಕೆ ಬಂದವರು ಎಂದು ಹೇಳಿ ರುಜುವಾತುಪಡಿಸಲು ಒಂದೇ ಒಂದು ಶಬ್ದವೂ ನಮ್ಮ ಮತ ಧರ್ಮದ ಶಾಸ್ತ್ರಗ್ರಂಥಗಳಲ್ಲಿ ಇರುವುದಿಲ್ಲ.[1]

ಆರ್ಯರು ಮೂಲತಃ ಪಂಜಾಬಿನ ಸಿಂಧೂನದಿಯ ಬಯಲಿನಲ್ಲಿ ವಾಸಿಸುತ್ತಿದ್ದರು. ಕ್ರಮೇಣ ಜನಸಂಖ್ಯೆ ಹೆಚ್ಚಿದಂತೆ ಭಾರತದ ಉತ್ತರ ಭಾಗದಲ್ಲೆಲ್ಲಾ ವ್ಯಾಪಕವಾಗಿ ನೆಲೆನಿಂತರು. ಉತ್ತರ ಭಾರತದಿಂದ ವಿಂಧ್ಯಪರ್ವತಗಳನ್ನು ದಾಟಿ ದಕ್ಷಿಣ ಭಾರತಕ್ಕೆ ಅನಂತರ ಬಂದು ನೆಲಸಿದರು. ಈ ವಿಚಾರವಾಗಿ ಮತಭೇದವಿರುವುದು ಹೌದಾದರೂ ಸಾಮಾನ್ಯವಾಗಿ ಪ್ರಚಲಿತವಿರುವ ಅಭಿಪ್ರಾಯವು ಇದಾಗಿರುತ್ತದೆ ಎಂಬುದು ಇಲ್ಲಿ ಸ್ಮರಣೀಯವಾದ ಸಂಗತಿಯಾಗಿರುತ್ತದೆ.

ಆರ್ಯರಿಗೆ ಹಿಂದೂ ಎಂಬ ಹೆಸರು ಏಕೆ ಬಂತು ? ಎಂಬುವಕ್ಕೆ ಹಿನ್ನೆಲೆಯಾಗಿರುವ ವಿಚಾರಗಳು ತುಂಬಾ ವಿಶೇಷವಾಗಿವೆ. ಸ್ವಾಮಿ ವಿವೇಕಾನಂದರು ಹಿಂದೂ ಪದದ ಉತ್ಪತ್ತಿಯ ವಿಚಾರವಾಗಿ ಹೇಳುತ್ತಾ ಅದು 'ಸಿಂಧು' ಎಂಬ ಪದದಿಂದ ಹುಟ್ಟಿಕೊಂಡಿದೆ ಎಂದು ಹೇಳಿರುತ್ತಾರೆ :

> ಹಿಂದು ಎಂಬುದು ಪುರಾತನ ಪರ್ಷಿಯನ್ನರು ಸಿಂಧೂನದಿಯನ್ನು ಉದ್ದೇಶಿಸಿ ಹೇಳುತ್ತಿದ್ದ ಶಬ್ದವಾಗಿದ್ದಿತು. ಸಂಸ್ಕೃತದಲ್ಲಿರುವ ಸಕಾರಗಳೆಲ್ಲವೂ ಪುರಾತನ ಪರ್ಷಿಯ ಭಾಷೆಯಲ್ಲಿ 'ಹ'ಕಾರವಾಗಿ ಬದಲಾಗುತ್ತಿದ್ದು ಸಿಂಧು ಎನ್ನುವುದು ಹಿಂದುವಾಯಿತು.[2]

> ಈ ಕಾಲದಲ್ಲಿ ನಮ್ಮನ್ನು ಹಿಂದು ಎಂದು ಹೇಳಿಕೊಳ್ಳುವುದೇ ಒಂದು ವೈಖರಿಯಾಗಿದ್ದು ಈ ಶಬ್ದವು ತನ್ನ ಎಲ್ಲಾ ಅರ್ಥಗಳನ್ನು ಕಳೆದುಕೊಂಡಂತಿದೆ—ಏಕೆಂದರೆ ಹಿಂದು ಎಂದರೆ ಸಿಂಧೂನದಿಯ ಆಚೆ ದಡದಲ್ಲಿ ವಾಸಿಸುವವರು ಎಂದು ಮಾತ್ರ ಅರ್ಥ. ಈ ಶಬ್ದವನ್ನು ಪ್ರಾಚೀನ ಪರ್ಷಿಯನ್ನರು ವಿಕೃತಗೊಳಿಸಿ ಸಿಂಧೂನದಿಯ ಆಚೆಯಲ್ಲಿ ವಾಸಿಸುವವರೆಲ್ಲರೂ ಪ್ರಾಚೀನ ಪರ್ಷಿಯನ್ನರಿಂದ ಹಿಂದೂ ಎಂದು ಕರೆಯಲ್ಪಟ್ಟರು.[3]

---

1. "As for the truth of these theories there is not one word in our scriptures, not one, to prove that the Aryans ever came from any where outside of India. . . . ."

—*Complete Works of Swamy Vivekananda*, Vol. III, p. 293

2. This word Hindu was the name that the ancient Persians used to apply to the river "Sindhu". Whenever in Sanskrit there is an "S" in ancient Persian it changes into 'H', so that "Sindhu" became "Hindu".

—*Ibid*, Vol. III, p. 228

3. The word Hindu by which it is the fashion nowadays to style ourselves has lost all its meaning. For this word merely meant those who lived on the other side of the river Indus (in Sanskrit "Sindhu"). This name was murdered into Hindu by the ancient Persians and all people living on the other side of the river Sindhu were called by them 'Hindus'.

—*Complete Works of Swamy Vivekananda*, Vol. III, p. 118

ಪಂಜಾಬಿನಲ್ಲಿ ಆರ್ಯರು ನೆಲೆಸಿದ್ದು ಅಲ್ಲಿಂದ ಪಶ್ಚಿಮ ಭಾಗದಲ್ಲಿ ಸಿಂಧೂನದಿಯು ಹರಿಯುತ್ತಿದ್ದಿತು. ಸಿಂಧೂನದಿಯ ಪಶ್ಚಿಮ ದಡದಿಂದ ದೂರದಲ್ಲಿ ಪರ್ಷಿಯನ್ನರು ವಾಸಮಾಡುತ್ತಿದ್ದರು. ಅವರು ಪಾರ್ಸಿಗಳೆಂದು ಕರೆಯಲ್ಪಡುತ್ತಿದ್ದರು. ಪರ್ಷಿಯನ್ನರು ಸಿಂಧೂನದಿಯ ಪೂರ್ವಕ್ಕೆ ಇದ್ದ ಜನರನ್ನು ಸಿಂಧೂನದಿಯ ದಡದವರು ಎನ್ನುವುದರ ಬದಲಿಗೆ 'ಹಿಂದೂ' ನದಿಯ ದಡದವರು ಎಂದು ಕರೆದರು. ಸಿಂಧು ಎಂದು ಆಗ ಬೇಕಾದುದು ಹಿಂದು ಎಂದಾಯಿತು. ಮುಂದೆ ಗ್ರೀಕರು ಈ ದೇಶಕ್ಕೆ ಬಂದಾಗ ಹಿಂದು ಎನ್ನುವುದನ್ನು ಇಂಡೋಯಿ ಎಂದು ಕರೆದು ಅದು ಕೊನೆಗೆ ಇಂಡಿಯ ಎಂದಾಯಿತು. ಮುಹಮ್ಮದೀಯರ ಆಳ್ವಿಕೆಯ ಕಾಲದಲ್ಲಿ ಹಿಂದೂ ಪದವನ್ನು ಹೆಚ್ಚೆಚ್ಚು ಬಳಸಲಾಯಿತು. ಕೊನೆಗೆ ಭಾರತೀಯರಿಗೆ ಹಿಂದೂ ಎಂಬ ಹೆಸರು ರೂಢಿಯಾಯಿತು. ಹಿಂದೂ ಜನರು ಆಚರಿಸುವ ಧರ್ಮ 'ಹಿಂದೂಧರ್ಮ', ಹಿಂದೂ ಜನರ ದೇಶ 'ಹಿಂದೂದೇಶ' ಎಂದು ಕರೆಯುವಂತಾಯಿತು.

### ಹಿಂದೂಧರ್ಮದ ಸರಿಯಾದ ಹೆಸರುಗಳು

ಹಿಂದೂಧರ್ಮದ ಸರಿಯಾದ ಹೆಸರು ಸನಾತನಧರ್ಮ ಎಂದಾಗಿರುತ್ತದೆ. ಶಾಶ್ವತ ವಾದ ವಸ್ತುವನ್ನು ಜಗತ್ತಿನಲ್ಲೆಲ್ಲಾ ಹರಡುವ, ಶಾಶ್ವತವಾದ ಸುಖವನ್ನು ನೀಡಬಲ್ಲ, ಶಾಶ್ವತವಾಗಿ ಉಳಿಯಬಲ್ಲ, ಧರ್ಮ ಎಂಬುದು ಈ ಶಬ್ದದ ತಾತ್ಪರ್ಯ. ಹಿಂದೂಧರ್ಮ ವನ್ನು ವೈದಿಕಧರ್ಮ, ವೇದಾಂತಧರ್ಮ, ಆರ್ಯಧರ್ಮ ಎಂದೂ ಕರೆಯುತ್ತಾರೆ. ಪ್ರತಿ ಯೊಬ್ಬ ಹಿಂದುವೂ ವೇದಗಳನ್ನು ತನ್ನ ಮತಧರ್ಮದ ಆಧಾರವೆಂದು ನಂಬಿ ಗೌರವಿ ಸುತ್ತಾನಾದ್ದರಿಂದ ವೈದಿಕಧರ್ಮ ಎಂಬ ಹೆಸರು ಬಂದಿರುತ್ತದೆ. ವೇದ ಎಂದರೆ ಜ್ಞಾನ. ವೇದಾಂತ ಎಂದರೆ ಜ್ಞಾನದ ಅಂತ್ಯ—ಅಂದರೆ ಯಾವ ಜ್ಞಾನವನ್ನು ಹೊಂದಿದರೆ ಇನ್ನೇನೂ ಹೊಸದಾಗಿ ಜ್ಞಾನಕ್ಕಾಗಿ ಸಾಧನೆಮಾಡಬೇಕಾಗಿಲ್ಲವೋ ಆ ಜ್ಞಾನದ ಸಿದ್ಧಿ ಎಂದು ಭಾವಾರ್ಥ. ಹಿಂದೂಧರ್ಮವು ಅಂತಹ ದಿವ್ಯಜ್ಞಾನವನ್ನು ಸಾಧಕರಿಗೆ ದೊರಕಿಸುವುದರಲ್ಲಿ ನೆರವಾಗುವ ಸಮರ್ಥ ಧರ್ಮವಾದ್ದರಿಂದ ವೇದಾಂತಧರ್ಮ ಎಂದೂ ಕರೆಯುವ ವಾಡಿಕೆ ಬಂದಿದೆ. ಆರ್ಯ ಎಂದರೆ ಶ್ರೇಷ್ಠ ಎಂದು ಅರ್ಥ. ಶ್ರೇಷ್ಠ ವಾದ ಸತ್ಯದ ದರ್ಶನಸಾಕ್ಷಾತ್ಕಾರಗಳಿಂದ ಶಾಂತಿ ಆನಂದಗಳನ್ನು ದೊರಕಿಸಿಕೊಡುವ ಧರ್ಮವೇ ಆರ್ಯಧರ್ಮ. ಶ್ರೇಷ್ಠವಾದ ಜೀವನತತ್ತ್ವ ಸೂತ್ರಗಳನ್ನು ಒಳಗೊಂಡ ಧರ್ಮ ಆರ್ಯಧರ್ಮ. ಆರ್ಯರು ಆಚರಿಸುತ್ತಾ ಬಂದ ಆರ್ಯಧರ್ಮ ಎಂದಾಯಿತು.

### ಸನಾತನಧರ್ಮ

ಹಿಂದೂಧರ್ಮವನ್ನು ಸನಾತನಧರ್ಮ ಎಂದು ಕರೆಯುವುದು ಸರ್ವದೃಷ್ಟಿಯಿಂದಲೂ ಸರಿ ಎಂದು ಈಗಾಗಲೇ ಹೇಳಿಯಾಗಿರುತ್ತದೆ. ಸನಾತನಧರ್ಮ ಎಂದರೆ ಯಾವ ಕಾಲಕ್ಕೂ ಬದಲಾವಣೆಹೊಂದದ ಶಾಶ್ವತವಾದ ಧರ್ಮ ಎಂದು ಸ್ಥೂಲವಾಗಿ ಹೇಳಬಹುದು. ಹಾಗೆಯೇ ಶಾಶ್ವತ ವಸ್ತುವಿನ ಜ್ಞಾನವನ್ನು ಜಗತ್ತಿನಲ್ಲೆಲ್ಲಾ ಹರಡುವುದು ಎಂಬುದು ಸನಾತನ ಶಬ್ದದ ಇನ್ನೊಂದು ಅರ್ಥವಾಗಿರುತ್ತದೆ. ಯಾವುದು ಜಗತ್ತಿನಲ್ಲೆಲ್ಲಾ

ಶಾಶ್ವತ ವಸ್ತುವಿನ ಜ್ಞಾನವನ್ನು ವಿಸ್ತರಿಸುತ್ತದೆಯೋ ಅದು ಸನಾತನಧರ್ಮ ಎಂದೆನಿಸಿರುತ್ತದೆ. ಪರಮಾತ್ಮನು ಶಾಶ್ವತನೂ ಅವಿಕಾರಿಯೂ ಆಗಿರುವುದರಿಂದ ಪರಮಾತ್ಮನನ್ನು ಸನಾತನ ಎಂದು ಕರೆಯುತ್ತಾರೆ. ಸನಾತನಧರ್ಮ ಎಂದರೆ ಪರಮಾತ್ಮನಿಂದ ಸ್ಥಾಪಿಸಲ್ಪಟ್ಟ ಧರ್ಮ ಎಂಬ ಇನ್ನೊಂದು ಅರ್ಥವನ್ನೂ ಹೇಳುವುದಿದೆ. "ಸನಾತನಶ್ಚಾಸೌ ಧರ್ಮಶ್ಚ ಸನಾತನಧರ್ಮಃ" ಎಂಬ ವಾಕ್ಯದನುಸಾರವಾಗಿ ಸನಾತನಧರ್ಮ ಎಂದರೆ ಪರಮಾತ್ಮನಿಂದ ಸ್ಥಾಪಿಸಲ್ಪಟ್ಟದ್ದು ಮಾತ್ರವಲ್ಲದೆ ಅನಾದಿ ಅನಂತ ನಿತ್ಯಶಾಶ್ವತಧರ್ಮ ಎಂದೂ ಅರ್ಥವಾಗುತ್ತದೆ. ಯಾರು ಈ ಧರ್ಮವನ್ನು ನಂಬಿ ತತ್‌ಪ್ರಕಾರವಾಗಿ ಜೀವನವನ್ನು ನಿರ್ವಹಿಸುತ್ತಾರೋ ಅವರನ್ನು ಸಂಸಾರಬಂಧದಿಂದ ಮುಕ್ತರನ್ನಾಗಿಸಿ, ಮೋಕ್ಷಾನಂದದ ಶಾಶ್ವತ ಪದವಿಯನ್ನು ಸೇರಿಸುವುದು ಎಂಬುದು ಸನಾತನಧರ್ಮದ ಇನ್ನೊಂದು ಶಬ್ದಾರ್ಥವಿವರಣೆಯಾಗಿರುತ್ತದೆ. ಧರ್ಮ ಎಂದರೇನು ? 'ಧೃ' ಎಂಬ ಧಾತುವಿನಿಂದ ಈ ಪದವು ಹುಟ್ಟಿಕೊಂಡಿರುತ್ತದೆ. 'ಧೃ' ಎಂದರೆ ಎತ್ತಿಹಿಡಿಯುವುದು, ಧಾರಣ ಮಾಡುವುದು ಎಂದು ಅರ್ಥ. ಯಾವುದು ಮಾನವನನ್ನು, ಸಮಸ್ತ ಜಗತ್ತು ಹಾಗೂ ಚರಾಚರ ವಸ್ತುಗಳನ್ನು ರಕ್ಷಣೆಮಾಡಿ ಅವುಗಳ ಸ್ಥಿತಿಗೆ ಆಧಾರವಾಗಿರುತ್ತದೋ ಅದೇ ಧರ್ಮ. ಧರ್ಮದ ವ್ಯಾಪ್ತಿ ವಿಶಾಲವಾದುದು. ಅದರ ಅರ್ಥ ವಿಸ್ತಾರವಾದುದು. ಧರ್ಮವು ಇಹಲೋಕದಲ್ಲಿ ಯೋಗಕ್ಷೇಮವನ್ನೂ ಪರಲೋಕದಲ್ಲಿ ಸದ್ಗತಿಯನ್ನೂ ಗಳಿಸಿಕೊಡಬಲ್ಲುದಾಗಿದೆ ಎಂದು ಹಿಂದೂಧರ್ಮದ ಗ್ರಂಥಗಳಲ್ಲಿ ವಿಪುಲವಾದ ಹೇಳಿಕೆಗಳೂ ಪ್ರಮಾಣವಚನಗಳೂ ಇವೆ. ಒಟ್ಟಿನಲ್ಲಿ ಯಾವ ನಿಯಮದಿಂದ ಈ ಲೋಕದಲ್ಲೂ ಪರಲೋಕಗಳಲ್ಲೂ ಜನ್ಮಜನ್ಮಾಂತರಗಳಲ್ಲೂ ವ್ಯಕ್ತಿಯ ಹಾಗೂ ಸಮಾಜದ ಉದ್ಧಾರವಾಗಿ ಪರಮಸುಖವಾದ ಮೋಕ್ಷವು ದೊರೆಯುವುದೋ ಆ ಶಾಶ್ವತವಾದ ನಿಯಮಕ್ಕೆ ಧರ್ಮ ಎಂದು ತಾತ್ಪರ್ಯವಾಗಿ ಹೇಳಬಹುದು. ಸನಾತನಧರ್ಮದ ತತ್ತ್ವಗಳು ನಿತ್ಯನೂತನವಾಗಿರುವುದರ ಜೊತೆಗೆ ದೇಶ, ಕಾಲ, ಜನಾಂಗಗಳ ಎಲ್ಲೆಕಟ್ಟನ್ನು ಮೀರಿ ಅವು ವಿಶ್ವವ್ಯಾಪಕವಾಗಿರುವುದು ಅವುಗಳ ವೈಶಿಷ್ಟ್ಯವಾಗಿರುತ್ತದೆ. (ಸನಾತನಧರ್ಮ ಅಥವಾ ವೈದಿಕ ಧರ್ಮವನ್ನು ಸಾಮಾನ್ಯವಾಗಿ ಹಿಂದೂಧರ್ಮ ಎಂದು ಕರೆಯುವುದು ರೂಢಿಯಲ್ಲಿ ಬೆಳೆದುಬಂದಿರುವುದರಿಂದ ಈ ಗ್ರಂಥದಲ್ಲಿ ಉದ್ದಕ್ಕೂ ರೂಢಿಯ ಹೆಸರಿನಿಂದಲೇ ಅನುಕೂಲಕ್ಕಾಗಿ ವ್ಯವಹರಿಸಲಾಗಿರುತ್ತದೆ.)

### ಹಿಂದೂಮತ ಮತ್ತು ಹಿಂದೂಧರ್ಮ

ಹಿಂದೂಮತ ಮತ್ತು ಹಿಂದೂಧರ್ಮ ಎಂಬ ಎರಡು ಶಬ್ದಗಳ ಪ್ರಯೋಗದ ಅರ್ಥ ಮತ್ತು ವ್ಯಾಪ್ತಿಗಳನ್ನು ಇನ್ನೀಗ ಪರಿಶೀಲಿಸೋಣ. ಪರಮಾತ್ಮ, ಜೀವರುಗಳು, ಜಗತ್ತಿನ ಉತ್ಪತ್ತಿ ಮತ್ತು ಅಂತ್ಯ ಇತ್ಯಾದಿ ವಿಚಾರಗಳ ಕುರಿತಾಗಿ ನಮಗೆ ಇರುವ ನಂಬಿಕೆಯೇ ಮತವಾಗಿದೆ. ಹಿಂದೂಮತ ಎಂದರೆ ಹಿಂದುಗಳು ಈ ವಿಶ್ವದ ಉತ್ಪತ್ತಿ, ಜೀವನ, ಪರಮಾತ್ಮ ಮತ್ತು ಜೀವಾತ್ಮ ಇತ್ಯಾದಿ ವಿಚಾರಗಳ ಕುರಿತಾಗಿ ತಳೆದಿರುವ ನಂಬಿಕೆಯಾಗಿರುತ್ತದೆ. ನಮ್ಮನ್ನು ಸರಿಯಾದ ದಾರಿಯಲ್ಲಿ ನಡಸಿ, ನಮ್ಮ ಬದುಕನ್ನು

ಉತ್ತಮಗೊಳಿಸುವುದರಲ್ಲಿ ಯಾವುದು ಕ್ರತುಶಕ್ತಿಯಾಗಿ ನೆರವಾಗುತ್ತದೋ ಅದನ್ನು ಧರ್ಮ ಎಂದು ತಾತ್ಪರ್ಯವಾಗಿ ಹೇಳುತ್ತೇವೆ. ಮತವು ನಮ್ಮ ನಂಬಿಕೆಗೆ ಸಂಬಂಧ ಪಟ್ಟಿದ್ದಾದರೆ ಧರ್ಮವು ನಮ್ಮ ನಡತೆಗೆ ಸಂಬಂಧಿಸಿದ್ದಾಗಿರುತ್ತದೆ. ಧರ್ಮವೆಂದು ನಾವು ಯಾವುದನ್ನು ಆಚರಣೆ ಮಾಡುತ್ತೇವೆಯೋ ಅದಕ್ಕೆ ಆಧಾರವು ನಮ್ಮ ನಂಬಿಕೆ ಯಾಗಿರುತ್ತದೆ, ಎಂದರೆ ನಮ್ಮ ಮತವಾಗಿರುತ್ತದೆ. ಹಾಗಾಗಿ ಧರ್ಮದಲ್ಲಿ ಮತವು ಅಂತರ್ಗತವಾಗಿ ಸೇರಿರುತ್ತದೆ ಎಂದರೆ ತಪ್ಪಾಗಲಾರದು. ಹಿಂದೂಧರ್ಮ ಎಂದರೆ ತತ್ತ್ವಗಳಿಂದ ಕೂಡಿರುವ ಶಾಸ್ತ್ರವೂ ಹೌದು, ಜೀವನಕ್ರಮವೂ ಹೌದು ಎಂಬುದನ್ನು ನಾವು ಮರೆಯಬಾರದು. ಹಾಗಾಗಿ ಹಿಂದೂಮತವನ್ನು ಹಿಂದೂಧರ್ಮ ಎಂಬುದಾಗಿ ಕರೆಯುವುದು, ವ್ಯವಹರಿಸುವುದು ರೂಢಿಯಾಗಿ ಬಂದಿರುತ್ತದೆ.

## ಹಿಂದೂಧರ್ಮವು ಅಪೌರುಷೇಯವಾದುದು

ಜಗತ್ತಿನಲ್ಲಿ ನಾವಿಂದು ಕಾಣುವ ಕ್ರೈಸ್ತ, ಮಹಮ್ಮದೀಯ ಇತ್ಯಾದಿ ಮತಗಳಿಗೆ ಮತಪ್ರವರ್ತಕರು ಇರುವಂತೆ ಹಿಂದೂಧರ್ಮದ ಸಂಸ್ಥಾಪಕರೆಂದು ಯಾರೂ ಇರುವುದಿಲ್ಲ ಎಂದು ಈಗಾಗಲೇ ಸೂಚಿಸಿಯಾಗಿದೆ. ಸಾಧಾರಣವಾಗಿ ಮತವೆಂದರೆ ಮತಸ್ಥಾಪಕ, ಆಚಾರ್ಯ, ಮತಧರ್ಮಗಳಿಗೆ ಸಂಬಂಧಿಸಿದ ಗ್ರಂಥ, ಪ್ರತಿಮೆ ಇತ್ಯಾದಿಗಳಿಂದ ಕೂಡಿರುತ್ತದೆ. ಹಿಂದೂಧರ್ಮವು ಇವುಗಳೆಲ್ಲದರಿಂದ ಕೂಡಿರುವುದು ಹೌದಾದರೂ ಇವು ಯಾವುವನ್ನೂ ಆಧರಿಸಿಕೊಂಡಿರುವುದಿಲ್ಲ ಎನ್ನುವುದು ಅದರ ವಿಶಿಷ್ಟತೆ ಹಾಗೂ ಸನಾತ ನತೆಯ ದ್ಯೋತಕವಾಗಿರುತ್ತದೆ. ಹಿಂದೂಧರ್ಮದಲ್ಲಿ ಪ್ರತಿಪಾದಿತವಾಗಿರುವ ತತ್ತ್ವಗಳು ಯಾವ ಕಾಲಕ್ಕೂ ಯಾವ ಜನಾಂಗಕ್ಕೂ ಕೂಡ ಅನುಭವಗಮ್ಯವಾದ, ಅಧಿಕಾರಕ್ಕೆ ತಕ್ಕಂತೆ ಅನುಷ್ಠಾನಸಾಧ್ಯವಾದ, ಅವಿನಾಶಿಯಾದ ಸತ್ಯವಾದುದರಿಂದ ಈ ಧರ್ಮವು ಏಕಮುಖವಾಗಿರದೆ ಸರ್ವತೋಮುಖವಾಗಿದ್ದು ಶಾಶ್ವತ ತತ್ತ್ವಗಳನ್ನು ಒಳಗೊಂಡ ಧರ್ಮವಾಗಿರುತ್ತದೆ. ಗುರುತ್ವಾಕರ್ಷಣಶಕ್ತಿಯು ಮಾನವನಿರ್ಮಿತವಲ್ಲವಾಗಿದ್ದು ಅನಾದಿಯಾಗಿರುತ್ತದೆ. ಆದರೆ ಅದರ ಇರವನ್ನು ಪ್ರಥಮತಃ ತಿಳಿದ ವ್ಯಕ್ತಿ ನ್ಯೂಟನ್ ಮಹಾಶಯನೆಂಬ ಓರ್ವನಿದ್ದು ಅವನಿಂದ ಮುಂದೆ ಅದರ ಪ್ರಚಾರವುಂಟಾಯಿತು. ಹಾಗೆಯೇ ಹಿಂದೂಧರ್ಮದ ಸನಾತನತತ್ತ್ವಗಳೂ ಅನಾದಿಯಾಗಿದ್ದು ವೈದಿಕ ಋಷಿಗಳ ದಿವ್ಯಸಮಾಧಿಸ್ಥಿತಿಯಲ್ಲಿ ಅವರಿಗೆ ಅಂತರ್ಗೋಚರವಾಗಿ ಆ ಮೂಲಕ ವ್ಯವಹಾರ ಪ್ರಪಂಚದಲ್ಲಿ ಪ್ರಚಾರಕ್ಕೆ ಬಂದಿತು. ನ್ಯೂಟನ್ನನು ಹೇಗೆ ಗುರುತ್ವಾಕರ್ಷಣಸಿದ್ಧಾಂತದ ಸಂಸ್ಥಾಪಕನಾಗಲಾರನೋ, ಬದಲು ಕೇವಲ ತತ್ತ್ವಸಿದ್ಧಾಂತದ ದ್ರಷ್ಟಾರನಾಗಬಲ್ಲನೋ ಹಾಗೆಯೇ ಆರ್ಯವೈದಿಕ ಋಷಿಗಳು ಸನಾತನಧರ್ಮದ ತತ್ತ್ವದ್ರಷ್ಟಾರರಾಗಿರುತ್ತಾರೆಯೇ ವಿನಾ ಸಂಸ್ಥಾಪಕರಾಗಿರುವುದಿಲ್ಲ. ಅವರು ವೈದಿಕ ಸತ್ಯಗಳನ್ನು ತಮ್ಮ ಪವಿತ್ರಜೀವನದ ಮೂಲಕ ದರ್ಶನಮಾಡಿದರಲ್ಲದೆ ತಯಾರುಮಾಡಿರುವುದಿಲ್ಲ. ಹಾಗಾಗಿ ಸನಾತನ ಧರ್ಮವು ವೈದಿಕ ಋಷಿಗಳಲ್ಲಿ ಯಾರೊಬ್ಬರ ಅನುಭವ-ಹೇಳಿಕೆಗಳ ಆಧಾರದಿಂದ ಶ್ರೇಷ್ಠ ಎಂಬುದಾಗಿಯಾಗಲಿ, ದಿವ್ಯಧರ್ಮ ಎಂದಾಗಿಯಾಗಲಿ ಬೆಳಗುತ್ತಾ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿರುವ ಧರ್ಮವಾಗಿರುವುದಿಲ್ಲ. ಹೀಗೆ ಪುರುಷಪ್ರಯತ್ನ

ದಿಂದಾಗಿ ಯಾರೊಬ್ಬರಿಂದಲೂ ಸ್ಥಾಪಿತವಾಗಿರುವ ಧರ್ಮವಲ್ಲದ್ದರಿಂದ, ಮತ್ತು ಯಾರೊಬ್ಬ ಮಹಾಪುರುಷನ ಹೇಳಿಕೆ-ಜೀವನವೃತ್ತಾಂತವನ್ನು ಆಧರಿಸಿ ನೆಲೆನಿಂತಿರುವ ಧರ್ಮವಲ್ಲದ್ದರಿಂದ ಹಿಂದೂಧರ್ಮವನ್ನು 'ಅಪೌರುಷೇಯ ಧರ್ಮ' ಎಂದು ಹೇಳಿರುವುದಾಗಿದೆ.

ಹಿಂದೂಧರ್ಮದ ವೈಶಿಷ್ಟ್ಯ ಹಾಗೂ ಹಿರಿಮೆ

ಜಗತ್ತಿನಲ್ಲಿರುವ ಎಲ್ಲಾ ಉತ್ತಮ ಧಾರ್ಮಿಕ ಭಾವನೆಗಳು ಮತ್ತು ನಂಬಿಕೆಗಳು ಹಿಂದೂಧರ್ಮದ ವಿಶಾಲಗರ್ಭದಲ್ಲಿ ಅಡಗಿದ್ದು ಯಾವುದನ್ನೂ ಹಳಿಯದೆ ಎಲ್ಲವನ್ನೂ ಮಾನ್ಯಮಾಡುವ ಮಹತ್ವಪೂರ್ಣವಾದ ಸಾಮರ್ಥ್ಯ ಹಾಗೂ ಹೆಚ್ಚುಗಾರಿಕೆ ಹಿಂದೂಧರ್ಮದ್ದಾಗಿರುತ್ತದೆ. ಆಧ್ಯಾತ್ಮಜೀವನದ ಓನಾಮಹಂತದಿಂದ ನಿರ್ವಿಕಲ್ಪಸಮಾಧಿಯವರೆಗಿನ ವಿವಿಧ ಹಂತಗಳ ಸಾಧಕರು, ಪ್ರಚಾರಕರು, ಪ್ರತಿಪಾದಕರು ಇವರೆಲ್ಲರನ್ನೂ ಹಿಂದೂಧರ್ಮವು ತನ್ನ ವಿಶಾಲ ಆಶ್ರಯದಲ್ಲಿ ಸೇರಿಸಿಕೊಂಡಿರುತ್ತದೆ. ಅವರವರ ಅಧಿಕಾರ ಯೋಗ್ಯತೆಗೆ ತಕ್ಕಂತೆ ಆಧ್ಯಾತ್ಮಿಕ ವಿಕಾಸಕ್ಕೆ ಅನುಕೂಲದ ಹಾದಿಯನ್ನು ತೋರಿಸಿ ಇಹ-ಪರ ಸುಖಶಾಂತಿಗಳ ಭರವಸೆಯನ್ನು ನೀಡುವ ಹಿರಿಮೆ ಹಿಂದೂಧರ್ಮದ್ದಾಗಿದೆ. ಮಾತ್ರವಲ್ಲದೆ ದೇವರಿಲ್ಲ, ಕರ್ಮ ಪುನರ್ಜನ್ಮಗಳಿಲ್ಲ ಎಂದು ಹೇಳುವವರನ್ನೂ ಕೂಡ ಹಿಂದೂಧರ್ಮವು ತನ್ನ ಆಶ್ರಯದಲ್ಲಿ ಸೇರಿಸಿಕೊಂಡಿದ್ದು ಅವರಿಗೆ ಇನ್ನೂ ಮುಂದೆ ಯೋಚಿಸುತ್ತಾ ಸಾಗಿ ಸತ್ಯದ ಬೆಳಕಿನಲ್ಲಿ ತಮ್ಮ ತಮ್ಮ ಅಭಿಪ್ರಾಯಗಳನ್ನು ಸರಿಪಡಿಸಿಕೊಂಡು ಧನ್ಯರಾಗಲು ಪೂರ್ತಿಯಾದ ಸ್ವಾತಂತ್ರ್ಯ ಮತ್ತು ಸದವಕಾಶಗಳನ್ನು ನೀಡಿರುತ್ತದೆ. ಹಿಂದೂಧರ್ಮವು ನ್ಯಾಯ, ವಾದ, ವಿಜ್ಞಾನ ಯಾವ ದೃಷ್ಟಿಯಿಂದ ತುಲನೆಮಾಡಿದರೂ ಕೂಡ ಸದಾ ಜೀವನಪ್ರಾಯೋಗಿಕವಾದುದಾಗಿದ್ದು ಅಮೃತಪ್ರಾಯವಾಗಿರುತ್ತದೆ. ಸಹಸ್ರಾರು ಸಂವತ್ಸರಗಳಿಂದ ಅನೇಕ ವಿಧದ ಶಕ್ತಿಗಳ ದಾಳಿಯನ್ನು ಎದುರಿಸಿ ಮಹತ್ತಾದ ಪ್ರವಾಹಕ್ಕೆ ಎದುರಾಗಿ ಅಚಲವಾದ ಸದೃಢ ಬಂಡೆಯಂತೆ ಕಾಲನ ಪ್ರವಾಹದ ವಿವಿಧ ತೆರೆಗಳ ಹೊಡೆತವನ್ನು ಎದುರಿಸುತ್ತಾ ಬಂದು ಇಂದಿಗೂ ಪೂರ್ಣ ಚೇತನಯುತವಾಗಿ ಉಳಿದು ನಿಂತಿರುವುದು ಹಿಂದೂಧರ್ಮದ ವೈಶಿಷ್ಟ್ಯ ಹಾಗೂ ಹಿರಿಮೆಯಾಗಿರುತ್ತದೆ. ದೇವರು ಮತ್ತು ಪ್ರಪಂಚ, ಜಗತ್ತು ಮತ್ತು ಮಾನವ, ಹುಟ್ಟು ಹಾಗೂ ಸಾವು, ಸುಖ ಮತ್ತು ದುಃಖ ಇತ್ಯಾದಿ ಜೀವನ ಸಂಬಂಧದ ಹಾಗೆಯೇ ಅತಿಮುಖ್ಯವಾದ ವಿಚಾರಗಳ ಬಗೆಗೆ ಸಮರ್ಪಕವಾದ ರೀತಿಯಲ್ಲಿ ಬೆಳಕನ್ನು ಚೆಲ್ಲಿ ಮಾನವನನ್ನು ಬಾಳಿನ ಯಾತ್ರೆಯ ಪಥದಲ್ಲಿ ಸುಖವಾಗಿ ಹಾಗೂ ಸುರಕ್ಷಿತವಾಗಿ ಸಾಗಿಸಿ ಜೀವನದ ಮಹೋನ್ನತ ಗುರಿಯಾದ ಮೋಕ್ಷಾನಂದವನ್ನು ದೊರಕಿಸುವ ಸಾಮರ್ಥ್ಯಪಡೆದಿರುವುದು ಹಿಂದೂಧರ್ಮದ ಅಂತಶ್ಶಕ್ತಿ ಮತ್ತು ಹಿರಿಮೆಗೆ ಸಾಕ್ಷಿಯಾಗಿರುವುದು ಮಾತ್ರವಲ್ಲದೆ ಅದರ ಉಪಯುಕ್ತತೆಯ ಬಗ್ಗೆ ಉತ್ತಮ ನಿದರ್ಶನವೂ ಆಗಿರುತ್ತದೆ.

ಹಿಂದೂಧರ್ಮವೂ ಆಧುನಿಕ ಯುಗವೂ

ವೇದಕಾಲದಿಂದ ಪ್ರಾರಂಭವಾಗಿ ಪುರಾಣ ಇತಿಹಾಸ ಕಾಲಗಳನ್ನು ದಾಟಿ ಆಧುನಿಕ ಕಾಲದವರೆಗೆ ಸಿಂಹಾವಲೋಕನ ಮಾಡಿದರೆ ಹಲವಾರು ಋಷಿಮಹರ್ಷಿಯರು, ಮತಾಚಾರ್ಯರು, ಸಂತಮಹಾತ್ಮರು, ಅವತಾರಪುರುಷರು. ಧಾರ್ಮಿಕ ಮುಖಂಡರೂ ಹುಟ್ಟಿ ಕಾಲಕಾಲಕ್ಕೆ ಹಿಂದೂಧರ್ಮದ ಕುರಿತಾಗಿ ಜನಜೀವನದಲ್ಲಿ ನೂತನವಾದ ಜಾಗ್ರತಿ, ಪರಿಣಾಮಕಾರಿಯಾದ ಮತಪ್ರಚಾರಗಳನ್ನು ಮಾಡಿ, ಹಿಂದೂಧರ್ಮದ ನಿತ್ಯನವೀನತೆ ಹಾಗೂ ಸತ್ಯ-ಸನಾತನತ್ವಗಳ ಬಗ್ಗೆ ಜ್ವಲಂತನಿದರ್ಶನವನ್ನು ನೀಡುತ್ತಾ ಬಾಳಿರುದು ಕಂಡುಬರುತ್ತದೆ. ವಿವಿಧ ಮನೋಭಾವನೆ ಮತ್ತು ವಿಚಾರತರಂಗಗಳ ಗಣಿಯಂತಿರುವ ಮಾನವಸಮೂಹದಲ್ಲಿ ದೇವರು-ಜೀವರು-ಜಗತ್ತು ಎಂಬಿತ್ಯಾದಿ ವಿಚಾರಗಳ ಕುರಿತಾಗಿ ವಿವಿಧ ಅಭಿಪ್ರಾಯಗಳು ಆವಿರ್ಭವಿಸಿರುವುದು ಅನಿವಾರ್ಯವೂ ಹೌದು, ಸಹಜವೂ ಹೌದಾಗಿರುತ್ತದೆ. ಅನುಸಾರವಾಗಿ ಹಿಂದೂಧರ್ಮದವರು ಎಂದು ಹೇಳಲ್ಪಡುವವರಲ್ಲೇ ವಿವಿಧ ಒಳಪಂಗಡಗಳನ್ನು ಕಾಣುತ್ತೇವೆ. ಆದರೆ ಈ ಎಲ್ಲಾ ವೈವಿಧ್ಯಗಳಿದ್ದೂ ಅವುಗಳ ಹಿನ್ನೆಲೆಯಲ್ಲಿ ಏಕತೆಯನ್ನು ಹೊಂದಿರುವುದು ಹಿಂದೂ ಧರ್ಮದ ನಿಜವಾದ ಯೋಗ್ಯತೆ ಹಾಗೂ ಹಿರಿಮೆಯಾಗಿರುತ್ತದೆ.

ಇದೀಗ ವೈಜ್ಞಾನಿಕ ಯುಗವಾಗಿದ್ದು ದಿನದಿಂದ ದಿನಕ್ಕೆ ವಿಜ್ಞಾನಪರವಾದ ಹೊಸ ಹೊಸ ಆವಿಷ್ಕಾರಗಳು, ಜೀವನಸುಖಸಲಕರಣೆಗಳು. ನವವಿಧಾನದ ಜೀವನಕ್ರಮಗಳು ಇತ್ಯಾದಿಗಳೆಲ್ಲ ಅಧಿಕವಾಗುತ್ತಿವೆ. ಎಲ್ಲವನ್ನೂ ವೈಜ್ಞಾನಿಕ ದೃಷ್ಟಿಯಿಂದ ತುಲನೆ ಮಾಡಿ ವಸ್ತು ಹಾಗೂ ವಿಚಾರಗಳನ್ನು ಸಾಕಷ್ಟು ವಿಮರ್ಶೆಮಾಡಿ ಸ್ವೀಕರಿಸುವ ಮನೋಭಾವನೆ ಹೆಚ್ಚಾಗುತ್ತಿದೆ. ಹಣತೆಯ ಜ್ಯೋತಿಯಲ್ಲಿ ಓದುತ್ತಿದ್ದ ಹಿಂದಿನ ಕಾಲ ಕಳೆದು ಇದೀಗ ವಿದ್ಯುದ್ದೀಪದ ಬೆಳಕಿನಲ್ಲಿ ಮಾನವನು ಓದಲು ಸಾಧ್ಯವಾಗುವಂತಾಗಿದ್ದು ಜೀವನಸೌಕರ್ಯಗಳು ತುಂಬಾ ಹೆಚ್ಚಾಗಿವೆ. ಜೀವನಸೌಕರ್ಯ ಹಣತೆಯ ದೀಪದ ಹಂತದಿಂದ ವಿದ್ಯುದ್ದೀಪದ ಹಂತಕ್ಕೆ ಏರಿ, ಅಷ್ಟರಮಟ್ಟಿಗೆ ಸುಧಾರಿಸಿದೆಯಾದರೂ ಕೂಡ ಕತ್ತಲಿನ ನಿವಾರಣೆ ಮಾತ್ರ ಆಗಿರುವುದಿಲ್ಲ. ಕತ್ತಲೆಂಬುದು ಹಿಂದೆಯೂ ಇತ್ತು, ಇಂದೂ ಅದು ಮನುಷ್ಯನ ಜೀವನದಲ್ಲಿ ಅನುಭವಕ್ಕೆ ಬರುತ್ತಿದೆ. ಮಾತ್ರವಲ್ಲದೆ ಕತ್ತಲಿನ ತಾತ್ಕಾಲಿಕ ನಿವಾರಣೆಗೆ ಜ್ಯೋತಿಯು ಅನವಶ್ಯವೆಂದಾಗಿರುವುದಿಲ್ಲ. ಹಣತೆಯದ್ದೇ ಆಗಲಿ, ವಿದ್ಯುದ್ದೀಪದ್ದೇ ಆಗಲಿ, ಇಂದೂ ಕೂಡ ಕತ್ತಲಿನ ನಿವಾರಣೆಗೆ ಜ್ಯೋತಿ ಹೇಗೆ ಅಗತ್ಯವೋ ಹಾಗೆಯೇ ಎಲ್ಲಿಯತನಕ ಹುಟ್ಟು, ಸಾವು, ಕಷ್ಟ, ನಷ್ಟ—ಎಂಬಿತ್ಯಾದಿ ಕತ್ತಲಿನಂತಹ ಪರಿಸ್ಥಿತಿಗಳನ್ನು ಮಾನವನು ಎದುರಿಸಬೇಕಾಗಿದೆಯೋ ಅಲ್ಲಿಯ ತನಕ, ಅದರ ನಿವಾರಣೆಗೆ-ಜೀವನನಿರ್ವಹಣೆಗೆ ಧರ್ಮಜ್ಯೋತಿಯು ಅಗತ್ಯ. ಹಿಂದೂ ಧರ್ಮವು ಈ ಆಧುನಿಕ ಕಾಲದಲ್ಲೂ ಕೂಡ ತನ್ನತನವನ್ನು ಕಳೆದುಕೊಳ್ಳದೆ ಎಷ್ಟೇ ವಿನೂತನವಾದ ಪರಿಸ್ಥಿತಿ ಬಂದರೂ ಕೂಡ ಅನುಕೂಲವಾದ ಪರಿಹಾರವನ್ನು ನೀಡುವ ಸಾಮರ್ಥ್ಯಹೊಂದಿದ್ದು ಆಧುನಿಕ ಯುಗದಲ್ಲಿ ಮಾನವನ ಜೀವನಯಾತ್ರೆಗೆ ನಂದದ ನಂದಾದೀವಿಗೆಯಾಗಿ ಬೆಳಕು ನೀಡಬಲ್ಲ ಸಾಮರ್ಥ್ಯವನ್ನು ಹೊಂದಿರುವ 'ಸನಾತನ ಧರ್ಮ'ವಾಗಿರುತ್ತದೆ ಎನ್ನುವುದು ಸಂದೇಹಾಸ್ಪದವಲ್ಲದ ಸಂಗತಿಯಾಗಿರುತ್ತದೆ.

## ಹಿಂದೂಧರ್ಮದ ಮೇಲಿರುವ ಕೆಲವು ಆಕ್ಷೇಪಗಳು

ಹಿಂದೂಧರ್ಮವು ಮೂರ್ತಿಪೂಜೆ, ಹಲವು ಜಾತಿಪಂಗಡಗಳ ಭೇದ, ವಿವಿಧವಾದ ದೈವಿಕ ಭಾವನೆ–ಆರಾಧನೆಗಳು, ಮೂಢನಂಬಿಕೆಗಳು, ಪುನರ್ಜನ್ಮ, ಕರ್ಮಸಿದ್ಧಾಂತ ಇತ್ಯಾದಿ ಹಲವಾರು ರೀತಿಯ ವಿಚಿತ್ರವಾದ ಅಭಿಪ್ರಾಯ, ನಂಬಿಕೆ ಮತ್ತು ಆಚರಣೆಗಳನ್ನು ಒಳಗೊಂಡಿದೆ. ಪರಿಣಾಮವಾಗಿ ಹಿಂದೂಸಮಾಜದ ಜನಜೀವನದಲ್ಲಿ ಅನೇಕ ರೀತಿಯ ಅವ್ಯವಸ್ಥೆ, ಸಂದಿಗ್ಧತೆಗಳಿಗೆ ಕಾರಣವಾಗಿದೆ—ಎಂಬಿತ್ಯಾದಿ ಆಕ್ಷೇಪಗಳು ಹಿಂದೂಧರ್ಮದ ಮೇಲೆ ಆರೋಪಿಸಲ್ಪಟ್ಟಿದೆ. ನಿಜವಾದ ಹಾಗೂ ಸರಿಯಾದ ವಿವೇಚನೆಯಿಂದ ಪರ್ಯಾಲೋಚಿಸಿದರೆ ಈ ಆಕ್ಷೇಪಗಳೆಲ್ಲ ನ್ಯಾಯಶೂನ್ಯ ಮಾತ್ರವಲ್ಲದೆ ಸತ್ಯಸಮ್ಮತವಲ್ಲ ಎಂದು ವೇದ್ಯವಾಗುವುದು. (ಈ ಆಕ್ಷೇಪಗಳಿಗೆಲ್ಲ ಸೂಕ್ತವಾದ ಉತ್ತರ ಹಾಗೂ ಸಮಾಧಾನಗಳನ್ನು ಗ್ರಂಥದ ಮುಂದಿನ ಅಧ್ಯಾಯಗಳಲ್ಲಿ ನೀಡುವ ಯತ್ನ ಮಾಡಲಾಗಿರುತ್ತದೆ.) ಈ ರೀತಿಯ ಹಲವಾರು ಆಕ್ಷೇಪಗಳ ಮೂಲಕಾರಣವು ಹಿಂದೂಧರ್ಮದ ಕುರಿತಾಗಿ ಸರಿಯಾದ ಪರಿಜ್ಞಾನ ಇಲ್ಲದಿರುವುದೇ ಆಗಿರುತ್ತದೆ. ಇದರಿಂದ ಹಿಂದೂಧರ್ಮದ ತತ್ತ್ವಗಳನ್ನು ತಪ್ಪುರೀತಿಯಲ್ಲಿ ಬದುಕಿನಲ್ಲಿ ಅನುಸರಿಸುವಂತಾಗಿ ತತ್ಫಲವಾಗಿ ಜನಜೀವನದಲ್ಲಿ ಹಲವಾರು ರೀತಿಯ ಅವ್ಯವಸ್ಥೆ, ಅಶಾಂತಿ, ಅಸುಖಗಳು ಹೆಚ್ಚಾಗತೊಡಗಿವೆ. ಮಾತ್ರವಲ್ಲದೆ ಹಿಂದೂಧರ್ಮದ ಕುರಿತಾದ ತಿಳಿವಳಿಕೆಯ ಅರಿವು ಜನಮನದಲ್ಲಿ ಮೂಡುವುದು ಸ್ತಬ್ಧವಾದಂತಾಗಿ ಹಿಂದೂಗಳ ಜೀವನದ ಧಾರ್ಮಿಕ ಯೋಗ್ಯತೆ, ಆಧ್ಯಾತ್ಮಿಕವಾದ ಆರೋಗ್ಯ ಮತ್ತು ಬಲಗಳು ಕುಂದಿದಂತಾಗಿ ವೈಯಕ್ತಿಕ ಹಾಗೂ ಸಾಮೂಹಿಕವಾಗಿ ಬದುಕು ಹದಗೆಡಲು ತೊಡಗಿರುತ್ತದೆ. ಆದುದರಿಂದ ಹಿಂದೂಧರ್ಮದ ತತ್ತ್ವ ಮತ್ತು ಅನುಷ್ಠಾನಗಳ ಕುರಿತಾದ ಪರಿಚಯವು ಹಿಂದುವಾದ ಪ್ರತಿಯೊಬ್ಬನಿಗೂ ಆಗಬೇಕಾದುದು ಅಗತ್ಯವಾಗಿರುತ್ತದೆ. ಮಾತ್ರವಲ್ಲದೆ ಹಿಂದೂಧರ್ಮದ ತತ್ತ್ವ ಮತ್ತು ಅನುಷ್ಠಾನವಿಚಾರಗಳು ಹಿಂದೂಗಳೆಲ್ಲರ ಜೀವನದಲ್ಲಿ ಪ್ರಾಯೋಗಿಕವಾಗಿ ಸಮಾವೇಶಗೊಂಡು ಬದುಕು ಸತ್ಯವೂ ಶಿವವೂ ಸುಂದರವೂ ಆಗಬೇಕಾಗಿರುವುದು ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ಆವಶ್ಯ. ಅಲ್ಲದೆ ಇಂದಿನ ರಾಷ್ಟ್ರೀಯ ಮತ್ತು ಅಂತರ್‌ರಾಷ್ಟ್ರೀಯ ಜೀವನ ಪರಿಸ್ಥಿತಿಯಲ್ಲಿ ಕಂಡುಬರುವ ಮತೀಯ ವೈಷಮ್ಯ, ವರ್ಣದ್ವೇಷ, ರಾಷ್ಟ್ರೀಯ ಸಂಕುಚಿತಾಭಾವನೆಯ ನೋವು ನಷ್ಟಗಳಿಂದ ಪಾರಾಗಲು ಕೂಡ ಹಿಂದೂಧರ್ಮದ ಸರಿಯಾದ ಅರಿವು ಅಭಿಮಾನಗಳು ದೇಶವಿದೇಶದಲ್ಲಿ ನೆಲೆಸಿರುವ ಹಿಂದುಗಳಿಗೆಲ್ಲರಿಗೂ ಅಗತ್ಯವಾಗಿವೆ.

## ಹಿಂದೂಧರ್ಮದ ಸಾರಸಂದೇಶ

ಜೀವನವೆಂದರೆ ಕೇವಲ ಇಂದ್ರಿಯಲಾಲಸೆಗಳ ಪೂರೈಕೆಯ ಯತ್ನವಲ್ಲ, ಅದರಂತೆಯೇ ಹುಟ್ಟುಸಾವುಗಳ ಅನುಭವದ ರಂಗ ಮಾತ್ರವೇ ಅಲ್ಲ. ಮಾನವನು ಹುಟ್ಟುಸಾವುಗಳ ಈ ಕಟ್ಟನ್ನು ಮೀರಿ ಅಮೃತತತ್ತ್ವವನ್ನು ಪಡೆಯಬಲ್ಲ. ಜಗತ್ತಿನ ವಿಶಿಷ್ಟ ಆಗುಹೋಗುಗಳ ಹಿನ್ನೆಲೆಯಲ್ಲಿ ಮಾನವನ ಯತ್ನ ಹಾಗೂ ಅಧಿಕಾರಕ್ಕೆ ಮೀರಿದ ಶಕ್ತಿಯೊಂದಿದ್ದು ಅದು ಎಲ್ಲವನ್ನೂ ನಡಸುತ್ತದೆ. ಅದೇ ಸತ್ಯ. ಅದನ್ನೇ ಪರಮಾತ್ಮ, ದೇವರು ಎಂದು

ಕರೆಯುತ್ತಾರೆ. ದೇವರು ಸಗುಣಸಾಕಾರನೂ ಹೌದು. ನಿರ್ಗುಣನಿರಾಕಾರನೂ ಹೌದು. ಸರ್ವಶಕ್ತನೂ ಸರ್ವಾಂತರ್ಯಾಮಿಯೂ ಮತ್ತು ಏಕಮೇವಾದ್ವಿತೀಯನೂ ಆದ ಪರಮಾತ್ಮನಿಗೆ ನಾಮಗಳು, ರೂಪಗಳು ಹಲವು. ಸರ್ವಾಂತರ್ಯಾಮಿಯಾದ ದೇವರು ಮಾನವರಲ್ಲಿ ಆತ್ಮಸ್ವರೂಪನಾಗಿರುತ್ತಾನೆ. ತಮ್ಮೊಳಗೇ ಇರುವ ದೇವರ ಇರವನ್ನು ಗ್ರಹಿಸಿ ತನ್ಮೂಲಕ ಅವನ ವಿಶ್ವವ್ಯಾಪಕತ್ವದ ಅರಿವನ್ನು ಪಡೆದು ಹುಟ್ಟು ಸಾವುಗಳ ಕಟ್ಟಿನಿಂದ ಮುಕ್ತನಾಗುವುದು ಮಾನವನ ಬಾಳಿನ ಪರಮಗುರಿಯಾಗಿದೆ. ಈ ಗುರಿಯ ಸಾಧನೆಗೆ ಇರುವ ದಾರಿಯು ಯೋಗವಾಗಿದ್ದು ಯೋಗದಲ್ಲಿ ಕರ್ಮ, ಭಕ್ತಿ, ರಾಜ ಮತ್ತು ಜ್ಞಾನ ಎಂಬ ನಾಲ್ಕು ವಿಧಗಳಿವೆ. ನದಿಗಳೆಲ್ಲಾ ಬೇರೆಬೇರೆಡೆಗಳಲ್ಲಿ ಹುಟ್ಟಿದರೂ ಕೂಡ ಅವು ಹರಿದು ಸಾಗಿ ಕೊನೆಗೆ ಹೇಗೆ ಸಮುದ್ರವನ್ನೇ ಸೇರುವವೋ ಹಾಗೆಯೇ ದೇವರನ್ನು ಸೇರಲಿರುವ ವಿವಿಧ ಪಥಗಳು ಕೊನೆಗೆ ಒಬ್ಬನೇ ಆದ ದೇವರನ್ನೇ ಸೇರುವುವು. ಯಾವ ಯಾವ ಪಥದಿಂದ, ಯಾವ ಯಾವ ರೂಪದಿಂದ ಪರಮಾತ್ಮನನ್ನು ಅರಸಿ ಸಾಧಕನು ಹೊರಡುತ್ತಾನೋ ಆಯಾಯ ಪಥ-ರೂಪಗಳ ಮೂಲಕ ಅವನಿಗೆ ದೇವರ ಸಾಕ್ಷಾತ್ಕಾರವಾಗುವುದು. ಜಗತ್ತಿನಲ್ಲಿ ಜನ್ಮತಳೆವ ಪ್ರತಿಯೊಂದು ಜೀವಿಗೂ ಹಿನ್ನೆಲೆಯಾಗಿ ಸಂಬಂಧಿಸಿದ ಕರ್ಮವಿದ್ದೇ ಇದೆ. ಹಿಂದಿನ ಕರ್ಮದ ಪರಿಣಾಮವೇ ಈ ಜನ್ಮವಾಗಿದ್ದು ಜೀವಿಯು ತನ್ನ ಕರ್ಮಫಲವನ್ನು ಅನುಭವಿಸಲು ಉಳಿದರೆ ಅಥವಾ ಪ್ರಸ್ತುತ ಜನ್ಮದ ಕರ್ಮಕ್ಕನುಗುಣವಾಗಿ ಮುಂದಿನ ಜನ್ಮವನ್ನು ಪಡೆಯುತ್ತಾನೆ. ಹಾಗೆಯೇ ಎತ್ತಿದ ಜನ್ಮದಲ್ಲೇ ಸತ್ಕರ್ಮದಿಂದ, ಸದ್ವರ್ತನೆಯಿಂದ, ಸರಿಯಾದ ಸಾಧನೆಯಿಂದ ಕರ್ಮಬಂಧದಿಂದ ಪಾರಾಗಿ ಶಾಶ್ವತಮೋಕ್ಷಾನಂದವನ್ನು ಹೊಂದಲೂ ಸಾಧ್ಯವಿದೆ. ಇಳೆಯಲ್ಲಿ ಅನ್ಯಾಯ-ಅಧರ್ಮಗಳು ಜನಜೀವನದಲ್ಲಿ ಹೆಚ್ಚಾಗಿ, ಬದುಕು ಅಸಹ್ಯವೂ ಅಶಾಂತಿಯುತವೂ ಆದಾಗ ಸಾಧುಗಳ ಸಂರಕ್ಷಣೆಗೆ, ದುಷ್ಟರ ಸಂಹಾರಕ್ಕೆ ಮತ್ತು ಧರ್ಮಸಂಸ್ಥಾಪನೆಗೆ ಪರಮಾತ್ಮಶಕ್ತಿಯು ದೇಹಧಾರಿಯಾಗಿ ಈ ಲೋಕದಲ್ಲಿ ಅವತರಿಸಿ ಕೆಲಸಕಾರ್ಯಗಳನ್ನು ನಿರ್ವಹಿಸುತ್ತದೆ. ಅದೇ ಭಗವಂತನ ಅವತಾರದ ಹಿನ್ನೆಲೆಯಲ್ಲಿರುವ ತತ್ತ್ವ.

ಆತ್ಮಸಾಕ್ಷಾತ್ಕಾರವೇ ಜೀವನದ ಪರಮಗುರಿಯಾಗಿರುತ್ತದೆ. ಹಾಗೆಂದು ಇಹಲೋಕದ ದಿನನಿತ್ಯದ ಜೀವನವನ್ನು ಅಲ್ಲಗಳೆಯಬೇಕಾಗಿಲ್ಲ. ಜೀವನದ ವಿಶಿಷ್ಟ ವ್ಯವಹಾರಗಳನ್ನು ಧರ್ಮಸಮ್ಮತವಾಗಿ ನಿರ್ವಹಿಸಬೇಕು. ಧರ್ಮದ ಮೂಲಕ ಅರ್ಥವನ್ನು ಗಳಿಸಿ ಅನಂತರ ಧರ್ಮಸಮ್ಮತವಾದ ರೀತಿಯಲ್ಲಿ ತನ್ನ ಆಶೋತ್ತರಗಳನ್ನು ಭೋಗಿಸಿ, ಅನುಭವಿಸಿ, ಜೀವನವನ್ನು ಸುಖಪ್ರದ ಮತ್ತು ಸುಗಮವಾಗಿಸಿ ಸಾರ್ಥಕಗೊಳಿಸಬೇಕು. ಜೀವನದ ಕಷ್ಟನಷ್ಟ, ಸುಖಸಂತೋಷಗಳನ್ನು ಮನುಷ್ಯನು ಹೇಡಿಯಂತಲ್ಲದೆ ಧೀರನಾಗಿ ಅನುಭವಿಸಬೇಕು. ಜೀವನದ ವಿವಿಧ ರೀತಿಯ ಅನುಭವಗಳಿಗೆ ಅಡಿಯಾಳಿನಂತಲ್ಲದೆ ಅಧಿಕಾರಿಯಾಗಿ, ನಿರ್ಲಿಪ್ತನಾಗಿ, ನೀರಿನಲ್ಲಿರುವ ತಾವರೆಯ ಎಲೆಯಂತೆ, ಈ ಜಗತ್ತಿನಲ್ಲಿ ಮಾನವನು ಜೀವನವನ್ನು ಸಾಗಿಸಬೇಕು. ಇಹಲೋಕದ ಜೀವನದಲ್ಲಿ ಸುಖಗಳೆಷ್ಟೇ ಇದ್ದರೂ ಕೂಡ ಯಾವುದೂ ಸ್ಥಿರವಲ್ಲ, ಐಶ್ವರ್ಯ ಅಂತಸ್ತು ಆರೋಗ್ಯ ಅಧಿಕಾರ ಇತ್ಯಾದಿಗಳು ಯಾವುದೂ ಶಾಶ್ವತವಲ್ಲ

ಆತ್ಮಸಾಕ್ಷಾತ್ಕಾರವೇ ಶಾಶ್ವತಸುಖವಾಗಿರುತ್ತದೆ. ಆ ಸುಖವನ್ನು ಪಡೆದಾಗ ಮಾತ್ರ ಹುಟ್ಟುಸಾವು, ಕಷ್ಟನೋವುಗಳಿಂದ ನಿವೃತ್ತಿ. ಅದೇ ಮೋಕ್ಷ. ಹಾಗಾಗಿ ಜನ್ಮಮರಣ ಗಳಿಂದ ಮುಕ್ತನಾಗಿ ಮೋಕ್ಷವನ್ನು ಪಡೆಯುವುದೇ ಜೀವನದ ಮಹೋನ್ನತ ಗುರಿ. ಮಾನವರು ಯಾರೂ ಪಾಪಿಗಳಲ್ಲ, ಎಲ್ಲರೂ ಅಮೃತಪುತ್ರರೇ. ಅಮೃತಾತ್ಮಸ್ವರೂಪಿ ಗಳಾದ ಮಾನವರು ಈ ಮರ್ತ್ಯಲೋಕದಲ್ಲಿ ಜೀವನವನ್ನು ಮಾಡಿ ಧರ್ಮ-ಅರ್ಥ-ಕಾಮ-ಮೋಕ್ಷಗಳೆಂಬ ನಾಲ್ಕು ವಿಧದ ಪುರುಷಾರ್ಥಗಳನ್ನು ಸಂಪಾದಿಸಿ ತನ್ಮೂಲಕ ಅಮೃತತ್ವವನ್ನು ಹೊಂದಿ ಅವರ್ಣನೀಯವಾದ ಅಮಿತಾನಂದವನ್ನು ಹೊಂದಲು ಸಾಧ್ಯವಿದೆ. ಹೀಗೆ ಇಳೆಯಲ್ಲಿ ಜನ್ಮತಳೆದ ಮಾನವನು ಅಸತ್ತಿನಿಂದ ಸತ್ಯಕ್ಕೆ, ತಮಸ್ಸಿ ನಿಂದ ಜ್ಯೋತಿಗೆ, ಮೃತ್ಯುವಿನಿಂದ ಅಮೃತತ್ವಕ್ಕೆ ಏರಲು ಸಾಧ್ಯವಿದೆ. ಅದೇ ಜೀವನದ ಮಹೋನ್ನತ ಗುರಿಯಾಗಿದೆ ಎಂಬುದೇ ಹಿಂದೂಧರ್ಮದ ಸಾರಸಂದೇಶವಾಗಿರುತ್ತದೆ

## ೨

# ಹಿಂದೂ ಧರ್ಮಗ್ರಂಥಗಳು

ಜಗತ್ತಿನಲ್ಲಿರುವ ವಿವಿಧ ಧರ್ಮಗಳಿಗೆ ಅವುಗಳವೇ ಆದ ಧರ್ಮಗ್ರಂಥಗಳಿದ್ದು ಅವು ಆಯಾಯ ಧರ್ಮದ ಆಧಾರಗಳಾಗಿರುತ್ತವೆ. ಕ್ರೈಸ್ತಧರ್ಮದವರಿಗೆ ಪವಿತ್ರ ಬೈಬಲ್ ಅಥವಾ ಕ್ರೈಸ್ತವೇದ ಎಂಬ ಗ್ರಂಥವಿದ್ದರೆ ಇಸ್ಲಾಂ ಧರ್ಮೀಯರಿಗೆ ಪವಿತ್ರ ಖುರಾನ್ ಎಂಬ ಗ್ರಂಥವಿದೆ. ಎಲ್ಲಾ ಧರ್ಮದವರೂ ಅವರವರ ಧಾರ್ಮಿಕ ಪವಿತ್ರಗ್ರಂಥಗಳನ್ನು ಪರಮಪವಿತ್ರವೆಂದು ಪರಿಗಣಿಸಿ ಅವುಗಳ ಬಗ್ಗೆ ಭಕ್ತಿಗೌರವಗಳನ್ನು ವ್ಯಕ್ತಪಡಿಸುತ್ತಾರೆ.

ಈ ಶಾಸ್ತ್ರಗ್ರಂಥಗಳು ಪ್ರತಿಯೊಂದು ಧರ್ಮದ ತತ್ತ್ವ ಹಾಗೂ ಪ್ರಾಯೋಗಿಕ ಆಚರಣೆಯ ವಿಚಾರಗಳ ವಿವರಣೆಗಳನ್ನು ಒಳಗೊಂಡಿದ್ದು ಆಯಾಯ ಧರ್ಮದ ಪ್ರಮುಖವಾದ ಆಧಾರಗ್ರಂಥಗಳಾಗಿರುತ್ತವೆ. ಹಾಗಿದ್ದರೂ ಕೂಡ ಭೂಪಟವೇ ದೇಶ ಹೇಗೆ ಆಗಲಾರದೋ ಅಥವಾ ಭೂಪಟದಲ್ಲಿ ದೇಶದ ಊರುಗಳ ಗುರುತು ಹಚ್ಚಿದ ಮಾತ್ರಕ್ಕೆ ಊರನ್ನು ಪ್ರಾಯೋಗಿಕವಾಗಿ ಸಂದರ್ಶಿಸಿದಂತೆ ಹೇಗೆ ಆಗುವುದಿಲ್ಲವೋ ಅದೇ ರೀತಿ ಶಾಸ್ತ್ರಗ್ರಂಥಗಳಷ್ಟೇ ಧರ್ಮದ ಪ್ರಾಯೋಗಿಕ ಅನುಭವಗಳನ್ನು ನೀಡಲಾರವು. ಶಾಸ್ತ್ರಗಂಥಗಳು ಊರಿಗೆ ಹಾದಿಯನ್ನು ತೋರಿಸುವ ಕೈಗಂಬದಂತೆ ಮಾರ್ಗದರ್ಶಕಗಳೇ ವಿನಾ ದಾರಿಯ ಗುರಿಗಳಲ್ಲ. ಹೊಸದಾದ ಒಂದು ಊರಿಗೆ ಹೋಗುವ ಮೊದಲು ದಾರಿಗಂಬ ಭೂಪಟಗಳು ನಮಗೆ ನಿಜಕ್ಕೂ ಅಗತ್ಯವಾಗಿರುವಂತೆ ಆ ಮಟ್ಟಿಗೆ ಶಾಸ್ತ್ರಗ್ರಂಥಗಳೂ ನಮ್ಮ ಜೀವನದಲ್ಲಿ ಅಗತ್ಯವಾಗಿವೆ. ಶ್ರೀರಾಮಕೃಷ್ಣ ಪರಮಹಂಸರು ಶಾಸ್ತ್ರಗ್ರಂಥಗಳ ಸ್ಥಾನದ ಕುರಿತಾಗಿ ಹೇಳಿದ ಒಂದು ಉದಾಹರಣೆ ಈ ವಿಚಾರದಲ್ಲಿ ವಿಶೇಷ ಬೆಳಕನ್ನು ಬೀರುತ್ತಿದೆ : "ಬತ್ತದ ಸಿಪ್ಪೆ ಒಳಗಿನ ಅಕ್ಕಿಯನ್ನು ರಕ್ಷಿಸಲು ಅಗತ್ಯವಾಗಿರುತ್ತದೆ. ಆದರೆ ಅಕ್ಕಿಯನ್ನು ಅನ್ನಮಾಡುತ್ತೇವೆಯೇ ವಿನಾ ಬತ್ತವನ್ನು ಅನ್ನಮಾಡುವುದಿಲ್ಲ. ಹಾಗೆಂದು ಬರೀ ಅಕ್ಕಿಯನ್ನು ಬಿತ್ತಿದರೆ ಬತ್ತ ಬೆಳೆಯಲು ಸಾಧ್ಯವೂ ಇಲ್ಲ. ಅಕ್ಕಿಯ ರಕ್ಷಣೆಗೆ ಬತ್ತದ ಸಿಪ್ಪೆ ಬೇಕಾದಂತೆ ನಮ್ಮ ಜೀವನದ ಗುರಿಸಾಧನೆಗೆ ಶಾಸ್ತ್ರಗ್ರಂಥಗಳು ಅಗತ್ಯವಾಗಿವೆ."

ಹಿಂದೂಧರ್ಮದ ತತ್ತ್ವಗಳೆಲ್ಲ ಸಂಗ್ರಹಿಸಲ್ಪಟ್ಟು, ಹಿಂದೂಧರ್ಮದ ಆಧಾರಗ್ರಂಥವಾಗಿ ರೂಪುಗೊಂಡಿರುವವುಗಳನ್ನೇ ವೇದಗಳೆಂದು ಕರೆಯುತ್ತಾರೆ.

ವೇದಗಳೆಂದರೇನು ?

ವೇದ ಎಂದರೆ ಜ್ಞಾನ ಎಂದರ್ಥ. ಈಗಾಗಲೇ ಪ್ರಸ್ತಾಪಿಸಿರುವಂತೆ ಮೂಲತಃ ವೇದವನ್ನು ಯಾವನೊಬ್ಬ ವ್ಯಕ್ತಿಯೂ ಒರೆದು ಸೃಷ್ಟಿಸಿರುವುದಿಲ್ಲ. ಸಹಾಸ್ರರು ವರ್ಷಗಳ ಹಿಂದೆ ನಮ್ಮ ಪೂರ್ವಜರಾದ ಆರ್ಯಋಷಿಗಳು ತಪಸ್ಸುಮಾಡಿದಾಗ ಅವರ ಅಂತರಂಗದಲ್ಲಿ ದಿವ್ಯಜ್ಞಾನವು ಪ್ರಕಾಶಗೊಂಡು ಛಂದೋಬದ್ಧವಾಗಿ ವೇದವು ಅವರಿಗೆ ಪ್ರಾಪ್ತವಾಯಿತು ಆರ್ಯಋಷಿಗಳು ಅವನ್ನು ತಮ್ಮ ದಿವ್ಯಭಾವದಲ್ಲಿ ಅಂತರ್ಯದಲ್ಲಿ ಕಂಡು ಕೇಳುವ ಮುನ್ನವೇ ವೇದಪ್ರತಿಪಾದ್ಯವಾದ ತತ್ತ್ವಜ್ಞಾನ ಈ ಬ್ರಹ್ಮಾಂಡದಲ್ಲಿ ಸೂಕ್ಷ್ಮರೂದಲ್ಲಿದ್ದಿತು. ರೇಡಿಯೋ ಅಲೆಗಳು ಆಕಾಶದಲ್ಲಿ ಸದಾ ಇರುತ್ತವೆಯಾದರೂ ಸರಿಯಾದ ರೇಡಿಯೋ ಯಂತ್ರ ಮುಖೇನ ಸುವ್ಯವಸ್ಥಿತವಾದ ರೀತಿಯಲ್ಲಿ ರೇಡಿಯೋ ವನ್ನು ಸಜ್ಜುಗೊಳಿಸಿದಾಗ ಮಾತ್ರ ಅವು ಕೇಳಿಬರುತ್ತವೆ. ರೇಡಿಯೋವನ್ನು ಸಜ್ಜು ಗೊಳಿಸಿ ಕೇಳದೇ ಇದ್ದಾಗ, ಶಬ್ದ ಕೇಳುವುದಿಲ್ಲ ಎಂದಮಾತ್ರಕ್ಕೆ ಆಕಾಶದಲ್ಲಿ ಅಲೆಗಳು ಇಲ್ಲವೆನ್ನಲು ಸಾಧ್ಯವಿಲ್ಲ. ಹಾಗೆಯೇ ಸನಾತನವಾದ ಜ್ಞಾನವೂ ಕೂಡ ಬ್ರಹ್ಮಾಂಡದಲ್ಲಿ ಸೂಕ್ಷ್ಮರೂಪದಲ್ಲಿ ಸದಾ ಇರುತ್ತದೆ. ರೇಡಿಯೋ ಮೂಲಕ ಕೇಳಿಬಂದ ಮಾತ್ರಕ್ಕೆ ಶಬ್ದಗಳು ರೇಡಿಯೋಕೃತ ಎಂದು ಹೇಳಲು ಸಾಧ್ಯವಿಲ್ಲ. ಹಾಗೆಯೇ ಆರ್ಯಋಷಿಗಳ ಮೂಲಕ ಪ್ರಕಟಗೊಂಡ ವೇದವು ಆರ್ಯಋಷಿನಿರ್ಮಿತವಲ್ಲವಾಗಿದ್ದು ಅಪೌರುಷೇಯ ವಾಗಿರುತ್ತದೆ. ಆರ್ಯಋಷಿಗಳು ವೇದೋಕ್ತಜ್ಞಾನಪ್ರಕಾಶವನ್ನು ತಮ್ಮ ಅಂತರ್ಯದಲ್ಲಿ ಕಂಡದ್ದರಿಂದ ಮಂತ್ರದ್ರಷ್ಟಾರರೆಂದೂ ಅವರಿಗೆ ದಿವ್ಯವೇದವಾಣಿ ಕೇಳಿಬಂದದ್ದರಿಂದ ಅದನ್ನು 'ಶ್ರುತಿ' ಎಂದೂ ಹೇಳುತ್ತಾರೆ. ಹೀಗೆ ಆರ್ಯಋಷಿಗಳಿಗೆ ಅಂತಗೋಚರವಾದ ದಿವ್ಯಸತ್ಯಗಳ ಕ್ರೋಢೀಕರಣೆಯೇ ವೇದಸಾಹಿತ್ಯದ ವಿಷಯಸಂಗ್ರಹವಾಗಿದೆ. ವೇದ ವನ್ನು ಪಡೆದ ಋಷಿಗಳನ್ನು ವೈದಿಕ ಋಷಿಗಳೆಂದು ಹೇಳುತ್ತಾರೆ. ಯಾವ ಋಷಿಗಳು ವೇದವನ್ನು ಎಲ್ಲಿ ಯಾವಾಗ ಪಡೆದರು ಎಂಬುದರ ಬಗೆಗಾಗಲಿ. ಎಷ್ಟು ಜನ ಪಡೆದರು ಎಂಬ ವಿವರವಾಗಲಿ ಇನ್ನೂ ಕೂಡ ನಿರ್ಧರಿಸಲ್ಪಟ್ಟಿರುವುದಿಲ್ಲ. ಈ ಕುರಿತಾಗಿ ನಿರ್ಧಾರಕ್ಕೆ ಬರುವುದು ಸುಲಭಸಾಧ್ಯವೂ ಅಲ್ಲ. ವೈದಿಕ ಋಷಿಗಳು ವೇದವನ್ನು ತಮ್ಮ ಸ್ಮೃತಿಪಟಲದಲ್ಲಿ ಜೋಪಾನವಾಗಿಟ್ಟುಕೊಂಡು ವಿಶ್ವಕಲ್ಯಾಣಾರ್ಥವಾಗಿ ಅವನ್ನು ತಮ್ಮ ಶಿಷ್ಯರಿಗೆ ಬಾಯ್ದೆರೆಯಾಗಿ ಹೇಳಿಕೊಟ್ಟರು. ಒಬ್ಬರಿಂದ ಇನ್ನೊಬ್ಬರಿಗೆ ಈ ರೀತಿ ಹೇಳಿಕೊಟ್ಟ ವಿಚಾರವಾದ್ದರಿಂದ ವೇದಕ್ಕೆ 'ಆಮ್ನಾಯ' ಎಂಬ ಹೆಸರೂ ಇದೆ. ವೇದವು ನಿಷ್ಕೃಷ್ಟವಾದ ಜ್ಞಾನವನ್ನು ನೀಡುವುದಾದ್ದರಿಂದ ಇದನ್ನು 'ನಿಗಮ' ಎಂದೂ ಕರೆ ಯುತ್ತಾರೆ. ಶ್ರವಣಾರ್ಥಕವಾದ 'ಶ್ರು' ಧಾತುವಿನಿಂದ ಶ್ರುತಿ ಶಬ್ದವೂ, ಅಭ್ಯಾಸಾರ್ಥಕ ವಾದ 'ಮ್ನಾ' ಧಾತುವಿನಿಂದ ಆಮ್ನಾ ಶಬ್ದವೂ ಉತ್ಪತ್ತಿಯಾಗಿದೆ ಎಂದು ಶಬ್ದೋ ತ್ಪತ್ತಿಶಾಸ್ತ್ರದಿಂದ ತಿಳಿದುಬರುತ್ತದೆ. ಹಾಗಾಗಿ ಶ್ರುತಿಗಳೆಂದರೆ ಕೇಳಿ ತಿಳಿದುಕೊಂಡ ದ್ದೆಂದೂ ಆಮ್ನಾಯ ಎಂದರೆ ಅಭ್ಯಾಸದಿಂದ ಅರಿತುಕೊಂಡದ್ದೆಂದೂ ಅಭ್ಯಾಸಮಾಡಿ ಅಭ್ಯುದಯಹೊಂದಲು ಯೋಗ್ಯವಾದದ್ದೆಂದೂ ತಾತ್ಪರ್ಯವಾಗುತ್ತದೆ.

ಒಂದೇ ಬಾರಿ ಏಕಕಾಲದಲ್ಲಿ ವೈದಿಕ ಋಷಿಗಳು ವೇದೋಕ್ತಸತ್ಯದ ಅನುಭೂತಿ ಯನ್ನು ಪಡೆದವರೆಂದು ಹೇಳಲು ಸಾಧ್ಯವಿಲ್ಲ. ಹಲವು ಸಂವತ್ಸರಗಳ ಕಠಿಣ ತಪಸ್ಸು,

ಆಧ್ಯಾತ್ಮಪರವಾದ ಚಿಂತನೆ–ಧ್ಯಾನಗಳ ಪರಿಣಾಮವಾಗಿ ದಿವ್ಯಸತ್ಯದ, ದಿವ್ಯಜ್ಞಾನದ ಸಾಕ್ಷಾತ್ಕಾರ ಅವರಿಗೆ ಆಯಿತು. ಕೊನೆಗೆ ಆ ವಿಚಾರಗಳೆಲ್ಲಾ ಕ್ರೋಢೀಕರಿಸಲ್ಪಡು ವಂತಾಯಿತು. ಅವುಗಳಿಗೆ ವೇದ ಎಂಬ ಹೆಸರು ಬರುವಂತಾಯಿತು ವೇದಗ್ರಂಥವೆಂದು ಇಂದು ಪ್ರಸಿದ್ಧವಾಗಿರುವ ಗ್ರಂಥಸಮೂಹವು ಬಹಳ ವಿಶಾಲವಾದುದಾಗಿರುವುದು ಮಾತ್ರವಲ್ಲದ ಜಗತ್ತಿನ ಇತಿಹಾಸದಲ್ಲಿ ಅತ್ಯಂತ ಪ್ರಾಚೀನವಾದ ಗ್ರಂಥವಾಙ್ಮಯ ವಾಗಿದ್ದು ಬ್ರಹ್ಮ, ಜೀವ, ಜೀವನ, ಹುಟ್ಟು, ಸಾವು, ಸಮಾಜ ಇತ್ಯಾದಿ ಸಕಲ ವಿಷಯ ಗಳ ಮೇಲೆ ವಿಸ್ತಾರವಾದ ಬೆಳಕನ್ನು ಬೀರುವ ವಿಚಾರದ ಮಹಾ ಆಗರವೇ ವೇದ ವಾಗಿರುತ್ತದೆ.

ವೇದದ ಭಾಷೆಯು ಸಂಸ್ಕೃತವಾಗಿರುತ್ತದೆ. ವೇದಗಳಲ್ಲಿ ಮಂತ್ರ, ಸ್ತೋತ್ರ ಮತ್ತು ಗದ್ಯರೂಪಗಳಲ್ಲಿ ವಿಷಯಗಳ ನಿರೂಪಣೆ–ವಿಚಾರಗಳ ಮಂಡನೆಗಳಿವೆ. ವೇದದ ಈ ವಿಷಯೋಕ್ತ ಮಂತ್ರಸಮೂಹಗಳನ್ನು ರೂಪುಗೆಡದಂತೆ ರಕ್ಷಿಸುವುದು ವೈದಿಕ ಋಷಿಗಳ ಹಾಗೂ ಅನುಯಾಯಿಗಳ ಆದ್ಯಕರ್ತವ್ಯವಾಯಿತು. ಆ ಕಾಲದಲ್ಲಿ ಗ್ರಂಥ ಮುದ್ರಣ ಬಳಕೆಯಲ್ಲಿ ಇದ್ದಿಲ್ಲವಾದ್ದರಿಂದ ಬಾಯ್ದೆರೆಯಾಗಿಯೇ ಒಬ್ಬರಿಂದ ಒಬ್ಬರಿಗೆ ಹೇಳಿ ಕಲಿಸಿ ಸ್ಮರಣಶಕ್ತಿಯ ಮೂಲಕವೇ ವೇದಗಳನ್ನು ರಕ್ಷಿಸಬೇಕಾಗಿ ಬಂತು. ಆದುದರಿಂದ ಮಂತ್ರಸ್ಮರಣೆ ಸುಲಭವಾಗಲು ಅವುಗಳ ಕಲಿಯುವಿಕೆಯ ಕುರಿತಾಗಿ ಕೆಲವು ರೀತಿಯ ಶಾಸ್ತ್ರೀಯ ಕ್ರಮಗಳು ಕಂಡುಹಿಡಿಯಲ್ಪಟ್ಟವು. ಈ ಕ್ರಮಗಳ ಹಿನ್ನೆಲೆಯಲ್ಲಿ ಉಪಯುಕ್ತತೆ ಮತ್ತು ಆಧ್ಯಾತ್ಮಿಕವಾದ ಮೌಲ್ಯಗಳು ಇದ್ದು, ವೇದಮಂತ್ರ ಉಚ್ಚಾರಣೆ ಯನ್ನು ಶಾಸ್ತ್ರೀಯವಾಗಿ ಮಾಡಬೇಕೆಂಬ ನಿಯಮವಿದೆ.

ವೇದಪಾಠದ ಕುರಿತಾಗಿ ವಿವಿಧ ಕ್ರಮನಿಯಮಾವಳಿಗಳನ್ನು ಒಳಗೊಂಡ ಪಾಠ ಕ್ರಮಗಳು ಯಾವುವೆಂದರೆ :

(೧) ಸಂಹಿತಾಪಾಠ, (೨) ಪದಪಾಠ, (೩) ಕ್ರಮಪಾಠ, (೪) ಜಟಾಪಾಠ, (೫) ಘನಪಾಠ.

ಈ ರೀತಿಯ ವೈವಿಧ್ಯಪೂರ್ಣವಾದ ಸ್ವರಪಾಠದ ಹಿನ್ನೆಲೆಯಲ್ಲಿ ವಿಶೇಷವಾದ ಸ್ವರಶಾಸ್ತ್ರವಿದ್ದು, ಸ್ವರತತ್ತ್ವವು ನಿಜವಾದ ಮಹಿಮೆಯಿಂದ ಕೂಡಿದುದಾಗಿದೆ. ಶಬ್ದದಲ್ಲಿ ಅಪಾರವಾದ ಶಕ್ತಿ ಇರುವುದರಿಂದ ಅದರ ಶಾಸ್ತ್ರಬದ್ಧವಾದ ಉಚ್ಚಾರಣೆ ಯಿಂದ ವ್ಯಕ್ತಿಯು ದೈಹಿಕ, ಮಾನಸಿಕ ಹಾಗೂ ಆಧ್ಯಾತ್ಮಿಕವಾದ ಉನ್ನತಿಯು ಕೂಡಿ ಬರುತ್ತದೆ ಎನ್ನುವುದನ್ನು ವೈದಿಕ ಋಷಿಗಳು ತಮ್ಮ ಅನುಭವದ ಮೂಲಕ ಕಂಡು ಕೊಂಡರು. ಅನುಸಾರವಾಗಿ, ವೇದಮಂತ್ರಗಳನ್ನು ಸ್ವರಬದ್ಧವಾಗಿ ಹೇಳುವುದು ಅಗತ್ಯ ಎಂದಾಯಿತು.

ಹೀಗೆ ವೇದಗಳ ವಿಷಯಸಂಗ್ರಹಗಳು ಬಾಯ್ದೆರೆಯಾಗಿ ಪ್ರಚಾರವಾಗುತ್ತಾ ಬಂದಂತೆ ಅವುಗಳೆಲ್ಲವನ್ನೂ ಸರಿಯಾಗಿ ಸಂಗ್ರಹಿಸಿ ಅವುಗಳಿಗೆ ಗ್ರಂಥರೂಪವನ್ನು ನೀಡುವುದು ಅವಶ್ಯವಾಯಿತು. ಅದೇ ಮೇರೆಗೆ ಭಗವಾನ್ ಶ್ರೀವೇದವ್ಯಾಸ ಮಹರ್ಷಿ ಗಳು ವೇದಗಳನ್ನು ಸಂಪಾದಿಸಿ ಅನುಕೂಲಕ್ಕಾಗಿ ನಾಲ್ಕು ಭಾಗಗಳಾಗಿ ವಿಭಜಿಸಿದರು. ವೇದಗಳನ್ನು ಒಟ್ಟಾಗಿ ಸಂಗ್ರಹಿಸಿ ಅವುಗಳನ್ನು ಸರಿಯಾಗಿ ವಿಭಜಿಸುವ ಮಹಾ ಕೆಲಸ

ವನ್ನು ಮಾಡಿ ಮಾನವಕುಲಕ್ಕೇ ಜ್ಞಾನಜ್ಯೋತಿಯ ಪ್ರಭೆ ಸದಾ ದೊರೆಯು ವಂತೆ ಮಾಡಿದ ಮಹರ್ಷಿ ಶ್ರೀವೇದವ್ಯಾಸರು ಪ್ರಾತಃಸ್ಮರಣೀಯ ಮಹಾಪುರುಷ ರಾಗಿರುತ್ತಾರೆ.

ಭಾರತದ ಇತಿಹಾಸತಜ್ಞರು ಶಾಸ್ತ್ರಗ್ರಂಥಗಳ ಕುರಿತಾದ ಸಂಶೋಧಕರು, ವಿದ್ವಾಂಸರು ವೇದಗಳನ್ನು ಅಪೌರುಷೇಯ ಎಂದು ಒಪ್ಪಿಕೊಳ್ಳದೆ ಅವುಗಳು ಜಗತ್ತಿನ ಅತ್ಯಂತ ಪ್ರಾಚೀನ ಗ್ರಂಥಸಮೂಹವಾಗಿದ್ದು ಅಪಾರಜ್ಞಾನಭಂಡಾರವಾಗಿದೆ ಎಂದು ನಿರ್ಧರಿಸಿರುತ್ತಾರೆ. ಅದಕ್ಕೆ ಅನುಸಾರವಾಗಿ ಅವರು, ವೇದಗಳು ಸುಮಾರು ಕ್ರಿ.ಪೂ. ೧೦,೦೦೦ ವರ್ಷಗಳ ಹೊತ್ತಿಗೆ ರೂಪುಗೊಳ್ಳಲಾರಂಭವಾಗಿ ಹಲವು ಶತಮಾನಗಳ ತನಕ ಬೆಳೆಯುತ್ತಾಬಂದುವು ಎಂದು ಅಭಿಪ್ರಾಯಪಟ್ಟಿರುತ್ತಾರೆ. ಆರ್ಯಜನಾಂಗ ದವರು ವೇದಗಳನ್ನು ರಚಿಸಿದವರು ಎಂದು ನಿಶ್ಚಯಿಸಿರುವ ವಿದ್ವಾಂಸರೂ ಹಾಗೂ ಸಂಶೋಧಕರು ವೇದಸಾಹಿತ್ಯವು ವಿಶ್ವದ ಏಕಮೇವಾದ್ವಿತೀಯವಾದ ಮತ್ತು ಅತಿ ಪ್ರಾಚೀನವಾದ ಆಧ್ಯಾತ್ಮಿಕವಾದ ಧಾರ್ಮಿಕವಾದ ಸಾಹಿತ್ಯಸಂಗ್ರಹವಾಗಿದ್ದು ಆರ್ಯ ಜನಾಂಗದ ಸಂಸ್ಕೃತಿಯ ಮಹೋನ್ನತಮಟ್ಟದ ಕುರಿತಾದ ವಿವರಗಳನ್ನು ಒಳಗೊಂಡು ವಿಶೇಷಮೌಲ್ಯಗಳಿಂದ ಕೂಡಿದ ಸಾಹಿತ್ಯನಿಧಿ ಆಗಿದೆ ಎಂದು ಹೇಳಿರುತ್ತಾರೆ.

ವೇದಗಳ ಸಂಗ್ರಹಣೆಯ ಅನಂತರ ಜನಜೀವನದ ವಿವಿಧ ಭಾಗಗಳ ಯಶಸ್ವೀ ಕಾರ್ಯನಿರ್ವಹಣೆಯ ಅಗತ್ಯವನ್ನು ಅನುಸರಿಸಿ ಮತ್ತೆ ಕೆಲವು ಶಾಸ್ತ್ರವಿಚಾರಗಳನ್ನು ಒಳಗೊಂಡ ಗ್ರಂಥಸಮೂಹಗಳು ಹುಟ್ಟಿಕೊಂಡವು. ಅವುಗಳನ್ನು ಉಪವೇದಗಳು ಮತ್ತು ವೇದಾಂಗಗಳು ಎಂದು ಹೇಳುತ್ತಾರೆ. ಅದರಂತೆ ಕೆಲವು ಲೌಕಿಕ ಶಾಸ್ತ್ರಗ್ರಂಥ ಗಳೂ ಹುಟ್ಟಿಕೊಂಡವು. ಇವುಗಳೆಲ್ಲವನ್ನೂ ಸೇರಿಸಿ ಹಿಂದೂಗಳ ಧರ್ಮಗ್ರಂಥಗಳು ಎಂದು ಸ್ಥೂಲವಾಗಿ ಹೇಳುತ್ತಾ, ಈ ಗ್ರಂಥಸಮೂಹವನ್ನು ಪಾರಲೌಕಿಕ ಅಥವಾ ಲೌಕಿಕ ಶಾಸ್ತ್ರಗ್ರಂಥಗಳು ಎಂದು ಎರಡು ಭಾಗಗಳಾಗಿ ಮಾಡಿರುತ್ತಾರೆ.

**ಆಧ್ಯಾತ್ಮಿಕ ಅರ್ಥಾತ್ ಪಾರಲೌಕಿಕ ಶಾಸ್ತ್ರಗ್ರಂಥಗಳು**

(೧) ಶ್ರುತಿ, (೨) ಸ್ಮೃತಿ, (೩) ಪುರಾಣ, (೪) ಇತಿಹಾಸ, (೫) ಆಗಮ, (೬) ದರ್ಶನ.

**ಲೌಕಿಕ ಅರ್ಥಾತ್ ಐಹಿಕ ಶಾಸ್ತ್ರಗ್ರಂಥಗಳು**

(೧) ಸುಭಾಷಿತ, (೨) ಕಾವ್ಯ, (೩) ನಾಟಕ, (೪) ಅಲಂಕಾರ.

ಶ್ರುತಿ : ವೇದಗ್ರಂಥಸಮೂಹಕ್ಕೆ ಶ್ರುತಿ, ಆಮ್ನಾಯ ಎಂಬ ಹೆಸರುಗಳಿವೆ ಎಂದು ಈಗಾಗಲೇ ಹೇಳಿಯಾಗಿದೆ. ವೇದಗಳಲ್ಲಿ ಮುಖ್ಯವಾಗಿ ನಾಲ್ಕು ವಿಭಾಗಗಳಿವೆ. ಅವು ಯಾವುವೆಂದರೆ :

(೧) ಋಗ್ವೇದ, (೨) ಯಜುರ್ವೇದ, (೩) ಸಾಮವೇದ, (೪) ಅಥರ್ವವೇದ.

ಪ್ರತಿಯೊಂದು ವೇದವೂ ಕೂಡ ನಾಲ್ಕು ಒಳವಿಭಾಗಗಳಿಂದ ಕೂಡಿರುತ್ತದೆ. ಅವು ಯಾವುವೆಂದರೆ :

(೧) ಮಂತ್ರಸಂಹಿತೆ ಅಥವಾ ಸ್ತುತಿಗಳು, (೨) ಬ್ರಾಹ್ಮಣ, (೩) ಆರಣ್ಯಕ, (೪) ಉಪನಿಷತ್ತುಗಳು.

ಈ ವಿಭಾಗಗಳು ಅನುಕ್ರಮವಾಗಿ ಮನುಷ್ಯನ ಜೀವನದ ನಾಲ್ಕು ಅವಸ್ಥಾ ಹಂತಗಳಾದ ಬಾಲ್ಯ, ಯೌವನ, ಪ್ರೌಢ, ವೃದ್ಧಾಪ್ಯ ಅಥವಾ ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸ ಹಂತಗಳಿಗೆ ಉಪಯೋಗವಾಗುವಂತೆ ವಿಭಾಗಿಸಲ್ಪಟ್ಟಿವೆ ಎಂದು ಹೇಳುತ್ತಾರೆ. ವೇದದಲ್ಲಿ ಪ್ರತಿಪಾದಿತವಾಗಿರುವ ವಿಷಯ ಸಂಗ್ರಹವನ್ನು ಒಟ್ಟಾಗಿ ಪರಿಗಣಿಸಿ ಮೂರು ವಿಭಾಗಗಳಾಗಿ ಮಾಡಿರುತ್ತಾರೆ. ಅವು ಯಾವುವೆಂದರೆ :

(೧) ಕರ್ಮಕಾಂಡ, (೨) ಉಪಾಸನಾಕಾಂಡ, (೩) ಜ್ಞಾನಕಾಂಡ.

**ಕರ್ಮಕಾಂಡ :** ವಿವಿಧ ರೀತಿಯ ಯಾಗಗಳು, ಸಂಸ್ಕಾರಪದ್ಧತಿಗಳು ಇವುಗಳನ್ನು ಆಚರಿಸುವ ಕ್ರಮನಿಯಮಗಳ ವಿವರಗಳನ್ನು ಹೊಂದಿರುವ ಭಾಗವೇ ಕರ್ಮಕಾಂಡ ವಾಗಿರುತ್ತದೆ. ವೇದದ ಮಂತ್ರಭಾಗ ಮತ್ತು ಬ್ರಾಹ್ಮಣಭಾಗಗಳು ಕರ್ಮಕಾಂಡದ ಭಾಗಕ್ಕೆ ಸೇರಿರುತ್ತವೆ.

**ಮಂತ್ರಸಂಹಿತೆ :** 'ಮಂತ್ರ ಎಂದರೆ ಮನನಾತ್ ತ್ರಾಯತೇ ಇತಿ ಮಂತ್ರಃ' —ಮನನಮಾಡುವುದರಿಂದ ಪಾರುಮಾಡುವ ಶಬ್ದಪುಂಜವು ಮಂತ್ರವಾಗಿದೆ ಎಂದು ತಾತ್ಪರ್ಯ.

ವೇದದಲ್ಲಿ ಈ ರೀತಿಯ ಮಂತ್ರಗಳು ಬಹಳವಿವೆ. ಅವುಗಳಲ್ಲಿ ಹೆಚ್ಚಿನವು ವೈದಿಕ ದೇವತೆಗಳಾದ ಅಗ್ನಿ, ವರುಣ, ಇಂದ್ರಾದಿಗಳನ್ನು ಕೊಂಡಾಡಿ ಹಾಡಿರುವ ಸ್ತುತಿಗಳಾಗಿವೆ. ಈ ಸ್ತುತಿಗಳನ್ನು ಯಜ್ಞಯಾಗಾದಿಗಳ ಕಾಲದಲ್ಲಿ ಆರ್ಯರು ಉಪಯೋಗಿಸುತ್ತಿದ್ದರು. ಶಬ್ದಶಕ್ತಿ, ಸ್ವರಮಾಧುರ್ಯ, ವಿಚಾರಪ್ರಗಲ್ಭತೆ, ಭಾವನೆಯ ಉದಾತ್ತತೆ ಹಾಗೂ ಗಾಂಭೀರ್ಯ, ಸಾಹಿತ್ಯಸೌಂದರ್ಯ ಮತ್ತು ಸಂಸ್ಕೃತಿಯ ತೇಜಸ್ಸು ಈ ಮಂತ್ರಗಳಲ್ಲಿ ಕಂಡುಬರುವುದು ವೈಶಿಷ್ಟ್ಯವಾಗಿರುತ್ತದೆ.

**ಬ್ರಾಹ್ಮಣಗಳು :** ಬ್ರಾಹ್ಮಣಗಳಲ್ಲಿ ವೇದಕಾಲದಲ್ಲಿ ಆರ್ಯರು ನಡೆಸುತ್ತಿದ್ದ ಯಾಗಯಜ್ಞಗಳ ಕುರಿತಾದ ವರ್ಣನೆ, ಮಹಿಮೆ, ಗುರಿ, ಆವಶ್ಯಕತೆ ಹಾಗೂ ಗೂಢಾರ್ಥಗಳ ವಿವರಣೆಗಳು ಇದ್ದು ವಿವರಗಳೆಲ್ಲವೂ ಗದ್ಯರೂಪವಾಗಿ ರೂಪುಗೊಂಡಿವೆ. ಇವುಗಳನ್ನೇ ಬ್ರಾಹ್ಮಣ ಎಂದು ಹೇಳುತ್ತಾರೆ. ಮಂತ್ರಗಳನ್ನು ಉಪಯೋಗಿಸಿ ಐಹಿಕವೂ ಆಮುಷ್ಮಿಕವೂ ಆದ ಶ್ರೇಯಸ್ಸಿಗೆ ಯಜ್ಞಾದಿಕರ್ಮಗಳು, ಲೋಕಸೃಷ್ಟಿತತ್ತ್ವ ಇವುಗಳನ್ನು ಆಸ್ಪದವಾಗಿಸಿ ಅಧ್ಯಾತ್ಮವಿಚಾರವನ್ನು ಮಾಡಿ ಮೋಕ್ಷರೂಪವಾದ ಪರಮ ಪುರುಷಾರ್ಥಕ್ಕಾಗಿ ಬ್ರಹ್ಮದ ಕುರಿತಾಗಿ ವಿಚಾರಗಳನ್ನು ವ್ಯಕ್ತಪಡಿಸುವ ಭಾಗವೇ ಬ್ರಾಹ್ಮಣಗಳಾಗಿವೆ. ವೇದದ ಕುರಿತಾದ ವ್ಯಾಖ್ಯಾನಗಳೇ ಬ್ರಾಹ್ಮಣಗಳು ಎಂದೂ ಹೇಳುವುದಿದೆ.

ಪ್ರತಿ ವೇದಕ್ಕೂ ಬ್ರಾಹ್ಮಣ ಭಾಗಗಳು ಇದ್ದು ಋಗ್ವೇದದಲ್ಲಿ ಐತರೇಯ ಮತ್ತು ಶಾಂಖಾಯನ (ಕೌಷೀತಕಿ) ಎಂಬ ಎರಡು ಬ್ರಾಹ್ಮಣ ಭಾಗಗಳಿವೆ. ಯಜುರ್ವೇದದ

ಶುಕ್ಲಯಜುರ್ವೇದದಲ್ಲಿ ಶತಪಥಬ್ರಾಹ್ಮಣವೂ, ಕೃಷ್ಣಯಜುರ್ವೇದದಲ್ಲಿ ತೈತ್ತಿರೀಯ ಮತ್ತು ಮೈತ್ರಾಯಣೀಬ್ರಾಹ್ಮಣವೂ ಸೇರಿದೆ. ಸಾಮವೇದದಲ್ಲಿ ತಾಂಡ್ಯ ಅಥವಾ ಪಂಚವಿಂಶ, ಷಡ್ವಿಂಶ, ಛಾಂದೋಗ್ಯ, ಅದ್ಭುತ, ಆರ್ಷೇಯ ಮತ್ತು ಉಪನಿಷತ್ ಬ್ರಾಹ್ಮಣಗಳು ಸೇರಿರುತ್ತವೆ. ಅಥರ್ವವೇದದಲ್ಲಿ ಸೇರಿರುವ ಬ್ರಾಹ್ಮಣವು ಗೋಪಥ ಬ್ರಾಹ್ಮಣ ಎಂದು ಕರೆಯಲ್ಪಡುತ್ತದೆ.

**ಉಪಾಸನಾಕಾಂಡ :** ವಿವಿಧ ರೀತಿಯ ಧ್ಯಾನಾದಿಕ್ರಮಗಳನ್ನು ಒಳಗೊಂಡ ಉಪಾಸನಾವಿಧಿಗಳ ವಿವರಣೆಯು ಅಡಕವಾಗಿರುವ ವೇದಭಾಗಕ್ಕೆ ಉಪಾಸನಾಕಾಂಡ ಎಂದು ಹೇಳುತ್ತಾರೆ. ಈ ಉಪಾಸನಾಕಾಂಡದ ಇನ್ನೊಂದು ಹೆಸರು ಆರಣ್ಯಕ ಎಂದಾಗಿದೆ. ಜನಜಂಗುಳಿಯಿಂದ ದೂರವಾಗಿ ಪ್ರಾಪಂಚಿಕತೆಯ ಕಾರ್ಯಕಲಾಪಗಳಿಂದ ಹೊರಗಾಗಿ ಪ್ರಶಾಂತವಾದ ಅರಣ್ಯಗಳಲ್ಲಿ ವಾನಪ್ರಸ್ಥ ಆಶ್ರಮವಾಸಿಯಾಗಿ ಅಧ್ಯಾತ್ಮವಿದ್ಯೆಯನ್ನು ಪರಿಶೀಲಿಸುವುದಕ್ಕೆ ಸಹಾಯಮಾಡುವ ವೇದಭಾಗವಾದ್ದರಿಂದ ಇದಕ್ಕೆ ಆರಣ್ಯಕ ಎಂದು ಹೆಸರು ಬಂದಿರುತ್ತದೆ. ಕರ್ಮಕಾಂಡದಲ್ಲಿ ವಿವರಿಸಲ್ಪಟ್ಟ ವಿಚಾರಗಳು— ಕರ್ಮವಿಧಿಗಳಿಗೆ ಅಧ್ಯಾತ್ಮಪರವಾದ ಅರ್ಥವಿವರಣೆಗಳು, ಆತ್ಮೋನ್ನತಿಗೆ ಧ್ಯಾನ-ಉಪಾಸನೆಗಳ ಕ್ರಮಗಳು ವಿಸ್ತಾರವಾಗಿ ವಿವರಿಸಲ್ಪಟ್ಟಿರುತ್ತದೆ. ಗೃಹಸ್ಥಾಶ್ರಮಿಯು ಸಂನ್ಯಾಸಾಶ್ರಮವನ್ನು ಪರಿಗ್ರಹಿಸಲು ಸರ್ವಾಂಗೀಣವಾದ ತಯಾರಿಯನ್ನು ನೀಡುವ ವಾನಪ್ರಸ್ಥಾಶ್ರಮದ ಕುರಿತಾದ ವಿಶಿಷ್ಟ ವಿವರ ವಿಧಿಗಳು ಆರಣ್ಯಕಗಳಲ್ಲಿ ಬರುತ್ತವೆ.

**ಜ್ಞಾನಕಾಂಡ :** ಬಾಹ್ಯಾಚರಣೆ, ಬಾಹ್ಯಕರ್ಮ, ಯಜ್ಞಯಾಗಾದಿಗಳ ಹಂತವನ್ನು ದಾಟಿ ಮಹೋನ್ನತವಾದ ಹಾಗೂ ಪರಿಪೂರ್ಣವಾದ, ಸತ್ಯವೂ ಸುಂದರವೂ ಶಿವಮಯವೂ ಆದ ಪದವಿಯೊಂದಿದೆ ಎಂದು ಹೇಳಿ ಅದನ್ನು ಪಡೆಯುವ ಸಾಧನಕ್ರಮದ ವಿವರಣೆಗಳನ್ನು ಒಳಗೊಂಡಿರುವ ವೇದಭಾಗವೇ ಜ್ಞಾನಕಾಂಡವಾಗಿರುತ್ತದೆ. ಈ ಭಾಗಕ್ಕೆ ಉಪನಿಷತ್ ಭಾಗ ಎಂದೂ ಹೇಳುತ್ತಾರೆ. ವೇದದ ಬ್ರಾಹ್ಮಣ ಮತ್ತು ಆರಣ್ಯಕ ಭಾಗಗಳ ಕೊನೆಯಲ್ಲಿ ಅಡಕವಾಗಿರುವುದರಿಂದ ಇವುಗಳನ್ನು ವೇದದ ಮುಕ್ತಾಯ ಕಾಂಡ ಅಥವಾ ಮುಕ್ತಾಯ ಭಾಗ ಎಂದು ಹೇಳುತ್ತಾರೆ. ವೇದದ ಮುಕ್ತಾಯ ಭಾಗವಾದ್ದರಿಂದಲೇ ಇದಕ್ಕೆ ವೇದಾಂತ ಎಂದೂ ಹೇಳುತ್ತಾರೆ. ಆಶ್ರಮಧರ್ಮರೀತ್ಯ ಗೃಹಸ್ಥ, ವಾನಪ್ರಸ್ಥ ಆಶ್ರಮಗಳನ್ನು ದಾಟಿ ಸಂನ್ಯಾಸಾಶ್ರಮವನ್ನು ಸೇರಿ ಆತ್ಮಸಾಕ್ಷಾತ್ಕಾರವನ್ನು ಸಾಧಿಸಲು ನೆರವಾಗುವ ವೇದಭಾಗವಿದಾಗಿದ್ದು ಎಲ್ಲಾ ವಿಧಗಳಿಂದಲೂ ಇದಕ್ಕೆ ಜ್ಞಾನಕಾಂಡ, ವೇದಾಂತ ಎಂಬ ಹೆಸರು ಯಥೋಚಿತವಾಗಿದೆ ಎಂದು ಹೇಳಬಹುದು.

**ಋಗ್ವೇದ :** ಋಚಸ್ತುತೌ ಎಂಬ ಧಾತುವಿನಿಂದ ಸಿದ್ಧಿಸಿದ ರೂಪವಾಗಿದ್ದು, ಋಗ್ವೇದವೆಂದರೆ ಸ್ತೋತ್ರಮಾಡುವ, ಸ್ತುತಿಸುವ ಸಂಹಿತೆ ಎಂದು ಅರ್ಥವಾಗುತ್ತದೆ. ಋಗ್ವೇದವು ಜಗತ್ತಿನ ಸಾಹಿತ್ಯಸಮೂಹದಲ್ಲಿ ಅತ್ಯಂತ ಪ್ರಾಚೀನವಾದ ಗ್ರಂಥವಾಗಿದ್ದು ವಿಷಯಸಂಪತ್ತು, ವಿಚಾರಪ್ರೌಢಿಮೆ ಇತ್ಯಾದಿ ಎಲ್ಲಾ ದೃಷ್ಟಿಗಳಿಂದಲೂ ಹಿರಿದಾಗಿರುತ್ತದೆ. ಅಗ್ನಿ, ವಾಯು, ಸೂರ್ಯ, ಇಂದ್ರ, ವಿಷ್ಣು, ರುದ್ರ ಮೊದಲಾದ ದೇವತೆಗಳೊಡನೆ ಅವರ ಪ್ರಕೃತಿ, ಪ್ರವೃತ್ತಿಗಳನ್ನು ಅನುಸರಿಸಿ ಗುಣವರ್ಣನೆಗಳನ್ನು ಮಾಡಿ

ಪ್ರಾರ್ಥನೆಗಳನ್ನು ನಿರ್ವಹಿಸುವ ಮಂತ್ರಗಳು, ಸ್ತೋತ್ರಗಳು ಋಗ್ವೇದದಲ್ಲಿ ಬಹು ಸಂಖ್ಯೆಯಲ್ಲಿ ಸೇರಿರುತ್ತವೆ. ಈ ಸ್ತೋತ್ರಗಳೆಲ್ಲ ಕೇವಲ ಸ್ತುತಿಪರವಾದುವುಗಳಲ್ಲವೆ ಅತ್ಯಂತ ವಿಶೇಷವಾದ ಅಧ್ಯಾತ್ಮವಾದ ಅಂತರಾರ್ಥಗಳಿಂದಲೂ ಕೂಡಿರುತ್ತವೆ. ಋಗ್ವೇದದಲ್ಲಿ ಜಗತ್ತಿನ ಸೃಷ್ಟಿ, ಜೀವನ, ಜನ್ಮ, ಮರಣ, ಭೂಲೋಕ, ಪಿತೃಲೋಕ, ದೈವಲೋಕ ಇತ್ಯಾದಿ ಗಹನವಾದ ವಿಚಾರಗಳು ಸಹ ಸೇರಿವೆ. ಒಟ್ಟಿನಲ್ಲಿ ಹೇಳುವು ದಾದರೆ ಋಗ್ವೇದದಲ್ಲಿ ಹೇಳದ ವಿಷಯಗಳೇ ಇಲ್ಲ ಎಂಬಷ್ಟರಮಟ್ಟಿಗೆ ಪರಿಪೂರ್ಣವೂ ಸತ್ವಪೂರ್ಣವೂ ಆಗಿರುವ ವಿದ್ಯಾಸಾಗರವೇ ಋಗ್ವೇದವಾಗಿರುತ್ತದೆ. ಮೇಲ್ನೋಟಕ್ಕೆ ಕಾಣುವ ಸ್ತುತಿಗಳು, ಮಂತ್ರಗಳು ನಿಜಕ್ಕೂ ಏನೊಂದೂ ವಿಶೇಷವಾದ ಅರ್ಥವನ್ನು ನೀಡುವಂತಿಲ್ಲವಾಗಿದ್ದು ಅವುಗಳನ್ನು ಯಥೋಚಿತವಾದ ಶ್ರದ್ಧೆ, ಭಕ್ತಿ, ಧ್ಯಾನಗಳಿಂದ ಕೂಡಿ ಅರ್ಥಮಾಡಹೊರಟಾಗ ಅಂತರಾರ್ಥದ ಅರಿವಾಗಿ ಅವುಗಳ ಮಹತ್ವವು ತಿಳಿಯುವುದು. ಶ್ರೀಸಾಯಣಾಚಾರ್ಯರು ನಾಲ್ಕು ವೇದಗಳಿಗೆ ಭಾಷ್ಯವನ್ನು ಬರೆದು ವೇದದ ಅಂತರಾರ್ಥದ ಬಗೆಗೆ ವಿಶೇಷ ಬೆಳಕನ್ನು ಬೀರಿರುತ್ತಾರೆ.

ಋಗ್ವೇದದಲ್ಲಿ ೧೦೨೮ ಸೂಕ್ತಗಳು ಇವೆ. ವೇದಮಂತ್ರಗಳ ಸಮುದಾಯಕ್ಕೆ ಸಂಕ್ಷೇಪವಾಗಿ ಸಂಹಿತೆ ಎಂದು ಕರೆಯುತ್ತಾರೆ. ಈ ಸಂಹಿತೆಯನ್ನು ಭಗವಾನ್ ಶ್ರೀ ವೇದವ್ಯಾಸಮಹರ್ಷಿಗಳು ಯಥೋಚಿತವಾಗಿ ವಿಭಾಗಮಾಡಿ ಅವುಗಳನ್ನು ಋಕ್, ಯಜುರ್, ಸಾಮ ಮತ್ತು ಅಥರ್ವ ಎಂದು ಕರೆದಿರುತ್ತಾರೆ. ಈ ವಿಭಾಗಗಳನ್ನು ಮಾಡುವಾಗ ಶ್ರೀವ್ಯಾಸರು ವೇದದ ವಿಷಯ ಮತ್ತು ಆವಶ್ಯಕತೆಗಳನ್ನು ಸ್ಥೂಲವಾಗಿ ಅನುಸರಿಸಿ ಮಾಡಿರುತ್ತಾರೆ. ಯಜ್ಞಯಾಗಾದಿಗಳನ್ನು ನಡೆಸಲು ಬೇಕಾಗುವ ನಾಲ್ಕು ಮುಖ್ಯ ವ್ಯಕ್ತಿಗಳ (ಋತ್ವಿಜರ) ಆವಶ್ಯಕತೆಗಳನ್ನು ಅನುಸರಿಸಿ ನಾಲ್ಕು ವೇದಗಳಾಗಿ ವೇದಮಂತ್ರಸಂಹಿತೆಯನ್ನು ವಿಭಾಗಿಸಿರುತ್ತಾರೆ. ಯಜ್ಞವೆಂಬ ದೇವತಾಪ್ರೀತ್ಯರ್ಥವಾದ ಪವಿತ್ರಕಾರ್ಯವನ್ನು ನೆರವೇರಿಸಲು ಆವಶ್ಯಕವಾಗಿ ಬೇಕಾಗಿರುವವರಲ್ಲಿ ಮೊದಲನೆಯ ಋತ್ವಿಜರೇ "ಹೋತೃ", ಎರಡನೆಯವರು "ಅಧ್ವರ್ಯು", ಮೂರನೆಯವರು "ಉದ್ಗಾತೃ", ನಾಲ್ಕನೆಯವರು "ಬ್ರಹ್ಮ" ಆಗಿರುತ್ತಾರೆ.

**ಋತ್ವಿಜ–ಹೋತೃ :** ಹೋತೃ ಎಂದರೆ ಕರೆಯುವವರು ಎಂದು ಅರ್ಥ. ಯಜ್ಞದಲ್ಲಿ ಹವನಮಾಡುವ ಮೊದಲು ಆಯಾ ದೇವತೆಗಳಿಗೆ ಸಂಬಂಧಿಸಿದ ಮಂತ್ರಗಳಿಂದ ಪ್ರಾರ್ಥನೆಯನ್ನು ಸಲ್ಲಿಸಿ ಹವಿಸ್ಸನ್ನು ದೇವತೆಗಳು ತೆಗೆದುಕೊಂಡು ಹೋಗುವಂತೆ ಪ್ರಾರ್ಥಿಸಬೇಕು. ಈ ಪ್ರಾರ್ಥನಾವಿಧಿಯನ್ನು ನೆರವೇರಿಸುವವನೇ ಹೋತೃ. ಇದಕ್ಕೆ ಸಂಬಂಧಿಸಿದ ಪ್ರಾರ್ಥನಾಮಂತ್ರಗಳು ಋಗ್ವೇದದಲ್ಲಿ ಅಡಕವಾಗಿರುತ್ತವೆ.

**ಅಧ್ವರ್ಯು :** ಅಧ್ವರ್ಯು ಎಂದರೆ ಯಜ್ಞಕಾಲದಲ್ಲಿ ಸೂಕ್ತವಾದ ಮಂತ್ರೋಚ್ಚಾರಣೆಮಾಡಿ ಸಂಬಂಧಿಸಿದ ದೇವತೆಗಳನ್ನು ಉದ್ದೇಶಿಸಿ ಸ್ವಾಹಾ ಎನ್ನುತ್ತಾ ಆಹುತಿಯನ್ನು ಅಗ್ನಿಕುಂಡದಲ್ಲಿ ಅರ್ಪಿಸುವವನಾಗಿರುತ್ತಾನೆ. ಇವನನ್ನು ಯಜ್ಞಪುರೋಹಿತ ಎಂದು ಕರೆಯುತ್ತಾರೆ. ಅಧ್ವರ್ಯುವಿನ ಕಾರ್ಯಕ್ಕೆ ಸಂಬಂಧಿಸಿದ ಯಜ್ಞಮಂತ್ರಗಳು ಯಜುರ್ವೇದದಲ್ಲಿ ಇವೆ.

ಉದ್ಗಾತೃ : ಉಚ್ಚಸ್ವರದಲ್ಲಿ ಹಾಡುವವನೇ ಉದ್ಗಾತೃ. ಯಜ್ಞಕಾಲದಲ್ಲಿ ಮಂತ್ರಗಳಿಗೆ ವಿಶಿಷ್ಟವಾದ ಸ್ವರಸಂಯೋಜನೆ ಮಾಡಿ ಮಂತ್ರೋಚ್ಚಾರಣೆ ಮಾಡುವುದು ಉದ್ಗಾತೃವಿನ ಕೆಲಸವಾಗಿದೆ. ಈ ಕಾರ್ಯಕ್ಕೆ ಸಂಬಂಧಿಸಿದ ಮಂತ್ರಗಳು ಸಾಮವೇದದಲ್ಲಿ ಅಡಕವಾಗಿವೆ.

ಬ್ರಹ್ಮಾ : ಬ್ರಹ್ಮನು ಯಜ್ಞದ ಅಧ್ಯಕ್ಷನಾಗಿರುತ್ತಾನೆ. ಯಜ್ಞಕಾರ್ಯವು ಯಶಸ್ವಿಯಾಗಿ ನೆರವೇರಿ ಯಾವ ಸ್ಖಾಲಿತ್ಯ, ಅಡ್ಡಿ ಆತಂಕಗಳೂ ಬರದಂತೆ ವಿಶ್ವತಶ್ಚಕ್ಷುವಾಗಿ ನೋಡಿಕೊಳ್ಳುವುದು ಬ್ರಹ್ಮನ ಕೆಲಸವಾಗಿದೆ. ಬ್ರಹ್ಮನಿಗೆ ಸಕಲ ವೇದಗಳ ಜ್ಞಾನ, ಯಜ್ಞಕರ್ಮಗಳ ಸರಿಯಾದ ಪರಿಜ್ಞಾನ, ತಾಂತ್ರಿಕ ವಿಧಿಗಳ ಕ್ರಮವಾದ ಪರಿಚಯ ಇರಬೇಕು. ಈ ವಿವರಗಳೆಲ್ಲ ನಾಕಷ್ಟು ಅಥರ್ವವೇದದಲ್ಲಿ ದೊರೆಯುತ್ತವೆ.

ನಾಲ್ಕು ವೇದಗಳಲ್ಲಿ ನಿಶ್ಚಯವಾಗಿಯೂ ಕೇವಲ ಯಜ್ಞದ ವಿಚಾರವೇ ಮೇಲೆ ಹೇಳಿದ ರೀತಿಯಾಗಿ ಇರುವುದೆಂದು ಹೇಳುವಂತಿಲ್ಲ. ಹಾಗೆ ಅಷ್ಟುಮಾತ್ರವೇ ಎಂದಾಗಿದ್ದರೆ ವೇದವು ಸರ್ವಜ್ಞಾನದ ಭಂಡಾರವಾಗಲು ಸಾಧ್ಯವಾಗುತ್ತಿರಲಿಲ್ಲ.

ಋಗ್ವೇದದ ವಿಷಯಾಂಶಗಳನ್ನು ಎರಡು ವಿಧವಾಗಿ ವಿಭಾಗ ಮಾಡಿರುತ್ತಾರೆ : (೧) ಮಂಡಲ, ಅನುವಾಕ ಮತ್ತು ಸೂಕ್ತ, (೨) ಅಷ್ಟಕ, ಅಧ್ಯಾಯ ಮತ್ತು ಸೂಕ್ತ. ಋಗ್ವೇದದಲ್ಲಿ ಹತ್ತು ಮಂಡಲಗಳಿವೆ. ಪ್ರತಿಮಂಡಲದ ಅಂತರವಿಭಾಗಕ್ಕೆ ಅನುವಾಕ ಎಂದು ಹೆಸರು. ಅನುವಾಕದ ವಿಭಾಗಕ್ಕೆ ಸೂಕ್ತ ಎಂದು ಹೇಳುವುದಾಗಿದೆ. ಅಷ್ಟಕಗಳೆಂದರೆ ಎಂಟರಿಂದ ಕೂಡಿದವುಗಳೆಂದು ತಾತ್ಪರ್ಯ. ಋಗ್ವೇದದಲ್ಲಿ ಎಂಟು ಅಷ್ಟಕಗಳಿವೆ. ಪ್ರತಿಯೊಂದು ಅಷ್ಟಕದಲ್ಲಿಯೂ ಎಂಟು ಅಧ್ಯಾಯಗಳಿವೆ. ಹೀಗೆ ಋಗ್ವೇದದಲ್ಲಿ ಒಟ್ಟು ೬೪ ಅಧ್ಯಾಯಗಳಿವೆ. ಈ ಅಧ್ಯಾಯಗಳಲ್ಲೆಲ್ಲಾ ಒಟ್ಟಾಗಿ ೧೦೨೮ ಸೂಕ್ತಗಳಿವೆ. ಋಗ್ವೇದದ ಕುರಿತಾದ ಹೆಚ್ಚಿನ ವಿವರಗಳು ಹೀಗಿವೆ :

(೧) ಋಗ್ವೇದದ ಉಪವೇದ : ಆಯುರ್ವೇದ.
(೨) ಋಗ್ವೇದದ ಬ್ರಾಹ್ಮಣ : ಐತರೇಯ, ಶಾಂಖಾಯನ (ಕೌಷೀತಕಿ).
(೩) ಋಗ್ವೇದದ ಆರಣ್ಯಕಗಳು : ಐತರೇಯ, ಕೌಷೀತಕಿ.
(೪) ಋಗ್ವೇದದ ಶ್ರೌತಸೂತ್ರಗಳು : ಆಶ್ವಲಾಯನ.
(೫) ಋಗ್ವೇದದ ಗೃಹ್ಯಸೂತ್ರಗಳು : ಶಾಂಖಾಯನ.
(೬) ಋಗ್ವೇದದಲ್ಲಿರುವ ಸೂಕ್ತಗಳ ಮುಖ್ಯ ದ್ರಷ್ಟಾರರು : ಮಧುಚ್ಛಂದ ಋಷಿ, ಮೇಧಾತಿಥಿ ಋಷಿ, ಶುನಶ್ಶೇಪ ಋಷಿ, ಕಣ್ವ ಋಷಿ, ಪರಾಶರ ಋಷಿ, ಕಶ್ಯಪ ಋಷಿ, ವಿಶ್ವಾಮಿತ್ರ ಋಷಿ, ವಾಮದೇವ ಋಷಿ, ಅತ್ರಿ ಋಷಿ, ಭರದ್ವಾಜ ಋಷಿ.
(೭) ಋಗ್ವೇದದ ಅರ್ಥವಿವರಣೆ ತಿಳಿಯಲು ಇರುವ ಪ್ರಸಿದ್ಧವಾದ ಸಹಾಯಕ ಗ್ರಂಥಗಳು :

೧. ಶ್ರೀಸಾಯಣಾಚಾರ್ಯರು ಬರೆದಿರುವ ಭಾಷ್ಯ.
೨. ಶ್ರೀಮಧ್ವಾಚಾರ್ಯರು ಬರೆದಿರುವ ಭಾಷ್ಯ.
೩. ನಿಘಂಟು ಮತ್ತು ದೇವರಾಜಯಜ್ವಾ ಇವರ ಟೀಕೆ.
೪. ಯಾಸ್ಕರ ನಿರುಕ್ತ ಮತ್ತು ದುರ್ಗಾಚಾರ್ಯರ ಟೀಕೆ.

**ಯಜುರ್ವೇದ :** ಯಜ್ಞಯಾಗಾದಿಗಳ ಕುರಿತಾದ ವಿವರವಾದ ಕ್ರಮವಿವರಣೆಗಳು ಯಜುರ್ವೇದದಲ್ಲಿ ಸೇರಿವೆ. ಈ ವೇದದಲ್ಲಿ ೪೦ ಅಧ್ಯಾಯಗಳಿವೆ. ಯಜುರ್ವೇದದಲ್ಲಿ ಕೃಷ್ಣಯಜುರ್ವೇದ ಮತ್ತು ಶುಕ್ಲಯಜುರ್ವೇದ ಎಂಬ ಎರಡು ವಿಧಗಳಿದ್ದು ಕೃಷ್ಣ ಯಜುರ್ವೇದಕ್ಕೆ ತೈತ್ತಿರೀಯ ಸಂಹಿತೆ ಎಂದೂ ಶುಕ್ಲಯಜುರ್ವೇದಕ್ಕೆ ವಾಜಸನೇಯ ಸಂಹಿತೆ ಎಂದೂ ಹೆಸರಿದೆ.

ಯಜುರ್ವೇದದ ಉಪವೇದ—ಧನುರ್ವೇದ.

ಕೃಷ್ಣಯಜುರ್ವೇದದ ಬ್ರಾಹ್ಮಣ—ತೈತ್ತಿರೀಯ, ಮೈತ್ರಾಯಣಿ.

ಕೃಷ್ಣಯಜುರ್ವೇದದ ಆರಣ್ಯಕ—ತೈತ್ತಿರೀಯ.

ಗೃಹ್ಯಸೂತ್ರ—ಆಪಸ್ತಂಭ, ಬೋಧಾಯನ, ಭಾರದ್ವಾಜ, ಮಾನವ.

ಶುಕ್ಲಯಜುರ್ವೇದದ ಬ್ರಾಹ್ಮಣ—ಶತಪಥ.

ಶುಕ್ಲಯಜುರ್ವೇದದ ಆರಣ್ಯಕ—ಮೂರ್ಧನ್ದಿನ.

ಶ್ರೌತಸೂತ್ರ—ಕಾತ್ಯಾಯನ, ಬೈಜವಾಪ, ಪಾರಸ್ಕರ.

ಗೃಹ್ಯಸೂತ್ರ—ಪಾರಸ್ಕರ, ಕಾಪೇಯ.

ಯಜುರ್ವೇದಕ್ಕೆ ಇರುವ ಭಾಷ್ಯ—ಶ್ರೀ ಸಾಯಣಾಚಾರ್ಯರ ಭಾಷ್ಯ, ಶ್ರೀ ಉವ್ವಟರ ಭಾಷ್ಯ.

ಯಜ್ ಧಾತುವಿನಿಂದ ಉತ್ಪತ್ತಿಯಾದುದು ಯಜುಸ್ ಎಂಬ ಶಬ್ದ. 'ದೇವಪೂಜಾ ಸಂಗತೀಕರಣಂ ದಾನಂ' ಎಂಬ ಅನೇಕ ಅರ್ಥವು ಯಜ್ ಧಾತುವಿಗೆ ಇದೆ. ಒಟ್ಟಿನಲ್ಲಿ ಯಜ್ಞದಲ್ಲಿ ಉಪಯೋಗವಾಗುವ ಮಂತ್ರಗಳು, ದೇವಪೂಜೆ, ಅವುಗಳಿಗೆ ಸರಿಯಾದ ಪ್ರಯೋಗಗಳು—ಇವುಗಳನ್ನು ನಿರ್ದೇಶಿಸುವ ಸಂಹಿತೆಯೇ ಯಜುರ್ವೇದ ಎಂದು ಹೇಳಬಹುದು. ಯಜ್ಞಕ್ಕೆ ಸಂಬಂಧಿಸಿದ ವೇದವಾದ್ದರಿಂದ ಇದಕ್ಕೆ ಯಜುರ್ವೇದ ಎಂದು ಹೆಸರುಬಂದಿರುತ್ತದೆ. ರಾಜಸೂಯ, ಅಶ್ವಮೇಧ, ಅತಿರುದ್ರ ಇತ್ಯಾದಿ ದೊಡ್ಡ ದೊಡ್ಡ ಯಾಗಾದಿಗಳ ವಿಸ್ತಾರವಾದ ವಿವರಣೆಯು ಯಜುರ್ವೇದದಲ್ಲಿ ಕಂಡುಬರುತ್ತದೆ. ಇದನ್ನು ಸ್ಥೂಲವಾಗಿ ಯಜ್ಞಯಾಗಾದಿಗಳ ಕೈಪಿಡಿ ಎಂದರೆ ತಪ್ಪಾಗಲಾರದು. ದೇವ ದೇವತೆಗಳನ್ನು ಉದ್ದೇಶಿಸಿದ ಪ್ರಾರ್ಥನಾಶ್ಲೋಕಗಳು ಋಗ್ವೇದದಲ್ಲಿ ಇರುವಂತೆ ಈ ವೇದದಲ್ಲೂ ಇವೆ.

**ಸಾಮವೇದ :** ಸಾಮ ಎಂದರೆ ಗಾನ ಎಂದು ಅರ್ಥ. ಮಂತ್ರಗಳನ್ನು ಸ್ವರ ಸಂಯೋಜನೆ ಮಾಡಿ ಹಾಡುವುದಕ್ಕೆ 'ಸಾಮ' ಎಂದು ಹೇಳುತ್ತಾರೆ. ಸಾಮವೇದವು ಗಾನರೂಪವಾಗಿ ಹಾಡುವ ಮಂತ್ರಗಳಿಂದ ಒಳಗೊಂಡಿರುವ ವೇದವಾಗಿರುತ್ತದೆ. ದೇವತೆಗಳನ್ನು ಉದ್ದೇಶಿಸಿ ಸ್ತುತಿಸುವ ಮಂತ್ರಗಳು ಇದರಲ್ಲಿ ಸೇರಿದ್ದು ಎಲ್ಲವನ್ನೂ ಸ್ವರಲಯಸಹಿತ ಛಂದೋಬದ್ಧವಾಗಿ ಹೇಳಬೇಕಾಗಿದೆ. ಈ ವೇದಮಂತ್ರಗಳನ್ನು ಯಜ್ಞದಲ್ಲಿ ಉದ್ಗಾತೃವು ಹಾಡುವುದಾಗಿರುತ್ತದೆ. ಈ ವೇದದಲ್ಲಿ ಋಗ್ವೇದದ ಸ್ತೋತ್ರಗಳೇ ತತ್ಪ್ರತಿ ಎಂಬಂತಿದ್ದು ಹೆಚ್ಚುಕಡಿಮೆ ೭೮ ಮಂತ್ರಗಳು ಮಾತ್ರ ಹೊಸ ದಾಗಿವೆ. ಸಂಗೀತವೇದವೆಂದು ಕರೆಯಲ್ಪಡುವ ಈ ವೇದದಲ್ಲಿ ನಾಲ್ಕು ತರಹದ ಗಾನಸ್ತೋತ್ರಗಳು ಸ್ಥೂಲವಾಗಿ ಕಾಣುತ್ತವೆ : (೧) ಗ್ರಾಮಗೇಯ, (೨) ಊಹ,

(೩) ವ್ಯೂಹ ಮತ್ತು (೪) ಅರಣ್ಯಗಾನ. ಸಾಮವೇದದಲ್ಲಿ ಭಾರತೀಯ ಸಂಗೀತ ಶಾಸ್ತ್ರದ ಸಪ್ತಸ್ವರಗಳೂ ಪ್ರಯೋಗಿಸಲ್ಪಟ್ಟಿವೆ ಎಂದು ಸಂಗೀತಜ್ಞರು ಅಭಿಪ್ರಾಯ ಪಟ್ಟಿರುತ್ತಾರೆ. ವೇದಕಾಲದಲ್ಲಿ ಸಂಗೀತವು ಉನ್ನತವಾದ ಮಟ್ಟವನ್ನು ತಲಪಿ ಬೆಳೆದಿತ್ತು ಎನ್ನುವುದಕ್ಕೆ ಈ ವೇದವು ನಿದರ್ಶನವಾಗಿದೆ. ಸಾಮವೇದದಲ್ಲಿ ೧೫ ಭಾಗ ಗಳಿದ್ದು ೩೨ ಅಧ್ಯಾಯಗಳಿವೆ.

ಸಾಮವೇದದ ಬ್ರಾಹ್ಮಣ—ತಲವಕಾರ, ಪಂಚವಿಂಶ ಅಥವಾ ತಾಂಡ್ಯ, ಷಡ್ವಿಂಶತಿ.

ಶ್ರೌತಸೂತ್ರ—ಲಾಟ್ಯಾಯನ, ದ್ರಾಹ್ಯಾಯಣ.

ಗೃಹ್ಯಸೂತ್ರ—ಗೋಭಿಲ, ಖಾದಿರ, ಗೌತಮ.

ಉಪವೇದ—ಗಾಂಧರ್ವವೇದ.

**ಅಥರ್ವವೇದ :** ವೇದವಿಭಾಗಗಳಲ್ಲಿ ಕೊನೆಯದೇ ಅಥರ್ವವೇದ. ಅಥರ್ವಣ ಆಂಗಿರಸ ಋಷಿಗಳಿಂದ ಕಂಡುಹಿಡಿಯಲ್ಪಟ್ಟು ಮಂತ್ರಗಳಿಂದ ಕೂಡಿದ ವೇದವಾದ್ದ ರಿಂದ ಇದಕ್ಕೆ 'ಅಥರ್ವ' ಎಂಬ ಹೆಸರುಬಂದಿದೆ ಎಂದು ಕೆಲವು ತಜ್ಞರು ಅಭಿಪ್ರಾಯ ಪಡುತ್ತಾರೆ. ಈ ವೇದದಲ್ಲಿ ೨೦ ಕಾಂಡಗಳೂ ೭೩೦ ಸೂಕ್ತಗಳೂ ೬೦೦೦ ಮಂತ್ರ ಗಳೂ ಇವೆ. ಪದ್ಯಗದ್ಯಶೈಲಿಯಲ್ಲಿ ಸಂಮಿಶ್ರವಾಗಿರುವ ಈ ವೇದದಲ್ಲಿ ವಿವಾಹಪದ್ಧತಿ, ಶವಸಂಸ್ಕಾರ, ಗೃಹನಿರ್ಮಾಣ, ರಾಜ್ಯದಲ್ಲಿ ರಾಜರ ಆಯ್ಕೆ ಇತ್ಯಾದಿ ದಿನನಿತ್ಯದ ಜೀವ ನಕ್ಕೆ ಸಂಬಂಧಿಸಿದ ವಿಚಾರಗಳು ಕೂಡ ಇವೆ. ಮಾತ್ರವಲ್ಲದೆ ಮಂತ್ರವಾದ, ತಂತ್ರ ವಿದ್ಯೆ, ಮಾಟ, ಛಿದ್ರ, ಮಾರಣ, ಉಚ್ಚಾಟನ, ಸ್ತಂಭನ, ಯಕ್ಷಿಣೀ, ಇಂದ್ರಜಾಲ, ಮಹೇಂದ್ರಜಾಲ ವಿದ್ಯೆಗಳ ವಿಚಾರವೂ ವಿಸ್ತಾರವಾಗಿದೆ. ಅಲ್ಲದೆ ಆಗ್ನೇಯ ವಾಯವ್ಯ ಇತ್ಯಾದಿ ಅಸ್ತ್ರಶಸ್ತ್ರಗಳ ಪ್ರಯೋಗಗಳೂ ಈ ವೇದದಲ್ಲಿ ಸೇರಿವೆ. ವಿವಿಧಮುಖವಾದ ಅಭಿಚಾರಕ್ರಿಯೆಗಳಿಗೆ ಸಂಬಂಧಪಟ್ಟ ವಿಷಯಗಳು ಈ ವೇದದಲ್ಲಿ ವಿಸ್ತಾರವಾಗಿ ವಿವರಿ ಸಲ್ಪಟ್ಟಿರುವಂತೆ ವೈರಪ್ರಶಮನ, ದೀರ್ಘಾಯುಕ್ರಮ, ಆರೋಗ್ಯಕ್ರಮ, ಸತ್ಯವ್ರತ, ಶ್ರೇಯಸ್ಸು, ರೋಗಗಳ ನಿವಾರಣೋಪಾಯಗಳು, ಔಷಧಿಗಳ ವಿವರ ಇತ್ಯಾದಿಗಳೂ ಸೇರಿರುತ್ತವೆ. ಇವುಗಳಲ್ಲದೆ ಯಜ್ಞಯಾಗಾದಿಗಳನ್ನು ನಿರ್ವಹಿಸಬೇಕಾದಲ್ಲಿ ಅನುಸರಿಸುವ ಕ್ರಮದ ತಿಳಿವಳಿಕೆಗಳೂ ವೇದದಲ್ಲಿ ಅಡಗಿವೆ. ಯಜ್ಞಯಾಗಾದಿಗಳ ವೇಳೆ 'ಬ್ರಹ್ಮ'ನಿಗೆ ಈ ವೇದವು ಉಪಯುಕ್ತವಾದುದರಿಂದ ಇದನ್ನು 'ಬ್ರಹ್ಮವೇದ' ಎಂದೂ ಹೇಳುತ್ತಾರೆ. ಹೀಗೆ ಅಥರ್ವವೇದವು ಜನಜೀವನಕ್ಕೆ ಉಪಯುಕ್ತವಾದ ಅನೇಕ ವಿಷಯಗಳಿಂದ ಕೂಡಿರುತ್ತದೆ. ಈ ವೇದಕ್ಕೆ ಅಥರ್ವಣ, ಅಥರ್ವಾಂಗೀರಸ, ಬ್ರಹ್ಮವೇದಗಳೆಂಬ ಬೇರೆ ಬೇರೆ ಹೆಸರುಗಳೂ ಇವೆ.

ಅಥರ್ವವೇದದ ಬ್ರಾಹ್ಮಣ—ಗೋಪಥ.

ಉಪವೇದ—ಸ್ಥಾಪತ್ಯವೇದ ಅಥವಾ ಅರ್ಥವೇದ.

ಶ್ರೌತಸೂತ್ರಗಳು—ವೈತಾನ, ಕೌಶಿಕ.

ಗೃಹ್ಯಸೂತ್ರ—ಕೌಶಿಕ.

ಪ್ರತಿಯೊಂದು ವೇದಕ್ಕೂ ಕರ್ಮ, ಉಪಾಸನಾ, ಜ್ಞಾನಕಾಂಡಗಳೆಂಬ ಮೂರು ವಿಭಾಗಗಳಿವೆ ಎಂದು ಹಿಂದೆ ವಿವರಿಸಲಾಗಿದೆ. ಈ ವಿಭಾಗಗಳು ವೇದಗ್ರಂಥ ಸಮೂಹದ ಪರಿಚಯದೃಷ್ಟಿಯಿಂದ ಬೇರೆಬೇರೆ ವಿನಾ ಯಥಾರ್ಥವಾಗಿ ಬೇರೆಬೇರೆ ಆಗುವುದಿಲ್ಲ. ವೈದಿಕ ಋಷಿಗಳು ಭಗವಂತನನ್ನು ನಿರ್ಗುಣ–ನಿರಾಕಾರ ಎಂದು ತಿಳಿದಿದ್ದರೂ ಕೂಡ ವಿವಿಧ ರೂಪ–ಹೆಸರುಗಳಿಂದ ಸಗುಣ–ಸಾಕಾರನೆಂದೂ ಪೂಜಿಸುತ್ತಿದ್ದರು. ಪ್ರಕೃತಿಯ ಆರಾಧನೆ, ಪ್ರಕೃತಿಶಕ್ತಿಗಳಾದ ಮಳೆ ಗಾಳಿ ಬೆಳಕು ಇವುಗಳಿಗೆಲ್ಲಾ ಒಂದೊಂದು ದೇವತೆಯನ್ನು ಹೆಸರಿಸಿ ವೇದದಲ್ಲಿ ಬರುವ ಪ್ರಮುಖವಾದ ದೇವತೆಗಳ ಸಂಖ್ಯೆ ೩೩. ಅವುಗಳು ಯಾವುವೆಂದರೆ: ಇಂದ್ರ, ಅಗ್ನಿ, ಸೋಮ. ವಾಯು. ಸೂರ್ಯ. ಮಿತ್ರ, ವರುಣ, ವಿಷ್ಣು, ಉಷ, ಅಶ್ವಿನೀದೇವತೆಗಳು. ಪೂಷಾ, ರುದ್ರ, ಪ್ರಜಾಪತಿ. ಯಮ, ಪರ್ಜನ್ಯ, ಅರ್ಯಮ, ಮರುತ್ತುಗಳು, ಬ್ರಹ್ಮಣಸ್ಪತಿ, ಸರಸ್ವತಿ, ಅದಿತಿ, ಆದಿತ್ಯ, ಋಭು, ಇಳಾ, ತ್ವಷ್ಟಾ, ಸವಿತಾ, ಇಂದ್ರಾಣಿ, ವರುಣಾನಿ, ಆಗ್ನೇಯಿ. ವಸುಗಳು, ಮಾತರಿಶ್ವ, ವೈಶ್ವಾನರ ಮತ್ತು ಭಾರತಿ.

ಉಪನಿಷತ್ತುಗಳು : ಉಪನಿಷತ್ತುಗಳು ವೇದದ ಜ್ಞಾನಕಾಂಡಾತ್ಮಕ ಮಂತ್ರಸಮೂಹಗಳಾಗಿವೆ. ಇವುಗಳಲ್ಲಿ ಆತ್ಮ, ಬ್ರಹ್ಮ ಎಂಬ ವಿಚಾರಗಳು ಪ್ರಧಾನವಾಗಿ ಪ್ರತಿಪಾದಿಸಲ್ಪಟ್ಟಿರುತ್ತವೆ.

ಬ್ರಹ್ಮವಸ್ತುವನ್ನು (ಉಪ)=ಸಮೀಪದಲ್ಲಿ (ನಿ)=ಕೆಳಗೆ (ಷದ್)=ಕುಳಿತು ಕಲಿಯುವ ವಿದ್ಯೆಯಾಗಿದೆ ಎಂಬ ಅರ್ಥದಲ್ಲಿ ಉಪನಿಷತ್ ಶಬ್ದ ಉತ್ಪತ್ತಿಯಾಗಿದೆ. ಉಪ+ನಿ ಎಂಬ ಉಪಸರ್ಗದಿಂದ ಕೂಡಿದ ಷದ್ ಧಾತುವಿನಿಂದ ಉಪನಿಷತ್ ಪದವು ಹುಟ್ಟಿರುತ್ತದೆ. ಈ ಶಬ್ದದ ಅವಯವಾರ್ಥದಲ್ಲಿ ತುಂಬ ಮತಭೇದಗಳಿವೆ. ಒಟ್ಟಿನಲ್ಲಿ ಸ್ಥೂಲವಾಗಿ "ಮಾನವನನ್ನು ಪರಮಾತ್ಮನೆಡೆಗೆ ಒಯ್ಯುವ ಜ್ಞಾನ, ಅಥವಾ ಮನುಷ್ಯನಿಗೂ ಜಗತ್ತಿ–ಪರಮಾತ್ಮನಿಗೂ ಇರುವ ಸಂಬಂಧವನ್ನು ತಿಳಿಸುವ ಜ್ಞಾನ" ಎಂದು ಅರ್ಥ ಹೇಳಬಹುದು.

ಶ್ರೀಮತ್ ಶಂಕರಾಚಾರ್ಯರು ತಮ್ಮ ಕಠೋಪನಿಷತ್ತು ಭಾಷ್ಯದಲ್ಲಿ ಉಪನಿಷತ್ ಶಬ್ದದ ಕುರಿತಾಗಿ ಶಬ್ದವಿಶ್ಲೇಷಣೆ ಮಾಡಿ ಅರ್ಥ ತಿಳಿಸುತ್ತಾ ಹೀಗೆ ಹೇಳುತ್ತಾರೆ :

'ವಿಶರಣ, ಗತಿ, ಅವಸಾದನ ಎಂಬ ಅರ್ಥಗಳುಳ್ಳ "ಸದ್" ಧಾತುವಿಗೆ ಹಿಂದೆ ಉಪ, ನಿ—ಎಂಬ ಉಪಸರ್ಗಗಳೂ ಮುಂದೆ ಕ್ವಿಪ್ ಎಂಬ ಪ್ರತ್ಯಯವೂ ಬಂದು ಉಪನಿಷದ್ ಎಂಬ ರೂಪವಾಗಿರುತ್ತದೆ. ಬ್ರಹ್ಮವಿದ್ಯೆಯನ್ನು, ಅದರ ಹತ್ತಿರಕ್ಕೆ ಬಂದು (ಉಪ) ಅದರಲ್ಲಿಯೇ ತಾತ್ಪರ್ಯ ಉಳ್ಳವರಾಗಿ ನಿಶ್ಚಯದಿಂದ (ನಿ) ಯಾರು ಪರಿಶೀಲಿಸುವರೋ ಅವರ ಸಂಸಾರಕ್ಕೆ ಬೀಜವಾದ ಅವಿದ್ಯೆಯೇ ಮುಂತಾದುವುಗಳನ್ನು ವಿಶರಣಮಾಡುವುದರಿಂದ 'ವಿ' ಎಂದರೆ ಹಿಂಸೆ ಮಾಡುವುದರಿಂದ ವಿನಾಶಗೊಳಿಸುವುದರಿಂದ 'ಸದ್' ಎಂಬೀ ಅರ್ಥದ ಸಂಬಂಧದಿಂದ, ವಿದ್ಯೆಯು "ಉಪನಿಷದ್" ಎಂದೆನಿಸುತ್ತದೆ.'

ಉಪನಿಷತ್ತುಗಳಲ್ಲಿ ವೇದದ ಸಾರಸರ್ವಸ್ವವು ಅಡಕವಾಗಿದೆ ಎಂಬುದು ಅವುಗಳ ವಿಷಯಸಂಗ್ರಹ–ವಿಚಾರಗಳಿಂದ ತಿಳಿದುಬರುತ್ತದೆ. ಪೌರ್ವಾತ್ಯ ಮತ್ತು ಪಾಶ್ಚಾತ್ಯ ವಿದ್ವಾಂಸರು, ಸಾಧಕರು, ಮುಮುಕ್ಷುಗಳು ಎಲ್ಲರೂ ಉಪನಿಷತ್ತುಗಳ ತತ್ತ್ವವೈಭವ,

ವಿಚಾರಬಾಹುಲ್ಯ, ಭಾವನಾ ಉತ್ತುಂಗತೆ, ಪ್ರಾಯೋಗಿಕ ಸಾಧ್ಯತೆ ಮತ್ತು ವಿಷಯ ಗಾಂಭೀರ್ಯಗಳನ್ನು ಮೆಚ್ಚಿಕೊಂಡಿರುತ್ತಾರೆ. ಉಪನಿಷತ್ತುಗಳಲ್ಲಿ ಮಾನವನ ಆತ್ಮ-ಪರಮಾತ್ಮ-ಜೀವನ-ಜಗತ್ತುಗಳ ವಿಚಾರವೈಭವವು ಸತ್ಯಸೌಂದರ್ಯದ ಉತ್ತುಂಗ ಶಿಖರವನ್ನು ಏರಿದೆ ಎಂಬುದು ಸ್ವಯಂವೇದ್ಯ ವಿಚಾರವಾಗಿದೆ. ಹಿಂದೂಧರ್ಮದ ವಿವಿಧ ಪಂಥಗಳು ಉಪನಿಷತ್ತನ್ನು ಆಧರಿಸಿಯೇ ಹುಟ್ಟಿರುವವಾಗಿದ್ದು ಹಿಂದೂ ಧರ್ಮದ ಮಹಾಸೌಧದ ಅಡಿಗಲ್ಲು ವೇದವಾದರೆ ಉಪನಿಷತ್ತುಗಳು ಅದರ ಆಧಾರ ಸ್ತಂಭಗಳಾಗಿವೆ.

ಪ್ರತಿಯೊಂದು ವೇದವೂ ಅನೇಕ ಉಪನಿಷತ್ ಭಾಗಗಳಿಂದ ಕೂಡಿದ್ದು ವೇದ ಸಾಹಿತ್ಯಸಂಗ್ರಹದಲ್ಲಿ ಉಪನಿಷತ್ ಭಾಗಗಳು ಬಹುಸಂಖ್ಯೆಯಲ್ಲಿವೆ. ಉಪನಿಷತ್ತುಗಳ ಸಂಖ್ಯೆಯು ಕಾಲಕ್ರಮದಲ್ಲಿ ಹೆಚ್ಚಾಗುತ್ತಾಬಂದವು. ಹೇಗೆಂದರೆ : ಆಗಿಂದಾಗ್ಗೆ ವಿವಿಧ ಪಂಥೀಯರು ನೂತನವಾಗಿ ಉಪನಿಷತ್ತನ್ನು ರಚಿಸಿ ತಮ್ಮ ತಮ್ಮ ಪಂಥದ ಶ್ರೇಷ್ಠತೆಯನ್ನು ಸಾರಲು ಆಧಾರವಾಗಿ ಉಪನಿಷತ್ ಭಂಡಾರಕ್ಕೆ ಹೊಸ ಹೊಸ ಉಪನಿಷತ್ತುಗಳನ್ನು ಸೇರಿಸಿದರು. ಅದಕ್ಕೆ ಅನುಸಾರವಾಗಿ ಈಗ ಸುಮಾರು ೨೨೦ಕ್ಕೆ ಅವುಗಳ ಸಂಖ್ಯೆಯು ಏರಿರುತ್ತದೆ. ಅವುಗಳಲ್ಲಿ ೧೦೮ ಉಪನಿಷತ್ತುಗಳು ಹೆಚ್ಚು ಪ್ರಾಚೀನವಾದುವೆಂದು ಮಾನ್ಯತೆಯನ್ನು ಪಡೆದಿರುತ್ತವೆ. ಆದರೆ ತ್ರಿಮತಾಚಾರ್ಯರಿಂದ ಮಾನ್ಯತೆಪಡೆದ ದೃಷ್ಟಿಯಿಂದಲೂ, ವಿಚಾರಪ್ರಗಲ್ಭತೆ ಆಧ್ಯಾತ್ಮಮೌಲ್ಯದ ಪ್ರಮುಖತೆಗಳ ಪ್ರತಿಪಾದನೆ ಹಾಗೂ ಪ್ರಾಯೋಗಿಕ ಪ್ರಕಾಶವನ್ನು ಬೀರುವ ದೃಷ್ಟಿಯಿಂದಲೂ ಪರಿಗಣನೆಪೊಂದಿರುವ ಮುಖ್ಯವಾದ ಉಪನಿಷತ್ತುಗಳ ಸಂಖ್ಯೆ ಕೇವಲ ಹನ್ನೆರಡು. ಅವು ಯಾವುವೆಂದರೆ :

(೧) ಈಶ. (೨) ಕೇನ, (೩) ಕಠ, (೪) ಪ್ರಶ್ನ. (೫) ಮುಂಡಕ. (೬) ಮಾಂಡೂಕ್ಯ. (೭) ಐತರೇಯ, (೮) ತೈತ್ತಿರೀಯ, (೯) ಛಾಂದೋಗ್ಯ, (೧೦) ಬೃಹದಾರಣ್ಯಕ, (೧೧) ಕೌಷೀತಕಿ, (೧೨) ಶ್ವೇತಾಶ್ವತರ.

ಉಪನಿಷತ್ತುಗಳಲ್ಲಿ ಹಿಂದೂಧರ್ಮದ ಪರಮಸತ್ಯದ ಸ್ವರೂಪವು ಬಹಳ ಪರಿಣಾಮಕಾರಿಯಾದ ಹಾಗೂ ವಿವರವಾದ ರೀತಿಯಲ್ಲಿ ವಿವರಿಸಲ್ಪಟ್ಟಿದ್ದು ಉಪನಿಷತ್ತುಗಳೆಂದರೆ ನಿಗೂಢವಾದ ಆಧ್ಯಾತ್ಮಸತ್ಯ, ಸತ್ಯದ ಸಾಕ್ಷಾತ್ಕಾರದ ಸಾಧನಾವಿಧಾನಗಳನ್ನು ಒಳಗೊಂಡ ಅತ್ಯಂತ ಮೌಲ್ಯಯುಕ್ತವೂ ಪ್ರಭಾವಪೂರಿತವೂ ಆದ ವಿಚಾರಗಳ ಭಂಡಾರವಾಗಿರುತ್ತದೆ. ಉಪನಿಷತ್ತುಗಳಲ್ಲಿ ಆತ್ಮವಿದ್ಯೆಯನ್ನು ಅನೇಕ ಉದಾಹರಣೆ ಕಥೆಗಳ ಮೂಲಕ ಪ್ರತಿಪಾದಿಸಿದ್ದು ಅವುಗಳೆಲ್ಲವೂ ತುಂಬಾ ಉತ್ತಮವಾಗಿರುವುದು ಮಾತ್ರವಲ್ಲದೆ ಮಾರ್ಗದರ್ಶಕಗಳಾಗಿರುತ್ತವೆ. ಉಪನಿಷತ್ತುಗಳಲ್ಲಿ ಕಂಡುಬರುವ ಧೈರ್ಯ, ಆತ್ಮವಿಶ್ವಾಸ, ಸತ್ಯ, ಬ್ರಹ್ಮಚರ್ಯ ಇತ್ಯಾದಿ ಜೀವನದ ಅತ್ಯಂತ ಅಗತ್ಯದ ಹಾಗೂ ಪ್ರಮುಖವಾದ ವಿಚಾರಗಳ ಕುರಿತಾದ ವಿಚಾರಧಾರೆ-ಸಂದೇಶಗಳು ನಿತ್ಯನೂತನವೂ ಸತ್ವಪೂರ್ಣವೂ ಆಗಿರುತ್ತದೆ. ಉಪನಿಷತ್ತುಗಳ ಪುಟಪುಟಗಳಲ್ಲಿ ಎಂಬಂತೆ ನಾವು ಅಭಯ, ಅಹಿಂಸೆ, ಅಸ್ತೇಯ, ಅಸಂಗತ್ವ, ಆತ್ಮವಿಶ್ವಾಸಗಳ ಅಮರಸಂದೇಶವನ್ನು ಕಾಣುತ್ತೇವೆ.

ಈಶಾವಾಸ್ಯೋಪನಿಷತ್ : ಮುಖ್ಯವಾದ ಹನ್ನೆರಡು ಉಪನಿಷತ್ತುಗಳಲ್ಲಿ ಮೊದಲನೆಯ ಉಪನಿಷತ್ತೇ ಈಶಾವಾಸ್ಯೋಪನಿಷತ್. ಇದರ ಪ್ರಥಮ ಶಬ್ದ "ಈಶಾವಾಸ್ಯಮ್" ಎಂಬುದನ್ನು ಅನುಸರಿಸಿ ಈಶಾವಾಸ್ಯೋಪನಿಷತ್ತು ಎಂದು ಇದಕ್ಕೆ ಹೆಸರುಬಂದಿರುತ್ತದೆ. ಈಶ ಎಂದರೆ ಒಡೆಯ ಎಂದು ಅರ್ಥ. ಜಗತ್ತಿನ ಒಡೆಯನಾದ ಭಗವಂತ, (ಈಶನ) ವ್ಯಾಪಕಸ್ವರೂಪ, ಮನುಷ್ಯನಿಗೂ ಭಗವಂತನಿಗೂ ಇರುವ ಸಂಬಂಧ ಇತ್ಯಾದಿ ವಿಚಾರಗಳ ವಿವೇಚನೆ ಈ ಉಪನಿಷತ್ತಿನಲ್ಲಿ ಇದೆಯಾದ್ದರಿಂದ ಇದಕ್ಕೆ ಈ ಹೆಸರು ಬಂದಿದೆ. ಈ ಉಪನಿಷತ್ತು ಯಜುರ್ವೇದದ ವಾಜಸನೇಯ ಶಾಖೆಗೆ (ಶುಕ್ಲಯಜುರ್ವೇದಕ್ಕೆ) ಸೇರಿದ್ದು ಗಾತ್ರದಲ್ಲಿ ಕಿರಿದಾಗಿರುತ್ತದೆ. ಹದಿನೆಂಟೇ ಶ್ಲೋಕಗಳಿಂದ ಕೂಡಿರುವ ಈ ಉಪನಿಷತ್ತು ಗಾತ್ರದಲ್ಲಿ ಚಿಕ್ಕದಾದರೂ ಇದರಲ್ಲಿ ಪ್ರತಿಪಾದ್ಯವಾಗಿರುವ ತತ್ತ್ವಗಾಂಭೀರ್ಯ, ವಿಚಾರಧಾರೆ, ಅರ್ಥಸಂಪತ್ತುಗಳಿಂದ ತುಂಬಾ ಹಿರಿದಾದುದು ಎಂದು ಹೇಳಬಹುದು. ಭಾರತದ ರಾಷ್ಟ್ರಪಿತರಾದ ಪೂಜ್ಯ ಮಹಾತ್ಮಾ ಗಾಂಧೀಜಿಯವರು ಈ ಉಪನಿಷತ್ತಿನಲ್ಲಿ ಜೀವನಕ್ಕೆ ಬೇಕಾದ ನಿಜ ಬೆಳಕು ಅಡಗಿದೆ ಎಂದು ಹೇಳಿರುತ್ತಾರೆ. ಮಾತ್ರವಲ್ಲದೆ ಈಶಾವಾಸ್ಯೋಪನಿಷತ್ತಿನಲ್ಲಿ ಹಿಂದೂ ಧರ್ಮದ ಸಾರಸರ್ವಸ್ವವೂ ಅಡಗಿದೆ ಎಂದು ಹೇಳಿ ಹಿಂದೂಧರ್ಮದ ಸಕಲ ಗ್ರಂಥಗಳು ಭಸ್ಮವಾದರೂ ಈ ಉಪನಿಷತ್ತು, ಅದರಲ್ಲೂ ಒಂದನೇ ಮಂತ್ರ, ಉಳಿದರೂ ಹಿಂದೂಧರ್ಮವು ಚಿರಕಾಲ ಉಳಿಯುವುದು ಎಂದು ಹೇಳುತ್ತಾರೆ.[1]

ಗಾಂಧೀಜಿಯವರು ಮುಕ್ತಕಂಠದಿಂದ ಹೊಗಳಿರುವ ಈಶಾವಾಸ್ಯೋಪನಿಷತ್ತಿನ ಪ್ರಥಮ ಶ್ಲೋಕವು ಹೀಗಿದೆ :

**ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ ।**
**ತೇನ ತ್ಯಕ್ತೇನ ಭುಂಜೀಥಾಃ ಮಾ ಗೃಧಃ ಕಸ್ಯ ಸ್ವಿದ್ಧನಮ್ ॥**

---

1. But I have fixed upon one Manthra as containing the whole essence of Hinduism. Many of you, I think, know the Ishopanishad. (I read it years ago with translation and commentary. I learnt it byheart in Yaravada jail.) I have now come to the final conclusion that if all the Upanishads and all the other scriptures happened all of a sudden to be reduced to ashes, and if only the first verse in the Ishopanishad were left intact in the memory of the Hindus, Hinduism would live for ever." "Remember that one verse of the Ishopanishad first and then all about the other scriptures. Peace on earth and good-will among mankind needs nothing more nor less than an acceptance of the truth underlying the Manthra which is no abstruse formula, no exclusive credal doctrine, but a universal law."

—*Harijan*, January 30, 1937 : On Hinduism

"And without fear of contradiction, I am here to say that every believer in this verse is wholly a Hindu .. .I know no other road or better road to happiness than is contained in this first Manthra of Ishopanishad."

—*Ibid*., February 6, 1937 : On Hinduism

"ಈ ಜಗತ್ತಿನಲ್ಲಿ ಎಲ್ಲಾ ಸ್ಥಾವರ-ಜಂಗಮ ವಸ್ತುಗಳೂ ಭಗವಂತನಿಂದ (ಈಶನಿಂದ) ಆವರಿಸಲ್ಪಟ್ಟಿವೆ ಎಂಬುದನ್ನು ತಿಳಿದುಕೊ. ಆದ್ದರಿಂದ ಅವುಗಳ ತ್ಯಾಗದಲ್ಲಿ ನಿನ್ನ ಸಂತೋಷವನ್ನು ಕಾಣು. ಇತರರಿಗೆ ಸೇರಿದ ಧನದಲ್ಲಿ ಆಸೆಯುಳ್ಳವನಾಗಬೇಡ."

ಎರಡನೇ ಶ್ಲೋಕವು ಹೀಗಿದೆ :

**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ ।**
**ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ ಲಿಪ್ಯತೇ ನರೇ ॥**

"ಕೆಲಸಗಳನ್ನು ಸದಾ ಮಾಡುತ್ತಾ ಒಬ್ಬನು ಇಲ್ಲಿ ನೂರು ವರ್ಷ ಬಾಳಲು ಬಯಸಬೇಕು. ನೀನು ಆ ರೀತಿ ಮನುಷ್ಯನಾಗಿ ಬಾಳಿದರೆ ನಿನಗೆ ಕರ್ಮಗಳ ಲೇಪ ಅಥವಾ ಬಂಧನ ಉಂಟಾಗುವುದಿಲ್ಲ. ಹೀಗಾಗಲು ನಿನಗೆ ಈ ಮಾರ್ಗವಲ್ಲದೆ ಬೇರೆ ಮಾರ್ಗವಿರುವುದಿಲ್ಲ."

ಪೂಜ್ಯ ಗಾಂಧೀಜಿಯವರು ಈ ಶ್ಲೋಕಗಳನ್ನು ದಿನನಿತ್ಯವೂ ಪ್ರಾರ್ಥನೆಯ ವೇಳೆ ಹೇಳುತ್ತಿದ್ದರು ಮತ್ತು ಅನುಸಂಧಾನ ಮಾಡುತ್ತಿದ್ದರು.

ಭಗವಂತನನ್ನು ಈಶ ಎಂದು ಕರೆದಿರುವ ಈ ಉಪನಿಷತ್ತು ಜಗತ್ತೆಲ್ಲವೂ ಈಶನಿಂದ ಆವೃತವಾದುದು ಎಂದು ಹೇಳಿ ಜಗತ್ತಿನಲ್ಲಿ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸಿಕೊಂಡು ನೂರು ವರ್ಷ ಬಾಳಲು ಬಯಸಬೇಕು, ಪರದ್ರವ್ಯವನ್ನು ಮುಟ್ಟಬಾರದು ಎಂಬಿತ್ಯಾದಿಯಾಗಿ ಬೋಧಿಸುತ್ತದೆ. ಹೀಗೆ ಜ್ಞಾನ-ಅಜ್ಞಾನ, ವಿದ್ಯೆ-ಅವಿದ್ಯೆ, ಕರ್ಮ-ಆತ್ಮಗಳ ಕುರಿತಾಗಿ ಬೆಳಕನ್ನು ಬೀರಿ ಮಾನವನ ಜೀವನ ಕೃತಕಾರ್ಯವಾಗಲು ಮಾರ್ಗದರ್ಶನವನ್ನು ನೀಡುವ ಈ ಪುಟ್ಟ ಉಪನಿಷತ್ತು ಮಹತ್ಪೂರ್ಣವಾದುದೂ ಹೌದು ; ಸತ್ವಪೂರ್ಣವಾದುದೂ ಹೌದು.

**ಕೇನೋಪನಿಷತ್ತು :** ಕೇನ ಎಂದರೆ ಯಾರಿಂದ ಎಂದು ಅರ್ಥ. ಈ ಜಗತ್ತಿನ ಸೃಷ್ಟಿ ಯಾರಿಂದ ಆಯಿತು ಎಂಬ ಪ್ರಶ್ನೆಗೆ ಉತ್ತರವು ಕೇನೋಪನಿಷತ್ತಿನಲ್ಲಿದ್ದು ಅದರ ಪ್ರಥಮ ಶಬ್ದವು "ಕೇನ" ಎಂದಾಗಿದೆ. ಹಾಗಾಗಿ ಈ ಉಪನಿಷತ್ತಿಗೆ ಕೇನೋಪನಿಷತ್ತು ಎಂದು ಹೆಸರುಬಂದಿರುತ್ತದೆ. ಬ್ರಹ್ಮ, ಸೃಷ್ಟಿ, ಜೀವ—ಇತ್ಯಾದಿ ಮೂಲಭೂತವಾದ ವಿಚಾರಗಳ ಮೇಲೆ ಜಿಜ್ಞಾಸೆಯನ್ನು ಮಾಡಿರುವ ಈ ಉಪನಿಷತ್ತು ಸರ್ವವೂ ಬ್ರಹ್ಮಮಯ—ಎಲ್ಲವೂ ಬ್ರಹ್ಮನಿಂದಾಗಿಯೇ ನಡೆಯುತ್ತದೆ ಎಂದು ಬೋಧಿಸುತ್ತದೆ. ಪರತತ್ತ್ವದ ಸಾಕ್ಷಾತ್ಕಾರಕ್ಕೆ ಇಂದ್ರಿಯಗಳು ಸ್ವಲ್ಪ ನೆರವಾದಾವು ಎಂಬುದು ಹೌದಾದರೂ ಪರತತ್ತ್ವಸಾಕ್ಷಾತ್ಕಾರವು ಇಂದ್ರಿಯಾತೀತವಾದುದು ಎಂಬುದನ್ನು ಕೇನೋಪನಿಷತ್ತು ಸ್ಪಷ್ಟಪಡಿಸುತ್ತದೆ. ಈ ಉಪನಿಷತ್ತಿನಲ್ಲಿ ಒಟ್ಟು ನಾಲ್ಕು ಅಧ್ಯಾಯಗಳಿವೆ. ಕೇನೋಪನಿಷತ್ತು ಸಾಮವೇದದ (ತಲವಾಕರ) ಬ್ರಾಹ್ಮಣಭಾಗಕ್ಕೆ ಸೇರಿದ ಉಪನಿಷತ್ತಾಗಿರುತ್ತದೆ.

**ಕಠೋಪನಿಷತ್ತು :** ಅತ್ಯಂತ ಅರ್ಥಗರ್ಭಿತವೂ ವಿಚಾರಪೂರಿತವೂ ಆದ ಉಪನಿಷತ್ತುಗಳಲ್ಲಿ ಒಂದಾದ ಕಠೋಪನಿಷತ್ತು ತುಂಬ ಪ್ರಸಿದ್ಧಿಯನ್ನು ಪಡೆದ ಉಪನಿಷತ್ ಆಗಿದೆ. ಪ್ರತಿ ಅಧ್ಯಾಯದಲ್ಲಿ ಮೂರು ವಲ್ಲಿಗಳಿಂದ ಕೂಡಿದ್ದು ಎರಡು ಅಧ್ಯಾಯಗಳು

ಈ ಉಪನಿಷತ್ತಿನಲ್ಲಿವೆ. ಯಜುರ್ವೇದ, ಸಾಮವೇದ ಮತ್ತು ಅಥರ್ವವೇದಗಳಿಗೆ ವಿವಿಧ ರೀತಿಯಲ್ಲಿ ಇದು ಸಂಬಂಧಿಸಿದೆ. ಈ ಉಪನಿಷತ್ತು ಕೃಷ್ಣಯಜುರ್ವೇದದ ಕಠಶಾಖೆಗೆ ಸೇರಿರುತ್ತದೆ. ಮೃತ್ಯುದೇವತೆ ಯಮ ಮತ್ತು ಮಹರ್ಷಿ ವಾಜಶ್ರವಸರ ಪುತ್ರ ನಚಿಕೇತ ಇವರ ಸಂಭಾಷಣೆ ಈ ಉಪನಿಷತ್ತಿನ ಮುಖ್ಯ ವಿಚಾರ. ಮಾನವನ ಹುಟ್ಟು-ಮೃತ್ಯು, ಮೃತ್ಯುವಿಂದಾಚೆಗೆ ಆತ್ಮ ಏನಾಗುತ್ತದೆ ?—ಎಂಬ ವಿಚಾರಗಳ ಕುರಿತಾಗಿ ಈ ಉಪನಿಷತ್ತಿನಲ್ಲಿ ವಿಸ್ತಾರವಾದ ವಿಚಾರನಿರೂಪಣೆಗಳು ಇವೆ. ಋಷಿ ವಾಜಶ್ರವಸರ ಪುತ್ರನಾದ ನಚಿಕೇತ ಮೃತ್ಯುದೇವತೆಯಾದ ಯಮನನ್ನು ಭೇಟಿಮಾಡಿ ಜನ್ಮ-ಪುನರ್ಜನ್ಮಗಳ ವಿಚಾರವಾಗಿ ಪ್ರಶ್ನೆಮಾಡಿ ಸೂಕ್ತವಾದ ಉತ್ತರವನ್ನು ಪಡೆಯುವುದರ ಅತ್ಯಂತ ಆಕರ್ಷಣೀಯವೂ ಅರ್ಥಗರ್ಭಿತವೂ ಆದ ಸಂವಾದನಿರೂಪಣೆ ಈ ಉಪನಿಷತ್ತಿನಲ್ಲಿ ಅಡಗಿರುತ್ತದೆ. ಜೀವನವನ್ನು ಹೇಗೆ ನಿರ್ವಹಿಸಬೇಕು ? ಇಂದ್ರಿಯನಿಗ್ರಹ ಎಂದರೇನು ? ಆತ್ಮ ಎಂದರೇನು ? ಅದರ ಅಮರತ್ವ ಎಂದರೇನು ? ಶ್ರದ್ಧೆ, ಧೈರ್ಯಗಳ ಸ್ವರೂಪವೇನು ? ಎಂಬಿತ್ಯಾದಿ ಅನೇಕ ವಿಚಾರಗಳ ಕುರಿತಾಗಿ ಕಠೋಪನಿಷತ್ತಿನಲ್ಲಿ ಅತ್ಯಂತ ಪ್ರಾಯೋಗಿಕವೂ ಮನೋಜ್ಞವೂ ಆದ ವಿವರಣೆ—ಮಾರ್ಗದರ್ಶನಗಳಿವೆ. ಶ್ರೀ ಸ್ವಾಮಿ ವಿವೇಕಾನಂದರು ಈ ಉಪನಿಷತ್ತನ್ನು ಹೆಚ್ಚಾಗಿ ಮೆಚ್ಚುತ್ತಿದ್ದು ಇದರಲ್ಲಿ ಚಿತ್ರಿತವಾಗಿರುವ ನಚಿಕೇತನ ಶ್ರದ್ಧೆ, ಧೈರ್ಯ ಮತ್ತು ಆತ್ಮನ ಅಮರತ್ವದ ವಿಚಾರಗಳು ಜನರ ಹೃದಯದಲ್ಲಿ ಪ್ರತಿಷ್ಠಾಪನೆಯಾಗಬೇಕು ಆಗ ಮಾತ್ರ ಮಾನವನ ಸರ್ವಾಂಗೀಣ ಉನ್ನತಿ ಸಾಧ್ಯ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಮರಣದನಂತರದ ವಿಚಾರಗಳ ಕುರಿತಾಗಿ ವಿವರ ನೀಡುವ ಉಪನಿಷತ್ತೆಂದು ಮಾನ್ಯವಾಗಿರುವ ಕಠೋಪನಿಷತ್ತನ್ನು ಶವಸಂಸ್ಕಾರ ಸಂದರ್ಭಗಳಲ್ಲಿ ಪಾರಾಯಣಮಾಡುವ ಕ್ರಮವಿದೆ.

ಆತ್ಮ-ಹುಟ್ಟು ಸಾವು ಎಂಬ ಗಹನವಾದ ವಿಚಾರಗಳ ಕುರಿತಾಗಿ ಪ್ರೌಢವಾದ ರೀತಿಯಲ್ಲಿ ವಿವರವನ್ನು ನೀಡುವ ಕಠೋಪನಿಷತ್ತು ಈ ಜಗತ್ತಿನಲ್ಲಿ ಮಾನವನು ನೀತಿವಂತನಾಗಿ, ಶ್ರದ್ಧಾವಂತನಾಗಿ, ಧೈರ್ಯವಂತನಾಗಿ ಬಾಳಬೇಕು ಎಂಬ ವಿಚಾರದಲ್ಲಿ ಅಷ್ಟೇ ಮುಖ್ಯವಾಗಿ ಸ್ಪಷ್ಟವಾಗಿ ಹೇಳುತ್ತಾ, ಶ್ರೇಯಸ್ಸು, ವಿದ್ಯೆ-ಅವಿದ್ಯೆಗಳ ವಿಚಾರವಾಗಿ ವಿವರಣೆಗಳನ್ನು ನೀಡುತ್ತದೆ. ಹೀಗೆ ಕಠೋಪನಿಷತ್ತು ಜೀವನಕ್ಕೆ ಅತ್ಯಂತ ಅಗತ್ಯದ ವಿಚಾರಗಳ ಕುರಿತಾಗಿ ಪರಿಣಾಮಕಾರಿಯಾದ ರೀತಿಯಲ್ಲಿ ಮಾರ್ಗದರ್ಶನವನ್ನು ನೀಡುವ ಮಹತ್ವಪೂರ್ಣವಾದ ಉಪನಿಷದ್ಗ್ರಂಥವಾಗಿದೆ.

**ಪ್ರಶ್ನೋಪನಿಷತ್ತು :** ಹೆಸರಿಗೆ ತಕ್ಕಂತೆ ಈ ಉಪನಿಷತ್ತು ಪ್ರಶ್ನೆಗಳಿಂದ ಕೂಡಿದ್ದು ಪ್ರಶ್ನೆಗಳೆಲ್ಲವೂ ಪಿಪ್ಪಲಾದ ಮಹರ್ಷಿಗಳ ಬಳಿಗೆ ತೆರಳಿದ ಆರು ಮಂದಿ ಜಿಜ್ಞಾಸುಗಳು (ವಿಚಾರ ತಿಳಿಯಬಯಸುವವರು) ಕೇಳಿದವುಗಳಾಗಿವೆ.

ಜಗತ್ತಿನ ಜೀವಿಗಳ ಹುಟ್ಟು, ಪ್ರಾಣ, ಪ್ರಾಣಕ್ಕೂ ದೇಹಕ್ಕೂ ಇರುವ ಸಂಬಂಧ, ಜಾಗ್ರತ್ ಮತ್ತು ನಿದ್ರಾವಸ್ಥೆಗಳ ರಹಸ್ಯ, ಸುಖದುಃಖವಿವೇಕ, ಓಂ ಶಬ್ದದ ಮಹತ್ವ, ಷೋಡಶ ಭಾಗಾತ್ಮಕ ಶಕ್ತಿಯ ನೆಲೆ ಎಂಬ ಆರು ವಿಷಯಗಳ ಬಗೆಗೆ ಪ್ರಶ್ನೆಗಳನ್ನು ಕೇಳಲಾಗಿ ಮಹರ್ಷಿ ಪಿಪ್ಪಲಾದರು ಸೂಕ್ತವಾದ ಉತ್ತರವನ್ನು ನೀಡಿರುವುದು ಈ

ಉಪನಿಷತ್ತಿನಲ್ಲಿ ಅಡಕವಾಗಿರುವ ವಿಷಯವಾಗಿರುತ್ತದೆ. ಈ ಉಪನಿಷತ್ತಿನಲ್ಲಿ ಇರುವ ಪ್ರಶ್ನೆಗಳು ಆರಾಗಿದ್ದು ಅವನ್ನು ಕೇಳಿದವರು ಅನುಕ್ರಮವಾಗಿ ಸುಕೇಶಾ, ಸತ್ಯಕಾಮ, ಸೌರ್ಯಾಯಣಿ, ಆಶ್ವಲಾಯನ, ಭಾರ್ಗವ ಮತ್ತು ಕಬಂಧಿ. ಪ್ರಶ್ನೋಪನಿಷತ್ತು ಅಥರ್ವವೇದದ ಪೈಪ್ಪಲಾದ ಶಾಖೆಗೆ ಸೇರಿರುತ್ತದೆ. ಸಾಂಖ್ಯದರ್ಶನದ ಮೂಲಸಿದ್ಧಾಂತಗಳು ಈ ಉಪನಿಷತ್ತಿನಲ್ಲಿ ಅಡಕವಾಗಿರುತ್ತವೆ.

**ಮುಂಡಕೋಪನಿಷತ್ :** ಅರ್ಥಸಂಪತ್ತು, ವಿಚಾರಪ್ರೌಢಿಮೆ, ವಿವರಣಾಗಾಂಭೀರ್ಯಗಳಿಗೆ ಹೆಸರಾದ ಉಪನಿಷತ್ತುಗಳಲ್ಲಿ ಮುಂಡಕೋಪನಿಷತ್ ಗಣನೀಯವಾದುದಾಗಿದೆ. ಇದರಲ್ಲಿ ಎರಡು ವಿಭಾಗಗಳಿಂದ ಕೂಡಿರುವ ಮೂರು ಮುಂಡಕ(ಅಧ್ಯಾಯ)ಗಳಿವೆ. ಈ ಉಪನಿಷತ್ ಅಥರ್ವವೇದದ ಶೌನಕ ಶಾಖೆಗೆ ಸೇರಿದೆ. ಒಟ್ಟು ಆರು ಅಧ್ಯಾಯಗಳಿಂದ ಕೂಡಿರುವ ಈ ಉಪನಿಷತ್ತು ಕರ್ಮ, ಜ್ಞಾನಗಳ ಅಂತರ ಹಾಗೂ ನಿಜವಾದ ಸ್ವರೂಪ, ನಿಜವಾದ ಜ್ಞಾನ, ಆತ್ಮಸಾಕ್ಷಾತ್ಕಾರದ ನಿಜವಾದ ಹಾದಿ, ಉಪಯುಕ್ತತೆ, ವಿಧಾನಗಳ ಕುರಿತಾದ ವಿಶೇಷವಾದ ರೀತಿಯಲ್ಲಿ ವಿವರಣೆಯನ್ನು ನೀಡುತ್ತದೆ. ಅಧ್ಯಾತ್ಮ ವಿಚಾರದ ಗಹನವಾದ ತತ್ತ್ವಗಳನ್ನು ಯಥೋಚಿತವಾಗಿ ಪ್ರಸ್ತಾಪಿಸಿ ವಿವರಗಳನ್ನು ನೀಡಿರುವ ಈ ಉಪನಿಷತ್ತು ಬದುಕಿನ ಸಾಗರವನ್ನು ದಾಟಿ ಭಗವಂತನ ಧಾಮವನ್ನು ಸೇರಲು ಭವಜೀವಿಗಳಿಗೆ ನೆರವಾಗುವ ಭದ್ರನೌಕೆಯಂತಿದೆ. ಸೃಷ್ಟಿ ಮತ್ತು ಸೃಷ್ಟಿಕರ್ತೃ, ಪರ ಮತ್ತು ಅಪರವಿದ್ಯೆ, ಬ್ರಹ್ಮ ಮತ್ತು ಬ್ರಹ್ಮಸಾಕ್ಷಾತ್ಕಾರ, ತ್ಯಾಗ ಮತ್ತು ತಪಸ್ಸು, ಸಾಧನೆ ಮತ್ತು ಸಾಕ್ಷಾತ್ಕಾರ, ಜೀವಾತ್ಮ ಮತ್ತು ಪರಮಾತ್ಮ ಎಂಬ ವಿಚಾರಗಳ ಕುರಿತಾಗಿ ಈ ಉಪನಿಷತ್ತಿನಲ್ಲಿ ಸಮರ್ಥ ಹಾಗೂ ಅತುಲನೀಯವಾದ ಮಾರ್ಗದರ್ಶನವಿರುತ್ತದೆ. ಈ ಉಪನಿಷತ್ತು ಇಂದ್ರಿಯಜನ್ಯಪ್ರಪಂಚವನ್ನು ತ್ಯಜಿಸಿ ಇಂದ್ರಿಯಾತೀತವಾದ ಬ್ರಹ್ಮಾನಂದದ ಅನುಭವವನ್ನು ಪಡೆದು ಕೃತಾರ್ಥರಾಗಬೇಕೆಂದು ಹೇಳುವುದರಿಂದ ಇದನ್ನು ವಿರಕ್ತರ ಉಪನಿಷತ್ತು, ಸಂನ್ಯಾಸಿಗಳ ಉಪನಿಷತ್ತು ಎಂದು ಪರ್ಯಾಯವಾಗಿ ಹೇಳುತ್ತಾರೆ. ತಲೆಕೂದಲು, ಗಡ್ಡಮೀಸೆಗಳನ್ನು ಮುಂಡನ ಮಾಡಿಕೊಂಡು ಭೋಗತ್ಯಾಗಿಗಳಾಗಿ ವಿರಕ್ತರು ಇಹಲೋಕದ ಸಮಸ್ತ ಸಂಬಂಧವನ್ನು ಬಿಟ್ಟು ಪರತತ್ತ್ವದ ಅನ್ವೇಷಣೆ, ಅನುಸಂಧಾನದಲ್ಲೇ ನಿರತರಾಗುತ್ತಾರೆ. ಈ ಉಪನಿಷತ್ತು ಆ ಕುರಿತಾಗಿಯೇ ಉಪದೇಶಿಸಿ ಮನಸ್ಸಿನ ಬಂಧನಗಳನ್ನು ಕ್ಷೌರಕತ್ತಿಯಂತೆ ಸುಲಭವಾಗಿ ಛೇದಿಸುವಂತಿರುವುದರಿಂದ ಇದಕ್ಕೆ ಮುಂಡಕ ಉಪನಿಷತ್ ಎಂದು ಹೆಸರುಬಂದಿರುತ್ತದೆ. (ಮುಂಡನ ಎಂದರೆ ಬೋಳಿಸುವುದು, ಇಲ್ಲದಂತೆ ಮಾಡುವುದು ಎಂದರ್ಥ.)

**ಮಾಂಡೂಕ್ಯೋಪನಿಷತ್ತು :** ಮಾಂಡೂಕ್ಯೋಪನಿಷತ್ತು ಗಾತ್ರದಲ್ಲಿ ಅತ್ಯಂತ ಚಿಕ್ಕದಾಗಿದ್ದು ಒರೇ ೧೨ ಮಂತ್ರಗಳಿಂದ ಕೂಡಿರುತ್ತದೆ. ಇದರಲ್ಲಿ ಓಂ ಶಬ್ದದ ಹಿರಿಮೆ, ಅರ್ಥಶಕ್ತಿ, ಮನುಷ್ಯನ ಜಾಗ್ರತ್, ಸ್ವಪ್ನ, ಸುಷುಪ್ತಿ, ತುರೀಯ ಎಂಬ ನಾಲ್ಕು ಅವಸ್ಥೆಗಳ ವಿವರಣೆ, ಬ್ರಹ್ಮ, ಹಿರಣ್ಯಗರ್ಭ, ತೈಜಸ ಎಂಬ ಸೃಷ್ಟಿಶಕ್ತಿಗಳ ಕುರಿತಾದ ನಿರ್ದಿಷ್ಟವಾದ ನಿರೂಪಣೆಗಳು ಬಂದಿವೆ. ಈ ಉಪನಿಷತ್ತು ಗಹನವಾದ ಆತ್ಮವಿಚಾರಗಳ ಕುರಿತಾಗಿ ವಿವರ ನೀಡುವ ಪುಟ್ಟದಾದ ಸೂತ್ರಗ್ರಂಥದಂತಿದೆ. ಮಾಂಡೂಕ್ಯೋಪನಿಷತ್ತಿಗೆ

ಅದ್ವೈತತತ್ತ್ವಪ್ರವರ್ತನಾಚಾರ್ಯರಾದ ಶ್ರೀ ಗೌಡಪಾದರು ವಿಸ್ತಾರವಾದ ಕಾರಿಕೆಯನ್ನು ಬರೆದು ಇದರ ಹಿರಿಮೆಯನ್ನು ವಿವರಿಸಿರುತ್ತಾರೆ. ಒಮ್ಮೆಗೆ ಓದುವಾಗ ಕೇವಲ ಅಕ್ಷರಗಳ ಸಂಯೋಜನೆಯಷ್ಟೆ ಎಂಬಂತಿರುವ ಈ ಉಪನಿಷತ್ತು ಅಗತ್ಯದ ಹಾಗೂ ಸೂಕ್ತವಾದ ಮಾನಸಿಕ ತಯಾರಿ, ವಿವೇಕದ ಶಕ್ತಿ ಹಾಗೂ ಧ್ಯಾನಚಿಂತನೆಗಳ ಬಲದಿಂದ ಅರ್ಥಪೂರ್ಣವೂ ಮಹತ್ವಪೂರ್ಣವೂ ಆದುದು ಎಂದು ತೋರಿಬರುತ್ತದೆ. ಈ ಉಪನಿಷತ್ತು ಅಥರ್ವವೇದಕ್ಕೆ ಸೇರಿದುದಾಗಿದೆ. ಕೆಲವು ಮಂದಿ ವಿದ್ವಾಂಸರು ಇದು ಋಗ್ವೇದದ ಮಾಂಡೂಕೇಯ ಶಾಖೆಗೆ ಸೇರಿದುದೆಂದು ಅಭಿಪ್ರಾಯಪಟ್ಟಿರುತ್ತಾರೆ.

**ಐತರೇಯ ಉಪನಿಷತ್ತು :** ಮೂರು ಅಧ್ಯಾಯಗಳಿಂದ ಕೂಡಿರುವ ಈ ಉಪನಿಷತ್ತು ಗಾತ್ರದಲ್ಲಿ ದೊಡ್ಡದೇನೂ ಅಲ್ಲ. ಹಾಗೆಯೇ ವಿಷಯವಿಸ್ತಾರದಲ್ಲೂ ಕೂಡ ವಿಶೇಷ ಮಹತ್ವಪೂರ್ಣವಾದುದೂ ಅಲ್ಲ. ಹಾಗಿದ್ದರೂ ಕೂಡ ಆತ್ಮದ ವಿಚಾರವಾಗಿ ಕೆಲವು ಪ್ರಶ್ನೆಗಳು. ಅದಕ್ಕೆ ಉತ್ತರಗಳು ಈ ಉಪನಿಷತ್ತಿನಲ್ಲಿದ್ದು ಇದರಲ್ಲಿ ಸೃಷ್ಟಿ, ಮಾನವ, ಬ್ರಹ್ಮಸ್ವರೂಪ ಇತ್ಯಾದಿ ವಿಷಯಗಳ ನಿರೂಪಣೆಯು ಸೇರಿರುತ್ತದೆ. ಇದು ಋಕ್ ಶಾಖೆಯ ಐತರೇಯ ಆರಣ್ಯಕದ ಭಾಗವಾಗಿದೆ. ಇದು ಐತರೇಯ ಆರಣ್ಯಕಕ್ಕೆ ಸೇರಿದುದಾದುದರಿಂದ ಐತರೇಯ ಉಪನಿಷತ್ ಎಂದು ಹೆಸರನ್ನು ಪಡೆದಿರುತ್ತದೆ.

**ತೈತ್ತಿರೀಯ ಉಪನಿಷತ್ತು :** ಉಪನಿಷತ್ತುಗಳ ಸಾಲಿನಲ್ಲಿ ತೈತ್ತಿರೀಯ ಉಪನಿಷತ್ತು ವಿಶಿಷ್ಟವಾದ ಯೋಗ್ಯತೆ ಮತ್ತು ವಿಷಯಸಂಪತ್ತುಗಳಿಂದ ಕೂಡಿರುತ್ತದೆ. ಇದು ಯಜುರ್ವೇದ ತೈತ್ತಿರೀಯ ಆರಣ್ಯಕಕ್ಕೆ ಸೇರಿದ್ದು ಮೂರು ಅಧ್ಯಾಯಗಳಿಂದ ಕೂಡಿರುತ್ತದೆ. ತೈತ್ತಿರೀಯ ಆರಣ್ಯಕಕ್ಕೆ ಸೇರಿದುದಾಗಿರುವುದರಿಂದ ಈ ಉಪನಿಷತ್ತಿಗೆ ತೈತ್ತಿರೀಯ ಉಪನಿಷತ್ ಎಂಬ ಹೆಸರುಬಂದಿರುತ್ತದೆ. ಬ್ರಹ್ಮ ಎಂದರೇನು ?— ಎಂಬ ವಿಚಾರವಾಗಿ ನಿರ್ದಿಷ್ಟವಾದ ವಿವರಣೆಯನ್ನು ನೀಡಿ ನಿಶ್ಚಯವಾದ ನಿಲವನ್ನು ಸ್ಪಷ್ಟಪಡಿಸಿ, ಬ್ರಹ್ಮ ಎಂದರೆ ಆನಂದ, ಆನಂದವೇ ಬ್ರಹ್ಮ ಎಂಬುದಾಗಿ ಉದ್ಘೋಷಿಸಿರುವುದೇ ಈ ಉಪನಿಷತ್ತಿನ ಹಿರಿಮೆ ಹಾಗೂ ವೈಶಿಷ್ಟ್ಯವಾಗಿದೆ. ಮಾನವನು ಜೀವ ಜಗತ್ತು ಆತ್ಮ—ಇವುಗಳ ವಿಚಾರವಾಗಿ ಇಂದೂ ಕೂಡ ಪರಿಶೋಧನೆ ಸಂಶೋಧನೆಗಳನ್ನು ನಡೆಸುತ್ತಿದ್ದಾನೆ. ಆದರೆ ಈ ಉಪನಿಷತ್ತು ಘೋಷಿಸಿರುವ ಬ್ರಹ್ಮವೆಂದರೆ ಆನಂದ, ಆನಂದವೇ ಬ್ರಹ್ಮ ಎಂಬ ಸಿದ್ಧಾಂತವನ್ನು ಮೀರಿ ಮಾನವನ ಜ್ಞಾನ ಬೆಳೆದಿಲ್ಲ ಎನ್ನುವುದು ಇಲ್ಲಿ ಸ್ಮರಣೀಯವಾದ ಸಂಗತಿಯಾಗಿದೆ. ಪರತತ್ತ್ವವೇ ಬ್ರಹ್ಮ ಎಂದು ಹೇಳಿ ಬ್ರಹ್ಮದಿಂದ ಜೀವ ಜಗತ್ತು ಅನ್ನ ಅಂತಃಕರಣ ಜ್ಞಾನ ಇವುಗಳೆಲ್ಲಾ ಹುಟ್ಟಿ ಎಲ್ಲವೂ ಬ್ರಹ್ಮ ಎಂದು ಘೋಷಿಸಿ ಬ್ರಹ್ಮವೇ ಆನಂದ, ಆನಂದವೇ ಬ್ರಹ್ಮ ಎಂಬ ಸಿದ್ಧಾಂತವನ್ನು ಸ್ಪಷ್ಟೀಕರಿಸಿ ವಿಸ್ತಾರವಾಗಿ ಈ ವಿಚಾರಗಳ ಕುರಿತಾಗಿ ವಿವರಣೆಯನ್ನು ಈ ಉಪನಿಷತ್ತಿನಲ್ಲಿ ನೀಡಲಾಗಿದೆ. ಇದರಲ್ಲಿ ಜಗತ್ತು, ಜೀವ, ಪಂಚಕೋಶಗಳು— ಇವುಗಳ ಸಂಬಂಧವೇನು, ಬ್ರಹ್ಮ ಇವುಗಳೆಲ್ಲದರಲ್ಲೂ ಹೇಗೆ ಸಂಬಂಧವನ್ನು ಪಡೆದು ಸೇರಿದೆ ಎಂಬ ವಿಚಾರಸರಣಿಯ ಅರ್ಥಸಂಪತ್ತು, ವಿವೇಚನಾರೀತಿ, ನಿರೂಪಣಾಕ್ರಮ ನಿಜಕ್ಕೂ ಅನುಪಮವಾದುದು,

ತೈತ್ತಿರೀಯ ಉಪನಿಷತ್ತಿನಲ್ಲಿ ಕಂಡುಬರುವ ಇನ್ನೊಂದು ಮಹತ್ವಪೂರ್ಣ ಅಂಶ ವೆಂದರೆ ಗುರುಕುಲ ವಿದ್ಯಾಭ್ಯಾಸ ಮುಗಿಸಿ ಮನೆಗೆ ಮರಳುವ ಸ್ನಾತಕನಿಗೆ (ವಿದ್ಯಾಭ್ಯಾಸ ಮುಗಿಸಿದ ಪದವೀಧರ ವಿದ್ಯಾರ್ಥಿಗೆ) ನೀಡಿರುವ ಜೀವನೋಪದೇಶಗಳಾಗಿವೆ. ಈ ಜಗತ್ತಿನಲ್ಲಿ ವಿದ್ಯಾವಂತನಾಗಿ ತನ್ನ ಧರ್ಮವನ್ನು ಪರಿಪಾಲಿಸಿಕೊಂಡು ಹೇಗ ಬದುಕಬೇಕು ಎಂಬ ತಿಳುವಳಿಕೆಗಾಗಿ ನೀಡಿರುವ ಸ್ನಾತಕ ಉಪದೇಶ—ಪದವೀಪ್ರದಾನ ಸಮಾರಂಭದ ಉಪದೇಶಗಳು ಜೀವನಕ್ಕೆ ಅತ್ಯಂತ ಉಪಯುಕ್ತವಾದ ಮಾರ್ಗದರ್ಶಕ ನುಡಿಗಳಾಗಿವೆ. ಜೀವನ ಎಂದರೆ ಧರ್ಮ–ಅರ್ಥ–ಕಾಮ-ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಸಾಧಿಸುವ ಒಂದು ಸಾಧನ ಎನ್ನುವ ಹಿಂದೂಧರ್ಮದ ತತ್ತ್ವಸಾರವು ಈ ಸ್ನಾತಕೋತ್ತರ ಉಪದೇಶಗಳಲ್ಲಿ ಅಡಕವಾಗಿದೆ. ಜೀವನದ ಪರಮಗುರಿ ಆತ್ಮಸಾಕ್ಷಾತ್ಕಾರವೆಂದು ಸಾರುವ ಹಿಂದೂಧರ್ಮ ಜೀವನದ ದಿನನಿತ್ಯದ ಆಗುಹೋಗುಗಳು, ಇಹಲೋಕದ ಬಾಳುವೆ ಇವುಗಳಿಗೆ ಎಷ್ಟೊಂದು ಮಹತ್ವ ನೀಡಿದೆ ಎಂಬುದು ಈ ಉಪದೇಶಗಳನ್ನು ಪರಿಶೀಲಿಸಿದಾಗ ಸ್ಪಷ್ಟವಾಗುತ್ತದೆ. ಸತ್ಯ ಮತ್ತು ಧರ್ಮ, ತಾಯಿತಂದೆಯರು, ಗುರು ಅತಿಥಿಗಳು, ಇವರ ಸ್ಥಾನಗೌರವಗಳು—ಇತ್ಯಾದಿ ಅನೇಕ ಮುಖ್ಯವಾದ ವಿಚಾರಗಳ ಕುರಿತಾಗಿ—ತೈತ್ತಿರೀಯ ಉಪನಿಷತ್ತಿನ ಈ ಉಪದೇಶಗಳಲ್ಲಿ ನಿಶ್ಚಯದ ನಿಲವು, ಸ್ಪಷ್ಟವಾದ ಮಾರ್ಗದರ್ಶನಗಳು ನೀಡಲ್ಪಟ್ಟಿವೆ. ಹೀಗೆ ತೈತ್ತಿರೀಯ ಉಪನಿಷತ್ತು ಜೀವನಕ್ಕೆ ವಿಶೇಷವಾದ ಬೆಳಕು, ಮಾರ್ಗದರ್ಶನಗಳನ್ನು ನೀಡುವ ಸಮರ್ಥ ಹಾಗೂ ಉಪಯುಕ್ತವಾದ ವೇದಭಾಗವಾಗಿರುತ್ತದೆ.

**ಛಾಂದೋಗ್ಯ ಉಪನಿಷತ್ತು :** ಈ ಉಪನಿಷತ್ತು ಸಾಮವೇದದ ಕೌಥುಮ ಶಾಖೆಗೆ ಸಂಬಂಧಿಸಿದ್ದು ಛಾಂದೋಗ್ಯ ಬ್ರಾಹ್ಮಣಕ್ಕೆ ಸೇರಿರುತ್ತದೆ. ಸಾಮವೇದಿಗಳಾಗಿರುವ ಛಂದೋಗರ (ವೇದಗಾಯಕರ) ಉಪನಿಷತ್ತು ಇದಾಗಿರುವುದರಿಂದ ಇದಕ್ಕೆ ಛಾಂದೋಗ್ಯ ಉಪನಿಷತ್ತು ಎಂಬ ಹೆಸರುಬಂದಿರುತ್ತದೆ ಎಂದು ಒಂದು ಅಭಿಪ್ರಾಯವಿರುತ್ತದೆ. ಉಪನಿಷತ್ತುಗಳಲ್ಲೆಲ್ಲಾ ಅತ್ಯಂತ ವಿಸ್ತಾರವಾದ ಉನಿಷತ್ತು ಎರಡೇ ಇದ್ದು ಇದು ಅವರಲ್ಲಿ ಒಂದಾಗಿರುತ್ತದೆ. ವಿಷಯಸಂಪತ್ತು, ನಿರೂಪಣಾಶೈಲಿ, ಅರ್ಥಗಾಂಭೀರ್ಯ, ಎಲ್ಲಾ ದೃಷ್ಟಿಗಳಿಂದಲೂ ತುಂಬಾ ಶ್ರೇಷ್ಠವಾದ ಉಪನಿಷತ್ತು ಛಾಂದೋಗ್ಯ ಎನ್ನುವುದು ಸರ್ವಸಮ್ಮತವಾದ ವಿಚಾರವಾಗಿದೆ. ಮುಖ್ಯವಾಗಿ ಎಂಟು ಅಧ್ಯಾಯಗಳಿಂದ ಕೂಡಿರುವ ಈ ಉಪನಿಷತ್ತಿನಲ್ಲಿ ಸಾಕಷ್ಟು ಕಥೆಗಳು, ತೀರಾ ಸಾಮಾನ್ಯವಾದ ವಿಚಾರಗಳೂ ಸಹ ಸೇರಿವೆ ಎಂಬುದು ನಿಜಾಂಶವಾಗಿರುತ್ತದೆ. ಹಾಗೆಯೇ ಉದ್ಗೀಥದ ಉಪಾಸನೆ, ಸತ್ಯಕಾಮ ಜಾಬಾಲನ ವೃತ್ತಾಂತ. ಉಪಕೋಸಲವಿದ್ಯೆ, ಪಂಚಾಗ್ನಿವಿದ್ಯೆ, ನಾರದರಿಗೆ ಸನತ್ಕುಮಾರರು ಉಪದೇಶ ನೀಡಿದ ಭೂಮವಿದ್ಯೆ, ವೈಶ್ವಾನರವಿದ್ಯೆ ಇತ್ಯಾದಿ ಮಹತ್ಪೂರ್ಣವಾದ ವಿಷಯಗಳನ್ನು ಒಳಗೊಂಡಿರುವುದು ಈ ಉಪನಿಷತ್ತಿನ ಹೆಚ್ಚುಗಾರಿಕೆಯಾಗಿರುತ್ತದೆ. ಶ್ವೇತಕೇತು ಎಂಬ ಋಷಿಕುಮಾರನಿಗೆ ತನ್ನ ತಂದೆಯಿಂದ ದೊರೆತ ಆತ್ಮವಿದ್ಯಾ ಉಪದೇಶದ ವಿವರಣೆ ಸಂಭಾಷಣಾಭಾಗಗಳು ಈ ಉಪನಿಷತ್ತಿನಲ್ಲಿ ಅತ್ಯಂತಮುಖ್ಯವಾದ ಭಾಗಗಳಾಗಿರುತ್ತವೆ. "ತತ್ತ್ವಮಸಿ ಶ್ವೇತಕೇತೋ"

ಎಂಬ ಮಹಾವಾಕ್ಯದ ವಿಸ್ತಾರವಾದ ವಿವರಣೆಗಳಿಂದ ಆತ್ಮವಿಜ್ಞಾನವನ್ನು ಸುಸ್ಪಷ್ಟವಾಗಿ ವಿವರಿಸಿರುವುದು ಈ ಉಪನಿಷತ್ತಿನಲ್ಲಿ ಕಂಡುಬರುವ ವೈಶಿಷ್ಟ್ಯವಾಗಿರುತ್ತದೆ. ಅಧ್ಯಾತ್ಮ ಮತ್ತು ಅಧಿದೈವ ವಿಚಾರಗಳ ಕುರಿತಾದ ಸುದೀರ್ಘ ಪ್ರಸ್ತಾಪ, ವಿವರಣೆಗಳನ್ನು ಒಳಗೊಂಡಿರುವ ಛಾಂದೋಗ್ಯ ಉಪನಿಷತ್ತು ಅಧ್ಯಾತ್ಮವಿದ್ಯೆಯ ಅತುಲನೀಯವಾದ ಜ್ಞಾನಭಂಡಾರ ಎಂದರೆ ಅತಿಶಯೋಕ್ತಿಯಾಗಲಾರದು. ಈ ಉಪನಿಷತ್ತಿನಲ್ಲಿ ಕಂಡು ಬರುವ ಉದ್ಗೀಥ ಉಪಾಸನೆ, ಆದಿತ್ಯ ಉಪಾಸನೆ, ಷೋಡಶಕಲವಿದ್ಯೆ, ಉಪಕೋಸಲ ವಿದ್ಯೆ, ಪಂಚಾಗ್ನಿವಿದ್ಯೆ—ಇವುಗಳೆಲ್ಲಾ ಗಹನವಾದ ಅಧ್ಯಾತ್ಮತತ್ತ್ವಾರ್ಥದಿಂದ ಕೂಡಿದ್ದು ತುಂಬಾ ಮನನೀಯವಾದ ವಿಚಾರಗಳಾಗಿವೆ. “ಇರುವುದೆಲ್ಲವೂ ಬ್ರಹ್ಮ, ಎಲ್ಲವೂ ಬ್ರಹ್ಮದಿಂದಲೇ ಹುಟ್ಟಿದ್ದು ಅದರಿಂದಲೇ ಬಾಳುತ್ತಿದ್ದು ಅದಕ್ಕೆ ಹಿಂತಿರುಗಿ ಹೋಗುತ್ತವೆ. ಅದನ್ನು ಸಮತ್ವಮನಸ್ಸಿನಿಂದ ಪೂಜಿಸಿ” (೨.೧೪.೧) ಎಂಬ ಮಾತು ಅನುಸಂಧಾನಕ್ಕೆ ಅತ್ಯಂತ ಯೋಗ್ಯವಾಗಿದ್ದು ಆತ್ಮತತ್ತ್ವದ ನಿಗೂಢರಹಸ್ಯವನ್ನು ಇದರಲ್ಲಿ ಸ್ಪಷ್ಟವಾಗಿ ಬಿಡಿಸಿ ಹೇಳಿದಂತಿದೆ. ಐದನೇ ಅಧ್ಯಾಯದಲ್ಲಿ ಆತ್ಮ ಮತ್ತು ಇಂದ್ರಿಯಗಳ ಸಂವಾದ, ಆತ್ಮದ ಹಿರಿಮೆ, ನಾರದ-ಸನತ್ಕುಮಾರರ ಸಂವಾದದಲ್ಲಿ ಬರುವ ಆತ್ಮದ ಅಮರತ್ವ-ಸರ್ವಾಂತರ್ಯಾಮಿತ್ವದ ವಿವರಗಳು ಮತ್ತು ಎಂಟನೇ ಅಧ್ಯಾಯದಲ್ಲಿ ಬರುವ ದೇಹ ಮತ್ತು ಆತ್ಮದ ವಿಚಾರಗಳು ಅರ್ಥಸಂಪದ್ಭರಿತವಾಗಿರುವುದು ಮಾತ್ರ ವಲ್ಲದೆ ಗಹನವಾದ ಅಧ್ಯಾತ್ಮತತ್ತ್ವಗಳ ಪ್ರತಿಪಾದನೆಗಳನ್ನು ಒಳಗೊಂಡಿವೆ. ಹೀಗೆ ಛಾಂದೋಗ್ಯ ಉಪನಿಷತ್ತು ತುಂಬಾ ಮಹತ್ತಿನಿಂದ ಕೂಡಿದ ಉಪನಿಷತ್ತಾಗಿರುತ್ತದೆ ಎಂಬುದು ಈ ಮೇಲಿನ ಅಂಶಗಳಿಂದೆಲ್ಲ ಸ್ಪಷ್ಟವಾಗುತ್ತದೆ.

**ಬೃಹದಾರಣ್ಯಕ ಉಪನಿಷತ್ತು :** ಈ ಉಪನಿಷತ್ತು ಶುಕ್ಲಯಜುರ್ವೇದದ ಕಾಣ್ವ ಶಾಖೆಗೆ ಸೇರಿದುದಾಗಿದ್ದು ಉಪನಿಷತ್ತುಗಳಲ್ಲೆಲ್ಲಾ ರತ್ನಪ್ರಾಯವಾದುದು ಎಂದು ಸುಪ್ರಸಿದ್ಧವಾಗಿರುತ್ತದೆ. ಆಕೃತಿಯಿಂದಲೂ ಮಹತ್ತಾದುದರಿಂದ (ಬೃಹತ್) ಅರಣ್ಯದಲ್ಲಿ ಇದನ್ನು ಅನುವಾಚನಮಾಡತಕ್ಕದ್ದಾದುದರಿಂದ ಇದಕ್ಕೆ ಬೃಹದ್ ಆರಣ್ಯಕ ಉಪನಿಷತ್ತು ಎಂದು ಹೆಸರುಬಂದಿರುತ್ತದೆ. ಈ ಉಪನಿಷತ್ತಿನಲ್ಲಿ ಮಧುಕಾಂಡ, ಯಾಜ್ಞವಲ್ಕೀಯ (ಅಥವಾ ಮುನಿ) ಕಾಂಡ ಮತ್ತು ಖಿಲಕಾಂಡ ಎಂಬ ಕಾಂಡತ್ರಯಗಳೂ ಆರು ಅಧ್ಯಾಯ ಗಳೂ ಇವೆ. ಪ್ರಥಮಾಧ್ಯಾಯದಲ್ಲಿ ಯಜನೀಯ ಅಶ್ವರೂಪವಾಗಿರುವ ವಿರಾಟ್ಪುರುಷನ ವರ್ಣನೆ ಇದೆ. ದ್ವಿತೀಯ ಅಧ್ಯಾಯದಲ್ಲಿ ಅರಸ ಅಜಾತಶತ್ರು ಮತ್ತು ಬಾಲಾಕಿ ಇವರ ಒಳಗೆ ನಡೆದ ಆತ್ಮತತ್ತ್ವವಿಚಾರದ ಸಂಭಾಷಣೆ ಇದೆ. ಅಲ್ಲದೆ ಯಾಜ್ಞವಲ್ಕ್ಯಮಹರ್ಷಿ ಮತ್ತು ಬ್ರಹ್ಮವಾದಿನಿ ಮಹಿಳೆ ಮೈತ್ರೇಯಿ ಇವರ ಸುಪ್ರಸಿದ್ಧವಾದ ಅಧ್ಯಾತ್ಮವಿಚಾರದ ಸಂಭಾಷಣೆ ಈ ಅಧ್ಯಾಯದಲ್ಲಿ ಸೇರಿರುತ್ತದೆ. ತೃತೀಯ ಅಧ್ಯಾಯದಲ್ಲಿ ಜನಕ ಮಹಾರಾಜನ ಆಸ್ಥಾನದಲ್ಲಿ ತತ್ತ್ವಜ್ಞರೊಡನೆ ನಡೆದ ವಿಚಾರಪೂರಿತವಾದ ಆತ್ಮತತ್ತ್ವದ ಕುರಿತಾದ ಸಂಭಾಷಣೆಯು ವಿವರವಾಗಿ ಚಿತ್ರಿತವಾಗಿರುತ್ತದೆ. ಚತುರ್ಥ ಅಧ್ಯಾಯದಲ್ಲಿ ಜನಕರಾಜ ಮತ್ತು ಮಹರ್ಷಿ ಯಾಜ್ಞವಲ್ಕ್ಯರ ಒಳಗೆ ನಡೆದ ಅಧ್ಯಾತ್ಮವಿಚಾರದ ಸಂಭಾಷಣೆಯು ಚಿತ್ರಿತವಾಗಿರುತ್ತದೆ. ಪಂಚಮಾಧ್ಯಾಯದಲ್ಲಿ ವಿಶ್ವ, ಅದರ ಉತ್ಪತ್ತಿ,

ನೀತಿಯ ಚರ್ಚೆ ಇತ್ಯಾದಿಗಳು ಇದ್ದರೆ ಆರನೆಯ ಅಧ್ಯಾಯದಲ್ಲಿ ಪಂಚೇಂದ್ರಿಯಗಳ ವಿಚಾರವಾಗಿ ಸುಪ್ರಸಿದ್ಧವಾದ ರೂಪಕದ ವಿವರಣೆ ಇದೆ. ಈ ಉಪನಿಷತ್ತಿನಲ್ಲಿ ಚಿತ್ರಿತವಾಗಿರುವ ರಾಜರ್ಷಿ ಜನಕ, ಆತ್ಮದರ್ಶಿ ಮಹರ್ಷಿ ಯಾಜ್ಞವಲ್ಕ್ಯ, ತ್ಯಾಗಮಯಿ ಮಹಿಳೆ ಮೈತ್ರೇಯಿ, ಬ್ರಹ್ಮವಾದಿನಿ ಸ್ತ್ರೀ ಗಾರ್ಗಿ ಇವರುಗಳ ವ್ಯಕ್ತಿತ್ವ, ಸಂಭಾಷಣೆ, ಸಂದೇಶಗಳು ನಿಜಕ್ಕೂ ಅನುಪಮ ಮಾತ್ರವಲ್ಲದೆ ಯಶಸ್ವೀ ಜೀವನಕ್ಕೆ ಪ್ರಾಯೋಗಿಕವಾದ ಆದರ್ಶವನ್ನು ನೀಡುವಂತಿದೆ.

ಬೃಹದಾರಣ್ಯಕ ಉಪನಿಷತ್ತಿನಲ್ಲಿ ಆತ್ಮವಿದ್ಯೆಯ ವಿಚಾರವಾಗಿ ಆಮೂಲಾಗ್ರವಾದ ವಿವೇಚನೆ, ವಿವರಣೆ ಮತ್ತು ವಿಶದೀಕರಣಗಳು ಇದ್ದು ಅಧ್ಯಾತ್ಮವಿದ್ಯೆಯ ವಿಚಾರವಾಗಿ ಬೆಳಕನ್ನು ನೀಡುವುದರಿಂದ ಈ ಉಪನಿಷತ್ತು ಸರ್ವಾಂಗಸುಂದರವೂ ಸಮರ್ಥವೂ ಆಗಿದ್ದು ಸರ್ವಮಾನ್ಯವಾಗಿರುತ್ತದೆ.

**ಶ್ವೇತಾಶ್ವತರೋಪನಿಷತ್ತು :** ಈ ಉಪನಿಷತ್ತು ಯಜುರ್ವೇದದ ತೈತ್ತಿರೀಯ ಶಾಖೆಗೆ ಸೇರಿರುತ್ತದೆ. ಸುಪ್ರಸಿದ್ಧ ದಶ ಉಪನಿಷತ್ತುಗಳ ಸಾಲಿಗೆ ಸೇರಿಲ್ಲವಾದರೂ ಮುಖ್ಯವಾದ ೧೨ ಉಪನಿಷತ್ತುಗಳಲ್ಲಿ ಇದೊಂದಾಗಿದ್ದು ಪ್ರಾಚೀನವಾದುದೆಂದೂ ಸತ್ವಪೂರ್ಣವಾದುದೆಂದೂ ಮಾನ್ಯತೆಯನ್ನು ಪಡೆದಿರುತ್ತದೆ. ಶ್ವೇತಾಶ್ವತರ ಮಹರ್ಷಿಗಳು ಈ ಉಪನಿಷತ್ ಸತ್ಯವನ್ನು ಪ್ರಕಟಪಡಿಸಿರುವುದರಿಂದ ಇದಕ್ಕೆ ಅವರ ಹೆಸರನ್ನೇ ನೀಡಲಾಗಿರುತ್ತದೆ. ಇಹ–ಪರ ಎಂಬ ಎರಡು ದೃಷ್ಟಿಯಿಂದಲೂ ಜೀವನವನ್ನು ಆಮೂಲಾಗ್ರವಾಗಿ ನೋಡಿ ಸೂಕ್ತವಾದ ಹಾಗೂ ಉತ್ತಮವಾದ ಮಾರ್ಗದರ್ಶನವನ್ನು ನೀಡಿರುವುದೇ ಇದರ ವಿಶೇಷತೆಯಾಗಿದೆ. ಜೀವನ, ಗುರುಭಕ್ತಿ, ಉಪಾಸನೆ, ಕರ್ಮ, ಸೃಷ್ಟಿಯ ಕಾರಣ, ಮಾಯೆ, ಬ್ರಹ್ಮ ಎಂಬಿತ್ಯಾದಿ ಮುಖ್ಯವಾದ ಅಧ್ಯಾತ್ಮವಿಚಾರಗಳನ್ನು ವಿಸ್ತಾರವಾಗಿ ವಿಮರ್ಶಿಸಿ ಈ ಉಪನಿಷತ್ತಿನಲ್ಲಿ ವಿವರಿಸಲಾಗಿದೆ. ಹೀಗೆ ಶ್ವೇತಾಶ್ವತರವು ತುಂಬಾ ಅರ್ಥಸಂಪದ್ಭರಿತವೂ ವಿಚಾರಪೂರಿತವೂ ಅನುಷ್ಠಾನಪರವೂ ಆದ ಉಪನಿಷತ್ತಾಗಿರುತ್ತದೆ.

**ಕೌಷೀತಕ್ಯುಪನಿಷತ್ :** ಇದು ಋಗ್ವೇದಕ್ಕೆ ಸೇರಿದ ಉಪನಿಷತ್ತಾಗಿರುತ್ತದೆ. ಇದರಲ್ಲಿ ಇಂದ್ರಿಯಾತೀತವಾದ ಪರತತ್ತ್ವವಿಚಾರಗಳು, ಆತ್ಮ ಮತ್ತು ಇಂದ್ರಿಯಗೋಚರವಾದ ಪ್ರಪಂಚ—ಈ ವಿಚಾರವಾಗಿ ಪ್ರಸ್ತಾಪವು ಯಥೋಚಿತವಾಗಿ ಮಾಡಲ್ಪಟ್ಟು ಸೂಕ್ತವಾದ ವಿವರಣೆಯು ನೀಡಲ್ಪಟ್ಟಿರುತ್ತದೆ. ದ್ವಾದಶ ಉಪನಿಷತ್ತುಗಳ ಸಾಲಿನಲ್ಲಿ ಇದಕ್ಕೆ ಸ್ಥಾನ ದೊರೆತಿರುವುದೇ ಈ ಉಪನಿಷತ್ತಿನ ಯೋಗ್ಯತೆಗೆ ಸರಿಯಾದ ಸಾಕ್ಷ್ಯವಾಗಿರುತ್ತದೆ.

ಹೀಗೆ ೧೦೮ ಉಪನಿಷತ್ತುಗಳಲ್ಲಿ ಹನ್ನೆರಡು ಗಣನೀಯವಾದ ಉಪನಿಷತ್ತುಗಳಾಗಿವೆ. ಅವುಗಳಲ್ಲಿ ಕೊನೆಯ ಎರಡನ್ನುಳಿದು ಹತ್ತು ಉಪನಿಷತ್ತುಗಳು ಮುಖ್ಯವಾದವುಗಳಾಗಿವೆ. ಉಪನಿಷತ್ತುಗಳಲ್ಲಿ ಆತ್ಮ, ಜೀವ, ಸೃಷ್ಟಿ, ಸೃಷ್ಟಿಕರ್ತ ಇತ್ಯಾದಿ ಶಬ್ದಗಳ ಕೇವಲ ಪಟ್ಟಿ ಪರಿಚಯವಿರದೆ ವಿಸ್ತಾರವಾದ ಹಾಗೂ ಯುಕ್ತಿಸಮ್ಮತವಾದ ರೀತಿಯ ವಿವರಣೆಗಳಿರುವುದು ಅವುಗಳ ವೈಶಿಷ್ಟ್ಯ ಹಾಗೂ ಹೆಚ್ಚುಗಾರಿಕೆಯಾಗಿದೆ.

**ಪ್ರಸ್ಥಾನತ್ರಯ :** ಉಪನಿಷತ್ತಿನಲ್ಲಿ ಹೇಳಿದ ವಿಚಾರಗಳನ್ನೆಲ್ಲಾ ಒಂದು ಸೂತ್ರರೂಪದಲ್ಲಿ ಸಂಗ್ರಹಿಸಿ ಮಹರ್ಷಿ ಬಾದರಾಯಣರು ಬ್ರಹ್ಮಸೂತ್ರಗಳು ಅಥವಾ ಶಾರೀರಿಕ

ಮೀಮಾಂಸಾ ಎಂಬ ಗ್ರಂಥವನ್ನು ರೂಪಿಸಿದರು. ಶಾರೀರಿಕ ಮೀಮಾಂಸಾ ಗ್ರಂಥವು ವೇದೋಪನಿಷತ್ತುಗಳಲ್ಲಿ ಪ್ರತಿಪಾದ್ಯವಾದ ವಿಚಾರಗಳನ್ನು ಸಂಗ್ರಹವಾಗಿ ಒಳಗೊಂಡಿದ್ದರೆ ಶ್ರೀಮದ್ ಭಗವದ್ಗೀತೆಯು ಇವುಗಳೆಲ್ಲವರ ಸಾರಸರ್ವಸ್ವವಾದ ಗ್ರಂಥವಾಗಿ ರೂಪುತಳೆಯಿತು. ಹೀಗೆ ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆ ಇವುಗಳು ಸನಾತನಧರ್ಮದ ಆಧಾರಸ್ತಂಭಗಳಂತಿರುವ ಧರ್ಮಗ್ರಂಥಗಳಾಗಿ ಇವುಗಳಿಗೆ ಒಟ್ಟಾಗಿ 'ಪ್ರಸ್ಥಾನತ್ರಯ' ಎಂದು ಹೆಸರುಬಂದಿರುತ್ತದೆ.

ಪ್ರಸ್ಥಾನ ಎಂದರೆ ಹೊರಡುವುದು, ಕರೆದೊಯ್ಯುವುದು ಎಂದು ಅರ್ಥವಾಗುತ್ತದೆ. ಆತ್ಮಸಾಕ್ಷಾತ್ಕಾರದೆಡೆಗೆ ಹೋಗುವವರಿಗೆ ದಾರಿತೋರುವ, ಕರೆದೊಯ್ಯುವ ಗ್ರಂಥವನ್ನು ಪ್ರಸ್ಥಾನಗ್ರಂಥ ಎಂದು ಹೇಳುತ್ತಾರೆ. ಅಂತಹ ಗ್ರಂಥಗಳು ಮುಖ್ಯವಾಗಿ ಮೂರು ವಿಭಾಗದಲ್ಲಿ ಸೇರಿರುವುದರಿಂದ ಅವುಗಳನ್ನು ಹಿಂದೂಧರ್ಮದಲ್ಲಿ ಪ್ರಸ್ಥಾನತ್ರಯ ಎಂದು ಹೇಳುತ್ತಾರೆ. ಆ ಮೂರು ಗ್ರಂಥಗಳು ಯಾವುವೆಂದರ : (೧) ಉಪನಿಷತ್ತು, (೨) ಬ್ರಹ್ಮಸೂತ್ರಗಳು, (೩) ಶ್ರೀಮದ್ಭಗವದ್ಗೀತೆ.

**ಉಪನಿಷತ್ತುಗಳು :** ಇವುಗಳ ಕುರಿತಾದ ವಿವರಣೆಗಳನ್ನು ಈಗಾಗಲೇ ಹೇಳಿಯಾಗಿರುತ್ತದೆ. ಉಪನಿಷತ್ತಿನಲ್ಲಿ ಜಗತ್ತು, ಸೃಷ್ಟಿ, ಬ್ರಹ್ಮ, ಆತ್ಮ ಈ ವಿಚಾರಗಳ ಕುರಿತಾಗಿ ಸಿದ್ಧಾಂತಗಳು ನಿಷ್ಕೃಷ್ಟವಾದ ರೀತಿಯಲ್ಲಿ ಪ್ರತಿಪಾದಿಸಲ್ಪಟ್ಟಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಹಾಗಾಗಿ ಉಪನಿಷತ್ತುಗಳನ್ನು ಸಿದ್ಧಾಂತಪ್ರಸ್ಥಾನ ಎಂದೂ ಕರೆಯುತ್ತಾರೆ. ಉಪನಿಷತ್ತು ಶ್ರುತಿಯಾದ್ದರಿಂದ ಅದನ್ನು ಶ್ರುತಿಪ್ರಸ್ಥಾನವೆಂದೂ ಕರೆಯುವ ವಾಡಿಕೆ ಇದೆ.

**ಬ್ರಹ್ಮಸೂತ್ರಗಳು :** ಕಾಲವು ಸರಿದಂತೆ ವೇದೋಪನಿಷತ್ತುಗಳಲ್ಲಿ ಹೇಳಿರುವ ವಿಚಾರಗಳನ್ನು ಕ್ರೋಢೀಕರಿಸಿ ಅತ್ಯಂತ ಕಡಿಮೆ ಶಬ್ದಗಳಲ್ಲಿ ಅತಿಗಹನವಾದ ಮತ್ತು ವಿಸ್ತಾರವಾದ ವಿಷಯಗಳನ್ನು ಅಂತರ್ಗತವಾಗಿಸಿ ಸೂತ್ರಗಳ ರೂಪಗಳಲ್ಲಿ ರೂಪಿಸುವ ಪರಿಪಾಠ ಆರಂಭವಾಯಿತು. ಸೂತ್ರವೆಂದರೆ ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ದೊಡ್ಡ ದೊಡ್ಡ ವಿಚಾರಗಳನ್ನು ಅಳವಡಿಸಿರುವುದು ಎಂದು ಸಾರಾಂಶವಾಗಿ ಹೇಳಬಹುದು. ವೇದೋಪನಿಷತ್ತುಗಳಲ್ಲಿನ ಗಹನವಾದ ವಿಚಾರಗಳನ್ನು ಸ್ಮರಣೆಯಲ್ಲಿ ಇಟ್ಟುಕೊಳ್ಳಲು ಮತ್ತು ಇತರರಿಗೆ ಬೋಧಿಸಲು ಉಪಯೋಗವಾಗುವುದಕ್ಕಾಗಿ, ಸೂತ್ರರೂಪದಲ್ಲಿ ಅವುಗಳನ್ನು ರೂಪಿಸುವ ಕ್ರಮ ಅಗತ್ಯವೆಂದು ಕಂಡುಬಂದಿತು. ಹೀಗೆ ರೂಪುಗೊಂಡ ಹಲವಾರು ಸೂತ್ರಗಳನ್ನೆಲ್ಲಾ ಸಂಗ್ರಹಿಸಿ ಅವುಗಳನ್ನು ಪರಿಶೀಲಿಸಿ ಅನುಕೂಲದ ವಿಭಾಗಗಳನ್ನು ಮಾಡಿ ಮಹರ್ಷಿ ಶ್ರೀವೇದವ್ಯಾಸರು (ಬಾದರಾಯಣರು) ಒಕ್ಕೂಡಿಸಿದರು. ಅದನ್ನೇ ಬ್ರಹ್ಮಸೂತ್ರಗಳು ಎಂದು ಹೇಳುವುದಾಗಿದೆ. ಬ್ರಹ್ಮಸೂತ್ರಗಳಲ್ಲಿ ಬ್ರಹ್ಮ, ಜಗತ್ತು, ಅದರ ಸೃಷ್ಟಿ, ಜೀವರ ಸ್ವರೂಪ ಇತ್ಯಾದಿ ಅಧ್ಯಾತ್ಮವಿಚಾರಗಳು ನ್ಯಾಯಸಮ್ಮತವಾದ ರೀತಿಯಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಆದ್ದರಿಂದ ಇದಕ್ಕೆ ನ್ಯಾಯಪ್ರಸ್ಥಾನ ಎಂದೂ ಹೇಳುತ್ತಾರೆ. ಸೂತ್ರಗಳಿಂದ ಕೂಡಿರುವುದರಿಂದ ಬ್ರಹ್ಮಸೂತ್ರಗಳನ್ನು ಸೂತ್ರಪ್ರಸ್ಥಾನ ಎಂದು ಕರೆಯುತ್ತಾರೆ. ಹಾಗೆಯೇ ಬ್ರಹ್ಮಕ್ಕೆ ಸಂಬಂಧಿಸಿದ ವಿಚಾರಗಳಿಂದ ಕೂಡಿರುವುದರಿಂದ

ಇದನ್ನು ಬ್ರಹ್ಮಸೂತ್ರ ಎಂದು ಕರೆಯುವುದಾದರೆ, ಶಾರೀರನಿಗೆ ಅಥವಾ ಆತ್ಮನಿಗೆ ಸಂಬಂಧಿಸಿದ ಮೀಮಾಂಸೆ ಇದರಲ್ಲಿರುವುದರಿಂದ ಇದಕ್ಕೆ ಶಾರೀರಿಕ ಮೀಮಾಂಸೆ, ಶಾರೀರಿಕ ಸೂತ್ರ ಎಂದೂ ಹೆಸರಿದೆ. ಇದು ವೇದದ ಚರಮಸಿದ್ಧಾಂತಗಳ ನಿದರ್ಶನಾತ್ಮಕ ಗ್ರಂಥವಾದ್ದರಿಂದ ಇದಕ್ಕೆ ವೇದಸೂತ್ರ ಎಂದೂ ಹೆಸರಿದೆ. ಶ್ರುತಿಯ ಉತ್ತರ ಭಾಗದಲ್ಲಿ ಉಪಾಸನಾ ಮತ್ತು ಜ್ಞಾನಕಾಂಡವಿದೆ. ಈ ಎರಡರ ಮೀಮಾಂಸೆಯನ್ನು ಈ ಗ್ರಂಥವು ಮಾಡುವುದರಿಂದ ಇದನ್ನು 'ಉತ್ತರಮೀಮಾಂಸಾ' ಎಂದೂ ಹೇಳುತ್ತಾರೆ. ಬ್ರಹ್ಮಸೂತ್ರದ ಮೇಲೆ ಸುಪ್ರಸಿದ್ಧ ಆಚಾರ್ಯತ್ರಯರಾದ ಶ್ರೀಶಂಕರ, ಶ್ರೀರಾಮಾನುಜ, ಶ್ರೀಮಧ್ವ ಇವರುಗಳು ಭಾಷ್ಯವನ್ನು ಬರೆದಿರುತ್ತಾರೆ. ಮಾತ್ರವಲ್ಲದೆ ಇನ್ನೂ ಅನೇಕ ಮಹಾತ್ಮರೂ ಮತಪ್ರತಿಪಾದಕರೂ ಭಾಷ್ಯವನ್ನು ರಚಿಸಿರುತ್ತಾರೆ. ಇವರಲ್ಲಿ ಮುಖ್ಯವಾಗಿ ಭಾಸ್ಕರ, ಯಾದವಪ್ರಕಾಶ, ನಿಂಬಾರ್ಕ, ಕೇಶವ, ನೀಲಕಂಠ, ಬಲದೇವ, ವಲ್ಲಭ, ವಿಜ್ಞಾನಭಿಕ್ಷು ಇವರುಗಳು ಸ್ಮರಣೀಯರಾಗಿರುತ್ತಾರೆ.

ಬ್ರಹ್ಮಸೂತ್ರದಲ್ಲಿ ಇರುವ ಸೂತ್ರಗಳು ಒಟ್ಟು ೫೫೬ ಆಗಿದ್ದು ಅವುಗಳು ನಾಲ್ಕು ಅಧ್ಯಾಯಗಳ ಅಡಿಯಲ್ಲಿ ವಿಂಗಡಿಸಲ್ಪಟ್ಟಿರುತ್ತವೆ. ಪ್ರತಿ ಅಧ್ಯಾಯದಲ್ಲೂ ೪ ಪಾದಗಳೆಂಬ ವಿಭಜನೆಯಿದ್ದು ಇಡೀ ಬ್ರಹ್ಮಸೂತ್ರಗಳು ೧೬ ಪಾದವಿಭಜನೆಗಳಿಂದ ಕೂಡಿವೆ. ಅಧ್ಯಾಯ ಒಂದರಲ್ಲಿ ಉಪನಿಷತ್ತುಗಳ ವಾಕ್ಯಗಳೆಲ್ಲವೂ ಏಕಮಾತ್ರ ಪರಬ್ರಹ್ಮನ ಪ್ರತಿಪಾದನೆಯಲ್ಲಿ ಅನ್ವಯವಾಗಿವೆ ಎಂಬುದನ್ನು ಹೇಳಲಾಗಿದೆ. ಹಾಗಾಗಿ ಈ ಅಧ್ಯಾಯವನ್ನು 'ಸಮನ್ವಯ' ಅಧ್ಯಾಯ ಎಂದು ಹೇಳುತ್ತಾರೆ. ಎರಡನೆಯ ಅಧ್ಯಾಯದಲ್ಲಿ ವೇದಾಂತಕ್ಕೆ ವಿರುದ್ಧವಾದ ಪ್ರಮಾಣಾಭಾಸಗಳ ನಿರಾಕರಣೆ ನಿರೂಪಿತವಾಗಿದ್ದು ವಿರೋಧಪಕ್ಷಗಳ ವಾದಗಳನ್ನೆಲ್ಲಾ ಸವಿವರವಾಗಿ ಪರಿಶೀಲಿಸಿ ಸತ್ಯಾಂಶದ ಪ್ರತಿಪಾದನೆ ಮಾಡಲಾಗಿದೆ. ಹಾಗಾಗಿ ಈ ಅಧ್ಯಾಯವನ್ನು 'ಅವಿರೋಧ' ಅಧ್ಯಾಯ ಎನ್ನುತ್ತಾರೆ. ಮೂರನೆಯ ಅಧ್ಯಾಯದಲ್ಲಿ ಪರಬ್ರಹ್ಮನ ಪ್ರಾಪ್ತಿ, ಸಾಕ್ಷಾತ್ಕಾರಕ್ಕೆ ಸಾಧನಭೂತವಾದ ಬ್ರಹ್ಮವಿದ್ಯೆ ಹಾಗೂ ವಿವಿಧ ರೀತಿಯ ಉಪಾಸನೆಗಳ ವಿವರಗಳು ಇವೆ. ಆದುದರಿಂದ ಈ ಅಧ್ಯಾಯವನ್ನು 'ಸಾಧನ' ಅಧ್ಯಾಯ ಎಂದು ಹೇಳುತ್ತಾರೆ. ಕೊನೆಯ ಅಧ್ಯಾಯದಲ್ಲಿ ಸಾಧನೆಯ ಮೂಲಕ ದೊರಕುವ ಫಲವಾದ ಬ್ರಹ್ಮಸಾಕ್ಷಾತ್ಕಾರದ ಆನಂದದ ಕುರಿತಾಗಿ ವಿವರಣೆಗಳು ಇರುವುದಾಗಿದ್ದು ಈ ಅಧ್ಯಾಯವನ್ನು 'ಫಲ' ಅಧ್ಯಾಯ ಎಂದು ಕರೆಯುತ್ತಾರೆ.

ಬ್ರಹ್ಮಸೂತ್ರಗಳಲ್ಲಿ ವೇದೋಪನಿಷತ್ತುಗಳ ಗಹನವಾದ ಅಧ್ಯಾತ್ಮತತ್ತ್ವಗಳು ಸಣ್ಣ ಸೂತ್ರರೂಪದಲ್ಲಿದ್ದರೆ ಶ್ರೀಮದ್ ಭಗವದ್ಗೀತೆಯಲ್ಲಿ ಪುಟ್ಟ ಪುಟ್ಟ ಶ್ಲೋಕರೂಪದಲ್ಲಿ ಸುಲಭ ಸರಳ ರೀತಿಯಲ್ಲಿ ಅವುಗಳು ನಿರೂಪಿಸಲ್ಪಟ್ಟಿವೆ.

## ಶ್ರೀಮದ್ ಭಗವದ್ಗೀತೆ

ಶ್ರೀಮದ್ ಭಗವದ್ಗೀತೆಯು ಸನಾತನಧರ್ಮದ ಸಾರಸರ್ವಸ್ವವನ್ನು ಒಳಗೊಂಡಿರುವ ಮಹತ್ವಪೂರ್ಣವಾದ ಗ್ರಂಥವಾಗಿರುತ್ತದೆ. ಏಳುನೂರು ಶ್ಲೋಕಗಳಿಂದ ಕೂಡಿರುವ ಕಿರಿದಾದ ಈ ಹಿರಿಯ ಕೃತಿ ಮಹರ್ಷಿ ವೇದವ್ಯಾಸರಿಂದ ಪ್ರಣೀತವಾದ ಮಹಾಭಾರತದ ಭೀಷ್ಮಪರ್ವದಲ್ಲಿ ಸೇರಿರುತ್ತದೆ. ಭಗವಾನ್ ಶ್ರೀಕೃಷ್ಣನು ಅರ್ಜುನನಿಗೆ ಕುರುಕ್ಷೇತ್ರದ

ಯುದ್ಧರಂಗದಲ್ಲಿ ನೀಡಿದ ಮಹಿಮಾನ್ವಿತವಾದ ಆತ್ಮವಿದ್ಯಾಬೋಧನೆಗಳು ಇದರಲ್ಲಿ ಅಡಕವಾಗಿವೆ. ಮಹಾಭಾರತವು ಹಿಂದೂಧರ್ಮದ ಗ್ರಂಥಗಳಲ್ಲಿ ಪಂಚಮವೇದವೆಂದು ಪ್ರಸಿದ್ಧವಾಗಿದೆ. ಅದರ ಭೀಷ್ಮಪರ್ವದಲ್ಲಿ ಅಧ್ಯಾಯ ೨೫ರಿಂದ ೪೨ರ ವರೆಗೆ ಈ ಭಗವದ್ಗೀತೆಯು ವ್ಯಾಪಿಸಿರುತ್ತದೆ. ವೇದೋಪನಿಷತ್ತುಗಳಲ್ಲಿ ಹೇಳಿರುವ ವಿಚಾರಗಳ ಸಾರಸಂಗ್ರಹಗ್ರಂಥವಾಗಿರುವ ಶ್ರೀಮದ್ ಭಗವದ್ಗೀತೆ ಹಿಂದೂಧರ್ಮದ ಕೈಪಿಡಿ, ಹಿಂದೂಗಳ ಬೈಬಲ್ ಎಂಬಿತ್ಯಾದಿ ಹೆಸರುಗಳಿಂದ ಜಗತ್ಪ್ರಸಿದ್ಧವಾಗಿರುತ್ತದೆ. ಪ್ರಾಚೀನ ಮತ್ತು ಅರ್ವಾಚೀನಕಾಲದ ಎಲ್ಲಾ ಮತಾಚಾರ್ಯರೂ ಸಂತರೂ ಭಗವದ್ಗೀತೆಯನ್ನು ಮುಕ್ತಕಂಠದಿಂದ ಹೊಗಳಿ ಅದರಲ್ಲಿ ಪ್ರತಿಪಾದಿತವಾಗಿರುವ ಸನಾತನ ಧರ್ಮದ ಅಮೂಲ್ಯ ತತ್ತ್ವಗಳನ್ನು ಮನನಮಾಡಿ ಭಗವದ್ಗೀತೆಯಿಂದ ತಮ್ಮ ಬಾಳಿಗೆ ಬೆಳಕನ್ನು ತಂದುಕೊಂಡಿದ್ದಾರೆ. ಮಾತ್ರವಲ್ಲದೆ ಗೀತೆಯ ಹಿರಿಮೆಯನ್ನು ಕಂಡುಕೊಂಡು ಮತಾಚಾರ್ಯರು, ಮಹಾತ್ಮರು ಎಲ್ಲರೂ ಗೀತೆಯ ಮೇಲೆ ಭಾಷ್ಯಗಳನ್ನು ಬರೆದಿರುತ್ತಾರೆ. ಪ್ರಸಿದ್ಧ ಮತಾಚಾರ್ಯರಾದ ಶ್ರೀಶಂಕರ, ಶ್ರೀರಾಮಾನುಜ, ಶ್ರೀಮಧ್ವ ಇವರು ಗೀತೆಯ ಮೇಲೆ ತಮ್ಮ ಸುಪ್ರಸಿದ್ಧ ಭಾಷ್ಯಗಳನ್ನು ರಚಿಸಿರುತ್ತಾರೆ. ಇತ್ತೀಚಿನ ಕಾಲದವರಲ್ಲಿ ಶ್ರೀ ಲೋಕಮಾನ್ಯ ತಿಲಕರು, ಮಹರ್ಷಿ ಅರವಿಂದರು, ಮಹಾತ್ಮಾ ಗಾಂಧೀಜಿಯವರು. ಆಚಾರ್ಯ ಶ್ರೀ ವಿನೋಬಾರವರು, ಡಾ. ರಾಧಾಕೃಷ್ಣನ್‌ರವರು ಗೀತೆಯ ಮೇಲೆ ಉಪನ್ಯಾಸ, ವ್ಯಾಖ್ಯಾನಗಳನ್ನು ಮಾಡಿರುತ್ತಾರೆ. ಭಾರತೀಯ ಜನಜೀವನದ ವಿವಿಧ ಕ್ಷೇತ್ರಗಳಲ್ಲಿ ಶ್ರೀಮದ್ ಭಗವದ್ಗೀತೆಯು ತನ್ನ ಪ್ರಭಾವವನ್ನು ಗಮನಾರ್ಹವಾದ ಹಾಗು ಪರಿಣಾಮಕಾರಿಯಾದ ರೀತಿಯಲ್ಲಿ ಬೀರಿರುತ್ತದೆ. ಪಾಶ್ಚಾತ್ಯ ಮತ್ತು ಪೌರ್ವಾತ್ಯ ರಾಷ್ಟ್ರಗಳಲ್ಲಿ ಗೀತೆಯ ಪ್ರತಿಗಳು ವಿವಿಧ ಭಾಷೆಗಳಿಗೆ ಭಾಷಾಂತರಿಸಲ್ಪಟ್ಟು ಪ್ರಚಾರಗೊಂಡಿವೆ. ಗೀತೆಯಲ್ಲಿ ಒಂದು ಕೋಮಿನ, ಒಂದು ರಾಷ್ಟ್ರದ ದೃಷ್ಟಿಗಳಿರದೆ ಅದರ ಉಪದೇಶ ವಿಶ್ವದೃಷ್ಟಿಯಿಂದ ಕೂಡಿರುವ ಕಾರಣ ಲೋಕಮಾನ್ಯಗ್ರಂಥವಾಗಿರುತ್ತದೆ.

ಗೀತೆಯಲ್ಲಿ ಮನುಷ್ಯನ ಗುಣ–ಧರ್ಮಗಳಿಗೆ ಅನುಸಾರವಾಗಿ ಅವನು ತನ್ನ ದಿನನಿತ್ಯದ ಜೀವನವನ್ನು ಉತ್ತಮವೂ ಉಪಯುಕ್ತವೂ ಆಗಿ ಹೇಗೆ ನಿರ್ವಹಿಸಬಹುದು ಎಂಬ ಬಗ್ಗೆ ಸರಿಯಾದ ಮಾರ್ಗದರ್ಶನವಿರುತ್ತದೆ. ಅದಕ್ಕೆ ಅನುಸಾರವಾಗಿ ಕರ್ಮ, ಭಕ್ತಿ, ಜ್ಞಾನ ಮತ್ತು ಧ್ಯಾನ ಎಂಬ ನಾಲ್ಕುರೀತಿಯ ಸಾಧನೆಯ ವಿವರಗಳು ಗೀತೆಯಲ್ಲಿ ಸವಿಸ್ತಾರವಾಗಿ ಹೇಳಲ್ಪಟ್ಟಿವೆ. ದೇವರ ಕುರಿತಾಗಿ ಜಗತ್ತಿನಲ್ಲಿ ವಿವಿಧ ಮತಗಳ ಮಾನವರು ತಳೆದಿರುವ ಅಭಿಪ್ರಾಯಗಳಲ್ಲಿ ಯಾವುದನ್ನೂ ಕಡೆಗಣಿಸದೆ ಹಳಿಯದೆ ಸರ್ವಧರ್ಮ-ಸರ್ವಮತ ಸಮನ್ವಯದೃಷ್ಟಿಯನ್ನು ಗೀತೆಯು ಒಳಗೊಂಡಿರುತ್ತದೆ. ಹಾಗೆಯೇ ದೇವರನ್ನು ಸೇರಲು ಇರುವ ಹಾದಿಗಳು ಅನೇಕ ಎನ್ನುತ್ತಾ ಅವುಗಳನ್ನು ಯೋಗ ಎಂದು ಕರೆದು ಸರ್ವಯೋಗ–ಸಮನ್ವಯವು ಗೀತೆಯಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. ಅದರಂತೆ ಜೀವ, ಜಗತ್ತು, ಪರಮಾತ್ಮ, ಜೀವನ, ಸುಖ, ದುಃಖ ಇತ್ಯಾದಿ ಗಹನವಾದ ವಿಶಿಷ್ಟ ವಿಚಾರಗಳ ಕುರಿತಾಗಿ ಗೀತೆಯು ತುಂಬಾ ಸಮರ್ಪಕವಾದ ರೀತಿಯಲ್ಲಿ ವಿವರಣೆ-ಮಾರ್ಗದರ್ಶನಗಳನ್ನು ನೀಡುತ್ತದೆ. ಜಗದಲ್ಲಿ ಜನ್ಮತಳೆದ ಮಾನವನು ತನ್ನ ಕೆಲಸ, ತನ್ನ ಧರ್ಮ, ತನ್ನ

ಸ್ಥಾನಮಾನಗಳನ್ನು ಬಿಟ್ಟು ಕಾಡಿಗೆ ಹೋಗಬೇಕು ಎಂದು ಗೀತೆಯು ಬೋಧಿಸುವುದಿಲ್ಲ. ಈ ಜಗದಲ್ಲಿ ತಾನಿದ್ದಲ್ಲೇ ತನ್ನ ಸ್ಥಿತಿಗಳನ್ನು ಉತ್ತಮವೂ ಉಪಯುಕ್ತವೂ ಆಗಿ ಪರಿವರ್ತಿಸಿಕೊಂಡು ಹೇಗೆ ಬದುಕಬೇಕು ಮತ್ತು ಜೀವನದ ಪರಮಗುರಿಯಾದ ಆತ್ಮಸಾಕ್ಷಾತ್ಕಾರವನ್ನು ಹೇಗೆ ಪಡೆಯಬಹುದು ಎಂಬುದರ ಕುರಿತಾದ ನಿರ್ದೇಶನ ಗಳನ್ನು ಗೀತೆಯು ನೀಡುತ್ತದೆ. ಹೀಗೆ ಜೀವನದ ದಿನನಿತ್ಯದ ಹಲವಾರು ಸಮಸ್ಯೆ ಗಳನ್ನು ಹೇಗೆ ಎದುರಿಸಬೇಕು ಎಂಬುದನ್ನು ಹೇಳುವ ಗೀತೆ ಜೀವನದ ಪರಮಗುರಿ ಆತ್ಮಸಾಕ್ಷಾತ್ಕಾರ ಎಂದು ಹೇಳಿ ಅದನ್ನು ಸರಿಯಾದ ರೀತಿಯಲ್ಲಿ ಸಾಧಿಸಲು ಬೇಕಾದ ಸಾಧನೆಯ ದಾರಿಯನ್ನು ತೋರಿಸಿರುತ್ತದೆ. ಹಾಗಾಗಿ ಗೀತೆಯನ್ನು ಜೀವನ ಧರ್ಮಶಾಸ್ತ್ರ, ಜೀವನಯೋಗಶಾಸ್ತ್ರ ಎಂದು ಹೇಳುತ್ತಾರೆ. ಪ್ರಸ್ಥಾನತ್ರಯ ಗ್ರಂಥ ಗಳಲ್ಲಿ ಒಂದಾದ ಗೀತೆಯು ಕಷ್ಟಕಾಲದಲ್ಲಿ ಕೈಹಿಡಿದು ನಡಸುವ ಆಪತ್ಬಾಂಧವ, ದುಃಖಕಾಲದಲ್ಲಿ ಸಮಾಧಾನ ನೀಡುವ ಆತ್ಮಸಖ, ಭಯದ ವೇಳೆ ಧೈರ್ಯ ನೀಡುವ ಮಿತ್ರ, ಸಮಸ್ಯೆಗಳ ಕತ್ತಲಿನಲ್ಲಿ ಪರಿಹಾರದ ಜ್ಯೋತಿಯಾಗಿದ್ದು ಅನುಪಮವಾದ ಧಾರ್ಮಿಕ ಕೃತಿರತ್ನವಾಗಿರುತ್ತದೆ. ಭಗವಂತನಾದ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿದ ದಿವ್ಯವಿಚಾರಗಳ ಕ್ರೋಢೀಕರಣವೇ ಗೀತಾಗ್ರಂಥದ ವಿಷಯವಾಗಿದೆ ಯಾದ್ದರಿಂದ ಇದನ್ನು ಭಗವಂತನ ಗೀತೆ—ಭಗವದ್ಗೀತೆ ಎಂದು ಕರೆಯುತ್ತಾರೆ. ಗೀತೆ ಎಂದರೆ (ಹೇಳಲ್ಪಟ್ಟ, ಹಾಡಲ್ಪಟ್ಟ) ಹಾಡು ಎಂದರ್ಥ, ಭಗವಂತನಿಂದ ಹಾಡಲ್ಪಟ್ಟ, ಹೇಳಲ್ಪಟ್ಟ ಉಪದೇಶಗೀತವಾದ್ದರಿಂದ ಇದನ್ನು ಗೀತೆ ಎಂದು ಹೇಳು ತ್ತಾರೆ. ಕೇಳುವವನಲ್ಲಿ ಮನೋಭಾವದ ಉದಾತ್ತತೆ ಗಾಂಭೀರ್ಯ ಪವಿತ್ರತೆಗಳನ್ನು ಉಂಟುಮಾಡಿ ಅವನಿಗೆ ಆತ್ಮಾನಂದವನ್ನುಂಟುಮಾಡುವ ಸಾಮರ್ಥ್ಯ ಯಾವ ಹಾಡಿಗೆ ಇದೆಯೋ ಅದು ಗೀತೆ, ಹಾಡು ಎಂದಾಗುತ್ತದೆ. ಭಗವದ್ಗೀತೆಯ ಉಪದೇಶಗಳು ಶ್ಲೋಕಗಳ ರೂಪದಲ್ಲಿದ್ದು ವೇದಮಂತ್ರದ ಹಾಡುಗಾರಿಕೆಯಂತೆಯೇ ಹಾಡಲು ಅನುಕೂಲವಾಗಿದ್ದು ಕೇಳುವವನ ಕಿವಿಗೆ ಇಂಪು, ಆತ್ಮಕ್ಕೆ ಆನಂದವನ್ನುಂಟುಮಾಡುವ ಸಾಮರ್ಥ್ಯವನ್ನು ಪಡೆದಿವೆ. ಬದುಕಿಗೆ ಸಂತೋಷ, ಮಾರ್ಗದರ್ಶನಗಳನ್ನು ನೀಡುವ ದಿವ್ಯಗೀತೆಯು ಶ್ರೀಮದ್ ಭಗವದ್ಗೀತೆಯಾಗಿರುತ್ತದೆ.

ಶ್ರೀಮದ್ ಭಗವದ್ಗೀತೆಯಲ್ಲಿ ಒಟ್ಟು ೧೮ ಅಧ್ಯಾಯಗಳಿವೆ. ಈ ಅಧ್ಯಾಯ ಗಳಲ್ಲಿ ಒಂದೊಂದು ಅಧ್ಯಾಯವು ಒಂದೊಂದು ವಿಧದ ವಿಚಾರಗಳಿಂದ ಕೂಡಿದ್ದು ಎಲ್ಲವೂ ಜೀವನಕ್ಕೆ ಶಕ್ತಿ-ಭರವಸೆ-ಬೆಳಕುಗಳನ್ನು ನೀಡುವವುಗಳಾಗಿವೆ.

**ಅಧ್ಯಾಯ ೧ :** ಇದನ್ನು 'ಅರ್ಜುನವಿಷಾದಯೋಗ' ಎಂದು ಕರೆಯಲಾಗಿದೆ. ಅರ್ಜುನನು ಕುರುಕ್ಷೇತ್ರದ ಸಮರಾಂಗಣದಲ್ಲಿ ಯುದ್ಧಸನ್ನದ್ಧನಾದಾಗ ತನ್ನ ಎದುರಿನ ಕುರುಸೇನೆಯನ್ನು ನೋಡುತ್ತಾನೆ. ಆಗ ಅವನು ತನ್ನ ಬಂಧುಬಳಗದವರನ್ನು ಕಂಡು ಅವರನ್ನೆಲ್ಲಾ ಯುದ್ಧದಲ್ಲಿ ಕೊಲ್ಲುವುದು ತರವಲ್ಲ, ಅದರಿಂದ ದೊರೆಯುವ ಸುಖ ಸುಖವಲ್ಲ ; ಹೀಗೆಣಿಸಿ ತನ್ನ ಬಂಧುಬಳಗದವರ ಕೊಲೆಮಾಡಬೇಕಲ್ಲ ಎಂದು ಶೋಕ ಯುಕ್ತನಾಗಿ ತಾನು ಯುದ್ಧಮಾಡುವುದಿಲ್ಲ ಎಂದು ತನ್ನ ಸಾರಥಿ ಶ್ರೀಕೃಷ್ಣನೊಡನೆ

ಹೇಳುತ್ತಾನೆ. ಈ ವಿವರಗಳೆಲ್ಲಾ ಗೀತೆಯ ಈ ಪ್ರಥಮ ಅಧ್ಯಾಯದಲ್ಲಿ ಅಡಕವಾಗಿವೆ.

ಅಧ್ಯಾಯ ೨. ಇದನ್ನು 'ಸಾಂಖ್ಯಯೋಗ' ಎಂದು ಕರೆಯಲಾಗಿದೆ. ಸಂಶಯಾತ್ಮನೂ ಕರ್ತವ್ಯಪರಾಙ್ಮುಖನೂ ಅಧೈರ್ಯದಿಂದ ಕೂಡಿದವನೂ ಆದ ಅರ್ಜುನನಿಗೆ ಶ್ರೀ ಕೃಷ್ಣನು ಸರಿಯಾದ ಮಾರ್ಗದರ್ಶನ ನೀಡಿರುವುದು ಈ ಅಧ್ಯಾಯದಲ್ಲಿ ಚಿತ್ರಿತವಾಗಿದೆ. ಸಾಂಖ್ಯಯೋಗ, ಕ್ಷಾತ್ರಧರ್ಮದ ಅನುಸಾರವಾಗಿ ಯುದ್ಧ ಮಾಡುವ ಅಗತ್ಯ, ಸ್ವಕರ್ಮದ ವಿಚಾರ, ನಿಷ್ಕಾಮಕರ್ಮದ ವಿವರಣೆ, ಆತ್ಮಕ್ಕೂ ದೇಹಕ್ಕೂ ಇರುವ ಸಂಬಂಧ, ಹುಟ್ಟುಸಾವುಗಳ ಸ್ವರೂಪ, ಆತ್ಮದ ಅಮರತ್ವ, 'ಸ್ಥಿತಪ್ರಜ್ಞ'ನ ಎಂದರೆ ಸ್ಥಿರಬುದ್ಧಿಯ ಪುರುಷನ ಲಕ್ಷಣ ಮತ್ತು ಮಹಿಮ ಇತ್ಯಾದಿ ಅನೇಕ ಮಹತ್ವವಾದ ವಿಚಾರಗಳ ಕುರಿತಾಗಿ ಸೂಕ್ತವಾದ ವಿವರಣೆಯು ಗೀತೆಯ ಈ ಎರಡನೇ ಅಧ್ಯಾಯದಲ್ಲಿ ನಿರೂಪಿಸಲ್ಪಟ್ಟಿದೆ.

ಅಧ್ಯಾಯ ೩ : ಇದನ್ನು 'ಕರ್ಮಯೋಗ' ಎಂದು ಹೆಸರಿಸಲಾಗಿದೆ. ಪ್ರಪಂಚದಲ್ಲಿ ನಿಷ್ಕಾಮಭಾವದಿಂದ ಹೇಗೆ ಕರ್ಮವನ್ನು ಆಚರಿಸಬೇಕು, ಕರ್ಮಯೋಗ ಎಂದರೇನು, ಜ್ಞಾನಯೋಗಕ್ಕೂ ಅದಕ್ಕೂ ಇರುವ ವ್ಯತ್ಯಾಸ, ಅನಾಸಕ್ತಿಭಾವದಿಂದ ಜೀವನದಲ್ಲಿ ಕೆಲಸಕಾರ್ಯಗಳನ್ನು ಮಾಡುವುದರ ಶ್ರೇಷ್ಠತೆ—ಇವುಗಳ ನಿರೂಪಣೆಯು ಈ ತೃತೀಯ ಅಧ್ಯಾಯದಲ್ಲಿದೆ. ಮಾತ್ರವಲ್ಲದೆ, ಯಜ್ಞಾದಿಕರ್ಮಗಳನ್ನು ಮಾಡುವ ಆವಶ್ಯಕತೆ, ಅಜ್ಞಾನಿ ಮತ್ತು ಜ್ಞಾನಿಯ ಲಕ್ಷಣ, ಕಾಮನಿರೋಧ ಇತ್ಯಾದಿ ವಿಚಾರಗಳ ಬಗೆಗೆ ವಿವರಣೆಗಳಿವೆ.

ಅಧ್ಯಾಯ ೪ : ಈ ಅಧ್ಯಾಯದ ಹೆಸರು 'ಜ್ಞಾನಕರ್ಮಸಂನ್ಯಾಸಯೋಗ'. ಈ ಅಧ್ಯಾಯದಲ್ಲಿ ಭಗವಂತನ ಸಗುಣಸಾಕಾರತೆಯ ವಿಚಾರ, ನಿಷ್ಕಾಮಕರ್ಮಯೋಗದ ವಿಷಯ, ಜ್ಞಾನದ ಮಹಿಮೆ, ಯೋಗಿ, ಮಹಾತ್ಮರ ವಿಚಾರ ಇತ್ಯಾದಿ ವಿಷಯಗಳು ಅಡಕವಾಗಿವೆ.

ಅಧ್ಯಾಯ ೫ : ಈ ಅಧ್ಯಾಯದ ಹೆಸರು 'ಸಂನ್ಯಾಸಯೋಗ'. ಇದರಲ್ಲಿ ಸಾಂಖ್ಯ ಯೋಗ ಮತ್ತು ನಿಷ್ಕಾಮಕರ್ಮಯೋಗದ ನಿರ್ಣಯ, ಅವುಗಳ ಲಕ್ಷಣ ಮತ್ತು ಮಹಿಮೆ, ಜ್ಞಾನಯೋಗದ ವಿಚಾರ ಮತ್ತು ಭಕ್ತಿಸಹಿತ ಧ್ಯಾನಯೋಗದ ವರ್ಣನೆಗಳು ಸೇರಿರುತ್ತವೆ.

ಅಧ್ಯಾಯ ೬ : ಇದನ್ನು 'ಧ್ಯಾನಯೋಗ' ಎಂದು ಕರೆಯಲಾಗಿದೆ. ಕರ್ಮಯೋಗ, ಕರ್ಮಸಂನ್ಯಾಸ, ಯೋಗಾರೂಢ ಪುರುಷನ ಲಕ್ಷಣ, ಆತ್ಮಸಾಕ್ಷಾತ್ಕಾರಕ್ಕೆ ಪ್ರೇರಣೆ, ಧ್ಯಾನಯೋಗದ ವಿಸ್ತಾರವಾದ ವಿವರಣೆ, ಮನೋನಿಗ್ರಹದ ವಿಷಯ, ಯೋಗಭ್ರಷ್ಟ ಪುರುಷನ ಗತಿಯ ವಿಚಾರ, ಧ್ಯಾನಯೋಗದ ಮಹಿಮೆ ಇತ್ಯಾದಿ ವಿಚಾರಗಳಿರುತ್ತವೆ.

ಅಧ್ಯಾಯ ೭ : ಇದರ ಹೆಸರು 'ಜ್ಞಾನವಿಜ್ಞಾನಯೋಗ' ಎಂದಾಗಿದೆ. ಈಶ್ವರನ ಲಕ್ಷಣಗಳು, ವಿಜ್ಞಾನಸಹಿತವಾಗಿ ಜ್ಞಾನದ ಲಕ್ಷಣ, ಅನ್ಯದೇವತೆಗಳ ಉಪಾಸನಾವಿಚಾರ, ಭಗವದ್ಭಕ್ತರ ವಿಚಾರ, ಭಗವಂತನ ಅಪರ ಮತ್ತು ಪರಪ್ರಕೃತಿ ವಿಚಾರ, ಭಗವಂತನು ಚರಾಚರ ವಸ್ತುಗಳಲ್ಲಿ ಹೇಗೆ ಸೇರಿರುತ್ತಾನೆ ಎಂಬ ವಿಷಯ, ನಾಲ್ಕು ವಿಧದ ಭಕ್ತರ ಲಕ್ಷಣಗಳು ಇತ್ಯಾದಿ ವಿಚಾರಗಳು ಈ ಅಧ್ಯಾಯದಲ್ಲಿ ಅಡಕವಾಗಿರುತ್ತವೆ.

ಅಧ್ಯಾಯ ೮ : ಈ ಅಧ್ಯಾಯದ ಹೆಸರು 'ಅಕ್ಷರಬ್ರಹ್ಮಯೋಗ', ಇದರಲ್ಲಿ ಬ್ರಹ್ಮ, ಅಧ್ಯಾತ್ಮ, ಕರ್ಮ ಇತ್ಯಾದಿಯಾಗಿ ಅರ್ಜುನನು ಕೃಷ್ಣನಲ್ಲಿ ಕೇಳಿದ ಏಳು ಪ್ರಶ್ನೆಗಳಿಗೆ ಉತ್ತರ, ಜೀವಿಗಳು ಮರಣಾನಂತರ ಶುಕ್ಲ ಮತ್ತು ಕೃಷ್ಣಮಾರ್ಗಗಳಲ್ಲಿ ಹೋಗುವುದರ ವಿವರ, ಯೋಗಿಯು ಶರೀರವನ್ನು ಹೇಗೆ ತ್ಯಜಿಸುತ್ತಾನೆ ಎಂಬ ವಿಷಯ ಇತ್ಯಾದಿ ಅನೇಕ ಸಂಗತಿಗಳು ಸ್ಪಷ್ಟವಾಗಿ ವಿವರಿಸಲ್ಪಟ್ಟಿವೆ.

ಅಧ್ಯಾಯ ೯ : 'ರಾಜವಿದ್ಯಾರಾಜಗುಹ್ಯಯೋಗ' ಎಂಬುದಾಗಿ ಒಂಬತ್ತನೇ ಅಧ್ಯಾಯವನ್ನು ಕರೆಯಲಾಗಿದೆ. ಈ ಅಧ್ಯಾಯದಲ್ಲಿ ಪ್ರಕೃತಿ ಮತ್ತು ಸಗುಣಬ್ರಹ್ಮರ ಸಂಬಂಧ, ಅಜ್ಞಾನಿಗಳ ಲಕ್ಷಣ, ಸಕಾಮ ಮತ್ತು ನಿಷ್ಕಾಮ ಉಪಾಸನೆಯ ಫಲ, ನಿಷ್ಕಾಮ ಭಗವದ್ಭಕ್ತಿಯ ಮಹಿಮೆ, ಭಗವಂತನಲ್ಲಿ ಶರಣುಹೋಗುವುದರ ಫಲ ಇತ್ಯಾದಿ ವಿಚಾರಗಳು ಸೇರಿರುತ್ತವೆ.

ಅಧ್ಯಾಯ ೧೦ : ಈ ಅಧ್ಯಾಯವನ್ನು 'ವಿಭೂತಿಯೋಗ' ಎಂದು ಕರೆಯಲಾಗಿದೆ. ಭಗವಂತನು ಹೇಗೆ ಸರ್ವಚರಾಚರವಸ್ತುಗಳ ಮೂಲನಾಗಿದ್ದಾನೆ, ಅವನ ವಿಭೂತಿಗಳನ್ನು ತಿಳಿಯುವುದರಿಂದ ಹೇಗೆ ಭಕ್ತಿ ಉಂಟಾಗುತ್ತದೆ, ಬುದ್ಧಿಯೋಗದ ವಿಚಾರ, ಭಗವಂತನು ಪ್ರಪಂಚದ ಚರಾಚರವಸ್ತುಗಳಲ್ಲಿ ಹೇಗೆ ಸೇರಿರುತ್ತಾನೆ ಎಂಬ ವಿಭೂತಿವರ್ಣನೆ ಇತ್ಯಾದಿ ವಿಚಾರಗಳು ಈ ಅಧ್ಯಾಯದಲ್ಲಿ ಸೇರಿರುತ್ತವೆ.

ಅಧ್ಯಾಯ ೧೧ : 'ವಿಶ್ವರೂಪದರ್ಶನಯೋಗ' ಎಂಬುದಾಗಿ ಈ ಅಧ್ಯಾಯವನ್ನು ಕರೆಯಲಾಗಿದೆ. ಈ ಅಧ್ಯಾಯದಲ್ಲಿ ಅರ್ಜುನನು ಶ್ರೀಕೃಷ್ಣನೊಡನೆ ಭಗವಂತನ ವಿಶ್ವರೂಪ ದರ್ಶನಕ್ಕಾಗಿ ಬೇಡುವಿಕೆ, ವಿಶ್ವರೂಪದ ವರ್ಣನೆ—ಅರ್ಜುನನ ವಿಶ್ವರೂಪದರ್ಶನದ ಅನುಭವ, ಶ್ರೀಕೃಷ್ಣನ ಮೂಲಕ ವಿಶ್ವರೂಪದರ್ಶನದ ಮಹಿಮೆಯ ವಿವರಣೆ, ಭಕ್ತಿಯ ಮಹಿಮೆ, ಭಗವಂತನು ಭಕ್ತರನ್ನು ರಕ್ಷಿಸುತ್ತಾನೆ ಎಂಬ ಭರವಸೆಯ ವಿಷಯ ಇತ್ಯಾದಿ ವಿಚಾರಗಳು ಅಡಕವಾಗಿರುತ್ತವೆ.

ಅಧ್ಯಾಯ ೧೨ : ಈ ಅಧ್ಯಾಯವನ್ನು 'ಭಕ್ತಿಯೋಗ' ಎಂದು ಕರೆಯಲಾಗಿದೆ. ಇದರಲ್ಲಿ ಭಗವಂತನ ಸಾಕಾರ-ನಿರಾಕಾರ ಸ್ವರೂಪಗಳ ಉಪಾಸನೆಯ ವಿಚಾರ, ಭಗವಂತನ ಸಾಕ್ಷಾತ್ಕಾರಕ್ಕೆ ಸಾಧನಾಮಾರ್ಗ, ಭಕ್ತನ ಲಕ್ಷಣಗಳು ಇತ್ಯಾದಿ ವಿಷಯಗಳು ಸೇರಿರುತ್ತವೆ.

ಅಧ್ಯಾಯ ೧೩ : ಈ ಅಧ್ಯಾಯದ ಹೆಸರು 'ಕ್ಷೇತ್ರ-ಕ್ಷೇತ್ರಜ್ಞಯೋಗ' ಎಂದಾಗಿದೆ. ಪ್ರಕೃತಿ-ಪುರುಷ. ದೇಹ, ಪರಮಾತ್ಮ, ಭಕ್ತಿ-ಜ್ಞಾನಗಳ ಸಂಬಂಧ, ಮುಕ್ತಿ, ಕರ್ಮ, ಜೀವನದ ಆಗುಹೋಗುಗಳಿಗೂ ಪರಮಾತ್ಮನಿಗೂ ಇರುವ ಸಂಬಂಧ ಇತ್ಯಾದಿ ಅನೇಕ ಗಹನವಾದ ವಿಚಾರಗಳು ಈ ಅಧ್ಯಾಯದಲ್ಲಿ ವಿವರಿಸಲ್ಪಟ್ಟಿರುತ್ತವೆ.

ಅಧ್ಯಾಯ ೧೪ : ಈ ಅಧ್ಯಾಯವನ್ನು 'ಗುಣತ್ರಯವಿಭಾಗಯೋಗ' ಎಂದು ಹೆಸರಿಸಲಾಗಿದೆ. ಈ ಅಧ್ಯಾಯದಲ್ಲಿ ಜ್ಞಾನದ ಮಹಿಮೆ, ಅದು ಹೇಗೆ ಮುಕ್ತಿಗೆ ಸಹಾಯ ಮಾಡುತ್ತದೆ, ಸತ್ತ್ವ, ರಜಸ್ಸು ಮತ್ತು ತಮಸ್ಸು ಎಂಬ ಮೂರು ಗುಣಗಳ ವರ್ಣನೆ-ಲಕ್ಷಣಗಳು, ಈ ಗುಣತ್ರಯಗಳನ್ನು ಮೀರಿ ಗುಣಾತೀತನಾಗುವುದೇ ಮುಕ್ತಿ ಎಂಬ ವಿಚಾರ, ತ್ರಿಗುಣಾತೀತನ ಲಕ್ಷಣಗಳು ಇತ್ಯಾದಿ ಅನೇಕ ವಿಚಾರಗಳು ಸೇರಿರುತ್ತವೆ.

ಅಧ್ಯಾಯ ೧೫ : ಈ ಅಧ್ಯಾಯದ ಹೆಸರು 'ಪುರುಷೋತ್ತಮಯೋಗ'. ಈ ಅಧ್ಯಾಯದಲ್ಲಿ ಸಂಸಾರವೃಕ್ಷದ ವರ್ಣನೆ, ಭಗವಂತನ ಪ್ರಾಪ್ತಿಗೆ ಇರುವ ಉಪಾಯ, ಜೀವಾತ್ಮನ ವಿಷಯಕ್ಷರ, ಅಕ್ಷರ, ಪುರುಷೋತ್ತಮ ಇವೇ ಮೊದಲಾದ ವಿಚಾರಗಳು ಸೇರಿರುತ್ತವೆ.

ಅಧ್ಯಾಯ ೧೬ : ಈ ಅಧ್ಯಾಯದ ಹೆಸರು 'ದೈವಾಸುರ-ಸಂಪದ್ವಿಭಾಗಯೋಗ' ಎಂದಾಗಿದೆ. ಈ ಅಧ್ಯಾಯದಲ್ಲಿ ದೈವೀಸಂಪತ್ತು ಎಂದರೇನು ? ದೈವಾಸುರಸಂಪತ್ತುಗಳುಳ್ಳವರ ಲಕ್ಷಣ, ಶಾಸ್ತ್ರಗಳ ಉಪಯೋಗ ಮತ್ತು ಜೀವನದಲ್ಲಿ ಅದರ ಸ್ಥಾನ ಇತ್ಯಾದಿ ವಿಚಾರಗಳು ಸೇರಿರುತ್ತವೆ.

ಅಧ್ಯಾಯ ೧೭ : ಇದರ ಹೆಸರು 'ಶ್ರದ್ಧಾತ್ರಯವಿಭಾಗಯೋಗ'. ಶ್ರದ್ಧೆಯಲ್ಲಿ ಎಷ್ಟು ವಿಧಗಳಿವೆ ಎಂಬ ವಿವರಣೆ, ಆಹಾರದ ಶುದ್ಧಿ, ಅದರ ವಿಭಾಗಗಳು, ಮೂರು ವಿಧದ ಉಪಾಸನೆ, ಮೂರು ವಿಧದ ತಪಸ್ಸು, ಧ್ಯಾನ ಇವುಗಳ ಸ್ವರೂಪ-ಲಕ್ಷಣಗಳು, ಓಂ ತತ್ಸತ್ ಮಂತ್ರದ ಅರ್ಥ-ಪ್ರಯೋಗಗಳ ವಿವರಣೆ ಇತ್ಯಾದಿ ವಿಷಯಗಳು ಸೇರಿರುತ್ತವೆ.

ಅಧ್ಯಾಯ ೧೮ : ಶ್ರೀಮದ್ ಭಗವದ್ಗೀತೆಯ ಕೊನೆಯ ಅಧ್ಯಾಯವಾದ ಇದನ್ನು 'ಮೋಕ್ಷಸಂನ್ಯಾಸಯೋಗ' ಎಂದು ಕರೆಯಲಾಗಿದೆ. ಈ ಅಧ್ಯಾಯದಲ್ಲಿ ಸಂನ್ಯಾಸ ಮತ್ತು ತ್ಯಾಗಗಳ ಲಕ್ಷಣ-ವಿವರಣೆ, ನಾಲ್ಕು ವರ್ಣಧರ್ಮಗಳ ವಿಚಾರ, ಕರ್ಮಯೋಗ, ಕರ್ಮಸಂನ್ಯಾಸದ ವಿಷಯ, ಭಕ್ತಿ-ಜ್ಞಾನಯೋಗಗಳ ಪ್ರಸ್ತಾಪ, ಭಗವಂತನಲ್ಲಿ ಶರಣುಹೋಗುವುದರ ಮಹಿಮೆ, ಭಕ್ತ-ಭಗವಂತನ ಸಂಬಂಧ, ಗೀತೆಯ ಮಹಿಮೆ, ಗೀತಾಭ್ಯಾಸಿಗೆ ಬೇಕಾದ ಯೋಗ್ಯತೆಗಳು ಇತ್ಯಾದಿ ಅನೇಕ ವಿಚಾರಗಳು ಸೇರಿರುತ್ತವೆ.

ಹೀಗೆ ಶ್ರೀಮದ್ ಭಗವದ್ಗೀತೆಯಲ್ಲಿ ನಮ್ಮ ಜೀವನದ ಯಶಸ್ವೀ ನಿರ್ವಹಣೆಗೆ ಬೇಕಾದ ಮಾರ್ಗದರ್ಶನ ಮತ್ತು ಬೆಳಕುಗಳು ಬಹಳ ಸಮರ್ಪಕವಾದ ರೀತಿಯಲ್ಲಿ ವಿವರಿಸಲ್ಪಟ್ಟಿವೆ. ಆದುದರಿಂದ ಈ ಕಿರಿದಾದ ಬರೀ ೭೦೦ ಶ್ಲೋಕಗಳಿಂದ ಕೂಡಿರುವ ಗ್ರಂಥವು ಸರ್ವರಿಗೂ ಉಪಯುಕ್ತವಾಗುವ ಜೀವನಧರ್ಮಶಾಸ್ತ್ರಗ್ರಂಥವೆಂದು ಜಗದ್ವಿಖ್ಯಾತವಾಗಿದೆ.

**ವೇದಾಂಗಗಳು** : ವೇದಗಳ ಸಂಗ್ರಹಣೆಯ ಅನಂತರ ಜನಜೀವನದ ವಿವಿಧ ವಿಭಾಗಗಳ ಕಾರ್ಯನಿರ್ವಹಣೆಯ ಅಗತ್ಯವನ್ನು ಅನುಸರಿಸಿ ಮತ್ತೆ ಕೆಲವು ವಿಚಾರಗಳ ಸಂಗ್ರಹಣೆಯಾಯಿತು. ಅವುಗಳನ್ನು ಉಪವೇದ ಎಂದು ಹೇಳುತ್ತಾರೆ. ಉಪವೇದಗಳು ನಾಲ್ಕು ಆಗಿದ್ದು ಅವು ಯಾವುವೆಂದರೆ :

(೧) ಆಯುರ್ವೇದ, (೨) ಧನುರ್ವೇದ, (೩) ಗಾಂಧರ್ವವೇದ, (೪) ಸ್ಥಾಪತ್ಯವೇದ.

ಆಯುರ್ವೇದವು ಆಯುಸ್ಸಿಗೆ ಸಂಬಂಧಿಸಿದ್ದು ದೇಹಾರೋಗ್ಯದ ರಕ್ಷಣೆ-ಪೋಷಣೆಗಳ ವಿಚಾರಗಳಿಗೆ ಸಂಬಂಧಿಸಿದ ವೇದವಾಗಿದೆ.

ಧನುರ್ವೇದವು ಧನುಸ್ಸಿನ ಎಂದರೆ ಬಿಲ್ಲುಬಾಣಗಳ ಉಪಯೋಗದ ವಿವರಗಳನ್ನು ಒಳಗೊಂಡಿದೆ.

ಗಾಂಧರ್ವವೇದವು ಗಾಯನ ವಿಚಾರಗಳನ್ನು ಒಳಗೊಂಡ ವೇದವಾಗಿರುತ್ತದೆ.

ಸ್ಥಾಪತ್ಯವೇದವು ಅರ್ಥಶಾಸ್ತ್ರ ವಿಚಾರಗಳನ್ನು ಒಳಗೊಂಡ ವೇದವಾಗಿರುತ್ತದೆ.

ವೇದಗಳಲ್ಲಿ ಪ್ರತಿಪಾದ್ಯವಾದ ಗೂಢ ಹಾಗೂ ಗಂಭೀರವಾದ ಅರ್ಥಗಳನ್ನು ಗ್ರಹಿಸಲು ಹಾಗೂ ವೇದವಿಷಯಗಳು ಕೇವಲ ಗಿಳಿಪಾಠದಂತೆ ಅನುಕರಿಸಲ್ಪಡದೆ ಸಚೇತನಾತ್ಮಕ ಹಾಗೂ ಉಪಯುಕ್ತವಾಗಿ ಜೀವನದಲ್ಲಿ ಕೂಡಿಬರಲು ಅನುಕೂಲವಾಗುವಂತೆ ನೆರವಾಗುವ ಶಾಸ್ತ್ರಗಳು ಹುಟ್ಟಿಕೊಂಡವು. ಅವುಗಳಿಗೆ ವೇದಾಂಗಗಳೆಂದು ಹೇಳುತ್ತಾರೆ. ವೇದಾಂಗಗಳು ಒಟ್ಟು ಆರು. ಅವು ಯಾವುವೆಂದರೆ :

(೧) ಶಿಕ್ಷಾ (Phonetics). (೨) ವ್ಯಾಕರಣ (Grammar). (೩) ಛಂದಸ್ಸು (Prosody). (೪) ನಿರುಕ್ತ (Vedic Etymology and Dictionary), (೫) ಜ್ಯೋತಿಷ (Astrology), (೬) ಕಲ್ಪ (Rituals).

ವೇದಗಳು ಅಪೌರುಷೇಯವಾಗಿವೆ ಎಂದು ನಂಬಿದಂತೆ ವೇದಾಂಗಗಳು ಅಪೌರುಷೇಯವಾಗಿವೆ ಎಂದು ಹಿಂದೂಧರ್ಮದವರು ನಂಬುವುದಿಲ್ಲ. ವೇದಗಳ ರಕ್ಷಣೆಗೆ ಮತ್ತು ವಿಚಾರಸಮರ್ಥನೆಗೆ ಹುಟ್ಟಿಕೊಂಡ ಈ ವೇದಾಂಗಗಳು ಪೌರುಷೇಯವಾಗಿರುತ್ತವೆ ಎಂದು ನಮ್ಮ ಪ್ರಾಚೀನರು ಒಪ್ಪಿಕೊಂಡಿರುತ್ತಾರೆ.

**ಶಿಕ್ಷಾ** : ಶಿಕ್ಷಾ ಎಂದರೆ ಕಲಿಸುವಿಕೆ. ಬೋಧನೆ ಎಂದು ಅರ್ಥವಾಗಿರುತ್ತದೆ. ವೇದ ಮಂತ್ರಗಳನ್ನು ವರ್ಣ, ಸ್ವರ ಇತ್ಯಾದಿಯಾಗಿ ಸರಿಯಾದ ರೀತಿಯಲ್ಲಿ ಅಭ್ಯಾಸಮಾಡುವ ವಿಧಾನಗಳನ್ನು ತಿಳಿಸುವ ಶಾಸ್ತ್ರವೇ ಶಿಕ್ಷಾ. ವೇದಮಂತ್ರಗಳನ್ನು ಸ್ವರಸಹಿತವಾಗಿ ಸರಿಯಾದ ವಿಧಾನದಲ್ಲಿ ಉಚ್ಚರಿಸುವುದರಿಂದ ಉಂಟಾಗುವ ಮಾನಸಿಕ, ದೈಹಿಕ ಮತ್ತು ಆಧ್ಯಾತ್ಮಿಕ ಹಿತಗಳು ಸ್ವರರಹಿತವಾಗಿ ಉಚ್ಚರಿಸಿದಾಗ ಉಂಟಾಗುವುದಿಲ್ಲ. ಆದ್ದರಿಂದ ಶಿಕ್ಷಾ ಗ್ರಂಥಗಳು ವೇದದ ಕುರಿತಾದ ಸ್ವರೋಚ್ಚಾರಣೆ. ಪಾಠಕ್ರಮಗಳ ಬಗೆಗೆ ವಿಶೇಷ ಮಾರ್ಗದರ್ಶನವೀಯುವ ಉಪಯುಕ್ತ ಗ್ರಂಥಗಳಾಗಿವೆ.

**ವ್ಯಾಕರಣ** : ವ್ಯಾಕರಣವು ಭಾಷೆಯ ಜೀವಾಳವಾಗಿರುತ್ತದೆ. ವ್ಯಾಕರಣಜ್ಞಾನವಿಲ್ಲದಿದ್ದರೆ ಭಾಷೆಯ ತಿಳಿವಳಿಕೆ ಉಂಟಾಗಲಾರದು. ಹಾಗೂ ಭಾಷಾವ್ಯವಹಾರವೂ ಸಾಧ್ಯವಾಗಲಾರದು ಎನ್ನುವುದು ಹೊಸ ವಿಚಾರವೇನಲ್ಲ. ವೇದದ ಭಾಷೆಯನ್ನು ಅರ್ಥಮಾಡಿಕೊಳ್ಳಲು ನೆರವಾಗುವ ಶಾಸ್ತ್ರವೇ ವ್ಯಾಕರಣ. ವೇದದ ಶಬ್ದಗಳ ಸಂಧಿ, ಸಮಾಸ, ವಾಕ್ಯಗಳ ರಚನೆ ಇತ್ಯಾದಿಗಳ ಬಗೆಗೆ ವ್ಯಾಕರಣಶಾಸ್ತ್ರವು ಬೆಳಕನ್ನು ಚೆಲ್ಲಿ ವೇದದ ಕ್ರಮಬದ್ಧ ಅರ್ಥದ ಪ್ರಕಾಶಕ್ಕೆ ನೆರವಾಗುತ್ತದೆ. ವೇದದ ಭಾಷೆಯು ಈಗಾಗಲೆ ಹೇಳಿದಂತೆ ಸಂಸ್ಕೃತವಾಗಿದ್ದು ವ್ಯಾಕರಣವು ಸಂಸ್ಕೃತ ಭಾಷೆಯ ಸರ್ವಸೂತ್ರಗಳನ್ನು ಒಳಗೊಂಡಿರುತ್ತದೆ. ವ್ಯಾಕರಣದಲ್ಲಿ ಪಾಣಿನಿಮಹರ್ಷಿಗಳು ಬರೆದಿರುವ ಸೂತ್ರಗಳು ಅತ್ಯಂತ ಪ್ರಸಿದ್ಧವಾದುವುಗಳಾಗಿವೆ.

**ಛಂದಸ್ಸು** : ವೇದಮಂತ್ರಗಳ ರಚನೆಯಲ್ಲಿ ಉಪಯೋಗವಾಗಿರುವ ಗಾಯತ್ರಿ ಅನುಷ್ಟುಪ್ ಮೊದಲಾದ ವೃತ್ತಗಳ ನಿಶ್ಚಯಕ್ಕೂ ಮತ್ತು ವಿವೇಚನೆಗೂ ನೆರವಾಗುವ ಶಾಸ್ತ್ರವೇ ಛಂದಸ್ಸು. ಛಂದಸ್ಸು ಎಂದರೆ ಅಕ್ಷರ–ಮಾತ್ರಾಗಣಗಳಿಂದ ಕೂಡಿದ ಪದ್ಯ ಅಥವಾ ಶ್ಲೋಕ ಎನ್ನಬಹುದು. ಹಾಗೆಯೇ ಪದ್ಯವಾಗಲಿ, ಶ್ಲೋಕವಾಗಲಿ ಅವುಗಳನ್ನು ರಚಿಸಲು ನೆರವಾಗುವ ಶಾಸ್ತ್ರತತ್ತ್ವ ಅಥವಾ ನಿಯಮವಿಚಾರವೇ ಛಂದಸ್ಸು ಎಂದೂ

ಹೇಳಬಹುದು. ವೇದಮಂತ್ರಗಳ ಗಣ, ಮಾತ್ರೆ, ಛಂದಸ್ಸು ಇತ್ಯಾದಿ ಶ್ಲೋಕರಚನಾ ವಿಚಾರಗಳನ್ನು ಅರಿತು ಮಂತ್ರಗಳನ್ನು ಮನನಮಾಡಲು ಛಂದಸ್ಸು ಎಂಬ ಶಾಸ್ತ್ರವು ಸಹಾಯಕವಾಗಿದ್ದು ಇದೊಂದು ಮುಖ್ಯವಾದ ವೇದಾಂಗವಾಗಿರುತ್ತದೆ.

**ನಿರುಕ್ತ :** ವೇದದ ಶಬ್ದಗಳ ಅರ್ಥವಿವರಣೆ. ಶಬ್ದ ಉತ್ಪತ್ತಿಗಳ ವಿಚಾರಗಳ ವಿವರಗಳನ್ನು ನೀಡುವ ಶಾಸ್ತ್ರವೇ 'ನಿರುಕ್ತ'ವಾಗಿರುತ್ತದೆ. ಈ ಶಾಸ್ತ್ರದಿಂದಾಗಿ ವೇದ ಶಬ್ದಗಳ ಅರ್ಥವನ್ನು ಸರಿಯಾಗಿ ಗ್ರಹಿಸಲು ಸಾಧ್ಯವಾಗುವುದು ಮಾತ್ರವಲ್ಲದೆ ವೇದದ ಶಬ್ದಗಳ ಮೂಲ ಉತ್ಪತ್ತಿಯಿಂದ ಪ್ರಾರಂಭಿಸಿ ಅವುಗಳ ಪೂರ್ಣಜ್ಞಾನವನ್ನು ಪಡೆಯಲು ಉಪಯೋಗವಾಗುತ್ತದೆ. ಹಾಗಾಗಿ ಈ ವೇದಾಂಗವಾದ 'ನಿರುಕ್ತ'ವನ್ನು ವೇದದ ಶಬ್ದಕೋಶ ಎಂದೂ ಕರೆಯುತ್ತಾರೆ.

**ಜ್ಯೋತಿಷ :** ವೇದೋಕ್ತವಾದ ಯಜ್ಞಯಾಗಾದಿ ಕರ್ಮಗಳೂ ಆರಾಧನಾ ವಿಧಿಗಳೂ, ಇವುಗಳನ್ನು ನೆರವೇರಿಸಲು ಸೂಕ್ತವಾದ ಮುಹೂರ್ತಕಾಲಭಾಗಗಳನ್ನು ತಿಳಿಸಿಕೊಡುವ ಶಾಸ್ತ್ರವೇ ಜ್ಯೋತಿಷಶಾಸ್ತ್ರವಾಗಿದೆ. ಕಾಲಭಾಗಗಳಾದ ಋತು, ಮಾಸ, ದಿನ, ಗಳಿಗೆ, ಅಯನಗಳಿಂದ ಗ್ರಹಮಂಡಲದ ನಕ್ಷತ್ರ, ಗ್ರಹಗಳ ಚಲನೆ, ಅದರಿಂದಾಗಿ ಮಾನವನ ದೇಹ, ಮನಸ್ಸು ಮತ್ತು ಜೀವನದ ಮೇಲೆ ಆಗುವ ಪರಿಣಾಮ ಇತ್ಯಾದಿ ವಿಚಾರಗಳ ಕುರಿತಾಗಿ ಸರಿಯಾದ ವಿವರಣೆ, ಮಾರ್ಗದರ್ಶನಗಳು ಜ್ಯೋತಿಷಶಾಸ್ತ್ರದಲ್ಲಿ ನೀಡಲ್ಪಟ್ಟಿದೆ.

**ಕಲ್ಪ :** ವೇದೋಕ್ತವಾದ ಯಜ್ಞಯಾಗಾದಿಗಳನ್ನು ನೆರವೇರಿಸುವ ಕ್ರಮ, ಯಾಗಪೀಠವನ್ನು ನಿರ್ಮಿಸುವ ರೀತಿ. ಯಥೋಚಿತವಾಗಿ ಆಯಾಯ ಯಾಗಕ್ಕೆ ಸಂಬಂಧಿಸಿದ ಮಂತ್ರಗಳ ವಿವರಣೆ, ಪ್ರಯೋಗ–ಸಂಪ್ರದಾಯಗಳನ್ನು ಒಳಗೊಂಡಿರುವ ಶಾಸ್ತ್ರವೇ ಕಲ್ಪವಾಗಿರುತ್ತದೆ. ವಿಚಾರಗಳನ್ನು ಪುಟ್ಟ ಪುಟ್ಟ ಸೂತ್ರರೂಪಗಳಲ್ಲಿ ಹೇಳಿರುವುದರಿಂದ ಈ ಶಾಸ್ತ್ರವನ್ನು ಕಲ್ಪಸೂತ್ರಗಳೆಂದೂ ಒಟ್ಟಾಗಿ ಕರೆಯುತ್ತಾರೆ. ಪ್ರತಿಯೊಂದು ವೇದಕ್ಕೂ ಬೇರೆ ಬೇರೆ ಕಲ್ಪಸೂತ್ರಗಳು ಇವೆ. ಕಲ್ಪಸೂತ್ರದಲ್ಲಿ ಮುಖ್ಯವಾಗಿ ಶ್ರೌತಸೂತ್ರ ಮತ್ತು ಸ್ಮಾರ್ತಸೂತ್ರ ಎಂಬ ಎರಡು ವಿಧಗಳಿವೆ. ಅವುಗಳಲ್ಲಿ ಪುನಃ ಶ್ರೌತಸೂತ್ರದಲ್ಲಿ (೧) ಶ್ರೌತಸೂತ್ರ, (೨) ಶುಲ್ಬಸೂತ್ರಗಳೆಂದು ಎರಡು ಭಾಗಗಳೂ. ಸ್ಮಾರ್ತಸೂತ್ರದಲ್ಲಿ ಗೃಹ್ಯಸೂತ್ರ ಮತ್ತು ಧರ್ಮಸೂತ್ರ ಎಂಬ ಎರಡು ವಿಧಗಳೂ ಇವೆ. ಹೀಗೆ ನಾಲ್ಕು ವಿಧಗಳ ಸೂತ್ರಗಳನ್ನೆಲ್ಲಾ ಒಟ್ಟಾಗಿ 'ಕಲ್ಪಸೂತ್ರ' ಎಂದು ಕರೆದಿರುತ್ತಾರೆ. ಈ ಸೂತ್ರಗಳನ್ನು ಪ್ರಾಚೀನ ಮಹರ್ಷಿಗಳು ರಚಿಸಿರುತ್ತಾರೆ. ಸೂತ್ರಗಳಲ್ಲಿ ಮುಖ್ಯವಾಗಿ ೪೪ ಸೂತ್ರಗಳು ಗಣನೆಗೆ ಲಭಿಸಿವೆ. ಅವನ್ನು ಬೋಧಾಯನ, ಆಪಸ್ತಂಭ, ಆಶ್ವಲಾಯನ, ಜೈಮಿನಿ, ಗೌತಮ, **ಕೌಶಿಕ**, ವಸಿಷ್ಠ, ವೈಖಾನಸ ಮೊದಲಾದ ಹದಿನೆಂಟು ಮಂದಿ ಮಹರ್ಷಿಗಳು ರಚಿಸಿದ್ದು, ಅವರಲ್ಲಿ ಕೆಲವರು ಎರಡುಮೂರರಂತೆಯೂ, ಇತರರು ನಾಲ್ಕೈದರಂತೆಯೂ ಸೂತ್ರಗ್ರಂಥಗಳನ್ನು ರಚಿಸಿರುತ್ತಾರೆ.

**ಶ್ರೌತಸೂತ್ರ :** ಶ್ರೌತ ಎಂದರೆ ಶ್ರುತಿಗೆ ಅರ್ಥಾತ್ ವೇದಗಳಿಗೆ ಸಂಬಂಧಿಸಿದ್ದು ಎಂದು ಅರ್ಥವಾಗುತ್ತದೆ. ಈ ಸೂತ್ರಗಳಲ್ಲಿ ಯಜ್ಞಯಾಗಾದಿಗಳನ್ನು ಮಾಡುವುದರ

ಕುರಿತಾದ ವಿಧಿವಿಧಾನಗಳು ವಿಸ್ತಾರವಾಗಿ ವಿವರಿಸಲ್ಪಟ್ಟಿವೆ.

**ಶುಲ್ಬಸೂತ್ರಗಳು :** ಶುಲ್ಬ ಎಂದರೆ 'ಅಳತೆ' (ಮಾಪನೆ) ಎಂದು ಅರ್ಥವಾಗುತ್ತದೆ. ಈ ಸೂತ್ರಗಳಲ್ಲಿ ಯಜ್ಞಯಾಗಾದಿಗಳನ್ನು ನಡೆಸಲು ಬೇಕಾದ ವೇದಿಕೆ–ಯಜ್ಞಮಂಟಪಗಳನ್ನು ಕಟ್ಟುವ ಕ್ರಮವನ್ನು ವರ್ಣಿಸಲಾಗಿದೆ. ಅಲ್ಲದೆ ವೇದಿಕೆಗಳ, ಯಜ್ಞಮಂಟಪಗಳ ಉದ್ದಗಲಗಳು ಎತ್ತರಗಳು ಎಷ್ಟಿರಬೇಕು ಎಂಬ ವಿವರಗಳೂ ಸೇರಿವೆ. ಮಾತ್ರವಲ್ಲದೆ ಯಜ್ಞಯಾಗಾದಿಗಳನ್ನು ಮಾಡಲು ಯೋಗ್ಯವಾದ ಸ್ಥಾನಗಳ ವಿಚಾರದ ಸೂಕ್ತವಾದ ಚರ್ಚೆ–ವಿವರಣೆಗಳು ಈ ಸೂತ್ರದಲ್ಲಿ ಸೇರಿವೆ. ಹೀಗೆ ಶುಲ್ಬಸೂತ್ರಗಳು ರೇಖಾಗಣಿತಶಾಸ್ತ್ರಕ್ಕೆ ಸಂಬಂಧಿಸಿದ ವಿಚಾರಗಳನ್ನು ಸಹ ಹೊಂದಿದ್ದು ತುಂಬಾ ಪ್ರಾಮುಖ್ಯವಾದ ವೇದಾಂಗ ಗ್ರಂಥವಾಗಿರುತ್ತದೆ.

**ಸ್ಮಾರ್ತಸೂತ್ರ–ಗೃಹ್ಯಸೂತ್ರ :** ಸಾಮಾನ್ಯವಾಗಿ ಗೃಹ್ಯ ಎಂದರೆ ಗೃಹಜೀವನಕ್ಕೆ ಸಂಬಂಧಿಸಿದ, ಗ್ರಹಣ ಮಾಡುವಿಕೆ, ತೆಗೆದುಕೊಳ್ಳುವುದಕ್ಕೆ ಯೋಗ್ಯವಾದ ಎಂಬರ್ಥವಾಗುತ್ತದೆ. ಮಾನವನು ತನ್ನ ಜೀವನದಲ್ಲಿ ಗ್ರಹಣಮಾಡಲು ಯೋಗ್ಯವಾದ ವಿಚಾರಗಳಿಗೆ ಸಂಬಂಧಿಸಿದಂತೆ ವಿಧಿನಿಯಮಗಳು ಈ ಸೂತ್ರಗಳಲ್ಲಿ ಹೇಳಲ್ಪಟ್ಟಿವೆ. ಮನುಷ್ಯನ ಗೃಹಜೀವನ ಮತ್ತು ಕುಟುಂಬಜೀವನಕ್ಕೆ ಸಂಬಂಧಿಸಿದ ಲೌಕಿಕ ಹಾಗೂ ಪಾರಮಾರ್ಥಿಕ ಉದ್ದೇಶವುಳ್ಳ ಅನೇಕ ವಿಧದ ಆಚರಣೆ, ವಿಧಿನಿಯಮಗಳ ಬಗ್ಗೆ ಶಾಸ್ತ್ರೀಯವಾದ ವಿವರಣೆಗಳು ಗೃಹ್ಯಸೂತ್ರಗಳಲ್ಲಿವೆ. ಮನುಷ್ಯನ ಹುಟ್ಟಿನಿಂದ ಸಾವಿನ ತನಕ ಅವನಿಗೆ ಆಗಬೇಕಾದ ಕ್ರಿಯಾವಿಶೇಷಗಳಾದ ಸಂಸ್ಕಾರಗಳ ವಿವರಣೆಗಳು ಗೃಹ್ಯಸೂತ್ರಗಳ ವಿಷಯವಸ್ತುಗಳಾಗಿವೆ. ಗರ್ಭಾಧಾನ, ಜಾತಕರ್ಮ, ಉಪನಯನ, ವಿವಾಹ ಇತ್ಯಾದಿ ಸಂಸ್ಕಾರಗಳ ವಿವರಣೆ–ಆಚರಣಾ ವಿಧಾನಗಳು, ಆವಶ್ಯಕತೆಗಳು—ಇವುಗಳೇ ಮೊದಲಾದ ವಿವರಗಳು ಗೃಹ್ಯಸೂತ್ರಗಳಲ್ಲಿ ಅಡಗಿವೆ. ಸ್ಮೃತಿಗ್ರಂಥಗಳ ಆಧಾರದಲ್ಲಿ ಇವುಗಳು ರಚಿತವಾಗಿರುವುದರಿಂದ ಇವುಗಳನ್ನು ಸ್ಮಾರ್ತಸೂತ್ರ ಎಂದು ಕರೆಯುತ್ತಾರೆ.

**ಧರ್ಮಸೂತ್ರಗಳು :** ಗೃಹ್ಯಸೂತ್ರಗಳಿಗೆ ಸಂಬಂಧಿಸಿದ್ದು ಧರ್ಮದ ವಿಚಾರವಾಗಿ ವಿವರಣೆಯನ್ನು ನೀಡುವ ಸೂತ್ರಗಳನ್ನು ಧರ್ಮಸೂತ್ರಗಳೆಂದು ಹೇಳುತ್ತಾರೆ. 'ಧರ್ಮ' ಎಂದರೆ ಹಕ್ಕು, ಕರ್ತವ್ಯ, ಕಾನೂನು, ಮತ, ಆಚಾರ, ಪದ್ಧತಿಗಳು ಎಂದು ಅರ್ಥವಾಗುತ್ತದೆ. ಮನುಷ್ಯನ ಜೀವನದ ವಿವಿಧ ಘಟ್ಟಗಳಾದ ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸ ಎಂಬ ನಾಲ್ಕು ಹಂತಗಳಿಗೆ ಸಂಬಂಧಿಸಿದಂತೆ ಈ ಮೇಲಿನ ಐದು ಅಂಶಗಳ ಕುರಿತಾದ ವಿವರಣೆ–ಮಾರ್ಗದರ್ಶನಗಳು ಧರ್ಮಸೂತ್ರಗಳಲ್ಲಿ ನಿರೂಪಿಸಲ್ಪಟ್ಟಿವೆ. ಒಟ್ಟಿನಲ್ಲಿ ಧರ್ಮಸೂತ್ರಗಳೆಂದರೆ ಧಾರ್ಮಿಕವಾದ ರೀತಿ ನಿಬಂಧನೆಗಳು, ಲೋಕದ ವ್ಯಾಪಾರ-ಜೀವನಕ್ಕೆ ಸಂಬಂಧಿಸಿದ ನೀತಿನಿಯಮಗಳು ಇವನ್ನು ಪ್ರತಿಪಾದಿಸುವ ಸೂತ್ರಗಳೆಂದು ತಾತ್ಪರ್ಯವಾಗಿ ಹೇಳಬಹುದು. ನಾಲ್ಕು ವರ್ಣದವರ ಸ್ಥಾನಮಾನಗಳು, ರಾಜಕೀಯ, ಸಾಮಾಜಿಕ ವಿಚಾರಗಳು, ಆಚಾರ ವ್ಯವಹಾರಗಳು ಇವೆಲ್ಲ ತುಂಬಾ ವಿಸ್ತಾರವೂ ಸಮರ್ಥವೂ ಆದ ರೀತಿಯಲ್ಲಿ ವಿವರಿಸಲ್ಪಟ್ಟಿವೆ.

ಮನುಷ್ಯನ ಶರೀರದ ಎಲ್ಲ ಅಂಗಗಳೂ ಸಮಾನವಾಗಿ ಎಷ್ಟು ಮುಖ್ಯವೋ ಹಾಗೆಯೇ

ವೇದಾಂಗಗಳಲ್ಲಿ ಎಲ್ಲಾ ಅಂಗಗಳೂ ಮುಖ್ಯವಾದವುಗಳಾಗಿದ್ದು ಅವುಗಳಲ್ಲಿ ಮೇಲು-ಕೀಳೆಂದು ವಿಭಾಗಿಸಲು ಸಾಧ್ಯವೂ ಇಲ್ಲ, ಹಾಗೆ ಮಾಡಹೊರಡುವುದು ತರವೂ ಅಲ್ಲ.

ಈ ಆರು ವೇದಾಂಗಗಳ ಧ್ಯಾನವನ್ನು ವ್ಯಕ್ತಪಡಿಸುತ್ತಾ ಮಹರ್ಷಿ ಪಾಣಿನಿಯವರು ವೇದವನ್ನು ಶರೀರ ಎಂದು ಕರೆದು ವೇದಾಂಗಗಳನ್ನು ಈ ರೀತಿ ಹೋಲಿಸಿ ವೇದಕ್ಕೆ ಅನ್ವಯ ಮಾಡಿ ಕರೆದಿರುತ್ತಾರೆ :

ಛಂದಃ ಪಾದೌ ತು ವೇದಸ್ಯ
ಹಸ್ತೌ ಕಲ್ಪೋಽಥ ಪಠ್ಯತೇ ।
ಜ್ಯೋತಿಷಾಮಯನಂ ಚಕ್ಷು-
ರ್ನಿರುಕ್ತಂ ಶ್ರೋತ್ರಮುಚ್ಯತೇ ॥
ಶಿಕ್ಷಾ ಘ್ರಾಣಂ ತು ವೇದಸ್ಯ
ಮುಖಂ ವ್ಯಾಕರಣಂ ಸ್ಮೃತಂ ।
ತಸ್ಮಾತ್ ಸಾಂಗಮಧೀತ್ಯೈವ
ಬ್ರಹ್ಮಲೋಕೇ ಮಹೀಯತೇ ॥

(ಪಾಣಿನೀಯ ಶಿಕ್ಷಾ, ಸೂ. ೪೧–೪೨)

ಛಂದಸ್ಸನ್ನು ವೇದದ ಕಾಲುಗಳಾಗಿಯೂ, ಕಲ್ಪವನ್ನು ಕೈಗಳಾಗಿಯೂ, ಜ್ಯೋತಿಷ ವನ್ನು ನೇತ್ರಗಳಾಗಿಯೂ, ನಿರುಕ್ತವನ್ನು ಕಿವಿಗಳಾಗಿಯೂ, ಶಿಕ್ಷವನ್ನು ಮೂಗಾಗಿಯೂ, ವ್ಯಾಕರಣವನ್ನು ಮುಖವಾಗಿಯೂ ರೂಪಕವಾಗಿಸಿರುವ ಮಹರ್ಷಿ ಪಾಣಿನಿಯವರ ಈ ಅಭಿಪ್ರಾಯವು ಶರೀರದಲ್ಲಿ ಆಯಾಯ ಅಂಗಗಳು ನಿಶ್ಚಯವಾಗಿಯೂ ಯಾವ ಯಾವ ಉಪಯೋಗಕ್ಕೆ ಬರುತ್ತವೆಯೋ ಅದೇ ರೀತಿ ವೇದಶರೀರಕ್ಕೆ ಈ ವೇದಾಂಗ ಗಳು ಉಪಯೋಗಕ್ಕೆ ಬರುತ್ತವೆ ಎಂದು ಈ ಶ್ಲೋಕವು ಸ್ಪಷ್ಟಪಡಿಸುತ್ತದೆ.

ಸ್ಮೃತಿ : ಶ್ರುತಿ ಎಂದರೆ ಕೇಳಿದ್ದು, ಸ್ಮೃತಿ ಎಂದರೆ ನೆನಪಿನಲ್ಲಿಟ್ಟದ್ದು ಎಂದು ಅರ್ಥ ವಾಗುತ್ತದೆ. ವೇದೋಪನಿಷತ್ತುಗಳು ಶ್ರುತಿಗಳಾಗಿದ್ದು ಅವುಗಳ ಉಪದೇಶದ ಸಾರ ಸಂಗ್ರಹವನ್ನು ಜನಜೀವನದ ದಿನನಿತ್ಯದ ನಡೆನುಡಿಗಳಲ್ಲಿ ಅನುಷ್ಠಾನಕ್ಕೆ ತರಲು ಅನುಕೂಲ ವಾಗುವಂತೆ ಕಾಲಕ್ರಮೇಣ ಸಂಪ್ರದಾಯ, ಧಾರ್ಮಿಕ ನಿಯಮಾವಳಿಗಳೂ ವಿಧಿವಿಚಾರ ಗಳೂ ಹುಟ್ಟಿಕೊಂಡುವು. ಅವುಗಳೇ ಸ್ಮೃತಿಗಳು. ಇವುಗಳನ್ನು ಶ್ರುತಿಗಳ ನಿರಂತರದ ಅಭ್ಯಾಸ–ಅನುಷ್ಠಾನಗಳಲ್ಲಿ ನಿರತರಾಗಬಲ್ಲವರಾದ ಮನು, ಯಾಜ್ಞವಲ್ಕ್ಯ ಮೊದಲಾದ ಮಹರ್ಷಿಗಳು ಶ್ರುತಿಯಲ್ಲಿ ಹೇಳಿದ ಧಾರ್ಮಿಕವಾದ ವಿಚಾರಗಳನ್ನೂ ಧರ್ಮರಹಸ್ಯ ಗಳನ್ನೂ ತಮ್ಮ ನೆನಪಿನಲ್ಲಿ ಅಂದರೆ ಸ್ಮೃತಿಯಲ್ಲಿ ಇಟ್ಟುಕೊಂಡರು. ಜನಸಾಮಾನ್ಯರಿಗೆ ಅರ್ಥವಾಗುವಂತೆ ಅವುಗಳನ್ನು ತಮ್ಮ ಸ್ಮೃತಿಸಹಾಯದಿಂದ ಬೋಧಿಸಿದರು. ಆ ಬೋಧನೆಗಳೇ ಗ್ರಂಥವಾಗಿ ರೂಪುಗೊಂಡು ಅವುಗಳನ್ನು 'ಸ್ಮೃತಿ' ಎಂದು ಕರೆಯ ಲಾಯಿತು. ವೇದಗಳು ಅಪೌರುಷೇಯವೆಂದಾದರೆ ಸ್ಮೃತಿಗಳು ಪೌರುಷೇಯವಾಗಿವೆ. ಹಾಗಿದ್ದರೂ ಅವುಗಳು ವೇದೋಪನಿಷತ್ತುಗಳಲ್ಲಿ ಹೇಳಿದ ಧಾರ್ಮಿಕ ವಿಚಾರಗಳೇ ಆಗಿದ್ದು ದಿವ್ಯವಾದ ತಪಸ್ಸಿನ ಬಲ-ತೇಜಸ್ಸುಗಳಿಂದ ಹೇಳಲ್ಪಟ್ಟು ರಚಿತವಾದವುಗಳಾದ್ದ ರಿಂದ ಸ್ಮೃತಿಗಳಿಗೆ ನಿಜಕ್ಕೂ ಪ್ರಮುಖತೆ ಹಾಗೂ ಯೋಗ್ಯತೆಗಳಿವೆ. ಹಾಗಾಗಿ ಅವುಗಳು

ಹಿಂದೂಧರ್ಮದ ಆಧಾರಗ್ರಂಥಗಳೆಂದು ಮಾನ್ಯತೆಯನ್ನು ಪಡೆದಿರುತ್ತವೆ.

ಶ್ರುತಿಯು ನೇರವಾದ ಅನುಭೂತಿಯಾದರೆ ಸ್ಮೃತಿಯು ಅಂತಹ ಅನುಭೂತಿಯ ಸ್ಮರಣೆಯಾಗಿರುತ್ತದೆ. ಸ್ಮೃತಿಯಲ್ಲಿ ಹೇಳಿರುವ ವಿಚಾರಗಳು ಶ್ರುತಿಗೆ ವಿರೋಧವಾದುವು ಎಂದು ಕಂಡುಬಂದರೆ ಆಗ ಶ್ರುತಿಯನ್ನೇ ಆಧಾರ-ಸಿದ್ಧಾಂತ ಎಂದು ಇಟ್ಟುಕೊಂಡು ಸ್ಮೃತಿಯನ್ನು ಆ ಮಟ್ಟಿಗೆ ಆಧಾರವಲ್ಲ ಎಂದು ಪರಿಗಣಿಸಬೇಕು.

ವೇದದಲ್ಲಿ ಉಪಯುಕ್ತವಾಗಿರುವ ಯಜ್ಞಯಾಗಾದಿ ವಿಚಾರಗಳ ವಿಧಿಗಳನ್ನು ವಿವರವಾಗಿ ವರ್ಣಿಸಿರುವುದು ಮಾತ್ರವಲ್ಲದೆ ಹಿಂದೂಧರ್ಮದ ವರ್ಣಾಶ್ರಮ ಹಾಗೂ ಧರ್ಮಶಾಸ್ತ್ರ ಎಂಬ ಹೆಸರು ಪರ್ಯಾಯವಾಗಿ ಬಳಕೆಯಲ್ಲಿರುತ್ತದೆ. ಸಮಾಜವನ್ನಾಗಲಿ ಮನುಷ್ಯನನ್ನಾಗಲಿ ಯಾವುದು ಧರಿಸುತ್ತದೆಯೋ ಅಥವಾ ಧಾರಣೆ ಮಾಡುತ್ತದೆಯೋ ಅದು ಧರ್ಮ ಎಂದು ಕರೆಯಲ್ಪಡುತ್ತದೆ. ಸಮಾಜದಲ್ಲಿ ಮನುಷ್ಯನ ನಡವಳಿಕೆಗಳ ಕುರಿತಾದ ನಿರ್ದಿಷ್ಟ ನೀತಿ, ನಿಯಮ, ಕಟ್ಟುಪಾಡುಗಳನ್ನು ಸ್ಮೃತಿಗಳು ನಿರ್ದೇಶಿಸುತ್ತವೆ. ಹಾಗಾಗಿ ಸ್ಮೃತಿಗಳನ್ನು ಸಮಾಜದ ನ್ಯಾಯಶಾಸ್ತ್ರ ಎಂದೂ ಕರೆಯುತ್ತಾರೆ. ಜೀವನದ ನಾಲ್ಕು ಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಸಂಪಾದಿಸಲು ಮನುಷ್ಯನು ತ್ರಿಕರಣಪೂರ್ವಕವಾದ ಪರಿಶುದ್ಧತೆ, ಸಾಮರ್ಥ್ಯಗಳಿಂದ ದುಡಿಯುವಂತೆ ಸ್ಮೃತಿಗಳು ಪ್ರೋತ್ಸಾಹ-ಮಾರ್ಗದರ್ಶನಗಳನ್ನು ನೀಡುತ್ತವೆ. ಹುಟ್ಟಿನಿಂದ ಸಾವಿನತನಕದ ಅವಧಿಯಲ್ಲಿ ಮನುಷ್ಯನು ತನ್ನ ಕರ್ತವ್ಯವನ್ನು ನಿರ್ವಹಿಸುತ್ತಾ ಬಾಳನ್ನು ಹೇಗೆ ಸಾಗಿಸಬೇಕು, ಏನೇನು ಸಂಸ್ಕಾರ–ವಿಧಿವಿಚಾರಗಳನ್ನು ಹೇಗೆ ಹೇಗೆ ನಡಸಬೇಕು ಎಂಬುದರ ಸವಿವರವಾದ ವಿವರ, ನಿರ್ದೇಶನಗಳು ಸ್ಮೃತಿಗಳಲ್ಲಿ ದೊರಕುತ್ತವೆ. ಕಾಲವು ಸರಿದಂತೆ, ಸಮಾಜ ಜೀವನದ ಸ್ಥಿತಿಗತಿಗಳು ಬದಲಿದಂತೆ, ಯುಗಧರ್ಮ ಹಾಗೂ ಆವಶ್ಯಕತೆಗಳನ್ನು ಅನುಸರಿಸಿ ಸ್ಮೃತಿಗಳಲ್ಲಿ ಅಗತ್ಯದ ಬದಲಾವಣೆಗಳು ಆಗಿಂದಾಗ್ಗೆ ಮಾಡಲ್ಪಟ್ಟಿರುತ್ತದೆ. ಈ ಬದಲಾವಣೆಗಳನ್ನು ಕಾಲಕಾಲಕ್ಕೆ ಸರಿಯಾಗಿ ಮಹರ್ಷಿಗಳು ಮಾಡಿರುತ್ತಾರಾಗಿದ್ದು, ಮಾಡಿರುವ ಬದಲಾವಣೆಗಳನ್ನು ಅನುಸರಿಸಿ ಆಗಿಂದಾಗ್ಗೆ ಅನೇಕ ಸಂಖ್ಯೆಯಲ್ಲಿ ಸ್ಮೃತಿಗಳು ರೂಪುಗೊಂಡಿರುತ್ತವೆ.

ಸ್ಮೃತಿಯ ಬೋಧನೆ ಅಥವಾ ವಿಚಾರಸಂಗ್ರಹಗಳಲ್ಲಿ ಮುಖ್ಯವಾಗಿ ಮೂರು ವಿಭಾಗಗಳಿವೆ. ಅವುಗಳು ಯಾವುವೆಂದರೆ :

(೧) ಆಚಾರ (Ceremonial Duty)

(೨) ವ್ಯವಹಾರ (Litigation)

(೩) ಪ್ರಾಯಶ್ಚಿತ್ತ (Penance or Expiatory Rites)

೧. **ಆಚಾರವು** ವ್ಯಕ್ತಿಜೀವನ, ಗೃಹಜೀವನ, ಸಾಮಾಜಿಕ ಜೀವನದಲ್ಲಿ ಅನುಸರಿಸಬೇಕಾದ ನೀತಿನಿಯಮಗಳನ್ನು ಒಳಗೊಂಡಿರುತ್ತದೆ.

೨. **ವ್ಯವಹಾರವು** ಗೃಹಸ್ಥ ಮತ್ತು ಸಾಮಾಜಿಕ ಜೀವನದಲ್ಲಿ ಒದಗಿಬರುವ ವ್ಯವಹಾರಗಳು, ಸಿವಿಲ್ ಮತ್ತು ಕ್ರಿಮಿನಲ್ ವಿಚಾರಗಳು ಇವುಗಳಿಗೆ ಸಂಬಂಧಿಸಿದ ನಿಬಂಧನೆಗಳು ಇವುಗಳಿಂದ ಕೂಡಿದೆ.

೩. ಪ್ರಾಯಶ್ಚಿತ್ತ ಭಾಗದಲ್ಲಿ ಮನುಷ್ಯನು ಈ ಮೇಲೆ ಹೇಳಿದ ಎರಡು ಅಂಶಗಳನ್ನು ಮೀರಿ ತಪ್ಪಾಗಿ ನಡೆದುಕೊಂಡಾಗ ಆ ಸಂದರ್ಭದಲ್ಲಿ ಅವನಿಗೆ ವಿಧಿಸಬೇಕಾದ ಪಶ್ಚಾತ್ತಾಪಗಳು–ದೇಹದಂಡನೆ ವಿಚಾರಗಳು ವಿವರವಾಗಿ ವಿವರಿಸಲ್ಪಟ್ಟಿದ್ದು ಮನುಷ್ಯನು ತನ್ನನ್ನು ತಾನು ಪಾಪದಿಂದ, ದುಃಖದಿಂದ, ಅಪವಿತ್ರತೆಯಿಂದ ಹೇಗೆ ಉದ್ಧರಿಸಿಕೊಳ್ಳಬಹುದು ಎಂದು ವಿವರಿಸಲ್ಪಟ್ಟಿರುತ್ತದೆ.

ಸ್ಮೃತಿಗಳ ಸಂಖ್ಯೆ ನೂರಾರಿವೆಯಾದರೂ ಅವುಗಳಲ್ಲಿ ಸುಮಾರು ೪೫ ಸ್ಮೃತಿಗಳು ಹೆಚ್ಚು ಬೆಳಕಿಗೆ ಬಂದವುಗಳು. ಈ ೪೫ರಲ್ಲಿ ಮನು, ಯಾಜ್ಞವಲ್ಕ್ಯ ಮತ್ತು ಪರಾಶರ ಸ್ಮೃತಿ ಗಳು ಅತ್ಯಂತ ಪ್ರಸಿದ್ಧವಾದವುಗಳಾಗಿವೆ.

**ಮನುಸ್ಮೃತಿ :** ಹನ್ನೆರಡು ಅಧ್ಯಾಯಗಳಿಂದಲೂ, ೨೬೮೪ ಶ್ಲೋಕಗಳಿಂದಲೂ ಕೂಡಿರುವ ಈ ಸ್ಮೃತಿಯಲ್ಲಿ ಮೂರು ವಿಭಾಗಗಳಿವೆ. ಮೊದಲನೇ ಏಳು ಅಧ್ಯಾಯಗಳನ್ನು ಒಂದನೇ ವಿಭಾಗವೆಂದು ಹೇಳಿ ಅದನ್ನು ಆಚಾರಕಾಂಡ ಎಂದು ಕರೆಯಲಾಗಿದೆ. ಅನಂತರದ ಮೂರು ಅಧ್ಯಾಯಗಳನ್ನು ವ್ಯವಹಾರಕಾಂಡವೆಂದೂ ತರುವಾಯದ ಎರಡು ಅಧ್ಯಾಯಗಳನ್ನು ಪ್ರಾಯಶ್ಚಿತ್ತಕಾಂಡವೆಂದೂ ಕರೆಯಲಾಗಿದೆ. ಮನುಸ್ಮೃತಿಯಲ್ಲಿ ವಿಶ್ವದ ಹುಟ್ಟು, ಜೀವಿಗಳ ವಿಚಾರ, ವಿದ್ಯಾರ್ಥಿ, ಗೃಹಸ್ಥ, ಅರಸ, ಪತಿ-ಪತ್ನಿಯರು, ಇವರ ಕರ್ತವ್ಯಗಳು, ನಾಲ್ಕು ವರ್ಣದವರಿಗೂ ಅನ್ವಯವಾಗುವ ಬೇರೆ ಬೇರೆ ಆಚಾರಗಳು, ವಿಧಿನಿಯಮಗಳು, ಯಜ್ಞ, ಪ್ರಾಯಶ್ಚಿತ್ತ ಇವುಗಳ ವಿವರಣೆ, ಸಮಾಜನೀತಿ, ಸಮಾಜಧರ್ಮ, ರಾಜನೀತಿ, ರಾಜಧರ್ಮ ಇತ್ಯಾದಿ ಜೀವನಕ್ಕೆ ಸಂಬಂಧಿಸಿದ ಅನೇಕ ವಿಚಾರಗಳ ಕುರಿತಾದ ವಿಸ್ತಾರವಾದ ಮತ್ತು ಕ್ರಮಬದ್ಧವಾದ ವಿವರಣೆ-ಬೋಧನೆಗಳಿವೆ. ಮನುಸ್ಮೃತಿಯನ್ನು ಮನುಧರ್ಮಶಾಸ್ತ್ರ ಎಂದೂ ಕರೆಯುತ್ತಾರೆ. ಒಟ್ಟಿನಲ್ಲಿ ಹೇಳುವುದಾದರೆ ಮನುಧರ್ಮಶಾಸ್ತ್ರವು ಮನುಷ್ಯನ ಜೀವನದ ಸರ್ವಾಂಗೀಣ ಉನ್ನತಿ ಮತ್ತು ಭದ್ರತೆಗಳಿಗೆ ವಿಶೇಷವಾದ ರೀತಿಯಲ್ಲಿ ಬೆಳಕು, ಭರವಸೆಗಳನ್ನು ನೀಡಬಲ್ಲ ಘನವಾದ ಸ್ಮೃತಿಗ್ರಂಥವಾಗಿರುತ್ತದೆ ಎಂಬುದರಲ್ಲಿ ಸಂದೇಹವಿಲ್ಲ. ಈ ಮಹತ್ವಸಿದ್ಧಿಯ ಗ್ರಂಥವನ್ನು ಮನುಮಹರ್ಷಿಗಳು ರಚಿಸಿರುತ್ತಾರೆ. ಹಾಗಾಗಿ ಇದನ್ನು ಮನುಸ್ಮೃತಿ ಎಂದು ಕರೆಯುತ್ತಾರೆ.

**ಯಾಜ್ಞವಲ್ಕ್ಯಸ್ಮೃತಿ :** ಮಹರ್ಷಿ ಯಾಜ್ಞವಲ್ಕ್ಯರು ಈ ಸ್ಮೃತಿಯನ್ನು ರಚಿಸಿರುತ್ತಾರೆ. ಇದರಲ್ಲಿ ಮೂರು ಕಾಂಡಗಳೂ ೧೦೧೦ ಶ್ಲೋಕಗಳೂ ಇವೆ.

**ಪರಾಶರಸ್ಮೃತಿ :** ಮಹರ್ಷಿ ಪರಾಶರರು ಇದನ್ನು ರಚಿಸಿರುತ್ತಾರೆ. ಈ ಸ್ಮೃತಿಯಲ್ಲಿ ಹನ್ನೆರಡು ಅಧ್ಯಾಯಗಳೂ ೫೯೩ ಪದ್ಯಗಳೂ ಇವೆ.

ಸ್ಮೃತಿಯಲ್ಲಿ ಪ್ರತಿಪಾದಿತವಾದ ಆಚಾರ, ವ್ಯವಹಾರ, ಪ್ರಾಯಶ್ಚಿತ್ತ ವಿಚಾರಗಳಿಂದಾಗಿ ವ್ಯಕ್ತಿ ಹಾಗೂ ಸಮಾಜದ ಜೀವನದಲ್ಲಿ ಭದ್ರತೆ, ನಿಯಮನಿಷ್ಠೆ, ಪರಿಶುದ್ಧತೆಗಳು ಉಳಿಯುವಂತಾಯಿತು. ಇದರಿಂದ ಸಮಾಜದಲ್ಲಿ ಒಗ್ಗಟ್ಟು, ಆಡಳಿತದಲ್ಲಿ ದಕ್ಷತೆ, ದೇಶದಲ್ಲಿ ಸುಖಶಾಂತಿಗಳು ನೆಲೆನಿಲ್ಲಲು ಸಾಧ್ಯವಾಯಿತು. ಮಾತ್ರವಲ್ಲದೆ ಹಿಂದೂದೇಶಕ್ಕೆ ಪರದೇಶದಿಂದ ಆಕ್ರಮಣಕಾರಿಗಳಾಗಿ ಬಂದವರ ಸಂಸ್ಕೃತಿಯ ದಾಳಿಯಿಂದಾಗಿ ಹಿಂದೂ

ಧರ್ಮವು ತೊಂದರೆಗೆ ಈಡಾಗದೆ ಪರಿಸ್ಥಿತಿಯನ್ನು ಎದುರಿಸಿ ಸಚೇತನವೂ ಪರಿಶುದ್ಧವೂ ಆಗಿ ಉಳಿಯಲು ಸಾಧ್ಯವಾಯಿತು. ಅಲ್ಲದೆ ದೇಶದ ಸಂಸ್ಕೃತಿ, ಸಾಹಿತ್ಯ, ಕಲೆ, ವಿಜ್ಞಾನ ಗಳ ಸಂರಕ್ಷಣೆಯು ಸ್ಮೃತಿಕಾರರಿಂದ ಮತ್ತು ಸ್ಮೃತಿಗಳಿಂದಾಗಿ ಬಹಳ ಉತ್ತಮ ರೀತಿ ಯಲ್ಲಿ ನಿರ್ವಹಿಸಲ್ಪಟ್ಟಿರುತ್ತವೆ.

**ಇತಿಹಾಸಗಳು :** ಅನಾದಿಪರಂಪರಾಪ್ರಾಪ್ತವಾದ ಉಪದೇಶಗಳನ್ನು ಜನಸಾಮಾನ್ಯ ರಿಗೆ ತಿಳಿಯುವಂತೆ ಸೂಕ್ತವಾದ ಕಥೆ, ಚರಿತ್ರೆಯ ವಿವರಣೆ, ಜೀವನಾದರ್ಶಗಳ ಮೂಲಕ ತಿಳಿಯಹೇಳುವುದೇ ಇತಿಹಾಸವಾಗಿರುತ್ತದೆ. ಇತಿಹಾಸ ಎಂದರೆ ಇತಿ+ಹ+ಆಸ ಎಂದು ಶಬ್ದವಿಂಗಡನೆ ಮಾಡಬಹುದು. ಅದರ ಅರ್ಥವು ಇತಿ=ಈ, ಹ= ಪ್ರಕಾರ, ಆಸ= ಇದ್ದನು=ಈ ಪ್ರಕಾರ (ಇದ್ದಿತು) ಇದ್ದನು ಎಂದು ಅರ್ಥವಾಗುತ್ತದೆ. ಹಿಂದೆ ನಡೆದ ವಿಚಾರಗಳನ್ನು ಎಂದರೆ ಐತಿಹ್ಯವನ್ನು ನಿರೂಪಿಸುವುದೇ ಇತಿಹಾಸ ಎನ್ನಬಹುದು. ಹಿಂದೂಧರ್ಮದ ವೇದೋಪನಿಷತ್ತುಗಳು, ಸ್ಮೃತಿಗ್ರಂಥಗಳು ಇವುಗಳಲ್ಲಿ ಹೇಳಿರುವ ಗೂಢವಾದ ದಿವ್ಯತತ್ತ್ವಗಳನ್ನು ಒಮ್ಮೆಗೇ ಜನಸಾಮಾನ್ಯರಿಗೆ ಅರ್ಥಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ. ಹಾಗಾಗಿ ಸನಾತನಧರ್ಮದ ಈ ತತ್ತ್ವಗಳನ್ನು ಉದಾಹರಣರೂಪ ವಾಗಿಯೂ ಉಪಾಖ್ಯಾನಗಳ ಮೂಲಕವಾಗಿಯೂ ಕಾಲಭೇದಗಳನ್ನು ಅನುಸರಿಸಿ ಪ್ರಕಟಗೊಂಡ ಗ್ರಂಥಸಮೂಹವೇ ಇತಿಹಾಸಗಳಾಗಿವೆ. ಇತಿಹಾಸಗ್ರಂಥಗಳಲ್ಲಿ ಚಿತ್ರಿಸಿ ಅಭಿವ್ಯಕ್ತಗೊಂಡಿರುವ ಮಹಾನಾಯಕರು, ಸ್ತ್ರೀಪುರುಷರು, ಹಿಂದೂ ಸಮಾಜದ ಆದರ್ಶ ಕ್ರತುಶಕ್ತಿಯಾಗಿ ಪೀಳಿಗೆಯಿಂದ ಪೀಳಿಗೆಗೆ ಬದುಕಿನಲ್ಲಿ ಹೊಸ ಚೇತನ-ಉತ್ಸಾಹಗಳನ್ನು ತುಂಬಿರುತ್ತಾರೆ ಮಾತ್ರವಲ್ಲದೆ ಜನಸಾಮಾನ್ಯರಲ್ಲೂ ಹಿಂದೂಧರ್ಮದ ಸತ್ವಪೂರ್ಣ ವಾದ ತತ್ತ್ವಗಳು ನೆಲೆಗೊಂಡು ಹಿಂದೂಧರ್ಮವು ಅಚ್ಚಳಿಯದೆ ಉಳಿಯಲು ಸಹಾಯ ಲಭಿಸಿದೆ. ವೇದೋಪನಿಷತ್ತು, ಸ್ಮೃತಿ ಇವುಗಳೆಲ್ಲ ಥಕ್ಕನೆ ಗ್ರಹಿಸಲು ಸಾಧ್ಯವಿಲ್ಲದೆ ಕಠಿಣ ವಾಗಿರುತ್ತದೆ. ಆದರೆ ಇತಿಹಾಸಗ್ರಂಥಗಳಲ್ಲಿರುವ ವಿಚಾರಗಳು ಸುಲಭದಲ್ಲಿ ತಿಳಿದು ಕೊಳ್ಳಲು ಜನಸಾಮಾನ್ಯರಿಗೂ ಕೂಡ ಸಾಧ್ಯವಾಗುತ್ತವೆ. ಆದುದರಿಂದ ಈ ಇತಿಹಾಸ ಗ್ರಂಥಗಳನ್ನು 'ಜನಪ್ರಿಯ ವೇದ' ಎಂದೂ ಕರೆಯುವ ವಾಡಿಕೆ ಬಂದಿರುತ್ತದೆ.

ಹಿಂದೂಧರ್ಮದ ಇತಿಹಾಸಗ್ರಂಥಗಳು ಎರಡಿದ್ದು ಅವುಗಳು ಮಹಾಕಾವ್ಯಗಳೆಂದು ಪ್ರಸಿದ್ಧವಾಗಿರುವ ಶ್ರೀಮದ್ ರಾಮಾಯಣ ಮತ್ತು ಶ್ರೀಮನ್ ಮಹಾಭಾರತ ಗ್ರಂಥ ಗಳಾಗಿವೆ. ಮೂಲವಾಗಿ ಸಂಸ್ಕೃತಭಾಷೆಯಲ್ಲಿ ಶ್ರೀಮದ್ ರಾಮಾಯಣವನ್ನು ಮಹರ್ಷಿ ಶ್ರೀ ವಾಲ್ಮೀಕಿಯವರೂ ಶ್ರೀಮನ್ ಮಹಾಭಾರತವನ್ನು ಶ್ರೀ ವೇದವ್ಯಾಸ ಮಹರ್ಷಿ ಗಳೂ ರಚಿಸಿರುತ್ತಾರೆ.

**ಶ್ರೀಮದ್ರಾಮಾಯಣ :** ಶ್ರೀಮದ್ರಾಮಾಯಣವು ಕಾವ್ಯಗ್ರಂಥವಾಗಿದ್ದು ಇದರಲ್ಲಿ ೨೪೦೦೦ ಶ್ಲೋಕಗಳಿವೆ. ಇದರಲ್ಲಿ ಜೀವನಧರ್ಮ, ರಾಜಧರ್ಮ, ಅಧ್ಯಾತ್ಮವಿಚಾರ ಇತ್ಯಾದಿ ಅನೇಕ ವಿಚಾರಗಳು ಸುಂದರವಾದ ಉದಾಹರಣೆ, ಕಥೆಗಳ ಮೂಲಕವೂ ಆದರ್ಶವಾದ ವ್ಯಕ್ತಿಚಿತ್ರಣದ ಮೂಲಕವೂ ವಿವರಿಸಲ್ಪಟ್ಟಿದೆ. ರಘುವಂಶದ ಕುಲದೀಪ ನಾದ ಶ್ರೀರಾಮಚಂದ್ರನ ಜೀವನಕಥೆಯ ಸುತ್ತ ಬೆಳೆದುಕೊಂಡಿರುವ ಶ್ರೀರಾಮಾಯಣ

ಕಾವ್ಯದಲ್ಲಿ ಜೀವನಕ್ಕೆ ಬೇಕಾದ ಬೆಳಕು, ಸ್ಫೂರ್ತಿ, ಮಾರ್ಗದರ್ಶನಗಳು ತುಂಬಿವೆ. ಹಿಂದೂಗಳ ಜೀವನದಲ್ಲಿ ಶ್ರೀರಾಮಾಯಣ ಕಥೆಯು ನಿಜಕ್ಕೂ ಮಹತ್ವಪೂರ್ಣವಾದ ಪ್ರಭಾವವನ್ನು ಬೀರಿರುತ್ತದೆ. ರಾಮಾಯಣದ ಶ್ರೀರಾಮಚಂದ್ರ, ಶ್ರೀಸೀತಾಮಾತೆ ಇವರುಗಳ ಆದರ್ಶ ಹಿಂದೂಗಳ ಜನಜೀವನದಲ್ಲಿ ಹಾಸುಹೊಕ್ಕಾಗಿಹೋಗಿವೆ. ಶ್ರೀರಾಮನು ಹಿಂದೂಗಳು ಗೌರವಿಸುವ ಪರಮಾತ್ಮನ ಪ್ರಮುಖವಾದ ಹತ್ತು ಅವತಾರ ಪುರುಷರಲ್ಲಿ ಓರ್ವನಾಗಿದ್ದು ಭಗವಂತನೆಂದು ಕೋಟ್ಯಂತರ ಭಕ್ತರ ಪೂಜೆಗೌರವಗಳಿಗೆ ಸಹಸ್ರಾರು ವರ್ಷಗಳಿಂದ ಪಾತ್ರನಾಗಿರುತ್ತಾನೆ. ರಾಮಾಯಣದಲ್ಲಿ ಚಿತ್ರಿಸಿರುವ ಸತ್ಯಸಂಧನಾದ ಶ್ರೀರಾಮಚಂದ್ರನ ಆದರ್ಶಜೀವನ, ಸೀತಾಮಾತೆಯ ಪತಿಭಕ್ತಿ, ಪಾತಿವ್ರತ್ಯ, ಸಹನಾಶಕ್ತಿ, ಆಂಜನೇಯಸ್ವಾಮಿಯ ಸ್ವಾಮಿಭಕ್ತಿ, ಲಕ್ಷ್ಮಣ ಭರತ ಶತ್ರುಘ್ನ ಇವರ ಭ್ರಾತೃಪ್ರೇಮ ಇವುಗಳು ಹಿಂದೂಗಳ ಜೀವನಕ್ಕೆ ಇಂದಿಗೂ ಸ್ಫೂರ್ತಿಶಕ್ತಿಗಳನ್ನು ನೀಡುತ್ತಿರುವ ಹಿರಿಯ ಆದರ್ಶಗಳಾಗಿವೆ. ಶ್ರೀರಾಮಚಂದ್ರನ ದಿವ್ಯವಾದ ಹೆಸರು, ಶ್ರೀರಾಮನ ದಿವ್ಯಕಥೆ, ಶ್ರೀಮದ್ರಾಮಾಯಣ ಇವುಗಳು ಹಿಂದೂವಿಗೆ ನಿತ್ಯಸ್ಫೂರ್ತಿಯ ಹಾಗೂ ಪವಿತ್ರವಾದ ವಿಚಾರಗಳಾಗಿರುವುದೇ ಶ್ರೀರಾಮಾಯಣದ ಹಿರಿಮೆಗೆ ಉತ್ತಮ ನಿದರ್ಶನವಾಗಿರುತ್ತದೆ. ರಾಮಾಯಣದಲ್ಲಿ ಒಟ್ಟು ಏಳು ಕಾಂಡಗಳಿದ್ದು ಅವುಗಳಲ್ಲಿ ಶ್ರೀರಾಮನ ಜನ್ಮ, ಸೀತಾದೇವಿಯೊಡನೆ ವಿವಾಹ, ಅರಣ್ಯವಾಸ, ವಾಲಿವಧೆ, ರಾಮಾಯಣ ಯುದ್ಧ, ಶ್ರೀರಾಮಪಟ್ಟಾಭಿಷೇಕ, ವೈಕುಂಠಗಮನ ಇವನ್ನು ಹೇಳಿದೆ. ಹೀಗೆ ಶ್ರೀರಾಮಚಂದ್ರನ ಜೀವನಕಥೆಯು ತುಂಬಾ ಆಕರ್ಷಣೀಯವೂ, ವಿಚಾರ ಪೂರಿತವೂ ಆದ ರೀತಿಯಲ್ಲಿ ಅರಳಿ ಬೆಳಗುತ್ತಿದೆ. ಶ್ರೀಮದ್ರಾಮಾಯಣದ ಏಳು ಕಾಂಡಗಳು ಯಾವುವೆಂದರೆ :

(೧) ಬಾಲಕಾಂಡ, (೨) ಅಯೋಧ್ಯಾಕಾಂಡ, (೩) ಅರಣ್ಯಕಾಂಡ, (೪) ಕಿಷ್ಕಿಂಧಾ ಕಾಂಡ, (೫) ಸುಂದರಕಾಂಡ, (೬) ಯುದ್ಧಕಾಂಡ, (೭) ಉತ್ತರಕಾಂಡ.

**ಶ್ರೀಮನ್ ಮಹಾಭಾರತ :** ಮಹಾಭಾರತವು ಹಿಂದೂ ಧರ್ಮಗ್ರಂಥಗಳಲ್ಲಿ ಅನುಪಮವಾದ ಒಂದು ಮಹಾಗ್ರಂಥವಾಗಿರುತ್ತದೆ. ಹಿಂದೂ ಸಂಸ್ಕೃತಿ, ಆದರ್ಶ ಮತ್ತು ವಿಚಾರಧಾರೆಗಳ ಕುರಿತಾದ ವಿಸ್ತಾರವಾದ ಸ್ವರೂಪಣದ ಚಿತ್ರಣ ಈ ಗ್ರಂಥದಲ್ಲಿ ಸಿಗುವಂತೆ ಬೇರೆ ಎಲ್ಲೂ ಸಿಗುವುದಿಲ್ಲ ಎಂದರೆ ತಪ್ಪಾಗಲಾರದು. ಮಹಾಭಾರತದಲ್ಲಿ ಏನಿದೆ ಎನ್ನುವುದಕ್ಕಿಂತ ಏನು ಇಲ್ಲ ಎಂದು ಕೇಳಬೇಕಾಗುತ್ತದೆ ಎಂದು ಬಲ್ಲವರು ಹೇಳಿರುವ ಮಾತು ಸಹಜವೇ ಆಗಿದೆ. ಹಾಗಾಗಿ ಮಹಾಭಾರತವನ್ನು ಐದನೇ ವೇದ ಎಂದು ಪರ್ಯಾಯವಾಗಿ ಕರೆಯಲಾಗಿದೆ. ಇದರಲ್ಲಿ ನೀಳ್ಗತೆ, ನೀತಿಬೋಧೆ, ಚರ್ಚೆಗಳು, ಪ್ರಸಂಗಗಳು, ಧರ್ಮವಿಚಾರಗಳು ಇತ್ಯಾದಿ ವಿಶೇಷ ವಿಷಯಗಳು ತುಂಬಿದ್ದು ಇದನ್ನು ಹಿಂದೂಧರ್ಮಸಾಗರ ಎಂದು ಹೇಳಿದರೆ ಅತಿಶಯೋಕ್ತಿ ಆಗಲಾರದು. ಇದರಲ್ಲಿ ಒಟ್ಟು ೧೮ ಪರ್ವಗಳೂ ಸುಮಾರು ಒಂದು ಲಕ್ಷ ಶ್ಲೋಕಗಳೂ ಇವೆ. ಇದು ವಿಷಯಸಂಪತ್ತು ಮತ್ತು ವಿಚಾರಗಳಲ್ಲಿ ಮಹತ್ವಪೂರ್ಣವಾದ ಗ್ರಂಥವಾದ್ದರಿಂದ ಮತ್ತು ವಿಸ್ತಾರದಲ್ಲೂ ದೊಡ್ಡದಾದ್ದರಿಂದ ಇದಕ್ಕೆ 'ಮಹಾ' ಎಂಬ ಹೆಸರು ಸೇರಿರುತ್ತದೆ. ಭರತವಂಶದ

ಚಕ್ರವರ್ತಿ ಯುಧಿಷ್ಠಿರನ (ಧರ್ಮರಾಯನ) ಹಾಗೂ ಇತರ ಅರಸರ ಕಥೆ ಇದರಲ್ಲಿ ವರ್ಣಿತವಾಗಿರುವುದರಿಂದ ಇವಕ್ಕೆ ಭಾರತ ಎಂಬ ಹೆಸರು ಬಂದಿರುತ್ತದೆ. ಹೀಗೆ ಇದನ್ನು ಒಟ್ಟಾಗಿ ಮಹಾಭಾರತ ಎಂದು ಕರೆಯಲಾಗಿದೆ. ಮಹಾಭಾರತದಲ್ಲಿರುವ ಮೊದಲ ಪರ್ವ—ಆದಿಪರ್ವ, ಕೊನೆಯ ಪರ್ವ—ಸ್ವರ್ಗಾರೋಹಣಪರ್ವ. ಆದಿಯಿಂದ ಕೊನೆಯ ಪರ್ವದ ತನಕ ಹದಿನೆಂಟು ಭಾಗಗಳಾಗಿ ಮಾಡಲ್ಪಟ್ಟಿರುವ ಈ ವಿಂಗಡಣೆಗಳನ್ನು ಪರ್ವ ಎಂದು ಕರೆದಿರುತ್ತಾರೆ. ಮಹಾಭಾರತದಲ್ಲಿ ಕೌರವರು–ಪಾಂಡವರು ಎಂಬ ಎರಡು ರಾಜ ವಂಶದವರ ಚರಿತ್ರೆ, ಅವರೊಳಗೆ ರಾಜ್ಯಕ್ಕಾಗಿ ಆದ ಯುದ್ಧ, ಕೌರವರಲ್ಲಿ ಹಿರಿಯವ ನಾದ ದುರ್ಯೋಧನನು ಪಾಂಡವರಿಗೆ ಮಾಡಿದ ಮೋಸ, ಸತ್ಯವಂತರೂ ಧರ್ಮಿಷ್ಠರೂ ಆದ ಪಾಂಡವರು ಪಟ್ಟ ಕಷ್ಟ, ಕೊನೆಗೆ ಸತ್ಯಕ್ಕೆ–ಧರ್ಮಕ್ಕೆ ಜಯವು ದೊರೆತುದರ ವಿವರಣೆ ಇತ್ಯಾದಿ ವಿಚಾರಗಳು ವಿವರವಾಗಿ ಮಹಾಭಾರತದಲ್ಲಿ ವರ್ಣಿಸಲ್ಪಟ್ಟಿವೆ. ಮಾತ್ರವಲ್ಲದೆ ಅಲ್ಲಲ್ಲಿ ಬರುವ ಅನೇಕ ಉಪಕಥೆಗಳು, ಉದಾಹರಣಾ ಸಂದರ್ಭಗಳು, ನೀತಿಕಥೆಗಳು, ನೀತಿವಾಕ್ಯಗಳು, ತತ್ತ್ವವಿಚಾರಗಳು ಇವುಗಳು ಹಿಂದೂಧರ್ಮದ ವೇದೋಪನಿಷತ್ತುಗಳ ಸಾರಸರ್ವಸ್ವವನ್ನು ಒಳಗೊಂಡಿರುತ್ತವೆ. ಹಿಂದೂಧರ್ಮದ ಪ್ರಸ್ಥಾನತ್ರಯ ಗ್ರಂಥಗಳಲ್ಲಿ ಒಂದಾದ ಶ್ರೀಮದ್ ಭಗವದ್ಗೀತೆಯು ಶ್ರೀಮನ್ ಮಹಾಭಾರತದ ಭೀಷ್ಮಪರ್ವಕ್ಕೆ ಸೇರಿದುದಾಗಿದೆ ಎಂದಾಗ ಮಹಾಭಾರತದ ಪವಿತ್ರತೆ-ಹಿರಿಮೆಗಳನ್ನು ಹೆಚ್ಚು ಬಣ್ಣಿಸುವ ಅಗತ್ಯವಿಲ್ಲ. ಹಿಂದೂಗಳು ಗೌರವಿಸಿ ಭಕ್ತಿ-ಪ್ರೀತಿ ಗಳಿಂದ ಪೂಜಿಸುವ ಭಗವಾನ್ ಶ್ರೀಕೃಷ್ಣನ ವೃತ್ತಾಂತ, ಭವ್ಯ ಹಾಗೂ ದಿವ್ಯಜೀವನದ ಸಂಗತಿಗಳು ಮಹಾಭಾರತದಲ್ಲಿ ಸಾಕಷ್ಟು ವಿವರವಾಗಿ ಚಿತ್ರಿತವಾಗಿವೆ. ಮನುಷ್ಯಜೀವನದ ಈ ಲೋಕದ ಹಾಗೂ ಪರಲೋಕದ ಸ್ಥಿತಿಗತಿಗಳಿಗೆ ಸಂಬಂಧಿಸಿದಂತೆ ಸಕಲ ವಿಚಾರಗಳ ಕುರಿತಾಗಿಯೂ ಮಹಾಭಾರತ ಗ್ರಂಥದಲ್ಲಿ ಬೋಧನೆ, ಬೆಳಕು ಮತ್ತು ಮಾರ್ಗದರ್ಶನ ಗಳು ದೊರೆಯುತ್ತವೆ. ಧರ್ಮರಾಯನ ಧರ್ಮನಿಷ್ಠೆ ಧಾರ್ಮಿಕ ಜೀವನ, ಭೀಮನ ಸಾಹಸ, ಅರ್ಜುನನ ಪೌರುಷ, ಶ್ರೀಕೃಷ್ಣನ ಬಹುಮುಖಪ್ರತಿಭೆಯ ಸರ್ವಶಕ್ತವಾದ ದಿವ್ಯ ವ್ಯಕ್ತಿತ್ವ, ಕುಂತಿಯ ದೈವಭಕ್ತಿ, ಕರ್ಣನ ತ್ಯಾಗ, ಭೀಷ್ಮನ ರಾಜಧರ್ಮ ಮತ್ತು ಮೋಕ್ಷಧರ್ಮ ಉಪದೇಶಗಳು ಇತ್ಯಾದಿ ವಿಚಾರಗಳು ಸದಾಕಾಲಕ್ಕೂ ನೂತನ ಹಾಗೂ ಸ್ಫೂರ್ತಿದಾಯಕವಾಗಿದ್ದು ಜೀವನಕ್ಕೆ ಬೆಳಕನ್ನೂ ಮತ್ತು ಬಲವನ್ನೂ ಮಾರ್ಗದರ್ಶನ ವನ್ನೂ ನೀಡುವಂತಿವೆ. ಗ್ರಂಥರಚನೆಯ ದೃಷ್ಟಿಯಿಂದ ಮಹಾಕಾವ್ಯವಾಗಿರುವ ಈ ಗ್ರಂಥ, ಕಥೆಯ ದೃಷ್ಟಿಯಿಂದ ಇತಿಹಾಸಗ್ರಂಥವಾಗಿದ್ದು ಧರ್ಮವಿಚಾರಗಳ ದೃಷ್ಟಿಯಿಂದ ಒಂದು ಉತ್ತಮವಾದ ಧಾರ್ಮಿಕ ಗ್ರಂಥವಾಗಿದೆ. ಧರ್ಮನಿಷ್ಠರೂ ಭಗವದ್ಭಕ್ತರೂ ಸತ್ಕರ್ಮನಿರತರೂ ಆದವರಿಗೆ ಜೀವನದಲ್ಲಿ ಕಷ್ಟಗಳು ಅನೇಕ ಬಂದರೂ ಅವು ಕ್ಷಣಿಕ ಎಂದಾಗಿ ಕೊನೆಗೆ ಚಿರಶಾಂತಿ–ಆನಂದಗಳು ದೊರೆಯುತ್ತವೆ ಎಂಬುದು ಮಹಾಭಾರತ ದಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ.

ಮಹಾಭಾರತದ ಹದಿನೆಂಟು ಪರ್ವಗಳು ಮತ್ತು ಪರ್ವವಿಚಾರಗಳ ಸೂಕ್ಷ್ಮ ಪರಿಚಯಾತ್ಮಕ ವಿವರ ಹೀಗಿದೆ :

೧. **ಆದಿಪರ್ವ :** ಮಹಾಭಾರತದಲ್ಲಿ ವಿವರಿಸಿರುವ ನಾಯಕರುಗಳ ವಂಶವಿಚಾರ, ಉತ್ಪತ್ತಿ ಮತ್ತು ಬಾಲ್ಯದ ಕತೆಗಳು ಆದಿಪರ್ವದಲ್ಲಿ ಹೇಳಿದ ವಿಚಾರಗಳಾಗಿವೆ.

೨. **ಸಭಾಪರ್ವ :** ಮಹಾಭಾರತದ ಪ್ರಧಾನ ನಾಯಕ ಧರ್ಮರಾಯನು ರಾಜಸೂಯ ಯಾಗ ಮಾಡುವುದು, ಕೌರವರೊಡನೆ ಪಗಡೆ ಜೂಜಾಟದಲ್ಲಿ ಸೋಲುವುದು ಇತ್ಯಾದಿಗಳ ವಿಚಾರ ಈ ಪರ್ವದಲ್ಲಿದೆ.

೩. **ವನಪರ್ವ :** ಪಗಡೆಯ ಜೂಜಿನಲ್ಲಿ ಸೋತ ಧರ್ಮರಾಯನು ಷರತ್ತಿನಂತೆ ತನ್ನವರೊಡನೆ ಕೂಡಿಕೊಂಡು ವನವಾಸಕ್ಕೆ ಹೋಗುವುದು, ಅಲ್ಲಿ ೧೨ ವರ್ಷ ಅರಣ್ಯವಾಸ ಅನುಭವಿಸುವುದು ಇತ್ಯಾದಿ ವಿವರಗಳು ಈ ಪರ್ವದಲ್ಲಿ ಸೇರಿವೆ.

೪. **ವಿರಾಟಪರ್ವ :** ಪಗಡೆ ಜೂಜಿನ ಷರತ್ತಿನಂತೆ ೧೨ ವರ್ಷ ವನವಾಸದನಂತರ ಒಂದು ವರ್ಷ ಅಜ್ಞಾತವಾಸ ಮಾಡಲು ವಿರಾಟನಗರಕ್ಕೆ ಪಾಂಡವರು ತೆರಳುವ ವಿಚಾರ ಇದರಲ್ಲಿ ವರ್ಣಿತವಾಗಿದೆ.

೫. **ಉದ್ಯೋಗಪರ್ವ :** ಕೌರವರೊಡನೆ ಪಗಡೆಯಾಟದ ಜೂಜಿನ ವೇಳೆ ಮಾಡಿದ ಒಪ್ಪಂದದಂತೆ ಪಾಂಡವರು ಆಟದಲ್ಲಿ ಸೋತಮೇಲೆ ವನವಾಸ-ಅಜ್ಞಾತವಾಸಗಳನ್ನು ತೀರಿಸಿ ಕೊನೆಗೆ ತಮ್ಮ ರಾಜ್ಯವನ್ನು ತಮಗೆ ಮರಳಿ ಕೊಡಬೇಕೆಂದು ಕೌರವನನ್ನು ಕೇಳುತ್ತಾರೆ. ಆದರೆ ಕೌರವನು ಪಾಂಡವರಿಗೆ ರಾಜ್ಯ ಕೊಡಲು ಒಪ್ಪುವುದಿಲ್ಲ. ಕೊನೆಗೆ ಬೇರೆ ಹಾದಿ ಇಲ್ಲದೆ ಪಾಂಡವರು ಕೌರವರೊಡನೆ ಯುದ್ಧಕ್ಕೆ ಸಿದ್ಧರಾಗುತ್ತಾರೆ. ಈ ವಿವರಗಳೆಲ್ಲಾ ಉದ್ಯೋಗಪರ್ವದಲ್ಲಿದೆ.

೬. **ಭೀಷ್ಮಪರ್ವ :** ಶ್ರೀಕೃಷ್ಣನು ಅರ್ಜುನನಿಗೆ ನೀಡಿದ ಶ್ರೀಮದ್ ಭಗವದ್ಗೀತಾ ಉಪದೇಶ, ಕೌರವರು ಕುರುಕ್ಷೇತ್ರದಲ್ಲಿ ಭೀಷ್ಮಾಚಾರ್ಯರ ಸೇನಾಧಿಪತ್ಯದಲ್ಲಿ ಪಾಂಡವರೊಡನೆ ೧೦ ದಿನಗಳ ತನಕ ಮಾಡಿದ ಯುದ್ಧದ ವಿಚಾರ ಈ ಪರ್ವದಲ್ಲಿದೆ.

೭. **ದ್ರೋಣಪರ್ವ :** ಆಚಾರ್ಯ ದ್ರೋಣರ ನೇತೃತ್ವದಲ್ಲಿ ಕೌರವರು ಪಾಂಡವರೊಡನೆ ಮಾಡಿದ ಐದು ದಿನಗಳ ಯುದ್ಧದ ವಿಷಯವಿದೆ.

೮. **ಕರ್ಣಪರ್ವ :** ಈ ಪರ್ವದಲ್ಲಿ ದ್ರೋಣರನಂತರ ಕರ್ಣನು ಕುರುಸೇನಾಧಿಪತ್ಯವನ್ನು ವಹಿಸಿಕೊಂಡು ಯುದ್ಧಮಾಡಿದುದು ಮತ್ತು ಕರ್ಣನ ತ್ಯಾಗದ ಹಿರಿಮೆ-ಸಾಹಸಗಳ ವಿಚಾರಗಳಿವೆ.

೯. **ಶಲ್ಯಪರ್ವ :** ಕರ್ಣಾವಸಾನದನಂತರ ಕುರುಸೇನೆಯ ಆಧಿಪತ್ಯವನ್ನು ಶಲ್ಯರಾಜನು ವಹಿಸುತ್ತಾನೆ. ಆಮೇಲೆ ಆದ ಯುದ್ಧಗಳ ಘಟನೆಗಳ ವಿವರವೇ ಈ ಪರ್ವದ ವಿಷಯವಸ್ತುವಾಗಿದೆ. ಈ ಪರ್ವದಲ್ಲಿ ೧೮ ದಿನಗಳ ಭಾರತಯುದ್ಧ ಮುಗಿದ ವಿವರಗಳೂ ಸೇರಿವೆ.

೧೦. **ಸೌಪ್ತಿಕಪರ್ವ :** ಈ ಪರ್ವದಲ್ಲಿ ಭಾರತಯುದ್ಧ ಮುಗಿದನಂತರ ಪಾಂಡವರು ನಿದ್ದೆಮಾಡುತ್ತಿದ್ದಾಗ ರಾತ್ರಿ ಅಶ್ವತ್ಥಾಮನು ಪಾಂಡವರ ಮಕ್ಕಳನ್ನು ಕೊಲ್ಲುವಿಕೆ ಮತ್ತು ಮುಂದಿನ ಕಥಾವಿವರಣೆಗಳಿವೆ.

೧೧. **ಸ್ತ್ರೀಪರ್ವ :** ಮಹಾಭಾರತದ ಯುದ್ಧದಲ್ಲಿ ಮೃತರಾದವರ ಸಂಬಂಧಿಗಳಾದ

ಸ್ತ್ರೀಯರು ಮೃತರ ಬಗ್ಗೆ ದುಃಖಪಡುವಿಕೆ ಇತ್ಯಾದಿ ವಿಚಾರಗಳು ಈ ಪರ್ವದಲ್ಲಿವೆ.

೧೨. **ಶಾಂತಿಪರ್ವ :** ಮಹಾಭಾರತದಲ್ಲೆಲ್ಲಾ ಈ ಪರ್ವವೇ ಬಹಳ ದೊಡ್ಡದಾದುದಾಗಿದೆ. ಇದರಲ್ಲಿ ಸುಮಾರು ೧೫೦೦೦ ಶ್ಲೋಕಗಳಿವೆ. ಯುದ್ಧದಲ್ಲಿ ಮಡಿದ ಅನೇಕ ನಿರಪರಾಧಿಗಳಾದ ರಾಜರುಗಳ, ಸೈನಿಕರ ಹಾಗೂ ಇತರರ ಬಗ್ಗೆ ತುಂಬಾ ದುಃಖಪಟ್ಟು ಪರಿತಪಿಸುತ್ತಿದ್ದ ಯುಧಿಷ್ಠಿರನಿಗೆ ಭೀಷ್ಮಾಚಾರ್ಯರು ತಮ್ಮ ಮರಣಶಯ್ಯೆಯಿಂದ ನೀಡಿದ ಮಹಾ ಉಪದೇಶಗಳೇ ಈ ಪರ್ವದ ವಿಷಯವಸ್ತುವಾಗಿದೆ. ಈ ಪರ್ವದಲ್ಲಿ ಜೀವನತತ್ತ್ವ, ರಾಜಧರ್ಮ. ಆಪದ್ಧರ್ಮ, ಮೋಕ್ಷಧರ್ಮಗಳು ಇತ್ಯಾದಿ ಮಹತ್ಪೂರ್ಣವಾದ ವಿಚಾರಗಳ ಕುರಿತಾಗಿ ತುಂಬಾ ವಿಸ್ತಾರವೂ ವಿಷಯಪೂರ್ಣವೂ ಆದ ರೀತಿಯಲ್ಲಿ ವಿವರಣೆಗಳೂ ಉಪದೇಶಗಳೂ ಸೇರಿವೆ. ವೇದವೇದಾಂತಗಳ ಗಹನವಾದ ತತ್ತ್ವಗಳು ಶಾಂತಿಪರ್ವದಲ್ಲಿ ಸರಳವಾದ ರೀತಿಯಲ್ಲಿ ವಿವರಿಸಲ್ಪಟ್ಟಿವೆ.

೧೩. **ಅನುಶಾಸನಿಕಪರ್ವ :** ಈ ಪರ್ವದಲ್ಲಿ ಶಾಂತಿಪರ್ವದಂತೆಯೇ ಕರ್ಮ, ಭಕ್ತಿ, ಜ್ಞಾನ ಇತ್ಯಾದಿ ಭಗವತ್‌ಪ್ರಾಪ್ತಿಸಾಧನೆಗಳ ಸವಿಸ್ತಾರವಾದ ವಿವರಣೆಗಳು ಇವೆ.

೧೪. **ಅಶ್ವಮೇಧಪರ್ವ :** ಭೀಷ್ಮರಿಂದ ಜೀವನಧರ್ಮದ ಕುರಿತಾಗಿ ಉಪದೇಶವನ್ನು ಪಡೆದ ಯುಧಿಷ್ಠಿರನು ಯುದ್ಧದ ಪಾಪವಿಮೋಚನೆಗಾಗಿ ಅಶ್ವಮೇಧವೆಂಬ ಯಾಗವನ್ನು ಮಾಡುತ್ತಾನೆ. ಆ ಸಂಬಂಧದ ವಿವರಣೆಗಳು ಈ ಪರ್ವದಲ್ಲಿವೆ.

೧೫. **ಆಶ್ರಮವಾಸಪರ್ವ :** ಜೀವನದ ಆಶ್ರಮಧರ್ಮಗಳಂತೆ ಧೃತರಾಷ್ಟ್ರ, ಗಾಂಧಾರಿ, ಕುಂತಿ—ಇದರೇ ಮೊದಲಾದವರು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸುತ್ತಾರೆ. ಅವರು ರಾಜ್ಯದಿಂದ ಹೊರಹೋಗುವಿಕೆ ಇತ್ಯಾದಿ ವಿಚಾರಗಳ ವಿವರಣೆಗಳು ಈ ಪರ್ವದಲ್ಲಿವೆ.

೧೬. **ಮೌಸಲಪರ್ವ :** ಯಾದವರ ಒಳಗಿನ ಕಲಹ. ಮುಸಲದಿಂದ ಅವರೆಲ್ಲರೂ ನಾಶ ಹೊಂದಿದ ವಿವರ ಇತ್ಯಾದಿ ವಿಷಯಗಳು ಇದರಲ್ಲಿವೆ.

೧೭. **ಮಹಾಪ್ರಸ್ಥಾನಪರ್ವ :** ಯಾದವವಂಶದಲ್ಲಿ ಜನ್ಮತಳೆದ ಭಗವಂತ ಶ್ರೀಕೃಷ್ಣನು ತನ್ನ ದೇಹವನ್ನು ತ್ಯಾಗಮಾಡುವಿಕೆ, ಪಾಂಡವರು ಶ್ರೀಕೃಷ್ಣನು ದೇಹತ್ಯಾಗಮಾಡಿದ ವಿಚಾರ ತಿಳಿದು ದುಃಖದಿಂದ ತಾವು ಜೀವನದಲ್ಲಿ ಜುಗುಪ್ಸೆಹೊಂದುವಿಕೆ, ಅನಂತರ ಯುಧಿಷ್ಠಿರನು ತನ್ನ ಸಹೋದರರು ಹಾಗೂ ಪತ್ನಿ ದ್ರೌಪದಿಯೊಡನೆ ಸ್ವರ್ಗಲೋಕದೆಡೆಗೆ ಮಹಾಪ್ರಸ್ಥಾನಮಾಡುವ ವಿವರಗಳು ಈ ಪರ್ವದಲ್ಲಿವೆ.

೧೮. **ಸ್ವರ್ಗಾರೋಹಣಪರ್ವ :** ಸ್ವರ್ಗದೆಡೆಗೆ ಮಹಾಪ್ರಸ್ಥಾನಮಾಡುತ್ತಾ ಹೊರಟ ಪಾಂಡವರಲ್ಲಿ ಯುಧಿಷ್ಠಿರನು ಮಾತ್ರ ಉಳಿದು ಇತರರೆಲ್ಲರೂ ಅರ್ಧದಾರಿಯಲ್ಲೇ ಮೃತರಾಗುವಿಕೆ, ಯುಧಿಷ್ಠಿರನು ಇಂದ್ರರಥದಲ್ಲಿ ಕುಳಿತು ಸಶರೀರಿಯಾಗಿ ಸ್ವರ್ಗಲೋಕಕ್ಕೆ ತೆರಳುವಿಕೆ, ಸ್ವರ್ಗದಲ್ಲಿ ತನ್ನ ಬಂಧುಬಾಂಧವರನ್ನು ಕಾಣುವಿಕೆ ಇತ್ಯಾದಿ ವಿವರಗಳಿದ್ದು ಈ ಪರ್ವದೊಡನೆ ಮಹಾಭಾರತ ಕಥೆಯ ಮುಕ್ತಾಯವಾಗುತ್ತದೆ.

ಹೀಗೆ ಕಥೆಯೊಡನೆ ಅನೇಕ ಉಪಕಥೆಗಳೂ ನೀತಿಕಥೆಗಳೂ ವಿದುರನೀತಿ, ಸನತ್ಸುಜಾತ ನೀತಿ, ಶ್ರೀಮದ್‌ಭಗವದ್ಗೀತೆ, ಅನುಗೀತೆ ಇತ್ಯಾದಿ ವಿಶೇಷವಾದ ನೀತಿಗೀತೆಗಳೂ ಮಹಾಭಾರತದಲ್ಲಿ ಸೇರಿದ್ದು ಇದು ನಿಜಕ್ಕೂ ಹಿಂದೂಧರ್ಮದ ವಿಶಿಷ್ಟ ವಿವರಗಳನ್ನು

ತನ್ನದೇ ಆದ ರೀತಿಯಲ್ಲಿ ಒಳಗೊಂಡ ಬೃಹದ್‌ಗ್ರಂಥವಾಗಿದೆ.

**ಪುರಾಣಗಳು :** ಪುರಾಣವೆಂದರೆ ಅತಿಪ್ರಾಚೀನವಾದುದು ಎಂದು ಅರ್ಥವಾಗುತ್ತದೆ. 'ಪುರಾ ಅತೀತಾನಾಗತಾವರ್ಥಾವಣತಿ' ಎಂದು 'ಅಣು' ಧಾತುವನ್ನು ಆಶ್ರಯಿಸಿ ಪುರಾ=ಹಿಂದೆ, ಅತೀತಂ=ಕಳೆದುಹೋದುದು, ಅನಾಗತಂ=ಬರಲಿರುವುದು, ಎಂಬ ಅರ್ಥವನ್ನು ಪುರಾಣ ಶಬ್ದಕ್ಕೆ ಪಂಡಿತರು ಹೇಳುತ್ತಾರೆ (ವಾಚಸ್ಪತಿ). ಹಾಗೆಯೇ ಪುರಾಣವೆಂದರೆ 'ಪುರಾ ನೀಯತೇ' ಹಿಂದೆ ಆದದ್ದು, ಪುರಾ ಭವಂ ಪುರಾಣಂ=ಅಂದರೆ ಹಿಂದೆ ನಡೆದದ್ದು ಎಂದು (ಪಾಣಿನಿ ಮಹರ್ಷಿಗಳು ಹೇಳುತ್ತಾರೆ) ಇನ್ನೊಂದು ಅರ್ಥ ವಿವರಣೆಯೂ ಇದೆ. ಒಟ್ಟಿನಲ್ಲಿ ಪುರಾಣ ಎಂದರೆ 'ಹಿಂದೆ ನಡೆದದ್ದು' ಎಂದು ಹೇಳ ಬಹುದು. ಪುರಾಣಗಳೆಂದು ಹೇಳಬೇಕಾದರೆ ಅವು ಈ ೫ ಲಕ್ಷಣಗಳಿಂದ ಕೂಡಿರಬೇಕು. ಅವು ಯಾವುವೆಂದರೆ :

(೧) ದೇಶ, ಚರಿತ್ರೆ ಅಂಶಗಳನ್ನು ಒಳಗೊಂಡಿರುವಿಕೆ.
(೨) ಸೃಷ್ಟಿಚರಿತ್ರೆಯನ್ನು ಒಳಗೊಂಡಿರುವಿಕೆ.
(೩) ಉಪಸೃಷ್ಟಿಚರಿತ್ರೆ.
(೪) ರಾಜಮಹಾರಾಜರ ವಂಶಾವಳಿ ವಿವರ–ಚರಿತ್ರೆ.
(೫) ಮನ್ವಂತರ ಚರಿತ್ರೆ—ಅಂದರೆ ಯಾವ ಮನುವು ಎಷ್ಟು ಕಾಲ ಅಧಿಕಾರ ನಡೆಸಿದ ಎಂಬ ವಿಚಾರಗಳನ್ನು ಒಳಗೊಂಡಿರುವಿಕೆ.*

ಒಟ್ಟಿನಲ್ಲಿ ವೇದೋಪನಿಷತ್ತುಗಳಲ್ಲೂ, ಸ್ಮೃತಿಗಳಲ್ಲೂ, ಇತಿಹಾಸಗಳಲ್ಲೂ ಪ್ರತಿ ಪಾದಿತವಾದ ವಿಚಾರಗಳನ್ನು ಜನಸಾಮಾನ್ಯರಿಗೆ ಕೂಡ ತಿಳಿಯುವಂತೆ ಹೇಳುವುದೇ ಪುರಾಣಗಳ ಉದ್ದಿಶ್ಯವಾಗಿದೆ. ಪುರಾಣಗಳಲ್ಲಿ ವಿವರವಾದ ವರ್ಣನೆ, ಉಪಕಥೆಗಳು, ರಾಜರ–ದೇವತೆಗಳ ಸಾಹಸಕಥೆಗಳು, ಸಂತರ ಜೀವನವೃತ್ತಾಂತ, ಧರ್ಮಾನುಷ್ಠಾನ ವಿವರಗಳು, ಭಗವಂತನು ಲೋಕದಲ್ಲಿ ಜನರ ಉದ್ಧಾರಕ್ಕಾಗಿ ಲೋಕಶಾಂತಿಗಾಗಿ ಅವತರಿಸಿ ತನ್ನ ಮಹಿಮೆಯಿಂದ ಕೂಡಿದ ಅವತಾರಲೀಲೆಗಳನ್ನು ಮಾಡಿದುದರ ವಿವರಣೆಗಳು ಇವುಗಳೆಲ್ಲಾ ಇವೆ. ಮಾತ್ರವಲ್ಲದೆ ಬಹಳ ಗಹನವಾದ ಅಧ್ಯಾತ್ಮವಿಚಾರ ಗಳನ್ನು ಸರಳವಾದ ರೀತಿಯಲ್ಲಿ ಪುರಾಣಗಳಲ್ಲಿ ವಿವರಿಸಿರುವುದು ಅವುಗಳ ಇನ್ನೊಂದು ವೈಶಿಷ್ಟ್ಯವಾಗಿದೆ. ಪುರಾಣಗಳಲ್ಲಿ ಉಲ್ಲೇಖಿತವಾಗಿರುವ ಕಥೆಗಳಲ್ಲಿ ಕೆಲವು ಸತ್ಯವಾಗಿದ್ದರೆ ಹಲವು ಕಾಲ್ಪನಿಕವಾಗಿರುತ್ತವೆ. ಪುರಾಣಗಳ ಉದ್ದಿಶ್ಯ ಐತಿಹಾಸಿಕ ವರದಿಯಲ್ಲ. ಬದಲು ದಿವ್ಯವಾದ ಅಧ್ಯಾತ್ಮತತ್ತ್ವಗಳ ವಿವರಣೆ ಹಾಗೂ ಪ್ರತಿಪಾದನೆಯಾಗಿದೆ. ಹಾಗಾಗಿ ಪುರಾಣದ ಕಥೆಯು ಸತ್ಯತೆಗಿಂತಲೂ ಕಥೆ ಉಪದೇಶಿಸುವ ಸತ್ಯ–ನೀತಿಗಳೇ ಮುಖ್ಯವಾಗಿ ಗಣನೆಗೆ ತೆಗೆದುಕೊಳ್ಳಬೇಕಾದ ಸಂಗತಿಯಾಗಿದೆ. ಪುರಾಣದಲ್ಲಿ ಭಗವಂತನು

* ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।
ವಂಶಾನುಚರಿತಂ ಚೈವ ಪುರಾಣಂ ಪಂಚಲಕ್ಷಣಮ್ ॥

—ದೇವೀಭಾಗವತ

ಮಾನವನ ವಿಕಾಸದ ಹಾದಿಯಲ್ಲಿ ಹೇಗೆ ನೆರವಾಗುತ್ತಾನೆ, ಪರವಸ್ತು-ಪರಸತ್ಯವಾದ ಭಗವಂತ ಭೂಮಿಗೆ ಇಳಿದು ಬಂದು ಹೇಗೆ ತನ್ನ ದಿವ್ಯಲೀಲೆಗಳನ್ನು ಎಸಗಿದ್ದಾನೆ ಎಂಬ ವಿವರಗಳು ಬಹಳ ವಿಸ್ತಾರವಾಗಿವೆ. ಪುರಾಣಗ್ರಂಥಗಳು ಶ್ರೀರಾಮ, ಶ್ರೀಕೃಷ್ಣ ಇತ್ಯಾದಿ ಭಗವಂತನ ಅವತಾರಗಳ ಕುರಿತಾದ ವಿವರಣೆಗಳನ್ನು ಒಳಗೊಂಡಿದ್ದು ಜೊತೆಗೆ ಇತರ ಹಲವಾರು ಕಥೆ, ಧರ್ಮಬೋಧೆ ಮೊದಲಾದ ವಿವರಗಳಿಂದ ಸಂಪನ್ನ ವಾಗಿದ್ದು ತುಂಬಾ ಮಹತ್ಪೂರ್ಣವಾದ ಗ್ರಂಥಸಮೂಹಗಳಾಗಿವೆ. ಪುರಾಣಗಳಲ್ಲಿ ಬರುವ ಭಕ್ತ ಪ್ರಹ್ಲಾದ, ಭಕ್ತ ಧ್ರುವ, ಪತಿಭಕ್ತೆ ಸಾವಿತ್ರಿ, ಮಹಾಸತಿ ದಮಯಂತಿ ಇತ್ಯಾದಿ ಆದರ್ಶ ವ್ಯಕ್ತಿಚಿತ್ರಣಗಳು ಹಿಂದೂಧರ್ಮದ ಚಿರನೂತನ ಸತ್ಯವನ್ನು ಸ್ಪಷ್ಟ ವಾಗಿ ಸಾರುತ್ತವೆ. ಪುರಾಣಗಳಲ್ಲಿ ಎರಡು ವಿಭಾಗಗಳಿದ್ದು ಅವನ್ನು ಮಹಾಪುರಾಣ ಮತ್ತು ಉಪಪುರಾಣ ಎಂದು ಕರೆಯುತ್ತಾರೆ. ಒಟ್ಟು ಪುರಾಣಗಳ ಸಂಖ್ಯೆ ೩೬. ಇವು ಗಳಲ್ಲಿ ಪುರಾಣಗಳ ಸಂಖ್ಯೆ ೧೮ ಆಗಿದ್ದು ಪ್ರತಿಯೊಂದು ಪುರಾಣಕ್ಕೂ ಉಪಪುರಾಣ ವೊಂದೊಂದು ಇದ್ದು ಅವುಗಳ ಸಂಖ್ಯೆ ಯಥಾಕ್ರಮವಾಗಿ ೧೮ ಆಗಿರುತ್ತದೆ. ಉಪ ಪುರಾಣಗಳ ಸಂಖ್ಯೆ ಇನ್ನೂ ಹೆಚ್ಚಿದೆಯಾದರೂ ಅವುಗಳಲ್ಲಿ ಪ್ರಸಿದ್ಧವಾದವು ಬರೇ ೧೮. ಮಹಾಪುರಾಣಗಳು ೧೮ ಇರುವುದರಿಂದ ಅವನ್ನು ಅಷ್ಟಾದಶಪುರಾಣ ಎಂದು ಕರೆಯ ಲಾಗಿದೆ. (ಅಷ್ಟಾದಶ=ಹದಿನೆಂಟು).

ಈ ಅಷ್ಟಾದಶ ಪುರಾಣಗಳು ಯಾವುವೆಂದರೆ :

(೧) ಭಾಗವತಪುರಾಣ, (೨) ಅಗ್ನಿಪುರಾಣ, (೩) ನಾರದಪುರಾಣ, (೪) ಪದ್ಮ ಪುರಾಣ, (೫) ಸ್ಕಾಂದಪುರಾಣ, (೬) ಭವಿಷ್ಯಪುರಾಣ, (೭) ಬ್ರಹ್ಮಪುರಾಣ, (೮) ಮತ್ಸ್ಯಪುರಾಣ, (೯) ಬ್ರಹ್ಮವೈವರ್ತಪುರಾಣ, (೧೦) ಬ್ರಹ್ಮಾಂಡಪುರಾಣ, (೧೧) ವಾಯುಪುರಾಣ, (೧೨) ಲಿಂಗಪುರಾಣ, (೧೩) ವಿಷ್ಣುಪುರಾಣ, (೧೪) ವಾಮನಪುರಾಣ, (೧೫) ಮಾರ್ಕಂಡೇಯಪುರಾಣ, (೧೬) ವರಾಹಪುರಾಣ, (೧೭) ಕೂರ್ಮಪುರಾಣ, (೧೮) ಗರುಡಪುರಾಣ.

ಪುರಾಣಗಳ ಹೆಸರನ್ನು ನೆನಪಿನಲ್ಲಿಟ್ಟುಕೊಳ್ಳಲು ಸಹಕಾರಿಯಾಗುವ ಪ್ರಸಿದ್ಧ ಶ್ಲೋಕವೊಂದು ಹೀಗಿದೆ :

ಮದ್ವಯಂ ಭದ್ವಯಂ ಚೈವ
ಬ್ರತ್ರಯಂ ವಚತುಷ್ಟಯಂ ।
ನಾಲಿಂಪಾಗ್ನಿಪುರಾಣಾನಿ
ಕೂಸ್ಕಂ ಗಾರುಡಮೇವ ಚ ॥

ತಾತ್ಪರ್ಯ : ಮ ಎಂಬ ಅಕ್ಷರದಿಂದ ಆರಂಭವಾಗುವ ಹೆಸರಿನ ಪುರಾಣಗಳು ಎರಡು ; ಭ ಎಂಬ ಅಕ್ಷರದಿಂದ ಆರಂಭವಾಗುವ ಪುರಾಣಗಳು ಎರಡು ; ಬ್ರ ಎಂಬ ಅಕ್ಷರದಿಂದ ಆರಂಭವಾಗುವ ಹೆಸರಿನ ಪುರಾಣಗಳು ಮೂರು ; ವ ಎಂಬ ಅಕ್ಷರದಿಂದ ಆರಂಭವಾಗುವ ಹೆಸರಿನ ಪುರಾಣಗಳು ನಾಲ್ಕು ; ನಾ, ಲಿಂ, ಪ, ಅಗ್ನಿ, ಕೂ, ಸ್ಕಂ, ಗಾ—ಎಂಬ ಅಕ್ಷರದಿಂದ ಆರಂಭವಾಗುವ ಪುರಾಣಗಳು ಏಳು.

## ಉಪಪುರಾಣಗಳು

ಉಪಪುರಾಣಗಳ ಹೆಸರುಗಳನ್ನು ಕೂರ್ಮ, ಬೃಹದ್ಧರ್ಮ ಮತ್ತು ಏಕಾಮ್ರ ಪುರಾಣಗಳಲ್ಲಿ ಹೇಳಲಾಗಿದ್ದು ಮೂರರ ಹೇಳಿಕೆಯಲ್ಲೂ ನಾಮಸಂಖ್ಯೆಗಳಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ. ಉಪಪುರಾಣಗಳ ಸಂಖ್ಯೆ ವಿಪುಲವಿದ್ದು ಇಲ್ಲಿ ಕೂರ್ಮಪುರಾಣದ ಪ್ರಕಾರ ಹೆಸರುಗಳನ್ನು ಹೇಳಲಾಗಿದೆ. ಅವು ಯಾವುವೆಂದರೆ :

(೧) ಆದ್ಯ, (೨) ನರಸಿಂಹ, (೩) ಸ್ಕಾಂದ, (೪) ಶಿವ ಅಥವಾ ಶಿವಧರ್ಮ, (೫) ದೂರ್ವಾಸ, (೬) ನಾರದೀಯ, (೭) ಕಾಪಿಲ, (೮) ವಾಮನ, (೯) ಉಶನ ಸೇರಿತ, (೧೦) ಬ್ರಹ್ಮಾಂಡ, (೧೧) ವಾರುಣ, (೧೨) ಕಾಲಿಕಾ, (೧೩) ಮಾಹೇಶ್ವರ, (೧೪) ಸಾಂಬ, (೧೫) ಸೌರ, (೧೬) ಪರಾಶರ, (೧೭) ಮಾರೀಚ, (೧೮) ಭಾರ್ಗವ.

ಉಪಪುರಾಣಗಳೆಂದರೆ ನಮ್ಮ ದೇಶದಲ್ಲಿ ಪ್ರಾದೇಶಿಕವಾಗಿ ಹುಟ್ಟಿಕೊಂಡ ಪಂಥಗಳ–ಮತಾಚಾರಗಳ ಸಂಬಂಧವಾಗಿ ಸಮಾಜದಲ್ಲಿ ಮೂಡಿಬಂದ ಧಾರ್ಮಿಕ ಅಗತ್ಯಗಳ ದೃಷ್ಟಿಯಿಂದ ರೂಪುಗೊಂಡ ಪುರಾಣಕೃತಿಗಳು. ಉಪ ಎಂದರೆ ಸಮೀಪ ಎಂದರ್ಥ. ಉಪಪುರಾಣವೆಂದರೆ ಸಮೀಪದ ಪುರಾಣ—ಅಂದರೆ ಮಹಾಪುರಾಣಕ್ಕೆ ಸಮೀಪದ ಪುರಾಣ ಎಂದು ಸಾರಾರ್ಥ. ಉಪ ಎಂದರೆ ಕೆಳಗೆ, ಅಧೀನತೆ ಎಂಬ ಅರ್ಥವೂ ಇದೆ. ಈ ದೃಷ್ಟಿಯಿಂದ ಉಪಪುರಾಣ ಎಂದರೆ ಮಹಾಪುರಾಣಕ್ಕೆ ಕೆಳಗಾದ, ಅಧೀನವಾದ ಪುರಾಣ ಎಂದು ಅರ್ಥವಾಗುತ್ತದೆ. ಒಟ್ಟಿನಲ್ಲಿ ಉಪಪುರಾಣ ಎಂದರೆ ಮೂಲವಾದ ಮಹಾಪುರಾಣಗಳನಂತರದ ಪುರಾಣ ಎಂದು ತಾತ್ಪರ್ಯ. ಉಪಪುರಾಣಗಳೆಲ್ಲ ಮಹಾ ಪುರಾಣಗಳನಂತರವೇ ಹುಟ್ಟಿಕೊಂಡವುಗಳಾಗಿವೆ. ಉಪಪುರಾಣಗಳನ್ನು ಅವುಗಳಲ್ಲಿ ಪ್ರತಿಪಾದಿಸಿರುವ ಧಾರ್ಮಿಕ ವಿಷಯಗಳ, ವಿವಿಧ ಪಂಥಗಳ ವಿಚಾರಗಳ ಅನುಸಾರವಾಗಿ ಸ್ಥೂಲವಾಗಿ ಆರು ವರ್ಗಗಳಾಗಿ ವಿಭಾಗಿಸಬಹುದು : (೧) ವೈಷ್ಣವ, (೨) ಶಾಕ್ತ, (೩) ಶೈವ, (೪) ಸೌರ, (೫) ಗಾಣಪತ್ಯ, (೬) ಅಪಂಥೀಯ.

೧. ವೈಷ್ಣವ ವರ್ಗಕ್ಕೆ ಸೇರಿದ ಉಪಪುರಾಣಗಳು—ವಿಷ್ಣುಧರ್ಮ, ವಿಷ್ಣುಧರ್ಮೋತ್ತರ, ನಾರಸಿಂಹ, ಬೃಹನ್ನಾರದೀಯ, ಕ್ರಿಯಾಯೋಗಸಾರ.

೨. ಶಾಕ್ತ ವರ್ಗಕ್ಕೆ ಸೇರಿದ ಉಪಪುರಾಣಗಳು—ದೇವೀಪುರಾಣ. ಕಾಲಿಕಾಪುರಾಣ, ಮಹಾಭಾಗವತ, ದೇವೀಭಾಗವತ.

೩. ಶೈವ ವರ್ಗಕ್ಕೆ ಸೇರಿದ ಉಪಪುರಾಣಗಳು—ಶಿವಪುರಾಣ, ಶಿವರಹಸ್ಯಪುರಾಣ, ಏಕಾಮ್ರಪುರಾಣ.

೪. ಸೌರ ವರ್ಗಕ್ಕೆ ಸೇರಿದ ಉಪಪುರಾಣಗಳು—ಶಾಂಬಪುರಾಣ.

೫. ಗಾಣಪತ್ಯ ವರ್ಗಕ್ಕೆ ಸೇರಿದ ಉಪಪುರಾಣಗಳು—ಗಣೇಶಪುರಾಣ ಮತ್ತು ಮುದ್ಗಲಪುರಾಣ.

೬. ಅಪಂಥೀಯ ವರ್ಗಕ್ಕೆ ಸೇರಿದ ಉಪಪುರಾಣಗಳು (ನಿರ್ದಿಷ್ಟವಾದ ಪಂಥವೆಂದಲ್ಲದ)—ಭವಿಷ್ಯೋತ್ತರ ಮತ್ತು ಬೃಹದ್ಧರ್ಮಪುರಾಣ.

ಅಷ್ಟಾದಶ ಮಹಾಪುರಾಣಗಳಲ್ಲಿರುವ ವಿಷಯಗಳ ಸೂಕ್ಷ್ಮ ಪರಿಚಯ :

೧. **ಭಾಗವತಪುರಾಣ :** ಭಾಗವತಪುರಾಣವು ೧೮ ಪುರಾಣಗಳಲ್ಲಿ ತುಂಬಾ ಪ್ರಸಿದ್ಧವಾದುದು. ಇದರಲ್ಲಿ ವೇದವೇದಾಂತಗಳ ಸಾರಸರ್ವಸ್ವವೂ ಅಡಗಿರುತ್ತದೆ. ಭಕ್ತ ಉದ್ಧವನಿಗೆ ಭಗವಾನ್ ಶ್ರೀಕೃಷ್ಣ ಬೋಧಿಸಿದ ಉದ್ಧವಗೀತೆಯು ತುಂಬಾ ಉತ್ಕೃಷ್ಟವಾದ ಭಕ್ತಿ ಹಾಗೂ ವೇದಾಂತ ವಿಚಾರಗಳಿಂದ ಕೂಡಿದೆ. ಹೆಚ್ಚುಕಡಿಮೆ ಗೀತೆಯಂತೆಯೇ ಇದೆ ಈ ಉದ್ಧವಗೀತೆ. ಜ್ಞಾನ, ಭಕ್ತಿ ಎರಡು ವಿಚಾರಗಳೂ ಭಾಗವತದಲ್ಲಿ ಸಮರ್ಥವಾಗಿ ಕೂಡಿವೆ. ಭಗವಾನ್ ಶ್ರೀಕೃಷ್ಣನ ಜನ್ಮಲೀಲಾವೃತ್ತಾಂತ, ಕಲಿಯುಗದ ಮಹಾತ್ಮೆ–ಸ್ಥಿತಿಗತಿಗಳು, ಜೀವರಾಶಿಗಳು–ಜಗತ್ತು ಇವುಗಳ ಸೃಷ್ಟಿ, ಭಗವಂತ, ಆತ್ಮ, ಜೀವನದಲ್ಲಿ ಧರ್ಮಾನುಷ್ಠಾನ, ರಾಜಧರ್ಮ, ಗೃಹಸ್ಥಧರ್ಮ, ವೈರಾಗ್ಯವಿಚಾರ ಇತ್ಯಾದಿ ಬಹಳ ವಿಷಯಗಳು ಸೇರಿದ್ದು ಇದು ತುಂಬಾ ಮಹಿಮಾನ್ವಿತವಾದ ಪುರಾಣ ಗ್ರಂಥವಾಗಿರುತ್ತದೆ.

೨. **ಅಗ್ನಿಪುರಾಣ :** ವೇದದಲ್ಲಿ ಉಕ್ತವಾಗಿರುವ ಅಗ್ನಿದೇವತೆಯ ಕುರಿತಾದ ಈ ಪುರಾಣದಲ್ಲಿ ಕಾವ್ಯ, ನಾಟಕಗಳ ಲಕ್ಷಣಗಳು, ರಸವರ್ಣನೆಗಳು, ಮಂತ್ರಗಳು ಮತ್ತು ಮಂತ್ರವಿಧಾನಗಳು, ರಾಜಧರ್ಮ—ಹೀಗೆ ಒಟ್ಟಿನಲ್ಲಿ ಇಹಲೋಕದ ಹಾಗೂ ಪರಲೋಕದ ಸುಖಜೀವನದ ಕುರಿತಾಗಿ ಅನೇಕ ವಿಚಾರಗಳು ವಿಸ್ತಾರವಾಗಿ ವಿವರಿಸಲ್ಪಟ್ಟಿವೆ.

೩. **ನಾರದೀಯಪುರಾಣ :** ವೇದಾಂಗಗಳಾದ ಶಿಕ್ಷಾ, ವ್ಯಾಕರಣಾದಿಗಳ ವಿಚಾರ, ಬ್ರಹ್ಮಾದಿ ೧೮ ಪುರಾಣಗಳ ವಿಷಯಸಂಗ್ರಹದ ಸೂಕ್ಷ್ಮ ಪರಿಚಯ, ರುಕ್ಮಾಂಗದಚರಿತೆ, ಸಂಸಾರಿಗಳಿಗೆ ಉಪಯುಕ್ತವಾಗುವ ಅನೇಕ ಉಪದೇಶಗಳು, ಕಥೆಗಳು ಈ ಪುರಾಣದಲ್ಲಿ ಸೇರಿವೆ.

೪. **ಪದ್ಮಪುರಾಣ :** ಇದರಲ್ಲಿ ಸೃಷ್ಟಿವಿಚಾರ, ಭೂಮಿ, ಸ್ವರ್ಗ, ಪಾತಾಳ ಇತ್ಯಾದಿ ಲೋಕಗಳ ವಿಚಾರ ಮತ್ತು ಇತರ ಜೀವನೋಪಯೋಗಿ ಅನೇಕ ವಿಷಯಗಳು ಅಡಕವಾಗಿವೆ. ಇದರಲ್ಲಿ ವಿಷ್ಣುದೇವರ ವಿಚಾರ-ಅವತಾರ ವಿವರಗಳೂ ಸಹ ಸೇರಿರುತ್ತವೆ.

೫. **ಸ್ಕಾಂದಪುರಾಣ :** ಪರಮೇಶ್ವರನ ಕುಮಾರನಾದ ಸುಬ್ರಹ್ಮಣ್ಯ ಸ್ವಾಮಿಯ ಜೀವನ–ಲೀಲೆಗಳ ಕುರಿತಾದ ವಿವರಣೆಯೇ ಈ ಪುರಾಣದ ಮುಖ್ಯ ವಿಷಯವಾಗಿದೆ. ಶಿವವೈಭವವನ್ನು ವಿವರಿಸುವ ಅನೇಕ ಕಥೆಗಳೂ, ಹಲವು ಪುಣ್ಯಕ್ಷೇತ್ರಗಳ ವೃತ್ತಾಂತ— ಇತ್ಯಾದಿ ವಿವರಗಳೂ ಈ ಪುರಾಣದಲ್ಲಿ ಸೇರಿರುತ್ತವೆ. ಇದು ಬಹು ವಿಸ್ತಾರವಾದ ಪುರಾಣ.

೬. **ಭವಿಷ್ಯಪುರಾಣ :** ಜಗತ್ತಿನ ಆಗುಹೋಗುಗಳ ಕುರಿತು ಭವಿಷ್ಯಕಥನಗಳನ್ನು ಪ್ರಮುಖವಾಗಿ ಒಳಗೊಂಡಿರುವ ಪುರಾಣವಾದುದರಿಂದ ಇದಕ್ಕೆ ಭವಿಷ್ಯಪುರಾಣ ಎಂದು ಹೆಸರು ಬಂದಿರುತ್ತದೆ. ಈ ಪುರಾಣವು ಜಗತ್ತಿನ ಸೃಷ್ಟಿಯ ವಿಚಾರ, ಸಂಸ್ಕಾರಗಳು, ಗುರುಭಕ್ತಿ, ಸಂಧ್ಯಾವಂದನೆ, ಆಶ್ರಮಧರ್ಮ, ಉಪವಾಸವೇ ಮೊದಲಾದ ವ್ರತಗಳ ಮಹತ್ವ, ಸೂರ್ಯಾರಾಧನೆಯ ವಿವರ, ಮ್ಲೇಚ್ಛರ ವಿಚಾರಗಳು—ಇತ್ಯಾದಿ ವಿಷಯಗಳನ್ನು ಒಳಗೊಂಡಿರುತ್ತದೆ.

೭. ಬ್ರಹ್ಮಪುರಾಣ : ಇದರಲ್ಲಿ ಬ್ರಹ್ಮವಸ್ತುವಿನ ವಿಚಾರ, ಸಾಂಖ್ಯ–ವೇದಾಂತಗಳ ಪ್ರಸ್ತಾಪ, ಪುಣ್ಯಕರ್ಮಗಳು, ಶೈವ, ವೈಷ್ಣವಾದಿ ದೇವ-ದೇವತೆಗಳ ಚರಿತ್ರಸಾರ, ಕಲಿಯುಗಾರಂಭದವರೆಗಿನ ಧರ್ಮಾದಿವಿಚಾರಗಳ ಸಂಗ್ರಹ—ಇತ್ಯಾದಿ ಅನೇಕ ವಿಷಯಗಳು ಸೇರಿರುತ್ತವೆ.

೮. ಮತ್ಸ್ಯಪುರಾಣ : ಕಾಶಿ, ಪ್ರಯಾಗ ಇತ್ಯಾದಿ ತೀರ್ಥಕ್ಷೇತ್ರಗಳ ವರ್ಣನೆ, ಮಹಿಮೆಗಳು, ವ್ರತೋಪವಾಸಗಳ ವಿಚಾರ, ಕಚದೇವಯಾನಿ ಕಥೆ, ಯಯಾತಿರಾಜನ ವೃತ್ತಾಂತ, ಶಿವನಿಂದ ತ್ರಿಪುರದಹನ ಮಾಡುವಿಕೆ, ಸುಬ್ರಹ್ಮಣ್ಯಸ್ವಾಮಿಯ ಜನನ, ತಾರಕಾಸುರನ ವಧೆ, ದಾನ, ವಿವಿಧ ರೀತಿಯ ದಾನಗಳ ವಿವರ, ಗೃಹನಿರ್ಮಾಣಶಾಸ್ತ್ರ ವಿಷಯ, ರಾಜಕೀಯ ಸಂಗತಿಗಳು—ಇತ್ಯಾದಿ ಅನೇಕ ವಿಷಯಗಳು ಈ ಪುರಾಣದಲ್ಲಿ ಅಡಕವಾಗಿವೆ.

೯. ಬ್ರಹ್ಮವೈವರ್ತಪುರಾಣ : ಈ ಪುರಾಣದಲ್ಲಿ ಅವ್ಯಕ್ತಬ್ರಹ್ಮ–ವ್ಯಕ್ತಬ್ರಹ್ಮ ವಿಚಾರ, ಬ್ರಹ್ಮ, ವಿಷ್ಣು, ಮಹೇಶ್ವರ, ಪಾರ್ವತಿ, ಲಕ್ಷ್ಮಿ, ಸರಸ್ವತಿ ಇವರ ಅವತಾರಲೀಲೆಗಳು, ಜಗತ್ತಿನ ಸೃಷ್ಟಿ—ಇತ್ಯಾದಿ ಅನೇಕ ವಿಚಾರಗಳು ಸೇರಿರುತ್ತವೆ.

೧೦. ಬ್ರಹ್ಮಾಂಡಪುರಾಣ : ಇದರಲ್ಲಿ ಹಿರಣ್ಯಗರ್ಭನ ಪ್ರಾದುರ್ಭಾವ, ಸತ್ವ, ರಜಸ್, ತಮೋಗುಣಗಳ ವಿಚಾರ, ದೇವರ್ಷಿಗಳು, ಜಗತ್ತಿನ ಸೃಷ್ಟಿ ವಿಚಾರ, ಕೈಲಾಸಾದಿಲೋಕಚರಿತ್ರೆ, ಪರಶುರಾಮನ ಪ್ರಭಾವ, ಕಾರ್ತ್ಯವೀರ್ಯನ ಪರಾಜಯ, ಊರ್ಧ್ವಲೋಕಗಳ ಸ್ಥಾನ–ವಿವರಣೆ—ಇತ್ಯಾದಿ ವಿಪುಲ ವಿಚಾರಗಳು ಸೇರಿರುತ್ತವೆ.

೧೧. ವಾಯುಪುರಾಣ : ಜಗತ್ತಿನ ಸೃಷ್ಟಿ, ಕಾಲದ ಮಾನ, ರಾಕ್ಷಸ ಗಂಧರ್ವ ಪಿತೃಗಳ ಹುಟ್ಟು–ಬೆಳವಣಿಗೆ, ಪ್ರಾಣಿ–ಪಕ್ಷಿ–ವೃಕ್ಷಗಳ ಹುಟ್ಟು–ಬೆಳವಣಿಗೆ, ವೈವಸ್ವತ ಮನುವೇ ಮೊದಲಾದ ಅರಸರ ವಂಶಾವಳಿಚರಿತೆ, ಜಗತ್ತನ್ನು ಪ್ರಮುಖವಾಗಿ ೭ ದ್ವೀಪಗಳ ವಿಭಾಗ ಮಾಡಿ ಅದರ ವಿವರ, ಬೇರೆ ಬೇರೆ ಖಂಡಗಳಲ್ಲಿರುವ ಜನರ ಜೀವನ ವಿಚಾರ, ಏಳು ಲೋಕಗಳ ವಿವರ, ನಾಲ್ಕು ಯುಗಗಳ ವಿಚಾರ, ಸಂಗೀತವಿದ್ಯೆ, ವೇದ ವಿದ್ಯೆ, ಪಶುಪತಯೋಗ, ವಿವಿಧ ಜಾತಿ ಆಶ್ರಮಗಳ ಜನರ ಕರ್ತವ್ಯ ಜವಾಬ್ದಾರಿಗಳ ವಿವರ—ಇತ್ಯಾದಿ ಅನೇಕ ವಿಚಾರಗಳು ಈ ಪುರಾಣದಲ್ಲಿ ಅಡಕವಾಗಿವೆ.

೧೨. ಲಿಂಗಪುರಾಣ : ಶಿವನ ಮಾಹಾತ್ಮ್ಯ–ಲೀಲೆಗಳ ವಿವರಗಳೂ, ಲಿಂಗದ ಮಹಿಮೆ (ಶಿವಲಿಂಗದ ವರ್ಣನೆ), ಲಿಂಗದಿಂದಾಗಿ ಉಂಟಾಗಿರುವ ಸೃಷ್ಟಿ, ಸ್ಥಿತಿ, ಸಂಹಾರರೂಪ ಗಳಾದ ಭಗವಂತನ ಲೀಲೆಗಳೂ ದೇವಮನುಷ್ಯರ ವೃತ್ತಾಂತ, ಲಿಂಗಮೂರ್ತಿಯಾದ ಪರಶಿವ–ಪರಮೇಶ್ವರನ ಮಹಿಮೆ—ಇತ್ಯಾದಿ ಅನೇಕ ವಿಚಾರಗಳೂ, ನೀತಿಬೋಧೆ ಗಳೂ ಈ ಪುರಾಣದಲ್ಲಿ ವಿವರಿಸಲ್ಪಟ್ಟಿವೆ.

೧೩. ವಿಷ್ಣುಪುರಾಣ : ಜಗತ್ತಿನ ಸೃಷ್ಟಿ–ಸ್ಥಿತಿ–ಲಯಗಳ ವಿಚಾರ, ೨೮ ವ್ಯಾಸರುಗಳ ಚರಿತ್ರೆ, ವಿವಿಧ ಜಾತಿಯವರ ಆಶ್ರಮದವರ ಕರ್ತವ್ಯಗಳು, ಮರಣೋತ್ತರಕ್ರಿಯಾ ವಿಚಾರಗಳು, ಕಲಿಯುಗದ ರಾಜವಂಶಗಳ ಚರಿತೆ, ಭಗವಾನ್ ಶ್ರೀಕೃಷ್ಣನ ವೃಂದಾವನ ಲೀಲೆ, ಜೀವನವೃತ್ತಾಂತ, ಕಲಿಯುಗದಲ್ಲಿನ ಸ್ಥಿತಿಗತಿಗಳು, ಯೋಗದ ವಿಚಾರ—ಇತ್ಯಾದಿ ಅನೇಕ ವಿಚಾರಗಳು ಈ ಪುರಾಣದಲ್ಲಿ ಇವೆ.

೧೪. ವಾಮನಪುರಾಣ : ಭಗವಂತನಾದ ಶ್ರೀಮಹಾವಿಷ್ಣುವು ವಾಮನಾವತಾರವನ್ನು ತಳೆದು ಬಲಿಚಕ್ರವರ್ತಿಯ ಐಶ್ವರ್ಯಮದವನ್ನು ನಾಶಮಾಡಿದ ಅವತಾರಲೀಲೆಗಳು, ದಾನವೀರನಾದವನ ಲಕ್ಷಣ, ಲೇಶವೂ ದಂಬ ಇಲ್ಲದ ಶುದ್ಧಸಾತ್ವಿಕನ ಗುಣಸ್ವರೂಪಗಳು, ದಾನದ ಮಹಿಮೆ, ದಯೆ, ದಮನಗಳ ವಿಚಾರ—ಇತ್ಯಾದಿ ಅನೇಕ ವಿಷಯಗಳು ಈ ಪುರಾಣದಲ್ಲಿ ಸೇರಿವೆ.

೧೫. ಮಾರ್ಕಂಡೇಯ ಪುರಾಣ : ಈ ಪುರಾಣದಲ್ಲಿ ಜಗತ್ತಿನ ಸೃಷ್ಟಿ, ಭಾರತ ಭೂಮಿಯ ಭೌಗೋಳಿಕ ಪರಿಚಯ, ರಾಜರನೇಕರ ವಂಶಾವಳಿಚರಿತೆ, ಇಂದ್ರ, ಅಗ್ನಿ, ಸೂರ್ಯ, ಬ್ರಹ್ಮಾದಿ ದೇವತೆಗಳ ಸ್ತುತಿ–ವಿವರಗಳು ಬಂದಿರುತ್ತವೆ. ಅಲ್ಲದೆ ಸುಪ್ರಸಿದ್ಧವಾದ ದೇವೀಮಾಹಾತ್ಮ್ಯ ಅಥವಾ ಸಪ್ತಶತೀ ಎಂಬ ಗ್ರಂಥವು ಈ ಪುರಾಣದಲ್ಲಿ ಸೇರಿರುತ್ತದೆ. ಸತ್ಯಹರಿಶ್ಚಂದ್ರ, ತನ್ನ ಮಕ್ಕಳಿಗೆ ಆತ್ಮಜ್ಞಾನವನ್ನು ಬೋಧಿಸಿದ ರಾಣಿ ಮದಾಲಸ, ನರಕದಲ್ಲಿಯೇ ಇರಲು ಇಷ್ಟಪಟ್ಟು ನರಕದಲ್ಲಿರುವವರನ್ನು ಉದ್ಧಾರ ಮಾಡಲು ಬಯಸಿದ ವಿಪಶ್ಚಿತ—ಇತ್ಯಾದಿ ರಾಜ–ರಾಣಿಯರ ಕಥೆಯೂ ಈ ಪುರಾಣದಲ್ಲಿ ಸೇರಿದೆ.

೧೬. ವರಾಹಪುರಾಣ : ಭಗವಂತನು ವರಾಹಾವತಾರ ಎತ್ತಿ ಜಗತ್ತಿನಲ್ಲಿ ಮಾಡಿದ ದಿವ್ಯಲೀಲೆಗಳ ವಿವರ, ಸಾನಂದೂರಕ್ಷೇತ್ರಮಾಹಾತ್ಮ್ಯ—ಇತ್ಯಾದಿ ಅನೇಕ ವಿಷಯಗಳು ಈ ಪುರಾಣದಲ್ಲಿ ಸೇರಿವೆ.

೧೭. ಕೂರ್ಮಪುರಾಣ : ಚತುರ್ವರ್ಣದವರ ಕರ್ತವ್ಯ–ಜವಾಬ್ದಾರಿಗಳು, ಜೀವನಿಗೆ ಸಿಗುವ ಮೋಕ್ಷವಿಚಾರ, ರೋಗರುಜಿನಗಳ ನಿವಾರಣೆಯ ಉಪಾಯ—ಇತ್ಯಾದಿ ವಿಚಾರಗಳು ಈ ಪುರಾಣದಲ್ಲಿ ಸೇರಿರುತ್ತವೆ.

೧೮. ಗರುಡಪುರಾಣ : ಶ್ರೀಮಹಾವಿಷ್ಣುವು ಗರುಡನಿಗೂ, ಗರುಡನು ಕಶ್ಯಪನಿಗೂ ಉಪದೇಶಿಸಿದ ಉಪದೇಶಗಳ ಸಂಗ್ರಹವೇ ಈ ಪುರಾಣದ ಮುಖ್ಯ ವಿಷಯವಾಗಿದೆ. ಆಚಾರವಿಚಾರಗಳು, ದೇವ, ಅಸುರ-ಗಂಧರ್ವರ ವಿಚಾರ, ಸಾಕಾರ-ನಿರಾಕಾರವಾದ ಬ್ರಹ್ಮನ ಅನುಸಂಧಾನ, ಕ್ರಿಯಾಯೋಗ, ಆತ್ಮತತ್ತ್ವನಿರ್ಣಯ, ಜ್ಯೋತಿಚ್ಛಂದೋವ್ಯಾಕರಣಾದಿ ವಿಷಯಗಳು, ಮರಣ, ಮರಣದನಂತರ ಜೀವಾತ್ಮನ ಯಾತ್ರೆ, ಪ್ರೇತ ವಿಚಾರ, ಪಿತೃಗಳ ವಿಚಾರ, ನರಕದ ವರ್ಣನೆ, ಪಿಂಡಶ್ರಾದ್ಧಾದಿ ವಿವರಗಳು, ಪಿತ್ರದೇವತಾಪ್ರಸಾದಕ್ಕಾಗಿ ಯತ್ನಿಸುವ ವಿಧಾನ, ರೋಗಚಿಕಿತ್ಸೆ—ಮೊದಲಾದ ಅನೇಕ ವಿಚಾರಗಳು ಈ ಪುರಾಣದಲ್ಲಿ ಸೇರಿರುತ್ತವೆ.

ಪುರಾಣ ಶಬ್ದದ ಉಲ್ಲೇಖ ಬೃಹದಾರಣ್ಯಕ ಉಪನಿಷತ್ತಿನಲ್ಲಿ ಬರುತ್ತದೆ. ನಾಲ್ಕು ವೇದಗಳು, ಇತಿಹಾಸ, ಪುರಾಣ ಮುಂತಾದವು ಪರಮಾತ್ಮನಿಂದ ಹುಟ್ಟಿದವು ಎಂದು ಅಲ್ಲಿ ಪ್ರಸ್ತಾಪಿಸಲಾಗಿದೆ (ಬೃ. ೨-೪-೧೦). ಹಾಗೆಯೇ ಇತಿಹಾಸ ಪುರಾಣ ಎಂಬ ಐದನೆಯ ವೇದ ಎಂಬುದಾಗಿ ಹೇಳಿರುವುದು ಛಾಂದೋಗ್ಯೋಪನಿಷತ್ತಿನ ನಾರದ-ಸನತ್ಕುಮಾರ ಸಂವಾದದಲ್ಲಿ ಕಂಡುಬರುತ್ತದೆ. ಪುರಾಣಗಳು ಮಾನವನಿಗೆ ಬದುಕಿನಲ್ಲಿ ಶಾಂತಿ ಮತ್ತು ಪರಿಪೂರ್ಣತೆಯನ್ನು ಪಡೆಯಲು ಸರಳ ಅನುಷ್ಠಾನದ ಹಾದಿಯನ್ನು

ಹೇಳಿರುತ್ತವೆ. ನಮ್ಮ ಬಾಳಿನಲ್ಲಿ ಧಾರ್ಮಿಕ ಹಾಗೂ ಸಾಮಾಜಿಕವಾಗಿ ಮೂಡಿಬರುವ ಅನೇಕ ಕಠಿಣ ಸಮಸ್ಯೆಗಳಿಗೆ ಕಥೆಗಳ ಮತ್ತು ಆಖ್ಯಾನಗಳ ರೂಪದಲ್ಲಿ ಸುಲಭವಾದ ಪರಿಹಾರಗಳನ್ನು ಪುರಾಣಗಳು ನೀಡಿವೆ. ಮತಧರ್ಮದ ವಿಚಾರವಾಗಿ, ವ್ಯಷ್ಟಿ ಮತ್ತು ಸಮಷ್ಟಿಯಲ್ಲಿ ಅನುಸರಿಸಬೇಕಾದ ನಿತ್ಯನೈಮಿತ್ತಿಕ ಆಚಾರವಿಚಾರಗಳ ಬಗ್ಗೆ ವಿಪುಲವಾದ ವಿವರಣೆ, ಮಾರ್ಗದರ್ಶನಗಳು ಪುರಾಣಗಳಲ್ಲಿ ಲಭಿಸುತ್ತವೆ. ವಿವಿಧ ಜನಸಮೂಹದಿಂದ, ವಿವಿಧ ಬುಡಕಟ್ಟು, ಮತಧರ್ಮದ ದೃಷ್ಟಿಗಳಿಂದ ಕೂಡಿದ ನಮ್ಮ ದೇಶದಲ್ಲಿ ಪುರಾಣಗಳಿಂದಾಗಿ ಧಾರ್ಮಿಕ ಐಕ್ಯತೆ ಉಂಟಾಗಲು ಪುರಾಣಗಳು ವಹಿಸಿದ ಪಾತ್ರ ನಿಜಕ್ಕೂ ಗಣನೀಯವಾದುದು.

ಹೀಗೆ ಹದಿನೆಂಟು ಪುರಾಣಗಳು ಹಿಂದೂಧರ್ಮದ ಬೋಧನೆಯನ್ನು ಒಳಗೊಂಡ ಉಪಯುಕ್ತ ಹಾಗೂ ಜನಪ್ರಿಯ ಗ್ರಂಥಸಮೂಹವಾಗಿದ್ದು ಹಿಂದೂಧರ್ಮದವರ ಜೀವನಕ್ಕೆ ಬೆಳಕು, ಮಾರ್ಗದರ್ಶನಗಳನ್ನು ನೀಡಬಲ್ಲ ಪವಿತ್ರ ಪ್ರಭಾವಯುತವಾದ ಗ್ರಂಥಗಳಾಗಿವೆ. ಪುರಾಣಗಳು ಪುಣ್ಯಜೀವಿಗಳಾದ ಋಷಿಮುನಿಗಳಿಂದ ಕಾಲಕಾಲಕ್ಕೆ ಮನುಕುಲಕ್ಕೆ ನೀಡಲ್ಪಟ್ಟುವು. ಪುರಾಣಗಳನ್ನೆಲ್ಲಾ ಕ್ರೋಢೀಕರಿಸಿ ಅವುಗಳಿಗೆ ವ್ಯವಸ್ಥಾಬದ್ಧವಾದ ಗ್ರಂಥಸ್ವರೂಪವನ್ನು ನೀಡಿದವರು ಪ್ರಾತಃಸ್ಮರಣೀಯರಾದ ಮಹರ್ಷಿ ಶ್ರೀ ವೇದವ್ಯಾಸರಾಗಿರುತ್ತಾರೆ.

**ಆಗಮಗಳು :** ಆಗಮ ಎಂದರೆ ಬಂದದ್ದು, ಪರಂಪರೆಯಿಂದ ಬಂದ ಶಾಸ್ತ್ರ ಎಂದು ಸ್ಥೂಲವಾಗಿ ಹೇಳಬಹುದು. ವೇದ, ಉಪನಿಷತ್ತು—ಇತ್ಯಾದಿಗಳೆಲ್ಲದರಲ್ಲಿ ಹೇಳಲ್ಪಟ್ಟ ಆಧ್ಯಾತ್ಮಿಕ ಹಾಗೂ ಧಾರ್ಮಿಕವಾದ ತತ್ತ್ವಗಳನ್ನು ದಿನನಿತ್ಯದ ಜೀವನದಲ್ಲಿ ಸರಿಯಾಗಿ ಪರಿಶೀಲಿಸಲು ನೆರವಾಗುವ ಶಾಸ್ತ್ರಗ್ರಂಥಗಳೇ ಆಗಮಗಳು. "ವೇದಯತಿ ಇತಿ ವೇದಃ" ಎಂದರೆ ಪರಮಾತ್ಮನ ವಿಚಾರ ತಿಳಿಯಹೇಳುವುದು ವೇದವಾಗಿದೆ. ಹಾಗೆಯೇ "ಆಸಮಂತಾತ್ ಗಮಯತಿ ಇತಿ ಆಗಮಃ" ಅಂದರೆ ಎಲ್ಲೆಲ್ಲೂ ವ್ಯಾಪ್ತನಾಗಿರುವ ಪರಮಾತ್ಮನ ವಿಚಾರವನ್ನು ನಮ್ಮ ಜೀವನದಲ್ಲಿ ಅನುಷ್ಠಾನಕ್ಕೆ ತರಲು ಅನುಕೂಲವೂ ಯೋಗ್ಯವೂ ಆದ ವಿಚಾರಧಾರೆಯಿಂದ ತಿಳಿಯಹೇಳುವುದೇ ಆಗಮವಾಗಿರುತ್ತದೆ. ಜನರ ಉಪಾಸನಾಸೌಕರ್ಯಕ್ಕಾಗಿ ದೇವರಿಗೆ ಗುಣಕಲ್ಪನೆ, ವಿವಿಧ ಸ್ವರೂಪಗಳ ಕಲ್ಪನೆಗಳನ್ನು ಮಾಡಿ ದೇವಾಲಯನಿರ್ಮಾಣ, ಸ್ವರೂಪ, ದೇವತಾವಿಗ್ರಹಗಳ ಪ್ರತಿಷ್ಠೆ, ಅರ್ಚನೆ, ಉತ್ಸವ, ಜಾತ್ರಾವಿಚಾರ, ಕುಂಭಾಭಿಷೇಕ ಮಾಡುವಿಕೆ, ಸಾಮಾಜಿಕ ನೀತಿನಿಯಮಗಳು ಎಂಬಿತ್ಯಾದಿ ಅನೇಕ ವಿಧವಾದ ಕರ್ಮಗಳು, ಆಚಾರವಿಧಾನಗಳು ಈ ಆಗಮಗ್ರಂಥಗಳಲ್ಲಿ ಸವಿಸ್ತಾರವಾಗಿ ವಿವರಿಸಲ್ಪಟ್ಟಿವೆ. ಹೀಗೆ ಮನುಷ್ಯನ ಮನಸ್ಸಿನ ಪರಿಶುದ್ಧಿಗೆ ಸಹಾಯಕವಾಗುವ ಅನೇಕ ರೀತಿಯ ಧಾರ್ಮಿಕ ವಿಚಾರಗಳೂ, ಶಾಸ್ತ್ರನಿಯಮಗಳೂ ಇರುವಂತೆ ಮನಸ್ಸಿನ ವಿಕಾಸಕ್ಕೆ ಉತ್ತೇಜನ ನೀಡುವಂತಹ ಸಂಗೀತ, ಶಿಲ್ಪ, ಚಿತ್ರ, ಸಾಮುದ್ರಿಕಶಾಸ್ತ್ರ, ನೃತ್ಯ, ವೈದ್ಯ, ಅಶ್ವಪರೀಕ್ಷೆ—ಇತ್ಯಾದಿ ಅನೇಕಾನೇಕ ವಿಚಾರಗಳೂ ಆಗಮಗಳಲ್ಲಿ ಸೇರಿರುತ್ತವೆ. ಆಗಮಗಳಲ್ಲಿ ಹೇಳಿದ ವಿಚಾರಗಳ ಅನುಷ್ಠಾನವು ಮಂತ್ರ ಮತ್ತು ತಂತ್ರಗಳಿಂದ ಕೂಡಿವೆಯಾದ್ದ

ರಿಂದ ಆಗಮಗಳನ್ನು "ತಂತ್ರಶಾಸ್ತ್ರ"ವೆಂಬ ಪರ್ಯಾಯನಾಮದಿಂದ ಕರೆಯುತ್ತಾರೆ. ಒಟ್ಟಿನಲ್ಲಿ ಈ ಜಗತ್ತಿನಲ್ಲಿ ಜನ್ಮತಳೆದ ಮನುಷ್ಯನು ತನ್ನ ದಿನನಿತ್ಯದ ಕೆಲಸಗಳನ್ನು ಧರ್ಮಸಮ್ಮತವೂ, ಸಾರ್ಥಕಯುಕ್ತವೂ ಆಗಿ ನಿರ್ವಹಿಸುತ್ತಾ, ಪ್ರತಿಯೊಂದು ಕಾರ್ಯವನ್ನೂ ಭಗವಂತನ ವಿಚಾರದಿಂದ ಕೂಡಿ ಮಾಡುತ್ತಾ, ತನ್ನ ವ್ಯಕ್ತಿಗತ ಸುಖ ಹಾಗೂ ಜಗತ್ತಿನ ಹಿತವನ್ನು ಸಾಧಿಸುವ ದೃಷ್ಟಿಯಿಂದ ದುಡಿಯುತ್ತಾ ಕೊನೆಗೆ ಭಗವಂತನನ್ನು ಸಾಕ್ಷಾತ್ಕರಿಸಿ ಮೋಕ್ಷಸುಖವನ್ನು ಪಡೆಯಲಿರುವ ವಿಶಿಷ್ಟ ವಿವರಗಳು, ವಿಧಿನಿಯಮಗಳು ನಿರೂಪಿತವಾಗಿರುವ ಗ್ರಂಥಗಳೇ ಆಗಮಗಳೆಂದು ಹೇಳಬಹುದು. ಆಗಮಗಳಲ್ಲಿ ಹೇಳಿರುವ ವಿಷಯಗಳನ್ನು ಸ್ಥೂಲವಾಗಿ ನಾಲ್ಕು ವಿಭಾಗ ಮಾಡಬಹುದು, ಅವು ಯಾವುವೆಂದರೆ :

(೧) **ಜ್ಞಾನ :** ಅಂದರೆ ಜಗತ್ತು, ಆತ್ಮ, ಜೀವನ—ಇತ್ಯಾದಿಗಳ ಕುರಿತಾದ ತತ್ತ್ವ ವಿಚಾರಗಳು.

(೨) **ಯೋಗ :** ಜೀವನವನ್ನು ಹೇಗೆ ನಿರ್ವಹಿಸಬೇಕು, ಪರಮಗುರಿಯಾದ ಮೋಕ್ಷವನ್ನು ಸೇರಬೇಕಾದರೆ ಹೇಗೆ ಸಾಧನೆ ಮಾಡಬೇಕು—ಎಂಬಿತ್ಯಾದಿ ವಿಚಾರಗಳ ಕುರಿತಾದ ವಿವರಣೆ—ಮಾನಸಿಕವಾದ ಶಿಕ್ಷಣಗಳು, ಪ್ರಾಣಾಯಾಮಾದಿ ಯೋಗ ವಿಚಾರಗಳು.

(೩) **ಕ್ರಿಯೆ :** ದೇವಾಲಯ, ದೇವತಾವಿಗ್ರಹಗಳು, ಶಿಲ್ಪವಿಚಾರಗಳು, ಪೂಜೆ, ಜಾತ್ರೆ, ಉತ್ಸವಗಳ ವಿವರಗಳು—ಹೀಗೆ ಅನೇಕ ವಿಧದ ಕ್ರಿಯಾಭಾಗದ ವಿವರಣೆಗಳು.

(೪) **ಚರ್ಯೆ :** ಆಗಮಗಳಲ್ಲಿ ಹೇಳಿದ ವಿಚಾರಗಳನ್ನೆಲ್ಲಾ ಜೀವನದಲ್ಲಿ ಅನುಷ್ಠಾನ ಮಾಡುವ ವಿವರಗಳು. ಇವರಲ್ಲಿ ಸದಾಚಾರ, ಸದ್ಧರ್ಮಾಚರಣೆಗಳೆಲ್ಲಾ ಸೇರಿರುತ್ತವೆ.

ಆಗಮಗ್ರಂಥಗಳು ಸಂಖ್ಯೆಯಲ್ಲಿ ಬಹಳವಿದ್ದು ಹಿಂದೂಧರ್ಮದ ಮೂರು ಮಹಾ ಪಂಥಗಳನ್ನು ಅನುಸರಿಸಿ ಶೈವ, ವೈಷ್ಣವ ಮತ್ತು ಶಾಕ್ತ ಎಂಬ ಮೂರು ವಿಭಾಗ ಗಳಾಗಿ ವಿಂಗಡಿಸಲ್ಪಟ್ಟಿವೆ. ಶೈವಪಂಥದವರಿಗೆ ಶೈವಾಗಮವೂ, ವೈಷ್ಣವಪಂಥದವರಿಗೆ ವೈಷ್ಣವಾಗಮವೂ, ಶಾಕ್ತಪಂಥದವರಿಗೆ ಶಾಕ್ತಾಗಮವೂ(ತಂತ್ರಶಾಸ್ತ್ರ) ಸೇರಿರುತ್ತದೆ. ಆಯಾಯ ಪಂಥದವರು ತಮ್ಮ ಉಪಾಸನೆ, ಆರಾಧನೆ, ಜಾತ್ರೆ, ಉತ್ಸವ, ಸಮಾಜದ ಆಚಾರವಿಚಾರಗಳು ಎಲ್ಲವನ್ನೂ ತಮ್ಮ ತಮ್ಮ ಆಗಮಗಳನ್ನು ಅನುಸರಿಸಿ ನೆರವೇರಿಸು ತ್ತಾರೆ. ಆಗಮಗಳನ್ನು ಯಾರು ರಚಿಸಿದರು ಎಂಬುದನ್ನು ನಿಶ್ಚಯವಾಗಿ ಹೇಳುವಂತಿಲ್ಲ. ಆಗಮಗಳೆಲ್ಲವೂ ಸರ್ವಜ್ಞನಾದ ಭಗವಂತನಿಂದ ನಿರ್ಮಿತವಾಗಿದ್ದು ಅವುಗಳು ಅನಾದಿ, ಅಪೌರುಷೇಯ ಎಂದೂ ಪುಣ್ಯಜೀವಿಗಳಾದ ಮಹರ್ಷಿಗಳ ಮೂಲಕ ಜನರಿಗೆ ದೊರಕಿತು ಎಂದೂ ಆಯಾಯ ಪಂಥದಲ್ಲಿ ಪರಂಪರೆಯಾಗಿ ಬೆಳೆದುಬಂದ ವಿಶ್ವಾಸವಾಗಿದೆ. ವೇದಗಳು ಭಗವಂತನ ಉಸಿರೆಂದೂ ಆಗಮಗಳು ಭಗವಂತನ ಮಾತೆಂದೂ ಹೇಳುತ್ತಾ ಒಂದೇ ದೇಹದ ಉಸಿರು ಮತ್ತು ಮಾತುಗಳಾಗಿದ್ದು ಸಮಾನ ಯೋಗ್ಯತೆ-ಸ್ಥಾನಗಳಿಂದ ಕೂಡಿವೆ ಎಂದು ರೂಢಿಯಾಗಿ ಪರಿಗಣಿತವಾಗಿದೆ. ವೇದಗಳನ್ನು ನಿಗಮ ಎಂದು ಕರೆದು ವೇದ ಮತ್ತು ಆಗಮವಾಙ್ಮಯಗಳನ್ನು ಒಟ್ಟಿಗೆ 'ನಿಗಮಾಗಮ' ಎಂದು ಹೇಳುತ್ತಾರೆ.

**ಶೈವಾಗಮ :** ಶೈವಾಗಮಗಳು ಒಟ್ಟು ೨೮. ಇವುಗಳೆಲ್ಲವೂ ಶಿವನೇ ಪರಮೋತ್ಕೃಷ್ಟ ಭಗವಂತ, ಪರಮಸತ್ಯಸ್ವರೂಪ, ಪರತತ್ತ್ವ ಎಂದು ಹೇಳಿ ಶಿವನನ್ನು ಕುರಿತಾದ ವಿಶೇಷವಾದ ವಿವರಗಳು-ಆಚಾರವಿಧಿಗಳು ಇತ್ಯಾದಿಗಳನ್ನು ಹೇಳುತ್ತವೆ. ಇವುಗಳಲ್ಲಿ ಶಿವದೀಕ್ಷೆ, ಶಿವಮಂತ್ರ, ಶಿವಪೂಜೆ, ಶಿವಾಚಾರ—ಇತ್ಯಾದಿ ವಿಚಾರಗಳು ವಿವರಿಸ ಲ್ಪಟ್ಟಿವೆ. ಈ ೨೮ ಶಿವಾಗಮಗಳಲ್ಲಿ ಕೆಲವು ತುಂಬಾ ಪ್ರಸಿದ್ಧವಾಗಿದ್ದು ಅವುಗಳು (೧) ಕಾಮಿಕಾಗಮ, (೨) ಪಾರಮೇಶ್ವರ, (೩) ವಾತುಲ ಆಗಮಗಳಾಗಿವೆ.

**ವೈಷ್ಣವಾಗಮ :** ವೈಷ್ಣವಾಗಮಗಳು ವಿಷ್ಣುವನ್ನೇ ಪರಮಶ್ರೇಷ್ಠ ಎಂದು ಕೊಂಡಾಡಿ ಶ್ರೀಮಹಾವಿಷ್ಣುವಿನ ಕುರಿತಾಗಿ ವಿಶೇಷ ವಿವರಗಳನ್ನು ನೀಡುತ್ತವೆ. ಹೀಗೆ ವಿಷ್ಣುಪರತತ್ತ್ವವನ್ನು ಬೋಧಿಸಲು ಹುಟ್ಟಿಕೊಂಡ ವೈಷ್ಣವಾಗಮಗಳಲ್ಲಿ ಮುಖ್ಯ ವಾಗಿ ಎರಡು ಭಾಗಗಳಿದ್ದು ಅವು (೧) ವೈಖಾನಸ, (೨) ಪಾಂಚರಾತ್ರ ಆಗಮಗಳಾಗಿವೆ. ಭಗವಂತನಿಂದ ವಿಖನಸ ಮಹರ್ಷಿಗೆ ಉಪದೇಶಿಸಲ್ಪಟ್ಟು ಅನಂತರ ಅವರು ಅದನ್ನು ಭೃಗು, ಅತ್ರಿ, ಮರೀಚಿ, ಕಶ್ಯಪರೆಂಬ ನಾಲ್ಕು ಮಹರ್ಷಿಗಳಿಗೆ ಉಪದೇಶಿಸಿದರು. ಹೀಗೆ ವಿಖನಸ ಮಹರ್ಷಿಗಳಿಂದ ಪ್ರವರ್ತನಗೊಂಡುದರಿಂದ ಈ ಆಗಮಕ್ಕೆ ವೈಖಾನಸ ಆಗಮ ಎಂದು ಕರೆಯುತ್ತಾರೆ. ಪಾಂಚರಾತ್ರ ಆಗಮಗಳು ಪಂಚರಾತ್ರಿಗಳಲ್ಲಿ ಭಗವಂತ ನಿಂದ ಪಂಚದೇವತೆಗಳಿಗೆ ಉಪದೇಶಿಸಲ್ಪಟ್ಟ ಆಗಮಗಳಾಗಿವೆ. ಅನಂತ, ಗರುಡ, ವಿಷ್ವಕ್ಸೇನ, ಬ್ರಹ್ಮ, ಇಂದ್ರ ಎಂಬುವರೇ ಆ ಪಂಚದೇವತೆಗಳು. ಈ ಆಗಮದಲ್ಲಿ ಶ್ರೀಮಹಾವಿಷ್ಣುವಿನ ಆರಾಧನೆ ಮೊದಲಾದ ವಿವರಗಳು ಇರುವುವು ಮಾತ್ರವಲ್ಲದೆ, ಗ್ರಾಮ, ಪ್ರಾಸಾದ, ನಗರ, ದೇವಾಲಯ ಇವುಗಳ ನಿರ್ಮಾಣ, ಪ್ರಾಯಶ್ಚಿತ್ತ-ಶಾಂತಿ ಕರ್ಮಗಳು, ಕಾಮ್ಯಕ್ರಿಯಾವಿಚಾರ ಇತ್ಯಾದಿ ಅನೇಕ ಸಂಗತಿಗಳು ಸವಿಸ್ತಾರವಾಗಿ ಸೇರಿರುತ್ತವೆ.

**ಶಾಕ್ತಾಗಮ :** ಶಾಕ್ತಾಗಮವು ಭಗವಂತನನ್ನು ದೇವಿ ಎಂದು ಕರೆದು ಜಗನ್ಮಾತೆ ಯಾದ ದೇವಿಯನ್ನೇ ಪರಮಶ್ರೇಷ್ಠ ಎಂದು ಹೇಳಿ ದೇವಿಯ ಪರತತ್ತ್ವದ ಕುರಿತಾದ ವಿವರಗಳನ್ನು ನೀಡುತ್ತದೆ. ಶಾಕ್ತಾಗಮಕ್ಕೆ 'ತಂತ್ರ' ಎಂಬ ಇನ್ನೊಂದು ಹೆಸರೂ ಇದೆ. "ತನ್ಯತೇ ವಿಸ್ತಾರ್ಯತೇ ಜ್ಞಾನಮ್ ಅನೇನ, ತ್ರಾಯತೇ ಚ ಇತಿ ತಂತ್ರಮ್" (ನಿರುಕ್ತ) ಎಂದರೆ ಈ ಶಾಸ್ತ್ರದಿಂದ ಜ್ಞಾನದ ಪ್ರಚಾರವಾಗಿ ಮಾನವನ ಸಹಾಯ ವಾಗುವುದೇ ತಂತ್ರ ಎಂದು ಅರ್ಥವಾಗುತ್ತದೆ. ಇನ್ನೊಂದು ಅರ್ಥವಿವರಣೆ ಹೀಗಿದೆ :

ತನೋತಿ ವಿಪುಲಾನರ್ಥಾನ್ ತಂತ್ರಮಂತ್ರಸಮನ್ವಿತಾನ್ ।
ತ್ರಾಣಂ ಚ ಕುರುತೇ ಯಸ್ಮಾತ್ ತಂತ್ರಮಿತ್ಯಭಿಧೀಯತೇ ॥

—ಕಾಮಿಕಾಗಮ (ತಂತ್ರಾಂತರಪಟಲ)

ತಂತ್ರ ಮತ್ತು ಮಂತ್ರ ಇವುಗಳಿಂದ ಕೂಡಿದ ಅನೇಕ ಅರ್ಥಗಳನ್ನು ಹೇಳುವುದ ರಿಂದಲೂ, ಮಾನವನನ್ನು ರಕ್ಷಿಸುವುದರಿಂದಲೂ ಈ ಶಾಸ್ತ್ರವು ತಂತ್ರವೆಂದು ಎನಿಸುತ್ತದೆ ಎಂದು ಅರ್ಥವಾಗುತ್ತದೆ.

ಇತರ ಆಗಮಗಳಂತೆಯೇ ಈ ಆಗಮದಲ್ಲೂ ದೇವರ ಕುರಿತಾದ ಆರಾಧನೆ, ಆಚಾರ, ವಿಧಿನಿಯಮಗಳು—ಇತ್ಯಾದಿ ಅನೇಕಾನೇಕ ವಿಚಾರಗಳೂ ಮಂತ್ರತಂತ್ರ ಸಂಗತಿಗಳೂ

ಸೇರಿರುತ್ತವೆ. ಶಾಕ್ತಾಗಮಗ್ರಂಥಗಳಲ್ಲಿ ಪ್ರಸಿದ್ಧವಾದುವು ಯಾವುವೆಂದರೆ :

(೧) ಮಹಾನಿರ್ವಾಣ, (೨) ರುದ್ರಯಾಮಲ, (೩) ಕುಲಾರ್ಣವ, (೪) ಕುಲಸಾರ, (೫) ತಂತ್ರರಾಜ, (೬) ಬ್ರಹ್ಮಯಾಮಲ, (೭) ವಿಷ್ಣುಯಾಮಲ, (೮) ತೋಡಲ.

**ದರ್ಶನ:** ದರ್ಶನ ಶಬ್ದಕ್ಕೆ ದರ್ಶಿಸಲು ಸಾಧನವಾದ ಶಾಸ್ತ್ರ ಎಂದರೆ ಸ್ಥೂಲವಾಗಿ ಅರ್ಥವಾಗುತ್ತದೆ. ಜೀವನ ಎಂದರೇನು ? ಬ್ರಹ್ಮ–ಜೀವ ಜನ್ಮ–ಮೃತ್ಯು ಸುಖ–ದುಃಖ ಈ ವಿಚಾರಗಳ ಕುರಿತಾದ ಯಥಾರ್ಥ ಸತ್ಯ ಯಾವುದು ? ಅವುಗಳನ್ನೆಲ್ಲಾ ತಿಳಿಯ ಬೇಕಾದರೆ ಮಾರ್ಗವೊಂದು ಬೇಕೇ ಬೇಕು. ಅದೇ ದರ್ಶನ. ದರ್ಶನವು ಶ್ರುತಿಗಳನ್ನು ಅನುಸರಿಸಿ ಅವುಗಳಲ್ಲಿ ಪ್ರತಿಪಾದ್ಯವಾದ ಸತ್ಯವನ್ನು ತತ್ತ್ವಬದ್ಧವಾಗಿ ತರ್ಕಯುಕ್ತವಾಗಿ ವಿವರಿಸಿ ಮನದಟ್ಟುಮಾಡಲು ಯತ್ನಿಸಿದೆ. ಪುರಾಣಗಳು ಮಾನವನ ಕಲ್ಪನಾಶಕ್ತಿಯ ವರ್ಧನೆಗೂ, ಆಗಮಗಳು ಭಕ್ತಿವರ್ಧನೆಗೂ ಸಹಾಯವಾದಂತೆ ದರ್ಶನಗಳು ತತ್ತ್ವ ಜ್ಞಾನದ ಶಕ್ತಿಸಂವರ್ಧನೆಗೆ ಸಹಾಯವಾಗುತ್ತವೆ. ಪುರಾಣ ಆಗಮಗಳಲ್ಲಿ ಮನುಷ್ಯನ ಹೃದಯಕ್ಕೆ ಸಂತುಷ್ಟಿಯನ್ನು ನೀಡುವಂತಿದ್ದರೆ ದರ್ಶನಗಳು ಬುದ್ಧಿಗೆ ಕೆಲಸವನ್ನೂ ತುಷ್ಟಿಯನ್ನೂ ಪುಷ್ಟಿಯನ್ನೂ ನೀಡುತ್ತವೆ. ದರ್ಶನಗಳಲ್ಲಿ ಮುಖ್ಯವಾಗಿ ಎರಡು ಭಾಗ ಗಳಿದ್ದು ನಾಸ್ತಿಕದರ್ಶನ ಮತ್ತು ಆಸ್ತಿಕದರ್ಶನ ಎಂದು ಅವುಗಳನ್ನು ಹೆಸರಿಸಲಾಗಿದೆ. ಇದನ್ನು ಅವೈದಿಕ ಮತ್ತು ವೈದಿಕದರ್ಶನ ಎಂದೂ ಕರೆಯುತ್ತಾರೆ. ನಾಸ್ತಿಕದರ್ಶನದ ಅಥವಾ ಅವೈದಿಕದರ್ಶನದ ವಿಭಾಗದಲ್ಲಿ ಚಾರ್ವಾಕ, ಜೈನ, ಬೌದ್ಧ ಎಂಬ ಮೂರು ದರ್ಶನಗಳು ಸೇರಿವೆ. ಆಸ್ತಿಕದರ್ಶನದಲ್ಲಿ ಅಥವಾ ವೈದಿಕ ದರ್ಶನದ ಪೈಕಿ ಆರು ವಿಧಗಳಿದ್ದು ಅವುಗಳನ್ನು ಷಡ್‌ದರ್ಶನ ಎಂದು ಹೇಳುತ್ತಾರೆ. ಅವು ಯಾವುವೆಂದರೆ :

೧. **ನ್ಯಾಯ**—ಶ್ರೀ ಗೌತಮಮಹರ್ಷಿ ಪ್ರಣೀತವಾದ ದರ್ಶನ.

೨. **ವೈಶೇಷಿಕ**—ಶ್ರೀ ಕಣಾದಮಹರ್ಷಿ ಪ್ರಣೀತವಾದ ದರ್ಶನ.

೩. **ಸಾಂಖ್ಯ**—ಶ್ರೀ ಕಪಿಲಮಹರ್ಷಿ ಪ್ರಣೀತವಾದ ದರ್ಶನ.

೪. **ಯೋಗ**—ಶ್ರೀ ಪತಂಜಲಿಮಹರ್ಷಿ ಪ್ರಣೀತವಾದ ದರ್ಶನ.

೫. **ಪೂರ್ವಮೀಮಾಂಸೆ**—ಶ್ರೀ ಜೈಮಿನಿಮಹರ್ಷಿ ಪ್ರಣೀತವಾದ ದರ್ಶನ.

೬. **ಉತ್ತರಮೀಮಾಂಸೆ**—ಶ್ರೀ ಬಾದರಾಯಣ ಅಥವಾ ಶ್ರೀ ವ್ಯಾಸಮಹರ್ಷಿ ಪ್ರಣೀತವಾದ ದರ್ಶನ.

ಈ ದರ್ಶನಗಳಲ್ಲಿ ವೇದೋಪನಿಷತ್ತುಗಳಲ್ಲಿ ಉಕ್ತವಾಗಿರುವ ತತ್ತ್ವಗಳ ಕುರಿತಾದ ವಿವರಣೆ ಅಭಿಪ್ರಾಯ ಸಿದ್ಧಾಂತಗಳು ಸೇರಿದ್ದು ಎಲ್ಲವೂ ಸೂತ್ರರೂಪದಲ್ಲಿವೆ. ಈ ದರ್ಶನಗಳೆಲ್ಲವನ್ನೂ ಮೇಲೆ ತಿಳಿಸಿದಂತೆ ಒಬ್ಬೊಬ್ಬ ಮಹರ್ಷಿಗಳು ರಚಿಸಿದ್ದು ಅವರು ಮೂಲತಃ ದರ್ಶನದ ಸೂತ್ರಕಾರರಾಗಿರುತ್ತಾರೆ. ಈ ಸೂತ್ರಗಳಿಗೆಲ್ಲಾ ಕಾಲವು ಸರಿದಂತೆ ಬೇರೆ ಬೇರೆ ದೃಷ್ಟಿಕೋನಗಳಿಂದ ಅರ್ಥವನ್ನು ಮಾಡುವಂತಾಯಿತು. ಹಲವು ಮತಾಚಾರ್ಯರು, ತತ್ತ್ವಜ್ಞಾನಿಗಳು, ವಿದ್ವಾಂಸರು ಷಡ್‌ದರ್ಶನಗಳ ಈ ಸೂತ್ರಗಳಿಗೆ ವಿವರವಾಗಿ ಭಾಷ್ಯ, ವಾರ್ತಿಕ ಇತ್ಯಾದಿಗಳನ್ನು ಬರೆದು ಅರ್ಥವಿವರಣೆ ನೀಡಿದರು. ಹೀಗೆ ಪ್ರತಿ ದರ್ಶನಸೂತ್ರಗಳಿಗೂ ಬೇರೆಬೇರೆಯಾಗಿ, ಐದು ವಿಧದ ವಿವರಣಾಸಾಹಿತ್ಯವು ಸೇರಿಕೊಂಡಿತು. ಅವು ಯಾವುವೆಂದರೆ ;

(೧) ಭಾಷ್ಯ, (೨) ವೃತ್ತಿ, (೩) ವಾರ್ತಿಕ, (೪) ವ್ಯಾಖ್ಯಾನ ಅಥವಾ ಟೀಕೆ, (೫) ಟಿಪ್ಪಣಿ.

**ಭಾಷ್ಯ :** ಭಾಷ್ಯ ಎಂದರೆ ಸೂತ್ರಗಳಿಗೆ ಶಬ್ದಾರ್ಥಗಳನ್ನು ನೀಡಿ ಅನುಸಾರವಾಗಿ ವಿವರವಾದ ವಿವರಣೆಗಳನ್ನು ಬರೆದು ಸೂತ್ರದಲ್ಲಿ ಅಂತರ್ಗತವಾಗಿರುವ ವಿಷಯಗಳನ್ನು ವಿಸ್ತಾರವಾಗಿ ನಿರೂಪಿಸುವುದೇ ಆಗಿರುತ್ತದೆ.

ಉದಾಹರಣೆ : ಪಾಣಿನಿಸೂತ್ರಗಳಿಗೆ ಪತಂಜಲಿಮಹರ್ಷಿಗಳ ಭಾಷ್ಯ, ವೇದಾಂತಸೂತ್ರಗಳಿಗೆ ಮತಾಚಾರ್ಯರಾದ ಶ್ರೀ ಶಂಕರಾಚಾರ್ಯರು, ಶ್ರೀ ರಾಮಾನುಜಾಚಾರ್ಯರು, ಶ್ರೀ ಮಧ್ವಾಚಾರ್ಯರು ಮೊದಲಾದವರು ಬರೆದ ಭಾಷ್ಯ.

**ವೃತ್ತಿ :** ಭಾಷ್ಯದಷ್ಟು ವಿಸ್ತಾರವಿಲ್ಲದೆ, ಹಾಗೆಂದು ತೀರಾ ಸೂಕ್ಷ್ಮವೂ ಅಲ್ಲದ ಸೂತ್ರಕ್ಕೆ ವಿವರಣೆಯನ್ನು ನೀಡುವುದೇ ವೃತ್ತಿಯಾಗಿರುತ್ತದೆ.

ಉದಾಹರಣೆ: ಬ್ರಹ್ಮಸೂತ್ರಗಳಿಗೆ ಶ್ರೀ ಬೋಧಾಯನರು ರಚಿಸಿದ **ವೃತ್ತಿ**—ಬೋಧಾಯನವೃತ್ತಿ.

**ವಾರ್ತಿಕ :** ಇದರ ನಿರ್ವಚನ ಹೀಗಿರುತ್ತದೆ :

**ಉಕ್ತಾನುಕ್ತದುರುಕ್ತಾನಾಂ ಚಿಂತಾ ಯತ್ರ ಪ್ರವರ್ತತೇ ।**
**ತಂ ಗ್ರಂಥಂ ವಾರ್ತಿಕಂ ಪ್ರಾಹುಃ ವಾರ್ತಿಕಜ್ಞ ವಿಚಕ್ಷಣಾಃ ॥**

ಭಾಷ್ಯದಲ್ಲಿ ಹೇಳಿದ ಮತ್ತು ಪ್ರಸ್ತಾಪಿಸದೇ ಬಿಟ್ಟ ವಿಷಯಗಳ ಕುರಿತಾಗಿ ವಿಮರ್ಶಾತ್ಮಕ ದೃಷ್ಟಿಯಿಂದ ಪರಿಶೀಲನೆ ನಡೆಸಿ, ಭಾಷ್ಯದಲ್ಲಿ ಹೇಳಿದ ವಿಷಯಗಳ ಪರಿಣಾಮಕಾರಿಯಾದ ಸ್ಪಷ್ಟೀಕರಣ, ಭಾಷ್ಯದಲ್ಲಿ ಹೇಳದೆ ಉಳಿದ ವಿಷಯಗಳ ಯಶಸ್ವೀ ಪೂರೈಕೆಯೇ ವಾರ್ತಿಕವಾಗಿರುತ್ತದೆ.

ಉದಾಹರಣೆ: ಪಾಣಿನಿಯ ಸೂತ್ರಗಳ ಕುರಿತಾಗಿ ಕಾತ್ಯಾಯನರು ಬರೆದ ವಾರ್ತಿಕ. ಶ್ರೀ ಶಂಕರಾಚಾರ್ಯರ ಬೃಹದಾರಣ್ಯಕ ಉಪನಿಷತ್ತಿನ ಭಾಷ್ಯದ ಮೇಲೆ ಶ್ರೀ ಸುರೇಶ್ವರಾಚಾರ್ಯರು ಬರೆದ ವಾರ್ತಿಕಗಳು.

**ವ್ಯಾಖ್ಯಾನ ಅಥವಾ ಟೀಕಾ :** ಸೂತ್ರಾರ್ಥಗಳ ಕುರಿತಾಗಿ ಸರಳವಾದ ಭಾಷೆಯಲ್ಲಿ ಧಾರಾವಾಹಿಯಾಗಿ ಸಂಗ್ರಹವಾಗಿ ಅರ್ಥವಿವರಣೆಯನ್ನು ನೀಡುವುದೇ ವ್ಯಾಖ್ಯಾನವಾಗಿರುತ್ತದೆ.

ಉದಾ : ಯೋಗಸೂತ್ರದ ವ್ಯಾಸಭಾಷ್ಯದ ಮೇಲೆ ವಾಚಸ್ಪತಿಮಿಶ್ರರ ವ್ಯಾಖ್ಯಾನ.

**ಟಿಪ್ಪಣಿ :** ಮೂಲಸೂತ್ರಗಳ ಕಷ್ಟಶಬ್ದಗಳ ಅರ್ಥವಿವರಣೆಗಳನ್ನು ನೀಡುವುದೇ ಟಿಪ್ಪಣಿಗಳ ಉದ್ದೇಶವಾಗಿದೆ.

ಉದಾ : ಪಾತಂಜಲ ಮಹಾಭಾಷ್ಯದ ಮೇಲೆ ಕೈಯಟರ ಟಿಪ್ಪಣಿ.

ಹೀಗೆ, ಅರ್ಥಪೂರ್ಣವಾದ, ವ್ಯವಸ್ಥಾಬದ್ಧವಾದ ಗ್ರಂಥಗಳಲ್ಲಿ ಹಿಂದೂಧರ್ಮದ ತತ್ತ್ವಗಳನ್ನು ಎಲ್ಲರಿಗೂ ತಿಳಿಯಲು ಅನುಕೂಲವಾಗುವಂತೆ ಅನೇಕ ರೀತಿಯಲ್ಲಿ ವಿವರಿಸಲಾಗಿದೆ. ಹಿಂದೂಧರ್ಮದ ತತ್ತ್ವಗಳನ್ನು ತಿಳಿಸುವ ಈ ಆಧಾರಗ್ರಂಥಗಳು ಮೂಲದಲ್ಲಿ ವೇದಗಳನ್ನೇ ಅವಲಂಬಿಸಿರುತ್ತವೆ.

೩

# ಹಿಂದೂಧರ್ಮದ ದರ್ಶನಗಳು

---

ವೇದಗಳ ಕಾಲ ಕಳೆದಂತೆ ಸ್ಮೃತಿಗಳ ಕಾಲ ಉದಯವಾಯಿತು. ಅನಂತರವಲ್ಲಿ ಇತಿಹಾಸ–ಪುರಾಣಗಳ ಕಾಲವಾಗಿ ಆಗಮಗಳ ಕಾಲ ಬಂದಿತು. ಆಗಮಗಳ ಯುಗವಾದ ಮೇಲೆ ದರ್ಶನಯುಗವು ಪ್ರಾರಂಭವಾಯಿತು. 'ಶ್ರುತಿ'ಯಲ್ಲಿ ಕೇಳಿದುದನ್ನು 'ಸ್ಮೃತಿ' ಗಳ ಮೂಲಕ ನೆನಪಿಟ್ಟುಕೊಳ್ಳುವಂತಾಯಿತು. ಆಗಮಗಳ ಮೂಲಕ ಅವುಗಳು ಒಬ್ಬರಿಂದ ಒಬ್ಬರಿಗೆ ಅನೂಚಾನವಾಗಿ ಅವ್ಯಾಹತವಾಗಿ ಪ್ರಾಪ್ತವಾಗುವಂತಾಯಿತು. ಜಗತ್ತು, ಜೀವ, ಪರಮಾತ್ಮ, ಹುಟ್ಟು, ಜೀವನ, ಸಾವು ಈ ವಿಚಾರಗಳ ಕುರಿತಾಗಿ ಕೇಳಿದ ಹಲವಾರು ವಿಚಾರಗಳನ್ನು ಪರಂಪರಾಗತವಾಗಿ ಪ್ರಾಪ್ತವಾದ ಉತ್ತರರೂಪದ ವಿವರಗಳನ್ನು ಹಿಂದುವು ಸ್ವಬುದ್ಧಿ, ಸ್ವವಿಮರ್ಶೆಗಳಿಂದ ಪರಿಶೀಲಿಸಹೊರಡುವಂತಾಯಿತು. ಸರಿಯಾದ ತಿಳಿವಳಿಕೆಯು ಪ್ರಮಾಣಪೂರ್ವಕವಾಗಿ ದೊರೆಯಬೇಕು ಎಂಬ ಆಗ್ರಹ ಉಂಟಾಗಿ ಬುದ್ಧಿ, ಯುಕ್ತಿಗಳ ಬಲದಿಂದ ಪಿಂಡಾಂಡ, ಬ್ರಹ್ಮಾಂಡಗಳ (ಜೀವ, ಜಗತ್ತುಗಳ) ವಿಚಾರವನ್ನು ಸ್ವತಃಪರಿಶೀಲಿಸುವ ಪರಿಪಾಠ ಆರಂಭವಾಯಿತು. ಆಗಲೇ ಹುಟ್ಟಿಕೊಂಡಿತು 'ದರ್ಶನ'. 'ದರ್ಶನ' ಎಂದರೆ ನೋಡುವಿಕೆ ನೋಡಲು ಸಾಧ್ಯವಾಗಿಸುವ ಶಾಸ್ತ್ರ ಎಂದು ಅರ್ಥವಾಗುತ್ತದೆ. ಜಗತ್ತಿನ ಜೀವಿ ಅನುಭವಿಸುವ ಸುಖದುಃಖ. ಹುಟ್ಟುಸಾವು ಇತ್ಯಾದಿ ಅನೇಕ ಗಹನವಾದ ವಿಚಾರಗಳಿಗೆ ಪರಿಹಾರದ ದರ್ಶನವು ಈ 'ದರ್ಶನ'ಗಳ ಮೂಲಕ ದೊರೆಯಿತು. ಅವುಗಳಿಗೆಲ್ಲಾ ಕಾರಣಗಳು ಇವೇ ಎಂದು ನಿರ್ದಿಷ್ಟವಾಗಿ ನಿಶ್ಚಯಿಸುವಂತಾಯಿತು. ಹೀಗೆ ಬುದ್ಧಿಯ ಬಲದಿಂದ ಅನುಭವಿಸಿ ಕಂಡುಕೊಂಡ ಕಾರಣಗಳೇ ಪ್ರಮಾಣಗಳು ಎಂದು ಪ್ರಸಿದ್ಧವಾಗಿರುತ್ತವೆ. ಪ್ರಮಾಣ ಎಂದರೆ ಪ್ರಮೆಗೆ ಕಾರಣವಾದದ್ದು. 'ಪ್ರಮೆ' ಎಂದರೆ ಸರಿಯಾದ ತಿಳಿವಳಿಕೆ. ಸರಿಯಾದ ತಿಳಿವಳಿಕೆಯನ್ನು ಯಾವುದು ಉಂಟುಮಾಡುತ್ತದೆಯೋ ಅದೇ ಪ್ರಮಾಣ. ಪ್ರಮಾಣವನ್ನು ಉಪಯೋಗಿಸುವವನು ಕರ್ತೃ ಆಗಿ ಅವನನ್ನು 'ಪ್ರಮಾತೃ' ಎನ್ನುತ್ತಾರೆ. ಅರಿಯಬೇಕಾದ ವಿಷಯವನ್ನು 'ಪ್ರಮೇಯ' ಎಂದು ಕರೆಯುತ್ತಾರೆ. ಸರಿಯಾದ ತಿಳಿವಳಿಕೆಯನ್ನು 'ಪ್ರಮಿತಿ' ಎನ್ನುತ್ತಾರೆ.

ದರ್ಶನಗಳೆಲ್ಲವೂ ತಮ್ಮ ತಮ್ಮ ಪ್ರಮಾಣಗಳಿಂದ ಕೂಡಿವೆ. ಅವುಗಳ ಆಧಾರದಿಂದ ಆತ್ಮ, ಜಗತ್ತು ಎಂಬಿತ್ಯಾದಿ ವೇದೋಕ್ತವಿಚಾರಗಳ ಕುರಿತಾಗಿ ತಮ್ಮ ತಮ್ಮ ಸಿದ್ಧಾಂತ ಗಳನ್ನು ಆಯಾಯ ದರ್ಶನಕಾರರು ಸ್ಪಷ್ಟಪಡಿಸಿರುತ್ತಾರೆ.

ಪ್ರಮಾಣಗಳಲ್ಲಿ ಹತ್ತು ವಿಧ ಎನ್ನುವುದು ರೂಢಿಯ ಮಾತು. ಕೆಲವರು ಪ್ರಮಾಣ ಗಳಲ್ಲಿ ಹನ್ನೆರಡು ವಿಧವಿವೆ ಎಂದೂ ಮತ್ತಿನ್ನು ಕೆಲವರು ಎಂಟೇ ವಿಧವೆಂದೂ ಹೇಳುತ್ತಾರೆ. ಸಾಮಾನ್ಯವಾಗಿ ಎಂಟು ವಿಧದ ಪ್ರಮಾಣಗಳು ಬಳಕೆಯಲ್ಲಿದ್ದು ಅವುಗಳಲ್ಲಿ ಆರು ವಿಧವವು ಗಣಿಸೀಯವಾಗಿದ್ದು ಅವುಗಳಲ್ಲಿ ನಾಲ್ಕು ವಿಧದ ಪ್ರಮಾಣಗಳು ಅತ್ಯಂತ ಪ್ರಸಿದ್ಧವಾಗಿವೆ.

ಹತ್ತು ವಿಧದ ಪ್ರಮಾಣಗಳು ಯಾವುವೆಂದರೆ :

(೧) ಪ್ರತ್ಯಕ್ಷ, (೨) ಅನುಮಾನ, (೩) ಉಪಮಾನ, (೪) ಶಬ್ದ (ಆಗಮ), (೫) ಅರ್ಥಾಪತ್ತಿ, (೬) ಅನುಪಲಬ್ಧಿ, (೭) ಸಂಭವ, (೮) ಐತಿಹ್ಯ, (೯) ಲಿಪಿ, (೧೦) ಲೋಕಪ್ರಸಿದ್ಧಿ.

ಹಿಂದೂಧರ್ಮದ ಬೇರೆ ಬೇರೆ ದಾರ್ಶನಿಕ ಆಚಾರ್ಯರು ತಮ್ಮ ತಮ್ಮ ಮತವನ್ನು ಸ್ಪಷ್ಟಪಡಿಸುವಾಗ ಈ ಎಲ್ಲ ಪ್ರಮಾಣಗಳನ್ನು ಅವಲಂಬಿಸಿ ವಿಚಾರವನ್ನು ಪ್ರಕಾಶಗೊಳಿಸಿ ರುವುದಿಲ್ಲ. ಚಾರ್ವಾಕಮತದವರು ಪ್ರತ್ಯಕ್ಷಪ್ರಮಾಣ ಒಂದನ್ನೇ ಒಪ್ಪಿಕೊಂಡಿದ್ದರೆ ಬೌದ್ಧರು ಪ್ರತ್ಯಕ್ಷ ಮತ್ತು ಅನುಮಾನ ಎಂಬ ಎರಡು ಪ್ರಮಾಣಗಳನ್ನು ಮಾತ್ರ ಅಂಗೀಕರಿಸಿದ್ದು, ಜೈನರು ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಎಂಬ ಮೂರು ಪ್ರಮಾಣ ಗಳನ್ನು ಮಾತ್ರ ಸ್ವೀಕರಿಸಿರುತ್ತಾರೆ. ನ್ಯಾಯದರ್ಶನದವರು ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ ಎಂಬ ನಾಲ್ಕು ಪ್ರಮಾಣಗಳನ್ನು ಒಪ್ಪಿರುತ್ತಾರೆ. ವೈಶೇಷಿಕಮತ ದವರು ಪ್ರತ್ಯಕ್ಷ ಮತ್ತು ಅನುಮಾನ ಎಂಬ ಎರಡು ಪ್ರಮಾಣಗಳನ್ನು ಮಾತ್ರ ಒಪ್ಪಿಕೊಂಡು ಪ್ರತ್ಯಕ್ಷದಲ್ಲಿ ಉಪಮಾನವೂ ಅನುಮಾನದಲ್ಲಿ ಶಬ್ದವೂ ಸೇರಿದೆ ಎಂದು ಹೇಳುತ್ತಾರೆ. ಸಾಂಖ್ಯ ಹಾಗೂ ಯೋಗದರ್ಶನಕಾರರು ಪ್ರತ್ಯಕ್ಷ, ಅನುಮಾನ, ಶಬ್ದ ಎಂಬ ಮೂರೇ ಪ್ರಮಾಣಗಳನ್ನು ಸ್ವೀಕರಿಸಿದ್ದು ಉಳಿದ ಎಲ್ಲ ಪ್ರಮಾಣಗಳು ಈ ಮೂರರ ವ್ಯಾಪ್ತಿಗೇ ಸೇರಿದೆ ಎಂದು ಸಾರಿರುತ್ತಾರೆ. ಪೂರ್ವಮೀಮಾಂಸೆಮತದವರು ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ, ಅನುಪಲಬ್ಧಿ ಎಂಬ ಆರು ಪ್ರಮಾಣಗಳನ್ನು ಒಪ್ಪಿರುತ್ತಾರೆ. (ಇವರಲ್ಲಿ ಪ್ರಭಾಕರಪಂಥದ ಮೀಮಾಂಸಕಾರರು ಅನುಪಲಬ್ಧಿಯನ್ನು ಪ್ರಮಾಣ ಎಂದು ಸ್ವೀಕರಿಸದೆ ಪ್ರಮಾಣಗಳಲ್ಲಿ ಉಳಿದ ಐದನ್ನು ಮಾತ್ರ ಪ್ರಮಾಣವೆಂದು ಸ್ವೀಕರಿಸಿರುತ್ತಾರೆ.) ಉತ್ತರಮೀಮಾಂಸದರ್ಶನಕಾರರಲ್ಲಿ ಅದ್ವೈತಪಂಥದವರು ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ, ಅನುಪಲಬ್ಧಿ ಎಂಬ ಆರನ್ನು ಪ್ರಮಾಣವಾಗಿ ಸ್ವೀಕರಿಸಿರುತ್ತಾರೆ. ವಿಶಿಷ್ಟಾದ್ವೈತಪಂಥ ದವರು ಪ್ರತ್ಯಕ್ಷ, ಅನುಮಾನ, ಶಬ್ದ ಎಂಬುದಾಗಿ ಮೂರನ್ನು ಮಾತ್ರ ಪ್ರಮಾಣವಾಗಿ ಸ್ವೀಕರಿಸಿದ್ದಾರೆ. ಈ ರೀತಿ ದ್ವೈತಪಂಥದವರೂ ಕೂಡ ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಎಂಬ ಪ್ರಮಾಣಗಳನ್ನು ಮಾತ್ರ ಗಣನೆಗೆ ತೆಗೆದುಕೊಂಡಿದ್ದಾರೆ. ಒಟ್ಟಿನಲ್ಲಿ

ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಶಬ್ದ ಎಂಬ ನಾಲ್ಕು ಪ್ರಮಾಣಗಳು ಬಹಳ ಮುಖ್ಯವಾದವುಗಳು. ಉಳಿದ ಎಲ್ಲ ಪ್ರಮಾಣಗಳು ಈ ನಾಲ್ಕರ ಮುಂದೆ ಗೌಣವಾಗಿದ್ದು ಒಂದಲ್ಲ ಒಂದು ರೀತಿಯಲ್ಲಿ ಈ ನಾಲ್ಕರ ಗುಂಪಿಗೇ ಸೇರಿದವುಗಳೆಂದು ಆಗಿರುವುದರಿಂದ ಎಲ್ಲ ದರ್ಶನಕಾರರೂ ಈ ಹತ್ತು ಪ್ರಮಾಣಗಳನ್ನೂ ಗಣನೆಗೆ ಸ್ಪಷ್ಟವಾಗಿ ತೆಗೆದು ಕೊಂಡಿರುವುದಿಲ್ಲ. ಮುಖ್ಯವಾದನಾಲ್ಕು ಪ್ರಮಾಣಗಳು ಹೀಗೆ ವಿವರಗಳನ್ನೊಳಗೊಂಡಿವೆ.

**ಪ್ರತ್ಯಕ್ಷಪ್ರಮಾಣ :** ಯಥಾರ್ಥವಾದ "ಸಮ್ಯಗ್ ಅಪರೋಕ್ಷಾನುಭವಃ ಪ್ರತ್ಯಕ್ಷಮ್" ಅಪರೋಕ್ಷ ಅನುಭವವೇ ಪ್ರತ್ಯಕ್ಷವಾದುದು. ನಮ್ಮ ಇಂದ್ರಿಯಗಳ ಮೂಲಕ ಪ್ರತ್ಯಕ್ಷ ವಾಗಿ ಅನುಭವಿಸಲು ಸಾಧ್ಯವಾದುದೆಲ್ಲಾ ಪ್ರತ್ಯಕ್ಷಪ್ರಮಾಣವಾಗುತ್ತದೆ. ಪ್ರತ್ಯಕ್ಷ ಪ್ರಮಾಣವನ್ನು ಯೋಗಿಪ್ರತ್ಯಕ್ಷ, ಅಯೋಗಿಪ್ರತ್ಯಕ್ಷ ಎಂದು ಇನ್ನೊಂದು ರೀತಿಯಲ್ಲಿ ಎರಡು ವಿಭಾಗ ಮಾಡುವ ಕ್ರಮವೂ ಇದೆ. ಯೋಗಿಪ್ರತ್ಯಕ್ಷ ಎಂದರೆ ಯೋಗಿಗಳು ಯೋಗಸಾಧನಾಬಲದಿಂದ ತಮ್ಮ ಅಂತರಂಗದಲ್ಲಿ ದಿವ್ಯಚಕ್ಷುಸ್ಸಿನ ಮೂಲಕ ಗ್ರಹಿಸಿದ ತತ್ತ್ವವಿಚಾರಗಳಾಗಿವೆ. ಅವುಗಳ ಆಧಾರದಿಂದ ಯೋಗಿಗಳು ನೀಡುವ ಶಾಸ್ತ್ರವಿವರಣೆಗಳು ಸೃಷ್ಟಿರಹಸ್ಯಗಳು, ಯೋಗಿಗಳಲ್ಲದವರಿಗೆ ಸತ್ಯವೆಂದು ಕಾಣಲಾರದು. ಅಯೋಗಿಪ್ರತ್ಯಕ್ಷ ಎಂದರೆ ಯೋಗಿಗಳಲ್ಲದವರು ತಮ್ಮ ಬಾಹ್ಯ ಪಂಚೇಂದ್ರಿಯಗಳಾದ ಕಣ್ಣು, ಕಿವಿ, ಮೂಗು, ನಾಲಗೆ ಮತ್ತು ಚರ್ಮಗಳ ಮೂಲಕ ಕಂಡುಕೊಳ್ಳುವ ಪ್ರತ್ಯಕ್ಷವಾದ ಸಂಗತಿಗಳಾಗಿವೆ.

**ಅನುಮಾನ :** "ಅವಿನಾಭಾವೇನ ಸಮ್ಯಗ್ ಪರೋಕ್ಷಾನುಭವೋಽನುಮಾನಮ್". ಇಂದ್ರಿಯಗಳ ಸಂಬಂಧದಿಂದ ನೇರವಾಗಿ ತಿಳಿದುಬರುವ ವಿಷಯವನ್ನು ಅಥವಾ ವಸ್ತುಗಳನ್ನು ನೋಡಿ ಅದರ ಸಹಾಯದಿಂದ ಅದಕ್ಕೆ ಸಂಬಂಧಿಸಿದ ಇತರ ವಸ್ತು ಅಥವಾ ವಿಚಾರಗಳನ್ನು ಊಹಿಸಿ ನಿರ್ಧಾರಕ್ಕೆ ಬರುವುದೇ ಅನುಮಾನಪ್ರಮಾಣ. ದೂರದ ಬೆಟ್ಟದಲ್ಲಿ ಹೊಗೆ ಏಳುತ್ತಿದ್ದರೆ ಅದನ್ನು ಕಂಡುಕೊಂಡು ಆ ಹೊಗೆಯ ಆಧಾರದಿಂದ ಅಲ್ಲಿ ಬೆಂಕಿ ಇರಬೇಕು ಎಂದು ಹೇಳುವುದೇ ಅನುಮಾನಪ್ರಮಾಣ. ಈ ಅನುಮಾನಜನ್ಯಜ್ಞಾನಕ್ಕೆ ಅನುಮಿತಿ ಎನ್ನುತ್ತಾರೆ. ಅನುಮಿತಿಯುಕ್ತವಾದ ಪ್ರಮಾಣವೇ ಅನುಮಾನಪ್ರಮಾಣ. ಪ್ರತ್ಯಕ್ಷವಾದ ಒಂದು ಪ್ರಮಾಣದ ಸಹಾಯದಿಂದ ಅಪ್ರತ್ಯಕ್ಷ ವಾದ ಮತ್ತೊಂದು ಸಂಬಂಧಿಸಿದ ವಿಚಾರವನ್ನು ಯಥಾರ್ಥವಾಗಿ ಅನುಭವಿಸುವುದೇ ಅನುಮಾನಪ್ರಮಾಣ. (ಅನು = ನಂತರ, ಮಾನ = ತಿಳಿವಳಿಕೆ).

**ಉಪಮಾನಪ್ರಮಾಣ :** ಪೂರ್ವದ ಅನುಭವದ ಉಪಮೇಯ ಆಧಾರದಲ್ಲಿ ಹೊಸ ವಿಷಯವನ್ನು ಆ ವಿಷಯಕ್ಕೆ ಸಂಬಂಧಿಸಿದ ವಸ್ತು–ವಿಚಾರಗಳ ಪರಿಚಯವಿಲ್ಲದೆಯೋ ತಿಳಿದುಕೊಂಡು ತತ್ಸಂಬಂಧದ ವಸ್ತು ಅಥವಾ ವಿಚಾರ ಪ್ರತ್ಯಕ್ಷವಾದಾಗ ವಿವರವನ್ನು ಸುಲಭವಾಗಿ ಸ್ವತಂತ್ರವಾಗಿ ಗ್ರಹಿಸುವುದೇ ಉಪಮಾನಪ್ರಮಾಣ. ಉದಾಹರಣೆಗೆ— ಒಬ್ಬನು ಹಸುವನ್ನು ನೋಡಿರುತ್ತಾನೆ, ಆದರೆ ಗವಯ ಎಂಬ ಕಾಡುಪ್ರಾಣಿಯನ್ನು ನೋಡಿರುವುದಿಲ್ಲ. ಅವನಿಗೆ ಕಾಡಿನಲ್ಲಿ ಸಂಚರಿಸಿ ಗವಯ ಪ್ರಾಣಿಯನ್ನು 'ಕಂಡು ಅನುಭವವಿರುವವನು, ಗವಯ ಹೇಗಿದೆ ಎಂದಾಗ, ಹಸುವಿನಂತೆ ಇದೆ ಎಂದು ಹೇಳಿ

ತಿಳಿಸಬಹುದು. ಸಂದರ್ಭಾನುಸಾರವಾಗಿ ಊರಿನಿಂದ ಈ ಗವಯವನ್ನು ನೋಡದ ಮನುಷ್ಯನು ಕಾಡಿಗೆ ತೆರಳಿದಾಗ ಗವಯವನ್ನು ಕಂಡರೆ ಅದರ ಚಹರೆಗಳು ತನಗೆ ಹಿಂದೆ ಕಾಡಿನಲ್ಲಿ ಸಂಚರಿಸಿ ಅನುಭವ ಇರುವವನು ಹೇಳಿದ್ದನ್ನು ನೆನಸಿ ಹೋಲಿಕೆ ಮಾಡಿ ಅದೇ ಗವಯ ಪ್ರಾಣಿ ಇರಬೇಕು ಎಂದು ತಿಳಿದುಕೊಳ್ಳುತ್ತಾನೆ. ಅವನ ಈ ತಿಳಿವಳಿಕೆಯು ಉಪಮಾನದಿಂದ ಆಗುತ್ತದೆ. ಹೀಗೆ ಒಂದು ವಸ್ತುವನ್ನು ಅದರಂತೆಯೇ ಇರುವ ಬೇರೆ ವಸ್ತುಗಳ ಉದಾಹರಣೆಯಿಂದ ತಿಳಿದುಕೊಳ್ಳುವುದೇ ಉಪಮಾನಪ್ರಮಾಣ. ಪ್ರಮಾಣಗಳು ಮುಖ್ಯವಾಗಿ ಮೂರೇ ಎಂದೂ, ಉಪಮಾನವು ಈ ಮೊದಲಿನ ಮೂರರಲ್ಲೇ ಅಡಕವಾಗಿವೆಯೆಂದೂ ಹೇಳಿ ಮೂರು ಪ್ರಮಾಣಗಳನ್ನು ಮಾತ್ರ ಮಾನ್ಯಮಾಡುವವರು, ಉಪಮಾನಪ್ರಮಾಣವನ್ನು ಬೇರೆ ಪ್ರಮಾಣ ಎಂದು ಲೆಕ್ಕಕ್ಕೆ ತೆಗೆದುಕೊಳ್ಳುವವರು ಎಂದು ಎರಡು ರೀತಿಯ ಅಭಿಪ್ರಾಯಭೇದಗಳು ದರ್ಶನಕಾರರಲ್ಲಿವೆ.

**ಶಬ್ದಪ್ರಮಾಣ (ಆಗಮಪ್ರಮಾಣ) :** "ಶಬ್ದವಿಜ್ಞಾನಾತ್ ಸಮ್ಯಗ್ ಸನ್ನಿಕೃಷ್ಟಾರ್ಥ ಅನುಭವಃ ಆಗಮಃ" ಶಬ್ದದ ಅರಿವಿನ ಮೂಲಕ ಒಂದು ವಿಷಯದ ಕುರಿತಾಗಿ ಆಗುವ ಸರಿಯಾದ ಅನುಭವವನ್ನು ಶಬ್ದಪ್ರಮಾಣ (ಆಗಮಪ್ರಮಾಣ) ಎನ್ನುತ್ತಾರೆ. ಆಗಮ ಎಂದರೆ ಬಂದು ಸೇರಿದ್ದು, ಬಂದದ್ದು ಎಂದು ಅರ್ಥವಾಗುತ್ತದೆ. ಗ್ರಂಥಗಳ ಮೂಲಕ, ಆಪ್ತಜನರ ಮಾತುಗಳ ಮೂಲಕ, ಮಹಾತ್ಮರ-ಸಾಧುಸಂತರ ಉಪದೇಶಗಳ ಮೂಲಕ ಒದಗಿಬಂದ ಶಬ್ದಜ್ಞಾನವೇ ಆಗಮಜ್ಞಾನ. ಅಂತಹ ಜ್ಞಾನದ ಆಧಾರದಿಂದ ದೃಢೀಕೃತವಾಗುವುದನ್ನು "ಶಬ್ದಪ್ರಮಾಣ"ದಿಂದ ಸಿದ್ಧಾಂತಮಾಡಿದ ವಿಚಾರ ಎನ್ನುತ್ತಾರೆ. ಹಾಗಾಗಿ ಈ ಪ್ರಮಾಣಕ್ಕೆ ಶಬ್ದಪ್ರಮಾಣ ಎನ್ನುತ್ತಾರೆ. ಆಪ್ತರೆಂದರೆ ಯಾರು ? "ಯಥಾರ್ಥದರ್ಶೀ ಯಥಾ ದೃಷ್ಟಾರ್ಥವಾದೀ ಚ ಆಪ್ತಃ". ಇದ್ದುದನ್ನು ಇದ್ದಂತೆ ಕಾಣುವವರೂ ಕಂಡದ್ದನ್ನು ಕಂಡಂತೆ ಹೇಳುವವರೂ ಆಪ್ತರು. ವೇದೋಪನಿಷತ್ತುಗಳು, ಧರ್ಮಶಾಸ್ತ್ರಗಳು, ಸ್ಮೃತಿ–ಆಗಮಗಳು ಇವುಗಳೆಲ್ಲ ಆಗಮಪ್ರಮಾಣಗಳಾಗಿವೆ. ಆಗಮಪ್ರಮಾಣಗಳನ್ನು ಅಪೌರುಷೇಯ ಮತ್ತು ಪೌರುಷೇಯ ಎಂದು ಎರಡು ವಿಭಾಗಮಾಡಿ ಹೇಳುವುದೂ ಇದೆ. ಅಪೌರುಷೇಯ ಎಂದರೆ ಪುರುಷಯತ್ನದಿಂದ ಪ್ರಣೀತವಾಗದ್ದು. ವೇದೋಪನಿಷತ್ತುಗಳು ಅಪೌರುಷೇಯ ಪ್ರಮಾಣಗಳು. ಸಾಧುಸಂತರ ವಚನಗಳು, ಆಪ್ತವಚನಗಳು ಇವು ಪುರುಷನಿರ್ಮಿತವಾದ, ಪೌರುಷೇಯ ಪ್ರಮಾಣಗಳಾಗಿವೆ.

ಹೀಗೆ ಪ್ರಮಾಣಗಳನ್ನು ಆಧರಿಸಿ ಪರತತ್ತ್ವದ ವಿಚಾರವಾಗಿ ಹಲವು ರೀತಿಯ ಅಭಿಪ್ರಾಯಗಳು, ಸಿದ್ಧಾಂತಗಳು ಪ್ರಕಟಗೊಂಡವು. ವೈದಿಕಕಾಲದನಂತರ ವೇದವಿದಿತವಾದ ಯಜ್ಞಯಾಗಾದಿಗಳೆಲ್ಲ 'ವಿಧಿ' (ಕಟ್ಟುಪಾಡುಗಳು) ಎಂಬ ಭಾವನೆಯಿಂದ ಜನರು ಆಚರಿಸುವ ಸ್ಥಿತಿ ಒದಗಿ ಅಂಧಶ್ರದ್ಧೆ ಜಾಸ್ತಿಯಾಯಿತು. ಅಂಧಾನುಕರಣೆ ವಿಪರೀತವಾಗಿ, ಧರ್ಮವು ಕಡಿಮೆಯಾಗಿ ಜೀವನದಲ್ಲಿ ಅಧರ್ಮವು ಹೆಚ್ಚಾಯಿತು. ಪರಿಣಾಮವಾಗಿ ವೇದೋಕ್ತವಿಚಾರಗಳು ಅಂದರೆ ವೇದಪ್ರತಿಪಾದ್ಯವಾದ ಆತ್ಮ, ದೇವರು ಎಂಬ ವಿಚಾರಗಳು ಖಂಡನೆಗೊಳಗಾಗಿ ಜನಜೀವನದಲ್ಲಿ ವಿಮರ್ಶೆ, ಬುದ್ಧಿಮಾರ್ಗದ ಅನು

ಸರಣಿ ಆರಂಭವಾಯಿತು. ಕೊನೆಗೆ ಈ ವಾದವು ಬೆಳೆದು ಅದರಲ್ಲಿ ವ್ಯತ್ಯಾಸ ಉಂಟಾಗಿ ಚಾರ್ವಾಕ, ಜೈನ, ಬೌದ್ಧಮತಗಳು ಹುಟ್ಟಿಕೊಂಡವು. ಇವುಗಳಲ್ಲಿ ಚಾರ್ವಾಕಮತವು ಅತ್ಯಂತ ಪ್ರಾಚೀನವಾಗಿದ್ದು ಬೌದ್ಧ-ಜೈನಮತಗಳು ಸಮಕಾಲೀನವಾದವುಗಳಾಗಿವೆ. ಈ ಮತಗಳ ಪ್ರಭಾವ ಜನಜೀವನದ ಮೇಲೆ ಸಾಕಷ್ಟು ಆಯಿತು. ಪರಿಣಾಮವಾಗಿ, ವೇದೋಪನಿಷತ್ತುಗಳಲ್ಲಿ ಪ್ರತಿಪಾದ್ಯವಾದ ಜೀವ, ಆತ್ಮ, ಸೃಷ್ಟಿ, ದೇವರು ಇತ್ಯಾದಿ ವಿಚಾರಗಳೆಲ್ಲ ಕೇವಲ ಕಟ್ಟುಕಥೆಗಳು, ಕಾಲ್ಪನಿಕ ಸಂಗತಿಗಳು ಎಂದಾಯಿತು. ತಮಗೆ ತಾವೇ ದೇವರು, ಯಜಮಾನರು ಎಂಬ ಸ್ವೇಚ್ಛೆಯ ಮನೋಭಾವನೆಯು ಬೆಳೆಯ ತೊಡಗಿತು. ಬೌದ್ಧ–ಜೈನಮತಗಳು ವೇದ-ಉಪನಿಷತ್ತುಗಳನ್ನು ಆಧಾರವಾಗಿ ಒಪ್ಪದೆ ಇದ್ದುದು ಹೌದಾದರೂ ಜೀವನದ ಸ್ಥಿತಿಗತಿಗಳ ಬಗ್ಗೆ ಉತ್ತಮವಾದ ವಿಚಾರಗಳನ್ನೇ ಬೋಧಿಸಿವೆಯೇ ವಿನಾ ದುರ್ಗುಣ-ದುರ್ವಿಚಾರಗಳನ್ನೇನೂ ಬೋಧಿಸಿಲ್ಲ. ಆದರೆ ಜನಸಮೂಹದಲ್ಲಿ ಇತ್ತ ವೇದ–ಉಪನಿಷತ್ತುಗಳನ್ನು ನಂಬುವವರು ಎಂದೂ ನಂಬದೆ ಇರುವವರು ಎಂದೂ ಎರಡು ಭಾಗಗಳಾಯಿತು. ವೇದವನ್ನು ನಂಬುವವರೆಲ್ಲರೂ ಆಸ್ತಿಕರೆಂದೂ ವೈದಿಕರೆಂದೂ, ನಂಬದವರು ನಾಸ್ತಿಕರೆಂದೂ ಅವೈದಿಕರೆಂದೂ ಕರೆಯಲ್ಪಟ್ಟರು. ನಾಸ್ತಿಕವಾದ ಬೆಳೆದು ಜನಜೀವನದಲ್ಲಿ ನಾಸ್ತಿಕತೆ ಹೆಚ್ಚಿದಂತೆ ಆಸ್ತಿಕ ವಾದಿಗಳು ಜಾಗರೂಕರಾಗಿ ಬುದ್ಧಿಯ ಬಲದಿಂದ ಪ್ರತ್ಯಕ್ಷ ಅನುಮಾನಾದಿ ಪ್ರಮಾಣ ಗಳ ಮೂಲಕ ವೇದೋಪನಿಷತ್ತುಗಳ ವಿಚಾರಧಾರೆಯನ್ನು ಪುಷ್ಟೀಕರಿಸಿದರು. ಕೊನೆಗೆ ನಾಸ್ತಿಕದರ್ಶನವೆಲ್ಲವೂ ನಿರಾಧಾರ ಹಾಗೂ ನಿಷ್ಪ್ರಯೋಜನವಾದುದು ಎಂಬಷ್ಟರ ಮಟ್ಟಿಗೆ ಆಸ್ತಿಕದರ್ಶನದವರ ವಾದ ಬೆಳೆದು ಸಮರ್ಥವಾಗಿ ಪ್ರತಿಪಾದನೆಯನ್ನು ಮಾಡಿ ನಾಸ್ತಿಕವಾದದ ಬಲ ಕುಂದಿತು. ಹೀಗೆ ಹುಟ್ಟಿಕೊಂಡ ದರ್ಶನಗಳು ಒಟ್ಟು ಒಂಭತ್ತಿದ್ದು ಹಿಂದೆ ಹೇಳಿದಂತೆ ಅವುಗಳಲ್ಲಿ ನಾಸ್ತಿಕದರ್ಶನಗಳು ಮೂರು ಮತ್ತು ಆಸ್ತಿಕದರ್ಶನಗಳು ಆರು ಆಗಿವೆ.

ನಾಸ್ತಿಕವೆಂದರೆ ದೇವರನ್ನು ನಂಬದವರೆಂದು ಪೂರ್ತಿಯಾಗಿ ಹೇಳಲು ಸಾಧ್ಯವಿಲ್ಲ. ವೇದಗಳನ್ನು ಪ್ರಮಾಣವೆಂದು ನಂಬದವರೇ ನಾಸ್ತಿಕರು ಎಂದು ಹೇಳುತ್ತಾರೆ ; ವೇದ ಗಳನ್ನು ಪ್ರಮಾಣ ಎಂದು ನಂಬುವವರು ಆಸ್ತಿಕರಾಗುತ್ತಾರೆ. ನಾಸ್ತಿಕರು ಎಂದರೆ ಸಾಮಾನ್ಯವಾಗಿ ಮೂರು ಅರ್ಥಗಳ ದೃಷ್ಟಿಯಿಂದ ಉಪಯೋಗಿಸುವ ವಾಡಿಕೆಯು ವ್ಯವಹಾರದಲ್ಲಿದೆ. ಅವು ಯಾವುವೆಂದರೆ :

(೧) ದೇವರಲ್ಲಿ ನಂಬಿಕೆ ಇಲ್ಲದವರು.

(೨) ವೇದಗಳನ್ನು ಪ್ರಮಾಣವಾಗಿ ಒಪ್ಪದವರು.

(೩) ಮರಣೋತ್ತರಗತಿ, ಜೀವನ, ಜನ್ಮಾಂತರಗಳನ್ನು ಒಪ್ಪದವರು.

ಇವುಗಳಿಗೆ ವಿರೋಧವಾದ ಅಭಿಪ್ರಾಯವುಳ್ಳವರೇ ಆಸ್ತಿಕರು. ನಾಸ್ತಿಕದರ್ಶನಗಳು ಎಂದರೆ ವೇದವನ್ನು ಪ್ರಮಾಣವಾಗಿ ಒಪ್ಪದ ದರ್ಶನ ಎಂದು ಪರಿಗಣಿಸುವುದು ಮತ್ತು ತದನುಸಾರವಾಗಿ ಚಾರ್ವಾಕ, ಬೌದ್ಧ, ಜೈನದರ್ಶನಗಳನ್ನು ಅವೈದಿಕ ದರ್ಶನಗಳೆಂದೂ, ಸಾಂಖ್ಯ, ನ್ಯಾಯ ಇತ್ಯಾದಿ ಷಡ್‌ದರ್ಶನಗಳನ್ನು ವೈದಿಕದರ್ಶನಗಳೆಂದೂ ಹೇಳುವುದು ಸಮಂಜಸವಾಗಿರುತ್ತದೆ.

ದರ್ಶನಗಳಲ್ಲಿ ಬುದ್ಧಿಬಲದ ಪ್ರಯೋಗವಿದ್ದು ತರ್ಕಬದ್ಧವಾಗಿ ವಿಚಾರಗಳು ಪ್ರತಿಪಾದಿತವಾಗಿವೆ. ದರ್ಶನಗಳೆಲ್ಲವನ್ನೂ ಸರಿಯಾಗಿ ಪರಿಶೀಲಿಸಿದರೆ ಚಾರ್ವಾಕದಿಂದ ವೇದಾಂತದರ್ಶನದ ತನಕ ಇರುವ ದರ್ಶನಗಳು ಒಂದೇ ಸತ್ಯವನ್ನು ನೋಡುವವೇ ಆಗಿದ್ದು ಅವುಗಳ ಒಳಗೆ ಅಂತರವು ಕಂಡ ಸತ್ಯಕ್ಕೂ ಅನುಭವಿಸಿದ ಸಿದ್ಧಾಂತಕ್ಕೂ ಮಾತ್ರ ಇದ್ದು ಚಾರ್ವಾಕದಲ್ಲಿ ಆರಂಭವಾದ ಸತ್ಯಾನ್ವೇಷಣೆ ವೇದಾಂತದರ್ಶನದಲ್ಲಿ ಪರಿಪೂರ್ಣತೆಯನ್ನು ಪಡೆದಿದೆ ಎಂಬುದು ಆಳವಾಗಿ ವಿಚಾರಮಾಡಿದಾಗ ಸ್ಪಷ್ಟವಾಗುತ್ತದೆ.

ಅವೈದಿಕ ದರ್ಶನಗಳು : (೧) ಚಾರ್ವಾಕ, (೨) ಬೌದ್ಧ, (೩) ಜೈನ.

ವೈದಿಕ ದರ್ಶನಗಳು : (೧) ನ್ಯಾಯ, (೨) ವೈಶೇಷಿಕ, (೩) ಸಾಂಖ್ಯ, (೪) ಯೋಗ, (೫) ಮೀಮಾಂಸೆ (ಪೂರ್ವಮೀಮಾಂಸೆ), (೬) ವೇದಾಂತ (ಉತ್ತರಮೀಮಾಂಸೆ).

### ಚಾರ್ವಾಕ ದರ್ಶನ

ಈ ದರ್ಶನವನ್ನು ಪ್ರತಿಪಾದಿಸಿದವರು ಚಾರ್ವಾಕ ಮಹರ್ಷಿಗಳೆಂದು ವಿದ್ವಾಂಸರಲ್ಲಿ ಹೆಚ್ಚಿನವರ ನಂಬಿಗೆ ಇದ್ದರೆ ಅವರು ಸ್ಥಾಪಿಸಲೇ ಇಲ್ಲ, ಬೃಹಸ್ಪತಿ ಆಚಾರ್ಯರು ಸ್ಥಾಪಿಸಿದರು ಎನ್ನುವ ಅಭಿಪ್ರಾಯವೂ ಇದೆ. ಚಾರ್ವಾಕಮತದ ಮೂಲಗ್ರಂಥಗಳು ಇಂದು ದೊರೆಯುತ್ತಿಲ್ಲ. ಹಾಗಾಗಿ ಈ ಮತದ ಸ್ಥಾಪಕರ ಹೆಸರನ್ನು ನಿಶ್ಚಯವಾಗಿ ಹೇಳುವುದು ಸಾಧ್ಯವಾದ ವಿಚಾರವಲ್ಲ. ಚಾರ್ವಾಕ ಶಬ್ದವು ಈ ದರ್ಶನದ ತತ್ತ್ವಗಳಿಂದಾಗಿ ಹುಟ್ಟಿ ಅದಕ್ಕೆ ಆ ಹೆಸರೇ ದೃಢವಾಯಿತು ಎಂದೂ ಹೇಳುತ್ತಾರೆ. ಚಾರ್ವಾಕ ಶಬ್ದದ ಅರ್ಥವೇನೆಂದರೆ : ಚಾರ್ವ=ತಿನ್ನು, ಚಪ್ಪರಿಸು ಎಂದಾಗಿದ್ದು, ಚಾರ್ವಾಕನೆಂದರೆ ತಿಂದು ಚಪ್ಪರಿಸಿ ಆನಂದದಿಂದ ಇರುವವನು ಎಂದು ಅರ್ಥವಾಗುತ್ತದೆ. ಇನ್ನೊಂದು ರೀತಿಯಲ್ಲಿ ಈ ಶಬ್ದದ ಅರ್ಥವಿವರಣೆ ಇದ್ದು ಅದರಂತೆ ಹೀಗೆ ಅರ್ಥವಾಗುತ್ತದೆ : ಚಾರು=ಚಲೋದಾದ, ರುಚಿಯಾದ, ವಾಕ್=ಮಾತು—ಎಂದರೆ ಚಾರ್ವಾಕನ ಮತತತ್ತ್ವಗಳು ಬಹಳ ರುಚಿಯಾದ ಮಾತುಗಳಿಂದ ಕೂಡಿರುತ್ತವೆ. ಆದ್ದರಿಂದ ಆ ಮತವನ್ನು ಚಾರ್ವಾಕ ಎಂದು ಕರೆದಿರುತ್ತಾರೆ.

ಪ್ರತ್ಯಕ್ಷಪ್ರಮಾಣವೊಂದನ್ನು ಮಾತ್ರವೇ ಅಂಗೀಕರಿಸಿರುವುದು ಚಾರ್ವಾಕದರ್ಶನದ ವೈಶಿಷ್ಟ್ಯವಾಗಿರುತ್ತದೆ. ಚಾರ್ವಾಕರೆಂದರೆ ಭೌತವಾದಿಗಳು (Materialists) ಎಂದು ಹೇಳಲಾಗಿದೆ. ಲೋಕಾಯತರು ಎಂಬ ಇನ್ನೊಂದು ಹೆಸರೂ ಈ ಪಂಗಡದವರಿಗೆ ಇದೆ. ಪ್ರತ್ಯಕ್ಷವಾಗಿ ಪಂಚೇಂದ್ರಿಯಗಳ ಮೂಲಕ ಅನುಭವಗೋಚರವಾಗುವುದೇ ಸತ್ಯ. ಅನುಮಾನ, ಆಗಮಪ್ರಮಾಣಗಳೆಲ್ಲ ಸತ್ಯವಲ್ಲದಿದ್ದು ಕೆಲವೊಮ್ಮೆ ಅವು ನಮ್ಮನ್ನು ತಪ್ಪು ಹಾದಿಯಲ್ಲಿ ಕರೆದೊಯ್ಯುತ್ತವೆ ಎಂದು ಹೇಳುವುದೇ ಚಾರ್ವಾಕದರ್ಶನದ ಮೂಲತತ್ತ್ವವಾಗಿದೆ.

ವ್ಯವಹಾರದಲ್ಲಿ ನಾನು ಕೃಶನಾಗಿದ್ದೇನೆ, ನಾನು ದೃಢವಾಗಿದ್ದೇನೆ ಎಂದು ಹೇಳುವಾಗ ನಾವು ಶರೀರದೊಡನೆ ಸಹಯೋಗ ಉಳ್ಳವರಾಗಿದ್ದೇವೆ ಎಂದು ಸಿದ್ಧವಾಗುತ್ತದೆ, ಆತ್ಮವು ಶರೀರದಿಂದ ಬೇರೆಯಾಗಿದೆ, ಆತ್ಮ ಅಮರ, ಶರೀರ ನಶ್ವರ ಎನ್ನುವುದು

ನ್ಯಾಯಸಮ್ಮತವಲ್ಲ ಎಂದು ಚಾರ್ವಾಕ ಮತವು ವಾದಿಸುತ್ತದೆ. ಮರಣದೊಡನೆ ಮಾನವನ ಬಾಳು ಮುಕ್ತಾಯವಾಗುತ್ತದೆ. ಪುನರ್ಜನ್ಮ ಎನ್ನುವುದು ಅರ್ಥಶೂನ್ಯವಾದ ಕಲ್ಪಿತ ವಿಚಾರಧಾರೆ. ದೇವರು ಇಲ್ಲ, ದೇವರು ಪಂಚೇಂದ್ರಿಯಗಳಿಗೆ ಗೋಚರನಲ್ಲ, ಹಾಗಾಗಿ ಅವನು ಪ್ರತ್ಯಕ್ಷನಲ್ಲ. ಆದ್ದರಿಂದ ದೇವರಿದ್ದಾನೆ ಎನ್ನುವುದು ಬರೀ ಭ್ರಮೆ. ಹೀಗೆ ಮರಣವನಂತರ ಬಾಳಿಗೆಂದೂ, ದೇವರ ಆಶೀರ್ವಾದ—ಅನುಗ್ರಹ ಸಂಪಾದನೆಗೆಂದೂ ಪೂಜೆ. ಧ್ಯಾನ, ಯಾಗಯಜ್ಞಗಳನ್ನೆಲ್ಲ ಮಾಡುವುದು ಕೇವಲ ಮೂಢತನ. ಜೀವನದ ಪರಮಗುರಿಯೇ ಸುಖಸಂಪಾದನೆ ಹಾಗೂ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಸುಖಾನುಭವವನ್ನು ಬದುಕಿನ ಅವಧಿಯಲ್ಲಿ ಅನುಭವಿಸುವುದಾಗಿದೆ. ಕಷ್ಟವಿದೆಯೆಂದಾಗಲಿ, ಕಷ್ಟವಾಗುತ್ತದೆಂದಾಗಲಿ ಸುಖಪಡುವುದನ್ನು ಬಿಡಬಾರದು. ದನಕರುಗಳು ಬಂದು ಬೆಳೆಯನ್ನು ನಾಶಮಾಡುತ್ತವೆ ಎಂದು ಬೆಳೆ ಬೆಳೆಸುವುದನ್ನು ನಿಲ್ಲಿಸುವುದು ಎಷ್ಟು ಅವಿವೇಕವೋ ಹಾಗೆಯೇ ಕಷ್ಟವಾಗುತ್ತದೆ ಎಂದು ಸುಖವನ್ನು ಅನುಭವಿಸದೆ ಇರುವುದು ಅಷ್ಟೇ ಅವಿವೇಕ. ಈ ಜೀವನದಲ್ಲಿ ಎಷ್ಟು ಸಾಧ್ಯವೋ ಅಷ್ಟು ಸುಖವನ್ನು ಪಡೆಯುತ್ತಾ, ಕಷ್ಟಗಳನ್ನು ತಪ್ಪಿಸಿಕೊಳ್ಳುತ್ತಾ ಪುನರ್ಜನ್ಮ, ದೇವರು, ಧರ್ಮ ಇತ್ಯಾದಿಗಳನ್ನು ನಂಬದೆ ಬಾಳನ್ನು ಸಾಗಿಸಬೇಕು. ಅರ್ಥ ಮತ್ತು ಕಾಮಗಳು ಮಾತ್ರ ಜೀವನದ ನಿಜವಾದ ಪುರುಷಾರ್ಥಗಳು—ಇದೇ ಚಾರ್ವಾಕಮತದ ಸಾರಾಂಶವಾಗಿದೆ. ಚಾರ್ವಾಕಮತದ ತತ್ತ್ವಸಾರವನ್ನು ಸಾರುವ ಪ್ರಸಿದ್ಧವಾದ ಸಿದ್ಧಾಂತ ನುಡಿಕಟ್ಟು ಇಂತಿದೆ :

**ಯಾವಜ್ಜೀವೇತ್ಸುಖಂ ಜೀವೇತ್ ಋಣಂ ಕೃತ್ವಾ ಘೃತಂ ಪಿಬೇತ್ ।**
**ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ ? ॥**

ಜೀವಿಸಿರುವವರೆಗೂ ಸುಖದಿಂದ ಜೀವಿಸಬೇಕು. ಸಾಲ ಮಾಡಿಯಾದರೂ ತುಪ್ಪವನ್ನು ಕುಡಿದು ಸುಖಪಡಬೇಕು. ದೇಹಾವಸಾನವಾಗಿ ಬೂದಿಯಾದ ದೇಹ ಮತ್ತೆ ಹುಟ್ಟಿ ಬರುತ್ತದೆಯೇ ?—(ಸಾಯಣಮಾಧವಪ್ರಣೀತ ಸರ್ವದರ್ಶನಸಂಗ್ರಹ)

ಚಾರ್ವಾಕಮತದ ಈ ತತ್ತ್ವಗಳು ಕೇಳಲು ತುಂಬಾ ಹಿತಕರವಾಗಿದೆಯೆಂದು ಒಮ್ಮೆ ಕಂಡುಬಂದರೂ ಅವುಗಳನ್ನು ಸರಿಯಾಗಿ ಪರಿಶೀಲಿಸಿದರೆ ಅವಿವೇಕ, ಅಸತ್ಯಗಳಿಂದ ಕೂಡಿವೆ ಎಂಬುದು ಜನರಿಗೆ ತಿಳಿಯುತ್ತಾಬಂತು. ಬಹುಬೇಗನೆ ಬೌದ್ಧ, ಜೈನದರ್ಶನಗಳು ಹುಟ್ಟಿಕೊಂಡು ಚಾರ್ವಾಕದರ್ಶನದ ತತ್ತ್ವಗಳಲ್ಲಿರುವ ತಪ್ಪು-ಅನ್ಯಾಯಗಳನ್ನು ಎತ್ತಿತೋರಿಸಿ ಪರಿಣಾಮವಾಗಿ ಚಾರ್ವಾಕಮತದ ಬಲವು ಅತಿಕಡಿಮೆಯಾಯಿತು, ಆದರೆ ಅನೇಕ ವಿಧದ ಮೂಢನಂಬಿಕೆ. ಅಂಧಾನುಕರಣೆಗಳಿಗೆ ಒಳಗಾಗಿದ್ದ ಸಮಾಜವನ್ನು ಸ್ವತಂತ್ರಚಿಂತನೆ ಮತ್ತು ನ್ಯಾಯ-ತರ್ಕಗಳ ಮೂಲಕ ವಿಷಯಪ್ರತಿಪಾದನೆ ಮಾಡಲು ಚಾರ್ವಾಕಮತವು ಪ್ರೋತ್ಸಾಹ ಕೊಟ್ಟಂತಾಯಿತು. ಏಕೆಂದರೆ ಮುಂದೆ ಹುಟ್ಟಿದ ದರ್ಶನಗಳೆಲ್ಲಾ ಚಾರ್ವಾಕಮತದ ಅಭಿಪ್ರಾಯವನ್ನು ಖಂಡಿಸಿ ಅನಂತರವೇ ತಮ್ಮ ಸಿದ್ಧಾಂತಗಳನ್ನು ಸ್ಪಷ್ಟಪಡಿಸಿರುತ್ತವೆ. ಹಾಗಾಗಿ ಚಾರ್ವಾಕಮತದ ತತ್ತ್ವಗಳಲ್ಲಿ ಬಹುಮಟ್ಟಿಗೆ ನಿಶ್ಚಯವಾಗಿಯೂ ಪೂರ್ಣ ಸತ್ಯಾಂಶವಾಗಲಿ, ಹಿತಾಂಶವಾಗಲಿ ಇಲ್ಲ

ದಿದ್ದರೂ ಅವುಗಳಲ್ಲಿನ ವಿಚಾರಧಾರೆಯಿಂದ ಸತ್ಯದ ನಿಜಸ್ವರೂಪವನ್ನು ದರ್ಶನಗಳ ಕಾಲದ ಜನತೆಯು ಕಂಡುಕೊಳ್ಳುವುದಕ್ಕೆ ಪ್ರಯತ್ನಿಸಲು ಪ್ರೇರಣೆಯು ದೊರೆಯಿತು.

## ಬೌದ್ಧದರ್ಶನ (ಬೌದ್ಧಧರ್ಮ)

ಭಗವಾನ್ ಬುದ್ಧನು ಬೌದ್ಧದರ್ಶನದ ಆದ್ಯಪ್ರವರ್ತಕನಾಗಿರುತ್ತಾನೆ. ಬೌದ್ಧದರ್ಶನದಲ್ಲಿ ಪ್ರತಿಪಾದ್ಯವಾದ ತತ್ತ್ವಗಳನ್ನು ಬೌದ್ಧಧರ್ಮ ಎಂದು ಕರೆಯುತ್ತಾರೆ. ಇಲ್ಲಿ ಧರ್ಮ ಎಂಬ ಶಬ್ದಕ್ಕೆ ಮತ, ಸಿದ್ಧಾಂತ. ದರ್ಶನ ಎಂಬ ಅರ್ಥಗಳು ಸೇರಿರುತ್ತವೆ. ಬೋಧಿ ಎಂದರೆ ತಿಳಿವಳಿಕೆ, ಬುದ್ಧ ಎಂದರೆ ತಿಳಿವಳಿಕೆಪಡೆದವನು ಎಂದರ್ಥ. ಬೌದ್ಧ ಧರ್ಮ ಎಂದರೆ ತಿಳಿವಳಿಕೆಯ ಧರ್ಮ ಎಂದೂ ಅರ್ಥವಾಗುತ್ತದೆ. ಬುದ್ಧನನ್ನು ತಥಾಗತ ಎಂದು ಕರೆಯಲಾಗಿದ್ದು ಅವನು ಬೋಧಿಸಿದ ಧರ್ಮವನ್ನು ತಥಾಗತಧರ್ಮ ಎಂದೂ ಹೇಳುವುದಿದೆ. ತಥಾಗತ ಎಂದರೆ ಹಿಂದಿನವರು ನಡೆದ ದಾರಿಯಲ್ಲಿ ಬಂದವನು ಎಂದರ್ಥ. ತಥ ಎಂದರೆ ಸತ್ಯ, ಗತ ಎಂದರೆ ಹೋದವನು. ಸತ್ಯದ ಕಡೆಗೆ ಹೋದವನು ಬುದ್ಧ, ಅವನು ಬೋಧಿಸಿದ ಧರ್ಮ ತಥಾಗತಧರ್ಮ—ಎಂದೂ ಹೇಳುತ್ತಾರೆ.

ಬುದ್ಧದೇವನ ಕಾಲ ಕ್ರಿ.ಪೂ. ಆರನೇ ಶತಮಾನ ಎಂದು ಹೇಳಲಾಗಿದೆ. ಭಗವಾನ್ ಬುದ್ಧನು ಜೈನಧರ್ಮತೀರ್ಥಂಕರನಾದ ಭಗವಾನ್ ಮಹಾವೀರಸ್ವಾಮಿಯ ಸಮಕಾಲೀನನು ಆಗಿರುತ್ತಾನೆ. ಸತ್ಯ, ಧರ್ಮ, ಶಾಂತಿ ಮತ್ತು ದಯೆಗಳ ಆಧಾರದಲ್ಲಿಯೇ ಪ್ರತಿಪಾದನೆಗೊಂಡು ಪ್ರಚಾರವಾದ ಬೌದ್ಧಧರ್ಮವು ತನ್ನದೇ ಆದ ತತ್ತ್ವ, ಸಿದ್ಧಾಂತಗಳಿಂದ ಕೂಡಿರುತ್ತದೆ. ಹಿಂದೂಧರ್ಮದ ಗ್ರಂಥಗಳಲ್ಲಿ ಹೇಳಿರುವ ಭಗವಂತನ ಪ್ರಸಿದ್ಧವಾದ ಹತ್ತು ಅವತಾರಗಳಲ್ಲಿ ಬುದ್ಧನದೂ ಒಂದು ಅವತಾರ ಎಂದು ಪರಿಗಣಿಸಲ್ಪಟ್ಟಿದೆ. ತದನುಸಾರವಾಗಿ ಹಿಂದೂಗಳು ಬುದ್ಧನನ್ನು ಅವತಾರಪುರುಷನೆಂದು ಕರೆದು ಗೌರವ, ಪೂಜ್ಯತೆಗಳನ್ನು ಪ್ರಕಟಪಡಿಸಿರುತ್ತಾರೆ.

ಕಪಿಲವಸ್ತುವಿನಲ್ಲಿದ್ದ ಶಾಕ್ಯವಂಶದ ಸಿದ್ಧಾರ್ಥನೆಂಬ ರಾಜಕುಮಾರನು ತನ್ನ ಸುಖ ಭೋಗಗಳನ್ನು ತ್ಯಾಗಮಾಡಿ ಸಂನ್ಯಾಸ ಸ್ವೀಕರಿಸಿ, ತಪಸ್ಸನ್ನು ಎಸಗಿ ಬೋಧಿಯನ್ನು ಪಡೆದು ಭಗವಾನ್ ಬುದ್ಧನಾದನು. ಬುದ್ಧದೇವನು ಬೋಧಿಸಿದ ಧರ್ಮವೇ ಬೌದ್ಧ ಧರ್ಮವಾಯಿತು. ಬುದ್ಧನು ಕಂಡ ಸತ್ಯದರ್ಶನವೇ ಬೌದ್ಧದರ್ಶನ ಎಂದಾಯಿತು.

ಬುದ್ಧನು ತನ್ನ ಬೋಧನೆಗಳನ್ನು ಆ ಕಾಲದಲ್ಲಿನ ಜನಬಳಕೆಯ ಭಾಷೆಯಾದ ಪಾಳಿ ಭಾಷೆಯಲ್ಲಿಯೇ ಬೋಧಿಸಿರುತ್ತಾನೆ. ಹಾಗಾಗಿ ಬೌದ್ಧಧರ್ಮದ ಮೂಲ ಗ್ರಂಥಗಳು ಪಾಳಿ ಭಾಷೆಯಲ್ಲಿದ್ದು ಅವುಗಳನ್ನು 'ತ್ರಿಪಿಟಕ' ಎಂದು ಕರೆಯಲಾಗಿದೆ. ತ್ರಿಪಿಟಕ ಎಂದರೆ ಮೂರು ಬುಟ್ಟಿಗಳು ಎಂದು ಅರ್ಥ. ತ್ರಿಪಿಟಕ ಎಂಬ ಗ್ರಂಥಸಮೂಹವೇ ಬೌದ್ಧದರ್ಶನದ ಆಧಾರಗ್ರಂಥಗಳಾಗಿವೆ. ಅವುಗಳಲ್ಲಿ ಮೂರು ವಿಂಗಡಣೆಗಳಿವೆ. ಯಾವುವೆಂದರೆ :

(೧) **ಸೂತ್ರಪಿಟಕ :** ಗೃಹಸ್ಥರ ಮತ್ತು ಭಿಕ್ಷುಗಳ ಸಹಾಯಕ್ಕಾಗಿ ಬೋಧಿಸಿದ ತತ್ತ್ವಗಳು, ನಿರೂಪಣೆಗಳು ಮತ್ತು ವಾದಗಳು.

(೨) **ವಿನಯಪಿಟಕ :** ಭಿಕ್ಷುಗಳಿಗೆ ಅವರ ಕರ್ತವ್ಯವನ್ನು ತಿಳಿಸುವ ನಿಯಮಾವಳಿಗಳು,

೩. **ಅಭಿಧರ್ಮಪಿಟಕ :** ಬೌದ್ಧ ಧರ್ಮದ ದಾರ್ಶನಿಕತತ್ವ ಹಾಗೂ ರಹಸ್ಯ ವಿಚಾರಗಳು.

ಈ ಗ್ರಂಥದಲ್ಲಿನ ಉಪದೇಶಗಳ ಸಾರರೂಪವಾದ ಗ್ರಂಥವೊಂದಿದ್ದು ಅದನ್ನು ಧರ್ಮಪದ ಎಂದು ಕರೆಯಲಾಗಿದೆ. ಧರ್ಮಪದವು ಬೌದ್ಧರ 'ಭಗವದ್ಗೀತೆ'ಯಾಗಿದ್ದು ಇದರಲ್ಲಿ ಬುದ್ಧದೇವನ ದಿವ್ಯಬೋಧನೆಗಳು ತುಂಬಾ ಸರಳ ಹಾಗೂ ಪರಿಣಾಮಕಾರಿಯಾದ ರೀತಿಯಲ್ಲಿ ನಿರೂಪಿಸಲ್ಪಟ್ಟಿರುತ್ತವೆ.

**ಬೌದ್ಧಧರ್ಮದ ತತ್ತ್ವ ಮತ್ತು ಅನುಷ್ಠಾನ ವಿಚಾರಗಳು :** ಬೌದ್ಧಧರ್ಮದ ಮುಖ್ಯವಾದ ತತ್ತ್ವವಿಚಾರಗಳು ನಾಲ್ಕು ಆರ್ಯಸತ್ಯಗಳು ಮತ್ತು ಆರ್ಯ ಅಷ್ಟಾಂಗಿಕ ಮಾರ್ಗಗಳಾಗಿರುತ್ತವೆ. ಜೀವನದಲ್ಲಿ ಸದಾ ಅನುಭವಕ್ಕೆ ಬರುವವೂ, ಸತ್ಯವೂ ಆದ ಮೂಲಭೂತವಾದ ನಾಲ್ಕು ಸತ್ಯಗಳನ್ನು ಬುದ್ಧನು ಆರ್ಯಸತ್ಯ ಎಂದು ಹೇಳಿರುತ್ತಾನೆ. ಅವುಗಳ ಬಂಧನದಿಂದ ಜೀವನು ಮುಕ್ತನಾಗಿ ನಿರ್ವಾಣಶಾಂತಿಯನ್ನು ಹೊಂದಲು ಹೇಳಿದ ಮಾರ್ಗವೇ ಆರ್ಯ ಅಷ್ಟಾಂಗಿಕ ಮಾರ್ಗ.

ನಾಲ್ಕು ಆರ್ಯ ಸತ್ಯಗಳು :

**ಒಂದನೇ ಆರ್ಯಸತ್ಯ :** ಜೀವನವು ದುಃಖಮಯ. ಏಕೆಂದರೆ ಜನನ, ಮರಣ, ಕಷ್ಟನಷ್ಟಗಳಿಂದ ಜೀವನವು ಕೂಡಿದೆ. ಇದನ್ನು 'ದುಃಖ ಆರ್ಯಸತ್ಯ' ಎನ್ನುತ್ತಾರೆ.

**ಎರಡನೇ ಆರ್ಯಸತ್ಯ :** ಜೀವನದ ಈ ದುಃಖಗಳಿಗೆ ತೃಷ್ಣೆಯೇ (ಆಸೆಯೇ) ಕಾರಣವಾಗಿದೆ. ತೃಷ್ಣೆಯಲ್ಲಿ ಭೋಗತೃಷ್ಣೆ, ಭವತೃಷ್ಣೆ, ವಿಭವತೃಷ್ಣೆ ಎಂದು ಮೂರು ವಿಧಗಳಿವೆ. ದುಃಖಗಳಿಗೆ ಕಾರಣವಾದ ತೃಷ್ಣೆಯ ಇರುವಿಕೆಯು ಎರಡನೆಯ ಆರ್ಯಸತ್ಯವಾಗಿದ್ದು ಇದನ್ನು 'ದುಃಖಸಮುದಯ' ಎಂದು ಕರೆಯಲಾಗಿದೆ.

**ಮೂರನೇ ಆರ್ಯಸತ್ಯ :** ದುಃಖವನ್ನು ನಿರೋಧಿಸಬೇಕು. ಜೀವನಿಗೆ ಜೀವನವು ದುಃಖದ ಅನುಭವವಾಗಿ ಉಳಿಯದೆ ಜೀವನು ಮೋಕ್ಷಕ್ಕೆ ಯತ್ನಿಸಬೇಕು. ಜೀವನದಲ್ಲಿ ದುಃಖವನ್ನು ನಿರೋಧಿಸಬೇಕು. ಹೀಗೆ ನಿರೋಧವೇ ಮೂರನೇ ಆರ್ಯಸತ್ಯವಾಗಿರುತ್ತದೆ. ಇದನ್ನು 'ದುಃಖನಿರೋಧ ಆರ್ಯಸತ್ಯ' ಎಂದು ಕರೆಯಲಾಗಿದೆ.

**ನಾಲ್ಕನೇ ಆರ್ಯಸತ್ಯ :** ದುಃಖನಿರೋಧ ಅಥವಾ ಅದರ ನಿವಾರಣೆ ಅಗತ್ಯ ಎಂದರೆ ಅದಕ್ಕೆ ಮಾರ್ಗವಾದರೂ ಏನು ? ಎಂಬುದನ್ನು ಪರಿಶೀಲಿಸಿ ಅದಕ್ಕೆ ಬುದ್ಧನು ದಾರಿಯನ್ನು ಕಂಡುಹಿಡಿದು ಬೋಧಿಸಿದನು. ಹೀಗೆ ದುಃಖನಿರೋಧಕ್ಕೆ ಮಾರ್ಗ ಇದೆ ಎಂಬುದೇ ನಾಲ್ಕನೆಯ ಆರ್ಯಸತ್ಯವಾಗಿರುತ್ತದೆ. ನಾಲ್ಕನೆಯ ಈ ಆರ್ಯಸತ್ಯವನ್ನು 'ದುಃಖನಿರೋಧಗಾಮಿನೀ ಪ್ರತಿಪದಾ ಆರ್ಯಸತ್ಯ' ಎಂದು ಕರೆಯಲಾಗಿದೆ.

**ಜೀವನ ಕ್ರಮಬಂಧದ ವಿಚಾರ :** ಅವಿದ್ಯೆಯ ಪರಿಣಾಮವಾಗಿ ಸತ್ಕರ್ಮ, ದುಷ್ಕರ್ಮಗಳು ಜೀವನಿಂದ ಆಚರಿಸಲ್ಪಡುತ್ತವೆ. ಅವರ ಪರಿಣಾಮವಾಗಿ ಸಂಸ್ಕಾರವು ಹುಟ್ಟುತ್ತದೆ. ಸಂಸ್ಕಾರಬಲದಿಂದ ಜನ್ಮಜನ್ಮಗಳು ಬದಲಾಗುತ್ತಹೋಗುತ್ತವೆ. ಹಿಂದಿನ ಜನ್ಮದಿಂದ ಮುಂದಿನ ಜನ್ಮ ಲಭಿಸುತ್ತದೆ. ಜನ್ಮ ಲಭಿಸಿದನಂತರ ವಿಜ್ಞಾನ, ನಾಮರೂಪ, ಷಡಾಯತನ, ಸ್ಪರ್ಶ ಅನುಭವ, ವೇದನ ಇವುಗಳು ಅನುಭವಕ್ಕೆ ಬರುತ್ತವೆ. ಇವುಗಳಿಂದ ದೇಹವ್ಯಾಪಾರವು ಆರಂಭವಾಗುತ್ತದೆ. ಜೀವನದಲ್ಲಿ ಅನುಭವಕ್ಕೆ ಬರುವ ವೇದನೆಗಳು

ಮೂರು ವಿಧ. ಯಾವುವೆಂದರೆ :

(೧) ಹಿತಕರ ವೇದನೆ, (೨) ಅಸಹ್ಯಕರ ವೇದನೆ, (೩) ಸುಖದುಃಖಗಳಿಲ್ಲದ ವೇದನೆ.

ಹೀಗೆ ವೇದನೆಗಳ ಅನುಭವವಾದಂತೆ ಪರಿಣಾಮವಾಗಿ ಜೀವನದಲ್ಲಿ ತೃಷ್ಣೆ ಉಂಟಾಗಿ ಬಾಳನ್ನು ಅನುಭವಿಸಬೇಕೆಂದು ಉಪಾದಾನ ಎಂದರೆ ತೀವ್ರಾಸಕ್ತಿ ಉಂಟಾಗುತ್ತದೆ. ಈ ಆಸಕ್ತಿಯಿಂದ ಕೂಡಿ ಬಾಳನ್ನು ಬದುಕುತ್ತಾ ಇರುವಾಗ ಭಾವ ಅರ್ಥಾತ್ ಹೊಸ ಸಂಸ್ಕಾರಗಳು ಹುಟ್ಟಿ ಅವು ಮುಂದಿನ ಜನ್ಮಕ್ಕೆ ಕಾರಣವಾಗುವ ಸಂಸ್ಕಾರವಿಶೇಷಗಳಾಗಿ ಪರಿಣಮಿಸುತ್ತವೆ. ಪುನಃ ಜನ್ಮವು ಜರಾಮರಣಗಳಿಗೆ ಎಡೆನೀಡಿ ಅವು ಪುನಃ ಜನನ ಪುನಃ ಮರಣ ಎಂಬ 'ಭವಚಕ್ರ'ದ ಸುತ್ತಿನಲ್ಲಿ ಜೀವಿಯು ಸಿಲುಕುವಂತೆ ಮಾಡುತ್ತವೆ. ಈ ಕಾರಣಗಳನ್ನೆಲ್ಲಾ ಒಟ್ಟಾಗಿ 'ನಿದಾನ'ಗಳೆಂದು ಕರೆಯಲಾಗಿದ್ದು ಅವುಗಳ ಸಂಖ್ಯೆ ಹನ್ನೆರಡಾಗಿರುತ್ತದೆ. ಈ ನಿದಾನಗಳನ್ನು ದ್ವಾದಶ ನಿದಾನಗಳೆಂದು ಕರೆಯಲಾಗಿದೆ. ಅವು ಯಾವುವು ಎಂದರೆ :

(೧) **ಅವಿದ್ಯೆ :** ಸುಖದುಃಖಗಳನ್ನು ಅನುಭವಿಸುವ ಶಾಶ್ವತವಾದ ವಸ್ತು ಯಾವುದೂ ಇಲ್ಲ ಎಂಬ ತಿಳಿವಳಿಕೆಯ ಅಭಾವವೇ ಅವಿದ್ಯೆ. ಜೀವ-ಜಗತ್ತುಗಳ ಕುರಿತಾದ ಯಥಾವತ್ತಾದ ಜ್ಞಾನದ ಅಭಾವವೇ ಅವಿದ್ಯೆ ಎಂದು ತಾತ್ಪರ್ಯ.

(೨) **ಸಂಸ್ಕಾರಗಳು :** ಪೂರ್ವವಾಸನೆಗಳು, ಮನಸ್ಸು, ದೇಹ, ಮಾತುಗಳಿಂದ ಉಂಟಾದ ಪುಣ್ಯ ಮತ್ತು ಪಾಪಕರ್ಮಗಳ ರಾಶಿ ಎಂದು ತಾತ್ಪರ್ಯ.

(೩) **ವಿಜ್ಞಾನ :** ವಿಶಿಷ್ಟವಾದ ಅರಿವೇ ವಿಜ್ಞಾನ.

(೪) **ನಾಮ–ರೂಪ :** ಮನಸ್ಸು ಮತ್ತು ಶರೀರ.

(೫) **ಷಡಾಯತನ :** ಪಂಚೇಂದ್ರಿಯ ಮತ್ತು ಚಿತ್ತ. ಆರು ಜ್ಞಾನೇಂದ್ರಿಯಗಳೆಂದು ತಾತ್ಪರ್ಯ.

(೬) **ಸ್ಪರ್ಶ :** ಇಂದ್ರಿಯಗಳು ತಮ್ಮ ವಿಷಯವನ್ನು ಮುಟ್ಟುವುದು.

(೭) **ವೇದನೆ :** ಸ್ಪರ್ಶದಿಂದ ಆಗುವ ಬಗೆಬಗೆಯ ಅನುಭವವೇ ವೇದನೆ.

(೮) **ತೃಷ್ಣೆ :** ಆಸೆ; ಎಂದರೆ ಇಂದ್ರಿಯಜನ್ಯವಾದ ವಿಷಯಸುಖಗಳನ್ನು ಮತ್ತೆ ಮತ್ತೆ ಅನುಭವಿಸಬೇಕೆಂಬ ಆಸೆ.

(೯) **ಉಪಾದಾನ :** ಜೀವನದ ಮೇಲಿನ ಆಸಕ್ತಿ, ಎಂದರೆ ಜೀವನದಲ್ಲಿ ತೃಷ್ಣೆಯನ್ನು ಪೂರೈಸಿ ಬಾಳಬೇಕೆಂಬ ತೀವ್ರಾಸಕ್ತಿ ಮತ್ತು ಜೀವನದ ಮೇಲಿನ ಮಮತೆ ಎಂದು ತಾತ್ಪರ್ಯ.

(೧೦) **ಭವ :** ಜನ್ಮತಳೆಯಬೇಕು, ಜೀವನದಲ್ಲಿ ಇರಬೇಕು ಎಂಬ 'ಇರುವಿಕೆ'ಯ ಆಸಕ್ತಿಯೇ ಭವ.

(೧೧) **ಜನ್ಮ ಅಥವಾ ಜಾತಿ** ಪುನರ್ಜನ್ಮ.

(೧೨) **ಜರಾಮರಣ :** ಮುಪ್ಪು, ಸಾವು, ದುಃಖ ಇವುಗಳೆಲ್ಲ ಜರಾಮರಣ ಎನಿಸಿವೆ.

ಈ ಪ್ರಪಂಚದಲ್ಲಿರುವ ಸಮಸ್ತ ವ್ಯಾಪಾರಗಳೂ ನಶ್ವರವಾಗಿದ್ದು ಯಾವುದೂ ಶಾಶ್ವತವಲ್ಲ. ಆದರೆ ಅವುಗಳನ್ನು ಸಾರಭೂತವಾದುದೆಂದು ನಂಬಿಕೆಯುಂಟಾಗುವಂತೆ

ಮಾಡಿ ನಿಜಸತ್ಯದ ನೆಲೆ ಅರಿಯದಂತೆ ಮಾಡುವುದೇ ಅವಿದ್ಯೆ. ಅವಿದ್ಯೆಯಿಂದಾಗಿ ಪ್ರಾಪಂಚಿಕತೆಯಲ್ಲಿ ತೀವ್ರ ಆಸಕ್ತಿಯೂ ಅದರಿಂದ ಕರ್ಮವೂ ಉಂಟಾಗುತ್ತದೆ.

**ಕರ್ಮ:** ಬೌದ್ಧಧರ್ಮದಲ್ಲಿ ಅವರವರ ಕರ್ಮಕ್ಕೆ ಅನುಸಾರವಾಗಿ ಆಯಾಯ ಫಲಗಳು ಬಂದೇಬರುತ್ತವೆ ಎಂಬುದನ್ನು ಸ್ಪಷ್ಟವಾಗಿ ಹೇಳಲಾಗಿದೆ. ಸತ್ಕಾರ್ಯಗಳಿಗೆ ಸತ್ಫಲಗಳಾದರೆ, ನೆರಳು ದೇಹವನ್ನು ಅನುಸರಿಸಿಕೊಂಡು ಬಂದಂತೆ, ದುಷ್ಕಾರ್ಯಗಳಿಗೆ ದುಷ್ಫಲಗಳು ಬಂದೇ ಬರುತ್ತವೆ. ಈ ಜಗತ್ತು ಹಾಗೂ ಬೇರೆ ಲೋಕಗಳಲ್ಲಿ (ಬ್ರಹ್ಮಲೋಕಾದಿಗಳಲ್ಲಿ) ನಡೆಯುವ ಎಲ್ಲಾ ವ್ಯಾಪಾರಗಳೂ ಸಹೇತುಕಗಳಾಗಿವೆ. ಅವುಗಳಿಗೆ ಸರಿಯಾದ ಒಂದು ನಿಯಮವಿದೆ. ಲೋಕದ ನಾನಾ ವ್ಯಾಪಾರಗಳಲ್ಲಿ ಮಾರ್ಪಾಡುಗಳು ಇದ್ದೇ ಇವೆ. ಆದರೆ ಒಂದರಿಂದ ಒಂದಕ್ಕೆ ಕಾರ್ಯಕಾರಣ ಹಾಗೂ ಇತರ ಸಂಬಂಧ ವಿದ್ದೇ ಇದ್ದು ಎಲ್ಲವೂ ನಿಯಮಬದ್ಧವಾಗಿ ನಡೆಯುತ್ತದೆ. ಈ ನಿಯಮಬದ್ಧತೆಯನ್ನು "ಪ್ರತೀತ್ಯಸಮುತ್ಪಾದ" ಎಂದು ಹೇಳುತ್ತಾರೆ. ಈ ಪ್ರತೀತ್ಯಸಮುತ್ಪಾದ ತತ್ತ್ವವೇ ಕರ್ಮಸಿದ್ಧಾಂತಕ್ಕೂ ಅನ್ವಯಿಸಿರುತ್ತದೆ. ಎಲ್ಲಾ ಕರ್ಮಕ್ಕೂ ಹೇತುವೊಂದಿದ್ದು ಅದರದರ ಫಲವನ್ನು ಅನುಭವಿಸಿಯೇ ತೀರಬೇಕು ಎಂದು ಬುದ್ಧನು ಬೋಧಿಸಿರುತ್ತಾನೆ. ಈ ಕರ್ಮಬಂಧನಕ್ಕೆ ಮೂಲಕಾರಣವೇ ಅವಿದ್ಯೆ ಎಂದೂ ಹೇಳಿ ಅವಿದ್ಯೆಯು ನಾಶವಾಗಿ ಪ್ರಜ್ಞಾಲಾಭವುಂಟಾದಾಗ ಭವಚಕ್ರಬಂಧನದಿಂದ ಜೀವನಿಗೆ ಬಿಡುಗಡೆ ಸಿದ್ಧ ಎಂದು ಬೌದ್ಧದರ್ಶನವು ಹೇಳುತ್ತದೆ.

**ಅನಾತ್ಮವಾದ :** ಜೀವನದಲ್ಲಿ ಕರ್ಮಗಳು ನೆರವೇರುತ್ತಿದ್ದರೂ ಅವುಗಳ ಪರಿಣಾಮ–ವಿಕಾರಗಳಿಗೆ ಒಳಗಾಗದೆ ಅವುಗಳನ್ನು ಆಚರಿಸುವ ಯಾವನೊಬ್ಬ ಶಾಶ್ವತಕರ್ತನೂ ಇಲ್ಲ. ಕರ್ಮಫಲಭೋಕ್ತೃವಾದ ಶಾಶ್ವತ ವಸ್ತು ಒಂದು ಇದೆ ಎಂಬುದು ಇಲ್ಲವೇ ಇಲ್ಲ ಎನ್ನುವುದನ್ನೇ ಅನಾತ್ಮವಾದ ಎಂದು ಕರೆಯಲಾಗಿರುತ್ತದೆ. ಜೀವನವು ದೇಹಾದಿಗಳಲ್ಲಿ ನಡೆಯುವ ವ್ಯಾಪಾರಗಳ ಸಂತಾನರೂಪದಿಂದ ಕೂಡಿರುವುದು ಆಗಿರುತ್ತದೆ. ಅವಿದ್ಯೆಯಿಂದಾಗಿ. ಈ ಸಂತಾನತರಂಗದಿಂದಾಗಿ ಮನುಷ್ಯನು ನಾನು, ನನ್ನದು, ಇದೇ ನನ್ನ ಆತ್ಮ ಎಂಬ ಭಾವನೆಯಿಂದ ಕೂಡಿದವನಾಗಿರುತ್ತಾನೆ. ಈ "ನಾನು–ನಾನು" ಎಂಬುದನ್ನು ಯಾರು ? ಏಕೆ ? ಎಂದು ಸರಿಯಾಗಿ ಪರಿಶೀಲಿಸಿದರೆ ಇವುಗಳು ಪಂಚಸ್ಕಂಧಗಳಸಂಘಾತವೆಂದೂ ತೋರುವುದು.

ಪಂಚಸ್ಕಂಧಗಳು ಯಾವುವೆಂದರೆ :

(೧) ರೂಪಸ್ಕಂಧ : ದೇಹದ ಸ್ಥೂಲಭಾವಗಳಿಗೆ ಸಂಬಂಧಪಟ್ಟದ್ದು.

(೨) ವೇದನಾಸ್ಕಂಧ : ಭಾವನೆಗಳಿಗೆ ಸಂಬಂಧಪಟ್ಟದ್ದು.

(೩) ಸಂಜ್ಞಾಸ್ಕಂಧ : ಗ್ರಹಣಶಕ್ತಿಗೆ ಸಂಬಂಧಪಟ್ಟದ್ದು.

(೪) ಸಂಸ್ಕಾರಸ್ಕಂಧ : ಜನ್ಮಮರಣಾದಿ ಕ್ಲೇಶಗಳು, ರಾಗ, ದ್ವೇಷ, ಮದ, ಮಾನ ಮೊದಲಾದುವುಗಳಿಗೆ ಸಂಬಂಧಪಟ್ಟದ್ದು.

(೫) ವಿಜ್ಞಾನಸ್ಕಂಧ : ಆಲೋಚನಾಸಾಮರ್ಥ್ಯ ಮತ್ತು ನಿರ್ಧಾರಶಕ್ತಿಗೆ ಸೇರಿದುದು.

ಈ ಐದು ಸ್ಕಂಧಗಳ ಸಂಘಾತಕ್ಕೆ 'ಪುದ್ಗಲ' ಎಂದು ಹೆಸರು. ಪುದ್ಗಲ ಎಂದರೆ 'ನಾನು ನಾನು' ಎಂಬ ತೋರಿಕೆಗೆ ವಿಷಯವಾದ ವಸ್ತುವಾಗಿರುತ್ತದೆ ಎಂದು ತಾತ್ಪರ್ಯ.

ಪ್ರದ್ಗಲವೇ ಅನಾತ್ಮವಾದದ ಮೂಲತತ್ತ್ವವಾಗಿರುತ್ತದೆ. ಈ 'ನಾನು' ಎಂಬ ಶಾಶ್ವತ ವಸ್ತುವೇ ಇಲ್ಲ ಎಂಬ ಸತ್ಯ-ಪ್ರಜ್ಞೆಯ ಸಾಕ್ಷಾತ್ಕಾರವಾದಾಗ ತೃಷ್ಣೆಯು ನೀಗಿ ಕರ್ಮ ಬಂಧದಿಂದ ವಿಮೋಚನೆ ದೊರೆತು ನಿರ್ವಾಣಶಾಂತಿ ಲಭ್ಯವಾಗುತ್ತದೆ. ಸರ್ವವೂ ಅನಿತ್ಯ, ಕ್ಷಣಿಕ ಎಂಬುದು ಒಂದನೇ ತತ್ತ್ವ. ಆದರೆ ಸರ್ವವೂ ಅನಾತ್ಮ ಎನ್ನುವುದು ಎರಡನೇ ತತ್ತ್ವ. ನಿರ್ವಾಣವೇ ಶಾಂತಿ ಎನ್ನುವುದು ಮೂರನೆಯ ತತ್ತ್ವವಾಗಿದೆ. ಈ ತತ್ತ್ವ ತ್ರಯಗಳು ಬೌದ್ಧಧರ್ಮದ ಮುಖ್ಯ ತತ್ತ್ವಗಳಾಗಿವೆ. ಅವಿದ್ಯೆಯ ನಾಶ, ಪ್ರಜ್ಞೆಯ ಲಾಭ, ನಿರ್ವಾಣಶಾಂತಿಯ ಪ್ರಾಪ್ತಿಗೆ ಇರುವ ಸಾಧನಾಮಾರ್ಗವೇ ಆರ್ಯ ಅಷ್ಟಾಂಗಿಕ ಮಾರ್ಗ.

**ಆರ್ಯ ಅಷ್ಟಾಂಗಿಕ ಮಾರ್ಗಗಳು :** ಇವುಗಳು ಒಟ್ಟು ಎಂಟು ವಿಧಗಳಿದ್ದು ಇವು ಗಳನ್ನು ಮಧ್ಯಮ ಮಾರ್ಗ ಎಂದು ಕರೆಯಲಾಗಿದೆ. ಅತಿಸುಲಭವೂ ಸುಗಮವೂ. ಅತಿ ಕ್ಲಿಷ್ಟವೂ ಕಠಿಣವೂ ಅಲ್ಲದ ಸಾಧನಾಪಥವೇ ಮಧ್ಯಮ ಮಾರ್ಗ.

**ಸಮ್ಯಕ್ ದೃಷ್ಟಿ :** ಸಮ್ಯಕ್ ಸಂಕಲ್ಪ, ಸಮ್ಯಕ್ ವಚನ, ಸಮ್ಯಕ್ ಕರ್ಮ, ಸಮ್ಯಕ್ ಜೀವನ, ಸಮ್ಯಕ್ ವ್ಯಾಯಾಮ, ಸಮ್ಯಕ್ ಸ್ಮೃತಿ, ಸಮ್ಯಕ್ ಸಮಾಧಿ ಎಂಬುವುಗಳೇ ಆರ್ಯ ಅಷ್ಟಾಂಗಿಕ ಮಾರ್ಗಗಳು. ಅವುಗಳ ಕುರಿತಾಗಿ ಈಗ ಸ್ವಲ್ಪ ವಿವರವಾಗಿ ವಿಚಾರ ಮಾಡೋಣ.

**(೧) ಸಮ್ಯಕ್ ದೃಷ್ಟಿ :** ನಾಲ್ಕು ಆರ್ಯಸತ್ಯಗಳಾದ ದುಃಖ, ದುಃಖಸಮುದಯ, ನಿರೋಧ ಮತ್ತು ಮಾರ್ಗ ಎಂಬ ಸತ್ಯಗಳನ್ನು ಸರಿಯಾಗಿ ತಿಳಿದಿರುವುದೇ ಸಮ್ಯಕ್ ದೃಷ್ಟಿ.

**(೨) ಸಮ್ಯಕ್ ಸಂಕಲ್ಪ :** ಇರುವ ತಿಳಿವಳಿಕೆಯನ್ನು ಸರಿಯಾಗಿ ಕಾರ್ಯಾಚರಣೆಗೆ ತರದಿದ್ದರೆ ಅದರಿಂದ ಫಲ ದೊರೆಯಲಾರದು. ಕಾರ್ಯಾಚರಣೆಗೆ ಸರಿಯಾದ ಸಂಕಲ್ಪ ವಿರಬೇಕು. ಪ್ರಪಂಚದ ಸುಖಭೋಗಗಳು, ರಾಗ ದ್ವೇಷ ಲೋಭ ಇತ್ಯಾದಿಗಳನ್ನು ತೊರೆದು ಪ್ರಜ್ಞಾಲಾಭ ಅಥವಾ ನಿರ್ವಾಣಶಾಂತಿಯನ್ನು ಪಡೆಯಲು ಸ್ಥಿರಸಂಕಲ್ಪ ಕೈಗೊಳ್ಳುವುದನ್ನೇ ಸಮ್ಯಕ್ ಸಂಕಲ್ಪ ಎಂದು ಕರೆಯಲಾಗಿದೆ. ನಿಷ್ಕರ್ಮತಾ ಸಂಕಲ್ಪ, ಅದ್ರೋಹ ಸಂಕಲ್ಪ, ಅಹಿಂಸಕಾ ಸಂಕಲ್ಪ ಇವುಗಳು ಸಮ್ಯಕ್ ಸಂಕಲ್ಪ ಎನಿಸುತ್ತವೆ ಎಂದು ತಾತ್ಪರ್ಯ.

**(೩) ಸಮ್ಯಕ್ ವಚನ :** ಆಡುವ ಮಾತು ಸತ್ವಪೂರ್ಣವೂ ಸತ್ಯಯುಕ್ತವೂ ಆಗಿರಬೇಕು. ಮಾತಿನಿಂದ ಇತರರ ಮನಸ್ಸಿಗೆ ನೋವು ಉಂಟಾಗಬಾರದು. ಅಸತ್ಯ ನುಡಿಯುವಿಕೆ, ಚಾಡಿ ಹೇಳುವಿಕೆ ಇವುಗಳಿಂದಾಗಿ ಅನ್ಯಾಯ, ಅವ್ಯವಸ್ಥೆಗಳು ಉಂಟಾಗಬಹುದು. ಹೀಗೆ ಮಾತಿನ ಸತ್ಯತೆಯನ್ನು ಉಳಿಸಿಕೊಂಡು ಸತ್ಯವಾದ, ಹಿತವಾದ. ಮಿತವಾದ ಮಾತು ಗಳನ್ನು ಆಡುವುದೇ ಸಮ್ಯಕ್ ವಚನವಾಗಿದೆ.

**(೪) ಸಮ್ಯಕ್ ಕರ್ಮ :** ಕೊಲ್ಲದಿರುವುದು, ಕದಿಯದಿರುವುದು, ವಿಷಯಲೋಲುಪ ನಾಗದಿರುವುದು, ಸುಳ್ಳು ಹೇಳದಿರುವುದು, ಮದ್ಯಪದಾರ್ಥಗಳನ್ನು ಸೇವಿಸದಿರುವುದು ಎಂಬ ಈ ಐದು ವಿಚಾರಗಳೇ ಪಂಚಶೀಲಗಳು. ಈ ಪಂಚಶೀಲಗಳನ್ನು ಅನುಸರಿಸಿ ಸತ್ಕರ್ಮಗಳನ್ನು ಸದಾ ಮಾಡುತ್ತಿದ್ದು ದುಷ್ಕರ್ಮಗಳನ್ನು ಮಾಡದಿರುವುದೇ ಸಮ್ಯಕ್ ಕರ್ಮ,

(೫) ಸಮ್ಯಕ್ ಜೀವನ : ಯಾವ ಸಂದರ್ಭದಲ್ಲೂ ಹೀನವಾದ ವೃತ್ತಿಯನ್ನು ಕೈಗೊಳ್ಳದೆ, ಸಮ್ಯಕ್ ಕರ್ಮಕ್ಕೆ ವಿರುದ್ಧವಾಗಿ ಬಾಳದೆ ತನಗೂ ಸಮಾಜಕ್ಕೂ ಹಾನಿಯಾಗದಂತೆ ಉತ್ತಮ ರೀತಿಯಲ್ಲಿ ಜೀವನವನ್ನು ಮಾಡುವುದೇ ಸಮ್ಯಕ್ ಜೀವನ. ಮಾಂಸ, ಮದ್ಯ ಇವುಗಳನ್ನು ವಿಕ್ರಯಿಸದೆ ಇರುವುದು, ತಂತ್ರ ಮಾಟ ಮೋಸಗಳಲ್ಲಿ ವ್ಯವಹರಿಸದಿರುವುದು, ಪ್ರಾಣಿವಧೆ ಮಾಡುವ ಕಟುಕನ ವೃತ್ತಿ ಇತ್ಯಾದಿಗಳನ್ನು ಅವಲಂಬಿಸದಿರುವುದು—ಇವುಗಳೇ ಸಮ್ಯಕ್ ಜೀವನ.

(೬) ಸಮ್ಯಕ್ ವ್ಯಾಯಾಮ : ಸತತ ಜಾಗರೂಕತೆ, ದಿವ್ಯಧ್ಯಾನ, ಸದ್ಭಾವನೆಗಳಲ್ಲಿ ಮನಸ್ಸನ್ನು ನೆಲೆಗೊಳಿಸುವಿಕೆ ಇವುಗಳನ್ನು ವ್ಯಾಯಾಮ ಎಂದು ಕರೆದು ಇದನ್ನೇ ಸಮ್ಯಕ್ ವ್ಯಾಯಾಮ ಎನ್ನಲಾಗಿದೆ. ಕೆಟ್ಟ ಯೋಚನೆ ಮನಸ್ಸಿನಲ್ಲಿ ಏಳದಂತೆ, ಎದ್ದರೆ ಅದು ನಾಶವಾಗುವಂತೆ, ಸತತವೂ ಒಳ್ಳೆಯ ವಿಚಾರಗಳೇ ಮನದ ಒಳಗೆ ಸುಳಿಯುವಂತೆ, ಮನಸ್ಸಿನ ಒಳಗೆ ಸುಳಿದ ಒಳ್ಳೆಯ ವಿಚಾರಗಳು ನೆಲೆನಿಂತು ಬೆಳೆಯುವಂತೆ ಮಾಡುವ ನಾಲ್ಕು ವಿಧದ ವ್ಯಾಯಾಮವೇ ಸಮ್ಯಕ್ ವ್ಯಾಯಾಮ.

(೭) ಸಮ್ಯಕ್ ಸ್ಮೃತಿ : ದೌರ್ಮನಸ್ಯವನ್ನೂ ಚಿತ್ತಸಂತಾಪವನ್ನೂ ಪರಿತ್ಯಜಿಸುವುದೇ ಸಮ್ಯಕ್ ಸ್ಮೃತಿ. ಸಮ್ಯಕ್ ಸ್ಮೃತಿಯು ದಿವ್ಯಧ್ಯಾನದಿಂದ ಲಭ್ಯವಾಗುತ್ತದೆ. ಚಿತ್ತದ ಜಾಗೃತಿಯೇ ಸಮ್ಯಕ್ ಸ್ಮೃತಿ ಎಂದು ತಾತ್ಪರ್ಯ.

(೮) ಸಮ್ಯಕ್ ಸಮಾಧಿ : ಆರ್ಯ ಅಷ್ಟಾಂಗಿಕ ಮಾರ್ಗಗಳಲ್ಲಿ ಇದು ಕೊನೆಯ ಮೆಟ್ಟಲು. ಸಾಧಕನು ಏಳು ಹಂತಗಳನ್ನು ಸರಿಯಾಗಿ ಸಾಧನೆ ಮೂಲಕ ಪಾಲಿಸಿಕೊಂಡು ಬಂದು ಈ ಹಂತದಲ್ಲಿ ನಿರ್ವಾಣಲಾಭವನ್ನು ಹೊಂದುತ್ತಾನೆ. ಭವಚಕ್ರದಿಂದ ಮುಕ್ತನಾಗಿ ಶಾಶ್ವತವಾದ ಆನಂದವನ್ನು ಜೀವನು ಪಡೆಯುವುದೇ ಸಮ್ಯಕ್ ಸಮಾಧಿ ಎಂದು ತಾತ್ಪರ್ಯ. ಸಮಾಧಿಯು ದಿವ್ಯ ಆನಂದದ ಸೀಮಾತೀತವಾದ ನೆಲೆಯಾಗಿದೆ. ಈ ಆನಂದವನ್ನೇ ನಿರ್ವಾಣಶಾಂತಿ, ನಿರ್ವಾಣಸೌಖ್ಯ ಎಂದು ಹೇಳಲಾಗಿದೆ. ಸಮ್ಯಕ್ ಸಮಾಧಿಯ ದಿವ್ಯ ಆನಂದದ ಸಿದ್ಧಿಯು ನಾಲ್ಕು ದಶೆಗಳಲ್ಲಿ ಆಗುತ್ತದೆ. ಹಾಗೆಯೇ ನಿರ್ವಾಣಸಿದ್ಧಿಗೆ ಪ್ರಥಮ ಧ್ಯಾನ, ದ್ವಿತೀಯ ಧ್ಯಾನ, ತೃತೀಯ ಧ್ಯಾನ ಮತ್ತು ಚತುರ್ಥ ಧ್ಯಾನ ಎಂಬ ನಾಲ್ಕು ಅಂತಸ್ತುಗಳು ಇವೆಯೆಂದು ಸೂಚಿಸಿ, ಅವುಗಳ ಲಕ್ಷಣಗಳನ್ನು ಬೌದ್ಧದರ್ಶನದಲ್ಲಿ ವಿಸ್ತಾರವಾಗಿ ಹೇಳಲಾಗಿದೆ. ಆರ್ಯ ಅಷ್ಟಾಂಗಿಕ ಮಾರ್ಗದ ಆ ನಾಲ್ಕು ದಶೆಗಳು ಯಾವುವೆಂದರೆ :

(೧) ಸ್ರೋತಾಪನ್ನ, (೨) ಸಕೃದಾಗಾಮಿ, (೩) ಅನಾಗಾಮಿ, (೪) ಅರ್ಹತ (ಅರಹಂತ).

ಅರ್ಹತ ಪದವಿ ಸಿದ್ಧಿಸಿದಾಗ ಪೂರ್ಣಸಿದ್ಧಿಯಾಗುತ್ತಾ ನಿರ್ವಾಣಶಾಂತಿಯು ದೊರಕುತ್ತದೆ. ಅಲ್ಲಿಗೆ ಭವಬಂಧನ ಹರಿದು ತೃಷ್ಣಾ ಎಂಬ ತೈಲವು ಮುಗಿದು ಕರ್ಮಬಂಧನವೆಂಬ ದೀಪವು ನಂದಿಹೋಗುವುದು. ಇದೇ ನಿರ್ವಾಣಶಾಂತಿ, ನಿರ್ವಾಣ ಆನಂದ. "ಹಸಿವಿಗಿಂತ ಹೆಚ್ಚಿನ ಬಾಧೆ ಇಲ್ಲ. ದೇಹವಿರುವುದಕ್ಕಿಂತ ಹೆಚ್ಚಿನ ದುಃಖಗಳಿಲ್ಲ. ನಿರ್ವಾಣಕ್ಕಿಂತ ಹೆಚ್ಚಿನ ಸುಖವಿಲ್ಲ" ಎಂದು ಧರ್ಮಪದದಲ್ಲಿ ಹೇಳಲಾಗಿದೆ (ಧರ್ಮಪದ ೨೦೩ನೇ ಶ್ಲೋಕ). ನಿರ್ವಾಣದಲ್ಲಿ ಎರಡು ಬಗೆಗಳಿದ್ದು ಅವು ಉಪಾಧಿಶೇಷನಿರ್ವಾಣ ಮತ್ತು

ಅನುಪಾಧಿಶೇಷನಿರ್ವಾಣ ಎಂದಾಗಿವೆ. ಜೀವಿತಕಾಲದಲ್ಲಿ ಅರ್ಹತ ಪದವಿಯನ್ನು ಪಡೆದ ಸಾಧಕನು ಅನುಭವಿಸುವ ನಿರ್ವಾಣಸುಖಕ್ಕೆ ಉಪಾಧಿಶೇಷನಿರ್ವಾಣ ಎಂದು ಹೆಸರು. ಅರ್ಹತನು ದೇಹವನ್ನು ಬಿಡುವ ಕಾಲಕ್ಕೆ ಅವನಿಗೆ ಅನುಭವಕ್ಕೆ ಬಂದು, ಅನಂತರ ಶಾಶ್ವತವಾಗಿರುವ ನಿರ್ವಾಣಕ್ಕೆ ಅನುಪಾಧಿಶೇಷನಿರ್ವಾಣ ಎಂದು ಹೆಸರು. ಇದನ್ನು ಪರಿನಿರ್ವಾಣ ಎಂದೂ ಕರೆಯುತ್ತಾರೆ. ಬೌದ್ಧಧರ್ಮದಲ್ಲಿ ಗೃಹಸ್ಥರು ಮತ್ತು ಸಂನ್ಯಾಸಿಗಳು ಅನುಸರಿಸಲು ಅನುಕೂಲವಾದ ನಿಯಮಾವಳಿಗಳು ಇವೆ. ಬೌದ್ಧತತ್ತ್ವಗಳನ್ನು ಅನುಷ್ಠಾನ ಮಾಡುವ ಗೃಹಸ್ಥರನ್ನು ಉಪಾಸಕ, ಉಪಾಸಿಕಾ (ಗೃಹಿಣಿ) ಎನ್ನುತ್ತಾರೆ. ಬೌದ್ಧಸಂನ್ಯಾಸಿಗಳನ್ನು ಭಿಕ್ಷು, ಆಚಾರ್ಯ, ಥೇರಾ ಎಂದು ಕರೆಯುತ್ತಾರೆ. ಕಾಲವು ಸರಿದಂತೆ ಬುದ್ಧನ ಉಪದೇಶಗಳಲ್ಲಿ ಬೌದ್ಧವಿದ್ವಾಂಸರು ವಿಶಿಷ್ಟವೂ ಸೂಕ್ಷ್ಮವೂ ವಿದ್ವತ್ಪೂರ್ಣವೂ ಆದ ಸಿದ್ಧಾಂತಗಳನ್ನು ಕಂಡುಕೊಂಡು ಪ್ರಕಾಶಗೊಳಿಸುವಂತಾಯಿತು. ಅದರಂತೆ ಬುದ್ಧದರ್ಶನದಲ್ಲಿ ವಿಭಿನ್ನವಾದ ಸಂಪ್ರದಾಯಗಳು ಹುಟ್ಟಿಕೊಂಡವು. ಅವುಗಳನ್ನು ಮುಖ್ಯವಾಗಿ ನಾಲ್ಕು ಸಂಪ್ರದಾಯಗಳೆಂದು ಪರಿಗಣಿಸಲಾಗಿದ್ದು ಅವು ಇಂತಿವೆ :

(೧) ವೈಭಾಷಿಕ ಸಂಪ್ರದಾಯ, (೨) ಸೌತಾಂತ್ರಿಕ ಸಂಪ್ರದಾಯ.

(೩) ಯೋಗಾಚಾರ ಸಂಪ್ರದಾಯ, (೪) ಮಾಧ್ಯಮಿಕ ಸಂಪ್ರದಾಯ.

ಬುದ್ಧನು ವೇದೋಪನಿಷದಾದಿ ಪವಿತ್ರ ಗ್ರಂಥಗಳನ್ನು ಮಾನ್ಯಮಾಡದೇ ಇದ್ದರೂ ಅವನ ಸಿದ್ಧಾಂತ–ತತ್ತ್ವವಿಚಾರಗಳು ಸನಾತನ ಹಿಂದೂ ಧರ್ಮದ ತತ್ತ್ವಸಾರವನ್ನು ಬಹುಪಾಲು ಅವಲಂಬಿಸಿರುತ್ತವೆ. ನಮ್ಮ ದೇಶದಲ್ಲಿ ಹಾಗೂ ಹೊರದೇಶಗಳಲ್ಲಿ ಬೌದ್ಧಮತವು ವಿಶೇಷವಾಗಿ ಪ್ರಚಾರಗೊಂಡಂತೆ ಅದರಲ್ಲಿನ ಸಿದ್ಧಾಂತದ ಕುರಿತಾದ ವಿಭಿನ್ನ ಪಂಗಡಗಳಲ್ಲಿ ಮುಖ್ಯವಾಗಿ ಹೀನಾಯಾನ ಮತ್ತು ಮಹಾಯಾನ ಎಂಬುದಾಗಿ ಎರಡು ವಿಭಾಗವು ಮೂಡಿಬಂದು ಬೆಳಗುವಂತಾಯಿತು.

ಸತ್ಯ ಧರ್ಮ ಕರುಣೆ ಪ್ರೇಮ ಇತ್ಯಾದಿ ಸದ್ಗುಣಗಳ ಅನುಷ್ಠಾನ, ಪ್ರಾರ್ಥನೆ, ಪೂಜೆ, ಭಕ್ತಿ, ಕರ್ಮದ ತತ್ತ್ವದಲ್ಲಿ ನಂಬಿಕೆ, ಪುನರ್ಜನ್ಮ, ಬೇರೆ ಬೇರೆ ಲೋಕಗಳು, ಬೌದ್ಧ ಧರ್ಮಗ್ರಂಥಗಳ ಅಧ್ಯಯನ, ಜೀವರುಗಳ ಸೇವೆ, ಇವುಗಳೆಲ್ಲ ಬೌದ್ಧಧರ್ಮದಲ್ಲಿ ಸೇರಿದ್ದು ಹೀಗೆ ಬೌದ್ಧಧರ್ಮವು ತನ್ನದೇ ಆದ ತತ್ತ್ವ, ಆಚಾರ, ಅನುಷ್ಠಾನ ವಿಚಾರಗಳಿಂದ ಕೂಡಿದೆ.

ಬುದ್ಧ, ಧರ್ಮ ಮತ್ತು ಸಂಘ ಎಂಬವುಗಳು ಬೌದ್ಧಧರ್ಮದ ಪವಿತ್ರಸಿದ್ಧಿಯ ರತ್ನತ್ರಯ ಗುರಿಗಳಾಗಿವೆ. ಧರ್ಮವನ್ನು ಕಂಡು ಬೋಧಿಲಾಭಯುಕ್ತನಾಗಿ ಭಗವಂತನೂ ಅರ್ಹಂತನೂ ಸಮ್ಯಕ್ ಸಂಬುದ್ಧನೂ ಆದವನು ಬುದ್ಧ. ಬುದ್ಧನಿಗೆ ಬುದ್ಧಪದವಿಯನ್ನು, ಹಿರಿತನವನ್ನು ತಂದುಕೊಟ್ಟದ್ದು ಯಾವುದೋ ಅದು ಧರ್ಮ. ಬೌದ್ಧಧರ್ಮವನ್ನು ಆಚರಿಸುವವರು ಆರ್ಯರು. ಆರ್ಯರ ಸಮುದಾಯವೇ ಸಂಘ. ಇವು ಮೂರು ಒಂದಕ್ಕೊಂದು ಅತ್ಯಂತ ನಿಕಟಸಂಬಂಧವುಳ್ಳವುಗಳಾಗಿದ್ದು ಮುಖ್ಯವೂ ಪವಿತ್ರವೂ ಮಂಗಳಕರವೂ ಆಗಿರುತ್ತವೆ. ಈ ರತ್ನತ್ರಯಗಳ ಸ್ಮರಣೆ, ವಂದನೆಗಳು ಬೌದ್ಧರ ದಿನನಿತ್ಯದ ಪ್ರಾರ್ಥನೆಯಾಗಿದೆ. ರತ್ನತ್ರಯ ಪವಿತ್ರ ಪ್ರಾರ್ಥನೆ ಯಾವುದು ಎಂದರೆ ;

"ನಮೋ ತಸ್ಸ ಭಗವತೋ ಅರಹತೋ ಸಮ್ಮಾಸಂಬುದ್ಧಸ್ಸ
ಬುದ್ಧಂ ಸರಣಂ ಗಚ್ಛಾಮಿ
ಧಮ್ಮಂ ಸರಣಂ ಗಚ್ಛಾಮಿ
ಸಂಘಂ ಸರಣಂ ಗಚ್ಛಾಮಿ"

ಭಗವಂತನೂ ಅರ್ಹಂತನೂ ಸಮ್ಯಕ್ ಸಂಬುದ್ಧನೂ ಆದ ಆತನಿಗೆ ನಮಸ್ಕಾರ. ಬುದ್ಧನಿಗೆ ನಾನು ಶರಣುಹೋಗುತ್ತೇನೆ. ಧರ್ಮಕ್ಕೆ ನಾನು ಶರಣುಹೋಗುತ್ತೇನೆ. ಸಂಘಕ್ಕೆ ನಾನು ಶರಣುಹೋಗುತ್ತೇನೆ.

### ಜೈನದರ್ಶನ

ಜೈನ ಎಂದರೆ 'ಜಿನ' ಶಬ್ದದಿಂದ ಉತ್ಪತ್ತಿಯಾದ ಶಬ್ದವಾಗಿದ್ದು ಅದರ ಅರ್ಥವು 'ಗೆದ್ದವನು' ಎಂದು ಸ್ಥೂಲವಾಗಿ ಹೇಳಬಹುದು. ಕರ್ಮದ ಕಟ್ಟನ್ನು ಮುರಿದು ಸಂಸಾರವನ್ನು ದಾಟಿ ಮುಕ್ತಿಯನ್ನು ಪಡೆದ ಜೀವರಿಗೆ 'ಜಿನರು' ಎಂದು ಹೆಸರು. ಜಿನರ ಮತವೇ ಜೈನಮತ. ಜಿನರಿಂದ ಉಪದೇಶಿಸಲ್ಪಟ್ಟ ಧರ್ಮವೇ ಜೈನಧರ್ಮ. ಈ ಜಿನೋಕ್ತವಾದ ಮತವನ್ನು ನಂಬುವವರು ಜೈನರು.

ಜೈನಧರ್ಮವು ಅತಿಪ್ರಾಚೀನ ಕಾಲದಲ್ಲಿ ತೀರ್ಥಂಕರರ ಪರಂಪರೆಯಿಂದ ನಡೆದು ಬಂದು ಜಗತ್ತಿನಲ್ಲಿ ಪ್ರಚಾರಗೊಂಡಿರುತ್ತದೆ. ತೀರ್ಥಂಕರರೆಂದರೆ ಜೈನಧರ್ಮಪ್ರವಚನಕಾರರು, ಶಾಸ್ತ್ರಪ್ರವರ್ತಕರು ಆಗಿದ್ದು ಲೋಕದಲ್ಲಿ ಧರ್ಮಜ್ಯೋತಿಯನ್ನು ಬೆಳಗುವವರು, ಸಂಸಾರಸಾಗರವನ್ನು ದಾಟಲು ದಾರಿಯನ್ನು ಮಾಡಿದವರು ಆಗಿರುತ್ತಾರೆ. ದರ್ಶನ ವಿಶುದ್ಧಿಯಾದ ಹದಿನಾರು ಉದಾತ್ತ ಭಾವನೆಗಳನ್ನು ಜನ್ಮಾಂತರದಲ್ಲಿ ಭಾವಿಸಿ, ತೀರ್ಥಂಕರ ಎಂಬ ಒಂದು ವಿಶಿಷ್ಟವಾದ ಪುಣ್ಯಕರ್ಮವನ್ನು ಬಂಧ ಮಾಡಿ, ಮುಕ್ತಿಗೆ ಹೋಗುವ ಮೊದಲು ಗರ್ಭಾವತರಣ, ಜನ್ಮಾಭಿಷೇಕ, ಪರಿನಿಷ್ಕ್ರಮಣ, ಕೇವಲಜ್ಞಾನ ಮತ್ತು ಪರಿನಿರ್ವಾಣ ಎಂಬ ಈ ಪಂಚಕಲ್ಯಾಣಗಳ ಮೂಲಕ ನಾಲ್ಕು ಘಾತಿಕರ್ಮಗಳನ್ನು ನಾಶಮಾಡಿ, ಜೀವನ್ಮುಕ್ತ ಅವಸ್ಥೆಯಲ್ಲಿ ಸರ್ವಜ್ಞರಾಗಿ, ಮೋಕ್ಷಮಾರ್ಗವನ್ನು ಉಪದೇಶಮಾಡಿದ್ದರಿಂದ ತೀರ್ಥಂಕರರು ಎಂದು ಕರೆಯಲ್ಪಟ್ಟಿರುತ್ತಾರೆ ಎಂದು ತೀರ್ಥಂಕರರ ಕುರಿತಾದ ಮತ್ತೊಂದು ವಿವರಣೆ ಇದೆ.

ತೀರ್ಥಂಕರರಿಗೆ ದೇವಸ್ಥಾನ, ವಿಗ್ರಹ-ಪ್ರತಿಷ್ಠಾ, ಪೂಜಾದಿಗಳು ಜೈನಾಗಮ ಶಾಸ್ತ್ರೋಕ್ತ ಮೂಲಕವಾಗಿ ನಡೆದುಬರುವುದರಿಂದ ಅರ್ಹನ್ ಎಂಬ ಪೂಜ್ಯ ಅರ್ಥ ಸೂಚಕವಾದ ಹೆಸರು ಇದೆ. ಹಾಗೆಯೇ ಅರ್ಹನ್ನರ ಉಪದೇಶೋಕ್ತವಾದ ಮತವಾದ್ದರಿಂದ ಈ ಮತಕ್ಕೆ ಅರ್ಹತಮತ ಎಂದೂ ಹೆಸರಿದೆ.

ತೀರ್ಥಂಕರರು ಮುಖ್ಯವಾಗಿ ಇಪ್ಪತ್ತುನಾಲ್ಕು ಮಂದಿ ಇದ್ದು ಅವರಲ್ಲಿ ಕೊನೆಯ ತೀರ್ಥಂಕರರೇ ಭಗವಾನ್ ವರ್ಧಮಾನ ಮಹಾವೀರಸ್ವಾಮಿಯಾಗಿರುತ್ತಾರೆ. ಇವರನ್ನು ವರ್ಧಮಾನ ಮಹಾವೀರ ಜಿನೇಶ್ವರ ಎಂದೂ ಕರೆಯುತ್ತಾರೆ. ಪಾರ್ಶ್ವನಾಥಸ್ವಾಮಿಯು ಇಪ್ಪತ್ತಮೂರನೇ ತೀರ್ಥಂಕರರು. ತೀರ್ಥಂಕರರ ಪರಂಪರೆಯಲ್ಲಿ ಋಷಭದೇವಸ್ವಾಮಿಯು ಆದಿತೀರ್ಥಂಕರರು ಎಂದು ಜೈನರು ನಂಬಿ ಗೌರವಿಸುತ್ತಾರೆ. ಭಗವಾನ್

ವರ್ಧಮಾನ ಮಹಾವೀರಸ್ವಾಮಿಯ ಕಾಲ ಕ್ರಿ.ಪೂ. ಆರನೆಯ ಶತಮಾನ ಎಂದು ಹೇಳಲಾಗಿದೆ.

ಜೈನದರ್ಶನದಲ್ಲಿ ಮೂಲವಾಗಿ ಪ್ರತ್ಯಕ್ಷ ಮತ್ತು ಪರೋಕ್ಷ ಎಂದು ಎರಡು ಪ್ರಮಾಣ ಗಳನ್ನು ಒಪ್ಪಲಾಗಿದೆ. ಪರೋಕ್ಷದಲ್ಲಿ ಸ್ಮೃತಿ, ಪ್ರತ್ಯಭಿಜ್ಞಾನ, ತರ್ಕ, ಅನುಮಾನ, ಆಗಮ ಎಂಬ ಐದು ವಿಭಾಗಗಳಿವೆ. ಪ್ರತ್ಯಕ್ಷದಲ್ಲಿ ಎರಡು ಭೇದಗಳಿದ್ದು ಅವುಗಳನ್ನು ಸಾಂವ್ಯಾವಹಾರಿಕ ಪ್ರತ್ಯಕ್ಷ ಮತ್ತು ಪಾರಮಾರ್ಥಿಕ ಪ್ರತ್ಯಕ್ಷ ಎನ್ನುತ್ತಾರೆ. ಪಾರಮಾರ್ಥಿಕ ಪ್ರತ್ಯಕ್ಷದಲ್ಲಿ ಎರಡು ಪ್ರಕಾರಗಳಿದ್ದು ಅವುಗಳು ಸಕಲಪ್ರತ್ಯಕ್ಷ ಮತ್ತು ವಿಕಲಪ್ರತ್ಯಕ್ಷ ಎಂದಾಗಿವೆ. ಇನ್ನೊಂದು ದೃಷ್ಟಿಯಿಂದ ಜೈನರು ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಎಂಬ ಮೂರು ಪ್ರಮಾಣಗಳನ್ನು ಮಾತ್ರ ಒಪ್ಪುವವರಾಗಿದ್ದು ತ್ರಿಪ್ರಮಾಣವಾದಿ ಗಳೆಂದು ಹೇಳಲ್ಪಡುತ್ತಾರೆ.

ಜೈನದರ್ಶನದಲ್ಲಿ ದೇವರನ್ನು ಜಗತ್ತು-ಜೀವಿಗಳ ಸೃಷ್ಟಿಕರ್ತ ಎಂದು ಒಪ್ಪಿರುವುದಿಲ್ಲ. ಹಾಗೆಯೇ ಜೈನದರ್ಶನವು ವೇದ-ಉಪನಿಷತ್ತುಗಳನ್ನು ಪ್ರಮಾಣದಲ್ಲಿ ಸ್ವೀಕರಿಸಿರು ವುದಿಲ್ಲ. ತೀರ್ಥಂಕರರು ಬೋಧಿಸಿದ ಉಪದೇಶಗಳನ್ನೊಳಗೊಂಡ ಶಾಸ್ತ್ರಸಮುದಾಯವೇ ಜೈನದರ್ಶನದ ಆಧಾರಗ್ರಂಥಗಳಾಗಿವೆ. ಇವುಗಳನ್ನು ಅಂಗ, ಉಪಾಂಗ, ಪ್ರಕೀರ್ಣ, ಛೇದಸೂತ್ರ, ಮೂಲಗ್ರಂಥ, ಸ್ವತಂತ್ರಗ್ರಂಥ ಎಂದು ವಿಭಾಗಮಾಡಲಾಗಿದ್ದು ಇವು ಗಳಲ್ಲಿ ಅಂಗಗಳು ಬಹುಮುಖ್ಯವಾದ ಶಾಸ್ತ್ರಗ್ರಂಥಗಳಾಗಿವೆ. ಅಂಗಗಳನ್ನು ಜೈನವೇದ ವೆಂದು ಪರಿಗಣಿಸಲಾಗಿದ್ದು, ಮುಖ್ಯವಾದ ಅಂಗಗಳು ಹನ್ನೆರಡಾಗಿವೆ. ಈ ಹನ್ನೆರಡು ಅಂಗಗಳನ್ನು ದ್ವಾದಶಾಂಗಗಳು ಎಂದು ಹೇಳುತ್ತಾರೆ. ಇವುಗಳೆಲ್ಲ ಮೂಲವಾಗಿ ಅರ್ಧಮಾಗಧಿ ಭಾಷೆಯಲ್ಲಿ ರಚಿತಗೊಂಡವುಗಳಾಗಿವೆ. ತೀರ್ಥಂಕರರು ಉಪದೇಶಿಸಿದ ದಿವ್ಯೋಪದೇಶಗಳನ್ನು ಕಿವಿಯಿಂದ ಕೇಳಿ ಇತರರಿಗೆ ಪರಂಪರೆಯಾಗಿ ಹೇಳಿಕೊಡುತ್ತಾ ಬಂದ ಮೇರೆ ಅವುಗಳಿಗೆಲ್ಲಾ 'ಶ್ರುತಸ್ಕಂಧ' ಎಂಬ ಇನ್ನೊಂದು ಹೆಸರಿದೆ.

ಜೈನರು ತೀರ್ಥಂಕರರ ಜೀವನ ಮತ್ತು ಬೋಧನೆಗಳನ್ನು ಪ್ರಮಾಣವಾಗಿ ಸ್ವೀಕರಿ ಸುತ್ತಾ ಭವಬಂಧನದ ಪಾಶ ಹರಿದು ಮೋಕ್ಷಪ್ರಾಪ್ತಿಗೆ ಮೂರು ಮುಖ್ಯವಾದ ಅಂಶಗಳು ಬೇಕೆಂದು ಹೇಳುತ್ತಾರೆ :

(೧) ಜೈನ ತೀರ್ಥಂಕರರ ಜೀವನ–ಸಂದೇಶಗಳಲ್ಲಿ ನಂಬಿಕೆ.
(೨) ಜೈನ ತತ್ತ್ವಗಳ ಸರಿಯಾದ ಪರಿಜ್ಞಾನ.
(೩) ಸರಿಯಾದ ಮತ್ತು ಪರಿಶುದ್ಧವಾದ ನಡವಳಿಕೆ.

ತೀರ್ಥಂಕರರು ಕಾಲಕಾಲಕ್ಕೆ ಸರಿಯಾಗಿ ಅವತರಿಸಿ ಧರ್ಮಜ್ಯೋತಿಯನ್ನು ಬೆಳಗಿಸಿ ಜಗತ್ತಿನಲ್ಲಿ ಧರ್ಮಪ್ರಚಾರಮಾಡುವ ದಿವ್ಯ ಹಾಗೂ ಭವ್ಯವಾದ ಪವಿತ್ರ ಮಹಾಸ್ವಾಮಿ ಗಳಾದುದರಿಂದ ಅವರು ಪೂಜ್ಯರೂ ಹಾಗೂ ದೇವಸ್ವರೂಪರೂ ಆಗಿರುತ್ತಾರೆ. ಇಪ್ಪತ್ತು ನಾಲ್ಕು ತೀರ್ಥಂಕರರಲ್ಲಿ ಕೊನೆಯವರಾದ ಶ್ರೀ ವರ್ಧಮಾನ ಮಹಾವೀರ ಮಹಾ ಸ್ವಾಮಿಯ ಧರ್ಮೋಪದೇಶಗಳು ವರ್ತಮಾನ ಯುಗದಲ್ಲಿ ಪ್ರಸಿದ್ಧ ಹಾಗೂ ಮುಖ್ಯ ವಾದವುಗಳೆಂದು ಜೈನಧರ್ಮದವರ ನಂಬಿಕೆಯಾಗಿರುತ್ತದೆ.

## ಜೈನದರ್ಶನದ ತತ್ತ್ವ ಮತ್ತು ಅನುಷ್ಠಾನ ವಿಚಾರ

ಜೈನದರ್ಶನದಲ್ಲಿ ಸತ್ಯ, ನೀತಿ, ಉತ್ತಮ ನಡವಳಿಕೆಗಳಿಗೆ ವಿಶೇಷವಾದ ಪ್ರಾಧಾನ್ಯ ನೀಡಿರುವುದು ಕಂಡುಬರುತ್ತದೆ. ಅಹಿಂಸೆ ಮತ್ತು ದಯೆ ಇವುಗಳು ಜೈನಧರ್ಮದ ಮೂಲಸೂತ್ರಗಳಾಗಿವೆ. ಜೀವನ, ಜಗತ್ತು ಇತ್ಯಾದಿಗಳಿಗೆ ಸಂಬಂಧಿಸಿದಂತೆ ಸ್ಯಾದ್ವಾದ ದೃಷ್ಟಿ ಎಂಬ ವಿಶಿಷ್ಟವಾದ ನ್ಯಾಯಪದ್ಧತಿಯನ್ನು ಜೈನಧರ್ಮವು ಬೋಧಿಸುತ್ತದೆ. ಜೈನರ ತಾತ್ತ್ವಿಕವಿಚಾರ ಆಚಾರವ್ಯವಹಾರಗಳಿಗೆಲ್ಲಾ ಈ ಸ್ಯಾದ್ವಾದ ದೃಷ್ಟಿಯೇ ತಳಹದಿಯಾಗಿರುತ್ತದೆ. ಸ್ಯಾದ್ವಾದ ಎಂದರೆ ಪ್ರತಿಯೊಂದು ತೀರ್ಮಾನವು ಕೂಡ ಸಾಪೇಕ್ಷವಾದುದು ಎಂಬ ತತ್ತ್ವವಾಗಿರುತ್ತದೆ. ಸ್ಯಾತ್ ಎಂದರೆ ಇರಬಹುದು ಎಂದು ತಾತ್ಪರ್ಯ. ಹಾಗಾಗಿ ಸ್ಯಾದ್ವಾದ ಎಂದರೆ ಇರಬಹುದು ಎಂಬ ವಾದ ಎಂದು ಸಾರಾಂಶವಾಗಿ ಹೇಳಬಹುದು. ಉದಾಹರಣೆಗೆ ಹೇಳುವುದಾದರೆ, ಕೋಣೆಯಲ್ಲಿ ಕಪ್ಪಗಿನ ಹೂಜಿಯೊಂದು ಇದೆ ಎಂಬುದನ್ನು ತೀರ್ಮಾನಿಸಿ ಹೇಳುವಾಗ ಕೋಣೆಯಲ್ಲಿ ಹೇಗೋ ಏನೋ ಕಪ್ಪಗಿನ ಹೂಜಿಯೊಂದು ಇದೆ ಎಂದು ಹೇಳುತ್ತಾ 'ಹೇಗೋ ಏನೋ' ಎಂಬುದನ್ನು ಸೇರಿಸಿಕೊಂಡು ಹೇಳಬೇಕು. ಏಕೆಂದರೆ ಹೂಜಿಯು ಕೋಣೆಯಲ್ಲಿ ಇರುವುದು ಆ ಪರಿಸ್ಥಿತಿಯ ದೃಷ್ಟಿಯಿಂದ ಮಾತ್ರ ಸರಿ. ದೃಷ್ಟಿಯನ್ನೂ ಪರಿಸ್ಥಿತಿಯನ್ನೂ ಬದಲಾಯಿಸಿದಾಗ ಹೂಜಿಯು ಬದಲಾಗಿ ಕಂಡೀತು. ಹಾಗೆಯೇ ಹೂಜಿಯು ಕೋಣೆಯಲ್ಲಿ ಆ ಪರಿಸ್ಥಿತಿ, ಸನ್ನಿವೇಶಗಳಲ್ಲಿ ಇದ್ದಂತೆ ಎಲ್ಲೆಲ್ಲೂ ಇರುವುದಿಲ್ಲ. ಆದ್ದರಿಂದ ಒಂದು ಪರಿಸ್ಥಿತಿ, ಒಂದು ದೃಷ್ಟಿಯಿಂದ ಸರಿಯಾದುದು, ಇದೆ ಎನ್ನುವುದು, ಪರಿಸ್ಥಿತಿ–ದೃಷ್ಟಿಗಳ ಬದಲಾವಣೆಯಾದಾಗ ಬೇರೆಯಾಗಿಯೇ ಕಾಣಸಬಹುದು. ಆದುದರಿಂದ ಒಂದು ವಸ್ತು, ಸಂಗತಿ, ಸನ್ನಿವೇಶಗಳನ್ನು ಕುರಿತಾಗಿ ನಾವು ಹೇಳುವ ತೀರ್ಪು ಆ ಸಂದರ್ಭಕ್ಕೆ ಆ ದೃಷ್ಟಿಯಿಂದ ಮಾತ್ರ ನಿಜವಾಗುತ್ತದೆ. ಈ ವಾದವನ್ನೇ ಸ್ಯಾದ್ವಾದ ಎಂದು ಕರೆಯುತ್ತಾರೆ. ಗೋರಸವು ಹಾಲಾಗಿ ಮೊಸರಾಗಿ ಮಾರ್ಪಾಡುಹೊಂದುವುದು ಸರ್ವವಿದಿತವಾದ ವಿಚಾರವಾಗಿದೆ. ಆದರೆ ಇವುಗಳು ಎರಡರಲ್ಲೂ ಗೋರಸ ಇದ್ದು ಅವಸ್ಥಾಭೇದಗಳನ್ನು ಪಡೆದಿದೆಯಷ್ಟೆ. ಹಾಲು ಇತ್ಯಾದಿ ಪರ್ಯಾಯ ಅಪೇಕ್ಷೆಗಳನ್ನು ಹೇಳದೆ ಸಂಕ್ಷೇಪವಾಗಿ ಬರೇ ವಸ್ತುವನ್ನೇ ಹೇಳುವುದಾದರೆ 'ಗೋರಸ' ಎಂದೇ ಹೇಳಬೇಕು. ಹೀಗೆ ಅಪೇಕ್ಷಾಭೇದಗಳನ್ನು ಹೇಳುವ ವಾದವೇ ಸ್ಯಾದ್‌ವಾದವಾಗಿದ್ದು, ಅನಂತವಾದುದೂ ಮೂಲವಾದುದೂ ಯಾವುದಿದೆಯೋ ಅದೇ ಸತ್ಯ ಎಂಬುದಕ್ಕೆ ಈ ವಾದದಲ್ಲಿ ಹೆಚ್ಚಿನ ಮಹತ್ತ್ವ ನೀಡಲಾಗಿದೆ ಎಂದು ಸಂಕ್ಷೇಪವಾಗಿ ಹೇಳಬಹುದು.

ಜೈನದರ್ಶನದ ಪ್ರಕಾರ ಜಗತ್ತು ಅನಾದಿಯಾದುದು. ಹಾಗೆಯೇ ಜೀವವೂ ಅನಾದಿಯಾದುದು. ಜೀವರುಗಳು ಅಸಂಖ್ಯ. ಹುಟ್ಟು, ಸಾವು, ಸುಖ, ದುಃಖಗಳಿಗೆ ಕಾರಣವೇ ಕರ್ಮವಾಗಿದ್ದು, ಕರ್ಮವೂ ಅನಾದಿಯಾಗಿರುತ್ತದೆ. ಆದರೆ ಸಮ್ಯಕ್‌ದರ್ಶನ (ಸರಿಯಾದ ನಂಬಿಗೆ, ಶ್ರದ್ಧೆ), ಸಮ್ಯಕ್ ಜ್ಞಾನ (ಸರಿಯಾದ ತಿಳಿವಳಿಕೆ), ಸಮ್ಯಕ್ ಚಾರಿತ್ರ್ಯ (ಸರಿಯಾದ ನಡತೆ) ಎಂಬ ಸಾಧನಾವಿಚಾರಗಳ ಸಹಾಯದಿಂದ ಸಂಸಾರಬಂಧನ (ಕರ್ಮದ ಕಟ್ಟು)ಗಳಿಂದ ಜೀವಿಗಳು ಮುಕ್ತರಾಗಬಹುದು. ಈ ಸಾಧನಾವಿಚಾರಗಳನ್ನು 'ರತ್ನತ್ರಯ' ಎಂದು ಜೈನದರ್ಶನದಲ್ಲಿ ಕರೆಯಲಾಗಿದೆ.

ಪ್ರತಿಯೊಂದು ವಸ್ತುವಿಗೂ ಅನಂತವಾದ ಗುಣಧರ್ಮಗಳಿವೆ. ವಸ್ತುಗಳನ್ನು ನಿಶ್ಚಿತವಾದ ಮತ್ತು ನಿಷೇಧಕವಾದ ಗುಣದೃಷ್ಟಿಗಳಿಂದ ಪರಿಶೀಲಿಸಿದರೆ ಅವು ಅನಂತ ಗುಣಧರ್ಮಗಳಿಂದ ಕೂಡಿವೆ ಎಂದು ಅರಿವಾಗುವುದು. ಕಾಲವು ಸರಿದಂತೆ ವಸ್ತುಗಳ ಗುಣಧರ್ಮಗಳು ಬದಲಾಗುತ್ತವೆ. ಹಾಗಾಗಿ ಈಗಿದ್ದ ವಸ್ತು, ಗುಣಧರ್ಮ ಕಾಲ ಬದಲಿದಂತೆ ಬದಲುತ್ತದೆ ಎಂದಾದ್ದರಿಂದ ವಸ್ತುವು ಅನಂತಗುಣಧರ್ಮದಿಂದ ಕೂಡಿದೆ ಎಂದು ಹೇಳಬಹುದು. ಹೀಗೆ ಗುಣಧರ್ಮದಿಂದ ಕೂಡಿದ ವಸ್ತುವೇ ದ್ರವ್ಯವಾಗಿರುತ್ತದೆ. ದ್ರವ್ಯದಲ್ಲಿ ಬದಲಾವಣೆಹೊಂದದ ಅಂಶವನ್ನು ಗುಣ ಎಂದೂ ಬದಲಾವಣೆಹೊಂದುವುದನ್ನು ಪರ್ಯಾಯ ಎಂದೂ ಹೇಳುತ್ತಾರೆ. ಈ ತತ್ತ್ವವನ್ನು ಅನುಸರಿಸಿ ಜಗತ್ತಿನಲ್ಲಿ ಬದಲಾವಣೆ ಆಗುತ್ತಿದ್ದರೂ ಬದಲಾವಣೆ ಆಗದ ಅಂಶಗಳೂ ಇವೆ. ಜಗತ್ತು ಪರ್ಯಾಯ ದೃಷ್ಟಿಯಿಂದ ಅನಿತ್ಯವೂ ಗುಣದೃಷ್ಟಿಯಿಂದ ನಿತ್ಯವೂ ಆಗಿದೆ. ವಸ್ತುವಿನಲ್ಲಿ ಗುಣವೇ ಶಾಶ್ವತವಾಗಿದ್ದು ಆದ್ಯಂತವಿಲ್ಲ. ಆದುದರಿಂದ ಜಗತ್ತು ಅನಾದಿಯಾದುದು ಎಂದು ಜೈನದರ್ಶನದಲ್ಲಿ ಹೇಳಲಾಗಿದೆ. ಜಗತ್ತಿನಲ್ಲಿ ವಸ್ತುಗಳನ್ನು ಏಕಪ್ರದೇಶ ಮತ್ತು ಬಹುಪ್ರದೇಶಗಳ ದೃಷ್ಟಿಯಿಂದ ಅಸ್ತಿಕಾಯ ಮತ್ತು ಅಕಾಯ ಎಂದು ವರ್ಗೀಕರಣ ಮಾಡಲಾಗಿದೆ. ಅದರಲ್ಲಿ ಕಾಲದ್ರವ್ಯವು ಪರಮಾಣುರೂಪವಾಗಿಯೇ ಇರುವುದರಿಂದ ಅಸ್ತಿಕಾಯವಲ್ಲ. ಉಳಿದ ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ ಎಂಬ ಈ ಐದು ದ್ರವ್ಯಗಳು ಬಹುಪ್ರದೇಶವುಳ್ಳವುಗಳು. ಆದ್ದರಿಂದ ಇವುಗಳಿಗೆ ಅಸ್ತಿಕಾಯವೆಂದು ಹೆಸರು (ಪ್ರದೇಶ ಎಂದರೆ ಅತಿಸೂಕ್ಷ್ಮಸ್ಥಳಾವಕಾಶ ಎಂದು ತಾತ್ಪರ್ಯ).

ಅಸ್ತಿಕಾಯದಲ್ಲಿ ಎರಡು ಭಾಗಗಳಿದ್ದು ಅವು ಜೀವ ಮತ್ತು ಅಜೀವಗಳಾಗಿವೆ. ಜೀವಗಳಲ್ಲಿ ಬದ್ಧ ಮತ್ತು ಮುಕ್ತ ಎಂಬ ಎರಡು ಭೇದಗಳಿವೆ. ಬದ್ಧಜೀವರಲ್ಲಿ ಪುನಃ ಎರಡು ಭೇದಗಳಿದ್ದು ಅವು ತ್ರಸ (ಬಹು ಇಂದ್ರಿಯಗಳಿಂದ ಕೂಡಿದ), ಸ್ಥಾವರ (ಏಕೇಂದ್ರಿಯಯುಕ್ತವಾದ) ಎಂಬವುಗಳಾಗಿವೆ. ಜೀವವಿಲ್ಲದ್ದು ಅಜೀವ. ಅದಕ್ಕೆ ಚೈತನ್ಯವಿಲ್ಲ. ಈ ಲೋಕದಲ್ಲಿ ಒಂಭತ್ತು ತತ್ತ್ವಗಳಿದ್ದು ಅವುಗಳಲ್ಲಿ ಆರು ದ್ರವ್ಯಗಳು ಸೇರಿರುತ್ತವೆ ಎಂದು ಜೈನದರ್ಶನದಲ್ಲಿ ಹೇಳಲಾಗಿದೆ.

ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ, ಮೋಕ್ಷ ಎಂಬ ಏಳು ತತ್ತ್ವಗಳ ಒಡನೆ ಪುಣ್ಯ ಮತ್ತು ಪಾಪ ಎಂಬ ಎರಡು ತತ್ತ್ವಗಳು ಸೇರಿ ಒಂಭತ್ತು ತತ್ತ್ವಗಳಾಗಿವೆ. ಈ ನವತತ್ತ್ವಗಳನ್ನು 'ನವಪದಾರ್ಥಗಳು' ಎಂದು ಹೇಳುತ್ತಾರೆ. ಜೀವ, ಧರ್ಮ, ಅಧರ್ಮ, ಪುದ್ಗಲ, ಆಕಾಶ, ಕಾಲ ಎಂಬವುಗಳು ಆರು ದ್ರವ್ಯಗಳು. ಇವನ್ನು ಷಡ್‌ದ್ರವ್ಯ ಎನ್ನಲಾಗಿದೆ. ಧರ್ಮ, ಅಧರ್ಮ, ಪುದ್ಗಲ, ಆಕಾಶ, ಕಾಲ ಇವುಗಳು ಅಜೀವಗಳು. ಅಜೀವಗಳಲ್ಲೆಲ್ಲಾ ಪುದ್ಗಲವು ಮುಖ್ಯವಾದುದಾಗಿದ್ದು ಅದು ಅಚೇತನ ಮತ್ತು ಮೂರ್ತವಾದುದಾಗಿರುತ್ತದೆ. ಸ್ಪರ್ಶ ರಸ ಗಂಧ ವರ್ಣಗಳಿಂದ ಪುದ್ಗಲವು ಕೂಡಿರುತ್ತದೆ. ಶರೀರ, ಇಂದ್ರಿಯಗಳು, ಇಂದ್ರಿಯಗಳ ಮುಖಾಂತರ ಅನುಭವಿಸುವ ವಿಷಯಗಳು, ಮನಸ್ಸು, ಕರ್ಮ—ಇವುಗಳೆಲ್ಲ ಪುದ್ಗಲಗಳಾಗಿವೆ.

ಜೀವ ಮತ್ತು ಇತರ ದ್ರವ್ಯಗಳಿಂದ ತುಂಬಿರುವ ಸ್ಥಾನಕ್ಕೆ ಲೋಕಾಕಾಶ ಎಂದೂ,

ಇಲ್ಲದ ಬರಿಯ ಆಕಾಶದ್ರವ್ಯ ಇರುವ ಸ್ಥಾನಕ್ಕೆ ಅಲೋಕ ಆಕಾಶ ಎಂದೂ ಹೆಸರು. ವಸ್ತುಗಳ ಇರುವಿಕೆ, ಬದಲಾಗುವಿಕೆ ಇತ್ಯಾದಿಗಳನ್ನು ಕಾಲದಿಂದ ನಿರ್ಣಯಿಸಲು ಸಾಧ್ಯವಾಗುತ್ತದೆ. ಕಾಲವು ಜೀವ-ಅಜೀವಗಳ ಪರಿವರ್ತನೆಗಳಿಗೆ ಮೂಲಕಾರಣವಾಗಿ ಅವುಗಳ ರೂಪಾಂತರಕ್ಕೆ ನೆರವಾಗುತ್ತದೆ. ಕಾಲಕ್ಕೆ ಭೂತ, ವರ್ತಮಾನ, ಭವಿಷ್ಯತ್ ಎಂದು ಮೂರು ವ್ಯವಹಾರಭೇದಗಳಿವೆ. ಈ ಭೇದ ವ್ಯಾವಹಾರಿಕ ಮಾತ್ರ. ಕಾಲವು ಅನಾದಿ ಹಾಗೂ ಅನಂತವಾದುದಾಗಿರುತ್ತದೆ. ಕಾಲದ ಉಪಯೋಗ ಬಹುಮುಖ ಹಾಗೂ ಅನೇಕವಾದುದು. ಉದಾ : ಮಾವಿನಹಣ್ಣು ಕಾಯಿಯಾಗಿ ಇದ್ದದ್ದು ಹಣ್ಣಾಗಿದೆ. ಹಣ್ಣಾಗುವುದು ಎಂದು ತಿಳಿಯಲು ಕಾಲದ ನೆರವು ಅಗತ್ಯ. ಅಷ್ಟುಮಾತ್ರವಲ್ಲದೆ ಕಾಲದ ನೆರವಿನಿಂದ ಮಾತ್ರ ಅದು ಸಾಧ್ಯವಾಗುತ್ತದೆ. ಹೀಗೆ ಕಾಲವು ಜೀವ-ಜಗತ್ತುಗಳ ಬದಲಾವಣೆಗಳನ್ನು ಗ್ರಹಿಸಲು ಸಹಾಯ ಮಾಡುತ್ತದೆ.

**ಧರ್ಮ ಮತ್ತು ಅಧರ್ಮ :** ಧರ್ಮ ಮತ್ತು ಅಧರ್ಮಗಳು ಜೈನಸಿದ್ಧಾಂತದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿರುತ್ತವೆ. ಧರ್ಮ ಎಂದರೆ ಸಾಮಾನ್ಯವಾಗಿ ಹೇಳುವ ಧಾರಣ ಮಾಡುವಂಥಾದ್ದು; ನೈತಿಕ ಬಲ, ಒಳ್ಳೆಯ ಆಚಾರ ಎಂಬ ಅರ್ಥಕೊಡುವ ಶಬ್ದವಲ್ಲ. ಹಾಗೆಯೇ ಅಧರ್ಮ ಎಂದರೆ ಕೆಟ್ಟ ನಡತೆ, ನೈತಿಕ ಅಶಕ್ತಿ ಎಂಬ ಅರ್ಥಸೂಚಕವಾದ ಶಬ್ದವಲ್ಲ. ಜೈನಸಿದ್ಧಾಂತದಲ್ಲಿ ಈ ಶಬ್ದಗಳನ್ನು ಲಾಕ್ಷಣಿಕದೃಷ್ಟಿಯಿಂದ ಬಳಸಲಾಗಿದೆ.

ಧರ್ಮ ಎಂದರೆ ಒಂದು ಶಕ್ತಿ ಎಂದು ತಾತ್ಪರ್ಯ. ಮೀನುಗಳು ಸಂಚರಿಸುವುದಕ್ಕೆ ನೀರು ಹೇಗೆ ಸಹಕಾರಿಯಾಗಿರುತ್ತದೋ ಹಾಗೆಯೇ ಲೋಕದಲ್ಲಿ ಜೀವ ಮತ್ತು ಪುದ್ಗಲಗಳ ಓಡಾಟಕ್ಕೆ ನೆರವಾಗುವ ದ್ರವ್ಯವೇ ಧರ್ಮದ್ರವ್ಯವಾಗಿರುತ್ತದೆ. ವಸ್ತುಗಳು ನಿಲ್ಲಲು ಭೂಮಿ ಅಗತ್ಯ. ಹಾಗೆಯೇ ಜೀವ-ಪುದ್ಗಲಗಳು ಚಲನೆಯನ್ನು ನಿಲ್ಲಿಸಿ ಒಂದು ಕಡೆ ನಿಲ್ಲುವುದಕ್ಕೆ ಸಹಾಯಕವಾಗುವ ದ್ರವ್ಯವೇ ಅಧರ್ಮದ್ರವ್ಯ. ಧರ್ಮ-ಅಧರ್ಮ ದ್ರವ್ಯಗಳು ಲೋಕದಲ್ಲಿರುತ್ತವೆ ವಿನಾ ಅಲೋಕದಲ್ಲಿ ಹರಡಿರುವುದಿಲ್ಲ. ಲೋಕದಲ್ಲಿ ಜೀವಗಳಿಗೂ ಮತ್ತು ಉಳಿದ ಅಜೀವಗಳಿಗೂ ಇರಲು ಸ್ಥಳ ಕೊಡುವುದೇ ಅವಕಾಶ. ಆಕಾಶದಲ್ಲಿ ಲೋಕ, ಅಲೋಕ ಎಂಬ ಎರಡು ಭಾಗಗಳಿವೆ. ಲೋಕದಲ್ಲಿ ಷಡ್‌ದ್ರವ್ಯಗಳು ಇವೆಯಾದರೆ ಅಲೋಕದಲ್ಲಿ ಸೀಮಾತೀತವಾದ ಆಕಾಶವೊಂದೇ ಇರುವುದು.

**ಕರ್ಮ :** ಜೈನದರ್ಶನದಲ್ಲಿ ಕರ್ಮವು ಭೌತಿಕ ಸ್ವಭಾವದ್ದೆಂದು ಪರಿಗಣಿಸಲ್ಪಟ್ಟು ಮಹತ್ವಪೂರ್ಣವಾದ ಸ್ಥಾನವನ್ನು ಪಡೆದಿರುತ್ತದೆ. ಕರ್ಮವನ್ನು ಅಣು ಅಥವಾ ಕರ್ಮಪುದ್ಗಲ ಎಂದು ಕರೆದಿದ್ದು ಲೋಕದಲ್ಲಿ ಇವುಗಳು ಶುದ್ಧಾಕಾಶದಂತೆ (Ether) ಎಲೆಕ್ಟ್ರಾನಿನಂತೆ ತುಂಬಿದ್ದು ಇವುಗಳಿಗೆ ನಿಶ್ಚಯವಾದ ಗುಣ ಯಾವುದೂ ಇಲ್ಲ ಎಂದು ಹೇಳಲಾಗಿದೆ. ಕರ್ಮಕ್ಕೆ ನಿಶ್ಚಯವಾದ ಗುಣವಿಲ್ಲದಿದ್ದರೂ ಕರ್ಮಾಣುಗಳು ಜೀವವನ್ನು ಸೇರಿದ ಕೂಡಲೇ ಜೀವನ ಪರಿಣಾಮಕ್ಕೆ ಸರಿಯಾಗಿ ಬೇರೆ ಬೇರೆ ಗುಣವನ್ನು ಪಡೆದು ಅದರಿಂದ ಫಲ ಉಂಟಾಗುತ್ತದೆ. ಧೂಳನ್ನು ವಿಷಕ್ಕೆ ಬೆರೆಸಿದಾಗ ಕಹಿಯಾಗಿಯೂ, ಬೆಲ್ಲಕ್ಕೆ ಬೆರೆಸಿದಾಗ ಸಿಹಿಯಾಗಿಯೂ ಹೇಗೆ ಆಗುತ್ತದೆಯೋ ಹಾಗೆಯೇ ಶುಭಪರಿಣಾಮದಿಂದ ಕರ್ಮಾಣುಗಳು ಆಕರ್ಷಿತವಾದರೆ ಪುಣ್ಯವೂ, ಅಶುಭಪರಿಣಾಮದಿಂದ ಆಕರ್ಷಿತ

ವಾದರೆ ಪಾಪವೂ ಆಗಿ ಪರಿಣಮಿಸುತ್ತದೆ. ಕರ್ಮಕ್ಕೆ ಆದಿ ಇಲ್ಲ. ಹಾಗೆಯೇ ಜೀವದ ಕರ್ಮಬಂಧನದ ಪರಂಪರೆಯೂ ಅನಾದಿ. ಆದರೆ ಕರ್ಮಬಂಧನಕ್ಕೆ ಅಂತ್ಯ ಇದೆ ಎಂದು ಜೈನದರ್ಶನದಲ್ಲಿ ಹೇಳಲಾಗಿದೆ.

ಜೀವನು ಸರ್ವಸ್ವತಂತ್ರ. ಅವನು ಕರ್ತೃವೂ ಭೋಕ್ತೃವೂ ಆಗಿರುತ್ತಾನೆ. ಸ್ವಭಾವತಃ ಶುದ್ಧನಾದ ಜೀವನು ಅನಾದಿಕಾಲದಿಂದಲೂ ಕರ್ಮದೊಡನೆ ಸೇರಿ ಕರ್ಮದ ಕಟ್ಟಿಗೆ ಸಿಲುಕಿ ಸಂಸಾರದಲ್ಲಿ ತೊಳಲಾಡುತ್ತಿದ್ದಾನೆ. ಚಿನ್ನವು ಸ್ವತಃ ಪರಿಶುದ್ಧವಾದರೂ ಕಲ್ಲಿನೊಡನೆ ಅನಾದಿಕಾಲದಿಂದ ಸೇರಿರುವಂತೆ ಜೀವನು ಕರ್ಮದೊಡನೆ ಸೇರಿರುತ್ತಾ ಕರ್ಮದ ಕಟ್ಟಿಗೆ ಒಳಗಾಗಿರುತ್ತಾನೆ.

ಜೀವದ ಈ ಕ್ರಮಗತಿಯನ್ನು ನಾಲ್ಕು ರೀತಿ ವಿಂಗಡಿಸಿದ್ದು ಅವು ದೇವ, ನಾರಕ, ಮನುಷ್ಯ ಮತ್ತು ತಿರ್ಯಕ್ ಎಂಬವುಗಳಾಗಿವೆ. ಚಿನ್ನವು ಪರಿಶುದ್ಧವಾಗಿದ್ದು ಅದು ಕಲ್ಲಿನೊಂದಿಗೆ ಸೇರಿರುತ್ತದೆ. ಹಾಗಿದ್ದರೂ ಕೂಡ ಅದು ತನ್ನ ಪರಿಶುದ್ಧತೆಯನ್ನು ಕಳೆದುಕೊಂಡಿರುವುದಿಲ್ಲ. ಕಲ್ಲಿನೊಡನೆ ಚಿನ್ನವು ಸೇರಿದ್ದರೂ ಅದರಿಂದ ಚಿನ್ನವನ್ನು ಬೇರ್ಪಡಿಸುವುದು ಸಾಧ್ಯ. ಬೇರ್ಪಡಿಸಿದ ಚಿನ್ನವನ್ನು ಮತ್ತೆ ಕಲ್ಲಿನೊಡನೆ ಮಿಶ್ರಮಾಡಲು ಸಾಧ್ಯವಿಲ್ಲ. ಕಲ್ಲು ಚಿನ್ನದೊಡನೆ ಯಾವಾಗ ಸೇರಿತು ಎಂದು ಹೇಳಲು ಸಾಧ್ಯವಿಲ್ಲದಿದ್ದರೂ ಕಲ್ಲಿನಿಂದ ಚಿನ್ನವನ್ನು ಬೇರ್ಪಡಿಸಲು ಸಾಧ್ಯವಿದೆ. ಹೀಗೆ ಕರ್ಮದ ಆರಂಭ ತಿಳಿಯಲಾಗದಿದ್ದರೂ ಅದು ಅನಾದಿಯಾಗಿದ್ದರೂ ಅದರ ಬಂಧನವನ್ನು ಕಳಚಿ ಜೀವವು ಮೋಕ್ಷವನ್ನು ಪಡೆಯಲು ಸಾಧ್ಯವಿದೆ.

ಕರ್ಮಗಳಲ್ಲಿ ಘಾತಿ, ಅಘಾತಿ ಎಂದು ಎರಡು ಬಗೆ ಇದೆ. ಜೀವಕ್ಕೆ ಸಹಜವಾಗಿರುವ ಅನಂತಗುಣಗಳಿಗೆ ಕೇಡುಮಾಡುವ ಅಂದರೆ ಜೀವವನ್ನು ಸಂಸಾರಬಂಧನದಲ್ಲಿ ಸಿಲುಕಿಸಿ ಅದು ತನ್ನ ಸಹಜಸ್ಥಿತಿಯನ್ನು ಪಡೆಯದಂತೆ ತಡೆದಿರುವ ಕರ್ಮವೇ ಘಾತಿಕರ್ಮವಾಗಿರುತ್ತದೆ. ಘಾತಿಯುಂಟುಮಾಡದ ಕರ್ಮಗಳು ಅಘಾತಿಕರ್ಮಗಳು. ಜೀವ-ಕರ್ಮಗಳ ಬಂಧನ ಮತ್ತು ಮೋಕ್ಷವನ್ನು ಜೈನಸಿದ್ಧಾಂತವು ಸಪ್ತತತ್ತ್ವಗಳ ಮೂಲಕ ವಿವರಿಸಿ ಅನಂತರ ಜೀವರುಗಳ ಮೋಕ್ಷದ ದಾರಿಯನ್ನು ನಿರ್ದೇಶಿಸಿರುತ್ತದೆ.

**ಸಪ್ತ ತತ್ತ್ವಗಳು :** ಜೀವಿಗಳು ಕರ್ಮದ ಕಟ್ಟಿಗೆ ಸಿಲುಕಿ ಸಂಸಾರಬಂಧನಕ್ಕೆ ಒಳಗಾಗುವ ಮತ್ತು ಬಿಡುಗಡೆಹೊಂದುವ ಹಂತಗಳ ಸರಪಣಿಯೇ ಸಪ್ತತತ್ತ್ವಗಳಾಗಿವೆ. ಅವು ಯಾವುವೆಂದರೆ :

(೧) ಜೀವ, (೨) ಅಜೀವ, (೩) ಆಸ್ರವ, (೪) ಬಂಧ, (೫) ಸಂವರ, (೬) ನಿರ್ಜರ, (೭) ಮೋಕ್ಷ.

ಚೈತನ್ಯಸ್ವರೂಪವಾದುದು 'ಜೀವ', ಅಚೇತನವಾದುದು 'ಅಜೀವ'. ಜೀವ ಮತ್ತು ಅಜೀವದ್ರವ್ಯಗಳ ಸಂಬಂಧವಾಗಿ ಜೀವವು ಕರ್ಮಾಣುಗಳನ್ನು ತನ್ನ ಕಡೆಗೆ ಸೆಳೆಯುತ್ತದೆ. ಹೀಗೆ ಕರ್ಮಾಣುವು ಅರ್ಥಾತ್ ಕರ್ಮವು ಜೀವದೊಳಕ್ಕೆ ಹರಿದುಬರುವುದನ್ನೇ 'ಆಸ್ರವ' ಎಂದು ಹೇಳುತ್ತಾರೆ. ಹರಿದುಬಂದ ಕರ್ಮವು ಜೀವವನ್ನು ಅಂಟಿಕೊಂಡು ಬಂಧಿಸುವುದಕ್ಕೆ 'ಬಂಧ' ಎಂದು ಹೆಸರು. ಜೀವವು ಈ ಬಂಧದ ಫಲವನ್ನು ಮುಕ್ತಿಯು

ತನಕ ಅನುಭವಿಸಲೇಬೇಕು. ಜೀವವು ಕರ್ಮಫಲವನ್ನು ಅನುಭವಿಸುತ್ತಾ ಹೋದಂತೆ ಅದರ ಫಲವಾಗಿ ಹೊಸ ಫಲಗಳು ಜೀವವನ್ನು ಸೇರುತ್ತಲೇ ಇರುತ್ತವೆ. ಹೊಸ ಕರ್ಮಗಳು ಬಾರದಂತೆ ತಪಸ್ಸಿನಿಂದ ತಡೆಗಟ್ಟುವುದನ್ನೇ 'ಸಂವರ' ಎಂದು ಹೇಳುವುದಾಗಿದೆ. ಸಂವರದಿಂದಾಗಿ ಹೊಸ ಕರ್ಮಗಳು ಬಂದು ಸೇರುವಂತಿಲ್ಲವಾದರೂ ಆಗಲೇ ಬಂದು ಸೇರಿದ ಕರ್ಮಗಳ ಫಲಗಳನ್ನು ಅನುಭವಿಸಲೇಬೇಕು. ಹೊಸದಾದ ಕರ್ಮ ಹರಿದುಬಂದು ಜೀವವನ್ನು ಸೇರುವುದು ತಪ್ಪಿದರೂ ಆ ಮೊದಲೇ ಜೀವಕ್ಕೆ ಅಂಟಿಕೊಂಡಿರುವ ಕರ್ಮ ಇದ್ದೇ ಇರುತ್ತವೆ. ಆ ಕರ್ಮವೂ ಜೀರ್ಣವಾಗಿಹೋಗುವುದಕ್ಕೆ 'ನಿರ್ಜರ' ಎಂದು ಹೆಸರು. ಕರ್ಮವು ಫಲವನ್ನು ಕೊಟ್ಟು, ತಾನಾಗಿಯೇ ಜೀವದಿಂದ ಕಳಚಿಬೀಳುತ್ತದೆ; ಇದೇ ಸವಿಪಾಕನಿರ್ಜರ. ಕರ್ಮಗಳು ಸಹಜವಾಗಿ ಪರಿಪಕ್ವವಾಗಿ ಕ್ಷಯಹೊಂದುವ ಮೊದಲೇ ಮಾವಿನಕಾಯಿಯನ್ನು ಅಡೆಹಾಕಿ ಹಣ್ಣುಮಾಡುವಂತೆ ಪಕ್ವಗೊಳಿಸಿ ಅವುಗಳನ್ನು ಅನುಭವಿಸಿ ಕರ್ಮಕ್ಷಯ ಮಾಡುವುದಕ್ಕೆ 'ಅವಿಪಾಕನಿರ್ಜರ' ಎಂದು ಹೆಸರು. ಘಾತಿ ಮತ್ತು ಅಘಾತಿ ಕರ್ಮಗಳೆಲ್ಲವನ್ನೂ ಪೂರ್ತಿಯಾಗಿ ಕಳೆದುಕೊಂಡು ಜೀವವು ಕರ್ಮಬಂಧನದಿಂದ ವಿಮುಕ್ತಿಹೊಂದುವುದೇ ಮೋಕ್ಷ. ಕಲ್ಲಿನಿಂದ ಬೇರೆ ಮಾಡಲ್ಪಟ್ಟ ಚಿನ್ನವು ಕಲ್ಲನ್ನು ಹೇಗೆ ಸೇರುವುದಿಲ್ಲವೋ ಹಾಗೆಯೇ ಕರ್ಮಬಂಧನದಿಂದ ಸಂವರ ಮತ್ತು ನಿರ್ಜರೆಗಳ ಮೂಲಕ ಬೇರೆ ಮಾಡಲ್ಪಟ್ಟ ಜೀವವು ಪುನಃ ಕರ್ಮವನ್ನು ಸೇರುವುದಿಲ್ಲ. ಇದೇ ಮುಕ್ತಿ.

**ಅಷ್ಟವಿಧ ಕರ್ಮಬಂಧಗಳು :** ಜೈನದರ್ಶನದಲ್ಲಿ ಜೀವನು ಅನಾದಿಯಿಂದಲೂ ಘಾತಿ ಮತ್ತು ಅಘಾತಿ ಎಂಬ ಅಷ್ಟವಿಧದ ಕರ್ಮಬಂಧಗಳಿಗೆ ಸಿಲುಕಿರುತ್ತಾನೆಂದು ಹೇಳಲಾಗಿದೆ ಎಂದು ಈಗಾಗಲೇ ಪ್ರಸ್ತಾಪಿಸಿ ಇದೀಗ ಅಷ್ಟಕರ್ಮಬಂಧಗಳ ವಿವರವನ್ನು ವಿಚಾರ ಮಾಡೋಣ.

**ಅಷ್ಟವಿಧ ಕರ್ಮಬಂಧಗಳು ಯಾವುವೆಂದರೆ :**

**ಘಾತಿ ಕರ್ಮಬಂಧಗಳು :** (೧) ಜ್ಞಾನ ಆವರಣೀಯ, (೨) ದರ್ಶನ ಆವರಣೀಯ, (೩) ಮೋಹನೀಯ, (೪) ಅಂತರಾಯ.

**ಅಘಾತಿ ಕರ್ಮಬಂಧಗಳು :** (೫) ವೇದನೀಯ, (೬) ಆಯುಷ್ಯ-ಕರ್ಮ, (೭) ನಾಮ, (೮) ಗೋತ್ರ.

೧. **ಜ್ಞಾನ ಆವರಣೀಯ :** ಜೀವನಿಗೆ ಅನಂತಜ್ಞಾನವನ್ನು ಮರೆಮಾಡುವ ಕರ್ಮವೇ ಜ್ಞಾನ ಆವರಣೀಯ ಕರ್ಮ.

೨. **ದರ್ಶನ ಆವರಣೀಯ :** ಜೀವನಿಗೆ ಅನಂತದರ್ಶನವನ್ನು ಮರೆಮಾಡುವ ಅಂದರೆ ಅನಂತದರ್ಶನವಾಗದಂತೆ ಮಾಡುವ ಕರ್ಮವೇ ದರ್ಶನ ಆವರಣೀಯ ಕರ್ಮವಾಗುತ್ತದೆ. ಜೀವನಿಗೆ ಸಮ್ಯಾವಲೋಕನ ರೂಪದರ್ಶನದ ಉಪಯೋಗವು ಆಗದಂತೆ ಮಾಡುವ ಕರ್ಮವೆಂದು ತಾತ್ಪರ್ಯ.

೩. **ಮೋಹನೀಯ ಕರ್ಮ :** ಜೀವನ ಸಮ್ಯಕ್ತ್ವ ಮತ್ತು ಚಾರಿತ್ರಗುಣಗಳನ್ನು ಘಾತಿಸುವ ಕರ್ಮವೇ ಮೋಹನೀಯಕರ್ಮ. ಮೋಹನೀಯಕರ್ಮದಿಂದಾಗಿ ಜೀವನವು

ಜಗತ್ತಿನಲ್ಲಿ ಮೋಹಕ ವಸ್ತುಗಳ ಆಕರ್ಷಣೆಗೆ ಸಿಲುಕಿ ಅನಂತಸುಖವನ್ನು ಕಳೆದುಕೊಂಡು ಸಂಸಾರಬಂಧನಕ್ಕೆ ಒಳಗಾಗುತ್ತಾನೆ.

೪. **ಅಂತರಾಯಕರ್ಮ :** ದಾನ, ಲಾಭ, ಭೋಗ, ಉಪಭೋಗ ಮತ್ತು ವೀರ್ಯ (ಬಲ) ಇವುಗಳಲ್ಲಿ ವಿಘ್ನವನ್ನು ತರುವ ಕರ್ಮವೇ ಅಂತರಾಯಕರ್ಮ. ಇದರಿಂದ ಜೀವನು ಸತ್ಕರ್ಮಗಳಲ್ಲಿ ನಿರತನಾಗಲು ಅಡ್ಡಿಯುಂಟಾಗುತ್ತದೆ.

೫. **ವೇದನೀಯಕರ್ಮ :** ಯಾವುದು ಜೀವನಿಗೆ ಸುಖ ಮತ್ತು ದುಃಖವನ್ನು ಉಂಟು ಮಾಡುತ್ತದೆಯೋ ಅದೇ ವೇದನೀಯಕರ್ಮ.

೬. **ಆಯುಷ್ಯಕರ್ಮ :** (ಆಯುಃಕರ್ಮ) ಯಾವ ಕರ್ಮವು ಜೀವವನ್ನು ನಾರಕ, ತಿರ್ಯಂಚ, ಮನುಷ್ಯ ಮತ್ತು ದೇವ ಇವುಗಳ ಶರೀರದಲ್ಲಿ ತಡೆದು ನಿಲ್ಲಿಸಿ ಜೀವಿಯ ಆಯುಸ್ಸನ್ನು ನಿರ್ಧರಿಸುತ್ತಿದೆಯೋ ಅದೇ ಆಯುಃಕರ್ಮವಾಗಿರುತ್ತದೆ.

೭. **ನಾಮಕರ್ಮ :** ಜೀವಿಯ ವ್ಯಕ್ತಿತ್ವಲಕ್ಷಣವಾದ ದೇಹ, ಎತ್ತರ, ಆಕಾರ, ಬಣ್ಣ ಇತ್ಯಾದಿಗಳನ್ನು ಗೊತ್ತುಮಾಡುವ ಕರ್ಮವೇ ನಾಮಕರ್ಮ. ಜೀವವನ್ನು ನಾನಾರೂಪವಾಗಿ ಪರಿಣಮಿಸುವಂತೆ ಯಾವುದು ಮಾಡುತ್ತದೆಯೋ ಅದು ನಾಮಕರ್ಮ ಎಂದು ತಾತ್ಪರ್ಯ.

೮. **ಗೋತ್ರಕರ್ಮ :** ಜೀವಿಯು ಹುಟ್ಟುವ ಜಾತಿ ಕುಲ ಗೋತ್ರಗಳನ್ನು ನಿರ್ಧರಿಸುವ ಕರ್ಮವನ್ನು ಗೋತ್ರಕರ್ಮ ಎನ್ನುತ್ತಾರೆ.

**ಮೋಕ್ಷಕ್ಕೆ ದಾರಿ :** ಜೀವನು ಕರ್ಮದ ಈ ಅಷ್ಟಬಂಧನಗಳಿಂದ ಪಾರಾಗಲು ಜೈನದರ್ಶನವು ಸಮ್ಯಕ್ ದರ್ಶನ, ಸಮ್ಯಕ್ ಜ್ಞಾನ, ಸಮ್ಯಕ್ ಚಾರಿತ್ರ್ಯ ಎಂಬ ಸಾಧನಸೂತ್ರಗಳನ್ನು ಹೇಳಿರುತ್ತದೆ. ಇದನ್ನು 'ರತ್ನತ್ರಯ' ಅಥವಾ ಮೋಕ್ಷಸಾಧನೆಗೆ ನೆರವಾಗುವ ರತ್ನಪ್ರಾಯವಾದ ಮೂರು ಹಾದಿಗಳು ಎಂದು ಕರೆಯುತ್ತಾರೆ.

**ಸಮ್ಯಕ್ ದರ್ಶನ :** ಜಿನರಲ್ಲಿ ಮತ್ತು ಜಿನೋಪದಿಷ್ಟವಾದ ತತ್ತ್ವಗಳಲ್ಲಿ ಯಥಾವತ್ತಾದ ನಂಬಿಕೆಯನ್ನು ಇಡುವುದೇ ಸಮ್ಯಕ್ ದರ್ಶನ. ಭೂತದಯೆ, ಧರ್ಮಾನುರಾಗ, ಶಾಂತಿ, ಇಂದ್ರಿಯಸಂಯಮ ಇವುಗಳೆಲ್ಲ ಸಮ್ಯಕ್ ದರ್ಶನದ ಲಕ್ಷಣಗಳು.

**ಸಮ್ಯಕ್ ಜ್ಞಾನ :** ಯಥಾವತ್ತಾದ ವಸ್ತುನಿರ್ಣಯವು ಸಮ್ಯಕ್ ಜ್ಞಾನ. ಸಮ್ಯಕ್ ದರ್ಶನದಿಂದ ಗ್ರಹಿಸಿದ ವಿಚಾರಗಳನ್ನು ಬುದ್ಧಿಯಿಂದ ಸ್ಪಷ್ಟವಾಗಿ ತಿಳಿದು ಜೀವ-ಅಜೀವಾದಿ ಪದಾರ್ಥಗಳನ್ನು ಯಥಾವತ್ತಾಗಿ ಅರಿತುಕೊಳ್ಳುವುದೇ ಸಮ್ಯಕ್ ಜ್ಞಾನ ಎಂದು ತಾತ್ಪರ್ಯ.

**ಸಮ್ಯಕ್ ಚಾರಿತ್ರ್ಯ :** ಸಂಸಾರನಿವೃತ್ತಿಗೆ ಕಾರಣವಾದ ಬಾಹ್ಯ ಮತ್ತು ಆಂತರ್ಯದ ಆಚರಣೆಯೇ ಸಮ್ಯಕ್ ಚಾರಿತ್ರ್ಯ. ಸಮ್ಯಕ್ ದರ್ಶನದಿಂದ ಕಂಡ ವಿಚಾರಗಳನ್ನು ಸಮ್ಯಗ್‌ಜ್ಞಾನದ ಮೂಲಕ ಯಥಾವತ್ತಾಗಿ ತಿಳಿದುಕೊಂಡು ಅದರಂತೆ ಸರಿಯಾಗಿ ನಡೆದುಕೊಳ್ಳುವುದೇ ಸಮ್ಯಕ್ ಚಾರಿತ್ರ್ಯ ಎಂದು ತಾತ್ಪರ್ಯ. ರತ್ನತ್ರಯಗಳನ್ನು ಸರಿಯಾಗಿ ಜೀವನದಲ್ಲಿ ಪಾಲಿಸಲು ಮತ್ತು ಅವುಗಳ ಫಲ ಪಡೆಯಲು ಜೀವನಿಗೆ ನೆರವಾಗುವುದಕ್ಕೆ ಸಪ್ತಸೂತ್ರಗಳನ್ನು ಜೈನದರ್ಶನದಲ್ಲಿ ಹೇಳಲಾಗಿದೆ. ಅವು ಯಾವುವೆಂದರೆ :

(೧) ಮಹಾವ್ರತ : ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ.

(೨) ಸಮಿತಿ : ನಡೆ, ನುಡಿ, ಭಿಕ್ಷೆ ಪರಿಗ್ರಹಿಸುವಿಕೆ, ಮಲಶುದ್ಧಿ ಮಾಡುವಿಕೆ ಇತ್ಯಾದಿಗಳಲ್ಲಿ ಅತ್ಯಂತ ಜಾಗರೂಕತೆ ವಹಿಸುತ್ತಾ ಯಾವ ರೀತಿಯಲ್ಲೂ ತೊಂದರೆಯನ್ನು ಇತರರಿಗೆ ಉಂಟುಮಾಡದೆ ಇರುವಿಕೆ.

(೩) ಗುಪ್ತಿ : ಯೋಚನೆ, ವಚನ ಮತ್ತು ದೇಹಚಲನೆಗಳಲ್ಲಿ ಅತ್ಯಂತ ಸಂಯಮವನ್ನು ಅನುಷ್ಠಾನಕ್ಕೆ ತರುವಿಕೆ.

(೪) ದಶಧರ್ಮಗಳ ಪಾಲನೆ : ಕ್ಷಮೆ, ವಿನಯ, ಬಾಹ್ಯ ಮತ್ತು ಅಂತರಂಗವಾದ ಸಂಯಮ, ತ್ಯಾಗ, ಪ್ರಾಮಾಣಿಕತೆ, ಸತ್ಯಸಂಧತೆ, ಪರಿಶುದ್ಧತೆ, ಆತ್ಮಸಂಯಮ. ಆಕಿಂಚನತ್ವ (ಅಸಂಗತ್ವ), ಬ್ರಹ್ಮಚರ್ಯ ಇವುಗಳೇ ದಶಧರ್ಮಗಳು.

(೫) ಜೀವ ಮತ್ತು ಜಗತ್ತಿನ ವಿಚಾರವಾಗಿ ಬೋಧಿಸಲ್ಪಟ್ಟ ಮುಖ್ಯ ತತ್ತ್ವಗಳ ವಿಚಾರವಾಗಿ ಧ್ಯಾನಚಿಂತನೆಗಳನ್ನು ಮಾಡುವಿಕೆ.

(೬) ಹಸಿವು, ಬಾಯಾರಿಕೆ, ಶೀತೋಷ್ಣ ಇತ್ಯಾದಿಗಳಿಂದಾಗಿ ಅನುಭವಕ್ಕೆ ಬರುವ ಅಸೌಖ್ಯಗಳನ್ನು ಸಹನೆಯ ಮೂಲಕ ಜಯಿಸುವಿಕೆ.

(೭) ಪರಿಪೂರ್ಣವಾದ ಶುದ್ಧಚಾರಿತ್ರ್ಯ, ಪರಿಪೂರ್ಣವಾದ ನಿರ್ಮಮತೆ, ಪರಿಶುದ್ಧತೆ ಮತ್ತು ಸಮಭಾವನೆಗಳನ್ನು ಸಾಧಿಸುವಿಕೆ. ಈ ಏಳು ಸೂತ್ರಗಳಲ್ಲಿ ಪಂಚವ್ರತಗಳೇ (ಮಹಾವ್ರತಗಳೇ) ಮುಖ್ಯವಾಗಿದ್ದು ಅವುಗಳ ಸತ್ಯಪೂರ್ಣವಾದ ಪಾಲನೆಯಿಂದ ಈ ಸಪ್ತಸೂತ್ರಗಳ ಪಾಲನೆಮಾಡಿದುದರ ಫಲ ಬರುತ್ತದೆ ಎಂದು ಜೈನರಲ್ಲಿ ನಂಬಿಕೆ ಇದೆ. ಜೈನರಲ್ಲಿ ಸಾಮಾನ್ಯವಾಗಿ ಗೃಹಸ್ಥರು ಮತ್ತು ಸನ್ಯಾಸಿಗಳು ಎಂದು ಎರಡು ಸಮಾಜಭೇದಗಳಿವೆ. ಗೃಹಸ್ಥರಲ್ಲಿ ಗಂಡಸರನ್ನು ಶ್ರಾವಕ, ಉಪಾಸಕ ಎಂದೂ ಹೆಂಗಸರನ್ನು ಶ್ರಾವಿಕೆ, ಉಪಾಸಿಕೆ ಎಂದೂ ಕರೆಯುತ್ತಾರೆ. ವೈರಾಗ್ಯಯುಕ್ತರಾಗಿ ಸಂನ್ಯಾಸದೀಕ್ಷೆ ವಹಿಸಿದ ಗಂಡಸರನ್ನು ನಿಗ್ರಂಥ, ಸಾಧು ಎಂದೂ ಮುನಿಗಳು ಎಂದೂ ಕರೆಯುತ್ತಾರೆ. ಹಾಗೆಯೇ ಹೆಂಗಸರನ್ನು ನಿರ್ಗ್ರಂಥೀ, ಸಾಧ್ವೀ, ಆರ್ಯಿಕೆ ಎಂದೂ ಕರೆಯುವ ವಾಡಿಕೆ ಇದೆ.

ಸಂನ್ಯಾಸಿಗಳು ಆಚಾರವನ್ನು ಬಹಳ ಕಟ್ಟುನಿಟ್ಟಾಗಿ ಆಚರಿಸಬೇಕಾಗಿದ್ದು ಅವರ ಆಚಾರಗಳು ಬಹು ಕಠಿಣವಾಗಿರುತ್ತವೆ. ಗೃಹಸ್ಥರ ಆಚಾರವೂ ಸಾಕಷ್ಟು ಕಟ್ಟುನಿಟ್ಟುಗಳಿಂದ ಕೂಡಿದ್ದು ಸಂನ್ಯಾಸಿಗಳ ಆಚಾರನಿಯಮಗಳ ಒಡನೆ ಹೋಲಿಸಿದರೆ ಮಾತ್ರ ಸುಲಭವಾದುದಾಗಿದೆ.

ಜೈನರು ಪೂಜಿಸುವ ಪರಮೇಶ್ವರನನ್ನು ಪಂಚಪರಮೇಷ್ಠಿಗಳೆಂದು ಕರೆಯುತ್ತಾರೆ. ಜೈನಮತದಲ್ಲಿ ಪಂಚಪರಮೇಷ್ಠಿಗಳ ಸ್ಥಾನ ಅತ್ಯಂತ ಮಹತ್ವ ಮತ್ತು ಪವಿತ್ರವಾದುದು. ಅರ್ಹತ್, ಸಿದ್ಧ, ಆಚಾರ್ಯ, ಉಪಾಧ್ಯಾಯ ಮತ್ತು ಸಾಧು ಎಂಬವರೇ ಪಂಚಪರಮೇಷ್ಠಿಗಳು.

ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ ಮತ್ತು ಸಮ್ಯಕ್‌ಚಾರಿತ್ರ್ಯ ಎಂಬ ರತ್ನತ್ರಯಗಳ ತ್ರಿವೇಣೀಸಂಗಮದಲ್ಲಿ ಸಾಧನಾಸ್ನಾನ ಮಾಡಿದವನು ಕರ್ಮಬಂಧದಿಂದ ಮುಕ್ತನಾಗುತ್ತಾನೆ.

ಜೈನದರ್ಶನದ ಗ್ರಂಥಗಳಲ್ಲಿ ಸಾಧು, ಉಪಾಧ್ಯಾಯ, ಆಚಾರ್ಯ, ಸಿದ್ಧ, ಅರ್ಹತ

ಇವರುಗಳ ಕುರಿತಾಗಿ ವಿಸ್ತಾರವಾದ ವಿವರಣೆಗಳು ಕಂಡುಬರುತ್ತಿದ್ದು ತೀರ್ಥಂಕರರು ಸಿದ್ಧಪರಮೇಷ್ಠಿಗಳು—ಈ ವಿಚಾರವಾಗಿ ವಿಶೇಷವಾದ ಮಾಹಿತಿಗಳು ನಮಗೆ ಸಿಗುತ್ತವೆ. ಕರ್ಮಬಂಧಗಳಿಗೆ ಸಿಲುಕಿದ ಜೀವನು ಕರ್ಮಮುಕ್ತನಾಗಿ ಅತ್ಯುನ್ನತ ಪದವಿಯಾದ ಸಿದ್ಧಪರಮೇಷ್ಠಿ ಪದವಿಯನ್ನು ಪಡೆಯಲು ಸಾಧ್ಯವಿದೆ ಎಂದು ಜೈನದರ್ಶನದಲ್ಲಿ ತಿಳಿಸಲಾಗಿದೆ.

ದೇವರನ್ನು ಜಗತ್ತಿನ ಕರ್ತೃ ಎಂದು ಒಪ್ಪದ ಜೈನದರ್ಶನದಲ್ಲಿ ಕರ್ಮಬಂಧಗಳಿಂದ ವಿಮುಕ್ತರಾದ ಪವಿತ್ರರಾದ ಪಂಚಪರಮೇಷ್ಠಿಗಳ ಪೂಜೆ, ಆರಾಧನೆ ಸೇರಿರುತ್ತವೆ. ಸದ್ವರ್ತನೆ, ಸದಾಚಾರ, ಸತ್ಸಂಕಲ್ಪಗಳಿಂದ ಕರ್ಮಬಂಧಗಳನ್ನು ಹರಿಯಲೆಂದು ರತ್ನತ್ರಯ ಸಾಧನಸೂತ್ರಗಳನ್ನು ಹೇಳಿರುವ ಜೈನದರ್ಶನದ ರೀತಿಯಾಗಿ ಕರ್ಮಬಂಧದಿಂದ ವಿಮುಕ್ತನಾದವನು ಜಿನನು (ಗೆದ್ದವನು) ಮಾತ್ರವಲ್ಲದೆ ವೀರ(ಸಾಹಸಿ)ನೂ ಹೌದಾಗಿರುತ್ತಾನೆ.

ಅರ್ಹತ್ ಪ್ರವಚನ ಸಂಗ್ರಹ, ಪರಮಾಗಮಸಾರ, ದ್ವಾದಶಾಂಗ ಸೂತ್ರಗಳು, ತತ್ತ್ವಾರ್ಥಾಧಿಗಮ ಸೂತ್ರ ಎಂಬ ಗ್ರಂಥಗಳು ಜೈನದರ್ಶನಕ್ಕೆ ಸಂಬಂಧಿಸಿದ ಆಧಾರ ಗ್ರಂಥಗಳಲ್ಲಿ ಪ್ರಸಿದ್ಧವಾದವುಗಳಾಗಿವೆ.

ಜೈನರಲ್ಲಿ ಸರ್ವಮಂಗಳಗಳಿಗೂ ಮೊದಲು ಮಂಗಳವೆಂದು ನಂಬಲಾದ ಪಂಚ ಪರಮೇಷ್ಠಿಗಳ ನಮಸ್ಕಾರ ಮಂತ್ರವು ಅತಿಪವಿತ್ರವಾದುದಾಗಿದ್ದು ಅದನ್ನು ಜೈನರ ಗಾಯತ್ರಿ ಎಂದು ಕರೆಯುವ ವಾಡಿಕೆ ಇದೆ. ಆ ಪವಿತ್ರ ಮಂತ್ರ ಯಾವುದೆಂದರೆ :

> **''ಣಮೋ ಅರಹಂತಾಣಂ. ಣಮೋ ಸಿದ್ಧಾಣಂ, ಣಮೋ ಆಯಾರಿಯಾಣಂ**
> **ಣಮೋ ಉವಜ್ಝಾಯಾಣಂ, ಣಮೋ ಲೋಏ ಸಬ್ಬ ಸಾಹೂಣಂ''**

"ಅರ್ಹಂತರಿಗೆ ನಮಸ್ಕಾರ, ಸಿದ್ಧರಿಗೆ ನಮಸ್ಕಾರ, ಆಚಾರ್ಯರಿಗೆ ನಮಸ್ಕಾರ, ಉಪಾಧ್ಯಾಯರಿಗೆ ನಮಸ್ಕಾರ, ಲೋಕದಲ್ಲಿರುವ ಸರ್ವಸಾಧುಗಳಿಗೆ ನಮಸ್ಕಾರ."

**ಆಸ್ತಿಕ ದರ್ಶನಗಳು (ವೈದಿಕ ದರ್ಶನಗಳು)**

(೧) **ನ್ಯಾಯದರ್ಶನ:** ನ್ಯಾಯದರ್ಶನದ ಆದ್ಯಪ್ರವರ್ತಕರು ಮಹರ್ಷಿ ಗೌತಮರು. ಇವರಿಗೆ ಅಕ್ಷಪಾದ ಎಂಬ ಇನ್ನೊಂದು ಹೆಸರೂ ಇದೆ. ಹಾಗಾಗಿ ನ್ಯಾಯದರ್ಶನವನ್ನು ಅಕ್ಷಪಾದದರ್ಶನ ಎಂದೂ ಕರೆಯುತ್ತಾರೆ. ಪದಾರ್ಥಗಳನ್ನು ಪ್ರಮಾಣಗಳಿಂದ ಪರೀಕ್ಷೆ ಮಾಡುವ ಶಾಸ್ತ್ರವೇ 'ನ್ಯಾಯ'. ಪ್ರತಿಯೊಂದು ವಿಚಾರವನ್ನೂ ತರ್ಕಬದ್ಧವಾಗಿ ಪರಿಶೀಲಿಸಿ ಸಕಾರಣವಾಗಿ ಜೀವನ, ಜಗತ್ತು, ಆತ್ಮ ಇತ್ಯಾದಿ ವಿಚಾರಗಳ ಬಗ್ಗೆ ನ್ಯಾಯ ದರ್ಶನವು ವಿವರಣೆಗಳನ್ನು ನೀಡುತ್ತದೆ. ತರ್ಕದಿಂದ ಕೂಡಿರುವ ಶಾಸ್ತ್ರವಾದ್ದರಿಂದ ಇದಕ್ಕೆ ತರ್ಕಶಾಸ್ತ್ರ ಎಂಬ ಹೆಸರೂ ಬಂದಿರುತ್ತದೆ. ಹಾಗೆಯೇ ವಿಮರ್ಶಾತ್ಮಕ ದೃಷ್ಟಿಯಿಂದ ಜೀವನ, ಜಗತ್ತು, ಆತ್ಮ ಇತ್ಯಾದಿ ವಿಚಾರಗಳನ್ನು ಪರಿಶೀಲಿಸುವುದರಿಂದ ಇದಕ್ಕೆ ಆನ್ವೀಕ್ಷಿಕೀ ಎಂದೂ ಹೆಸರಿದೆ. ನ್ಯಾಯದರ್ಶನವು ತರ್ಕಬದ್ಧವಾಗಿರುವುದಾದರೂ ಜೀವನದ ಪರಮಗುರಿ ಆತ್ಮಸಾಕ್ಷಾತ್ಕಾರ ಅಥವಾ ಮೋಕ್ಷ ಎಂಬುದನ್ನು ಹೇಳಿ ಮೋಕ್ಷಕ್ಕೆ ಹಾದಿಯನ್ನು ತರ್ಕ ಮತ್ತು ಯುಕ್ತಿಗಳಿಂದ ಪ್ರತಿಪಾದಿಸಿರುತ್ತದೆ.

ನ್ಯಾಯದರ್ಶನದ ಆಧಾರಸ್ತಂಭಗಳು ನಾಲ್ಕು ಪ್ರಮಾಣಗಳು ಮತ್ತು ಹದಿನಾರು ವಿಷಯಪರಿಶೀಲನೆಗಳಾಗಿವೆ. ಒಟ್ಟಿನಲ್ಲಿ ನ್ಯಾಯದರ್ಶನದಲ್ಲಿ ಪ್ರತಿಪಾದಿಸಿದ ತತ್ತ್ವಗಳನ್ನು ಮುಖ್ಯವಾಗಿ ನಾಲ್ಕು ವಿಭಾಗಗಳಾಗಿ ಮಾಡಬಹುದು :

(೧) ಜ್ಞಾನದ ತತ್ತ್ವವಿಚಾರಗಳು, (೨) ಜಗತ್ತಿನ ತತ್ತ್ವವಿಚಾರಗಳು, (೩) ಆತ್ಮದ ತತ್ತ್ವ ಮತ್ತು ಆತ್ಮನ ಮೋಕ್ಷದ ವಿಚಾರ, (೪) ದೇವರ ತತ್ತ್ವವಿಚಾರ.

ನಾಲ್ಕು ಪ್ರಮಾಣಗಳನ್ನು ನ್ಯಾಯದರ್ಶನವು ಸ್ವೀಕರಿಸಿದೆ. ಅವು ಯಾವುವೆಂದರೆ :

(೧) ಪ್ರತ್ಯಕ್ಷಪ್ರಮಾಣ, (೨) ಅನುಮಾನಪ್ರಮಾಣ, (೩) ಶಬ್ದಪ್ರಮಾಣ, (೪) ಉಪಮಾನಪ್ರಮಾಣ.

ಆತ್ಮವು ಅಮರವಾಗಿದ್ದು ಅದು ಶರೀರದಿಂದ ಬೇರೆಯಾಗಿದೆ ಎಂದು ನ್ಯಾಯದರ್ಶನವು ಹೇಳುತ್ತದೆ. ಈ ಶರೀರ ಎಂದರೇನು ? ಆತ್ಮ ಎಂದರೇನು ? ಶರೀರಿಯು ಆತ್ಮಸಾಕ್ಷಾತ್ಕಾರವನ್ನು ಪಡೆಯಲು ಹೇಗೆ ಸಾಧ್ಯ ? ಎನ್ನುವ ಮುನ್ನ ನಾಲ್ಕು ಪ್ರಮಾಣಗಳ ಮೂಲಕ ಆತ್ಮ-ಶರೀರಗಳ ಇರುವಿಕೆಗಳನ್ನು ಸ್ಪಷ್ಟಪಡಿಸಿ ಅನಂತರ ಆತ್ಮಸಾಕ್ಷಾತ್ಕಾರ, ಆತ್ಮಜ್ಞಾನಗಳಿಗೆ ಇರುವ ವಿಚಾರಮಾರ್ಗವನ್ನು ತಿಳಿಸುತ್ತದೆ. ವಿಚಾರಕ್ಕೆ ಸಹಾಯವಾಗುವ ಹದಿನಾರು ಅಂಶಗಳು ನ್ಯಾಯದರ್ಶನದಲ್ಲಿ ಹೀಗೆ ನಿರೂಪಿಸಲ್ಪಟ್ಟಿರುತ್ತವೆ :

(೧) ಪ್ರಮಾಣ, (೨) ಪ್ರಮೇಯ, (೩) ಸಂಶಯ, (೪) ಪ್ರಯೋಜನ, (೫) ದೃಷ್ಟಾಂತ, (೬) ಸಿದ್ಧಾಂತ, (೭) ಅವಯವ, (೮) ತರ್ಕ, (೯) ನಿರ್ಣಯ, (೧೦) ವಾದ, (೧೧) ಜಲ್ಪ, (೧೨) ವಿತಂಡ, (೧೩) ಹೇತ್ವಾಭಾಸ, (೧೪) ಛಲ, (೧೫) ಜಾತಿ, (೧೬) ನಿಗ್ರಹಸ್ಥಾನ.

೧. **ಪ್ರಮಾಣ :** ಸರಿಯಾದ ತಿಳಿವಳಿಕೆಗೆ ಇದು ಸಹಾಯಮಾಡುವ ಮೊದಲ ಹೆಜ್ಜೆಯಾಗಿದ್ದು ಇದರಲ್ಲಿ ನಾಲ್ಕು ಒಳಭೇದಗಳಿವೆ : (೧) ಪ್ರತ್ಯಕ್ಷ, (೨) ಅನುಮಾನ, (೩) ಶಬ್ದ, (೪) ಉಪಮಾನ.

೨. **ಪ್ರಮೇಯ :** ಆತ್ಮಜ್ಞಾನಕ್ಕೆ ಯಾವುದು ವಿಷಯವಾಗಿದೆಯೋ ಅದು ಪ್ರಮೇಯವಾಗಿದೆ. ನ್ಯಾಯದರ್ಶನದಲ್ಲಿ ಪ್ರಮೇಯದ ವಿಷಯಗಳು ಹನ್ನೆರಡು ಇದ್ದು ಅವು ಯಾವುವೆಂದರೆ : (೧) ಆತ್ಮ, (೨) ಶರೀರ, (೩) ಇಂದ್ರಿಯಗಳು, (೪) ಇಂದ್ರಿಯಗಳ ವಿಷಯಗಳು (ಪರಿಮಳ, ವಾಸನೆ, ರುಚಿ, ಬಣ್ಣ, ಸ್ಪರ್ಶ ಮತ್ತು ಶಬ್ದ), (೫) ಬುದ್ಧಿ, (೬) ಮನಸ್ಸು, (೭) ಪ್ರವೃತ್ತಿ, (೮) ದೋಷ, (೯) ಪ್ರೇತಭಾವ, (೧೦) ಫಲ, (೧೧) ದುಃಖ, (೧೨) ಅಪವರ್ಗ (ಮೋಕ್ಷ).

೩. **ಸಂಶಯ :** ಆತ್ಮದ ವಿಚಾರ, ಪ್ರಮಾಣಗಳ ವಿಚಾರ ಇತ್ಯಾದಿಗಳಲ್ಲಿ ಸಂಶಯವು ಮನಸ್ಸಿನಲ್ಲಿ ತಲೆದೋರುವುದನ್ನು 'ಸಂಶಯ' ಎಂದು ಕರೆಯಲಾಗಿದೆ. ಸಂಶಯ ತಲೆದೋರಿದಾಗ ಸರಿಯಾದ ಪರಿಶೀಲನೆ ಆರಂಭವಾಗುತ್ತದೆ. ಸತ್ಯದ ಅನ್ವೇಷಣೆ ಆಗ ಪ್ರಾರಂಭವಾಗುತ್ತದೆ.

೪. **ಪ್ರಯೋಜನ :** ಜೀವನದ ಗುರಿ ಏನು ? ಆತ್ಮವಿಚಾರದ ಪರಿಶೀಲನೆಯಿಂದ ಪ್ರಯೋಜನವೇನು ? ಎಂದು ವಿಚಾರಿಸುವುದೇ ಪ್ರಯೋಜನ.

೫. ದೃಷ್ಟಾಂತ : ಸಂಶಯದ ನಿವಾರಣೆಗೆ, ಪ್ರಯೋಜನದ ವಿವರಣೆಗೆ ದೃಷ್ಟಾಂತಗಳು ಅಗತ್ಯ. ಸಾಮಾನ್ಯವಾದ ನಿಯಮಗಳನ್ನು ದೃಷ್ಟಾಂತವು ತಿಳಿಯಪಡಿಸುತ್ತದೆ. ದೃಷ್ಟಾಂತದ ಮುಂದಿನ ಹೆಜ್ಜೆಯೇ ಸಿದ್ಧಾಂತ.

೬. ಸಿದ್ಧಾಂತ : ದೃಷ್ಟಾಂತವನ್ನು ದೃಢೀಕರಿಸಿ ಅದರ ಸತ್ಯಾಸತ್ಯತೆಯನ್ನು ತಿಳಿಸುವುದೇ ಸಿದ್ಧಾಂತ.

೭. ಅವಯವ : ಸಿದ್ಧಾಂತ ಸ್ಪಷ್ಟವಾದಾಗ ಅದನ್ನು ಚಿನ್ನಕ್ಕೆ ಪುಟವನ್ನು ನೀಡಿ ಅಪರಂಜಿಯನ್ನು ಮಾಡುವಂತೆ ಮಾಡಲು ವಿರೋಧಗಳು ಬರುತ್ತವೆ, ಎಂದರೆ ವಿರೋಧ ಪಕ್ಷಗಳ ಸಿದ್ಧಾಂತಗಳು ಬರುತ್ತವೆ. ಈ ವಿರೋಧಗಳನ್ನು ನ್ಯಾಯವಾಗಿ ಎದುರಿಸುವುದನ್ನೇ ಅವಯವ ಎಂದು ಹೇಳಲಾಗಿದೆ.

೮. ತರ್ಕ : ತರ್ಕ ಎಂದರೆ ಊಹೆ ಎಂದು ಹೇಳಬಹುದು. ವಾದದಲ್ಲಿ ವಿರೋಧವನ್ನು ಎದುರಿಸಲು ತನ್ನ ನಿಲವನ್ನು ಸಮರ್ಥಿಸಲು ಉಪಯೋಗಿಸುವ ವಾದದ ಸರಣಿಯೇ ತರ್ಕ.

೯. ನಿರ್ಣಯ : ವಸ್ತು–ವಿಚಾರಗಳ ಕುರಿತಾದ ನಿಶ್ಚಿತವಾದ ತೀರ್ಮಾನದ ತಿಳಿವಳಿಕೆಯೇ ನಿರ್ಣಯ. ತರ್ಕದಿಂದಾಗಿ ನಿರ್ಣಯ ಉಂಟಾಗುತ್ತದೆ.

೧೦. ವಾದ : ವಾದವನ್ನು ಮಾಡುವವರು ಮತ್ತು ಪ್ರತಿವಾದವನ್ನು ಮಾಡುವವರು. ತಮ್ಮ ತಮ್ಮ ಅಭಿಪ್ರಾಯಗಳನ್ನು ತರ್ಕಬದ್ಧವಾಗಿ ಸ್ಪಷ್ಟಪಡಿಸಿ ಸತ್ಯದ ನೆಲೆಗೆ ತಲಪಲು ಯತ್ನಿಸುವುದೇ ವಾದ. ವಾದ ಎಂದರೆ ಚರ್ಚೆ ಎಂದು ತಾತ್ಪರ್ಯವಾಗಿ ಹೇಳಬಹುದು. ಗುರುಶಿಷ್ಯರೊಳಗಿನ ಚರ್ಚೆಯನ್ನು ವಾದದ ಉತ್ತಮ ಉದಾಹರಣೆಯಾಗಿ ಹೇಳಬಹುದು.

೧೧. ಜಲ್ಪ : ವಾದ, ಪ್ರತಿವಾದ, ಖಂಡನೆಗಳ ಈ ವಾಗ್ಯುದ್ಧಕ್ಕೆ ಜಲ್ಪ ಎಂದು ಹೇಳುತ್ತಾರೆ. ಒಟ್ಟಿನಲ್ಲಿ ವಾದಿಯು ವಾದದ ವಿಜಯಕ್ಕಾಗಿ ಮಾಡುವ ವಿಚಾರವಾಗಿದೆ ಎಂದು ಹೇಳಬಹುದು.

೧೨. ವಿತಂಡಾ : ತನಗೆ ಯಾವ ಪಕ್ಷವೂ ಇಲ್ಲದೆ ಇತರರ ಪಕ್ಷಗಳನ್ನು ಖಂಡಿಸುವುದೇ ವಿತಂಡಾ.

೧೩. ಹೇತ್ವಾಭಾಸ : ಹೇತುದೋಷಗಳಿಗೆ ಹೇತ್ವಾಭಾಸ ಎಂದು ಹೇಳುತ್ತಾರೆ. ಹೇತು ಎಂದರೆ ಕಾರಣ. ಕಾರಣದಂತೆ ಕಂಡುಬರುವುದನ್ನೇ ಹೇತುವಿನ ಆಭಾಸ = ಹೇತ್ವಾಭಾಸ ಎಂದು ಕರೆಯಲಾಗಿದೆ.

೧೪. ಛಲ : ವಾದದಲ್ಲಿ ಉಪಯೋಗಿಸುವ ವಾಕ್ಯಗಳಿಗೆ ಅಪಾರ್ಥ ಇದೆ ಎಂದು ವಾದಿಸುವುದೇ ಛಲ. ಉದಾಹರಣೆ—ವಾದಿಯು ನವಕಂಬಲ ಎಂದು ಒಂಭತ್ತು ಕಂಬಳಿ ಎಂಬ ಅರ್ಥದಲ್ಲಿ ಹೇಳುತ್ತಾನೆ. ಆಗ ಪ್ರತಿವಾದಿಯು ನವ ಎಂದರೆ ಹೊಸ ಎಂದು ಅರ್ಥ ಹೇಳಿ ಹೊಸ ಕಂಬಳಿ ಎಂದು ಪದಕ್ಕೆ ಅರ್ಥಮಾಡುತ್ತಾನೆ. ಇದೇ ಛಲ.

೧೫. ಜಾತಿ : ತಪ್ಪು ಉದಾಹರಣೆಯ ಆಧಾರದಿಂದ ನೀಡುವ ಅಸತ್ ಆದ ಉತ್ತರವನ್ನೇ ಜಾತಿ ಎಂದು ಕರೆದಿದೆ.

೧೬. ನಿಗ್ರಹಸ್ಥಾನ : ವಾದದಲ್ಲಿ ವಿರೋಧಿಯು ಸೋಲುವ ಸ್ಥಿತಿಯೇ ನಿಗ್ರಹಸ್ಥಾನ.

ವಿರೋಧ ಪಕ್ಷಗಳ ವಾದಗಳು ನಿರಾಧಾರವಾದುವು ಎಂದು ಸ್ಪಷ್ಟಪಡಿಸಿ ವಾದ–ಪ್ರತಿವಾದಗಳನ್ನು ಮುಕ್ತಾಯಗೊಳಿಸುವುದೇ ನಿಗ್ರಹಸ್ಥಾನ.

ಈ ಹದಿನಾರು ಹಂತಗಳನ್ನು ಸಾಧಕನು ಸರಿಯಾಗಿ ಹಾದುಹೋದರೆ ನಿಜವಾದ ಜ್ಞಾನವು ದೊರಕಿ ಮೋಕ್ಷವನ್ನು ಪಡೆಯುತ್ತಾನೆ ಎಂದು ನ್ಯಾಯದರ್ಶನ ತಿಳಿಸುತ್ತದೆ.

ನ್ಯಾಯದರ್ಶನಸಂಗ್ರಹ : ನ್ಯಾಯದರ್ಶನದಲ್ಲಿ ನವದ್ರವ್ಯಗಳ ಪ್ರಸ್ತಾಪವಿದೆ. ಅವುಗಳು ಯಾವುವೆಂದರೆ : ಕಾಲ, ದಿಕ್, ಬುದ್ಧಿ, ಆತ್ಮ, ಪೃಥ್ವಿ, ಅಗ್ನಿ, ವಾಯು, ಜಲ ಮತ್ತು ಆಕಾಶ. ಜಗತ್ತು ಅಣುಗಳ ಸಂಯೋಗದಿಂದ ಸೃಷ್ಟಿಯಾಗಿದೆ. ನವದ್ರವ್ಯ ಮತ್ತು ಪರಮಾಣುಗಳಿಂದ ಜಗತ್ತು ಉಂಟಾಗಿದೆ. ದೇವರೇ ಇವೆಲ್ಲಕ್ಕೂ ಮೂಲಕಾರಣ. ಅವನೇ ಪರಮಾತ್ಮನಾಗಿದ್ದಾನೆ. ಪರಮಾತ್ಮನು ವಿಭುವಾಗಿದ್ದು ಆತನು ನಿತ್ಯಸರ್ವಜ್ಞನಾಗಿದ್ದಾನೆ. ದೇವರು ಜೀವರುಗಳು ಪೂರ್ವಕರ್ಮಕ್ಕೆ ಅನುಸಾರವಾಗಿ ಜಗತ್ತಿನ ಸೃಷ್ಟಿ, ರಕ್ಷಣೆ, ಸಂಹಾರಗಳನ್ನು ಮಾಡುತ್ತಾನೆ.

ಜೀವರುಗಳು : ಇವರು ಅಸಂಖ್ಯರಾಗಿದ್ದು ತಮ್ಮ ತಮ್ಮ ಪೂರ್ವಕರ್ಮಗಳಿಗೆ ಅನುಸಾರವಾಗಿ ಸಂಸಾರಬಂಧನಕ್ಕೆ ಒಳಗಾಗುತ್ತಾರೆ. ಸಂಸಾರಬಂಧನದಲ್ಲಿ ರಾಗದ್ವೇಷಾದಿ ದುಃಖಗಳನ್ನು ಜೀವನು ಅನುಭವಿಸುತ್ತಾನೆ. ಈ ದುಃಖನಿವೃತ್ತಿಗೆ ಹಿಂದೆ ವಿವರಿಸಿದ ಹದಿನಾರು ವಿಷಯಗಳ ಜ್ಞಾನವನ್ನು ಪಡೆಯುವುದೇ ಮಾರ್ಗವಾಗಿರುತ್ತದೆ. ಜ್ಞಾನ ಪಡೆದನಂತರ ಮೋಕ್ಷ ಎಂದರೆ ದುಃಖಗಳಿಂದ ವಿಮೋಚನೆ ಪಡೆಯುವುದಕ್ಕೆ ಸಾಧ್ಯವಾಗುತ್ತದೆ. ಜ್ಞಾನವು ಅಜ್ಞಾನವನ್ನು ಹೋಗಲಾಡಿಸಿದಾಗ ಜೀವಾತ್ಮನು ರಾಗದ್ವೇಷಾದಿ ದುಃಖಗಳಿಂದ ನಿವೃತ್ತನಾಗಿ ಕರ್ಮಗಳಿಂದ ಮುಕ್ತನಾಗುತ್ತಾನೆ. ಕರ್ಮಗಳಿಂದ ಮುಕ್ತನಾದಾಗ ಜನ್ಮದಿಂದ ಮತ್ತು ದುಃಖಗಳಿಂದ ಮುಕ್ತನಾಗುತ್ತಾನೆ. ಹೀಗೆ ಜೀವನು ಜನ್ಮ ಮೃತ್ಯು ದುಃಖಗಳಿಂದ ಸಂಪೂರ್ಣ ಬಿಡುಗಡೆಹೊಂದುವುದನ್ನೇ ನ್ಯಾಯದರ್ಶನದಲ್ಲಿ ಅಪವರ್ಗ ಎಂದು ಕರೆಯಲಾಗಿದೆ.

ಹೀಗೆ ನ್ಯಾಯದರ್ಶನವು ದೇವರು, ಆತ್ಮ ಎಂಬ ಈ ವಿಚಾರಗಳನ್ನು ತರ್ಕದಿಂದ ಸಮಂಜಸವಾದ ರೀತಿಯಲ್ಲಿ ಸಮರ್ಥಿಸಿರುತ್ತದೆ.

ನ್ಯಾಯದರ್ಶನದ ಕುರಿತಾದ ಮೂಲಗ್ರಂಥವು ಮಹರ್ಷಿ ಗೌತಮರಿಂದ ಬರೆಯಲ್ಪಟ್ಟು ಪ್ರಸಿದ್ಧವಾಗಿರುವ 'ನ್ಯಾಯಸೂತ್ರ'ವಾಗಿರುತ್ತದೆ. ಗೌತಮ ಮಹರ್ಷಿಗಳ ನ್ಯಾಯಸೂತ್ರಕ್ಕೆ ವಾತ್ಸ್ಯಾಯನರು ಭಾಷ್ಯವನ್ನು ಬರೆದಿದ್ದು ಅದು ತುಂಬಾ ವಿವರವಾದ ಹಾಗೂ ಪ್ರಸಿದ್ಧವಾದ ನ್ಯಾಯಸೂತ್ರಭಾಷ್ಯ ಗ್ರಂಥವಾಗಿರುತ್ತದೆ. ಮಹರ್ಷಿ ಗೌತಮರ ಕಾಲವು ಕ್ರಿ.ಪೂ. ನಾಲ್ಕನೇ ಶತಮಾನವೆಂದೂ, ಅವರ ಸೂತ್ರಗಳ ಭಾಷ್ಯಕಾರರಾದ ವಾತ್ಸ್ಯಾಯನರ ಕಾಲವು ಸುಮಾರು ಕ್ರಿ.ಶ. ಐದನೇ ಶತಮಾನವೆಂದೂ ಎಣಿಸಲಾಗಿರುತ್ತದೆ.

ನ್ಯಾಯದರ್ಶನದ ಕುರಿತಾದ ವಾರ್ತಿಕಗಳು, ವಿವರಣಾತ್ಮಕ ಕೃತಿಗಳು ಕಾಲವು ಸರಿದಂತೆ ಹೆಚ್ಚಿನ ಸಂಖ್ಯೆಯಲ್ಲಿ ವಿವಿಧ ಲೇಖಕರಿಂದ ರಚಿತಗೊಂಡವು. ಅವುಗಳಲ್ಲಿ ಉದ್ಯೋತಕರ 'ವಾರ್ತಿಕ', ಉದಯನರ 'ತಾತ್ಪರ್ಯಪರಿಶುದ್ಧಿ', ಜಯಂತರ 'ನ್ಯಾಯಮಂಜರಿ',

ಭಾಸರಂಜನರ 'ನ್ಯಾಯಸಾರ' ಮತ್ತು ಗಂಗೇಶರ 'ತತ್ತ್ವಚಿಂತಾಮಣಿ' ಇವುಗಳು ಮುಖ್ಯವಾದವು.

**(೩) ವೈಶೇಷಿಕದರ್ಶನ :** ವೈಶೇಷಿಕದರ್ಶನದ ಮೂಲ ಆಚಾರ್ಯರು ಕಣಾದ ಮಹರ್ಷಿಗಳಾಗಿರುತ್ತಾರೆ. ವಿಶೇಷ ಎಂಬ ಶಬ್ದದಿಂದ ವೈಶೇಷಿಕ ಎಂಬುದು ಬಂದಿರುತ್ತದೆ. ವೈಶೇಷಿಕ ದರ್ಶನದಲ್ಲಿ ವಿಶಿಷ್ಟತೆಗೆ ಹೆಚ್ಚಿನ ಪ್ರಾಧಾನ್ಯವಿರುತ್ತದೆ. ಈ ದರ್ಶನವು ಮುಖ್ಯವಾಗಿ ಅಣುಗಳು, ಆತ್ಮ ಮತ್ತು ಆಕಾಶ ಎಂಬ ವಿಷಯಗಳ ಆಧಾರದಲ್ಲಿ ಬೆಳೆದಿರುತ್ತದೆ. ಅಣು ಮತ್ತು ಆತ್ಮಗಳು ಅಸಂಖ್ಯವಾಗಿದ್ದು ಪ್ರತಿಯೊಂದಕ್ಕೂ ತನ್ನದೇ ಆದ ವಿಶಿಷ್ಟತೆ ಇದೆ ಎಂದು ವೈಶೇಷಿಕದರ್ಶನವು ಪ್ರತಿಪಾದಿಸುತ್ತದೆ. ಹೀಗೆ ವಿಶಿಷ್ಟತೆಯ ಪ್ರತಿಪಾದನೆಯನ್ನು ಮಾಡುವುದರಿಂದ ಈ ದರ್ಶನಕ್ಕೆ 'ವೈಶೇಷಿಕ' ಎಂಬ ಹೆಸರು ಬಂದಿರುತ್ತದೆ. ಕಣಾದಮಹರ್ಷಿಗಳಿಗೆ ಉಲೂಕಮಹರ್ಷಿ ಎಂಬ ಇನ್ನೊಂದು ಹೆಸರೂ ಇದೆ. ಅದರಂತೆ ವೈಶೇಷಿಕದರ್ಶನಕ್ಕೆ ಕಾಣಾದದರ್ಶನ, ಔಲೂಕ್ಯದರ್ಶನ ಎಂಬ ಬೇರೆ ಎರಡು ಹೆಸರುಗಳೂ ಬಳಕೆಯಲ್ಲಿದೆ.

ವೈಶೇಷಿಕದರ್ಶನವು ವಸ್ತುಗಳ ವಿಚಾರದ ಜ್ಞಾನಕ್ಕೆ ಹೆಚ್ಚಿನ ಪ್ರಾಧಾನ್ಯವನ್ನು ನೀಡುತ್ತದೆ ; ಎಂದರೆ ಪ್ರಮೇಯಕ್ಕೆ ಹೆಚ್ಚಿನ ಪ್ರಾಧಾನ್ಯವನ್ನು ನೀಡುತ್ತದೆ. ನ್ಯಾಯ ದರ್ಶನವು ವಸ್ತುವಿಷಯಕವಾದ ಜ್ಞಾನಕ್ಕೆ ಅಂದರೆ ಪ್ರಮಾಣಕ್ಕೆ ವಿಶೇಷವಾದ ಸ್ಥಾನ ಪ್ರಾಧಾನ್ಯವನ್ನು ನೀಡುತ್ತದೆ. ಹಾಗಾಗಿ ನ್ಯಾಯ ಮತ್ತು ವೈಶೇಷಿಕ ದರ್ಶನಗಳಿಗೆ ಪರಸ್ಪರ ತುಂಬಾ ಸಂಬಂಧಗಳಿವೆ. ಈ ಎರಡು ದರ್ಶನಗಳ ತತ್ತ್ವಗಳ ಒಳಗೆ ಮೂಲತಃ ಅತ್ಯಲ್ಪ ವ್ಯತ್ಯಾಸವಿದ್ದು ಹೆಚ್ಚಿನಂಶಗಳು ಒಂದೇ ಆಗಿದ್ದು ಗುರಿಯು ಕೂಡ ಆತ್ಮನ ಮೋಕ್ಷಸಾಧನೆಯೇ ಆದ್ದರಿಂದ ಅವುಗಳನ್ನು ಸಮಾನ ತಂತ್ರಗಳೆಂದು ಒಟ್ಟಿಗೇ ಭಾವಿಸಲಾಗಿದೆ.

ವೈಶೇಷಿಕದರ್ಶನವು ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಇತ್ಯಾದಿ ಮೂಲಭೂತವಾದ ವಿಚಾರಗಳನ್ನು ವಿಮರ್ಶಿಸಿ ಎಲ್ಲವೂ ಅಣುವಿನ ರೂಪಾಂತರ ಎಂದು ಹೇಳುತ್ತದೆ. ಹಾಗಾಗಿ ಈ ದರ್ಶನಕ್ಕೆ ಅಣುಸಿದ್ಧಾಂತ ಎಂದು ಹೇಳುತ್ತಾರೆ. ವೈಶೇಷಿಕದರ್ಶನದಲ್ಲಿ ಪ್ರತ್ಯಕ್ಷ ಮತ್ತು ಅನುಮಾನ ಎಂಬ ಎರಡು ಪ್ರಮಾಣಗಳನ್ನು ಮಾತ್ರ ಒಪ್ಪಲಾಗಿದ್ದು ಉಳಿದ ಎಲ್ಲ ಪ್ರಮಾಣಗಳೂ ಈ ಎರಡರಲ್ಲಿ ಅಂತರ್ಗತವಾಗಿವೆ ಎಂಬುದು ವೈಶೇಷಿಕರ ಮತವಾಗಿದೆ.

ಜಗತ್ತಿನಲ್ಲಿ ಕಾಣುವ ಪದಾರ್ಥಗಳ ವಿಚಾರವಾಗಿ ಪರಿಶೀಲನೆ ನಡೆಸಿ ಅವುಗಳನ್ನು ಗುಂಪುಗಳಾಗಿ ವಿಭಾಗಿಸಿ ವೈಶೇಷಿಕದರ್ಶನದಲ್ಲಿ ಸವಿಸ್ತಾರವಾದ ವಿವರಣೆ ನೀಡಲಾಗಿದೆ. ಹೀಗೆ ಏಳು ವಿಭಜನೆಗಳನ್ನು ಮಾಡಲಾಗಿದ್ದು ವೈಶೇಷಿಕದರ್ಶನವು ಈ ಏಳು ವಿಚಾರಗಳ ವಿಸ್ತರಣೆಯಲ್ಲಿ ಸೀಮಿತವಾಗಿರುತ್ತದೆ. ಏಳು ವಿಭಜನೆಗಳು ಯಾವುವೆಂದರೆ :

(೧) ದ್ರವ್ಯ, (೨) ಗುಣ, (೩) ಕರ್ಮ, (೪) ಸಾಮಾನ್ಯ, (೫) ವಿಶೇಷ, (೬) ಸಮವಾಯ, (೭) ಅಭಾವ.

ಪದಾರ್ಥ ಎಂದರೆ ಯೋಚನೆಗೆ ಮತ್ತು ಹೆಸರಿಗೆ ಸಿಲುಕುವ ವಸ್ತು. ಈ ಪದಾರ್ಥಗಳ

ಸರಿಯಾದ ತಿಳಿವಳಿಕೆಯಿಂದ ಮೋಕ್ಷವು ಪ್ರಾಪ್ತವಾಗುತ್ತದೆ ಎಂದು ವೈಶೇಷಿಕದರ್ಶನವು ಹೇಳುತ್ತದೆ.

ಜಗತ್ತಿನಲ್ಲಿ ಕಾಣುವ ಪದಾರ್ಥ, ವಿಚಾರಗಳ ಕುರಿತಾಗಿ ಏಳು ಗುಂಪುಗಳು ಇವೆಯೆಂದು ವಿಭಜನೆ ಮಾಡಲ್ಪಟ್ಟಂತೆ ಜಗತ್ತಿನಲ್ಲಿ ಒಟ್ಟಾಗಿ ಒಂಬತ್ತು ತರಹದ ಪದಾರ್ಥಗಳು ಇವೆ ಎಂದು ವೈಶೇಷಿಕದರ್ಶನದಲ್ಲಿ ವಿಸ್ತಾರವಾಗಿ ವಿವರಿಸಲಾಗಿದೆ. ಆ ಒಂಭತ್ತು ಪದಾರ್ಥಗಳು ಯಾವುವೆಂದರ : ಪೃಥ್ವಿ, ಜಲ, ಅಗ್ನಿ, ವಾಯು. ಆಕಾಶ, ಕಾಲ, ದೇಶ, ಆತ್ಮ, ಮನಸ್ಸು. ಇವುಗಳಲ್ಲಿ ಮೊದಲಿನ ಐದು ಪದಾರ್ಥಗಳನ್ನು ಪಂಚಭೂತಗಳೆಂದು ಕರೆಯುಲಾಗಿದ್ದು ಇವುಗಳಲ್ಲಿ ಗಂಧ, ರಸ, ರೂಪ, ಸ್ಪರ್ಶ ಮತ್ತು ಶಬ್ದ ಎಂಬ ಗುಣಗಳು ಅಡಕವಾಗಿವೆ. ಇವುಗಳಲ್ಲಿ ಪೃಥ್ವಿ, ಜಲ, ಅಗ್ನಿ, ವಾಯು ಇವುಗಳು ಪರಮಾಣುಗಳಿಂದ ರಚಿತವಾಗಿ ಪರಮಾಣುಗಳು ಅನಂತ ಮತ್ತು ನಿರವಯವಗಳಾಗಿರುತ್ತವೆ. ಆತ್ಮನು ಸರ್ವವ್ಯಾಪಿ ಮತ್ತು ಅಮರ.

ಪದಾರ್ಥಗಳನ್ನು ಈ ರೀತಿ ವಿಭಾಗಮಾಡಿದನಂತರ ಈ ಪದಾರ್ಥಗಳ ಸ್ವರೂಪ. ಶಕ್ತಿಗಳನ್ನು ವಿವರವಾಗಿ ನಿರೂಪಿಸಲಾಗಿರುತ್ತದೆ. ಅನಂತರ ಆತ್ಮ ಮತ್ತು ಅದರಲ್ಲಿ ಅಂತರ್ಗತವಾಗಿರುವ ಶಕ್ತಿಗಳ ವಿಚಾರವಾಗಿ ವಿವರಣೆಯನ್ನು ವೈಶೇಷಿಕದರ್ಶನದಲ್ಲಿ ನೀಡಲಾಗಿದೆ. ಹಾಗೆಯೇ ಶರೀರ ಮತ್ತು ಶರೀರಾಂಶಗಳ ಪರಿಶೀಲನೆ ಮಾಡಿ ಶರೀರದ ಹುಟ್ಟಿಗೆ ಕಾರಣಕರ್ಮ ಎಂದು ಹೇಳಿ ಅದರ ಬಗ್ಗೆ ವಿವರಣೆಗಳನ್ನು ಕೊಟ್ಟಿದೆ. ಅದರಂತೆಯೇ ಜ್ಞಾನದ ವಿಚಾರ, ವಿಶಿಷ್ಟಜ್ಞಾನ, ಮೋಕ್ಷದ ವಿಚಾರ ಇತ್ಯಾದಿಗಳನ್ನು ವೈಶೇಷಿಕದರ್ಶನದಲ್ಲಿ ಸವಿಸ್ತಾರವಾಗಿ ತಿಳಿಸಲಾಗಿದೆ. ಹೀಗೆ ಪದಾರ್ಥಗಳ ವಿಭಜನೆ, ವಿವರಣೆ, ಪರಿಶೀಲನೆ ಮತ್ತು ಪ್ರದರ್ಶನ ಎಂಬ ನಾಲ್ಕು ಹಂತಗಳಲ್ಲಿ ವೈಶೇಷಿಕ ದರ್ಶನದಲ್ಲಿ ವಿಷಯಗಳನ್ನು ವಿವರಿಸಲಾಗಿದೆ.

**ಅದೃಷ್ಟ :** ವೈಶೇಷಿಕದರ್ಶನದಲ್ಲಿ ದೇವರು ಎಂಬ ವಿಚಾರವಾಗಿ ನಿರ್ದಿಷ್ಟವಾದ ಮತ್ತು ವಿವರವಾದ ವಿವರಣೆ ಇಲ್ಲ. ಹಾಗಿದ್ದರೂ ಜಗತ್ತಿನ ಸೃಷ್ಟಿ, ಜೀವಿಗಳ ಜನ್ಮ-ಮರಣ ಇತ್ಯಾದಿ ವಿಚಾರಗಳಿಗೆಲ್ಲ ಅದೃಷ್ಟವಾದ ಶಕ್ತಿಯೊಂದು ಕಾರಣ ಎಂದು ವೈಶೇಷಿಕ ದರ್ಶನವು ಒಪ್ಪುತ್ತದೆ. ಅದೃಷ್ಟ ಎಂದರೆ ಕರ್ಮಶಕ್ತಿಯಾಗಿದ್ದು ಅಣುಗಳ ಮತ್ತು ಆತ್ಮಗಳ ಸಂಯೋಗದ ಚಟುವಟಿಕೆಗಳೇ ಆಗಿರುತ್ತದೆ. ಹೀಗೆ ಅದೃಷ್ಟವು ಜಗತ್ತಿನ ಸಹಕಾರಿ ಕಾರಣ ಎಂದೂ ಅಣುವು ಭೌತಿಕ ಕಾರಣ ಎಂದೂ ಹೇಳಿ ಜಗತ್ತು-ಜೀವಿಗಳ ಹುಟ್ಟನ್ನು ವಿವರಿಸಲಾಗಿದೆ. ಅಣುಗಳ ಚಲನೆಗೆ ಕಾರಣವಾದ ಶಕ್ತಿಯೊಂದು ಬೇಕಿದ್ದು ಆ ಶಕ್ತಿಯನ್ನೇ ಅಗೋಚರವಾದ 'ಅದೃಷ್ಟ' ಎಂದು ಹೇಳಲಾಗಿದೆ. ಅದೃಷ್ಟವನ್ನೇ ಈಶ್ವರೇಚ್ಛೆ ಎಂದೂ ಹೇಳಿದೆ. ಜಗತ್ತಿನ ಸೃಷ್ಟಿ, ಸ್ಥಿತಿ ಮತ್ತು ಲಯಗಳಿಗೆಲ್ಲಾ ಈ ಅಗೋಚರ ಶಕ್ತಿ ಅರ್ಥಾತ್ ದೇವರು ಕಾರಣ ಎಂದು ಅವುಗಳನ್ನು ಅಣುಗಳ ಸಂಯೋಗ-ವಿಯೋಗಗಳ ಕುರಿತಾದ ವಿಸ್ತಾರವಾದ ವಿವರಣೆಯಿಂದ ಸ್ಪಷ್ಟಪಡಿಸಲಾಗಿರುತ್ತದೆ.

ಜೀವಿಗಳು ಮತ್ತು ಅಣುಗಳು ಅಸಂಖ್ಯ. ಪ್ರತಿಯೊಬ್ಬ ಜೀವಿಯೂ ಈ ಜಗತ್ತಿನಲ್ಲಿ ತನ್ನ ತನ್ನ ಕರ್ಮಕ್ಕನುಸಾರವಾಗಿ ಜನ್ಮತಳೆಯುತ್ತಾನೆ. ಈ ಜಗತ್ತಿನ ಪದಾರ್ಥಗಳ

ಕುರಿತಾದ ಸರಿಯಾದ ತಿಳಿವಳಿಕೆಯನ್ನು ಪಡೆಯುವುದರಿಂದ ಅಜ್ಞಾನವು ನಿವೃತ್ತಿಯಾಗಿ ಜ್ಞಾನಪ್ರಾಪ್ತಿಯಾಗುತ್ತದೆ. ಈ ಜ್ಞಾನ ಲಭ್ಯವಾಗಲು ಉತ್ತಮ ಹಾಗೂ ಸದಾಚಾರ ಪೂರ್ಣವಾದ ಜೀವನವನ್ನು ನಡೆಸಬೇಕು. ಆಗ ಪದಾರ್ಥಗಳ ಸರಿಯಾದ ಜ್ಞಾನವುಂಟಾಗಿ ಜೀವಿಯು ಜನ್ಮಮರಣಗಳೆಂಬ ದುಃಖದಿಂದ ಮುಕ್ತನಾಗುತ್ತಾನೆ.

ಹೀಗೆ ವೈಶೇಷಿಕದರ್ಶನವು ಜಗತ್ತು, ಆತ್ಮ, ಅದೃಷ್ಟ, ಜೀವನ ಈ ವಿಚಾರಗಳ ಕುರಿತಾಗಿ ವಿಸ್ತಾರವಾದ ವಿವರಣೆಯನ್ನು ನೀಡುತ್ತಾ, ಜೀವರುಗಳ ಮೋಕ್ಷಕ್ಕೆ ಹಾದಿಯನ್ನು ತನ್ನದೇ ಆದ ರೀತಿಯಲ್ಲಿ ತೋರಿಸಿರುತ್ತದೆ.

ವೈಶೇಷಿಕ ದರ್ಶನಕ್ಕೆ ಆಧಾರವಾದ ಗ್ರಂಥವು ಮಹರ್ಷಿ ಕಣಾದರ ವೈಶೇಷಿಕ ಸೂತ್ರವಾಗಿರುತ್ತದೆ. ಈ ಗ್ರಂಥವು ಕ್ರಿ.ಪೂ. ಮೂರನೇ ಶತಮಾನದ ಅಂತ್ಯಭಾಗದಲ್ಲಿ ರೂಪುಗೊಂಡಿತೆಂದು ಎಣಿಸಲಾಗಿದೆ. ಪ್ರಶಸ್ತಪಾದರ 'ಪದಾರ್ಥಧರ್ಮಸಂಗ್ರಹ', ಶಿವಾದಿತ್ಯ ಮಿಶ್ರರ 'ಸಪ್ತಪದಾರ್ಥೀ' ಇವುಗಳು ವೈಶೇಷಿಕದರ್ಶನದ ಪ್ರಸಿದ್ಧ ಗ್ರಂಥಗಳಾಗಿವೆ.

(೩) **ಸಾಂಖ್ಯದರ್ಶನ** : ಈ ದರ್ಶನದ ಆದ್ಯಪ್ರವರ್ತಕರು ಮಹರ್ಷಿ ಕಪಿಲರು. ಸಾಖ್ಯವೆಂಬ ಶಬ್ದವು ಸಂಖ್ಯಾ ಶಬ್ದದಿಂದ ಹುಟ್ಟಿರುತ್ತದೆ. ಸಂಖ್ಯೆ ಎಂದರೆ ಎಣಿಕೆ, ವಿಚಾರಣೆ, ಚರ್ಚೆ ಎಂದು ಮೂರು ರೀತಿ ಅರ್ಥವಾಗುತ್ತದೆ. ಜಗತ್ತು, ಜೀವ ಇತ್ಯಾದಿ ವಿಚಾರಗಳ ಮೂಲಗಳನ್ನು ಸಂಖ್ಯೆಗಳಾಗಿ ವಿಭಾಗಿಸಿ ಅವುಗಳನ್ನು ಆಧಾರವಾಗಿಟ್ಟುಕೊಂಡು ಜೀವನ ಮೋಕ್ಷಗಳ ವಿವರಣೆಯನ್ನು ಹೇಳಿರುವುದರಿಂದ ಈ ದರ್ಶನಕ್ಕೆ ಸಾಂಖ್ಯ ಎಂದು ಹೇಳುತ್ತಾರೆ. ಸರಿಯಾದ ತಿಳಿವಳಿಕೆಯನ್ನು (ಸಾಂಖ್ಯ=ಜ್ಞಾನ) ನೀಡುವ ದರ್ಶನವಾದ್ದರಿಂದ ಇದಕ್ಕೆ ಸಾಂಖ್ಯದರ್ಶನ ಎಂದು ಹೆಸರು ಬಂತು ಎಂದು ಇನ್ನೊಂದು ಮತವೂ ವ್ಯವಹಾರದಲ್ಲಿದೆ.

ನ್ಯಾಯ ಮತ್ತು ವೈಶೇಷಿಕ ದರ್ಶನಗಳಲ್ಲಿ ಜಗತ್ತಿಗೆ ಸಂಬಂಧಿಸಿದ ಅನೇಕವಾದ ಪದಾರ್ಥಗಳ ವಿಭಜನೆ-ವಿವರಣೆಗಳಿದ್ದರೆ ಸಾಂಖ್ಯದರ್ಶನದಲ್ಲಿ ಪ್ರಕೃತಿ ಮತ್ತು ಪುರುಷ ಎಂಬ ಎರಡೇ ವಿಧದ ಮೂಲತತ್ತ್ವಗಳ ಪ್ರತಿಪಾದನೆ ಇದೆ. ಜಗತ್ತು, ಜೀವ, ಇಂದ್ರಿಯಗಳು, ಶರೀರ ಇವುಗಳೆಲ್ಲ ಪ್ರಕೃತಿ–ಪುರುಷರ ಸಂಯೋಗದಿಂದ ಆಗಿದೆ. ಹಾಗಾಗಿ ಈ ಜಗತ್ತು, ಜನ್ಮ—ಇವುಗಳೆಲ್ಲ ಒಂದು ಪರಿಣಾಮ ಆಗಿದ್ದು ಇವಕ್ಕೆ ಕಾರಣವೊಂದು ಇರಲೇಬೇಕು ಎಂದು ಸಾಂಖ್ಯದರ್ಶನ ಹೇಳುತ್ತದೆ, ಈ ಕಾರಣವೇ ಪ್ರಕೃತಿ ಎಂದು ಹೇಳಿ ಜೀವ, ಜಗತ್ತು, ಜನ್ಮ ಇತ್ಯಾದಿಗಳೆಲ್ಲ ಪ್ರಕೃತಿಯ ಅಧೀನದಲ್ಲಿದ್ದು ತಮ್ಮ ಶಕ್ತಿ, ಪ್ರಭಾವಗಳಲ್ಲಿ ಸೀಮಿತವಾಗಿವೆ ಎಂದು ಸಾಂಖ್ಯದರ್ಶನದಲ್ಲಿ ಹೇಳಲಾಗಿದೆ.

**ಪ್ರಕೃತಿ** : ಅಚೇತನವಾದ ಪ್ರಕೃತಿಯು ಜಗತ್ತಿನ ಮೂಲತತ್ತ್ವವಾಗಿರುತ್ತದೆ. ಪ್ರಕೃತಿಯಲ್ಲಿ ಅಂತರ್ಗತವಾಗಿ ಮೂರು ಗುಣಗಳಿವೆ. ಇವೇ ಸತ್ತ್ವ, ರಜಸ್ಸು ಮತ್ತು ತಮಸ್ಸು. ಮೂರು ಹುರಿಗಳಿಂದ ಹಗ್ಗವಾದಂತೆ ಇವು ಪ್ರಕೃತಿಯಲ್ಲಿ ಸೇರಿದ್ದು ಇವುಗಳಿಂದ ಕೂಡಿದ ಪ್ರಕೃತಿಯು ಸಾಮಾನ್ಯಾವಸ್ಥೆಯಲ್ಲಿ ಇರುತ್ತದೆ.

**ಸತ್ತ್ವಗುಣ** : ಈ ಗುಣವು ಸುಖ, ಸಂತೋಷ, ಪ್ರಕಾಶಕಸಾಮರ್ಥ್ಯಗಳಿಂದ ಕೂಡಿದೆ.

**ರಜೋಗುಣ** : ಚಲನೆಯ ಗುಣವಿದಾಗಿರುತ್ತದೆ. ಇದು ದುಃಖ-ನೋವುಗಳಿಂದ ಕೂಡಿದುದೂ ಆಗಿದೆ. ಈ ಗುಣವು ಸತ್ತ್ವ ಮತ್ತು ತಮೋಗುಣಗಳ ಚಲನೆ ಮತ್ತು

ಇರುವಿಕೆಗೆ ಸಹಾಯಮಾಡುತ್ತದೆ.

**ತಮೋಗುಣ** : ಇದು ಆಲಸ್ಯ, ಅಸಡ್ಡೆ, ಅಸೌಖ್ಯ, ನಿದ್ರೆ ಇತ್ಯಾದಿಗಳಿಂದ ಕೂಡಿದ್ದು ಪರಿಣಾಮದಲ್ಲಿ ಸೋಮಾರಿತನ, ಅಜ್ಞಾನ, ಕತ್ತಲುಗಳನ್ನು ನೀಡುವಂತಹ ಗುಣವಾಗಿದೆ.

**ಪುರುಷ** : ಇದು ಚೈತನ್ಯದಿಂದ ಕೂಡಿದ್ದು ಚೇತನರೂಪಿಯಾಗಿರುತ್ತದೆ. ಪುರುಷನನ್ನು ಜಗತ್ತಿನ ಚೇತನ, ಆತ್ಮ ಎಂದು ಹೇಳುತ್ತಾರೆ. ಪುರುಷನು ಶರೀರ ಮತ್ತು ಇಂದ್ರಿಯ ಗಳಿಂದ ಬೇರೆಯಾಗಿದ್ದು ಪ್ರಜ್ಞಾಶಕ್ತಿಯಾಗಿರುತ್ತಾನೆ. ಈ 'ಚೈತನ್ಯ'ಕ್ಕೆ ಚೇತನ, ಪುರುಷ, ಚಿಚ್ಛಕ್ತಿ, ಆತ್ಮ ಮೊದಲಾದ ಹೆಸರುಗಳಿದ್ದು ಇವೆಲ್ಲಕ್ಕೂ ಒಂದೇ ಅರ್ಥವಿರು ತ್ತದೆ. ಪುರುಷನಲ್ಲಿ ಗುಣವಾಗಲಿ, ದೋಷವಾಗಲಿ, ವಿಶೇಷಗಳಾಗಲಿ ಏನೂ ಇಲ್ಲ. ಇವನು ನಿರ್ವಿಕಾರವಸ್ತುವಾಗಿರುತ್ತಾನೆ.

**ಜಗತ್‌ಸೃಷ್ಟಿ** : ಜಡಪ್ರಕೃತಿ ಮತ್ತು ಸಚೇತನ ಪುರುಷರ ಸಂಯೋಗದಿಂದ ಈ ಜಗತ್ತು ಮತ್ತು ವಿಶಿಷ್ಟವಾದ ಚರಾಚರ ವಸ್ತುಗಳು ಉತ್ಪನ್ನವಾಗಿವೆ. ಜಗತ್ತಿನಲ್ಲಿ ಒಟ್ಟು ೨೫ ತತ್ತ್ವಗಳು ಕೂಡಿರುತ್ತವೆ. ಪ್ರಕೃತಿಯಿಂದಲೇ ಇವುಗಳೆಲ್ಲಾ ಆವರಿಸಲ್ಪಟ್ಟಿದ್ದು ಪುರುಷಶಕ್ತಿಯಿಂದ ಕೂಡಿರುತ್ತವೆ. ಪ್ರಕೃತಿ–ಪುರುಷರ ಸಂಯೋಗದಿಂದ ಮಹತ್ ಅಥವಾ ಬುದ್ಧಿ ಉತ್ಪನ್ನವಾಗಿ ಅದರಿಂದ ಅಹಂಕಾರವು ಹುಟ್ಟಿರುತ್ತದೆ. ಅಹಂಕಾರದಿಂದ ಮನಸ್ಸು, ಪಂಚಕರ್ಮೇಂದ್ರಿಯಗಳು (ಬಾಯಿ, ಕೈ, ಕಾಲು, ಗುದ ಮತ್ತು ಲೈಂಗಿಕ ಇಂದ್ರಿಯ), ಪಂಚಜ್ಞಾನೇಂದ್ರಿಯಗಳು (ಕಣ್ಣು, ಕಿವಿ, ಮೂಗು, ನಾಲಗೆ ಮತ್ತು ಚರ್ಮ), ಪಂಚತನ್ಮಾತ್ರಗಳು (ರೂಪ, ರಸ, ಗಂಧ, ಸ್ಪರ್ಶ ಮತ್ತು ಶಬ್ದ), ಪಂಚ ಮಹಾಭೂತಗಳು (ಪೃಥ್ವಿ, ನೀರು, ತೇಜಸ್ಸು, ವಾಯು, ಆಕಾಶ) ಹುಟ್ಟಿಕೊಂಡವು. ಈ ೨೫ ತತ್ತ್ವಗಳೇ ಜಗತ್ತು, ಜೀವನ, ಜನ್ಮ ಇವುಗಳಿಗೆ ಆಧಾರ ಎಂದು ಸಾಂಖ್ಯ ದರ್ಶನ ಹೇಳುತ್ತದೆ.

**ಮೋಕ್ಷಮಾರ್ಗ** : ಪ್ರಕೃತಿ–ಪುರುಷರ ಸಂಯೋಗದಿಂದ ಹುಟ್ಟಿಕೊಂಡ ಈ ಪರಿ ಣಾಮಾತ್ಮಕವಾದ ಜೀವ–ಜಗತ್ತುಗಳ ಸರಿಯಾದ ತಿಳಿವಳಿಕೆಯೇ ಮೋಕ್ಷಕ್ಕೆ ಹಾದಿ ಯಾಗಿದೆ. ಈ ತಿಳಿವಳಿಕೆಗೆ ಸಹಾಯವಾಗಿ ಸಾಂಖ್ಯವು ಮೂರು ಪ್ರಮಾಣಗಳನ್ನು ಮಾತ್ರ ಒಪ್ಪುತ್ತದೆ. ಅವು ಯಾವುವೆಂದರೆ : (೧) ಪ್ರತ್ಯಕ್ಷ, (೨) ಅನುಮಾನ, (೩) ಶಬ್ದ.

ಜೀವನದಲ್ಲಿ ಸುಖದುಃಖಗಳಿದ್ದು ದುಃಖಗಳನ್ನು ಮೂರು ವಿಭಾಗಗಳಾಗಿ ಸಾಂಖ್ಯ ದರ್ಶನದಲ್ಲಿ ವಿಂಗಡಿಸಲಾಗಿದೆ. ಅವುಗಳನ್ನೇ ತಾಪತ್ರಯ ಎಂದು ಕರೆಯಲಾಗಿದೆ.

ತಾಪತ್ರಯಗಳು :

(೧) ಆಧ್ಯಾತ್ಮಿಕ ದುಃಖ, (೨) ಆಧಿಭೌತಿಕ, (೩) ಆಧಿದೈವಿಕ.

**ಆಧ್ಯಾತ್ಮಿಕ ದುಃಖ** : ಶಾರೀರಿಕವಾದ ಮತ್ತು ಮಾನಸಿಕವಾದ ದುಃಖಗಳೇ ಆಧ್ಯಾತ್ಮಿಕ ದುಃಖ, ಇವುಗಳಲ್ಲಿ ಜ್ವರ, ಶಿರೋವೇದನೆ, ಮಾನಸಿಕ ಚಿಂತೆ, ರೋಷ ಇತ್ಯಾದಿಗಳೂ ಸೇರಿರುತ್ತವೆ.

**ಆಧಿಭೌತಿಕ** : ಇತರ ಮನುಷ್ಯರು, ಪ್ರಾಣಿಗಳು, ಮುಳ್ಳು, ಕಲ್ಲು ಇತ್ಯಾದಿಗಳಿಂದ ಬರುವ ದುಃಖಗಳೇ ಆಧಿಭೌತಿಕ ದುಃಖ.

ಉದಾಹರಣೆ : ಕೊಲೆ, ಹಾವುಕಡಿತ, ಮುಳ್ಳು ಚುಚ್ಚುವುದು ಇತ್ಯಾದಿಗಳು.

ಆಧಿದೈವಿಕ : ಭೂತ, ಪ್ರೇತ ಇತ್ಯಾದಿ ಅತಿಪ್ರಾಕೃತಿಕ (Supernatural) ಶಕ್ತಿಗಳಿಂದ ಬರುವ ತೊಂದರೆಗಳು, ದುಃಖಗಳೇ ಆಧಿದೈವಿಕ ದುಃಖಗಳಾಗಿವೆ.

ಈ ಮೂರು ವಿಧದ ದುಃಖಗಳಿಂದ ವಿಮುಕ್ತನಾಗುವುದೇ ಸಾಂಖ್ಯದರ್ಶನವು ಕರೆಯುವ ಮೋಕ್ಷ ಅಥವಾ ಮುಕ್ತಿಯಾಗಿರುತ್ತದೆ. ದುಃಖಕ್ಕೆ ಅಜ್ಞಾನವೇ ಕಾರಣ ಎಂದು ಹೇಳುವ ಸಾಂಖ್ಯ, ವಿವೇಕದಿಂದ ಆತ್ಮ-ಅನಾತ್ಮಗಳನ್ನು ತಿಳಿದು ವಿವೇಕಜ್ಞಾನವಂತನಾಗಬೇಕೆಂದು ಹೇಳುತ್ತದೆ. ಈ ವಿವೇಕವನ್ನು ಬೆಳೆಸಿ ವಿವೇಕಜ್ಞಾನವನ್ನು ಪಡೆಯಲು ಸತತವಾದ ಅಭ್ಯಾಸ, ಪರಿಶ್ರಮ ಅಗತ್ಯ ಎಂದು ಸಾಂಖ್ಯದರ್ಶನದಲ್ಲಿ ಹೇಳಲಾಗಿದೆ.

ಮುಕ್ತಿ : ಮುಕ್ತಿಯಲ್ಲಿ ಎರಡು ವಿಧ : ಜೀವನ್ಮುಕ್ತಿ ಮತ್ತು ವಿದೇಹಮುಕ್ತಿ. ಆತ್ಮನು ಜೀವನದಲ್ಲಿ ಈ ಶರೀರದಲ್ಲಿ ಇರುವಾಗಲೇ ವಿವೇಕಜ್ಞಾನವನ್ನು ಹೊಂದಿ ಮುಕ್ತಿಯನ್ನು ಎಂದರೆ ದುಃಖ ತೊಂದರೆಗಳಿಂದ ಬಿಡುಗಡೆಯನ್ನು ಹೊಂದಿರುವುದೇ ಜೀವನ್ಮುಕ್ತಿ. ನರ್ತಕಿಯು ಪ್ರೇಕ್ಷಕರ ಮನತಣಿಸುವಂತೆ ನರ್ತಿಸಿ ಅನಂತರ ನಿಂತಾಗ ಆಕೆಯು ನರ್ತಕಿಯಾದರೂ ನರ್ತಿಸದೆ ಹೇಗೆ ನಿಂತಿರುತ್ತಾಳೋ ಹಾಗೆಯೇ ಜೀವನು ಮುಕ್ತನಾದರೂ ಶರೀರದಲ್ಲಿರುವ ಅವಸ್ಥೆಯೇ ಜೀವನ್ಮುಕ್ತಾವಸ್ಥೆಯಾಗಿರುತ್ತದೆ. ಶರೀರತ್ಯಾಗದ ಅಥವಾ ದೇಹಾವಸಾನದ ಅನಂತರ ಆತ್ಮನು (ಪುರುಷನು) ಶರೀರದ ಎಲ್ಲಾ ಬಂಧನಗಳಿಂದಲೂ ಮುಕ್ತನಾಗುವುದೇ ವಿದೇಹಮುಕ್ತಿ. ನರ್ತಕಿಯು ನರ್ತನದ ಪೋಷಾಕು ಬಿಚ್ಚಿ ಸ್ವಯಂ ಸ್ವರೂಪದಲ್ಲಿ ಇರುವ ಸ್ಥಿತಿಗೆ ಇದನ್ನು ಹೋಲಿಸಬಹುದು. ಹೀಗೆ ದುಃಖತ್ರಯಗಳಿಂದ ಮುಕ್ತನಾಗುವುದೇ ಮೋಕ್ಷ ಎಂದು ಸಾಂಖ್ಯದರ್ಶನದಲ್ಲಿ ಸವಿಸ್ತಾರವಾಗಿ ವಿವರಿಸಲಾಗಿದೆ.

ಪ್ರಕೃತಿ-ಪುರುಷರೇ ಪರಮೋನ್ನತವಾದ ತತ್ತ್ವ ಎಂದು ಹೇಳಿರುವ ಸಾಂಖ್ಯದರ್ಶನದಲ್ಲಿ ದೇವರು ಎಂದು ಬೇರೆ ಹೇಳಿರುವುದಿಲ್ಲ. ಪ್ರಕೃತಿ-ಪುರುಷರ ಸಂಯೋಗದಿಂದ ಈ ಸರ್ವ ಚರಾಚರ ಸೃಷ್ಟಿಯಾಯಿತು ಎಂದು ಹೇಳಿರುವ ಸಾಂಖ್ಯದರ್ಶನವು ಪ್ರಕೃತಿ-ಪುರುಷರ ಸಂಯೋಗಕ್ಕೆ ಯಾವುದು ಕಾರಣವಾಯಿತು ಎಂದು ನಿಶ್ಚಯವಾಗಿ ಹೇಳಿರುವುದಿಲ್ಲ. ಸಾಂಖ್ಯದರ್ಶನದ ಅನಂತರದ ಹೆಜ್ಜೆಯೋ ಎಂಬಂತೆ ಯೋಗದರ್ಶನದಲ್ಲಿ ಇದಕ್ಕೆ ಉತ್ತರವಿದ್ದು ದೇವರ ವಿಚಾರ ಅದರಲ್ಲಿ ವಿವರಿಸಲ್ಪಟ್ಟಿದೆ.

ಮಹರ್ಷಿ ಕಪಿಲರ ಸಾಂಖ್ಯಸೂತ್ರಗಳು ಮತ್ತು ಈಶ್ವರಕೃಷ್ಣರ ಸಾಂಖ್ಯಕಾರಿಕಾ, ಗೌಡಪಾದರ ಸಾಂಖ್ಯಕಾರಿಕಾಭಾಷ್ಯ, ವಿಜ್ಞಾನಭಿಕ್ಷುಗಳ ಸಾಂಖ್ಯಪ್ರವಚನಭಾಷ್ಯ— ಇವುಗಳು ಸಾಂಖ್ಯದರ್ಶನದ ಅನೇಕ ಗ್ರಂಥಗಳಲ್ಲಿ ಪ್ರಸಿದ್ಧ ಹಾಗೂ ಪ್ರಮುಖವಾದವುಗಳಾಗಿವೆ.

**(೪) ಯೋಗದರ್ಶನ :** ನ್ಯಾಯ, ವೈಶೇಷಿಕ ಮತ್ತು ಸಾಂಖ್ಯದರ್ಶನಗಳು ಜಗತ್ತು, ಜೀವ, ಜೀವನ ಸುಖ, ದುಃಖ, ಸೃಷ್ಟಿ, ಸ್ಥಿತಿ, ಲಯಗಳ ಬಗ್ಗೆ ವಿವರಣೆಗಳನ್ನು ನೀಡಿರುತ್ತವೆ. ಮೋಕ್ಷ ದೊರೆತಾಗಲೇ ಈ ಸಂಸಾರಚಕ್ರದಿಂದ ಮುಕ್ತಿ ಎಂದಿವೆ. ಆ ಮೋಕ್ಷ ಸಿದ್ಧಿಗೆ ಅತ್ಯಂತ ಸಾಧುವೂ, ವೈಜ್ಞಾನಿಕವೂ, ಪ್ರಾಯೋಗಿಕವೂ ಆದ ಹಾದಿಯನ್ನು

ಯೋಗದರ್ಶನವು ತೋರಿಸಿಕೊಟ್ಟಿರುತ್ತದೆ. ಹಿಂದೆ ಹೇಳಿದಂತೆ ಸಾಂಖ್ಯದರ್ಶನದಲ್ಲಿ ದೇವರು ಎಂಬುದನ್ನು ಒಪ್ಪಿರುವುದಿಲ್ಲ. ಆದರೆ ಯೋಗದರ್ಶನದಲ್ಲಿ ದೇವರನ್ನು ಈಶ್ವರ ಎಂದು ಕರೆಯಲಾಗಿದ್ದು ಈಶ್ವರನ ಅಸ್ತಿತ್ವವನ್ನು ಪೂರ್ಣವಾಗಿ ಒಪ್ಪಿ ದೃಢೀಕರಿಸ ಲಾಗಿದೆ. ಹಾಗಾಗಿ ಸಾಂಖ್ಯದರ್ಶನದ ಪ್ರಾಯೋಗಿಕವಾದ ಮುಂದಿನ ಹೆಜ್ಜೆಯೇ ಯೋಗದರ್ಶನ ಎಂದು ಹೇಳಿದರೆ ತಪ್ಪಾಗಲಾರದು. ಸಾಂಖ್ಯದಲ್ಲಿ ಹೇಳಿದ ವಿವೇಕ-ಜ್ಞಾನಪ್ರಾಪ್ತಿಗೆ ಯೋಗಾಭ್ಯಾಸವೇ ಸಾಧುವಾದ ಹಾದಿ ಎಂದು ಯೋಗದರ್ಶನದಲ್ಲಿ ಹೇಳಲಾಗಿದೆ. ಆತ್ಮಸಾಕ್ಷಾತ್ಕಾರದ ಸಾಧನೆಗೆ ಅನುಕೂಲವಾದ ಸಾಧನಾ ಹೆಜ್ಜೆಗಳನ್ನು ಈ ದರ್ಶನದಲ್ಲಿ ನೀಡಲಾಗಿದ್ದು ತತ್ತ್ವಕ್ಕಿಂತ ಹೆಚ್ಚಾಗಿ ಅನುಷ್ಠಾನಕ್ಕೆ ಪ್ರಾಧಾನ್ಯವನ್ನು ನೀಡಿರುವುದು ಈ ದರ್ಶನದ ವೈಶಿಷ್ಟ್ಯವಾಗಿರುತ್ತದೆ. ಜಗತ್ತಿನ ಪದಾರ್ಥಗಳು, ಜೀವ —ಈ ವಿಚಾರಗಳಲ್ಲಿ ಸಾಂಖ್ಯತತ್ತ್ವಗಳನ್ನು ಯೋಗದರ್ಶನದಲ್ಲಿ ಬಹುಮಟ್ಟಿಗೆ ಒಪ್ಪ ಲಾಗಿದ್ದು ಸಾಂಖ್ಯ ಮತ್ತು ಯೋಗದರ್ಶನಗಳಿಗೆ ಪರಸ್ಪರ ಅಧಿಕಸಂಬಂಧ ಮತ್ತು ಸಾಮರಸ್ಯವಿದೆ. ಯೋಗದರ್ಶನದಲ್ಲಿ ಸಾಂಖ್ಯರಂತೆ ಪ್ರತ್ಯಕ್ಷ. ಅನುಮಾನ ಮತ್ತು ಶಬ್ದ ಗಳೆಂಬ ಮೂರು ಪ್ರಮಾಣಗಳನ್ನು ಸ್ವೀಕರಿಸಲಾಗಿದೆ.

ಯೋಗಶಬ್ದವು ಯುಜ್ ಧಾತುವಿನಿಂದ ಉತ್ಪತ್ತಿಯಾಗಿದೆ. ಯುಜ್ ಎಂದರೆ ಸೇರಿ ಸುವುದು. ಜೀವಾತ್ಮನನ್ನು ಪರಮಾತ್ಮನಲ್ಲಿ ಸೇರಿಸುವುದೇ ಯೋಗ.

ಈ ದರ್ಶನದ ಪ್ರಣೇತಾರರು ಪತಂಜಲಿ ಮಹರ್ಷಿಗಳಾಗಿರುತ್ತಾರೆ. ಯೋಗ ಎಂದರೇನು ? ಎಂಬುದಕ್ಕೆ ಪಾತಂಜಲಯೋಗಸೂತ್ರದಲ್ಲಿ ಪ್ರಥಮದಲ್ಲೇ ಉತ್ತರ ನೀಡಲಾಗಿದೆ.

"ಯೋಗಃ ಚಿತ್ತವೃತ್ತಿನಿರೋಧಃ" ಎಲ್ಲಾ ಚಿತ್ತವೃತ್ತಿಗಳ ಅಂದರೆ ಮಾನಸಿಕವಾದ ಪ್ರವೃತ್ತಿಗಳ ನಿರೋಧವೇ ಯೋಗ. ವೃತ್ತಿ ಎಂದರೆ ಮನಸ್ಸಿನ ಯೋಚನಾಕ್ರಮ. ಮಾನಸಿಕ ಸರೋವರದಲ್ಲಿನ ಅಲೆಯೇ ವೃತ್ತಿ. ಪ್ರತಿ ವೃತ್ತಿಯೂ ಸಂಸ್ಕಾರವನ್ನುಂಟು ಮಾಡಿ ಸಂಸ್ಕಾರದಿಂದ ವ್ಯಕ್ತಿಯ ಸ್ವಭಾವ-ಕ್ರಿಯೆಗಳನ್ನು ನಿರ್ಮಿಸುತ್ತದೆ.

ಮನುಷ್ಯನ ಮನಸ್ಸಿನಲ್ಲಿ ಸಾಮಾನ್ಯವಾಗಿ ಐದು ತರಹದ ವೃತ್ತಿಗಳಿವೆ ಎಂದು ಯೋಗ ದರ್ಶನದಲ್ಲಿ ಹೇಳಲಾಗಿದೆ. ಅವು ಯಾವುವೆಂದರೆ :

(೧) ಕ್ಷಿಪ್ತ : ವಿಷಯಗಳ ಮಧ್ಯೆ ಎಸೆಯಲ್ಪಡುವ ಅವಸ್ಥೆ.

(೨) ಮೂಢ : ನಿದ್ದೆಯಲ್ಲಿರುವಂಥ ಸ್ಥಿತಿಯೇ ಮೂಢಸ್ಥಿತಿ.

(೩) ವಿಕ್ಷಿಪ್ತ : ಸತ್ತ್ವಪ್ರಧಾನವಾದ ಸ್ಥಿತಿಯಾಗಿದ್ದು ಇಲ್ಲಿ ಮನಸ್ಸು ವಿಷಯ ಮತ್ತು ಧ್ಯಾನಗಳ ಮಧ್ಯೆ ಓಲಾಡುತ್ತಿರುತ್ತದೆ.

(೪) ಏಕಾಗ್ರ : ಯಾವುದೋ ಒಂದು ವಸ್ತುವಿನ ಮೇಲೆ ಏಕಾಗ್ರತೆ ಹೊಂದಿರುವ ಸ್ಥಿತಿ.

(೫) ನಿರುದ್ಧ : ಮೇಲಿನ ನಾಲ್ಕು ಸ್ಥಿತಿಗಳಿಂದ ಹೊರಗಾದ ಸ್ಥಿತಿ. ಎಂದರೆ ಮನಸ್ಸು ಪೂರ್ಣವಾದ ಹತೋಟಿಯಲ್ಲಿ ಇರುವ ಸ್ಥಿತಿ. ಈ ಸ್ಥಿತಿಗೆ ಏರಿದಾಗ ಜೀವಿಗೆ ಸಮಾಧಿಯ ಅನುಭವ ದೊರೆಯುತ್ತದೆ. ಸಮಾಧಿ ದೊರೆತಾಗ ಕರ್ಮಗಳ ಬಂಧನ ಕಳಚಿಬೀಳುತ್ತದೆ, ಮೋಕ್ಷಲಾಭವಾಗುತ್ತದೆ.

ಜೀವನದ ಈ ಹುಟ್ಟುಸಾವುಗಳೆಂಬ ಕರ್ಮಚಕ್ರದ ಬಂಧನಕ್ಕೆ ಜೀವಿಯು ಸಿಲುಕಲು ಮೂಲವಾಗಿ ಐದು ಕಾರಣಗಳಿವೆ ಎಂದು ಹೇಳಿ, ಅದೇ ಪಂಚಕ್ಲೇಶಗಳೆಂದು (ದುಃಖಗಳು) ಯೋಗದರ್ಶನದಲ್ಲಿ ವಿವರಿಸಲಾಗಿದೆ.

**ಪಂಚಕ್ಲೇಶಗಳು :** (೧) ಅವಿದ್ಯೆ, ಆತ್ಮ-ಅನಾತ್ಮಗಳ ವಿಚಾರವಾಗಿ ಸರಿಯಾದ ಜ್ಞಾನ ಇಲ್ಲದಿರುವಿಕೆ.

(೨) ಅಸ್ಮಿತೆ : ಅಹಂಕಾರ ; ಎಂದರೆ 'ನಾನು' ಎಂಬ ಭಾವನೆ.

(೩) ರಾಗ : ಲೋಕದಲ್ಲಿರುವ ವಸ್ತುಗಳ ಮೇಲಿನ ಆಸಕ್ತಿ, ಇಷ್ಟಗಳು.

(೪) ದ್ವೇಷ : (ನಿವೃತ್ತಿಗೆ ಕಾರಣವಾದ ಜಿಹಾಸೆ) ತನ್ನ ರಾಗಗಳು ನೆರವೇರದಿದ್ದಾಗ ಉಂಟಾಗುವ ಅನಿಷ್ಟಬುದ್ಧಿ. ಇತರರ ಮೇಲೆ ಉಂಟಾಗುವ ದ್ವೇಷ.

(೫) ಅಭಿನಿವೇಶ : ಮರಣಭಯ, ಬದುಕಬೇಕೆಂಬ ಇಚ್ಛೆ.

ಮನುಷ್ಯನ ಮನಸ್ಸು ಮೇಲೆ ವಿವರಿಸಿದ ಐದು ಹಂತಗಳನ್ನು ಹಾದು ಪರಿಶುದ್ಧವೂ ಪರಿಪೂರ್ಣವೂ ಆದ ಸಮಾಧಿಸ್ಥಿತಿಯನ್ನು ಏರಿ ಪಂಚಕ್ಲೇಶಗಳ ಬಂಧನದಿಂದ ಮುಕ್ತವಾದಾಗ ಜೀವಿಗೆ ಮುಕ್ತಿಯು ದೊರೆಯುತ್ತದೆ. ಮುಕ್ತಿಲಾಭಕ್ಕೆ ಸಾಧನವಾದ ಸಮಾಧಿಸ್ಥಿತಿಯನ್ನು ಪಡೆಯಲು ಸರಿಯಾದ ಸಾಧನೆಯನ್ನು ಯೋಗಾಭ್ಯಾಸ ರೀತಿಯಾಗಿ ಮಾಡಬೇಕೆಂದು ಯೋಗದರ್ಶನದಲ್ಲಿ ಹೇಳಲಾಗಿದೆ. ಆ ಯೋಗಾಭ್ಯಾಸದ ಮಾರ್ಗವೇ ಅಷ್ಟಾಂಗ ಮಾರ್ಗವಾಗಿದ್ದು ಅವುಗಳ ಸರಿಯಾದ ಪಾಲನೆಯಿಂದ ಮುಕ್ತಿಯು ನಿಶ್ಚಯವಾಗಿ ದೊರೆಯುತ್ತದೆ ಎಂದು ಯೋಗದರ್ಶನದಲ್ಲಿ ಹೇಳಿ ದೃಢೀಕರಿಸಲಾಗಿದೆ.

**ಯೋಗದ ಅಷ್ಟಾಂಗಮಾರ್ಗ :** ಅಷ್ಟಾಂಗಮಾರ್ಗ ಎಂದರೆ ಎಂಟು ಅಂಗಗಳಿಂದ ಅಥವಾ ಎಂಟು ಮೆಟ್ಟಿಲುಗಳಿಂದ ಕೂಡಿದ ಮಾರ್ಗ ಎಂದು ಅರ್ಥ. ಯೋಗಸಾಧನೆಯ ಎಂಟು ಮೆಟ್ಟಿಲುಗಳು ಯಾವುವೆಂದರೆ :

(೧) ಯಮ, (೨) ನಿಯಮ, (೩) ಆಸನ, (೪) ಪ್ರಾಣಾಯಾಮ, (೫) ಪ್ರತ್ಯಾಹಾರ, (೬) ಧಾರಣಾ, (೭) ಧ್ಯಾನ, (೮) ಸಮಾಧಿ.

ಸಾಧಕನು ಯೋಗಮಾರ್ಗದ ಈ ಎಂಟು ಮೆಟ್ಟಿಲುಗಳನ್ನು ಯಶಸ್ವಿಯಾಗಿ ಹಾದು ಮುಕ್ತಿಯ ಗುರಿಯನ್ನು ತಲಪಲು ತನ್ನ ಸಾಧನೆಯಂತೆಯೇ ಭಗವಂತನ ಕೃಪೆಯೂ ಬೇಕು ಎಂದು ಯೋಗದರ್ಶನವು ಹೇಳುತ್ತದೆ.

ಭಗವಂತನನ್ನು ಈಶ್ವರನೆಂದು ಕರೆದು ಈಶ್ವರನು ತತ್ತ್ವದೃಷ್ಟಿಗಿಂತಲೂ ಅನುಷ್ಠಾನ ದೃಷ್ಟಿಯಿಂದ ಹೆಚ್ಚು ಅಗತ್ಯ ಮತ್ತು ಅನುಭವಗಮ್ಯ ಎಂದು ಈ ದರ್ಶನದಲ್ಲಿ ಸ್ಪಷ್ಟಪಡಿಸಲಾಗಿದೆ. ಈಶ್ವರನ ಕುರಿತಾಗಿ "ಕ್ಲೇಶಕರ್ಮವಿಪಾಕಾಶಯೈರಪರಾಮೃಷ್ಟಃ ಪುರುಷ ವಿಶೇಷಃ ಈಶ್ವರಃ" ಎಂದು ಯೋಗದರ್ಶನದಲ್ಲಿ ಹೇಳಲಾಗಿದೆ. ಎಂದರೆ ಕ್ಲೇಶಾದಿಗಳಿಂದ ಅಪರಾಮೃಷ್ಟನಾದವನು ಈಶ್ವರನು ಎಂದು ಅರ್ಥ. ಅವನು ಮಹದೈಶ್ವರ್ಯಗುಣಗಳಿಂದ ಪೂರ್ಣನಾಗಿದ್ದು ಭಗವಂತನಾಗಿರುತ್ತಾನೆ. ಸರ್ವಜ್ಞನೂ ಶಾಶ್ವತನೂ ಆಗಿ ಏಕಮೇವಾ ದ್ವಿತೀಯನಾಗಿರುತ್ತಾನೆ. ಓಂಕಾರವು ಈಶ್ವರನ ಸ್ವರೂಪನಿರ್ದೇಶಕವಾದ ಮಾತಿನ ಮೂರ್ತಿ (ತಸ್ಯ ವಾಚಕಃ ಪ್ರಣವಃ) ಎಂದು ಹೇಳಲಾಗಿದೆ.

ಯೋಗದರ್ಶನಕ್ಕೆ 'ರಾಜಯೋಗ' ಎಂಬ ಇನ್ನೊಂದು ಹೆಸರೂ ಇದೆ. ಈ ಯೋಗ ದರ್ಶನದ ಸಾಧನಾಭಾಗವಾದ ಅಷ್ಟಾಂಗಮಾರ್ಗಗಳ ಮತ್ತಿತರ ವಿಚಾರವಾಗಿ ಹೆಚ್ಚಿನ ವಿವರಗಳನ್ನು ಈ ಗ್ರಂಥದ "ಹಿಂದೂಧರ್ಮದ ನಾಲ್ಕು ಯೋಗಗಳು" ಎಂಬ ಅಧ್ಯಾಯ ದಲ್ಲಿ ನಿರೂಪಿಸಲಾಗುವುದು.

ಪತಂಜಲಿ ಮಹರ್ಷಿಗಳಿಂದ ರಚಿತವಾದ ಯೋಗಸೂತ್ರಗಳೆಂಬ ಕೃತಿಯು ಈ ದರ್ಶನದ ಆಧಾರಗ್ರಂಥವಾಗಿರುತ್ತದೆ. ಈ ಸೂತ್ರಗಳ ಕುರಿತಾಗಿ ಬರೆಯಲ್ಪಟ್ಟ ವ್ಯಾಸ ಭಾಷ್ಯ, ವಾಚಸ್ಪತಿಯವರ 'ತತ್ತ್ವವೈಶಾರದೀ' ಎಂಬ ವಿವರಣಾಗ್ರಂಥ, ಭೋಜರಾಜರ 'ರಾಜಮಾರ್ತಾಂಡ' ಎಂಬ ಭಾಷ್ಯಗ್ರಂಥ—ಇವುಗಳು ತುಂಬಾ ಪ್ರಸಿದ್ಧ ಹಾಗೂ ಪ್ರಮುಖವಾದ ಗ್ರಂಥಗಳಾಗಿವೆ.

**(೫) ಮೀಮಾಂಸಾ ದರ್ಶನ (ಪೂರ್ವಮೀಮಾಂಸೆ):** ಮೀಮಾಂಸಾ ದರ್ಶನದ ಪ್ರವರ್ತಕರು ಜೈಮಿನಿ ಮಹರ್ಷಿಯವರಾಗಿರುತ್ತಾರೆ. ವೇದದ ಕರ್ಮಕಾಂಡದ ಅಗತ್ಯವೇ ಇಲ್ಲ ಎಂದೂ ಕೊನೆಗೆ ಆತ್ಮಸಾಕ್ಷಾತ್ಕಾರಕ್ಕೆ ವೇದಗಳ ನೆರವು ಅವಶ್ಯವಿಲ್ಲವೆಂದೂ ಆಸ್ತಿಕರಲ್ಲೇ ಒಂದು ರೀತಿಯ ನಾಸ್ತಿಕ ಭಾವನೆ ಉತ್ಪತ್ತಿಯಾಗುವಂತಹ ಕಾಲವೂ ಒಂದು ಬಂದಿತು. ಆ ಸಂದರ್ಭದಲ್ಲಿ ವೇದದ ಕರ್ಮಕಾಂಡದ ರಕ್ಷಣೆಗೆ ಹುಟ್ಟಿಕೊಂಡಿತೋ ಎಂಬಂತೆ ಉತ್ಪತ್ತಿಯಾದ ದರ್ಶನವೇ ಮೀಮಾಂಸಾದರ್ಶನ. ಬ್ರಹ್ಮದ ಹಾಗೂ ಧರ್ಮದ ಕುರಿತಾಗಿ ವೇದವನ್ನು ಪ್ರಮಾಣವಾಗಿ ಆಧಾರವಾಗಿರಿಸಿ ಯಥಾರ್ಥಜ್ಞಾನ ವನ್ನು ಬೋಧಿಸಲು ಆವಿರ್ಭವಿಸಿದ ದರ್ಶನವೇ ಮೀಮಾಂಸಾದರ್ಶನ ಎನ್ನಬಹುದು.

ಮೀಮಾಂಸಾ ಎಂದರೆ ಪ್ರಮಾಣಪುರಸ್ಸರವಾಗಿ ವಿಚಾರಮಾಡುವುದು ಎಂದು ತಾತ್ಪರ್ಯ. ವೇದಾರ್ಥ-ವಿಚಾರ-ಶಾಸ್ತ್ರವೆಂದೂ ಅರ್ಥವಾಗುತ್ತದೆ ಎಂಬ ಇನ್ನೊಂದು ಮತವೂ ಇದೆ. ವೇದವು ಅಪೌರುಷೇಯವಾದುದು. ಪುರುಷನ ತಿಳಿವಳಿಕೆಯು ದೋಷ ದಿಂದ ಮಿಶ್ರಿತವಾಗಿದ್ದು ಅಪೌರುಷೇಯವಾದ ವೇದವು ದೋಷರಹಿತವಾದುದು. ಹಾಗಾಗಿ ಧರ್ಮ—ಅಧರ್ಮಗಳ ನಿರ್ಣಯದ ಅಧಿಕಾರಿಯು ವೇದವಾಗಿದ್ದು, ಅದು ಸ್ವಯಮೇವ ಪ್ರಮಾಣವಾದುದಾಗಿದೆ. ವೇದೋಕ್ತವಾದ ವೈದಿಕ ಕ್ರಿಯಾನುಸರಣದಿಂದ ಮಾತ್ರ ಮುಕ್ತಿಲಾಭ ಎಂದು ಮೀಮಾಂಸಕಾರರು ಹೇಳುತ್ತಾರೆ.

ಮೀಮಾಂಸಕರು ಪ್ರತ್ಯಕ್ಷ, ಅನುಮಾನ, ಶಬ್ದ ಪ್ರಮಾಣಗಳ ಜೊತೆಗೆ ಉಪಮಾನ ವನ್ನೂ ಸ್ವೀಕರಿಸಿರುವುದು ಮಾತ್ರವಲ್ಲದೆ ಹೊಸದಾಗಿ ಅರ್ಥಾಪತ್ತಿ ಮತ್ತು ಅನುಪಲಬ್ಧಿ ಎಂಬ ಪ್ರಮಾಣಗಳನ್ನು ಸೇರಿಸಿರುತ್ತಾರೆ.

ವೇದವೇ ಸರ್ವವಿಧದಿಂದಲೂ ಸರಿಯಾದ ಆಧಾರವಾಗಿದ್ದು ವೇದವೇ ಸರ್ವಸ್ವ. ಅದರ ಸರಿಯಾದ ಜ್ಞಾನದಿಂದಲೇ ಧರ್ಮದ ತಿಳಿವಳಿಕೆ ಉಂಟಾಗುತ್ತದೆ. ಧರ್ಮ ಎಂದರೆ ಮಾನವನು ಇಹ ಮತ್ತು ಪರಲೋಕಗಳ ದೃಷ್ಟಿಯಿಂದ ಸುಖಶಾಂತಿಗಳಿಗಾಗಿ, ಮೋಕ್ಷಸಿದ್ಧಿಗಾಗಿ ಮಾಡಬೇಕಾದ ಕೆಲಸಗಳು. ಧರ್ಮದ ಅನುಷ್ಠಾನದಿಂದ ಸುಖಸಿದ್ಧಿ ಆಗುತ್ತದೆ ಎಂದು ಮೀಮಾಂಸಾದರ್ಶನದಲ್ಲಿ ಸ್ಪಷ್ಟಪಡಿಸಲಾಗಿದೆ. ಮೀಮಾಂಸಾ ದರ್ಶನದಲ್ಲಿ ವೇದೋಕ್ತ ಕರ್ಮಗಳ ಅನುಷ್ಠಾನವೇ ಧರ್ಮ ಎಂದು ಕರೆಯಲಾಗಿದೆ.

ವೇದೋಕ್ತ ಕರ್ಮಗಳನ್ನು ಪ್ರತಿಯೊಬ್ಬನು ಮಾಡಬೇಕು.

ಅವುಗಳಲ್ಲಿ ನಾಲ್ಕು ವಿಧಗಳಿವೆ :

(೧) ನಿತ್ಯಕರ್ಮ : ಸಂಧ್ಯಾವಂದನೆ ಹಾಗೂ ಅಗ್ನಿಹೋತಾದ್ರಿಗಳು.

(೨) ನೈಮಿತ್ತಿಕ ಕರ್ಮ : ನಿರ್ದಿಷ್ಟವಾದ ಕಾಲದಲ್ಲಿ ವ್ರತನೇಮಾದಿಗಳನ್ನು ಅನುಸರಿಸಿ ಮಾಡುವ ಕರ್ಮಗಳು. ಉದಾ : ಗ್ರಹಣಕಾಲದಲ್ಲಿ ಸ್ನಾನಜಪಾದಿಗಳನ್ನು ಮಾಡುವಿಕೆ, ಸಂಕ್ರಾಂತಿ ಸ್ನಾನ—ಇತ್ಯಾದಿಗಳು.

(೩) ಕಾಮ್ಯಕರ್ಮ : ವಿಶೇಷವಾದ ಫಲವನ್ನು ಬಯಸಿ ಮಾಡುವ ಪೂಜೆ, ವ್ರತ ಇತ್ಯಾದಿ ಕರ್ಮಗಳು.

(೪) ನಿಷಿದ್ಧಕರ್ಮ : ನಿಷೇಧಿಸಲ್ಪಟ್ಟಂತಹ, ಎಂದರೆ ಮಾಡಬಾರದೆಂದು ಶಾಸ್ತ್ರದಲ್ಲಿ ಹೇಳಲ್ಪಟ್ಟಂತಹ ಕೆಲಸಗಳು.

ವೇದೋಕ್ತವಾದ ಕರ್ಮಗಳಿಗೆ ತಕ್ಕ ಫಲವನ್ನು ಕೊಡುವ ದೇವರೊಬ್ಬನಿದ್ದಾನೆ ಎಂದು ಮೀಮಾಂಸಕರು ಒಪ್ಪುವುದಿಲ್ಲ. ಎಲ್ಲವೂ 'ಅಪೂರ್ವ' ಎಂಬುದರಿಂದಾಗಿ ಆಗುತ್ತದೆ. ಅಪೂರ್ವ ಎಂದರೆ ಕರ್ಮ ಮತ್ತು ಅದರ ಫಲಕ್ಕಿರುವ ಅಗತ್ಯದ ಸಂಬಂಧ ವಾಗಿರುತ್ತದೆ. ಅದು ಅವ್ಯಕ್ತವಾದ ಒಂದು ಶಕ್ತಿಯಾಗಿದ್ದು, ಕರ್ಮದಿಂದಾಗಿ ಕರ್ತೃವಿನ ಆತ್ಮದಲ್ಲಿ ಸೃಷ್ಟಿಗೊಳ್ಳಲ್ಪಡುವಂತಾಗಿ ಕರ್ಮಫಲದ ಸಾಕ್ಷಾತ್ಕಾರಕ್ಕೆ ಎಂದರೆ ಮೋಕ್ಷಕ್ಕೆ ನೆರವಾಗುತ್ತದೆ.

ಮೀಮಾಂಸಾದರ್ಶನ ಪ್ರಕಾರ ಜಗತ್ತು ಸತ್ಯವಾದುದು. ಮೋಕ್ಷ ಎಂದರೆ ಜಗತ್ತಿನೊಡನೆ ಆತ್ಮದ ಸಂಬಂಧ ನಾಶ, ಹೀಗಾಗಲು ಸ್ವರ್ಗಪ್ರಾಪ್ತಿಯಾಗಬೇಕು. ಸ್ವರ್ಗ ಪ್ರಾಪ್ತಿಯು ಜೀವನದ ಮಹೋನ್ನತ ಗುರಿಯಾಗಿದ್ದು ಅದನ್ನು ಸೇರಲು ವೇದೋಕ್ತ ವಾದ ಕರ್ಮಗಳನ್ನು ಅನುಷ್ಠಾನಮಾಡುವುದೇ ದಾರಿ ಎಂದು ಮೀಮಾಂಸಾದರ್ಶನದಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ.

ನಿಷಿದ್ಧಕರ್ಮವನ್ನು ಮಾಡುತ್ತಾ ಧರ್ಮಕ್ಕೆ ವಿರೋಧವಾಗಿ ವರ್ತಿಸುವುದರಿಂದಲೇ ಮನುಷ್ಯನು ಕರ್ಮಬಂಧಕ್ಕೆ ಸಿಲುಕಲು ಕಾರಣ ಎಂದು ಮೀಮಾಂಸಕರು ಅಭಿಪ್ರಾಯ ಪಡುತ್ತಾರೆ. ಹಾಗೆಯೇ ಜೀವರು ಅಸಂಖ್ಯ. ಜಗತ್ತು ಕರ್ಮದಿಂದ ಹತೋಟಿಯಲ್ಲಿ ಇಡಲ್ಪಟ್ಟಿರುತ್ತದೆ ಎಂದು ಹೇಳುತ್ತಾರೆ.

ಪೂರ್ವಜನ್ಮದ ಕರ್ಮಫಲ ಅನುಭವಿಸುವ ಭಾಗ್ಯವುಳ್ಳ ಆತ್ಮರೂ, ಅವುಗಳನ್ನು ಅನುಭವಿಸಲು ಸಾಧನವಾದ ಇಂದ್ರಿಯಗಳೆಂಬ ಭೋಗಸಾಧನಗಳೂ, ಮತ್ತು ಸುಖ ದುಃಖಗಳೆಂಬ ಅನುಭವಕ್ಕೆ ಸಾಧನವಿಷಯವಾದ ಭೋಗ್ಯವಸ್ತುಗಳೂ ಈ ಜಗತ್ತಿನಲ್ಲಿ ಇವೆ ಎಂದು ಮೀಮಾಂಸಕರು ಹೇಳಿರುತ್ತಾರೆ.

ಕಾಲವು ಸರಿದಂತೆ ಮೀಮಾಂಸಾ ಶಾಸ್ತ್ರಕಾರರು ಹೇಳಿದ ವಿಚಾರಗಳ ಬಗ್ಗೆ ಸಂಶಯ, ಅಪೂರ್ಣತೆಗಳು ಕಂಡುಬಂದು ಎರಡು ವಿಭಾಗದ ಪಂಥಗಳು ಅವುಗಳ ಒಳಗೇ ಹುಟ್ಟಿ ಕೊಂಡವು. ಅವು ಯಾವುವೆಂದರೆ :

(೧) ಕುಮಾರಿಲಭಟ್ಟ ಪ್ರಣೀತ—ಭಾಟ್ಟ ಮತ.

(೨) ಪ್ರಭಾಕರ ಪ್ರಣೀತ—ಪ್ರಾಭಾಕರ ಮತ.

ಕುಮಾರಿಲಭಟ್ಟನ ಮತದಂತೆ ವೇದವು ಶ್ರೇಷ್ಠವಾದ ಪ್ರಮಾಣವಾಗಿದೆ. ವೇದದಲ್ಲಿ ಹೇಳಿರುವ ಯಜ್ಞಯಾಗಾದಿ ನೈಮಿತ್ತಿಕ ಕರ್ಮಗಳಲ್ಲಿ ಮಾನವನಿಗಿರುವ ಸುಖಸಿದ್ಧಿ ಮತ್ತು ದುಃಖ ತಪ್ಪಿಸುವಿಕೆಯ ಬಯಕೆಯನ್ನು ನೆರವೇರಿಸಲು ಇರುವವುಗಳಾಗಿವೆ. ಇಂತಿಂತಹ ಕರ್ಮಗಳನ್ನು ಮಾಡಿದರೆ ಅದರಿಂದ ಮನುಷ್ಯರಿಗೆ ಸಾಧನೆಯ ಗುರಿ ತಲುಪಲು ಸಾಧ್ಯ ಎಂದು ವೇದ ಹೇಳುತ್ತದೆ. ಹಾಗಾಗಿ ಮಾನವನು ವೈದಿಕ ಕರ್ಮವನ್ನು ಅನುಷ್ಠಾನ ಮಾಡಲು ಇಷ್ಟಸಾಧನಾಜ್ಞಾನವು ಅವನನ್ನು ಪ್ರೇರೇಪಿಸುತ್ತದೆ ಎಂದು ಹೇಳುತ್ತಾರೆ. ವೇದವೇ ಧರ್ಮವೇನು ಎಂಬುದನ್ನು ನಿರ್ಧರಿಸುವ ಸಾಮರ್ಥ್ಯ ಹೊಂದಿರುವುದಾಗಿದೆ. ಧರ್ಮವು ಸುಖಕ್ಕೆ ಸಾಧನವಾಗಿದೆ.

ಮೋಕ್ಷ ಎಂದರೆ ಎಲ್ಲ ದುಃಖನೋವುಗಳಿಂದ ವಿಮುಕ್ತವಾಗಿರುವ ಆನಂದದ ಸ್ಥಿತಿ. ಮೋಕ್ಷವನ್ನು ಕರ್ಮ ಮತ್ತು ಜ್ಞಾನದ ಮೂಲಕ ಪಡೆಯಬಹುದು.

ದೇವರನ್ನು ಮೀಮಾಂಸಕಾರರು ಒಪ್ಪಿಲ್ಲವಾದರೂ ಕುಮಾರಿಲಭಟ್ಟನು ಒಪ್ಪಿದ್ದು ತನ್ನ ಶ್ಲೋಕವಾರ್ತಿಕ ಗ್ರಂಥದಲ್ಲಿ* ಶಿವನನ್ನು ಶ್ರೇಯಃಪ್ರಾಪ್ತಿಗಾಗಿ ಪ್ರಾರ್ಥಿಸಿರುವುದು ಕಂಡುಬರುತ್ತದೆ. ಹಾಗಾಗಿ ಅವನನ್ನು ಸೇಶ್ವರಮೀಮಾಂಸಕಾರನೆಂದು ಕರೆಯುವುದಿದೆ.

ಪ್ರಾಭಾಕರ ಮತದಂತೆ ವೇದವು ಮಾನವನ ಮೇಲೆ ಪ್ರಭುತ್ವಮಾಡುವ ರೀತಿಯಲ್ಲಿ ಕರ್ಮದ ಬಗ್ಗೆ ವಿಧಿವಿಧಾನಗಳನ್ನು ಹೊಂದಿದೆ. ಮಾನವನು ವೇದೋಕ್ತಕರ್ಮಗಳ ಅನುಷ್ಠಾನ ಮಾಡುವುದಕ್ಕೆ ತನ್ನಲ್ಲಿರುವ ಕರ್ತವ್ಯಜ್ಞಾನ ಮತ್ತು ವೇದಗಳ ಬಗ್ಗೆ ಗೌರವ ಹಾಗೂ ವೇದಪ್ರಮಾಣದ ಮೇಲ್ಮೆಯ ಕುರಿತಾದ ನಂಬಿಗೆಯೇ ಆಗಿದೆ. ಧರ್ಮವೇ ಪುರುಷಾರ್ಥ. ಮೋಕ್ಷ ಎಂದರೆ ಎಲ್ಲ ಸುಖ ಮತ್ತು ದುಃಖಗಳು ಇಲ್ಲದಂತಾಗಿ ಆತ್ಮದ ಸಹಜಸ್ಥಿತಿಯಾಗಿರುತ್ತದೆ.

ಈ ಎರಡು ಪಂಥದವರೂ ವೇದವನ್ನು ಶ್ರೇಷ್ಠ ಪ್ರಮಾಣವೆಂದು ಅಂಗೀಕರಿಸುತ್ತಾರೆ, ಇವರಲ್ಲಿ ಕುಮಾರಿಲಭಟ್ಟರ ಪಂಥವು ಹೆಚ್ಚು ಪ್ರಸಿದ್ಧವಾಗಿರುತ್ತದೆ.

ಮೀಮಾಂಸದರ್ಶನವು ವೇದದ ಶಬ್ದಾರ್ಥಕ್ಕೆ ವೈದಿಕ ಕರ್ಮಗಳ ವಿಧಿವಿಧಾನ ಅಗತ್ಯಗಳ ಬಗ್ಗೆ ಬರೇ ಶಾಬ್ದಿಕ ಅಲ್ಲದೆ ಆಧ್ಯಾತ್ಮಿಕವಾದ ದೃಷ್ಟಿಯಿಂದಲೂ ವಿಶ್ಲೇಷಣೆ ನಡೆಸಿದೆ. ಇದರಿಂದಾಗಿ ವೇದದ ಅರ್ಥಗ್ರಹಣಕ್ಕೆ ಜೀವನದಲ್ಲಿ ಅದರ ಸ್ಥಾನಮೌಲ್ಯಗಳ ಬಗ್ಗೆ ತೀರ್ಮಾನಕ್ಕೆ ಬರಲು ವಿಚಾರವಾದಿಗಳಿಗೆ ತುಂಬ ಸಹಾಯವಾಗಿದೆ. ಭಾಷೆಯ ಬೆಳವಣಿಗೆ, ಅರ್ಥ ಹಾಗೂ ಸೌಂದರ್ಯವೃದ್ಧಿಗೆ ವ್ಯಾಕರಣಶಾಸ್ತ್ರ ಹೇಗೆ ಅಗತ್ಯವೋ ಹಾಗೆಯೇ ವೇದಗಳ ಅರ್ಥಗ್ರಹಣಕ್ಕೆ, ನಿಶ್ಚಿತವಾದ ಆಧ್ಯಾತ್ಮಿಕ ತತ್ತ್ವದ ತಾತ್ಪರ್ಯ

---

"ಓಂ ವಿಶುದ್ಧಜ್ಞಾನದೇಹಾಯ ತ್ರಿವೇದೀ ದಿವ್ಯಚಕ್ಷುಸೇ ।
ಶ್ರೇಯಃಪ್ರಾಪ್ತಿನಿಮಿತ್ತಾಯ ನಮಃ ಸೋಮಾರ್ಧಧಾರಿಣೇ ॥"

ವಿಶುದ್ಧಜ್ಞಾನವೇ ಯಾರ ಶರೀರವಾಗಿದೆಯೋ, ತ್ರಿವೇದಗಳು ಯಾರ ದಿವ್ಯನೇತ್ರಗಳಾಗಿವೆಯೋ, ಯಾರು ಕಲ್ಯಾಣಪ್ರಾಪ್ತಿಯ ನಿಮಿತ್ತನಾಗಿರುವರೋ ಮತ್ತು ತನ್ನ ಮಸ್ತಕದಲ್ಲಿ ಅರ್ಧಚಂದ್ರ ಮುಕುಟಧಾರಣೆ ಮಾಡಿರುವರೋ ಆ ಓಂಕಾರರೂಪಿ ಭಗವಾನ್ ಶಿವನಿಗೆ ನಮಸ್ಕಾರ.

—ಶ್ಲೋಕವಾರ್ತಿಕ

ಪ್ರಕಾಶಕ್ಕೆ ಮೀಮಾಂಸ ಶಾಸ್ತ್ರವು ಬಹಳ ಮಟ್ಟಿಗೆ ಹಿಂದೂ ದರ್ಶನಕಾರರಿಗೆಲ್ಲ ಸಹಕಾರಿಯಾಗಿದ್ದು ನಿತ್ಯನೂತನವೂ ನಿತ್ಯೋಪಯೋಗಿಯೂ ಎಂಬಂತಾಗಿದೆ. ವೇದಗಳ ಪ್ರಮಾಣವನ್ನು ಸ್ಥಾಪಿಸಿ ಹಿರಿಮೆಯನ್ನು ಎತ್ತಿಹಿಡಿದ ಮೀಮಾಂಸ. ಶಾಸ್ತ್ರವು ಹಿಂದೂಧರ್ಮದ ಏಳಿಗೆಗೆ ಮತ್ತು ಭದ್ರತೆಗೆ ಸುಭದ್ರ ಬುನಾದಿಹಾಕಿರುತ್ತದೆ ಎಂಬುದು ಸ್ಮರಣೀಯವಾದ ಅಂಶವಾಗಿದೆ.

ಹೀಗೆ ವೇದೋಕ್ತಕರ್ಮಗಳನ್ನು ಮಾಡುವುದರ ಮೂಲಕ ಮೋಕ್ಷವನ್ನು ಪಡೆಯ ಬೇಕು. ವೇದವೇ ಸರ್ವಸ್ವ, ಸರ್ವಾಧಾರ ಎಂದು ಹೇಳಿದ ಮೀಮಾಂಸಾದರ್ಶನದಲ್ಲಿ ದೇವರು, ಆತ್ಮದ ಉತ್ಕ್ರಾಂತಿ ಇತ್ಯಾದಿ ವಿಷಯಗಳಿಗೆ ಸರಿಯಾದ ಉತ್ತರವಿರುವುದಿಲ್ಲ. ಜಗತ್ತಿನ ಸೃಷ್ಟಿ, ಸ್ಥಿತಿ, ಲಯ, ಆತ್ಮ, ಜನ್ಮ ಮತ್ತು ಮೃತ್ಯು ಇವುಗಳ ಸರಿಯಾದ ನೆಲೆ ಏನು ಎಂಬ ಪ್ರಶ್ನೆಗೆ ಮೀಮಾಂಸಕರು ನೀಡಿದ ವಿವರಣೆ ಸಮರ್ಪಕವಲ್ಲ ಎಂದು ಅನಂತರದ ಮೀಮಾಂಸಕರು ಕಂಡುಕೊಂಡರು. ಅವರೇ ಉತ್ತರಮೀಮಾಂಸಕರು. ಅವರು ಸರಿಯಾದ ದರ್ಶನವನ್ನು ನಿರೂಪಿಸಿದರು. ಅದೇ ಉತ್ತರಮೀಮಾಂಸಾ ಅಥವಾ ವೇದಾಂತದರ್ಶನ.

ಮಹರ್ಷಿ ಜೈಮಿನಿಯವರು ರಚಿಸಿದ 'ಮೀಮಾಂಸಾ ಸೂತ್ರಗಳು' ಈ ದರ್ಶನದ ಆಧಾರಗ್ರಂಥವಾಗಿರುತ್ತದೆ. ಮೀಮಾಂಸಾ ಸೂತ್ರಗಳಿಗೆ ಶಬರಸ್ವಾಮಿಗಳ ಭಾಷ್ಯವು ಇದ್ದು ಅದು ತುಂಬಾ ಪ್ರಸಿದ್ಧವಾದ ಗ್ರಂಥವಾಗಿರುತ್ತದೆ. ಕುಮಾರಿಲಭಟ್ಟರ ಪಂಥಕ್ಕೆ ಅವರು ರಚಿಸಿರುವ ಶ್ಲೋಕವಾರ್ತಿಕ, ತಂತ್ರವಾರ್ತಿಕ, ಟುಪ್ಟೀಕಾ ಎಂಬ ವ್ಯಾಖ್ಯಾನಗಳು ಆಧಾರವಾಗಿವೆ. ಪ್ರಭಾಕರ ಪಂಥಕ್ಕೆ ಪ್ರಭಾಕರರ ಬೃಹತೀಭಾಷ್ಯ ಗ್ರಂಥ ಮತ್ತು ಶಾಲಿಕಂತರ ಪ್ರಕರಣಪಂಚಿಕಾ ಗ್ರಂಥಗಳು ಆಧಾರವಾಗಿವೆ.

೬. ವೇದಾಂತದರ್ಶನ (ಉತ್ತರಮೀಮಾಂಸಾ) : ಪೂರ್ವಮೀಮಾಂಸಾ ದರ್ಶನದ ಸಿದ್ಧಾಂತಗಳಿಂದ ಜೀವನದ ಎಲ್ಲಾ ಸಮಸ್ಯೆಗಳಿಗೆ ಸರಿಯಾದ ಉತ್ತರ ಸಿಗುವಂತಿಲ್ಲ ಎಂಬ ನಿಶ್ಚಯಕ್ಕೆ ಬಂದಾಗ ಹುಟ್ಟಿಕೊಂಡ ದರ್ಶನವೇ ಉತ್ತರಮೀಮಾಂಸಾ. ಉತ್ತರ ಎಂದರೆ ಅನಂತರ ಎಂದು ಅರ್ಥ. ಅಂದರೆ ಪೂರ್ವ(=ಹಿಂದಿನ)ಮೀಮಾಂಸದ ಅನಂತರ ಹುಟ್ಟಿಕೊಂಡ ದರ್ಶನವಾದ್ದರಿಂದ ಇದಕ್ಕೆ 'ಉತ್ತರಮೀಮಾಂಸಾ' ಎಂದು ಹೆಸರು ಬಂದಿರುತ್ತದೆ. ಉತ್ತರಮೀಮಾಂಸಕ್ಕೆ ವೇದಾಂತ ಎಂಬ ಪ್ರಸಿದ್ಧವಾದ ಇನ್ನೊಂದು ಹೆಸರಿದೆ. ವೇದಾಂತ ಎಂದರೆ ವೇದದ ಅಂತ್ಯ ಎಂದು ಅರ್ಥ. ಹಾಗೆಂದರೆ (ವೇದ= ಜ್ಞಾನ) ಜ್ಞಾನದ ಅಂತ್ಯ ಎಂದು ಅರ್ಥ. ಜ್ಞಾನದ ಅಂತ್ಯ ಎಂದರೆ ಅಂತಿಮವಾದ ನೆಲೆ, ಜ್ಞಾನದ ಅನ್ವೇಷಣೆಯ ಮಹೋನ್ನತ ಗುರಿ ಎಂದು ತಾತ್ಪರ್ಯ. ಪೂರ್ವ ಮೀಮಾಂಸೆಯು ವೇದಗಳ ಕರ್ಮಕಾಂಡಗಳನ್ನು ಎತ್ತಿಹಿಡಿದರೆ ಉತ್ತರಮೀಮಾಂಸೆಯು ವೇದದ ಉಪನಿಷದ್ ಭಾಗವನ್ನು ಅಂದರೆ ಜ್ಞಾನಕಾಂಡವನ್ನು ಮುಖ್ಯವೆಂದು ಪರಿಗಣಿಸುತ್ತದೆ. ವೇದಗಳ ಕೊನೆಯ ಭಾಗವು ಉಪನಿಷತ್ತಾಗಿರುವಂತೆ ವೇದಾಂತವು ಉಪನಿಷತ್ತುಗಳಲ್ಲಿ ಹೇಳಿರುವ ಸಿದ್ಧಾಂತಗಳ ಕುರಿತಾದ ದರ್ಶನವಾಗಿರುತ್ತದೆ.

ವೇದಾಂತದರ್ಶನದ ಆದ್ಯಪ್ರವರ್ತಕರು ಮಹರ್ಷಿ ಬಾದರಾಯಣರು (ಶ್ರೀ

ವೇದವ್ಯಾಸರು) ಆಗಿರುತ್ತಾರೆ. ಇವರು ವೇದೋಪನಿಷತ್ತುಗಳಲ್ಲಿ ಹೇಳಿರುವ ತತ್ತ್ವಗಳನ್ನು ಕ್ರೋಢೀಕರಿಸಿ ಅಂತರಂಗಧ್ಯಾನ-ಸಾಧನೆಯ ಮೂಲಕ ಸೂಕ್ತ ಪರಿಶೀಲನೆ, ಪರಿಶೋಧನೆಗಳನ್ನು ನಡೆಸಿ ಈ ಹಿಂದೆ ತಿಳಿಸಿದಂತೆ ಅವುಗಳನ್ನೆಲ್ಲಾ ಸರಿಯಾದ ಸೂತ್ರಗಳಲ್ಲಿ ಅಳವಡಿಸಿ 'ಬ್ರಹ್ಮಸೂತ್ರಗಳು' ಎಂಬ ಸೂತ್ರಗ್ರಂಥವನ್ನು ರಚಿಸಿದರು. ಈ ಸೂತ್ರಗಳನ್ನೇ ವೇದಾಂತಸೂತ್ರಗಳು ಎಂದೂ ಕರೆಯಲಾಗಿದೆ.

ವೇದಾಂತಸೂತ್ರಗಳೇ ಉತ್ತರಮೀಮಾಂಸಾದರ್ಶನದ ಆಧಾರಗ್ರಂಥವಾಗಿರುವುದು ಹೌದಾದರೂ ವೇದಾಂತವು ಪ್ರಸ್ಥಾನತ್ರಯ ಗ್ರಂಥಗಳ ಗುಂಪಿಗೆ ಸೇರಿದ ಇತರ ಎರಡು ಗ್ರಂಥಗಳಾದ ಉಪನಿಷತ್ತು ಮತ್ತು ಶ್ರೀಮದ್ ಭಗವದ್ಗೀತೆಗಳನ್ನು ಸಹ ಆಧರಿಸಿರುವ ದರ್ಶನವಾಗಿರುತ್ತದೆ.

ವೇದಾಂತದರ್ಶನದಲ್ಲಿ ಬರುವ ಮುಖ್ಯವಾದ ವಿಚಾರಗಳು ಬ್ರಹ್ಮ, ಮಾಯೆ, ಜೀವ, ಜಗತ್ತು, ಸಂಸಾರಬಂಧನ ಮತ್ತು ಮೋಕ್ಷ. ಜಗತ್ತಿನ ಜೀವನದ ಹಿಂದೆ ದಿವ್ಯಶಕ್ತಿಯೊಂದಿದ್ದು ಅದೇ ಬ್ರಹ್ಮವಾಗಿದೆ. ಜೀವರು ಅಜ್ಞಾನ–ಅವಿದ್ಯೆಗಳಿಂದಾಗಿ ಜಗತ್ತಿನಲ್ಲಿ ಜನ್ಮ–ಮರಣಗಳ ಚಕ್ರಕ್ಕೆ ಸಿಲುಕುವಂತಾಗಿರುತ್ತವೆ. ಆತ್ಮವಿದ್ಯೆಯ ಮೂಲಕ ಆತ್ಮಸಾಕ್ಷಾತ್ಕಾರ ಗಳಿಸುವುದೇ ಜೀವನದ ಪರಮಗುರಿಯಾಗಿದೆ. ಆತ್ಮಸಾಕ್ಷಾತ್ಕಾರವಾದಾಗ ಸಚ್ಚಿದಾನಂದದ ಅನುಭವವು ಆಗಿ ಭವಬಂಧನವು ಕಳೆಯುವುದು ಎಂದು ಹೇಳಿದ ವೇದಾಂತದರ್ಶನವು ಆತ್ಮಸಾಕ್ಷಾತ್ಕಾರವನ್ನು ಸಾಧಿಸಲು, ಜಗತ್ತಿನಲ್ಲಿ ಯಶಸ್ವಿಯಾಗಿ ಜೀವನವನ್ನು ನಿರ್ವಹಿಸಲು ಸೂಕ್ತವಾದ ಮಾರ್ಗದರ್ಶನ, ಸಾಧನಾಮಾರ್ಗಗಳನ್ನು ನಿರ್ದೇಶಿಸಿರುತ್ತದೆ.

ವೇದಾಂತದರ್ಶನದ ಅನುಯಾಯಿಗಳಲ್ಲಿ ಬ್ರಹ್ಮ–ಜೀವ-ಜಗತ್ತು–ಮೋಕ್ಷ ಈ ವಿಚಾರದಲ್ಲಿ ಒಂದಕ್ಕೊಂದು ಸಂಬಂಧದ ಕುರಿತಾಗಿಯೂ, ಒಂದೊಂದರ ಇರುವಿಕೆ, ಸ್ವರೂಪಗಳ ವಿಚಾರವಾಗಿಯೂ ಮತಭೇದವುಂಟಾಯಿತು. ಪ್ರಸ್ಥಾನತ್ರಯ ಗ್ರಂಥಗಳಲ್ಲಿ ಹೇಳಿರುವ ಪರಮಾತ್ಮ-ಆತ್ಮ-ಪ್ರಪಂಚ-ಮೋಕ್ಷಸಂಬಂಧದ ಸಿದ್ಧಾಂತ-ವಿವರಣೆಗಳನ್ನು ಕಾಲಕ್ರಮದಲ್ಲಿ ಬೇರೆ ಬೇರೆ ಮತಾಚಾರ್ಯರು ವಿವಿಧ ರೀತಿಯಲ್ಲಿ ಪ್ರತಿಪಾದಿಸಿ ಒಂದೊಂದು ತೀರ್ಮಾನಕ್ಕೆ ಬಂದರು. ಸತ್ಯದ ಕುರಿತಾಗಿ ಅವರು ಕಂಡ ದರ್ಶನವನ್ನು ಮತವೆಂದು ಕರೆಯಲಾಯಿತು. ತಮ್ಮ ಮತವನ್ನು ಪ್ರತಿಪಾದಿಸಲು ಆಯಾಯ ಮತದ ಆಚಾರ್ಯರು ಪ್ರಸ್ಥಾನತ್ರಯ ಗ್ರಂಥಗಳಿಗೆ ಭಾಷ್ಯ–ವಿವರಣೆಗಳನ್ನು ಬರೆದು ತಮ್ಮ ಮತದ ದೃಷ್ಟಿಯನ್ನು ಸ್ಪಷ್ಟಪಡಿಸಿದರು. ಹೀಗೆ ವೇದಾಂತದರ್ಶನದಿಂದ ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಎಂಬ ಮೂರು ಮುಖ್ಯವಾದ ಪಂಥಗಳು ಹುಟ್ಟಿಕೊಂಡವು. ಅದರಂತೆಯೇ ಮುಂದೆ ಭೇದಾಭೇದ, ಶುದ್ಧಾದ್ವೈತ, ಅಚಿಂತ್ಯಭೇದಾಭೇದ—ಇತ್ಯಾದಿ ಇನ್ನೂ ಹಲವು ಮತಗಳು ಹುಟ್ಟಿಕೊಂಡವು.

ಷಡ್‌ದರ್ಶನಗಳಲ್ಲಿ ಸತ್ಯದ ಅನ್ವೇಷಣೆಯು ನ್ಯಾಯದರ್ಶನದಿಂದ ಆರಂಭವಾಗಿ ವೇದಾಂತದರ್ಶನದಲ್ಲಿ ಮುಗಿದು ಸರಿಯಾದ ಮತ್ತು ಸಮರ್ಪಕವಾದ ರೀತಿಯಲ್ಲಿ ಮುಕ್ತಾಯಗೊಂಡಿರುತ್ತದೆ ಎಂದು ಪ್ರಾಜ್ಞರು ಅಭಿಪ್ರಾಯಪಟ್ಟಿರುತ್ತಾರೆ.

ಭಾರತೀಯರ ತತ್ತ್ವದರ್ಶನಗಳ ನಾಲಿನಲ್ಲಿ ವೇದಾಂತದರ್ಶನವು ತುಂಬಾ ಪ್ರಸಿದ್ಧವಾಗಿರುತ್ತದೆ. ಹಿಂದೂ ಸಮಾಜದಲ್ಲಿರುವ ಅನೇಕ ಒಳಪಂಥಗಳಿಗೆ ಈ ವೇದಾಂತ ದರ್ಶನವು ಆಧಾರವಾಗಿದ್ದು ಈ ದರ್ಶನದ ಮೂಲಸಿದ್ಧಾಂತಗಳ ಮೇಲೆ ಆ ಪಂಥಗಳು ರೂಪುಗೊಂಡಿರುತ್ತವೆ.

೪

# ಹಿಂದೂ ಮತದರ್ಶನಗಳು

---

ಮತವೆಂದರೆ ಜ್ಞಾನ, ವಿಚಾರ, ಅಭಿಪ್ರಾಯ, ನಂಬಿಕೆ ಎಂದು ತಾತ್ಪರ್ಯ. ಮತವು ಜ್ಞಾನ ಎಂಬ ಅರ್ಥವುಳ್ಳ 'ಮನ್' ಧಾತುವಿನಿಂದ ಹುಟ್ಟಿಕೊಂಡ ಶಬ್ದವಾಗಿರುತ್ತದೆ. ಆದುದರಿಂದ ಮತ ಎಂದರೆ ತಿಳಿದದ್ದು, ತಿಳಿಯಲ್ಪಟ್ಟದ್ದು ಎಂದು ಅರ್ಥವಾಗುತ್ತದೆ. ವಸ್ತು ಹಾಗೂ ವಿಚಾರಗಳ ಕುರಿತಾಗಿ ಕಂಡು ತಿಳಿದದ್ದು, ಅನುಭವಿಸಿ ತಿಳಿದು ಕೊಂಡದ್ದು, ಅನುಭವದ ಆಧಾರದಿಂದ ಆಲೋಚಿಸಿ ತಿಳಿದುಕೊಂಡದ್ದು, ಅನುಭವಿಸಿ ದವರು ಹೇಳಿದುದನ್ನು ಕೇಳಿ ತಿಳಿದದ್ದು—ಇವೆಲ್ಲವೂ ಅನುಭವ ಎಂದೆನಿಸುತ್ತವೆ. ಈ ಅನುಭವಜ್ಞಾನವೇ ಮತ. ಆದುದರಿಂದ ಮತ ಎಂದರೆ ಅನುಭೂತಿ ಎಂದೂ ಹೇಳ ಬಹುದು.

ಮಹರ್ಷಿಗಳಾದ ಗೌತಮ, ಕಣಾದ, ಕಪಿಲ, ಪತಂಜಲಿ, ಜೈಮಿನಿ ಮತ್ತು ಬಾದರಾಯಣ (ವೇದವ್ಯಾಸರು) ವೇದೋಪನಿಷತ್ತುಗಳನ್ನಾಧರಿಸಿ ಷಡ್ದರ್ಶನಸಿದ್ಧಾಂತ ಗಳನ್ನು ಲೋಕಕ್ಕೆ ನೀಡಿದರು. ಈ ದರ್ಶನಗಳಲ್ಲಿ ಪ್ರತಿಪಾದಿಸಿದ ವಿಷಯಗಳು ಸರಿಯಾದ ಒಂದು ಪೂರ್ಣತೆ ಅಥವಾ ಮುಕ್ತಾಯದ ತೀರ್ಮಾನವನ್ನು ತಲಪಿದ್ದು ವೇದಾಂತ ದರ್ಶನದಲ್ಲಿ ಎಂದು ಹೇಳಬಹುದು. ವೇದಾಂತದರ್ಶನದಲ್ಲಿ ಹೇಳಿದ ಬ್ರಹ್ಮ-ಜಗತ್ತು-ಜೀವ-ಮೋಕ್ಷ ಇತ್ಯಾದಿ ವಿಚಾರಗಳ ಕುರಿತಾಗಿ ಹುಟ್ಟಿಕೊಂಡ ಬೇರೆ ಬೇರೆ ಅಭಿಪ್ರಾಯ ಗಳ ಸ್ಪಷ್ಟೀಕರಣೆಯೇ ಮತದರ್ಶನಗಳು ಅಥವಾ ಮತಗಳು. ಮತಗಳ ಪ್ರವರ್ತಕರು ಮತಾಚಾರ್ಯರಾಗಿರುತ್ತಾರೆ. ಈ ಪೈಕಿ ಶ್ರೀ ಶಂಕರ, ಶ್ರೀ ರಾಮಾನುಜ, ಶ್ರೀ ಮಧ್ವ ಇವರು ತುಂಬಾ ಪ್ರಸಿದ್ಧರಾಗಿದ್ದು ಇವರ ಮತಗಳಾದ ಅದ್ವೈತ, ವಿಶಿಷ್ಟಾದ್ವೈತ ಮತ್ತು ದ್ವೈತಗಳು ಹೆಚ್ಚು ಪ್ರಸಿದ್ಧವಾಗಿವೆ. ಈ ಮೂರು ಮತಗಳಂತೆಯೇ ಮುಂದೆ ಶ್ರೀ ವಲ್ಲಭಾಚಾರ್ಯ, ಶ್ರೀ ನಿಂಬಾರ್ಕಾಚಾರ್ಯ, ಶ್ರೀ ಕೃಷ್ಣಚೈತನ್ಯ ಮೊದಲಾದ ಮಹಾಪುರುಷರು ವೇದಾಂತದರ್ಶನದ ವಿಚಾರವಾಗಿ ತಮ್ಮ ಮತವನ್ನು ವಿವರಿಸಿ ಹೊಸದಾಗಿ ತಮ್ಮ ಸಿದ್ಧಾಂತಗಳನ್ನು ಸ್ಪಷ್ಟಪಡಿಸಿರುತ್ತಾರೆ. ವೇದಾಂತೋಕ್ತ ಬ್ರಹ್ಮ-ಜಗತ್ತು-ಜೀವ-ಮೋಕ್ಷ—ಎಂಬ ಈ ವಿಚಾರಗಳಲ್ಲಿ ಒಂದಕ್ಕೊಂದು ಇರುವ ಸಂಬಂಧ ಮತ್ತು ಅವುಗಳ ಸ್ವರೂಪದ ಕುರಿತಾಗಿ ಈ ಬೇರೆ ಬೇರೆ ಮತದವರಲ್ಲಿ ಬೇರೆ ಬೇರೆ

ಅಭಿಪ್ರಾಯಗಳಿರುತ್ತವೆ. ಈ ಎಲ್ಲಾ ಮತಗಳೂ ವೇದಾಂತದರ್ಶನವನ್ನು ಆಧರಿಸಿಯೇ ಇರುವುದರಿಂದ ಮತ್ತು ಇವುಗಳು ಆತ್ಮಜ್ಞಾನ ಅಥವಾ ಆತ್ಮನ ಮೋಕ್ಷದ ಕುರಿತಾಗಿ ಸೂಕ್ತವಾದ ಮಾರ್ಗದರ್ಶನ ನೀಡುವುದರಿಂದ ಇವೆಲ್ಲವನ್ನೂ ಆಯಾಯ ಪಂಥಗಳ ಹೆಸರಿನೊಡನೆ ವೇದಾಂತ ಎಂದು ಕರೆಯಲಾಗಿದೆ. ಉದಾ: ಅದ್ವೈತ ವೇದಾಂತ, ವಿಶಿಷ್ಟಾದ್ವೈತ ವೇದಾಂತ, ದ್ವೈತ ವೇದಾಂತ ಇತ್ಯಾದಿ. ವೇದಾಂತದರ್ಶನದಲ್ಲಿ ಪ್ರತಿಪಾದಿತವಾಗಿರುವ ವಿಚಾರಗಳ ಬಗ್ಗೆ ತಮ್ಮ ತಮ್ಮ ಮತಗಳನ್ನು ಅಂದರೆ ಅಭಿಪ್ರಾಯಗಳನ್ನು ಸ್ಪಷ್ಟಪಡಿಸಿರುವುದರಿಂದ ಇವುಗಳಿಗೆ "ಮತ" ಎಂದೂ 'ಸತ್ಯ'ದ ವಿಚಾರವಾಗಿ ಸಿದ್ಧಾಂತಗಳನ್ನು ಒಳಗೊಂಡಿರುವುದರಿಂದ "ಸಿದ್ಧಾಂತ"ಗಳೆಂದೂ ಕರೆಯುತ್ತಾರೆ. ಹಾಗಾಗಿ ಅದ್ವೈತ ಸಿದ್ಧಾಂತ, ವಿಶಿಷ್ಟಾದ್ವೈತ ಸಿದ್ಧಾಂತ, ದ್ವೈತ ಸಿದ್ಧಾಂತ ಎಂಬುದಾಗಿ ಕರೆಯುವ ಸಂಪ್ರದಾಯವೂ ಇದೆ.

## ಅದ್ವೈತ ಮತ

ಅದ್ವೈತಮತದ ಸಿದ್ಧಾಂತಗಳನ್ನು ವ್ಯವಸ್ಥಾಬದ್ಧವಾಗಿ ಮೊತ್ತಮೊದಲಿಗೆ ರೂಪಿಸಿ ಪ್ರತಿಪಾದಿಸಿದವರು ಶ್ರೀ ಗೌಡಪಾದಾಚಾರ್ಯರು. ಇವರ ಶಿಷ್ಯರೇ ಶ್ರೀ ಗೋವಿಂದ ಭಗವತ್ಪಾದಾಚಾರ್ಯರು. ಅವರ ಶಿಷ್ಯರೇ ಸುಪ್ರಸಿದ್ಧ ಅದ್ವೈತವೇದಾಂತಪ್ರತಿಪಾದನಾ ಚಾರ್ಯರಾದ ಶ್ರೀಮತ್ ಶಂಕರಭಗವತ್ಪಾದರು. ಇವರನ್ನು ಪ್ರಚಾರದಲ್ಲಿ ಶ್ರೀ ಆದಿಶಂಕರಾಚಾರ್ಯರು, ಶ್ರೀ ಶಂಕರಾಚಾರ್ಯರು ಎಂದು ಕರೆಯಲಾಗುತ್ತಿದೆ. ಶ್ರೀ ಗೌಡಪಾದಾಚಾರ್ಯರು ಮಾಂಡೂಕ್ಯ ಉಪನಿಷತ್ತಿಗೆ ತಮ್ಮ ಸುಪ್ರಸಿದ್ಧವಾದ ಕಾರಿಕೆ ಗಳನ್ನು ರಚಿಸಿ ಆ ಮೂಲಕ ಅದ್ವೈತಸಿದ್ಧಾಂತದ ಮುಖ್ಯಾಂಶಗಳನ್ನು ಅಭಿವ್ಯಕ್ತ ಪಡಿಸಿರುತ್ತಾರೆ. ಆದರೆ ಅದ್ವೈತಸಿದ್ಧಾಂತಕ್ಕೆ ಸರಿಯಾದ ರೂಪವನ್ನು ನೀಡಿ ಅದನ್ನು ತಮ್ಮ ಉಪನಿಷತ್ತು, ಬ್ರಹ್ಮಸೂತ್ರ ಮತ್ತು ಭಗವದ್ಗೀತಾಭಾಷ್ಯಗಳ ಮೂಲಕ ಯುಕ್ತಿ, ಪ್ರಮಾಣ, ಪಾಂಡಿತ್ಯ—ಎಲ್ಲಾ ದೃಷ್ಟಿಗಳಿಂದಲೂ ಪ್ರತಿಪಾದಿಸಿ ಅದಕ್ಕೆ ತಕ್ಕ ಪ್ರಚಾರ, ಪೋಷಣೆ, ಸ್ಥಾನಗೌರವಗಳನ್ನು ನೀಡಿದವರು ಶ್ರೀ ಶಂಕರಾಚಾರ್ಯರು. ಇವರ ಕಾಲ ಸುಮಾರು ಕ್ರಿ.ಶ. ಎಂಟನೇ ಶತಮಾನ ಎಂದು ನಿಶ್ಚಯಿಸಲಾಗಿರುತ್ತದೆ. ಶ್ರೀ ಶಂಕರಾಚಾರ್ಯರ ಪ್ರಸ್ಥಾನತ್ರಯ ಭಾಷ್ಯಗ್ರಂಥಗಳು, ವಿವೇಕಚೂಡಾಮಣಿ, ಉಪದೇಶ ಸಾಹಸ್ರಿ ಮೊದಲಾದ ಪ್ರಕರಣಗ್ರಂಥಗಳು, ಸದಾನಂದಯೋಗೀಂದ್ರರ ವೇದಾಂತಸಾರ, ಧರ್ಮರಾಜ ಅಧ್ವರೀಂದ್ರರ ವೇದಾಂತಪರಿಭಾಷೆ, ಶ್ರೀ ಮಧುಸೂದನ ಸರಸ್ವತಿಗಳ ಅದ್ವೈತಸಿದ್ಧಿ ಇವುಗಳು ಅದ್ವೈತವೇದಾಂತ ಕುರಿತಾದ ಪ್ರಸಿದ್ಧ ಆಧಾರಗ್ರಂಥಗಳು.

ಜಗದ್ಗುರು ಶ್ರೀ ಶಂಕರಾಚಾರ್ಯರು ಬೋಧಿಸಿದ ಅದ್ವೈತಮತದ ಸಾರಸರ್ವಸ್ವ ವನ್ನು ಸಂಗ್ರಹವಾಗಿ ಹೇಳುವ ಸುಪ್ರಸಿದ್ಧ ಶ್ಲೋಕವೊಂದು ಇಂತಿದೆ:

> "ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂ ಗ್ರಂಥಕೋಟಿಭಿಃ ।
> ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ ॥"

—ಬ್ರಹ್ಮಜ್ಞಾನಾವಲಿಮಾಲಾ

"ಗ್ರಂಥಕೋಟಿಗಳಲ್ಲಿ ಹೇಳಿರುವುದನ್ನು ಶ್ಲೋಕಾರ್ಧದಲ್ಲಿ ನಾನು ಹೇಳುವೆನು. ಅದೇ ಬ್ರಹ್ಮವು ಸತ್ಯ, ಜಗತ್ತು ಮಿಥ್ಯೆ. ಜೀವವು ಬ್ರಹ್ಮವೇ, ಅದಕ್ಕಿಂತ ಬೇರೆಯಲ್ಲ."

ಅದ್ವೈತ ಎಂದರೆ ದ್ವೈತವಿಲ್ಲದ್ದು ಎಂದು ಅರ್ಥ. ಎರಡು ಬಗೆಯಾಗಿ ಮಿಂಗಡಿಸಿರುವುದು ದ್ವೈತ. ಆ ದ್ವೈತ ಸ್ವಭಾವ ಇಲ್ಲದಿದ್ದು, ಇರುವುದೆಲ್ಲವೂ ಆತ್ಮವೇ ಆಗಿದ್ದು, ಆತ್ಮನಿಗೆ ಎರಡನೆಯದಾದ ಆತ್ಮವಾಗಲಿ, ಅನಾತ್ಮವಾಗಲಿ ಯಾವುದೂ ಇಲ್ಲ ಎಂಬುದೇ ಅದ್ವೈತ. ಕಾಣುವುದೆಲ್ಲವೂ ಬ್ರಹ್ಮ. ಇರುವುದೊಂದೇ, ಅದು ಬ್ರಹ್ಮ, ಅದು ಏಕಮೇವಾದ್ವಿತೀಯವಾದುದು ಎಂಬುದೇ ಅದ್ವೈತದ ಕಟ್ಟಕಡೆಯ ಮಾತು.

ಅದ್ವೈತಸಿದ್ಧಾಂತದವರು ಪ್ರತ್ಯಕ್ಷ, ಅನುಮಾನ, ಶಬ್ದ, ಉಪಮಾನ, ಅರ್ಥಾಪತ್ತಿ ಮತ್ತು ಅನುಪಲಬ್ಧಿ ಎಂಬ ಆರು ಪ್ರಮಾಣಗಳನ್ನು ಅಂಗೀಕರಿಸಿರುತ್ತಾರೆ. ಹಾಗಾಗಿ ಅದ್ವೈತಿಗಳನ್ನು ಷಟ್‌ಪ್ರಮಾಣವಾದಿಗಳು ಎಂದೂ ಕರೆಯುತ್ತಾರೆ.

ಅದ್ವೈತ ಸಿದ್ಧಾಂತದಲ್ಲಿ ಪ್ರತಿಪಾದಿಸಿರುವ ವಿಷಯಗಳು ಮುಖ್ಯವಾಗಿ ಎಂಟು: (೧) ಬ್ರಹ್ಮ, (೨) ಜಗತ್ತು, (೩) ಮಾಯೆ, (೪) ಈಶ್ವರ, (೫) ಜೀವ, (೬) ಸೃಷ್ಟಿ, (೭) ಸಂಸಾರಬಂಧನ, (೮) ಮೋಕ್ಷ.

ಬ್ರಹ್ಮ : ಬ್ರಹ್ಮ ಎಂದರೆ ದೊಡ್ಡದು, ಹಿರಿಮೆಯುಕ್ತವಾದುದು, ವಿಸ್ತಾರವಾದುದು ಎಂದು ಅರ್ಥ. ನಾಶವಿಲ್ಲದ್ದು ಮತ್ತು ಸರ್ವೋತ್ಕೃಷ್ಟವಾದುದೇ ಬ್ರಹ್ಮ. ಬ್ರಹ್ಮದ ಸ್ವರೂಪವು 'ಸತ್ಯಂ ಜ್ಞಾನಮ್ ಅನಂತಮ್'. ಕಾಲ, ದೇಶ, ವಸ್ತುಗಳ ಬದಲಾವಣೆಗೆ ಒಳಗಾಗದೆ ಇರುವುದು ಬ್ರಹ್ಮ. ಬ್ರಹ್ಮವು ಏಕವೂ ನಿತ್ಯವೂ ಆಗಿದ್ದು ಅದು ಶುದ್ಧ ಬುದ್ಧವಾಗಿರುತ್ತದೆ. ಅದು ಸತ್ಯವೂ ಜ್ಞಾನವೂ ಅನಂತವೂ ಆಗಿರುತ್ತದೆ. ಈ ಜಗತ್ತಿನ ಚರಾಚರ ವಸ್ತುಗಳಿಗೆಲ್ಲಾ ಮೂಲವು ಬ್ರಹ್ಮವೇ ಆಗಿದ್ದು ಅದು ಪರಮೋತ್ಕೃಷ್ಟ ಏಕೈಕವಾದ, ಶಾಶ್ವತವಾದ ಪರವಸ್ತುವಾಗಿರುತ್ತದೆ. ಸರ್ವವೂ ಬ್ರಹ್ಮಮಯವಾಗಿದ್ದು ಅದು ಮಾತ್ರ ಸತ್ಯವಾಗಿರುತ್ತದೆ. ಬ್ರಹ್ಮವು ಸತ್ ಚಿತ್ ಆನಂದ ಸ್ವರೂಪವಾಗಿರುತ್ತದೆ. ಯಾವುದು ಭೂತ, ಭವಿಷ್ಯತ್ ಮತ್ತು ವರ್ತಮಾನ ಕಾಲಗಳಲ್ಲಿ ಹುಟ್ಟುಸಾವುಗಳಿಲ್ಲದೆ ಇದೆಯೋ ಅದೇ ಸತ್. ಯಾವುದು ಸರ್ವವನ್ನೂ ತಿಳಿಯುತ್ತದೆಯೋ ಅದೇ ಚಿತ್. ಅದು ಚೇತನ ಹಾಗೂ ಜ್ಞಾನಸ್ವರೂಪ ಆಗಿರುತ್ತದೆ. ಸರ್ವದುಃಖಗಳಿಂದ ರಹಿತವಾಗಿ ಸುಖಸ್ವರೂಪವಾಗಿ ಪರಮಪ್ರೀತಿಗೆ ವಿಷಯವಾಗಿರುವುದೇ ಆನಂದ. ಬ್ರಹ್ಮವು ಈ ಮೂರು ಸ್ವರೂಪಗಳಿಂದ ಕೂಡಿದ್ದು ತದನುಸಾರವಾಗಿ ಬ್ರಹ್ಮವನ್ನು 'ಸಚ್ಚಿದಾನಂದ' ಎಂದು ಕರೆಯಲಾಗಿದೆ.

ಬ್ರಹ್ಮವು ವಿಕಾರರಹಿತವೂ, ನಿರವಯವವೂ ಆಗಿರುವುದೆಂದಾಗ ಕಾಣುವ ಈ ಪ್ರಪಂಚದ ಅರ್ಥವೇನು? ಬ್ರಹ್ಮವೊಂದೇ ಸತ್ಯ, ಜಗತ್ತು ಮಿಥ್ಯೆ ಎಂದರೇನು? ಇದಕ್ಕೆ ಉತ್ತರವಾಗಿ ಬ್ರಹ್ಮಕ್ಕಿಂತ ಬೇರೆಯಾಗಿ ಯಾವುದೂ ಇಲ್ಲ. ಮಣ್ಣಿನಿಂದ ಹುಟ್ಟಿ ಮಣ್ಣಿನಲ್ಲಿಯೇ ಇದ್ದು ಮಣ್ಣಿನಲ್ಲಿಯೇ ಲಯವಾಗುವ ಮಡಕೆಕುಡಿಕೆಗಳು ಮಣ್ಣಿಗಿಂತ ಬೇರೆಯಾಗಿರುವುದಿಲ್ಲ. ಹಾಗೆಯೇ ಸಾರವಸ್ತುವೂ ಒಂದೇ. ನಾಮರೂಪಗಳು ಬೇರೆಯಾಗಿವೆಯಷ್ಟೆ. ಅದರಂತೆಯೇ ಬ್ರಹ್ಮದಿಂದ ಹುಟ್ಟಿ ಬ್ರಹ್ಮದಲ್ಲಿ ಇದ್ದು ಬ್ರಹ್ಮದಲ್ಲೇ

ಲಯವಾಗುವ ಜಗತ್ತು ಬ್ರಹ್ಮಕ್ಕಿಂತ ಬೇರೆಯಾಗಿಲ್ಲ ಎಂದು ಅದ್ವೈತವೇದಾಂತದಲ್ಲಿ ಸ್ಪಷ್ಟಪಡಿಸಲಾಗಿದೆ.

ಜಗತ್ತು : ಬ್ರಹ್ಮವು ನಿರವಯವ ಮತ್ತು ವಿಕಾರ ಹೊಂದತಕ್ಕದ್ದಲ್ಲ. ಹಾಗಾಗಿ ಬ್ರಹ್ಮದಿಂದ ವಿಕಾರ, ಬದಲಾವಣೆಗಳಿಂದ ಕೂಡಿರುವ ಈ ಜಗತ್ತು ಹುಟ್ಟಲು ಸಾಧ್ಯವಿಲ್ಲ. ಆದುದರಿಂದ ಅದನ್ನು ಬ್ರಹ್ಮದ ವಿವರ್ತವಾಗಿದೆ ಎಂದು ಅದ್ವೈತವೇದಾಂತದಲ್ಲಿ ಕರೆಯಲಾಗಿದೆ. ವಿವರ್ತ ಎಂದರೆ ತೋರಿಕೆ, ಬದಲಾವಣೆ ಆಗಿ ಕಾಣುವಿಕೆ ಎಂದು ತಾತ್ಪರ್ಯ. ಸುವರ್ಣದ ಆಭರಣಗಳಲ್ಲಿ ಚಿನ್ನವು ಆಭರಣಗಳಿಂದ ಹೇಗೆ ಬೇರೆಯಲ್ಲವೋ ಮತ್ತು ಚಿನ್ನವೇ ಹೇಗೆ ಆಭರಣವಾಗಿ ಕಾಣುತ್ತದೆಯೋ ಹಾಗೆಯೇ ಬ್ರಹ್ಮವೊಂದೇ ಇದ್ದು ಅದು ಸತ್ಯವಾಗಿದ್ದು ನೋಡುವವನಿಗೆ ಜಗತ್ತಾಗಿ ಕಾಣುತ್ತದೆ. ಬ್ರಹ್ಮವು ಜಗತ್ತಾಗಿ ಕಾಣುತ್ತದೆಯೇ ವಿನಾ ಜಗತ್ತು ಬ್ರಹ್ಮಕ್ಕಿಂತ ಬೇರೆಯಾಗಿಲ್ಲ. ಉದಾಹರಣೆಗೆ —ಹಗ್ಗವೊಂದು ನಸುಗತ್ತಲಲ್ಲಿ ಹಾವಾಗಿ ಕಾಣಿಸಿ ನಮ್ಮಲ್ಲಿ ಭಯ ಹುಟ್ಟಿಸುತ್ತದೆ. ಆದರೆ ಬೆಳಕು ತಂದು ಸರಿಯಾಗಿ ನೋಡಿದಾಗ ಹಗ್ಗವೆಂದು ತಿಳಿಯುತ್ತದೆ. ಆಗ ಭಯವೂ ತೊಲಗುತ್ತದೆ. ಹಗ್ಗವೇ ಆಗಿದ್ದದ್ದು ಹಾವಿನಂತೆ ಕಂಡಿತೇ ವಿನಾ ಅಲ್ಲಿ ಹಾವು ಇರಲಿಲ್ಲ. ಹೀಗೆ ಹಗ್ಗವಾಗಿದ್ದದ್ದು ಹಾವಿನಂತೆ ಕಂಡದ್ದೇ ವಿವರ್ತ. ಹಾವು ಇಲ್ಲದೆಯೇ ಹಗ್ಗವು ಹಾವಾಗಿ ಕಾಣಲು ಸಾಧ್ಯವಾಯಿತು. ಹಾಗೆಯೇ ಜಗತ್ತೊಂದು ಬೇರೆ ಇಲ್ಲದೆಯೇ ಬ್ರಹ್ಮವು ಜಗತ್ತಾಗಿ ಕಾಣುತ್ತದೆ. ಹಗ್ಗವು ಹಾವಾಗಿ ಕಾಣಲು ಹಗ್ಗಸ್ವರೂಪದ ಅಜ್ಞಾನವೇ ಕಾರಣ ಮತ್ತು ಹಗ್ಗವು ಹಾವಾಗಿ ಕಾಣುವಾಗಲೂ ಹಗ್ಗ ಹಗ್ಗವಾಗಿಯೇ ಇರುವುದು. ಅಂತೆಯೇ ಜಗತ್ತು ಜಗತ್ತಾಗಿ ಕಂಡರೂ ಬ್ರಹ್ಮವಾಗಿಯೇ ಇರುತ್ತದೆ. ಹಗ್ಗದ ನಿಜವಾದ ಅರಿವು ಬೆಳಕಿನ ಮೂಲಕ ಆದಾಗ ಹಾವು ಮಾಯವಾಗಿಹೋಗುತ್ತದೆ. ಅದರಂತೆ ಜ್ಞಾನದ ಮೂಲಕ ಬ್ರಹ್ಮಸಾಕ್ಷಾತ್ಕಾರವಾದಾಗ (ಬ್ರಹ್ಮದ ನಿಜಸ್ವರೂಪ ತಿಳಿದಾಗ) ಕಾಣುವ ಜಗತ್ತು ಇಲ್ಲದಂತಾಗಿ ಎಲ್ಲವೂ ಬ್ರಹ್ಮ "ಸರ್ವಂ ಖಲ್ವಿದಂ ಬ್ರಹ್ಮ" ಎಂದಾಗಿ ಅನುಭವಕ್ಕೆ ಬರುತ್ತದೆ. ಹಾಗಾದರೆ ಬ್ರಹ್ಮವು ಜಗತ್ತಾಗಿ ಕಾಣುವ ಈ ವಿವರ್ತನೆ ಹೇಗಾಗುತ್ತದೆ ? ಅದಕ್ಕೆ "ಅಧ್ಯಾಸ" ಎಂಬ ಕಾರಣ ಹೇಳಿ ಅದ್ವೈತವೇದಾಂತವು ವಿವರಿಸುತ್ತದೆ.

ಅಧ್ಯಾಸ ಶಬ್ದವು ಅಧಿ ಮತ್ತು ಆಸ ಎಂಬ ಎರಡು ಶಬ್ದಗಳ ಕೂಡುವಿಕೆಯಿಂದಾಗಿರುತ್ತದೆ. ಅಧಿ ಎಂದರೆ ಮೇಲೆ, ಆಸ ಎಂದರೆ ಹಾಕುವುದು, ಆರೋಪಿಸುವುದು ಎಂದರ್ಥವಾಗುತ್ತದೆ. ಯಾವುದು ನಿಜವಾಗಿ ಇಲ್ಲವೋ ಅದು ಇದೆ ಎಂದು ತಿಳಿಯುವುದೇ ಅಧ್ಯಾಸ. ಒಂದು ಇನ್ನೊಂದು ಎಂದು ಭಾವಿಸುವ ತಪ್ಪುತಿಳಿವಳಿಕೆಯೇ ಅಧ್ಯಾಸ. ತಪ್ಪು ತಿಳಿವಳಿಕೆಯು ಪದಾರ್ಥದಲ್ಲಿ ಇಲ್ಲದ ಸ್ವಭಾವವನ್ನು ಅದರಲ್ಲಿ ಕಲ್ಪಿಸುವುದರಿಂದ ಉಂಟಾಗುತ್ತದೆ. ಈ (ತಪ್ಪು) ಕಲ್ಪನೆಯನ್ನೇ ಅಧ್ಯಾಸ ಎಂದು ಹೇಳಿದೆ. ಒಟ್ಟಿನಲ್ಲಿ, ಇರುವ ಒಂದೇ ಸತ್ಯವಸ್ತುವಾದ ಬ್ರಹ್ಮವು ಈ ಜಗತ್ತು ಜೀವ ಚರಾಚರ ವಸ್ತುಗಳಾಗಿ ಬೇರೆಬೇರೆಯಾಗಿ ಕಾಣುತ್ತದೆ ಎಂಬ ತಿಳಿವಳಿಕೆಯೇ ಅಧ್ಯಾಸ ಎಂದು ತಾತ್ಪರ್ಯ.

ಬ್ರಹ್ಮವು ಈ ರೀತಿ ಜಗತ್ತು, ಜೀವ ಎಂಬಿತ್ಯಾದಿಯಾಗಿ ಕಾಣಲು ಕಾರಣವು ವಿವರ್ತ

ವಾಗಿದ್ದು ವಿವರ್ತಕ್ಕೆ ಅಧ್ಯಾಸ ಕಾರಣವಾದರೆ, ಅಧ್ಯಾಸಕ್ಕೆ ಏನು ಕಾರಣ ? ಅದಕ್ಕೆ ಮಾಯೆಯೇ ಕಾರಣ ಎಂದು ಅದ್ವೈತವೇದಾಂತವು ಹೇಳುತ್ತದೆ.

ಮಾಯೆ : ಮಾಯೆ ಎಂದರೆ ಇಲ್ಲದಿರುವುದನ್ನು ಇರುವಂತೆ ತೋರಿಸಿಕೊಡುವಂಥಾದ್ದು ಎಂದು ಅರ್ಥ. ಬ್ರಹ್ಮನಲ್ಲಿ ಅಂತರ್ಗತವಾದ, ಅವರ್ಣನೀಯವಾದ ಶಕ್ತಿಯೇ ಮಾಯೆ. ಆದರೆ ಮಾಯೆಯು ಬ್ರಹ್ಮಕ್ಕಿಂತ ಬೇರೆಯಾದ ಎರಡನೇ ಶಕ್ತಿ ಅಲ್ಲ. ಹಾಲು ಮತ್ತು ಅದರ ಬಿಳಿ ಬಣ್ಣ, ಅಗ್ನಿ ಮತ್ತು ಅದರ ಸುಡುವ ಶಕ್ತಿ ಹೇಗೆ ಒಂದಕ್ಕೊಂದು ಬೇರೆಯಲ್ಲವೋ ಮತ್ತು ಬೇರ್ಪಡಿಸಲು ಸಾಧ್ಯವಿಲ್ಲವೋ ಹಾಗೆಯೇ ಬ್ರಹ್ಮ ಮತ್ತು ಮಾಯೆ ಬೇರೆಯೂ ಅಲ್ಲ, ಬೇರ್ಪಡಿಸಲೂ ಸಾಧ್ಯವಿಲ್ಲ. ಸಮುದ್ರದಲ್ಲಿ ಅಲೆಗಳು ಇವೆಯೇ ? ಎಂದಾಗ ಇವೆ ಎನ್ನಲೇಬೇಕು. ಅಲೆಗಳು ಸಮುದ್ರವೇ ? ಎಂದಾಗ ಅಲ್ಲ—ಎಂದು ಹೇಳುವಂತೆ ಮಾಯೆಯು ಬ್ರಹ್ಮವಲ್ಲ. ಆದರೆ ಮರಳುಗಾಡಿನಲ್ಲಿ ಮರೀಚಿಕೆ ಕಾಣಲು ಸಿಗುವಂತೆ ಮಾಯೆಯು ಇದೆ. ನಿಜವಾದ ಬ್ರಹ್ಮಜ್ಞಾನ ಉಂಟಾದಾಗ ಮಾಯೆ ಇಲ್ಲ ಎಂದಾಗುತ್ತದೆ, ಹಾಗಾಗಿ ಮಾಯೆಯನ್ನು ಶಾಶ್ವತವಾಗಿರುವ ಬ್ರಹ್ಮನ ಅವರ್ಣನೀಯವಾದ ಶಕ್ತಿ ಎಂದು ಹೇಳಬಹುದು.

ಮಾಯೆಯಿಂದಾಗಿ ಈಶ್ವರ, ಜೀವ, ಜಗತ್ತು, ಇಂದ್ರಿಯಗಳು ಎಂಬುದರ ಭೇದ ಮತ್ತು ಇವುಗಳೆಲ್ಲಾ ಇವೆ ಎಂಬ ಅರಿವು ಉಂಟಾಗುತ್ತದೆ. ಇರುವುದೆಲ್ಲವೂ ಒಂದೇ ಬ್ರಹ್ಮವಾಗಿದ್ದು ಹಾಗಿದ್ದರೂ ಕೂಡ ಈ ರೀತಿಯ ವಿವಿಧತೆಯು ಜಗತ್ತಿನಲ್ಲಿ, ನಮ್ಮ ಜೀವನದಲ್ಲಿ ಕಾಣುವುದಕ್ಕೆ ಮಾಯೆಯೇ ಕಾರಣ. ಮಾಯೆಯ ತೆರೆ ಹರಿದಾಗ ಬ್ರಹ್ಮ-ಸಾಕ್ಷಾತ್ಕಾರವಾಗುತ್ತದೆ. ಆಗ ಹಿಂದೆ ಉದಾಹರಣೆಯಲ್ಲಿ ಹೇಳಿದ ಮೋರೆ ಹಾವಾಗಿ ಕಂಡ ಹಗ್ಗ ಹಗ್ಗವಾಗಿಯೇ ಕಾಣುತ್ತದೆ. ಹಾಗೆಯೇ ಈ ಜಗತ್ತು, ಜೀವ ಎಲ್ಲವೂ ಬ್ರಹ್ಮವಾಗಿಯೇ ಅನುಭವಕ್ಕೆ ಬರುತ್ತದೆ. ಮಾಯೆಯು ಅನುಭವಕ್ಕೆ ಬರುವುದರಿಂದ ಎಂದರೆ ಮಾಯಾಪ್ರಭಾವದ ಪರಿಣಾಮದಿಂದ ಕಾಣುವ ಜಗತ್ತು, ಇಂದ್ರಿಯಗಳ ಮೂಲಕ ದೊರೆಯುವ ವೈವಿಧ್ಯಮಯವಾದ ಅನುಭವಗಳು ಇವುಗಳೆಲ್ಲ ನಮಗೆ ದೊರೆಯುವುದರಿಂದ ಮಾಯೆಯು "ಸತ್" ಎಂದೂ ತೋರುತ್ತದೆ. ಎಂದರೆ ಮಾಯೆಯು "ಇದೆ". "ಸತ್ಯ" ಎಂದಾಗಿದೆ. ಮಾಯೆಯು ಬ್ರಹ್ಮಕ್ಕಿಂತ ಬೇರೆಯಲ್ಲವಾದ್ದರಿಂದ ಇದಕ್ಕೆ ಸೃಷ್ಟಿಯಾಗಲಿ, ಆದಿಯಾಗಲಿ ಇಲ್ಲ. ಹಾಗಾಗಿ ಮಾಯೆಯು ಅನಾದಿಯಾಗಿರುತ್ತದೆ. ಬ್ರಹ್ಮಜ್ಞಾನವಾದಾಗ ಮಾಯೆಯು ಇಲ್ಲದಂತಾಗುತ್ತದೆ. ಹಾಗಾಗಿ ಅದಕ್ಕೆ ಅಂತ್ಯವಿದೆ. ಆದುದರಿಂದ ಅದು "ಅಸತ್" ಎಂದರೆ ಇಲ್ಲದಿರುವುದು, ಅಸತ್ಯವಾದುದು ಆಗಿರುತ್ತದೆ. ಹೀಗೆ ಮಾಯೆಯು ಸತ್ ಮತ್ತು ಅಸತ್ ಎರಡೂ ಆಗಿರುವುದರಿಂದಲೂ ನಿರ್ದಿಷ್ಟವಾಗಿ ಮಾಯೆಯನ್ನು ಇದೆ ಎಂದು ನಿರ್ವಚನೆ ಮಾಡಲು ಸಾಧ್ಯವಿಲ್ಲವಾದ್ದರಿಂದ ಮಾಯೆಯನ್ನು ಅನಿರ್ವಚನೀಯ ಎಂದು ಹೇಳುತ್ತಾರೆ. ಶ್ರೀ ಶಂಕರಾಚಾರ್ಯರು ಮಾಯೆಯ ಬಗ್ಗೆ ಹೀಗೆಂದಿರುತ್ತಾರೆ :

ಸನ್ನಾಪ್ಯಸನ್ನಾಪ್ಯುಭಯಾತ್ಮಿಕಾ ನೋ
ಭಿನ್ನಾಪ್ಯಭಿನ್ನಾಪ್ಯುಭಯಾತ್ಮಿಕಾ ನೋ ।

ಸಾಂಗಾಪ್ಯನಂಗಾಪ್ಯುಭಯಾತ್ಮಿಕಾ ನೋ
ಮಹಾದ್ಭುತಾಽನಿರ್ವಚನೀಯರೂಪಾ ॥

ಮಾಯೆಯು ಸದ್ರೂಪವಲ್ಲ, ಅಸದ್ರೂಪವಲ್ಲ, ಸದಸದ್ರೂಪವೂ ಅಲ್ಲ ; ಬ್ರಹ್ಮನಿಗಿಂತ ಭಿನ್ನವೂ ಅಲ್ಲ, ಭಿನ್ನ-ಅಭಿನ್ನವೂ ಅಲ್ಲ ; ಸಾವಯುವವೂ ಅಲ್ಲ, ನಿರವಯವವೂ ಅಲ್ಲ, ಸಾವಯವ-ನಿರವಯವವೂ ಅಲ್ಲ ; ಮಾಯೆಯು ಅತ್ಯಂತ ಅದ್ಭುತವಾಗಿದೆ, ಅನಿರ್ವಚನೀಯ ರೂಪವಾಗಿದೆ.

—ವಿವೇಕಚೂಡಾಮಣಿ, ೧೧೧

ಮಾಯೆಯ ಶಕ್ತಿ ಪ್ರಕಟಣೆಗಳು ಎರಡು ವಿಧ : ಆವರಣ ಮತ್ತು ವಿಕ್ಷೇಪ. ಹಾಗೆಯೇ ಮಾಯೆಯು ಎರಡು ಪ್ರಕಾರಗಳಾಗಿದ್ದು ಒಂದು ವಿದ್ಯಾಮಾಯೆ ಇನ್ನೊಂದು ಅವಿದ್ಯಾ ಮಾಯೆ ಎಂದಾಗಿರುತ್ತದೆ.

ಮಾಯೆಯ ಆವರಣಶಕ್ತಿ : ಇದು ವಸ್ತು ಹಾಗೂ ವಿಷಯಗಳ ನಿಜವಾದ ಸ್ವರೂಪ ವನ್ನು ಅಡಗಿಸುತ್ತದೆ. ಅವುಗಳಿಗೆ ಆವರಣವಾಗಿ ಸ್ವರೂಪ ಕಾಣದಂತೆ ಮಾಡುತ್ತದೆ.

ಮಾಯೆಯ ವಿಕ್ಷೇಪಶಕ್ತಿ : ಇದು ನಿಜವಾಗಿ ಇರುವ ವಸ್ತು, ವಿಷಯಗಳ ಬದಲಿಗೆ ಬೇರೆಯಾದ ವಸ್ತು, ವಿಷಯಗಳು ಕಾಣುವಂತೆ ಮಾಡುತ್ತದೆ.

ವಿದ್ಯಾಮಾಯೆ : ಈಶ್ವರನು ಜಗತ್‌ಸೃಷ್ಟಿ, ಜೀವಿಗಳ ಸೃಷ್ಟಿಯನ್ನು ಮಾಡಿ ಜಗತ್ತಿನಲ್ಲಿ ಸಾಕಾರರೂಪದಿಂದ ಪ್ರಕಟಗೊಂಡು ಧರ್ಮಸ್ಥಾಪನೆ ಮಾಡುವುದು, ಜೀವಿಗಳ ಉದ್ಧಾರಮಾಡುವುದು, ಇವುಗಳಿಗೆಲ್ಲಾ ಕಾರಣವಾದ ಮಾಯೆಯೇ ವಿದ್ಯಾಮಾಯೆ. ವಿದ್ಯಾಮಾಯೆಯು ಜೀವಿಗೆ ಈಶ್ವರಚಿಂತನೆಗೆ ನೆರವಾಗುತ್ತದೆ ; ಎಂದರೆ ಸತ್ವ ರಜಸ್ ತಮೋಗುಣವಾದ ಮಾಯೆಯ ಸಾತ್ವಿಕಶಕ್ತಿಯ ಕಾರ್ಯವಾಗಿರುತ್ತದೆ. ಅದಕ್ಕಾಗಿಯೇ ಕೇವಲ ಸತ್ವಪ್ರಧಾನ ಎಂದು ಅದನ್ನು ಕರೆಯುತ್ತಾರೆ.

ಅವಿದ್ಯಾಮಾಯೆ : ಅಜ್ಞಾನವೇ ಅವಿದ್ಯಾಮಾಯೆ. ಜೀವಿಗಳು ತಮ್ಮ ಸ್ವರೂಪ ಮತ್ತು ಕರ್ತವ್ಯಗಳನ್ನು ಮರೆತು ಪ್ರಪಂಚದ ಮೋಹ, ಇಂದ್ರಿಯಗಳ ಆಕರ್ಷಣೆಗಳಿಗೆ ಒಳಗಾಗುವಂತೆ ಮಾಡುವ ಶಕ್ತಿಯೇ ಅವಿದ್ಯಾಮಾಯೆ. ಇದು ಮಲಿನಸತ್ವಪ್ರಧಾನವಾದುದು ; ಜೀವನಿಗೆ ಸಂಸಾರಕಾರಣವಾದುದು.

ಈಶ್ವರ : ಮಾಯೆಯಿಂದಾಗಿ ಜಗತ್ತು, ಜೀವ, ಸುಖ, ದುಃಖ ಇತ್ಯಾದಿಗಳೆಲ್ಲ ಜೀವನಿಗೆ ಅನುಭವಕ್ಕೆ ಬರುತ್ತವೆ. ಆಗ ಇವುಗಳಿಗೆಲ್ಲಾ ಅಧಿಪತಿಯಾಗಿ ಒಬ್ಬನಿರುವನೆಂದು ಜೀವನಿಗೆ ಅನುಭವಕ್ಕೆ ಬರುವವನೇ ಈಶ್ವರ. ಈಶ್ವರ ಎಂದರೆ ಒಡೆಯ ಎಂದು ಅರ್ಥ. ಬ್ರಹ್ಮವನ್ನು ಮಾಯೆಯ ತೆರೆಯ ಮೂಲಕ ನೋಡಿದಾಗ ಕಾಣುವುದು ಅಥವಾ ಬ್ರಹ್ಮವು ಮಾಯಾಸಹಿತನಾಗಿ ಸಗುಣ ಸಾಕಾರನಾಗಿ ಪ್ರಕಟಗೊಂಡದ್ದನ್ನೆ ಈಶ್ವರ ಎಂದು ಹೇಳುವುದಾಗಿದೆ. ಈಶ್ವರನು ಮಾಯೆಯನ್ನು ಹತೋಟಿಯಲ್ಲಿಟ್ಟು ಮಾಯೆಯು ಈಶ್ವರನ ಮೂಲಕ ಪ್ರಕಟಗೊಳ್ಳುತ್ತದೆ. ಜಗತ್ತಿನ ದೃಷ್ಟಿಯಿಂದ ಈಶ್ವರನಿಗೆ ಮೂರು ತರಹದ ಸ್ಥಿತಿವಿಶೇಷಗಳು ಇವೆ. ಅವೇ ಸೃಷ್ಟಿ, ಸ್ಥಿತಿ ಮತ್ತು ಲಯಗಳಾಗಿವೆ. ಸಮುದ್ರದಲ್ಲಿ ಇರುವುದೆಲ್ಲವೂ ನೀರೇ ಆಗಿದ್ದರೂ ಕೂಡ ಸಮುದ್ರ ಬೇರೆ, ನೀರಿನ ಅಲೆ ಬೇರೆ, ನೊರೆ ಬೇರೆ ಎಂದು ಕಾಣುತ್ತಿರುವಂತೆ ಬ್ರಹ್ಮ ಬೇರೆ, ಈಶ್ವರ ಬೇರೆ ಎಂದು ಕಂಡರೂ ಕೂಡ

ಅವರು ಒಂದೇ ಆಗಿರುತ್ತಾರೆ. ಅಲೆ ಅಡಗಿದಾಗ ಅಖಂಡ ಸಮುದ್ರ ಕಂಡಂತೆ ಮಾಯೆಯ ಪ್ರಭಾವದ ತೆರೆ ಹರಿದಾಗ ಜೀವನಿಗೆ ಈಶ್ವರ-ಬ್ರಹ್ಮ-ಜೀವ-ಜಗತ್ತು ಸರ್ವವೂ ಒಂದೇ ಎಂಬ ಅನುಭವ ಉಂಟಾಗುತ್ತದೆ. ಮಾಯೆಯಿಂದಾಗಿ ಜೀವನಿಗೆ ಬ್ರಹ್ಮವೇ ಈಶ್ವರನಾಗಿ ಕಾಣುವಂತಾಗಿದ್ದು ಈಶ್ವರನ ಇರುವಿಕೆಗೆ ಮಾಯೆಯೇ ಆಧಾರಕಾರಣಗಳಾದರೂ ಈಶ್ವರನು ಮಾಯೆಯಲ್ಲ, ಮಾಯೆಯ ಅಧೀನನಲ್ಲ. ಹಾಗೂ ಈಶ್ವರನು ಪರಿವರ್ತನೆ ಹೊಂದದೆ ಕೂಟಸ್ಥನೇ ಆಗಿದ್ದು ಪರಿವರ್ತನಶೀಲವಾದ ಜಗತ್ತನ್ನು ಮಾಯಾಶಕ್ತಿಯಿಂದ ಸೃಷ್ಟಿಸುತ್ತಾನೆ. ಈಶ್ವರನು ಜೀವನಿಗೆ ಸಗುಣಸಾಕಾರನಾಗಿ ಕಾಣುತ್ತಾನೆ. ತೆರೆಯು ಸಮುದ್ರದಲ್ಲಿ ಕಂಡಂತೆ ಈಶ್ವರನು ಕಾಣುತ್ತಿದ್ದು ತೆರೆಯು ಮೂಲತಃ ನೀರೇ ಆಗಿದ್ದು ಸಮುದ್ರದ ಒಟ್ಟು ನೀರಿನಿಂದ ಭಿನ್ನವಲ್ಲದೆ ಅದಕ್ಕೇ ಸೇರಿರುವಂತೆ ಈಶ್ವರನು ಮೂಲತಃ ಬ್ರಹ್ಮವೇ ಆಗಿದ್ದು ವ್ಯಾವಹಾರಿಕವಾಗಿ ಬ್ರಹ್ಮಕ್ಕಿಂತ ಭಿನ್ನನಾಗಿರುತ್ತಾನೆ.

ಈಶ್ವರನು ಸರ್ವನಿಯಂತೃ, ಸ್ವತಂತ್ರನು, ಸರ್ವಜ್ಞನು, ಸರ್ವಶಕ್ತನು, ಜಗತ್ಕರ್ತನು, ಜೀವರಿಗೆ ಕರ್ಮಫಲಗಳನ್ನು ಕೊಡುವವನು.

ಜೀವ : ಮಾಯೆಯನ್ನು ಅಧೀನದಲ್ಲಿ ಇಟ್ಟುಕೊಂಡು ಮಾಯೆಯ ಮೂಲಕ ಕಾಣುವ ಹಾಗೂ ಮಾಯೆಯ ಮೂಲಕ ಕೆಲಸ ಮಾಡುವಂತಿರುವವನೇ ಈಶ್ವರನಾದರೆ ಮಾಯೆಯ ಅಧೀನಕ್ಕೆ ಒಳಗಾಗಿ 'ನಾನು', 'ನನ್ನದು' ಎಂಬ ಭಾವದಿಂದ ಕೂಡಿರುವ ಚೇತನವೇ ಜೀವ. ಅವಿದ್ಯೆಯಿಂದ ಬ್ರಹ್ಮದ ಆಭಾಸವು ಜಗತ್ತಿನಲ್ಲಿ ಪ್ರಕಟಗೊಂಡಿರುವುದನ್ನೇ ಜೀವ ಎಂದು ಇನ್ನೊಂದು ರೀತಿಯಲ್ಲಿ ಹೇಳಬಹುದು. ಜೀವವು ಬ್ರಹ್ಮವೇ ಆಗಿದ್ದು ಅದು ಶುದ್ಧವೂ, ನಿತ್ಯವೂ ಆಗಿರುತ್ತದಾದರೂ ಮಾಯೆಯ ಪ್ರಭಾವದಿಂದ ಕರ್ತನು ಎಂದರೆ ಮಾಡುವವನು, ಭೋಕ್ತೃ ಎಂದರೆ ಅನುಭವಿಸುವವನು, ಸುಖಿಸುವವನು ಎಂಬಿತ್ಯಾದಿ ಗುಣಧರ್ಮಗಳಿಂದ ಕೂಡಿರುತ್ತದೆ. ಜೀವವು ಶರೀರಧಾರಿಯಾಗಿ ಈ ಪ್ರಪಂಚದಲ್ಲಿ ಹುಟ್ಟುಸಾವುಗಳಿಗೆ ಒಳಗಾಗಿ ಇದ್ದರೂ ನಿಜವಾದ ಬ್ರಹ್ಮಜ್ಞಾನ ಲಭ್ಯವಾದಾಗ ಬ್ರಹ್ಮದಲ್ಲಿ ಲೀನವಾಗಿ ಉಪ್ಪಿನಿಂದಲೇ ಮಾಡಿದ ಬೊಂಬೆ ಸಮುದ್ರದಲ್ಲಿ ಕರಗಿ ಸಮುದ್ರದ ಉಪ್ಪಿನೊಳಗೆ ಒಂದಾಗಿ ಅಭೇದವಾಗುವಂತೆ ಎಂದರೆ ಮೊದಲೇ ಉಪ್ಪಾಗಿದ್ದುದು ಉಪ್ಪೇ ಆಗುವಂತೆ, ಜೀವವು ಬ್ರಹ್ಮವನ್ನು ಸೇರಿದಾಗ ಬ್ರಹ್ಮವೇ ಆಗುತ್ತದೆ. ಬ್ರಹ್ಮವು ಭಾಗವಲ್ಲದ, ಅಖಂಡವಾದ ಚೈತನ್ಯವಾಗಿದ್ದು ಅದರಿಂದ ಭಾಗವಿರುವ ಈ ಜೀವ ಹೇಗೆ ಹುಟ್ಟಿತು ಎಂಬುದಕ್ಕೆ ಉತ್ತರವಾಗಿ ಅದ್ವೈತ ವೇದಾಂತವು ಬ್ರಹ್ಮದಿಂದ ಜೀವನು ಹುಟ್ಟಲಿಲ್ಲ ; ಆದರೆ ಅವಿದ್ಯೆಯಿಂದಾಗಿ, ಮಾಯೆಯಿಂದಾಗಿ ಬ್ರಹ್ಮವೇ ಜೀವರೂಪವಾಗಿ ಕಾಣುತ್ತದೆ ಎಂದು ಹೇಳುತ್ತದೆ. ಆದರೆ ಎಲ್ಲಿಯ ತನಕ ಜೀವನಿಗೆ ನಾನು, ನನ್ನ ಶರೀರ, ನನ್ನ ಜೀವನ, ಜಗತ್ತು ಎಂಬಿತ್ಯಾದಿಗಳ ಅರಿವು, ಅನುಭವಗಳು ಇರುತ್ತದೆಯೋ ಅಲ್ಲಿಯವರೆಗೆ ಈ ಜಗತ್ತು, ಇರುವ ಜೀವಿಗಳು, ಜೀವನ, ಈಶ್ವರ—ಎಲ್ಲವೂ ಸತ್ಯ. ಹಾಗೆಯೇ ಇರುವ ಭೇದಗಳು, ವಿವಿಧತೆಗಳು ಸಹ ಸತ್ಯ. ಜೀವಿಯು ಈ ಜಗತ್ತಿನಲ್ಲಿ ಜೀವಿಸಿಕೊಂಡು ಈಶ್ವರನ ಆರಾಧನೆಯನ್ನು ಮಾಡುತ್ತಾ ಜೀವನದ ಬಂಧ–ದುಃಖ–ತೊಂದರೆಗಳಿಂದ ಮುಕ್ತನಾಗಲು ಯತ್ನಿಸ

ಬೇಕು, ಸಾಧನೆ ಮಾಡಬೇಕು ಎಂಬುದಾಗಿ ಅದ್ವೈತ ವೇದಾಂತದಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ.

ಜೀವಿಯ ದೃಷ್ಟಿಯಿಂದ ಮೂರು ಸತ್ಯಗಳು ಕಾಣುತ್ತವೆ ಎಂದು ಅದ್ವೈತ ವೇದಾಂತದಲ್ಲಿ ವಿವರಿಸಿ ಆ ಸತ್ಯತ್ರಯಗಳ ಮೂಲಕ ಜೀವನ, ಜೀವನದಲ್ಲಿ ದೇವರ ಸ್ಥಾನ, ಜೀವನದಲ್ಲಿ ಆತ್ಮಸಾಕ್ಷಾತ್ಕಾರಕ್ಕೆ ಮಾಡಬೇಕಾದ ಸಾಧನೆಗಳ ನೆಲೆಯನ್ನು ವಿವರಿಸಲಾಗಿದೆ.

ಆ ಮೂರು ಸತ್ಯಗಳು ಯಾವುವೆಂದರೆ :

(೧) ಪ್ರಾತಿಭಾಸಿಕ ಸತ್ಯ, (೨) ವ್ಯಾವಹಾರಿಕ ಸತ್ಯ, (೩) ಪಾರಮಾರ್ಥಿಕ ಸತ್ಯ.

ಪ್ರಾತಿಭಾಸಿಕ ಸತ್ಯ : ಕ್ಷಣಭಂಗುರವಾದ, ನಶ್ವರವಾದ. ಅಲ್ಪಕಾಲಿಕವಾದ ಸತ್ಯದಿಂದ ಕೂಡಿರುವುದೇ 'ಪ್ರಾತಿಭಾಸಿಕ'ವಾಗಿರುತ್ತದೆ. ಅಂದರೆ ಜಗತ್ತಿನಲ್ಲಿ ವ್ಯವಹಾರದಲ್ಲಿ ಸ್ವಲ್ಪಕಾಲ ತೋರಿ ಅನಂತರ ಇಲ್ಲದಂತಾಗುವುದೇ ಪ್ರಾತಿಭಾಸಿಕ ಸತ್ಯವಾಗಿದೆ. ಹಗ್ಗವು ಹಾವಿನಂತೆ ಕಾಣುವುದು, ಮುತ್ತಿನ ಚಿಪ್ಪು ಬೆಳ್ಳಿಯಂತೆ ತೋರುವುದು ಇವನ್ನೆಲ್ಲ ಪ್ರಾತಿಭಾಸಿಕ ಸತ್ಯ ಎನ್ನಲಾಗಿದೆ.

ವ್ಯಾವಹಾರಿಕ ಸತ್ಯ : ಜೀವನಿಗೆ ದಿನನಿತ್ಯವೂ ಜೀವನದಲ್ಲಿ ಅನುಭವಕ್ಕೆ ಬರುವ ಅನುಭವಗಳು ವ್ಯಾವಹಾರಿಕ ಸತ್ಯ ಎಂದೆನಿಸಿರುತ್ತದೆ. ನಾನು ದಪ್ಪನಾಗಿದ್ದೇನೆ, ಸುಖ ವಾಗಿದ್ದೇನೆ, ದುಃಖಿಯಾಗಿರುತ್ತೇನೆ, ಪ್ರಪಂಚದಲ್ಲಿ ನಾನೂ ಒಬ್ಬ, ನಾನು ಬಡವ, ಬಲ್ಲಿದ, ಬಿಸಿಯಾಗಿದೆ, ಶೀತವಾಗಿದೆ, ನನ್ನ ಮನೆ, ನನ್ನ ಬಂಧುಬಳಗ—ಇತ್ಯಾದಿ ಸಮಸ್ತ ಪ್ರಪಂಚ ವ್ಯವಹಾರ ಅನುಭವಗಳೆಲ್ಲವೂ ವ್ಯಾವಹಾರಿಕ ಸತ್ಯವಾಗಿರುತ್ತವೆ.

ಪಾರಮಾರ್ಥಿಕ ಸತ್ಯ : ಪೂರ್ಣವಾದ, ನಿಜವಾದ, ನಿರ್ಬಂಧಗಳು ಯಾವುದೂ ಇಲ್ಲದ ಸತ್ಯವೇ ಪಾರಮಾರ್ಥಿಕ ಸತ್ಯ. ಜೀವಿಯು ತನ್ನ ನಿಜವಾದ ಸ್ವರೂಪವನ್ನು ತಿಳಿದು ಭೇದವೆಲ್ಲವೂ ಅಳಿದು ಇರುವುದೊಂದೇ ಬ್ರಹ್ಮ. "ಸರ್ವಂ ಖಲ್ವಿದಂ ಬ್ರಹ್ಮ" ಎಂದು ಅನುಭವಿಸುವುದೇ ಪಾರಮಾರ್ಥಿಕ ಸತ್ಯ. ಅಲ್ಲಿಗೆ ಬ್ರಹ್ಮವೇ ಪಾರಮಾರ್ಥಿಕ ಸತ್ಯ ಎಂಬುದು ಸ್ಪಷ್ಟವಾದಂತಾಯಿತು.

ಸೃಷ್ಟಿ : ಈ ಜಗತ್ತು ಹಾಗೂ ಜೀವಿಗಳೆಲ್ಲದಕ್ಕೂ ಬ್ರಹ್ಮವೇ ಆಧಾರವಾಗಿದ್ದು ಈ ನಾಮರೂಪಗಳೆಲ್ಲವೂ ಮಾಯೆಯಿಂದಾಗಿರುತ್ತವೆ. ಈ ಚರಾಚರ ವಸ್ತುಗಳ ಸೃಷ್ಟಿಯ ಶಕ್ತಿಯು ಬ್ರಹ್ಮದಲ್ಲಿಯೇ ಇರುತ್ತದೆ. ಬೆಂಕಿಯಿಂದ ಕಿಡಿಗಳು ಹಾರಿದಂತೆ ಬ್ರಹ್ಮದಿಂದ ಜೀವಿಗಳು ಹುಟ್ಟಿದವು. ಕಿಡಿಯಲ್ಲಿ ಹೇಗೆ ಬೆಂಕಿಯ ಸುಡುವ ಶಕ್ತಿ ಇದೆಯಾಗಿದ್ದು ಅದು ಕೂಡ ಬೆಂಕಿಯೇ ಆಗಿದೆಯೋ ಹಾಗೆಯೇ ಜೀವನೂ ಮೂಲತಃ ಬ್ರಹ್ಮವೇ ಆಗಿರುತ್ತಾನೆ ಎಂದು ಅದ್ವೈತವೇದಾಂತದಲ್ಲಿ ಸವಿಸ್ತಾರವಾದ ವಿವರಣೆ ಇದೆ. ಬ್ರಹ್ಮವು ಈ ಜೀವ-ಜಗತ್ತುಗಳ ಸೃಷ್ಟಿಯನ್ನು ಮಾಡಿತೇ ? ಏಕೆ ಮಾಡಿತು ? ಇತ್ಯಾದಿ ಪ್ರಶ್ನೆಗಳಿಗೆ ಅದು ಬ್ರಹ್ಮದ ಲೀಲೆ, ಮಾಯೆ ಎಂದು ಉತ್ತರವನ್ನು ಅದ್ವೈತವೇದಾಂತ ದಲ್ಲಿ ವಿವರವಾಗಿ ವಿವರಿಸಲಾಗಿದೆ.

ಬ್ರಹ್ಮನಿಂದ ಆಕಾಶದ್ರವ್ಯ ಉತ್ಪತ್ತಿಯಾಗಿ ಅದರಿಂದ ವಾಯು, ಅನಂತರ ಅಗ್ನಿ,

ಅಗ್ನಿಯಿಂದ ಜಲ, ಜಲದಿಂದ ಪೃಥ್ವಿ ಇವುಗಳು ಉತ್ಪನ್ನವಾದುವು. ಪೃಥ್ವಿಯಿಂದ ವನಸ್ಪತಿ, ವನಸ್ಪತಿಯಿಂದ ಅನ್ನ. ಅನ್ನದಿಂದ ಮನುಷ್ಯರು ಹುಟ್ಟಿದರು. ಈ ಸೃಷ್ಟಿಯು ಮೂಲವಾದ ಐದು ಭೂತಗಳಿಂದ (ವಸ್ತುಗಳಿಂದ) ಆದರೂ, ಹಾಗಾಗಲು ಪಂಚಭೂತ ಗಳ ಒಳಗಿನ ಪ್ರತಿಯೊಂದರ ಹೆಚ್ಚುಕಡಿಮೆ ಪ್ರಮಾಣಗಳ ಮಿಶ್ರಣದಿಂದ ಹೊಸ ಪದಾರ್ಥಗಳು ಸಿದ್ಧವಾಗಿ ಹಾಗೆ ಆಗಿವೆ ಎಂದು ಹೇಳಲಾಗಿದೆ. ಹೀಗಾಗುವುದನ್ನು 'ಪಂಚೀಕರಣ' ಎಂದು ಕರೆಯಲಾಗಿದೆ. ಬೇರೆ ಬೇರೆ ಭೂತಗಳ (ಮೂಲವಸ್ತುಗಳ) ಐದೈದು ಭಾಗಗಳಿಂದ ಪರಸ್ಪರ ಮಿಶ್ರವಾಗುವುದಕ್ಕೆ ಪಂಚೀಕರಣ ಎಂದು ಹೆಸರು.

ಹೀಗೆ ಪಂಚೀಕರಣದಿಂದಾಗಿ ಜಗತ್ತಿನ ಎಲ್ಲಾ ವಸ್ತುಗಳ ಸೃಷ್ಟಿಯಾಗಿದ್ದು ಅದರಂತೆ ಮನುಷ್ಯನ ಶರೀರವು ಸೃಷ್ಟಿಯಾಗಿದೆ.

ಮನುಷ್ಯನ ಶರೀರವು ಮೂರು ವಿಧಗಳಾಗಿವೆ. ಯಾವುವೆಂದರೆ : (೧) ಸ್ಥೂಲ, (೨) ಸೂಕ್ಷ್ಮ, (೩) ಕಾರಣ.

ಸ್ಥೂಲಶರೀರ : ಸ್ಥೂಲಶರೀರ ಎಂದರೆ ಜೀವನು ಇದ್ದುಕೊಂಡು ಸುಖದುಃಖಾದಿ ಗಳನ್ನು ಅನುಭವಿಸುವ ಸ್ಥಳ. ಇದು ಇಪ್ಪತ್ತೈದು ತತ್ತ್ವಗಳಿಂದ ಕೂಡಿರುತ್ತದೆ.

ಇಪ್ಪತ್ತೈದು ತತ್ತ್ವಗಳು ಯಾವುವೆಂದರೆ, ಮೂಲಭೂತವಾದ ಐದು ತತ್ತ್ವಗಳ (ವಾಯು, ಆಕಾಶ, ತೇಜಸ್ಸು, ಜಲ ಮತ್ತು ಪೃಥ್ವಿ) ಐದೈದು ತತ್ತ್ವಗಳು ಸೇರಿ ಆದವುಗಳಾಗಿವೆ.

(೧) ಆಕಾಶತತ್ತ್ವದಿಂದಾಗಿ : ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮಾತ್ಸರ್ಯ ಇವುಗಳು ರೂಪುಗೊಂಡಿವೆ.

(೨) ವಾಯುವಿನಿಂದಾಗಿ : ಚಲನ, ವಲನ, ಧಾವನ, ಪ್ರಸರಣ ಮತ್ತು ಸಂಕೋಚ.

(೩) ತೇಜಸ್ಸಿನಿಂದಾಗಿ : ಕ್ಷುಧೆ, ತೃಷೆ, ಆಲಸ್ಯ, ನಿದ್ರೆ ಮತ್ತು ಕಾಂತಿ.

(೪) ಜಲದಿಂದಾಗಿ : ಶುಕ್ರ, ಶೋಣಿತ, ಮೂತ್ರ, ಸ್ವೇದ ಮತ್ತು ರಕ್ತ.

(೫) ಪೃಥ್ವಿಯಿಂದಾಗಿ : ಅಸ್ಥಿ, ಮಾಂಸ, ಚರ್ಮ, ನಾಡಿ ಮತ್ತು ರೋಮ.

ಒಟ್ಟಿನಲ್ಲಿ ಈ ಸ್ಥೂಲದೇಹದಲ್ಲಿ ಯಾವುದು ಕಾಠಿಣ್ಯವೋ ಅದು ಪೃಥ್ವಿ, ಯಾವುದು ದ್ರವತ್ವವೋ ಅದು ಜಲ, ಯಾವುದು ಉಷ್ಣತ್ವವೋ ಅದು ತೇಜ, ಯಾವುದು ಸಂಚರಿ ಸುವುದೋ ಅದು ವಾಯು, ಯಾವುದು ಸುಷಿರತ್ವವೊ ಅದು ಆಕಾಶತತ್ತ್ವವಾಗಿರುವುದು. ಹೀಗೆ ಪಂಚಭೂತಗಳಿಂದ ಆಗಿರುವ ಮನುಷ್ಯನ ಸ್ಥೂಲಶರೀರವು ಸಪ್ತಧಾತುಗಳು, ಷಡ್ವಿಕಾರಗಳು, ದಶದೋಷಗಳಿಂದ ಕೂಡಿರುತ್ತದೆ.

ಸಪ್ತಧಾತುಗಳು : (೧) ರೇತ, (೨) ರಕ್ತ, (೩) ಮಾಂಸ, (೪) ಮಜ್ಜಾ, (೫) ಮೇಧ, (೬) ಅಸ್ಥಿ, (೭) ಚರ್ಮ.

ಆರು ವಿಕಾರಗಳು (ಷಡ್‌ವಿಕಾರಗಳು) :

(೧) ಜಾಯತೇ = ಹುಟ್ಟುವುದು.

(೨) ಅಸ್ತಿ = ಉಂಟೆನಿಸುವುದು, ಪ್ರಕಟವಾಗುವುದು.

(೩) ವರ್ಧತೇ = ವೃದ್ಧಿ ಹೊಂದುವುದು.
(೪) ವಿಪರಿಣಮತೇ = ಪರಿಣಾಮ ಪಡೆಯುವುದು.
(೫) ಅಪಕ್ಷೀಯತೇ = ಕ್ಷೀಣತ್ವ ಹೊಂದುವಿಕೆ.
(೬) ವಿನಶ್ಯತಿ = ನಾಶಹೊಂದುವಿಕೆ, ಇಲ್ಲವಾಗುವಿಕೆ.

ಹತ್ತು ದೋಷಗಳು : (೧) ಅಶುದ್ಧ, (೨) ಶೌಚ, (೩) ದುರ್ಗಂಧ, (೪) ಅಸ್ಥಿರ, (೫) ಸ್ಥೂಲ, (೬) ಖಂಡ. (೭) ದಗ್ಧ, (೮) ಶಿಥಿಲ, (೯) ನಾನಾ ರೋಗಗ್ರಸ್ತ, (೧೦) ಅವಿಷ.

ಸೂಕ್ಷ್ಮಶರೀರ : ಭೋಗದ ಅನುಭವಕ್ಕೆ ಸಾಧನವಾಗಿ ಇಂದ್ರಿಯಗಳಿಗೆ ಕಾರಣವಾಗಿರುವ ಶರೀರವೇ ಸೂಕ್ಷ್ಮಶರೀರವಾಗಿರುತ್ತದೆ. ಮುಕ್ತಿಯಾಗುವವರೆಗೆ ಇರತಕ್ಕ ಶರೀರವೇ ಸೂಕ್ಷ್ಮಶರೀರ. ಇದು ಪೃಥಿವ್ಯಾದಿ ಪಂಚಭೂತಗಳ ಸತ್ವಾಂಶದಿಂದ ಕೂಡಿದೆ. ಗಂಧ, ರಸ, ಸ್ಪರ್ಶ, ರೂಪ, ಶಬ್ದ ಎಂಬ ಪಂಚಭೂತಗಳ ಸೂಕ್ಷ್ಮಾಂಶದಿಂದ ಉತ್ಪನ್ನವಾಗಿದೆ. ಪಂಚಜ್ಞಾನೇಂದ್ರಿಯಗಳು (ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ), ಪಂಚಕರ್ಮೇಂದ್ರಿಯಗಳು (ವಾಕ್, ಪಾಣಿ, ಪಾದ, ಉಪಸ್ಥ, ಗುದ), ಪಂಚಪ್ರಾಣಗಳು (ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನ), ಮನಸ್ಸು ಮತ್ತು ಬುದ್ಧಿ ಎಂಬ ಹದಿನೇಳು ತತ್ತ್ವಗಳಿಂದ ಕೂಡಿರುತ್ತದೆ.

ಪಂಚಪ್ರಾಣಗಳ ಸ್ಥಾನ ಮತ್ತು ಕ್ರಿಯೆ :

ಪ್ರಾಣ : ಹೃದಯ.

ಕ್ರಿಯೆ : ಹಸಿವು, ಬಾಯಾರಿಕೆ ಉಂಟುಮಾಡುವಿಕೆ.

ಅಪಾನ : ಗುದ.

ಕ್ರಿಯೆ : ಮಲಮೂತ್ರಗಳನ್ನು ಹೊರಹಾಕುವಿಕೆ.

ಸಮಾನ : ನಾಭಿ.

ಕ್ರಿಯೆ : ತಿಂದ ಅನ್ನ, ಕುಡಿದ ನೀರುಗಳನ್ನು ಪಚನಗೊಳಿಸಿ ಯೋಗ್ಯವಾಗಿ ಸಮಪಡಿಸುವಿಕೆ.

ಉದಾನ : ಕಂಠ.

ಕ್ರಿಯೆ : ತೇಗು, ಬಿಕ್ಕಳಿಕೆ ಇತ್ಯಾದಿಗಳನ್ನು ಉಂಟುಮಾಡುವಿಕೆ.

ವ್ಯಾನ : ಸರ್ವಾಂಗಸ್ಥಾನವನ್ನು ಪಡೆದಿದೆ.

ಕ್ರಿಯೆ : ಎಲ್ಲಾ ಕಡೆಗೂ ಆಹಾರವನ್ನು ಹಂಚುವುದು, ಎಂದರೆ ಶರೀರದ ಎಲ್ಲಾ ಭಾಗವನ್ನೂ ಸಂಚರಿಸಿ ಶರೀರವನ್ನು ನಿಲ್ಲಿಸುವಂತೆ ಮಾಡುವುದು. ಒಂದೇ ಪ್ರಾಣವು ಐದು ವಿವಿಧ ಕ್ರಿಯೆಗಳಿಂದಾಗಿ ಪಂಚಪ್ರಾಣ ಎಂದು ಅನುಕೂಲಕ್ಕಾಗಿ ವಿಭಾಗಿಸಲ್ಪಟ್ಟಿದೆಯೇ ವಿನಾ ಪ್ರಾಣಗಳು ಐದು ಇರುವುದಿಲ್ಲ.

ಸೂಕ್ಷ್ಮಶರೀರದ ಒಳಗೆ ಜ್ಞಾನಕ್ಕೆ ಸಾಧನವಾದ ಅಂಶವನ್ನು ಅಂತಃಕರಣ ಎಂದು ಕರೆಯಲಾಗಿದೆ. ಅಂತಃಕರಣದ ಭೇದವೇ ಮನಸ್ಸು ಮತ್ತು ಬುದ್ಧಿಗಳಾಗಿದ್ದು ಇವೆರಡನ್ನು ಸೇರಿಸಿ ಅಂತಃಕರಣ ಎಂದು ಹೇಳಲಾಗಿದೆ.

ಮನಸ್ಸು : ಒಂದು ವಸ್ತುವಿನ ಕುರಿತಾಗಿ ಸಂಕಲ್ಪಿಸುವುದು, ಸಂಶಯಪಡುವುದು, ಈ ಸ್ವಭಾವಗಳಿಂದ ಕೂಡಿರುವ ಅಂತಃಕರಣವೃತ್ತಿಯೇ ಮನಸ್ಸು.

ಬುದ್ಧಿ : ಒಂದು ವಸ್ತುವಿನ ಕುರಿತಾಗಿ ನಿಶ್ಚಿತವಾದ ತೀರ್ಮಾನಕ್ಕೆ ಬರುವ ಅಂತಃಕರಣವೇ ಬುದ್ಧಿ.

ಮನಸ್ಸು ಮತ್ತು ಬುದ್ಧಿಗಳಲ್ಲಿ ಸೇರಿರುವ ಇನ್ನೆರಡು ಅಂಶಗಳು ಇದ್ದು ಅವು ಚಿತ್ತ ಮತ್ತು ಅಹಂಕಾರಗಳಾಗಿವೆ.

ಚಿತ್ತ : ಬಹುಕಾಲ ಜ್ಞಾಪಕ ಇಡುವ ಶಕ್ತಿಯುಳ್ಳದ್ದೇ ಚಿತ್ತ.

ಅಹಂಕಾರ : ನಾನು, ನನ್ನದು ಎಂದು ಅಭಿಮಾನಪಡುವ ಚಿತ್ತವೃತ್ತಿಯೇ ಅಹಂಕಾರ.

ಬುದ್ಧಿಯಲ್ಲಿ ಅಹಂಕಾರ ಮತ್ತು ಮನಸ್ಸಿನಲ್ಲಿ ಚಿತ್ತ ಸೇರಿರುತ್ತದೆ ಎಂದು ಹೇಳಿ ಬುದ್ಧಿ ಮತ್ತು ಮನಸ್ಸು ಎರಡನ್ನೂ ಸೇರಿಸಿ ಅಂತಃಕರಣ ಎಂದು ಹೇಳಲಾಗಿದೆ.

ಕಾರಣಶರೀರ : ಸ್ಥೂಲ, ಸೂಕ್ಷ್ಮ ಶರೀರಗಳೆರಡಕ್ಕೂ ಕಾರಣವಾದ ಅಜ್ಞಾನ ಅಥವಾ ಅವಿದ್ಯೆಯನ್ನು ಕಾರಣಶರೀರ ಎಂದು ಹೇಳುತ್ತಾರೆ. ಸೂಕ್ಷ್ಮ-ಸ್ಥೂಲಶರೀರಗಳ ತೋರಿಕೆಗೆ ಕಾರಣವೂ, ಅನಾದಿಯೂ, ಅನಿರ್ವಚನೀಯವೂ ಆಗಿದ್ದು ಆತ್ಮಸ್ವರೂಪವನ್ನು ಮರೆಯಿಸುವ ಮತ್ತು ಕಲ್ಪನಾರಹಿತವೂ ಆಗಿರುವ ಅವಿದ್ಯೆಯೇ ಕಾರಣಶರೀರ ಎಂದು ತಾತ್ಪರ್ಯ. ಜೀವನು ಸ್ಥೂಲ, ಸೂಕ್ಷ್ಮ ಮತ್ತು ಕಾರಣ ಎಂಬ ಈ ಮೂರು ಶರೀರಗಳಿಂದ ಕೂಡಿ ಅವುಗಳಿಂದ ಆವರಿಸಲ್ಪಟ್ಟವನಾಗಿರುತ್ತಾನೆ. ಈ ಶರೀರತ್ರಯುಗಳನ್ನು ಜೀವನ ಉಪಾದಿ, ಬಂಧನದ ವಸ್ತುಗಳು ಎಂದು ಕರೆಯಲಾಗಿದೆ. ಈ ಮೂರು ಶರೀರಗಳಂತೆ ಜೀವನು ಐದು ಕೋಶಗಳಿಂದ ಅಂದರೆ ಚೀಲದಿಂದ ಆವರಿಸಲ್ಪಟ್ಟಿರುತ್ತಾನೆ. ಆ ಕೋಶಗಳು ಆತ್ಮನನ್ನು ಮುಸುಕಿಕೊಂಡು (ಆವರಿಸಿಕೊಂಡು) ತಾನೇ ಆತ್ಮ ಎಂಬ ಭ್ರಾಂತಿಯನ್ನು ಉಂಟುಮಾಡುವುವು.

ಪಂಚಕೋಶಗಳು ಯಾವುವೆಂದರೆ :

(೧) ಅನ್ನಮಯಕೋಶ, (೨) ಪ್ರಾಣಮಯಕೋಶ, (೩) ಮನೋಮಯಕೋಶ, (೪) ವಿಜ್ಞಾನಮಯಕೋಶ, (೫) ಆನಂದಮಯಕೋಶ.

(೧) ಅನ್ನಮಯಕೋಶ : ಅನ್ನರಸದಿಂದ ಯಾವುದು ಉಂಟಾಗಿ, ಅನ್ನದಿಂದ ವೃದ್ಧಿಯಾಗಿ, ಅನ್ನರೂಪವಾದ ಪೃಥ್ವಿಯಲ್ಲಿ ಕೊನೆಗೆ ಲೀನವಾಗುತ್ತದೋ ಅದೇ ಅನ್ನಮಯಕೋಶ. ಅನ್ನಮಯಕೋಶದಿಂದಾಗಿ ನಾನು ಮನುಷ್ಯ ಎಂಬ ಭಾವನೆ ಜೀವನಿಗೆ ಉತ್ಪನ್ನವಾಗಿರುತ್ತದೆ. ನಾನು ದಪ್ಪ, ಕ್ಷೀಣ, ಸುರೂಪಿ ಇತ್ಯಾದಿ ಭಾವನೆಗಳು ಈ ಕೋಶದಿಂದಾಗಿ ಆಗುತ್ತವೆ. ಮನುಷ್ಯನ ಸ್ಥೂಲಶರೀರವನ್ನೇ ಅನ್ನಮಯಕೋಶ ಎಂದು ವ್ಯವಹರಿಸುವುದಾಗಿದೆ.

(೨) ಪ್ರಾಣಮಯಕೋಶ : ಐದು ಕರ್ಮೇಂದ್ರಿಯ ಮತ್ತು ಪಂಚಪ್ರಾಣಗಳಿಂದ ಕೂಡಿ ಆಗಿರುವ ಕೋಶವೇ ಪ್ರಾಣಮಯಕೋಶ. ಇದು ಕ್ರಿಯಾಶಕ್ತಿಯ ಕೋಶವಾಗಿದೆ. ಶರೀರದಲ್ಲಿ ಆಗುವ ದಾಹ, ಅಸೌಖ್ಯ ಇತ್ಯಾದಿ ಭಾವನೆಗಳು ಹಾಗೂ ಇತರ ಕ್ರಿಯೆಗಳು ಈ ಕೋಶದಿಂದಾಗಿ ಆಗುತ್ತವೆ. ಪ್ರಾಣಮಯಕೋಶವು ಕ್ರಿಯಾತ್ಮಕವಾದ ಸಮಷ್ಟಿ

ವಾಯುವಿನ ಒಂದು ಭಾಗ. ಪ್ರಾಣಮಯಕೋಶದಿಂದ ಜೀವನಿಗೆ 'ಪ್ರಾಣಿ' ಎಂಬ ಹೆಸರು ಕೂಡಿಬಂದಿರುತ್ತದೆ.

(೩) ಮನೋಮಯಕೋಶ· ಐದು ಜ್ಞಾನೇಂದ್ರಿಯಗಳು ಮತ್ತು ಮನಸ್ಸು ಸೇರಿ ಆಗಿರುವ ಕೋಶವೇ ಮನೋಮಯಕೋಶ. ಇದು ಇಚ್ಛಾಶಕ್ತಿಯ ಕೋಶವಾಗಿದೆ. ನಾನು ಸಂಸಾರಿ, ಮಕ್ಕಳುಳ್ಳವನು ಎಂಬಿತ್ಯಾದಿ ಬದುಕಿನ ವಿಚಾರಗಳನ್ನು ಜೀವನು ಯೋಚಿಸುತ್ತಾನೆ, ಮನನಮಾಡುತ್ತಾನೆ. ಹಾಗಾಗಿ ಮನುಷ್ಯ ಎಂದು ಕರೆಸಿಕೊಳ್ಳುತ್ತಾನೆ. ಸಂಕಲ್ಪ, ಇಚ್ಛೆ ಇವುಗಳಿಗೆ ಕಾರಣವಾದ ಕೋಶವೇ ಮನೋಮಯಕೋಶ ಎಂದು ತಾತ್ಪರ್ಯ.

(೪) ವಿಜ್ಞಾನಮಯಕೋಶ : ಬುದ್ಧಿ ಮತ್ತು ಶ್ರೋತ್ರಾದಿ ಪಂಚಜ್ಞಾನೇಂದ್ರಿಯಗಳು ಸೇರಿ ಆಗಿರುವ ಕೋಶವೇ ವಿಜ್ಞಾನಮಯಕೋಶ. ನಾನು ಕರ್ತೃ, ನಾನು ಜ್ಞಾನಿ, ನಾನು ಅಜ್ಞಾನಿ ಎಂಬ ಮತ್ತು ದೇಹೇಂದ್ರಿಯಗಳಲ್ಲಿ 'ನಾನು' ಎಂಬ ಬುದ್ಧಿಭಾವನೆಗಳು ಜೀವನಿಗೆ ಈ ಕೋಶದಿಂದಾಗಿ ಲಭಿಸುತ್ತದೆ. ವಿಜ್ಞಾನಮಯಕೋಶವು ಮನುಷ್ಯನ ಸಂಸಾರಕ್ಕೆ ಕಾರಣವಾದುದಾಗಿರುತ್ತದೆ.

(೫) ಆನಂದಮಯಕೋಶ : ಅವಿದ್ಯೆಯೆಂಬ ತಮಸ್ಸಿನಿಂದ ಹುಟ್ಟಿದ ಎಂದರೆ ಅವಿದ್ಯಾಪರಿಣಾಮರೂಪವಾದ ವೃತ್ತಿಯೇ ಆನಂದಮಯಕೋಶ. ಪ್ರಿಯ, ಮೋದ, ಪ್ರಮೋದ ಎಂಬ ಸುಖವೃತ್ತಿಗಳಿಂದ ಕೂಡಿದ ಅವಿದ್ಯಾಪರಿಣಾಮವೇ ಆನಂದಮಯಕೋಶ ಎಂದು ತಾತ್ಪರ್ಯ. ನಾವು ಇಚ್ಛಿಸಿದ ವಸ್ತುಗಳು ಕಣ್ಣಿಗೆ ಬಿದ್ದರೆ ನಮಗೆ ಸಂತೋಷವಾಗುತ್ತದೆ. ಇದೇ ಪ್ರಿಯವೃತ್ತಿ. ವಸ್ತುಗಳು ಪ್ರಾಪ್ತವಾದರೆ ತುಂಬಾ ಸಂತೋಷವಾಗುತ್ತದೆ. ಇದೇ ಮೋದವೃತ್ತಿ. ಪ್ರಾಪ್ತವಾದ ವಸ್ತುಗಳನ್ನು ಅನುಭವಿಸಿದರೆ ಅತಿಸಂತೋಷವಾಗುತ್ತದೆ. ಇದೇ ಪ್ರಮೋದವೃತ್ತಿ. ನಾನು ಸುಖವಾಗಿದ್ದೇನೆ. ನಾನು ಸುಖವನ್ನು ಅನುಭವಿಸುವವನು ಎಂಬಿತ್ಯಾದಿ ಆನಂದಕರವಾದ ಭಾವನೆಗಳು, ಸಂತೋಷಾನುಭವಗಳು ಆನಂದಮಯಕೋಶದಿಂದ ಉತ್ಪತ್ತಿಯಾಗುತ್ತವೆ.

ಅನ್ನಮಯಕೋಶವು ಸ್ಥೂಲಶರೀರದಲ್ಲೂ, ಪ್ರಾಣಮಯ–ಮನೋಮಯ–ವಿಜ್ಞಾನಮಯಕೋಶಗಳು ಸೂಕ್ಷ್ಮಶರೀರದಲ್ಲೂ, ಆನಂದಮಯಕೋಶವು ಕಾರಣ ಶರೀರದಲ್ಲೂ ಸೇರಿರುತ್ತದೆ.

ಆತ್ಮನು(ಜೀವನು) ಈ ಕೋಶಗಳಿಂದ ಆವೃತನಾಗಿದ್ದರೂ, ಇವುಗಳಿಂದ ಭಿನ್ನನಾಗಿರುತ್ತಾನೆ. ಪಂಚಕೋಶಗಳು, ತ್ರಿಶರೀರಗಳು ಮಾಯಾಕಾರ್ಯವಾದ್ದರಿಂದ ಅವು ಆತ್ಮನಲ್ಲ. ಖಡ್ಗವು ಒರೆಯಿಂದ ಬೇರೆಯಾಗಿರುವಂತೆ ಆತ್ಮನು ಕೋಶಗಳಿಂದ ಬೇರೆಯಾಗಿರುತ್ತಾನೆ. ಆತ್ಮನು ಇವೆಲ್ಲಕ್ಕೂ ನಿಜವಾಗಿ ಸಾಕ್ಷಿಯಾಗಿರುತ್ತಾನೆ. ಅಲ್ಲದೆ ಸತ್ ಚಿತ್ ಆನಂದ ಸ್ವರೂಪನಾಗಿರುತ್ತಾನೆ ಎಂದು ಅದ್ವೈತವೇದಾಂತದಲ್ಲಿ ಸ್ಪಷ್ಟಪಡಿಸಲಾಗಿರುತ್ತದೆ.

ಮಾಯೆಯಿಂದಾದ ಐದು ಕೋಶಗಳು, ಮೂರು ಶರೀರಗಳೆಂಬ ಉಪಾದಿಗಳಿಗೆ ಒಳಗಾಗಿ ಅವುಗಳಿಂದ ಕೂಡಿ ದೇಹಧಾರಿಯಾಗಿರುವ ಆತ್ಮನು ಮೂರು ಅವಸ್ಥೆಗಳನ್ನು ಅನುಭವಿಸುತ್ತಾನೆ.

ಅವಸ್ಥೆ ಎಂದರೆ ಸ್ಥಿತಿ ಎಂದರ್ಥ. ಜೀವನು ಅನುಭವಿಸುವ ಮೂರು ಅವಸ್ಥೆಗಳು ಯಾವುವೆಂದರೆ :

(೧) ಜಾಗ್ರದವಸ್ಥೆ (ಜಾಗ್ರತ್), (೨) ಸ್ವಪ್ನ ಅವಸ್ಥೆ, (೩) ಸುಷುಪ್ತಿ ಅವಸ್ಥೆ,

(೧) ಜಾಗ್ರತ್ ಅವಸ್ಥೆ : ಜೀವನು ಎಚ್ಚರದಿಂದ ಇದ್ದು ಜೀವನದ ಸುಖದುಃಖ, ಕಾಮಿನಿ-ಕಾಂಚನಾದಿ ವಿಷಯವಸ್ತುಗಳನ್ನು ಅನುಭವಿಸುವ ಅವಸ್ಥೆಯೇ ಜಾಗ್ರದವಸ್ಥೆ. ಈ ಅವಸ್ಥೆಯಲ್ಲಿ ಪ್ರಪಂಚದ ವ್ಯವಹಾರಗಳನ್ನು ಜೀವನು ನಡೆಸುತ್ತಾನೆ. ಇದನ್ನು ಜೀವನದ ವ್ಯವಹಾರ ಅವಸ್ಥೆ ಎಂದು ಕರೆಯಲಾಗಿದ್ದು ಇದರಲ್ಲಿ ಸ್ವರ್ಗ-ನರಕ, ಪುಣ್ಯ-ಪಾಪ, ಈಶ್ವರ-ಐಶ್ವರ್ಯ, ಗುರು-ಶಿಷ್ಯ, ಬಂಧನ-ಮೋಕ್ಷ, ಸೃಷ್ಟಿ, ಸ್ಥಿತಿ, ಸಂಹಾರ ಇತ್ಯಾದಿಗಳೆಲ್ಲದರ ಅನುಭವ-ಅಭಿಪ್ರಾಯಗಳು ಜೀವನಿಗೆ ಉಂಟಾಗುತ್ತವೆ. ಈ ಅವಸ್ಥೆಯನ್ನು ಸ್ಥೂಲಶರೀರದ ಮೂಲಕ ಜೀವನು ಅನುಭವಿಸುತ್ತಾನಾಗಿದ್ದು ಸ್ಥೂಲಶರೀರ ಅಭಿಮಾನಿಯಾದ ಆತ್ಮನು ಈ ಅವಸ್ಥೆಯಲ್ಲಿ 'ವಿಶ್ವ' ಎಂದು ಕರೆಯಲ್ಪಡುತ್ತಾನೆ.

(೨) ಸ್ವಪ್ನಾವಸ್ಥೆ : ಜಾಗ್ರತ್ ಅವಸ್ಥೆಯಲ್ಲಿ ಜೀವನು ಅನುಭವಿಸುವ ವಿಷಯಗಳು ಇಲ್ಲದಂತಾದರೂ ಅವುಗಳಿಗೆ ಸಂಬಂಧಿಸಿದ ಸಂಸ್ಕಾರ ಅಥವಾ ಅನುಭವಗಳು ಸೂಕ್ಷ್ಮಶರೀರದಲ್ಲಿರುತ್ತವೆ. ನಿದ್ರೆಯ ವೇಳೆಯಲ್ಲಿ ಮನಸ್ಸು ವಿಷಯಗಳ ಆಕಾರವನ್ನು ಹೊಂದಿ ಜೀವಾತ್ಮನು ಅವುಗಳನ್ನು ಅನುಭವಿಸಿದಂತೆ ತೋರುವುದೇ ಸ್ವಪ್ನಾವಸ್ಥೆ. ಸ್ವಪ್ನಾವಸ್ಥೆಯು ಸೂಕ್ಷ್ಮಶರೀರದ ಮೂಲಕ ಅನುಭವಕ್ಕೆ ಬರುತ್ತದೆ. ಸೂಕ್ಷ್ಮಶರೀರದ ಅಭಿಮಾನಿಯಾದ ಆತ್ಮನನ್ನು ಈ ಅವಸ್ಥೆಯಲ್ಲಿ 'ತೈಜಸ' ಎಂದು ಕರೆಯುತ್ತಾರೆ. ಸ್ವಪ್ನಾವಸ್ಥೆಯಲ್ಲಿ ಕಾಣುವ ದೃಶ್ಯಗಳು, ಆಗುವ ಅನುಭವಗಳು ಎಲ್ಲಕ್ಕೂ ಮನಸ್ಸೇ ಕಾರಣವಾಗಿದ್ದು ಅವು ಮನೋಮಾತ್ರವಾದ ಅಂತರವಿಷಯಗಳಾಗಿರುವುವು, ಈಶ್ವರ ರಚಿತವಾಗಿರುವುದಿಲ್ಲ. ಸ್ವಪ್ನಾವಸ್ಥೆಯಲ್ಲಿ ಸ್ಥೂಲಶರೀರವು ವಿಶ್ರಾಂತಿಯಿಂದ ಇದ್ದು ಸೂಕ್ಷ್ಮಶರೀರ ಕೆಲಸಮಾಡುತ್ತಿರುತ್ತದೆ.

(೩) ಸುಷುಪ್ತಿ ಅವಸ್ಥೆ : ನಾನು ಏನನ್ನೂ ತಿಳಿಯಲಿಲ್ಲ, ಸುಖವಾಗಿ ನಿದ್ದೆ ಹೋದೆನು ಎಂಬ ಸ್ಮರಣೆಗೆ ಕಾರಣವಾದ ಅವಸ್ಥೆಯೇ ಸುಷುಪ್ತಿ ಅವಸ್ಥೆ. ಈ ಅವಸ್ಥೆಯಲ್ಲಿ ಎಚ್ಚರದ ಮತ್ತು ಸ್ವಪ್ನಾವಸ್ಥೆಯ ಅನುಭವಗಳು ಯಾವುವೂ ಇರುವುದಿಲ್ಲ. ಗಾಢವಾದ ನಿದ್ರಾವಸ್ಥೆಯನ್ನು ಸುಷುಪ್ತಿ ಅವಸ್ಥೆ ಎಂದು ತಾತ್ಪರ್ಯವಾಗಿ ಹೇಳಬಹುದು. ಸುಷುಪ್ತಿ ಅವಸ್ಥೆಯಲ್ಲಿ ಆತ್ಮಾನುಭವ ಮಾತ್ರ ಇರುವ ಹಾಗೆ ಆಗುತ್ತದೆ. ಈ ಅವಸ್ಥೆಯಲ್ಲಿ ಆತ್ಮನನ್ನು 'ಪ್ರಾಜ್ಞ' ಎಂದು ಕರೆಯಲಾಗಿರುತ್ತದೆ.

ಆತ್ಮನು ಈ ಮೂರು ಅವಸ್ಥೆಗಳಿಗೂ ಮತ್ತು ಅವಸ್ಥೆಗಳಲ್ಲಿರುವ ವ್ಯವಹಾರಗಳು ಯಾವುದಕ್ಕೂ ನಿಜವಾಗಿಯೂ ಒಳಗಾಗುವುದಿಲ್ಲ. ಬರೀ ಸಾಕ್ಷಿಯಾಗಿ ಆತ್ಮನು ಈ ಮೂರು ಅವಸ್ಥೆಗಳಲ್ಲಿ ಇರುತ್ತಾನೆ. ಈ ಮೂರು ಅವಸ್ಥೆಗಳನ್ನು ಮೀರಿದ ಒಂದು ಅವಸ್ಥೆ ಇದೆ. ಅದೇ ತುರೀಯಾವಸ್ಥೆ. ಸುಷುಪ್ತಿ ಅವಸ್ಥೆಯಲ್ಲಿ ಜೀವ-ಜಗತ್ತು ಎಂಬಿತ್ಯಾದಿ ಅನುಭವಗಳು ಯಾವುವೂ ಇಲ್ಲದಿದ್ದರೂ ಇವುಗಳಲ್ಲಿ ಸೂಕ್ಷ್ಮವಾದ ಬೀಜರೂಪದಲ್ಲಿ ಇದ್ದು ಸುಷುಪ್ತಿ ಅವಸ್ಥೆ ಕಳೆದನಂತರ ಜಾಗ್ರತ್ ಮತ್ತು ಸ್ವಪ್ನದಲ್ಲಿ

ಪುನಃ ಪ್ರಕಟಗೊಳ್ಳುತ್ತವೆ. ತುರೀಯಾವಸ್ಥೆಯಲ್ಲಿ ಮಾತ್ರ ಈ ಬೀಜರೂಪದಲ್ಲಿರುವ ಎಲ್ಲಾ ಅನುಭವಗಳೂ ಫಲಕೊಡಲು ಆಗದ ಹುರಿದ ಬೀಜದಂತಿರುತ್ತದೆ. ಜಾಗ್ರತ್ ಸಹ ಇಲ್ಲದಿರುತ್ತದೆ ಮತ್ತು ಸ್ವಪ್ನ ಹಾಗೂ ಸುಷುಪ್ತಿ ಅವಸ್ಥೆಯ ಅನುಭವಗಳ ಬೀಜಗಳು ಆತ್ಮಜ್ಞಾನದ ಬೆಂಕಿಯಲ್ಲಿ ಹುರಿಯಲ್ಪಟ್ಟಂತಾಗಿ ತುರೀಯಾವಸ್ಥೆಯಲ್ಲಿ ವಿಷಯ ಮತ್ತು ವಸ್ತು ಯಾವುದೂ ಇಲ್ಲದೆ, ಬದಲಾವಣೆಗಳು ಏನೂ ಇಲ್ಲದೆ, ಜೀವಾತ್ಮನು ಪರಮಾತ್ಮನಲ್ಲಿ ಒಂದಾಗಿರುವ ಬ್ರಹ್ಮಾನಂದಸ್ಥಿತಿಯೇ ತುರೀಯಾವಸ್ಥೆಯಾಗಿರುತ್ತದೆ. ಸುಷುಪ್ತಿಯಲ್ಲಿ ಅಂತಃಕರಣವು ಸೂಕ್ಷ್ಮಬೀಜರೂಪದಲ್ಲಿ ನಿದ್ರಾಸ್ಥಿತಿಯಲ್ಲಿದ್ದು ಕಾರ್ಯ ಪ್ರವೃತ್ತವಾಗಿರದಿದ್ದರೆ ತುರೀಯಾವಸ್ಥೆಯಲ್ಲಿ ಅದು ಇರುವುದೇ ಇಲ್ಲ. ದ್ವೈತಭಾವವಿಲ್ಲದ ಪರಿಶುದ್ಧವೂ ಪರಿಪೂರ್ಣವೂ ಆದ ಸ್ಥಿತಿಯೇ ತುರೀಯಾವಸ್ಥೆಯಾಗಿದೆ. ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳು ಇಲ್ಲದೇ ಇರುವ ಸ್ಥಿತಿಯೇ ತುರೀಯಾವಸ್ಥೆಯಾಗಿದ್ದು ಮೂರು ಅವಸ್ಥೆಗಳ ದೃಷ್ಟಿಯಿಂದ ಮಾತ್ರ ಇದನ್ನು ತುರೀಯ (ನಾಲ್ಕನೇ) ಅವಸ್ಥೆ ಎಂದು ಕರೆಯಲಾಗಿದೆ.

ಸಂಸಾರ : ಆತ್ಮಜ್ಞಾನವಾಗುವವರೆಗೆ ಆತ್ಮನ ನಿಜವಾದ ಅರಿವಿಲ್ಲದ ಅವಿದ್ಯೆಯಿಂದಾಗಿ ಜೀವನು ಒಂದಾದಮೇಲೆ ಒಂದರಂತೆ ಚಕ್ರಗತಿಯಲ್ಲಿ ಅನುಭವಿಸುವ ಹುಟ್ಟು, ಸಾವು, ಪುನರ್ಜನ್ಮಗಳೆಂಬ ಅನುಭವಸ್ಥಿತಿ ಅಥವಾ ಭವಚಕ್ರವೇ ಸಂಸಾರವಾಗಿರುತ್ತವೆ. ಸಂಸಾರವನ್ನು ವೃಕ್ಷಕ್ಕೆ, ಜೀವನನ್ನು ಪಕ್ಷಿಗೆ ಹೋಲಿಸಿ ಅದ್ವೈತವೇದಾಂತದಲ್ಲಿ ಆಚಾರ್ಯ ಶ್ರೀಶಂಕರರು ಹೀಗೆ ಹೇಳಿರುತ್ತಾರೆ :

> ಬೀಜಂ ಸಂಸೃತಿಭೂಮಿಜಸ್ಯ ತು ತಮೋ ದೇಹಾತ್ಮಧೀರಂಕುರೋ
> ರಾಗಃ ಪಲ್ಲವಮಂಬು ಕರ್ಮ ತು ವಪುಃ ಸ್ಕಂಧೋಽಸವಃ ಶಾಖಿಕಾಃ ।
> ಅಗ್ರಾಣೀಂದ್ರಿಯಸಂಹತಿಶ್ಚ ವಿಷಯಾಃ ಪುಷ್ಪಾಣಿ ದುಃಖಂ ಫಲಂ
> ನಾನಾಕರ್ಮಸಮುದ್ಭವಂ ಬಹುವಿಧಂ ಭೋಕ್ತಾತ್ರ ಜೀವಃ ಖಗಃ ॥

"ಸಂಸಾರವೆಂಬ ವೃಕ್ಷಕ್ಕೆ ಅಜ್ಞಾನವೇ ಬೀಜವು, ದೇಹದಲ್ಲಿರುವ ಆತ್ಮಬುದ್ಧಿಯೇ ಮೊಳಕೆಯು ಆಸಕ್ತಿಯೇ ಚಿಗುರು, ಕರ್ಮವೇ ನೀರು, ಶರೀರವೇ ಮಧ್ಯಭಾಗವು, ಪ್ರಾಣಗಳೇ ಕೊಂಬೆಗಳು, ಇಂದ್ರಿಯಸಮೂಹವೇ ಕೊಂಬೆಯ ತುದಿಗಳು, ವಿಷಯಗಳೇ ಪುಷ್ಪಗಳು, ಬಗೆಬಗೆಯ ಕರ್ಮಗಳಿಂದ ಉತ್ಪನ್ನವಾದ ಬಹುವಿಧವಾದ ದುಃಖವೇ ಫಲವು. ಇಲ್ಲಿ ಫಲವನ್ನು ಅನುಭವಿಸುವ ಜೀವನೇ ಪಕ್ಷಿಯು."

ವಿವೇಕಚೂಡಾಮಣಿ, ೧೪೭

ಹಿಂದೆ ಹೇಳಿದಂತೆ ಎಲ್ಲಿಯ ತನಕ ಜೀವನಿಗೆ ತಾನು ಬೇರೆ, ಬ್ರಹ್ಮ ಬೇರೆ ಎಂಬ ಭಾವನೆ, ಅರಿವುಗಳು ಇದೆಯೋ ಅಲ್ಲಿಯ ತನಕ ಸುಖ, ದುಃಖ, ಹುಟ್ಟು, ಸಾವು ಇವುಗಳೆಲ್ಲಾ ಇದ್ದೇ ಇವೆ. ಹಾವಾಗಿ ಕಂಡದ್ದು ಹಗ್ಗವೆಂದು ತಿಳಿಯುವ ತನಕ, ಹಗ್ಗವೇ ಆಗಿದ್ದದ್ದು ಹಾವಾಗಿಯೇ ಕಂಡು, ಭಯ ಇತ್ಯಾದಿಗಳುಂಟಾಗುವಂತೆ ಬ್ರಹ್ಮಸಾಕ್ಷಾತ್ಕಾರವಾಗದವರೆಗೆ ಜೀವನಿಗೆ ಜಗತ್ತಿನ ವೈವಿಧ್ಯಮಯ ಅನುಭವವಾಗಿಯೇ ಆಗುತ್ತದೆ. ಪರಬ್ರಹ್ಮದ ದೃಷ್ಟಿಯಿಂದ ಜಗತ್ತು ಮಿಥ್ಯೆ. ಜೀವನ, ಹುಟ್ಟು, ಸಾವು ಎಲ್ಲವೂ ಮಿಥ್ಯೆಯಾದರೂ ಜೀವನ ವ್ಯವಹಾರದೃಷ್ಟಿಯಿಂದ ಸತ್ಯವಾಗಿದ್ದು ಅದು ಸಾಪೇಕ್ಷಿಕ ಸತ್ಯವಾಗಿರುತ್ತದೆ.

"ಮಾಯೆಯ ಆವರಣ ಮತ್ತು ವಿಕ್ಷೇಪ ಎಂಬ ಎರಡು ಶಕ್ತಿಗಳಿಂದಾಗಿ ಮನುಷ್ಯನಿಗೆ ಸಂಸಾರಬಂಧವು ಉಂಟಾಗಿದೆ. ಇವೆರಡರಿಂದ ವಿಮೋಹಿತನಾಗಿ ಶರೀರವೇ ಆತ್ಮನೆಂದು ತಿಳಿದುಕೊಂಡು ಆತ್ಮನು ಸಂಸಾರದಲ್ಲಿ ಅಲೆಯುತ್ತಾನೆ" ಎಂಬುದಾಗಿ ಸಂಸಾರದ ವಿವರಣೆಯನ್ನು ಅದ್ವೈತವೇದಾಂತದಲ್ಲಿ ನೀಡಲಾಗಿದೆ. (ವಿವೇಕಚೂಡಾಮಣಿ, ಶ್ಲೋಕ ೧೪೪)

ಈ ಅಜ್ಞಾನವೆಲ್ಲ ಮನಸ್ಸಿನಿಂದಾಗಿ ಪರಿಣಾಮಕ್ಕೆ ಬಂದು ಅದರಿಂದಾಗಿಯೇ ಸಂಸಾರದ ಕಲ್ಪನೆಯಾಗಿದೆಯೇ ವಿನಾ ನಿಜವಾಗಿ ಸಂಸಾರವೆಂಬುದೊಂದು ಇಲ್ಲ. ಎಲ್ಲಾ ಕಲ್ಪಿತ, ಭ್ರಾಂತಿ, ಅಜ್ಞಾನಜನ್ಯವಾಗಿದೆ. ಎಂದರೆ ಭ್ರಾಂತಿಯಿಂದ ಸಂಸಾರ ಇರುವುದಾಗಿ ತೋರುತ್ತದೆ. ಸತ್ ಚಿತ್ ಆನಂದವಾದ ಆತ್ಮನಿಗೆ ಈ ಸಂಸಾರಸುಖದುಃಖಗಳಿಂದ ಏನೂ ತೊಂದರೆಯಿಲ್ಲ, ಮೇಘಗಳಿಂದ ಆವೃತನಾದ ಸೂರ್ಯನಿಗೆ ಅವುಗಳಿಂದ ಯಾವ ತೊಂದರೆಯೂ ಆಗದಂತೆ ಆತ್ಮನಿಗೆ ನಿಜವಾಗಿ ಸಂಸಾರದಿಂದಾಗಿ ಯಾವ ತೊಂದರೆಯೂ ಆಗುವುದಿಲ್ಲ.

ಸಂಸಾರವು ಜೀವನ ಮನದಲ್ಲಿ ಕಲ್ಪಿತವಾದುದಾದರೆ ಮನಸ್ಸಿನಲ್ಲಿ ಅಂತಹ ಕಲ್ಪನೆ ಏಕೆ ಉಂಟಾಯಿತು ? ಜೀವನು ಅದಕ್ಕೆ ಹೇಗೆ ಕಾರಣನಾದ ? ಎಂಬಿತ್ಯಾದಿ ಬಹಳ ಸೂಕ್ಷ್ಮವೂ ಗಹನವೂ ಆದ ಪ್ರಶ್ನೆಗಳಿಗೆ ಸವಿಸ್ತಾರವಾದ ವಿವರಣೆಯನ್ನು ಅದ್ವೈತ ವೇದಾಂತದಲ್ಲಿ ನೀಡಲಾಗಿದೆ.

ಹೇಗೆಂದರೆ : ಪೂರ್ವಜನ್ಮ ಪೂರ್ವಸಂಸ್ಕಾರವೇ ಜೀವಿಯ ಸಂಸಾರ ಸ್ಥಿತಿಗತಿಗಳಿಗೆ ಕಾರಣ ಎಂದು ವಿವರಿಸಲಾಗಿದೆ. ಪೂರ್ವಕರ್ಮವು ಯಾವಾಗ ಆರಂಭವಾಯಿತು ಎಂದು ಹೇಳುವಂತಿಲ್ಲ. ಸಂಸಾರವು ಅನಾದಿಯಾದುದರಿಂದ ಅದು ಜಗತ್ತಿನ ಸೃಷ್ಟಿಯಾದಾಗಲೇ ಆರಂಭವಾಯಿತೆನ್ನಬಹುದು. ಜಗತ್ತಿನ ಸೃಷ್ಟಿ ಮಾಯೆಯಿಂದಾಯಿತು, ಕರ್ಮವೂ ಮಾಯೆಯಲ್ಲಿ ಇದ್ದು ಮಾಯೆಯಿಂದಾಗಿ ಆರಂಭದ ಕರ್ಮ ಕಾರ್ಯರೂಪಕ್ಕೆ ಬಂದಿತು. ಮಾಯೆಯೇ ಕರ್ಮವಾಗಿ ಪ್ರಕಟಗೊಂಡಿದೆ ಎಂದರೆ ತಪ್ಪಾಗಲಾರದು. ಮಾಯೆಯು ತೋರಿಕೆಗೆ ತಿಳಿದಾಗ ನಾಮರೂಪ ಎಂದಾಗುತ್ತದೆ. ಕ್ರಿಯಾತ್ಮಕವಾದ ವ್ಯಾಪಾರ ಮುಖೇನ ಪ್ರಕಟಗೊಂಡಾಗ ಕರ್ಮ ಎಂದಾಗುತ್ತದೆ. ಮಾಯೆಯಂತೆ ಕರ್ಮವೂ ಅನಾದಿ. ಆದರೆ ಕರ್ಮಚಕ್ರದ ಪರಿಣಾಮದ ಪರಂಪರೆಗೆ ಅಂತ್ಯವಿದ್ದೇ ಇದೆ. "ಜ್ಞಾನ ರೂಪವಾದ ಅಗ್ನಿಯಿಂದ ಎಲ್ಲಾ ಕರ್ಮಗಳೂ ನಾಶವಾಗುತ್ತವೆ" (ಜ್ಞಾನಾಗ್ನಿಃ ಸರ್ವ ಕರ್ಮಾಣಿ ಭಸ್ಮಸಾತ್ ಕುರುತೇ ತಥಾ—ಗೀತಾ, ೪.೩೭).

ಪುನರ್ಜನ್ಮ : ಜೀವಿಯು ಜೀವನದಲ್ಲಿ ಮೋಕ್ಷವನ್ನು ಪಡೆಯಬೇಕಾದರೆ ಆತನ ಕರ್ಮಫಲಗಳು ಮುಗಿಯಬೇಕು. ಹಾಗಾಗಲು ಕ್ರಮವಾದ ಮೋಕ್ಷಸಾಧನೆಗಳನ್ನು ಮಾಡಬೇಕು. ಇವುಗಳೆಲ್ಲಾ ಒಂದೇ ಜನ್ಮದಲ್ಲಿ ಮುಗಿಯಲೂ ಬಹುದು, ಮುಗಿಯದೇ ಉಳಿಯಲೂ ಬಹುದು. ಜೀವಿಗೆ ಸಾವು ಬಾರದೆ ಕೇವಲ ಸ್ಥೂಲಶರೀರಕ್ಕೆ (ದೇಹಕ್ಕೆ) ಮಾತ್ರ ಮೃತ್ಯುವುಂಟಾಗುತ್ತದೆ. ದೇಹವಳಿದರೂ ಜೀವ ಅಳಿಯದು. ಜೀವವು ಅಮರ ವಾದ ಆತ್ಮವಾಗಿದ್ದು, ಅಚಲ ಹಾಗೂ ಅದ್ವಿತೀಯವಾಗಿರುತ್ತದೆ. ಸ್ಥೂಲಶರೀರವಳಿದಾಗ ಸೂಕ್ಷ್ಮಶರೀರ ಮತ್ತು ಕಾರಣಶರೀರಗಳು ಉಳಿಯುತ್ತವೆ. ಜೀವಿಯು ಮುಕ್ತಿಯನ್ನು

ಪಡೆದಿರದಿದ್ದರೆ ಹಿಂದೆ ಹೇಳಿದ ಸೂಕ್ಷ್ಮಶರೀರದ ಒಳಗೆ ಸೇರಿದವನು ಆ ಸೂಕ್ಷ್ಮ ಶರೀರದಲ್ಲಿಯೇ ಸೇರಿರುವ ಹಿಂದಿನ ಜನ್ಮದ ಕರ್ಮಪ್ರಭಾವಕ್ಕೆ ಅನುಸಾರವಾಗಿ ಆಯಾಯ ದೇಹಗಳನ್ನು ಪುನಃ ಪಡೆದು ಹೊಸದಾಗಿ ಜನ್ಮವನ್ನು ತಳೆಯುತ್ತಾನೆ, ಜ್ಞಾನಪ್ರಾಪ್ತಿಯಾದಾಗ ಮೋಕ್ಷವನ್ನು ಪಡೆದು ಸಂಸಾರಬಂಧನದಿಂದ ಮುಕ್ತನಾಗುತ್ತಾನೆ. ಜೀವನ, ಕರ್ಮ, ಮರಣೋತ್ತರಗತಿ ಇತ್ಯಾದಿ ವಿಚಾರಗಳ ಕುರಿತಾಗಿ ಸವಿಸ್ತಾರವಾದ ವಿವರಣೆಯನ್ನು ಅದ್ವೈತವೇದಾಂತದಲ್ಲಿ ನೀಡಲಾಗಿದೆ.

ಮೋಕ್ಷ : ಮೋಕ್ಷದಲ್ಲಿ ಎರಡು ವಿಧ : (೧) ಜೀವನ್ಮುಕ್ತಿ, (೨) ವಿದೇಹಮುಕ್ತಿ, ಜೀವಿಯು ದೇಹಧಾರಿಯಾಗಿ ಜೀವಿಸಿರುವಾಗಲೇ ಬ್ರಹ್ಮಜ್ಞಾನವನ್ನು ಪಡೆದು ಸಂಸಾರದ ಸಕಲ ಸುಖದುಃಖಾದಿಗಳಿಂದ ವಿಮುಕ್ತನಾಗಿ ಸದಾ ಬ್ರಹ್ಮನಿಷ್ಠನೂ ಬ್ರಹ್ಮಾನಂದಯುಕ್ತನೂ ಆಗಿರುವುದೇ ಜೀವನ್ಮುಕ್ತಿ. ಜೀವನ್ಮುಕ್ತಿಯನ್ನು ಪಡೆದವನೇ ಜೀವನ್ಮುಕ್ತ, ಅವನು ಹೇಗಿರುತ್ತಾನೆ ಎಂಬುದನ್ನು ಅದ್ವೈತವೇದಾಂತದಲ್ಲಿ ತುಂಬಾ ವಿವರವಾಗಿ ಚಿತ್ರಿಸಲಾಗಿದೆ. ಜೀವನ್ಮುಕ್ತನ ಲಕ್ಷಣಗಳ ಸೂಕ್ಷ್ಮಪರಿಚಯು ಹೀಗೆ ಇದೆ : "ಜೀವನ್ಮುಕ್ತನು ಸಂಸಾರದ ಚಿಂತೆಯೆಲ್ಲ ಕಳಕೊಂಡವನು. ಅವಯುವಗಳು ಉಳ್ಳವನಾಗಿದ್ದರೂ ಅವಯುವ ರಹಿತನಂತಿರುತ್ತಾನೆ. ಚಿತ್ತವುಳ್ಳವನಾಗಿದ್ದರೂ ಚಿತ್ತವಿಲ್ಲದಂತಿರುವವನು. ನೆರಳಿನಂತೆ ತನ್ನ ದೇಹವು ತನ್ನನ್ನು ಅನುಸರಿಸಿಕೊಂಡು ಇದ್ದರೂ 'ನಾನು' 'ನನ್ನದು' ಎಂಬ ಭಾವ ಜೀವನ್ಮುಕ್ತನಿಗೆ ಇರುವುದಿಲ್ಲ. ಕಳೆದುಹೋದುದನ್ನು ಸ್ಮರಿಸಿಕೊಳ್ಳದಿರುವುದು, ಮುಂದೆ ಒದಗುವುದನ್ನು ಯೋಚಿಸದಿರುವುದು, ಈಗ ಒದಗಿರುವುದರಲ್ಲಿ ಉದಾಸೀನನಾಗಿರುವುದು ಮಾತ್ರವಲ್ಲದೆ ಗುಣದೋಷಾದಿಗಳಿಂದ ಕೂಡಿ ಸ್ವಭಾವದಿಂದಲೇ ವಿಚಿತ್ರವಾಗಿರುವ ಈ ಜಗತ್ತಿನಲ್ಲಿ ಎಲ್ಲೆಲ್ಲಿಯೂ ಬ್ರಹ್ಮಭಾವನೆಯಿಂದ ಕೂಡಿ ಸಮದರ್ಶಿಯಾಗಿರುವುದು ಜೀವನ್ಮುಕ್ತನ ಲಕ್ಷಣಗಳಾಗಿವೆ. ದೇಹೇಂದ್ರಿಯಗಳಲ್ಲಿ 'ನಾನು' ಎಂಬ ಭಾವವೂ, ಅವುಗಳಿಗಿಂತ ಬೇರೆಯಾದ ವಸ್ತುಗಳಲ್ಲಿ 'ಇದು' ಎಂಬ ಭಾವವು ಯಾವಾಗಲೂ ಜೀವನ್ಮುಕ್ತನಿಗೆ ಉಂಟಾಗುವುದಿಲ್ಲ,"—ವಿವೇಕಚೂಡಾಮಣಿ, ೪೩೧–೪೩೯ (ಗೀತೆಯಲ್ಲಿ ಹೇಳಿರುವ ಸ್ಥಿತಪ್ರಜ್ಞನ ಲಕ್ಷಣವೂ ಇದಕ್ಕೆ ಉದಾಹರಣೆ ಆಗಿದೆ.)

'ವಿದೇಹಮುಕ್ತಿ' ಎಂದರೆ. ಸ್ಥೂಲಶರೀರವು ನಾಶವಾದನಂತರ, ಮರಣ ಸಂಭವಿಸಿದ ನಂತರ ಜೀವನ್ಮುಕ್ತನಾದ ಆತ್ಮನು ಪರಬ್ರಹ್ಮನಲ್ಲಿ ಲೀನವಾಗುವುದಾಗಿದೆ. ಜೀವನ್ಮುಕ್ತಿ ಪಡೆದನಂತರ ವಿದೇಹಮುಕ್ತಿಗೆ ದೇಹದ ಅವಸಾನವಾಗುವಷ್ಟರ ಅವಧಿ ಮಾತ್ರ ಉಳಿದಿದ್ದು ಪ್ರಾರಬ್ಧಭೋಗವು ಮುಗಿದು ತನ್ನಿಂದ ತಾನೇ ದೇಹಾವಸಾನದನಂತರ ವಿದೇಹಮುಕ್ತಿ ದೊರೆಯುತ್ತದೆ. ವಿದೇಹಮುಕ್ತಿಯೆಂದರೆ ಜೀವನ್ಮುಕ್ತಿಯು ನಂತರ ಹೊಸದಾದ ಒಂದು ಬೇರೆ ಅವಸ್ಥೆಯೇನಲ್ಲ. ಮಾತ್ರವಲ್ಲದೆ ಜೀವನ್ಮುಕ್ತನು ಅದಕ್ಕಾಗಿ ಹೊಸ ಸಾಧನೆ ಏನೂ ಮಾಡಬೇಕಾಗಿಲ್ಲ.

ಮೋಕ್ಷದ ಸ್ವರೂಪ : ಮೋಕ್ಷ ಎಂದರೆ ಜನ್ಮ, ಮೃತ್ಯು, ಸುಖದುಃಖಗಳಿಂದ ಪಾರಾಗಿ ಶಾಶ್ವತವಾದ ಆನಂದದಲ್ಲಿ ಲೀನವಾಗುವುದು ಎಂದು ಅದ್ವೈತವೇದಾಂತ ಹೇಳುತ್ತದೆ.

ಆತ್ಮನು ತನ್ನ ನಿಜಸ್ವರೂಪವನ್ನು ತಿಳಿದು ಆತ್ಮಾನಂದದಲ್ಲಿ ಲೀನವಾಗುತ್ತಾನೆ ಎಂದು ಅದ್ವೈತವೇದಾಂತದಲ್ಲಿ ಸವಿಸ್ತಾರವಾಗಿ ಮೋಕ್ಷದ ವಿಚಾರಗಳನ್ನು ತಿಳಿಸಲಾಗಿದೆ. ಮೋಕ್ಷವನ್ನು ಕೈವಲ್ಯ, ಮುಕ್ತಿ ಎಂಬ ಹೆಸರುಗಳಿಂದಲೂ ಕರೆಯಲಾಗಿದೆ. ಮೋಕ್ಷ ಎಂದರೆ ಜೀವನು ಹೊಸದಾದ ಒಂದು ಸ್ಥಿತಿಯನ್ನು ಸಂಪಾದಿಸುವುದಾಗಲಿ, ಸೃಷ್ಟಿಸುವುದಾಗಲಿ ಅಲ್ಲ. ಜೀವನು ನಿಜವಾಗಿ ಬಂಧನಕ್ಕೆ ಒಳಗಾಗದೆ ಸದಾ ಸ್ವತಂತ್ರವೇ ಆಗಿದೆ. ಆದರೆ ಉಪಾಧಿಗಳಿಗೆ ಒಳಗಾಗಿರುವ ಜೀವವು ಅವಿದ್ಯೆಯಿಂದ ನಿವೃತ್ತಿಯಾಗುವುದೇ ಮೋಕ್ಷ.

ಮೋಕ್ಷಕ್ಕೆ ಮಾರ್ಗ : ತ್ರಿಶರೀರ, ಪಂಚಕೋಶ, ತ್ರಿವಿಧ ಅವಸ್ಥೆಗಳನ್ನು ಮೀರಿ ಆತ್ಮನು ತನ್ನನ್ನು ತಾನು ಅರಿಯುವುದೇ ಮುಕ್ತಿ. ಸ್ವಸ್ವರೂಪ ಆನಂದಪ್ರಾಪ್ತಿಯೇ ಮೋಕ್ಷ. ಹಾಗಾಗಬೇಕಾದರ ಜೀವಾತ್ಮನು ಈಶ್ವರನನ್ನು ಆರಾಧಿಸಬೇಕು. ಈಶ್ವರನ ಕೃಪೆಯಿಂದ ಅಜ್ಞಾನವು ನಿವೃತ್ತಿಯಾಗುತ್ತದೆ. ಅಜ್ಞಾನದಿಂದ ಆದ ಬಂಧನವು ಜ್ಞಾನದಿಂದಾಗಿ ನಿವೃತ್ತಿಯಾಗಿ ಜ್ಞಾನಲಾಭವೇ ಮೋಕ್ಷಸಾಧನವಾಗಿರುತ್ತದೆ. ಜ್ಞಾನವು ಪ್ರಾಪ್ತವಾಗಲು ಜೀವನು ಸತ್ಕರ್ಮ, ಸದಾಚಾರ, ಸದ್ಭಕ್ತಿಗಳಲ್ಲಿ ನಿರತನಾಗಿರಬೇಕು. ಕರ್ಮ ಮತ್ತು ಭಕ್ತಿಗಳಿಂದಾಗಿ ಚಿತ್ತಶುದ್ಧಿಯಾಗಿ ಶುದ್ಧಚಿತ್ತದಿಂದ ಅಜ್ಞಾನವು ಇಲ್ಲದಂತಾಗಿ ಜ್ಞಾನವು ಲಭಿಸುತ್ತದೆ. ಆತ್ಮಜ್ಞಾನದ ಅನುಭೂತಿಯಿಂದ ಮಾತ್ರ ಮುಕ್ತಿ ಲಾಭವಾಗುತ್ತದೆ.

ಹೀಗೆ ಮುಕ್ತಿಲಾಭವಾಗಲು ಜೀವನು ಸಾಧನೆಯನ್ನು ಮಾಡಬೇಕು ಎಂದು ಹೇಳಿರುವ ಅದ್ವೈತವೇದಾಂತವು ಸಾಧನೆಗೆ ಸಾಧಕನಲ್ಲಿ ಇರಬೇಕಾದ ಅರ್ಹತೆ ಏನೇನು ? ಸಾಧನೆ ಕ್ರಮ ಏನೇನು ? ಎಂದೆಲ್ಲ ತುಂಬಾ ವಿವರವಾಗಿ ಹೇಳಿರುತ್ತದೆ.

ಆತ್ಮಜ್ಞಾನಕ್ಕೆ ಅಧಿಕಾರಿ, ಅರ್ಹನು ಯಾರೆಂದರೆ ಸಾಧನಚತುಷ್ಟಯ ಎಂಬ ನಾಲ್ಕು ಅಂಶಗಳನ್ನು ಸರಿಯಾಗಿ ಪಾಲಿಸಿರುವವನೂ, ಅವುಗಳ ಫಲಶಕ್ತಿಯುಳ್ಳವನೂ ಆಗಿರುತ್ತಾನೆ ಎಂದು ಅದ್ವೈತವೇದಾಂತದಲ್ಲಿ ಹೇಳಲಾಗಿದೆ.

ಸಾಧನಚತುಷ್ಟಯ : ಸಾಧನಚತುಷ್ಟಯ ಎಂದರೆ ಸಾಧನೆಯ ನಾಲ್ಕು ಅಂಶಗಳು ಎಂದು ಅರ್ಥ. ಈ ನಾಲ್ಕು ಅಂಶಗಳನ್ನು ಸರಿಯಾಗಿ ಅನುಷ್ಠಾನಕ್ಕೆ ತಂದಾಗ ಮಾತ್ರ ಸಾಧಕನು ಆತ್ಮಜ್ಞಾನ ಪಡೆಯಲು ಅರ್ಹನಾಗುತ್ತಾನೆ. ಸಾಧನಚತುಷ್ಟಯವನ್ನು ಸಮರ್ಪಕವಾಗಿ ಕಾರ್ಯಾಚರಣೆಗೆ ತಂದನಂತರ ಸಾಧಕನು ಮತ್ತೆ ಮೂರು ಅಂಶಗಳುಳ್ಳ ಸಾಧನೆಯನ್ನು ಮಾಡಬೇಕಾಗಿದೆ. ಅವುಗಳನ್ನು 'ಸಾಧನಸೂತ್ರತ್ರಯ' ಎಂದು ಅನುಕೂಲಕ್ಕಾಗಿ ಹೇಳುವ ವಾಡಿಕೆ ಇದೆ.

ಸಾಧನಚತುಷ್ಟಯಗಳು ಯಾವುವೆಂದರೆ :

(೧) ನಿತ್ಯಾನಿತ್ಯವಸ್ತುವಿವೇಕ (ವಿವೇಕ)
(೨) ಇಹಾಮುತ್ರಾರ್ಥಫಲಭೋಗವಿರಾಗ (ವೈರಾಗ್ಯ)
(೩) ಶಮಾದಿಷಟ್ಕಸಂಪತ್ತಿ
(೪) ಮುಮುಕ್ಷುತ್ವ

(೧) ವಿವೇಕ : ಪ್ರಪಂಚದಲ್ಲಿರುವ ಮತ್ತು ಕಾಣುವ ವಸ್ತುವಿಚಾರಗಳಲ್ಲಿ ನಿತ್ಯವಾದುದು, ಶಾಶ್ವತವಾದುದು. ಸತ್ಯವಾದುದು ಯಾವುದು ? ಅನಿತ್ಯವೂ ಅಸತ್ಯವೂ ಅಶಾಶ್ವತವೂ ಆದುದು ಯಾವುದು ? ಎಂಬುದನ್ನು ಸರಿಯಾಗಿ ಪರಿಶೀಲಿಸಿ ತಿಳಿಯುವುದೇ ವಿವೇಕ. ನಿತ್ಯ ಎಂದರೆ ಸತ್ಯವೂ ಶಾಶ್ವತವೂ ಆಗಿರುವುದಾಗಿದ್ದು ಅನು ಅವಿನಾಶಿಯಾದ ಪರವಸ್ತು ಬ್ರಹ್ಮವೇ ಆಗಿರುತ್ತದೆ. ಬ್ರಹ್ಮವೊಂದೇ ಸತ್ಯ ಉಳಿದುದೆಲ್ಲಾ ಅನಿತ್ಯ ಮತ್ತು ಅಸತ್ಯ ಎಂದು ತಿಳಿಯುವುದೇ ನಿತ್ಯಾನಿತ್ಯವಸ್ತುವಿವೇಕ. ನಿತ್ಯಾನಿತ್ಯವಸ್ತುಗಳ ವಿವೇಕದಿಂದ ವೈರಾಗ್ಯವು ಮೂಡಲು ಸಹಾಯವಾಗುತ್ತದೆ.

(೨) ವೈರಾಗ್ಯ : ಈ ಲೋಕ ಹಾಗೂ ಸ್ವರ್ಗ, ಇತ್ಯಾದಿ ಬ್ರಹ್ಮಲೋಕಗಳ ತನಕ ಇರುವ ಸರ್ವವಿಧದ ಸುಖಭೋಗಗಳನ್ನು ನಶ್ವರ, ಉಪಯೋಗಹೀನ ಎಂದು ಪರಿಗಣಿಸಿ ಸರ್ವವಿಧವಾದ ಭೋಗ ಮತ್ತು ಭೋಗೇಚ್ಛೆಗಳನ್ನು ತ್ಯಾಗಮಾಡುವುದೇ ವಿರಾಗವಾಗಿದೆ. ಇದನ್ನೇ ವೈರಾಗ್ಯ ಎಂದು ಕರೆಯಲಾಗಿದೆ.

(೩) ಶಮಾದಿಷಟ್ಕಸಂಪತ್ತಿ : ಶಮ, ದಮ, ಉಪರತಿ, ತಿತಿಕ್ಷಾ, ಶ್ರದ್ಧಾ, ಸಮಾಧಾನ ಎಂಬ ಆರು ಗುಣಸಂಪತ್ತುಗಳನ್ನು ಷಟ್‌ಸಂಪತ್ತು ಎಂದು ಕರೆಯಲಾಗಿದೆ.

ಶಮ : ಮನಸ್ಸನ್ನು ವಿಷಯಗಳಿಂದ ಹಿಂದಕ್ಕೆ ತಿರುಗಿಸುವುದು ಅಂದರೆ ವಿಷಯವಸ್ತುಗಳಲ್ಲಿ ಮನಸ್ಸು ಒಳಗಾಗದಂತೆ ಮಾಡುವುದೇ ಶಮ, ವಾಸನಾತ್ಯಾಗವೇ ಶಮ ಎಂದು ತಾತ್ಪರ್ಯ.

ದಮ : ದೇಹದ ಇಂದ್ರಿಯಗಳ ವೃತ್ತಿಗಳನ್ನು ನಿಗ್ರಹಿಸುವುದಕ್ಕೆ ದಮ ಎಂದು ಹೆಸರು. ಅಂದರೆ ಇಂದ್ರಿಯಗಳ ಸ್ವಭಾವದ ಗುಣಗಳನ್ನು ಅನುಸರಿಸಿ ಅವು ಹೊರವಸ್ತುಗಳ ಎಡೆಗೆ ಹರಿಯದಂತೆ ಹತೋಟಿಯಲ್ಲಿ ಇಡುವುದನ್ನು ದಮ ಎಂದು ತಾತ್ಪರ್ಯವಾಗಿ ಹೇಳಬಹುದು.

ಉಪರತಿ : ವಿಷಯಗಳಿಂದ ಪರಾಙ್ಮುಖವಾದ ವೃತ್ತಿಯನ್ನು ಉಪರತಿ ಎಂದು ಕರೆಯಲಾಗಿದೆ. ಶಬ್ದಸ್ಪರ್ಶಾದಿ ಸರ್ವವಿಧದ ಬಾಹ್ಯವ್ಯಾಪಾರಗಳ ಕುರಿತು ಚಿಂತಿಸದೆ ಆತ್ಮವಿಚಾರದ ಕುರಿತಾಗಿ ಅಂತರ್ಮುಖನಾಗುವುದೇ ಉಪರತಿ. ಕೆಲವರು ಉಪರತಿ ಎಂದರೆ ಸಂನ್ಯಾಸ ಎಂದೂ ಅಭಿಪ್ರಾಯಪಡುತ್ತಾರೆ.

ತಿತಿಕ್ಷೆ : ಜೀವನದಲ್ಲಿ ಶೀತ–ಉಷ್ಣ, ಸುಖ–ದುಃಖಗಳನ್ನು ಮತ್ತು ಮಾನ–ಅಪಮಾನಗಳ ಅನುಭವಗಳನ್ನು ಸಹಿಸುವುದೇ ತಿತಿಕ್ಷೆ.

ಶ್ರದ್ಧೆ : ವೇದೋಪನಿಷತ್ತು ಮತ್ತು ಗುರುವಿನ ಉಪದೇಶಗಳಲ್ಲಿ ವಿಶ್ವಾಸವಿರುವುದಕ್ಕೆ ಶ್ರದ್ಧೆ ಎಂದು ಹೆಸರು. ಮಾತ್ರವಲ್ಲದೆ ತನ್ನಲ್ಲಿ ತನಗೆ ನಂಬಿಕೆ ಇರುವುದೂ ಶ್ರದ್ಧೆಯ ಅಂಶವಾಗಿರುತ್ತದೆ. ಒಟ್ಟಿನಲ್ಲಿ ಗುರು ಮತ್ತು ವೇದಾದಿಶಾಸ್ತ್ರ ಏನನ್ನು ಹೇಳುತ್ತವೆಯೋ ಅವುಗಳು ಸತ್ಯ ಎಂಬ ನಿಶ್ಚಯದ ನಿಲವೇ ಶ್ರದ್ಧೆ.

ಸಮಾಧಾನ : ಆಲಸ್ಯವಿಲ್ಲದೆ ಏಕಾಗ್ರತೆಯಿಂದ ಚಿತ್ತವನ್ನು ಸ್ಥಿರಮಾಡಿ ಪ್ರೀತಿಪೂರ್ವಕವಾಗಿ ಗುರು ಮತ್ತು ವೇದಾಂತವಾಕ್ಯಗಳನ್ನು ಶ್ರವಣ ಮಾಡುವಿಕೆ, ಆತ್ಮವಿಚಾರದಲ್ಲಿ ಮನಸ್ಸನ್ನು ತಲ್ಲೀನಗೊಳಿಸುವಿಕೆ ಇವುಗಳೇ ಸಮಾಧಾನ. ಒಟ್ಟಿನಲ್ಲಿ ಶುದ್ಧವಾದ

ಮನಸ್ಸಿನಿಂದ ಆತ್ಮವಿಚಾರವಾಗಿ ಕೇಳುವಿಕೆಯೇ ಸಮಾಧಾನ ಎಂದು ತಾತ್ಪರ್ಯವಾಗಿ ಹೇಳಬಹುದು.

(೪) ಮುಮುಕ್ಷುತ್ವ : ಜನನಮರಣಗಳೆಂಬ ದುಃಖಗಳಿಂದ ಬಿಡುಗಡೆಯಾಗಬೇಕು, ಶಾಶ್ವತವಾದ ಸುಖದ ಅನುಭವ ಬೇಕು—ಎಂಬ ಪ್ರಬಲವಾದ ಇಚ್ಛೆಯೇ ಮುಮುಕ್ಷುತ್ವ ವಾಗಿದೆ. ಇವುಗಳಲ್ಲಿ ಮೊದಮೊದಲಿನವು ಅನಂತರ ಅನಂತರದವುಗಳಿಗೆ ಸಾಧನಾ ಕಾರಣಗಳು.

ಸಾಧನಚತುಷ್ಟಯದ ಸರಿಯಾದ ಪಾಲನೆಯನಂತರ ಸಾಧಕನು ಅನುಸರಿಸಬೇಕಾದ ಮುಂದಿನ ಹೆಜ್ಜೆಯೇ 'ಸಾಧನಸೂತ್ರತ್ರಯ'ಗಳು ಆಗಿವೆ. ಅವು ಯಾವುವೆಂದರೆ :

(೧) ಶ್ರವಣ, (೨) ಮನನ, (೩) ನಿದಿಧ್ಯಾಸನೆ.

(೧) ಶ್ರವಣ : ಶ್ರವಣ ಎಂದರೆ ಕಿವಿಯಿಂದ ಕೇಳುವುದು. ಗುರುವಾಕ್ಯ–ಗುರೂಪ ದೇಶಗಳಿಂದ ಆತ್ಮಸಂಬಂಧವಾಗಿ ವೇದಾಂತವಾಕ್ಯದ ತಾತ್ಪರ್ಯವನ್ನು ನಿರ್ಣಯವಾಗಿ ಕೇಳಿ ತಿಳಿಯುವುದೇ ಶ್ರವಣ. ಆತ್ಮಸಂಬಂಧವಾದ ವಿಚಾರಗಳನ್ನು ಸಾಧಕನು ಈ ಹಂತ ದಲ್ಲಿ ಗುರುವಿನಿಂದ ಉಪದೇಶವಾಗಿ ಕೇಳಬೇಕು. ಇದು ಮೋಕ್ಷಸಂಬಂಧವಾದ ಮುಖ್ಯ ವಾದ ಸಾಧನವಾಗಿರುತ್ತದೆ.

ಅಜ್ಞಾನ ನಾಶವಾದರೆ ತನ್ಮೂಲವಾದ ಸಂಸಾರದುಃಖವೂ ಸಂಪೂರ್ಣ ನಾಶವಾಗು ತ್ತದೆ.

(೨) ಮನನ : ನ್ಯಾಯಸಹಿತವಾದ ರೀತಿಯಲ್ಲಿ ವಿಚಾರಪೂರ್ವಕವಾಗಿ ಗುರುವಿನಿಂದ ಪಡೆದ ಉಪದೇಶಗಳನ್ನು ಯುಕ್ತಿಯಿಂದ, ತಿಳಿವಳಿಕೆಯಿಂದ ತನ್ನಲ್ಲಿ ತಾನೇ ವಿಚಾರ ಮಾಡುವುದೇ ಮನನ. ಮನನಮಾಡುತ್ತಾ ಮಾಡುತ್ತಾ ಸಾಧಕನಲ್ಲಿ ಶ್ರವಣದ ಮೂಲಕ ದೊರೆತ ಉಪದೇಶಗಳು ದೃಢವಾಗುತ್ತವೆ.

(೩) ನಿದಿಧ್ಯಾಸನ : ಕೇಳಿದ ಹಾಗೂ ಮನನ ಮಾಡಿದ ಅಂಶಗಳ ಕುರಿತಾಗಿ ಚಿಂತಿಸುತ್ತಾ ಇತರ ಯಾವ ವಿಚಾರಗಳೂ ಇಲ್ಲದೆ ಕೇವಲ ಆತ್ಮವಿಷಯಕವಾದ ವಿಚಾರ ಗಳನ್ನೇ ಅನುಭವಕ್ಕೆ ಅಳವಡಿಸಿಕೊಳ್ಳುವುದನ್ನು ನಿದಿಧ್ಯಾಸನ ಎಂದು ಹೇಳಲಾಗಿದೆ. ನಿದಿಧ್ಯಾಸನದಲ್ಲಿ ಮುಂದುವರಿದಂತೆ ಸಾಧಕನಿಗೆ ಆತ್ಮಜ್ಞಾನ ದೊರೆಯುತ್ತದೆ. ಅದನ್ನು 'ಅನುಭೂತಿ' ಎಂದು ಹೇಳಲಾಗಿದ್ದು ನಿದಿಧ್ಯಾಸನವು ಆತ್ಮ ಅನುಭೂತಿಗೆ ಸಹಾಯ ವಾದ ಸಾಧನಾಹಂತವಾಗಿರುತ್ತದೆ. ಸಾಧಕನು ಗುರುವಿನಿಂದ ಶ್ರವಣಹಂತದಲ್ಲಿ ವೇದ ಗಳಲ್ಲಿ ಹೇಳಿರುವ ಆತ್ಮದ ಕುರಿತಾದ ಮುಖ್ಯವಾಕ್ಯಗಳನ್ನು ಉಪದೇಶವಾಗಿ ಪಡೆಯು ತ್ತಾನೆ. ಆ ವಾಕ್ಯಗಳನ್ನು 'ಮಹಾವಾಕ್ಯ'ಗಳೆಂದು ಕರೆಯಲಾಗಿ ಅವು ನಾಲ್ಕು ಇವೆ. ಅವು ಯಾವುವೆಂದರೆ :

(೧) ಪ್ರಜ್ಞಾನಂ ಬ್ರಹ್ಮ—ಋಗ್ವೇದದ ಮಹಾವಾಕ್ಯ

(ಐತರೇಯ ಉಪನಿಷದ್)

(೨) ಅಹಂ ಬ್ರಹ್ಮಾಸ್ಮಿ—ಯಜುರ್ವೇದದ ಮಹಾವಾಕ್ಯ

(ಬೃಹದಾರಣ್ಯಕ ಉಪನಿಷದ್)

(೩) ತತ್ತ್ವಮಸಿ—ಸಾಮವೇದದ ಮಹಾವಾಕ್ಯ
(ಛಾಂದೋಗ್ಯ ಉಪನಿಷದ್)

(೪) ಅಯಮಾತ್ಮಾ ಬ್ರಹ್ಮ—ಅಥರ್ವವೇದದ ಮಹಾವಾಕ್ಯ
(ಮಾಂಡೂಕ್ಯ ಉಪನಿಷದ್)

ಅರ್ಥ : (೧) ಪ್ರಜ್ಞಾನಂ ಬ್ರಹ್ಮ=ಪ್ರಜ್ಞೆಯು ಬ್ರಹ್ಮವಾಗಿದೆ (ಎಂದರೆ ಜ್ಞಾನ ರೂಪಿಯೂ ಸ್ವಯಂಪ್ರಕಾಶನೂ ಆದ ಜೀವನು ಬ್ರಹ್ಮನೇ ಆಗಿದ್ದಾನೆ.)

(೨) ಅಹಂ ಬ್ರಹ್ಮಾಸ್ಮಿ=ನಾನು ಬ್ರಹ್ಮವಾಗಿದ್ದೇನೆ.

(೩) ತತ್ತ್ವಮಸಿ=ನೀನು ಅದೇ (ಬ್ರಹ್ಮ) ಆಗಿರುತ್ತೀಯೆ.

(೪) ಅಯಮಾತ್ಮಾ ಬ್ರಹ್ಮ=ಈ ಆತ್ಮವು ಬ್ರಹ್ಮವಾಗಿದೆ.

ಮಹಾವಾಕ್ಯಗಳ ಅರ್ಥವಾದ ಜೀವ ಬ್ರಹ್ಮ ಅಭೇದದ ಅನುಭವವುಂಟಾದಾಗ ಅಜ್ಞಾನವು ನಿವೃತ್ತಿಯಾಗುತ್ತದ. ಅಜ್ಞಾನ ನಾಶವಾದರೆ ತನ್ಮೂಲವಾದ ಸಂಸಾರದ ದುಃಖವು ಸಂಪೂರ್ಣ ನಿವೃತ್ತಿಹೊಂದುತ್ತದೆ. ಆಗ ಮೋಕ್ಷಪ್ರಾಪ್ತಿಯಾಗುತ್ತದೆ. ಅದೇ ಅದ್ವೈತಾನುಭೂತಿ. ಅದೇ ಎಲ್ಲವೂ ಬ್ರಹ್ಮ ಎಂಬ ಬ್ರಹ್ಮಾನಂದದ ಸ್ಥಿತಿ. ಅದೇ ಆತ್ಮಾನಂದ, ಅದ್ವೈತಾನಂದದ ಅಮರವಾದ ಪೂರ್ಣಸ್ಥಿತಿ.

ಹೀಗೆ ಅದ್ವೈತವೇದಾಂತವು ಬ್ರಹ್ಮ ಈಶ್ವರ ಜೀವ ಜಗತ್ತು ಜೀವನ—ಎಂಬ ಭೇದಗಳನ್ನು ವ್ಯವಹಾರದೃಷ್ಟಿಯಿಂದ ಸತ್ಯ ಎಂದು ಹೇಳಿ ಪಾರಮಾರ್ಥಿಕ ದೃಷ್ಟಿಯಿಂದ ಮಿಥ್ಯೆ ಎಂದು ಸ್ಪಷ್ಟಪಡಿಸಿ ಜೀವನು ವ್ಯವಹಾರದೃಷ್ಟಿಯ ಹಂತದಿಂದ ಪಾರಮಾರ್ಥಿಕ ಸತ್ಯದ ನೆಲೆಗೆ ಏರಿ ಜೀವನ್ಮುಕ್ತನಾಗಿ ಮೋಕ್ಷಾನಂದವನ್ನು ಹೊಂದಲು ಯಥೋಚಿತ ವಾದ ಹಾದಿಯನ್ನು ತೋರಿಸಿರುತ್ತದೆ.

ಅದ್ವೈತವೇದಾಂತದ ಕೆಲವು ಮುಖ್ಯ ಅಂಶಗಳು :

(೧) ಇರುವುದೊಂದೇ ಸತ್ಯ. ಅದೇ ಬ್ರಹ್ಮ. ಬ್ರಹ್ಮವು ನಿರ್ಗುಣ, ನಿರ್ವಿಶೇಷ ವಾಗಿದ್ದು ಏಕಮೇವಾದ್ವಿತೀಯವಾಗಿರುತ್ತದೆ. ಎಂದರೆ ಬ್ರಹ್ಮದಲ್ಲಿ ಸಜಾತೀಯ, ವಿಜಾತೀಯ ಅಥವಾ ಸ್ವಗತಭೇದಗಳು ಇರುವುದಿಲ್ಲ.

(೨) ಜೀವವು ಸಾರತಃ ಬ್ರಹ್ಮವೇ ಆಗಿದ್ದು ಉಪಾಧಿಗಳಿಂದಾಗಿ ಬ್ರಹ್ಮಕ್ಕಿಂತ ಭಿನ್ನವೆಂದಾಗಿರುತ್ತದೆ. ಅವಿದ್ಯೆಯೇ ಉಪಾಧಿಗಳಿಗೆ ಕಾರಣವಾಗಿದ್ದು ಜ್ಞಾನೋದಯ ವಾದಾಗ ಅವಿದ್ಯೆಯ ನಿವೃತ್ತಿಯಾಗಿ ಜೀವನು ಉಪಾಧಿಗಳನ್ನು ಕಳಚಿಕೊಂಡು ಸ್ವಯಂ ಪ್ರಕಾಶನೂ, ಸಚ್ಚಿದಾನಂದಪರಬ್ರಹ್ಮನೂ ಆಗಿ ಬೆಳಗುತ್ತಾನೆ. ಆಗ ಜೀವ-ಬ್ರಹ್ಮ ಭೇದ ಉಳಿಯುವುದಿಲ್ಲ.

(೩) ಜೀವನಿಗೆ ದೇಹಬೋಧೆ ಇರುವ ತನಕ, ವ್ಯವಹಾರಪ್ರಪಂಚದಲ್ಲಿ ಅವನು ಜೀವನದ ಅನುಭವಗಳನ್ನು ಅನುಭವಿಸುತ್ತಿರುವವರೆಗೆ ಈ ಜಗತ್ತು ಸತ್ಯ. ಜಗತ್ತು ಮಾಯೆಯಿಂದಾಗಿ ಆಗಿರುವುದಾದರೂ ಮಾಯೆಯಿಂದಾಗಿ ಜೀವನಿಗೆ ದೇಹ ಉಳಿದಿರುವ ವರೆಗೆ ಮಾಯೆಯೂ ಸತ್ಯ. ಜಗತ್ತು ಮಿಥ್ಯೆ, ಮಾಯೆಯು ಇಲ್ಲ ಎಂದು ಕಾಣುವುದು ಮುಕ್ತಿಯ ಹಂತದಲ್ಲಿ ಮಾತ್ರ. ಆ ತನಕ ಜೀವ ಜಗತ್ತು ಜೀವನ—ಇತ್ಯಾದಿಗಳೆಲ್ಲವೂ ಸತ್ಯ.

(೪) ಪರಬ್ರಹ್ಮನು ಮಾಯೆಯ ಮೂಲಕ ಜೀವನಿಗೆ ಅನುಭವಕ್ಕೆ ಬರುವವನೂ, ಸೃಷ್ಟಿಸ್ಥಿತಿಲಯಗಳನ್ನುಂಟುಮಾಡುವವನೂ ಆದ ಈಶ್ವರನಾಗಿರುತ್ತಾನೆ. ಈಶ್ವರನು ಜೀವಿಗಳ ಲೋಕವ್ಯವಹಾರದೃಷ್ಟಿಯಿಂದ ಮಾತ್ರ ಸತ್ಯ. ಜೀವನು ಮುಕ್ತಿಪಡೆಯಲು ಈಶ್ವರನ ಉಪಾಸನೆಯನ್ನು ಮಾಡಬೇಕು. ಕರ್ಮ-ಭಕ್ತಿಗಳ ಮೂಲಕ ಆರಾಧನೆ ನಡೆಸಬೇಕು. ಪೂಜೆ, ಪ್ರಾರ್ಥನೆ, ಗುರುಭಕ್ತಿ, ಗುರುಸೇವೆ, ಶಾಸ್ತ್ರಾಧ್ಯಯನ, ಸತ್ಕರ್ಮ, ಸದಾಚಾರ ಇತ್ಯಾದಿ ಸಕಲ ಸದ್ವಿಚಾರಗಳಿಗೆ ಜೀವನದಲ್ಲಿ ಸ್ಥಾನ, ಮಾನ್ಯತೆ ಮತ್ತು ಮಹತ್ವ ಇದೆ. ಆದರೆ ಇವುಗಳೆಲ್ಲವೂ ಬಾಹ್ಯಸಾಧನಗಳು. ಹಿಂದೆ ಹೇಳಿದ ಶ್ರವಣ, ಮನನ ಮೊದಲಾದುವುಗಳು ಅಂತರಂಗಸಾಧನಗಳು. ಕರ್ಮ, ಭಕ್ತಿಗಳಿಂದ ಜ್ಞಾನ ದೊರೆತು ಅದರಿಂದ ಮುಕ್ತಿಲಾಭವುಂಟಾಗುತ್ತದೆ.

(೫) ಆತ್ಮಜ್ಞಾನ ಲಭಿಸುವವರೆಗೆ ಕೇವಲ ವಾಕ್ಯಾರ್ಥಗಳ ಜ್ಞಾನದಿಂದ ಜೀವನು ಮಿಥ್ಯೆ, ಜಗತ್ತು ಮಿಥ್ಯೆ, ಅಥವಾ 'ಎಲ್ಲವೂ ಬ್ರಹ್ಮ', ಶಾಸ್ತ್ರೋಕ್ತಕರ್ಮಗಳಾಗಲಿ, ಆರಾಧನೆ ಉಪಾಸನೆಗಳಾಗಲಿ ಅಗತ್ಯವಿಲ್ಲ ಎನ್ನುವುದು ತಪ್ಪು. ಹಾಗೆಯೇ ಎಲ್ಲವೂ ಬ್ರಹ್ಮ, ಇರುವುದೊಂದೇ ಆತ್ಮ ಎಂದು ಆ ರೀತಿಯ ಆತ್ಮಾನುಭೂತಿ ಬಾರದೆ ನೀತಿನಡತೆಗಳು, ಜೀವನದ ಧರ್ಮಸೂತ್ರಗಳು ಇವುಗಳನ್ನು ಕಡೆಗಣಿಸುವುದಾಗಲಿ, ಅಗತ್ಯವಿಲ್ಲ ಎನ್ನುವುದಾಗಲಿ ಸರಿಯಲ್ಲ. ಆತ್ಮಸಾಕ್ಷಾತ್ಕಾರವಾದಾಗ ಸತ್ಯದರ್ಶನವಾಗಿ ಸಂಶಯ, ವೈಚಾರಿಕ ಕಷ್ಟ, ದುಃಖ ಎಲ್ಲವೂ ಪರಿಹಾರವಾಗುವುವು. ಆತ್ಮಜ್ಞಾನವನ್ನು ಸರಿಯಾದ ರೀತಿಯ ಸಾಧನೆಯಿಂದ ಈ ಜೀವನು ಈ ಒಂದೇ ಜೀವನದಲ್ಲೇ ಪಡೆಯಲು ಸಾಧ್ಯ. ಅದೇ ಜೀವನ್ಮುಕ್ತಿ.

**ವಿಶಿಷ್ಟಾದ್ವೈತಮತ**

ವಿಶಿಷ್ಟಾದ್ವೈತಮತವು ಅದ್ವೈತಮತದಲ್ಲಿ ಪ್ರತಿಪಾದಿಸಿದ ಬ್ರಹ್ಮ-ಜೀವ-ಜಗತ್ತು ಈ ಸಂಬಂಧದ ಸಿದ್ಧಾಂತಗಳನ್ನು ಒಪ್ಪದೇ ಅದರದೇ ಆದ ಹೊಸ ನಿಲವನ್ನು ನೀಡಿರುವ ಮತವಾಗಿರುತ್ತದೆ. ಅದ್ವೈತವೇದಾಂತದಂತೆಯೇ ಈ ಮತವೂ ಕೂಡ ಪ್ರಸ್ಥಾನತ್ರಯ ಗ್ರಂಥಗಳನ್ನು ಆಧಾರವಾಗಿ ಅಳವಡಿಸಿಕೊಂಡಿರುತ್ತದೆ.

ವಿಶಿಷ್ಟಾದ್ವೈತಮತದ ಮುಖ್ಯ ಆಚಾರ್ಯರು ಭಗವದ್ ಶ್ರೀಮದ್ ರಾಮಾನುಜರು. ಇವರ ಕಾಲ ಕ್ರಿ.ಶ. ಹನ್ನೊಂದನೇ ಶತಮಾನ ಎಂದು ನಿಶ್ಚಯಿಸಲಾಗಿದೆ. ಇವರು ತಮಿಳುನಾಡಿನ ಪ್ರಾಚೀನ ದೇವಭಕ್ತಿಶಿರೋಮಣಿಗಳಾದ ಆಳ್ವಾರರ ದಿವ್ಯಪ್ರಬಂಧಗಳು, ಪ್ರಸ್ಥಾನತ್ರಯ, ಭಾಗವತ ಮತ್ತು ಪಾಂಚರಾತ್ರ ಆಗಮ ಎಂಬ ಗ್ರಂಥಗಳ ಆಧಾರದಿಂದ ತಮ್ಮ ವಿಶಿಷ್ಟಾದ್ವೈತವೇದಾಂತ ಮತವನ್ನು ಪ್ರತಿಪಾದಿಸಿರುತ್ತಾರೆ. ಇವರಿಗಿಂತ ಪೂರ್ವದಲ್ಲಿ ವಿಶಿಷ್ಟಾದ್ವೈತಸಿದ್ಧಾಂತವನ್ನು ಪ್ರತಿಪಾದಿಸಿದ ಆಚಾರ್ಯರು ಅನೇಕ ಮಂದಿ ಇದ್ದರು. ಅವರು ಟಂಕ, ದ್ರಮಿಡ, ಗುಹದೇವ, ಭಾರುಚಿ ಮುಂತಾದವರಾಗಿರುತ್ತಾರೆ ಎಂದು ಆಚಾರ್ಯ ಶ್ರೀ ರಾಮಾನುಜರು ಹೇಳಿರುತ್ತಾರೆ. ಪೂರ್ವಾಚಾರ್ಯರುಗಳನಂತರ ಬಂದ ಕೆಲವು ಆಚಾರ್ಯರಲ್ಲಿ ಶ್ರೀ ನಾಥಮುನಿಗಳು ಪ್ರಸಿದ್ಧರು. ಶ್ರೀ ನಾಥಮುನಿಗಳನಂತರ ಶ್ರೀ ರಾಮಾನುಜಾಚಾರ್ಯರು ಈ ಮತವನ್ನು ಪ್ರಚಾರ

ಮಾಡಿದರು. ವಿಶಿಷ್ಟಾದ್ವೈತವನ್ನು ಪ್ರತಿಪಾದಿಸಿದ ಪೂರ್ವಾಚಾರ್ಯರು ಸಂಸ್ಕೃತಭಾಷೆಯಲ್ಲಿಯೇ ತಮ್ಮ ಸಿದ್ಧಾಂತಗಳನ್ನು ಪ್ರಕಟಪಡಿಸಿದರು. ಮುಂದೆ ಈ ಮತದ ಸಿದ್ಧಾಂತಗಳನ್ನು ತಮಿಳು ಭಾಷೆಯಲ್ಲಿಯೂ ಅನೇಕ ಭಕ್ತರು—ತಮ್ಮ ಜೀವನ-ಸಂದೇಶಗಳ ಮೂಲಕ ಪ್ರಚಾರಮಾಡಿದರು. ಅವರೇ 'ಆಳ್ವಾರರು' ಎಂದು ಕರೆಯಲ್ಪಡುವ ಭಕ್ತ ಮಹಾತ್ಮರು. ಕಾಲವು ಸರಿದಂತೆ ವಿಶಿಷ್ಟಾದ್ವೈತಮತದ ಸಂಸ್ಕೃತ ಪರಂಪರೆಯವರಿಗೂ ಆಳ್ವಾರರ ತಮಿಳು ಪರಂಪರೆಯವರಿಗೂ ಪರಸ್ಪರ ಅಭಿಪ್ರಾಯಭೇದವು ತೋರಿಬಂದಿತು. ವಿಶಿಷ್ಟಾದ್ವೈತಮತದ ಸಂಸ್ಕೃತ ಪರಂಪರೆಯವರಿಗೆ ವಡಗಲೆ ಪಂಗಡದವರೆಂದೂ, ತಮಿಳು ಸಂಪ್ರದಾಯದವರಿಗೆ ತೆಂಗಲೆ ಪಂಗಡದವರೆಂದೂ ಹೆಸರಿದೆ. ಆದರೆ ಈ ಪೈಕಿ ವಡಗಲೆ ಸಂಪ್ರದಾಯದವರು ತಮಿಳು ಸಂಪ್ರದಾಯವನ್ನು ಸಮಾನವಾಗಿ ಮಾನ್ಯಮಾಡುವವರಾಗಿದ್ದು ಅಂಥವರನ್ನು ಉಭಯವೇದಾಂತಿಗಳೆಂದು ಕರೆಯುತ್ತಾರೆ. ಶ್ರೀಮದ್ ರಾಮಾನುಜಾಚಾರ್ಯರು ವಿಶಿಷ್ಟಾದ್ವೈತಮತಕ್ಕೆ ಶುದ್ಧವೂ ಭದ್ರವೂ ಆದ ಸ್ವರೂಪವನ್ನು ನೀಡಿ ಅದಕ್ಕೆ ಚೇತನವನ್ನು ತುಂಬಿ ವಿಶಿಷ್ಟಾದ್ವೈತಮತದ ಮಹಾ ಪ್ರವರ್ತಕರಾದರು.

ವಿಶಿಷ್ಟಾದ್ವೈತ ಎಂದರೆ ವಿಶೇಷಣಗಳಿಂದ ಕೂಡಿರುವ ಅದ್ವೈತ ಎಂದು ಅರ್ಥ. ಎರಡಿಲ್ಲದೆ ಒಂದೇ ಆಗಿರುವುದು ಬ್ರಹ್ಮ. ಚಿತ್ ಮತ್ತು ಅಚಿತ್ ಎಂಬವು ಅದರ ವಿಶೇಷಣಗಳು. ಬ್ರಹ್ಮವು ಈ ವಿಶೇಷಣಗಳಿಂದ ಕೂಡಿದ್ದು ಏಕಮೇವಾದ್ವಿತೀಯವಾಗಿದೆ ಎಂಬುದು ವಿಶಿಷ್ಟಾದ್ವೈತಮತದ ಮೂಲತತ್ತ್ವವಾಗಿರುತ್ತದೆ.

ವಿಶಿಷ್ಟಾದ್ವೈತಮತದಲ್ಲಿ ಇರುವ ಮುಖ್ಯ ತತ್ತ್ವಾಂಶಗಳು ಮೂರು : ಬ್ರಹ್ಮ , ಚಿತ್ ಮತ್ತು ಅಚಿತ್. ಬ್ರಹ್ಮ ಎಂದರೆ ಪರಮವಸ್ತು, ದೇವರು, ಪರಮಾತ್ಮ. ಚಿತ್ ಎಂದರೆ ಆತ್ಮ. ಅಚಿತ್ ಎಂದರೆ ಜಡವಸ್ತು. ಚಿತ್ ಮತ್ತು ಅಚಿತ್ ಬ್ರಹ್ಮನ (ಈಶ್ವರನ) ಶರೀರಗಳಾಗುತ್ತವೆ. ಈ ಶರೀರದಿಂದ ಕೂಡಿರುವ ಬ್ರಹ್ಮನು ಒಬ್ಬನೇ ಆಗಿದ್ದಾನೆ. ಚಿತ್ ಮತ್ತು ಅಚಿತ್ ಬ್ರಹ್ಮನಿಂದ ಬೇರೆಯಾರಾದರೂ ಅವನಲ್ಲಿದ್ದುಕೊಂಡು ಅವನಿಗೆ ಅಧೀನವಾಗಿವೆ. ಬ್ರಹ್ಮನು ಮಾತ್ರ ಇವುಗಳಿಂದ ವಿಶಿಷ್ಟನಾಗಿದ್ದು ಏಕನೂ ನಿತ್ಯನೂ ಶಾಶ್ವತನೂ ಆಗಿರುತ್ತಾನೆ. ಹೀಗೆ ಚಿತ್ ಮತ್ತು ಅಚಿತ್‌ನಿಂದ ವಿಶಿಷ್ಟವಾಗಿ ಒಂದೇ ತತ್ತ್ವವಾಗಿರುವ ಬ್ರಹ್ಮನನ್ನು ಆಧರಿಸಿ ತತ್ತ್ವಗಳನ್ನು ಪ್ರತಿಪಾದಿಸಿರುವ ಈ ಮತಕ್ಕೆ ವಿಶಿಷ್ಟಾದ್ವೈತಮತ ಎಂದು ಹೆಸರುಬಂದಿರುತ್ತದೆ.

ಬ್ರಹ್ಮ : ಚಿತ್ ಮತ್ತು ಅಚಿತ್‌ಗಳಿಂದ ಬ್ರಹ್ಮನು ಕೂಡಿದ್ದು ಏಕನೂ ನಿರ್ದೋಷಿಯೂ ನಿತ್ಯನೂ ಶಾಶ್ವತನೂ ಆಗಿರುತ್ತಾನೆ. ಬ್ರಹ್ಮನು ಸಮಸ್ತಕಲ್ಯಾಣಗುಣಪರಿಪೂರ್ಣನಾಗಿರುತ್ತಾನೆ. ಸರ್ವಾಂತರ್ಯಾಮಿ ಮತ್ತು ಸತ್ಯಜ್ಞಾನಮಯನಾಗಿರುವುದು ಮಾತ್ರವಲ್ಲದೆ ಅನಂತನೂ ಸರ್ವವ್ಯಾಪಿಯೂ ಆಗಿರುತ್ತಾನೆ. ಬ್ರಹ್ಮನನ್ನು ಈಶ್ವರ, ಆತ್ಮ, ಈಶ, ನಾರಾಯಣ, ವಾಸುದೇವ, ಪುರುಷೋತ್ತಮ ಎಂಬ ವಿವಿಧ ಹೆಸರುಗಳಿಂದ ಕರೆಯಲಾಗಿದೆ. ಈ ಹೆಸರುಗಳು ಚಿತ್ ಮತ್ತು ಅಚಿತ್‌ಗಳಿಂದ ಕೂಡಿರುವ ಬ್ರಹ್ಮನು ಜಗತ್ತಿನಲ್ಲಿ ಪ್ರಕಟಗೊಳ್ಳುವ ಮತ್ತು ಜಗತ್ತಿನ ಸೃಷ್ಟಿ-ಸ್ಥಿತಿ ಇತ್ಯಾದಿಗಳಿಗೆ ಕಾರಣ

ವಾಗಿರುವ ಕ್ರಮ ಪರಿಣಾಮ ವಿಧಾನಗಳಿಂದ ಬೇರೆಬೇರೆಯಾಗಿವೆ. ಅನುಸಾರವಾಗಿ ಬ್ರಹ್ಮನನ್ನು ಈಶ್ವರ ಎಂದು ಕರೆಯಲಾಗಿದ್ದು ಈಶ್ವರತತ್ತ್ವದಲ್ಲಿ ವಿವರಗಳು ಸೇರಿರುತ್ತವೆ. ಅವುಗಳು ಯಾವುವೆಂದರೆ :

(೧) ಬ್ರಹ್ಮ ಮತ್ತು ಈಶ್ವರ ಒಂದೇ ಆಗಿದ್ದು ಈಶ್ವರನೇ ಬ್ರಹ್ಮ.

(೨) ಈಶ್ವರನು ಅಂತರ್ಯಾಮಿ.

(೩) ಈಶ್ವರನು ಸರ್ವಕರ್ಮಗಳಿಗೂ ಅತೀತನು, ಪರಮಪುರುಷನು, ಪೂರ್ಣನು, ಅವನೇ ಜಗತ್ಪತಿ.

ಬ್ರಹ್ಮನು ವಿಶೇಷಗಳಿಂದ ಕೂಡಿದ್ದು ಅವನಿಂದ ವ್ಯಕ್ತವಾಗುವ ಈ ಜಗತ್ತು ಸ್ಥೂಲ, ಸೂಕ್ಷ್ಮ ಎಂಬ ಎರಡು ಅವಸ್ಥೆಗಳನ್ನು ಹೊಂದಿರುತ್ತದೆ. ಸ್ಥೂಲವು ವ್ಯಕ್ತವಾದರೆ ಸೂಕ್ಷ್ಮವು ಅವ್ಯಕ್ತವಾಗಿದೆ. ವ್ಯಕ್ತವಾದುದರ ಹಿನ್ನೆಲೆಯಲ್ಲಿರುವವನೇ ಅಂದರೆ ಸ್ಥೂಲ ಅವಸ್ಥೆಯನ್ನು ಹೊಂದಿ ಚಿತ್ ಮತ್ತು ಅಚಿತ್‌ಗಳಿಂದ ವಿಶಿಷ್ಟನಾದವನೇ ಬ್ರಹ್ಮ, ವಿಶಿಷ್ಟಾದ್ವೈತದಲ್ಲಿ ಬ್ರಹ್ಮನನ್ನು ಹೆಚ್ಚಾಗಿ ಈಶ್ವರ ಎಂಬ ಹೆಸರಿನಿಂದಲೇ ವ್ಯವಹರಿಸಲಾಗಿರುತ್ತದೆ.

ಈಶ್ವರನು ವಿಕಾರರಹಿತನೂ ಸರ್ವಾಂತರ್ಯಾಮಿಯೂ ಆಗಿರುತ್ತಾನೆ.

ಜೀವ-ಜಗತ್ತುಗಳು ಈಶ್ವರನ ಶರೀರವಾಗಿದ್ದು, ಈಶ್ವರನು ಜೀವ-ಜಗತ್ತುಗಳ ಆತ್ಮನಾಗಿರುತ್ತಾನೆ. ಆದರೆ ಜೀವ ಜಗತ್ತುಗಳ ಸುಖದುಃಖಗಳಿಂದ ಆಗುವ ಪರಿಣಾಮಗಳಿಗೆ ಈಶ್ವರನು ಅತೀತನಾಗಿರುತ್ತಾನೆ.

ಈಶ್ವರನು ಪರಮಪುರುಷನೂ ಪೂರ್ಣಪುರುಷನೂ ಆಗಿದ್ದು ಕರ್ಮಬಂಧನಗಳಿಗೆಲ್ಲ ಅತೀತನಾಗಿದ್ದಾನೆ. ಈಶ್ವರನು ದೇಹಧಾರಿಯಾಗಿದ್ದರೂ ಅಪ್ರಾಕೃತವಾದ ಅಂದರೆ ಪ್ರಕೃತಿಸೃಷ್ಟಿಗೆ ಒಳಪಡದ ದಿವ್ಯಮಂಗಳದೇಹವುಳ್ಳವನಾಗಿರುತ್ತಾನೆ. ಈಶ್ವರನ ಶಕ್ತಿಯೇ ಶ್ರೀ ಅಥವಾ ಲಕ್ಷ್ಮೀ. ಈಶ್ವರನು ಷಡ್‌ಗುಣಸಂಪನ್ನನಾಗಿದ್ದು ಭಗವಂತನಾಗಿರುತ್ತಾನೆ. ಜ್ಞಾನ, ಶಕ್ತಿ, ಐಶ್ವರ್ಯ, ಬಲ. ವೀರ್ಯ, ತೇಜಸ್ಸು—ಇವುಗಳೇ ಷಡ್ಗುಣಗಳು. ಈ ಷಡ್‌ಗುಣಗಳುಳ್ಳವನೇ ಭಗವಂತ.

ಈಶ್ವರನ ಸಾಕಾರರೂಪ ಪಂಚಕ: ಈಶ್ವರನು ಏಕಮೇವಾದ್ವಿತೀಯನಾದರೂ ಭಕ್ತರ ಪ್ರಾರ್ಥನೆಯಂತೆ ಭಕ್ತೋದ್ಧಾರಕ್ಕಾಗಿ ಜಗತ್ತಿನಲ್ಲಿ ದೇಹಧಾರಿಯಾಗಿ ಐದು ರೂಪಗಳಲ್ಲಿ ಪ್ರಕಟಗೊಳ್ಳುತ್ತಾನೆ. ಒಂದನೆಯ ರೂಪ ಭಗವಂತನ ಪ್ರಪಂಚಾತೀತವಾದ ರೂಪವಾಗಿರುತ್ತದೆ. ಈ ರೂಪದಲ್ಲಿ ಭಗವಂತನು ಜಗತ್ತು ಮತ್ತು ಸರ್ವಜೀವರ ಆತ್ಮನಾಗಿರುತ್ತಾನೆ. ಇದನ್ನು 'ಪರ' ಎಂದು ಕರೆಯುತ್ತಾರೆ. ಭಗವಂತನು ಪರತತ್ತ್ವವಾಗಿ ನಾರಾಯಣನಾಗಿ ವ್ಯಕ್ತವಾದಾಗ 'ವಾಸುದೇವ', ಆತ್ಮಗಳಲ್ಲಿ ಬುದ್ಧಿತತ್ತ್ವ ಮತ್ತು ಜೀವತತ್ತ್ವವಾಗಿ 'ಸಂಕರ್ಷಣ', ಮನಸ್ತತ್ತ್ವವಾಗಿ ವ್ಯಕ್ತಗೊಂಡು ಸೃಷ್ಟಿಯನ್ನು ಕೈಕೊಂಡಾಗ 'ಪ್ರದ್ಯುಮ್ನ', ಅಹಂಕಾರತತ್ತ್ವವಾಗಿ ವ್ಯಕ್ತಗೊಂಡು ಜಗತ್ತಿನ ಸ್ಥಿತಿಗೆ ಕಾರಣನಾಗಿ 'ಅನಿರುದ್ಧ' ಎಂಬ ಈ ನಾಲ್ಕು ರೂಪಗಳಲ್ಲಿ ಪ್ರಕಟಗೊಳ್ಳುತ್ತಾನೆ. ಇವು ಭಗವಂತನ ಸ್ವರೂಪದ ನಾಲ್ಕು ಅಂಶಿಕ ರೂಪಗಳಾಗಿದ್ದು ಇವನ್ನು ಒಟ್ಟಾಗಿ 'ವ್ಯೂಹ'

ಎಂದು ಕರೆಯಲಾಗಿದೆ. ಇದು ಎರಡನೆಯ ರೂಪವಾಗಿದೆ. ದುಷ್ಟರನ್ನು ನಾಶಗೊಳಿಸಿ ಶಿಷ್ಟರನ್ನು ಪಾಲನೆ ಮಾಡಲು ಈಶ್ವರನು ಮನುಷ್ಯವರ್ಗದಲ್ಲಿಯಾಗಲಿ, ಪ್ರಾಣಿವರ್ಗ ದಲ್ಲಿಯಾಗಲಿ ದೇಹಧಾರಿಯಾಗಿ ಜನ್ಮವೆತ್ತಿ ಪ್ರಕಟಗೊಳ್ಳುವುದೇ 'ವಿಭವ' ರೂಪ ವಾಗಿರುತ್ತದೆ. ಇದು ಮೂರನೆಯ ರೂಪ. ವಿಭವವನ್ನು ಅವತಾರ ರೂಪ ಎಂದೂ ಕರೆಯುತ್ತಾರೆ. ನಾಲ್ಕನೆಯದೇ ಹಾರ್ದ ಅಥವಾ ಅಂತರ್ಯಾಮಿಯಾಗಿರುವ ರೂಪ. ಸಕಲ ಜೀವರುಗಳ ಆತ್ಮನಾಗಿ ಹೃದಯಸ್ಥನಾಗಿದ್ದು ದಿವ್ಯಧ್ಯಾನಕ್ಕೆ ಗೋಚರವಾಗುವ ಭಗವಂತಸ್ವರೂಪವೇ 'ಅಂತರ್ಯಾಮಿ' ಆಗಿರುತ್ತದೆ. ಕೊನೆಯ ರೂಪವೇ 'ಅರ್ಚಾವ ತಾರ'. ಅರ್ಚಾವತಾರ ಎಂದರೆ ಭಕ್ತರಿಂದ ಅರ್ಚನೆ-ಆರಾಧನೆಗಳನ್ನು ಪಡೆಯುವ ಬಿಂಬದ ಅರ್ಥಾತ್ ವಿಗ್ರಹದ ರೂಪವಾಗಿ ಭಗವಂತನು ಪ್ರಕಟಗೊಳ್ಳುವುದು. ಭಗವಂತ ನಿಗೂ ಭಕ್ತರಿಗೂ ಇರುವ ಹತ್ತಿರದ ಸಂಬಂಧದ ಪ್ರತೀಕವೇ 'ಅರ್ಚಾವತಾರ'. ಆಶ್ರಿತ ವಾತ್ಸಲ್ಯದಿಂದ ಪರಮಾತ್ಮನು ವಿವಿಧ ರೂಪಗಳಲ್ಲಿ ಅವತರಿಸುವಂತೆ ಶ್ರೀಲಕ್ಷ್ಮೀ ದೇವಿಯು ಸಹ ಪರಮಾತ್ಮನ ಪರವಾಸುದೇವರೂಪದಲ್ಲಿ ಸೇರಿರುವ ತನ್ನ ರೂಪದ ಅಂಶಗಳಿಂದ ರುಕ್ಮಿಣಿ, ಸೀತೆ ಮೊದಲಾದ ರೂಪಗಳನ್ನು ತಳೆದು ಭಗವಂತನೊಡನೆ ಅವತಾರಸಹಾಯಕಳಾಗಿ ಜಗತ್ತಿನಲ್ಲಿ ಜಗದೋದ್ಧಾರಕ್ಕೆ ಅವತರಿಸುತ್ತಾಳೆ.

ಜೀವ : ಜೀವನು ಚಿತ್‌ಸ್ವರೂಪನಾಗಿದ್ದು ಪ್ರಕಾರನಾಗಿರುತ್ತಾನೆ. ಎಂದರೆ ಬ್ರಹ್ಮನ ಅಂಶವಾಗಿರುತ್ತಾನೆ. ಜೀವನು ಇಚ್ಛೆ, ಜ್ಞಾನ, ಕ್ರಿಯೆಗಳಿಂದ ಕೂಡಿದ್ದು ಕರ್ತನೂ ಭೋಕ್ತೃವೂ ಆಗಿದ್ದು ಬ್ರಹ್ಮನಿಂದ ಬೇರೆಯೇ ಆಗಿರುವುದು ಮಾತ್ರವಲ್ಲದೆ ಪರ ಸಂತ್ರನೂ ಆಗಿರುತ್ತಾನೆ. ಜೀವನು ಸತ್ಯನಾಗಿದ್ದು ಅಣುಸ್ವರೂಪನಾಗಿ ಹೃದಯದಲ್ಲಿರು ತ್ತಾನೆ. ದೀಪದ ಬೆಳಕಿನಂತೆ ಜೀವನು ತನ್ನ ಚೈತನ್ಯದಿಂದ ದೇಹವನ್ನೆಲ್ಲಾ ವ್ಯಾಪಿಸಿರು ತ್ತಾನೆ. ಅವನು ಅತಿಸೂಕ್ಷ್ಮನಾಗಿದ್ದು ಸರ್ವಾಂತಃ ಪ್ರವೇಶನಸಾಮರ್ಥ್ಯದಿಂದ ಕೂಡಿರು ತ್ತಾನೆ. ಜೀವರು ಅನಂತ. ಜೀವನು ಪರಮಾತ್ಮನಿಂದ ಬೇರೆಯಾದ ಚಿದ್‌ವಸ್ತುವಾದರೂ ಪರಮಾತ್ಮನು ಜೀವಿಯ ಅಂತರ್ಯಾಮಿಯಾಗಿ ಜೀವಾತ್ಮರುಗಳಿಗೆ ಆತ್ಮನಾಗಿರುತ್ತಾನೆ. ಜೀವನು ಅಗೋಚರನೂ ನಿತ್ಯನೂ ಅವ್ಯಯನೂ ಆಗಿರುತ್ತಾನೆ.

ಜೀವ ಮತ್ತು ಈಶ್ವರ ಸಂಬಂಧ: ಶ್ರೀರಾಮಾನುಜದರ್ಶನದಲ್ಲಿ ಜೀವ ಮತ್ತು ಈಶ್ವರಸಂಬಂಧವನ್ನು ಶೇಷ-ಶೇಷಿ ಸಂಬಂಧ ಎಂದು ನಿರೂಪಿಸಲಾಗಿದೆ. ಶೇಷಿ ಎಂದರೆ ಒಡೆಯ, ಶೇಷ ಎಂದರೆ ಒಡೆಯನಿಗೆ ಅಧೀನನಾದವನು ಎಂದರ್ಥ. ಭಗವಂತ ಜೀವರು ಗಳ ಒಡೆಯನಾಗಿದ್ದು ಜೀವರುಗಳು ಭಗವಂತನಿಗೆ ಅಧೀನವಾಗಿರುತ್ತಾರೆ. ಈ ಜೀವೇಶ್ವರ ಸಂಬಂಧವು ಸಾಮಾನ್ಯವಾಗಿ ಒಂಬತ್ತು ವಿಧಗಳಲ್ಲಿ ಜೀವನದಲ್ಲಿ ಪ್ರಕಟಗೊಳ್ಳುತ್ತದೆ. ಅವು ಯಾವುವೆಂದರೆ :

(೧) ಪಿತಾ-ಪುತ್ರ ಸಂಬಂಧ, (೨) ರಕ್ಷ್ಯ-ರಕ್ಷಕ ಸಂಬಂಧ, (೩) ಶೇಷ-ಶೇಷಿ ಸಂಬಂಧ, (೪) ಪತಿ-ಪತ್ನಿ ಸಂಬಂಧ, (೫) ಜ್ಞಾತೃ-ಜ್ಞೇಯ ಸಂಬಂಧ, (೬) ಸ್ವ-ಸ್ವಾಮಿ ಸಂಬಂಧ, (೭) ಆಧಾರ-ಆಧೇಯ ಸಂಬಂಧ, (೮) ಶರೀರಿ-ಶರೀರ ಸಂಬಂಧ, (೯) ಭೋಕ್ತೃ-ಭೋಗ್ಯ ಸಂಬಂಧ.

ಜಗತ್ತು : ಅಚಿತ್‌ನಿಂದ ಅಥವಾ ಪ್ರಕೃತಿಯಿಂದ ಆಗಿರುವುದೇ ಜಗತ್ತು. ಜಗತ್ತನ್ನು ಸೃಷ್ಟಿಮಾಡಿದವನು ಈಶ್ವರ. ಈಶ್ವರನ ಲೀಲೆಯಿಂದಾಗಿ ಈ ಜಗತ್ತು ಸೃಷ್ಟಿಯಾಗಿದೆ. ಜಗತ್ತು ಹಾಗೂ ಜಗತ್ತಿನ ಚರಾಚರ ವಸ್ತುಗಳನ್ನು ಸೃಷ್ಟಿಮಾಡಿರುವ ಈಶ್ವರನು ಜಗತ್ತಿನ ಆಧಾರವಾಗಿರುತ್ತಾನೆ. ಜಗತ್ತು ಮಿಥ್ಯೆ ಅಲ್ಲ ; ಅದು ಸತ್ಯವಾಗಿದ್ದು ಭಗವಂತ ನಿಂದ ಭಿನ್ನವಾಗಿದ್ದು ಅವನ ಶಕ್ತಿಯಿಂದ ಕೂಡಿರುತ್ತದೆ. ಜಗತ್ತಿನಿಂದ ಈಶ್ವರನಿಗೆ ಏನೂ ಪ್ರಯೋಜನವಿಲ್ಲ. ಈಶ್ವರನು ಪೂರ್ಣಪುರುಷನು, ಸತ್ಯಸಂಕಲ್ಪನು. ಆದರೆ "ಸ್ವಸಂಕಲ್ಪಕೃತವಪ್" ಅಂದರೆ ಸ್ವಂತ ಸಂಕಲ್ಪದಿಂದ. ಲೀಲಾವಿಲಾಸದಿಂದ ಈಶ್ವರನು ಈ ಜಗತ್ತನ್ನು ಸೃಷ್ಟಿಸಿರುತ್ತಾನೆ.

ಮಾಯೆ : ಮಾಯೆಯು ಭಗವಂತನ ಅದ್ಭುತಶಕ್ತಿಯಾಗಿದ್ದು ಅದೇ ಪ್ರಕೃತಿ ಎಂದೂ ಕರೆಯಲ್ಪಟ್ಟಿರುತ್ತದೆ. ಸ್ಥೂಲವಾಗಿ ಪ್ರಕಟಗೊಂಡಿರುವಾಗ ಅದನ್ನು ಪ್ರಕೃತಿ ಎಂದೂ ಅದೇ ಸೂಕ್ಷ್ಮ ಅವಸ್ಥೆಯಲ್ಲಿ ಇದ್ದಾಗ ಮಾಯೆ ಎಂದೂ ಕರೆಯಲಾಗಿದೆ. ಮಾಯೆ ಎಂದರೆ ಭ್ರಮೆ ಅಥವಾ ಮಿಥ್ಯೆ ಎಂದು ಅರ್ಥವಲ್ಲ. ಅದು ಸತ್ಯ ಹಾಗೂ ಸತ್ವಪೂರ್ಣ ವಾದುದಾಗಿರುತ್ತದೆ.

ಜೀವರುಗಳ ಕರ್ಮಬಂಧ : ಜೀವಿಗಳು ಅಜ್ಞಾನದಿಂದಾಗಿಯೂ ಮಮಕಾರದಿಂದ ಆಗಿಯೂ ಸಂಸಾರಚಕ್ರಕ್ಕೆ ತಮ್ಮ ತಮ್ಮ ಕರ್ಮಕ್ಕೆ ಅನುಸಾರವಾಗಿ ಸಿಗುತ್ತಾರೆ. ಕರ್ಮಕ್ಕೆ ಕಾರಣ ಭಗವಂತನ ಲೀಲೆಯಾಗಿದೆ. ಕರ್ಮವು ಅನಾದಿಯಾಗಿದೆ, ಎಂದರೆ ಜೀವರುಗಳಿಗೆ ಅದು ಯಾವಾಗ ಆರಂಭವಾಯಿತು ಎಂದು ಹೇಳಲು ಸಾಧ್ಯವಿಲ್ಲ. ಆದರೆ ಭಗವಂತನ ಕೃಪೆಯಿಂದಲೂ ಯಥೋಚಿತವಾದ ಸಾಧನೆಯಿಂದಲೂ ಜೀವನು ಕರ್ಮಬಂಧನದಿಂದ ಮುಕ್ತನಾಗಿ ಸಂಸಾರಚಕ್ರದಿಂದ ಬಿಡುಗಡೆಹೊಂದಲು ಸಾಧ್ಯವಿದೆ.

ಜಗತ್ತಿನ ಸೃಷ್ಟಿ : ದ್ರವ್ಯ ಮತ್ತು ಅದ್ರವ್ಯ ಎಂಬವುಗಳ ಸಂಯೋಗಸಮಷ್ಟಿಯೇ ಜಗತ್ತು. ದ್ರವ್ಯಗಳು ಒಟ್ಟು ಆರು. ಅದ್ರವ್ಯಗಳು ಹತ್ತು. ಅವು ಯಾವುವೆಂದರೆ :

ದ್ರವ್ಯ : (೧) ಪ್ರಕೃತಿ, (೨) ಕಾಲ, (೩) ಶುದ್ಧಸತ್ವ, (೪) ಧರ್ಮಭೂತ ಜ್ಞಾನ, (೫) ಜೀವ, (೬) ಈಶ್ವರ.

ಅದ್ರವ್ಯ : (೧) ಸತ್ವ, (೨) ರಜಸ್ಸು, (೩) ತಮಸ್ಸು, (೪) ಶಬ್ದ, (೫) ಸ್ಪರ್ಶ, (೬) ರೂಪ, (೭) ರಸ, (೮) ಗಂಧ, (೯) ಸಂಯೋಗ, (೧೦) ಶಕ್ತಿ.

ಸತ್ವ ರಜಸ್ಸು ತಮಸ್ಸುಗಳಿಂದ ಕೂಡಿದ ಗುಣವುಳ್ಳದ್ದು ತ್ರಿಗುಣವಾಗಿದ್ದು ಇದೇ ಸಕಲ ಬ್ರಹ್ಮಾಂಡಸೃಷ್ಟಿಗೆ ಮೂಲಕಾರಣವಾಗಿರುತ್ತದೆ. ಇದನ್ನು ಮೂಲಪ್ರಕೃತಿ ಎಂದು ಹೇಳುತ್ತಾರೆ.

ಸತ್ವ ಎಂದರೆ ಜೀವನ, ಜ್ಞಾನ, ಸುಖ ಮೊದಲಾದುವುಗಳಿಗೆ ಕಾರಣವಾದ ಗುಣ. ರಜಸ್ಸು ಎಂದರೆ ರಾಗ, ದುಃಖ, ಕ್ರಿಯೆ ಮೊದಲಾದುವುಗಳಿಗೆ ಕಾರಣವಾದ ಗುಣ. ತಮಸ್ಸು ಎಂದರೆ ನಿದ್ರೆ, ಆಲಸ್ಯ, ಮೋಹ ಮೊದಲಾದುವುಗಳಿಗೆ ಕಾರಣವಾದ ಗುಣ.

ಈ ಮೂರು ಗುಣಗಳು ಸಮವಾದ ಅವಸ್ಥೆಯಲ್ಲಿದ್ದರೆ ಪ್ರಲಯ ಎಂದೂ ವಿಷಮಾವಸ್ಥೆಯಲ್ಲಿದ್ದರೆ ಸೃಷ್ಟಿ ಎಂದೂ ಹೇಳುವುದಾಗಿದೆ. ಈ ಮೂಲಪ್ರಕೃತಿಯಿಂದ ಮೊದಲು ಮಹತ್ತು ಹುಟ್ಟುತ್ತದೆ. ಮಹತ್ತಿನಿಂದ ಅಹಂಕಾರ, ಅಹಂಕಾರದಿಂದ ಮನಸ್ಸು,

ಜ್ಞಾನಪಂಚೇಂದ್ರಿಯಗಳು, ಕರ್ಮಪಂಚೇಂದ್ರಿಯಗಳು, ಪಂಚತನ್ಮಾತ್ರಗಳು, ಪಂಚ ಮಹಾಭೂತಗಳು ಉತ್ಪತ್ತಿಯಾಗುತ್ತವೆ. ಇವುಗಳ ಸಂಯೋಗದಿಂದ ದೇಹವು ಉತ್ಪತ್ತಿಯಾಗಿ ಭಗವಂತನು ಸರ್ವಜೀವಿಗಳ ಅಂತರ್ಯಾಮಿಯಾಗುತ್ತಾನೆ. ಭಗವಂತನು ಜೀವರುಗಳ ಕರ್ಮಗಳಿಗೆ ಅನುಸಾರವಾಗಿ ಅವುಗಳನ್ನು ದೇಹದಲ್ಲಿ ಸಂಯೋಗಗೊಳಿಸುತ್ತಾನೆ.

ಮೋಕ್ಷ: ಜೀವರುಗಳಲ್ಲಿ ಮೂರು ವಿಧ: (೧) ನಿತ್ಯಸೂರಿಗಳು, (೨) ಮುಕ್ತಜೀವಿಗಳು, (೩) ಬದ್ಧಜೀವಿಗಳು. ನಿತ್ಯಸೂರಿಗಳು ಪ್ರಕೃತಿ-ಕರ್ಮಗಳಿಂದ ವಿರಹಿತರಾಗಿ ಭಗವಂತನೊಡನೆ ವೈಕುಂಠದಲ್ಲಿ ಇರುವುದರಿಂದ ಅವರಿಗೆ ಮೋಕ್ಷದ ಅಗತ್ಯವಿಲ್ಲ. ಒಮ್ಮೆ ಸಂಸಾರದಲ್ಲಿದ್ದು ಭಕ್ತಿ ಕರ್ಮ ಜ್ಞಾನಗಳಿಂದ ಸಂಸಾರದಿಂದ ಬಿಡುಗಡೆಹೊಂದಿ ಭಗವಂತನ ಜೊತೆಯಲ್ಲಿ ವಾಸವಾಗಿರುವವರೇ ಮುಕ್ತಜೀವಿಗಳು. ಅವಿದ್ಯಾವಶರಾಗಿ ಸಂಸಾರದಲ್ಲಿ ಮಗ್ನರಾದವರೇ ಬದ್ಧಜೀವಿಗಳು. ಇವರಿಗೆ ಮೋಕ್ಷ ಅಗತ್ಯ.

ವಿಶಿಷ್ಟಾದ್ವೈತಮತದ ಪ್ರಕಾರವಾಗಿ ಮೋಕ್ಷ ಎಂದರೆ ಜೀವನು ಸರ್ವವಿಧದ ಪಾಶಗಳಿಂದ ಮುಕ್ತನಾಗಿ ಸಂಸಾರದಿಂದ ಬಿಡುಗಡೆಹೊಂದುವುದು, ಪರಮಪದ ವೈಕುಂಠ ಲೋಕದಲ್ಲಿ ನೆಲಸುವಂತಾಗಿ ಭಗವಂತ ಶ್ರೀಮನ್ನಾರಾಯಣನ ದಿವ್ಯಸಾನ್ನಿಧ್ಯದ ಆನಂದಾನುಭವಸಂಪತ್ತನ್ನು ಪಡೆಯುವುದು ಎಂದು ಅರ್ಥ. ಮುಕ್ತಿಪಡೆದ ಜೀವನು ಭಗವಂತನಲ್ಲಿ ಐಕ್ಯವಾಗುವುದಿಲ್ಲ. ಸಾರೂಪ್ಯಪದವಿಹೊಂದಿ ದಿವ್ಯಜ್ಞಾನದಿಂದ ಕೂಡಿ, ಜೀವನು ಭಗವಂತನ ನಿತ್ಯಸಾಕ್ಷಾತ್ಕಾರಿ ಆನಂದವನ್ನು ಅನುಭವಿಸುತ್ತಾ ಇರುತ್ತಾನೆ. ಜೀವನ್ಮುಕ್ತಿ ದೊರೆಯುವುದಿಲ್ಲ ಎಂಬುದು ಈ ಮತದ ಸ್ಪಷ್ಟ ನಿಲವು ಆಗಿರುತ್ತದೆ.

ಮುಕ್ತಿಯನ್ನು ಪಡೆದ ಜೀವರಿಗೆ ಎರಡು ವಿಷಯಗಳನ್ನು ಬಿಟ್ಟು ಇತರ ಎಲ್ಲಾ ವಿಷಯಗಳಲ್ಲಿಯೂ ಬ್ರಹ್ಮನ ಲಕ್ಷಣಗಳು ಬರುತ್ತವೆ. ಮುಕ್ತಿಹೊಂದಿದ ಜೀವನು ಬ್ರಹ್ಮನಂತೆ ಸೃಷ್ಟಿಕಾರ್ಯ ಮಾಡಲು ಸಾಧ್ಯವಿಲ್ಲ. ಹಾಗೆಯೇ ಶ್ರೀದೇವಿಯು ಅಂದರೆ ಲಕ್ಷ್ಮೀದೇವಿಯು ಒಡೆತನವು ಮುಕ್ತಜೀವರಿಗೆ ದೊರೆಕುವುದಿಲ್ಲ. ಭಗವಂತನ ವೈಕುಂಠಧಾಮದಲ್ಲಿರುವ ಜೀವರೆಲ್ಲರೂ ಒಂದೇ ರೂಪವನ್ನು ಹೊಂದಿರುತ್ತಾರೆ. ಅವರ ರೂಪಗಳೆಲ್ಲವೂ ವಿಶುದ್ಧ ಸತ್ವದಿಂದ ರಚಿಸಲ್ಪಟ್ಟಿದೆ. ಮುಕ್ತಜೀವರಲ್ಲಿ ಎರಡು ವಿಧ. ಅವು ಯಾವುವೆಂದರೆ :

(೧) ಈ ಪ್ರಪಂಚದಲ್ಲಿ ಭಗವಂತನಿಗೆ ಸೇವೆಮಾಡುವ ಅಭ್ಯಾಸವಿದ್ದು ಅಂತಹ ಅಭ್ಯಾಸವೃತ್ತಿಯನ್ನು ಮುಕ್ತಿಯನಂತರವೂ ಮುಂದುವರಿಸಿ ಭಗವಂತನ ಸೇವೆಮಾಡುತ್ತಾ ಇರುವವರು.

(೨) ಪರಮಾತ್ಮನ ನಿತ್ಯನಿರಂತರವಾದ ಧ್ಯಾನದಲ್ಲಿ ಕೃತಾರ್ಥತೆಯನ್ನು ಪಡೆದು ಭಗವಂತನ ದಿವ್ಯಧಾಮವಾದ ವೈಕುಂಠದಲ್ಲಿ ಸಾರೂಪ್ಯವನ್ನು ಹೊಂದಿ. ಎಂದರೆ ಭಗವಂತನ ದಿವ್ಯರೂಪವನ್ನು ಹೊಂದಿ ಯಾರ ಒಡನೆಯೂ ಸೇರದೆ ದೇವರ ನಿತ್ಯ ದರ್ಶನಾನಂದದಲ್ಲಿ ತೃಪ್ತರಾಗಿ ಇರುವವರು.

ಮುಕ್ತಿಪಡೆದ ಜೀವಾತ್ಮನು ಈಶ್ವರನಿಂದ ಸೃಷ್ಟಿಸಲ್ಪಟ್ಟ ವಿವಿಧ ಲೋಕ, ವಿವಿಧ ದೇಹಗಳನ್ನು ಪ್ರವೇಶಿಸಿ ಲೋಕಕ್ಕೆ ಅಭ್ಯುದಯವನ್ನು ಉಂಟುಮಾಡಲು ಕಾರಣವಾಗಬಹುದು.

ಮೋಕ್ಷಲೋಕ ಅಥವಾ ಪರಮಪದ : ಭಗವಂತನು ಶ್ರೀಲಕ್ಷ್ಮೀಸಹಿತನಾಗಿ ಶ್ರೀಮನ್ನಾರಾಯಣನಾಗಿ ಇರುವ, ಪವಿತ್ರವೂ ಅನುಪಮಸೌಂದರ್ಯದಿಂದ ಕೂಡಿರು ವುದೂ ಆದ ನೆಲೆಯೇ ಪರಮಪದ. ಇದನ್ನು ವೈಕುಂಠಲೋಕ ಎಂದು ಕರೆಯಲಾಗಿದೆ. ವೈಕುಂಠವು ಅಪ್ರಾಕೃತ ದಿವ್ಯದೇಶವಾಗಿದೆ.

ವೈಕುಂಠದ ವರ್ಣನೆ, ಪರಮಾತ್ಮನ ಸೌಂದರ್ಯ ಇವುಗಳೆಲ್ಲ ವಿಶಿಷ್ಟಾದ್ವೈತಮತದ ಗ್ರಂಥಗಳಲ್ಲಿ ವಿಸ್ತಾರವಾಗಿ ವಿವರಿಸಲ್ಪಟ್ಟಿವೆ.

ಜೀವನಿಗೆ ಮೋಕ್ಷವು ಭಕ್ತಿಯಿಂದಾಗಿ ಲಭಿಸುತ್ತದೆ. ಜ್ಞಾನ ಮತ್ತು ಕರ್ಮಗಳು ಭಕ್ತಿಗೆ ಸಾಧನಗಳಾಗಿವೆ.

**ಸಾಧನಾವಿಚಾರಗಳು**

ಮೋಕ್ಷಸಾಧನ : ವಿಶಿಷ್ಟಾದ್ವೈತಮತದಲ್ಲಿ ಭಕ್ತಿಗೆ ಅತ್ಯಂತ ಹೆಚ್ಚಿನ ಮಹತ್ವದ ಸ್ಥಾನವಿದೆ. ಭಕ್ತಿಯೇ ಮೋಕ್ಷಕ್ಕೆ ಸಾಧನವಾಗಿ ಅದರ ಫಲವಾಗಿ ಮುಕ್ತಿಯು ದೊರೆಯುತ್ತದೆ ಎಂದು ಈ ಮತದಲ್ಲಿ ಹೇಳಲಾಗಿದೆ. ವಿಶಿಷ್ಟಾದ್ವೈತಮತದ ತತ್ತ್ವ ವಿಚಾರದಲ್ಲಿ ಮುಖ್ಯವಾಗಿ ಮೂರು ಭಾಗಗಳಿವೆ : ತತ್ತ್ವ, ಹಿತ ಮತ್ತು ಪುರುಷಾರ್ಥ. ಪರಮಾತ್ಮನೇ ತತ್ತ್ವವಾಗಿರುತ್ತಾನೆ. ಅವನನ್ನು ಸೇರಲು ಸಾಧನವಾಗುವ ಭಕ್ತಿ, ಪ್ರಪತ್ತಿ ಗಳೇ ಹಿತ ಎಂದೆನಿಸಿರುತ್ತದೆ. ಮೋಕ್ಷವೇ ಪುರುಷಾರ್ಥವಾಗಿರುತ್ತದೆ. ಮತ್ತೊಂದು ರೀತಿಯಲ್ಲಿ ಹೇಳುವುದಾದರೆ : ತತ್ತ್ವ ಎಂದರೆ ಮತದ ಸಿದ್ಧಾಂತಗಳಿಗೆ ಸಂಬಂಧಿಸಿದ ವಿಚಾರಗಳೆಂದು ಹೇಳಬಹುದು. ಹಿತ ಎಂದರೆ ಭಗವಂತನ ದಿವ್ಯಧಾಮವನ್ನು ಸೇರಲು ಕೈಗೊಳ್ಳುವ ಸಾಧನಾವಿಚಾರಗಳಾಗಿವೆ. ಪುರುಷಾರ್ಥಗಳೆಂದರೆ ಪ್ರತಿಯೊಬ್ಬರೂ ಜೀವನ ದಲ್ಲಿ ಗಳಿಸಬೇಕಾದ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ. ಇವುಗಳಲ್ಲಿ ಮೋಕ್ಷವು ಬಾಳಿನ ಪರಮಗುರಿ ಅಥವಾ ಪರಮಪುರುಷಾರ್ಥವಾಗಿದ್ದು ಧರ್ಮವೇ ಇವುಗಳ ಆರ್ಜನೆಗೆ ಆಧಾರವಾಗಿರುತ್ತದೆ.

ಭಕ್ತಿ : ಭಕ್ತಿ ಎಂದರೆ ಜೀವಾತ್ಮನು ಪರಮಾತ್ಮನ ಯಥಾರ್ಥಜ್ಞಾನಕ್ಕಾಗಿ ಸಾಧನೆ ಮಾಡುತ್ತಾ ಭಗವಂತನನ್ನು ತ್ರಿಕರಣಪೂರ್ವಕವಾಗಿ ಪ್ರೀತಿಸುವುದೇ ಆಗಿದೆ. ತನ್ನ ಸರ್ವಸ್ವವನ್ನೂ ಭಗವಂತನಿಗೆ ಅರ್ಪಿಸಿ ಅವನಲ್ಲಿ ಶರಣುಹೋಗುವುದು ಭಕ್ತಿಯ ಅರ್ಥಕ್ಕೆ ಸೇರಿದ ಆಚರಣಾಂಶವಾಗಿರುತ್ತದೆ. ವರ್ಣಾಶ್ರಮಧರ್ಮಗಳನ್ನು ಅನುಸರಿಸಿ ಭಗವಂತನ ಪಾದಾರವಿಂದಗಳ ಧ್ಯಾನ, ಅರ್ಚನೆ, ಪ್ರಣಾಮ ಇತ್ಯಾದಿಗಳನ್ನು ಮಾಡು ವುದು ಭಕ್ತಿಸಾಧನೆಯಾಗಿದೆ. ಅರ್ಚನೆ, ಪ್ರಣಾಮ, ಪ್ರದಕ್ಷಿಣೆ ಇವುಗಳು ಕಾಯಿಕ ಭಕ್ತಿ, ಅಂದರೆ ಶರೀರಕ್ಕೆ ಸಂಬಂಧಿಸಿದ ಭಕ್ತಿ. ಧ್ಯಾನ, ಧಾರಣ ಇತ್ಯಾದಿಗಳ ಮೂಲಕ ಭಗವಂತನನ್ನು ಪೂಜಿಸುವುದೇ ಮಾನಸಿಕ ಭಕ್ತಿ. ಮಂತ್ರ, ಜಪ, ನಾಮಸಂಕೀರ್ತನೆ ಇವುಗಳು ವಾಚಿಕಭಕ್ತಿ. ಈ ತ್ರಿವಿಧ ಭಕ್ತಿಯೇ ಮೋಕ್ಷಕ್ಕೆ ಸಾಧನವಾಗಿರುತ್ತದೆ. ಭಗವಂತನಲ್ಲಿ ಪ್ರೀತಿ, ಸಾತ್ವಿಕಸಹವಾಸ, ಸದ್‌ವಿಚಾರಚಿಂತನೆಯಲ್ಲಿ ಆಸಕ್ತಿ—ಇವುಗಳೆಲ್ಲ ಭಕ್ತನ ಗುಣಲಕ್ಷಣಗಳು. ಬರಿಯ ಉದ್ರೇಕವಾಗಲಿ, ಅಂಧಪ್ರೇಮವಾಗಲಿ ಭಕ್ತಿಯಲ್ಲ, ಅದು ಜ್ಞಾನಸಹಿತವಾಗಿದ್ದರೆ ಮಾತ್ರ ಭಕ್ತಿಯಾಗುತ್ತದೆ. ಭಕ್ತಿಸಾಧನೆಗೆ ಸಾಧಕನು

ಆಹಾರಶುದ್ಧಿ, ದೇಹಶುದ್ಧಿ, ಮನಶ್ಶುದ್ಧಿ ಉಳ್ಳವನಾಗಿರಬೇಕು. ಸಾಧಕನು ಸದ್ಧರ್ಮ, ಸದಾಚಾರ, ಸದ್ವರ್ತನೆಗಳಿಂದ ಕೂಡಿರಬೇಕು. ವಿವೇಕ, ವಿಲೋಕ, ಅಭ್ಯಾಸ, ಕ್ರಿಯೆ, ಕಲ್ಯಾಣ, ಸತ್ಯ, ಆರ್ಜವ, ದಯಾ, ಅಹಿಂಸಾ, ದಾನ, ಅನವಸಾದ ಎಂಬ ಏಕಾದಶ ಅಂಗಗಳು ಭಕ್ತಿಯ ಸಾಧನಗಳಾಗಿವೆ. ಭಕ್ತಿ, ಜ್ಞಾನ, ಕರ್ಮ, ಪ್ರಪತ್ತಿಗಳು ಸಾದಕನ ಹಂತಗಳಾಗಿವೆ. ಇವು ಒಂದಕ್ಕೊಂದು ಪೂರಕವಾಗಬೇಕೇ ವಿನಾ ಬೇರೆಬೇರೆಯಾಗ ಬಾರದು. ಜ್ಞಾನವು ಭಕ್ತಿಯಾಗಿ ಇವೆರಡರ ಫಲವಾಗಿ ಕೈಂಕರ್ಯ (ಎಂದರೆ ಭಗವಂತ ನಲ್ಲಿ ಶರಣಾಗತಿಯ ಮನೋಭಾವನೆಯಿಂದ ಕೂಡಿ ಕರ್ಮಗಳನ್ನು ಮಾಡುವಿಕೆ) ಉಂಟಾಗಿ ಕೊನೆಗೆ ಅದು ಭಗವಂತನಲ್ಲಿ ಕೊನೆಗಾಣಬೇಕು.

ಆತ್ಮನು ಶರೀರದಿಂದ ಬೇರೆಯಾಗಿದ್ದು ಶರೀರದ ದ್ರವ್ಯಾದಿಗಳಿಂದ ದೋಷರಹಿತನೂ ಬಾಧಾರಹಿತನೂ ಆಗಿದ್ದಾನೆ ಎಂದೂ, ಅಲ್ಲದೆ ಸನಾತನವೂ ಆಗಿದ್ದಾನೆ ಎಂದೂ, ಆತ್ಮನ ಆತ್ಮ ಈಶ್ವರನೆಂದೂ ತಿಳಿಯುವುದೇ ಜ್ಞಾನ. ಅಲ್ಲದೆ ಸುಖದುಃಖಗಳನ್ನು ಸಮಾನವಾಗಿ ಕಾಣುತ್ತಾ ಯಾವದೇ ಪ್ರತಿಫಲ, ಬಹುಮಾನಗಳ ಬಯಕೆ ಇಲ್ಲದಿರುವುದೇ ಜ್ಞಾನ ಎಂದೆನಿಸುತ್ತದೆ.

ಕರ್ಮ ಮತ್ತು ಕೈಂಕರ್ಯ : ಯಾಗ, ದಾನ, ಹೋಮ, ದೇವತಾರ್ಚನೆ, ತೀರ್ಥ ಯಾತ್ರೆ, ವೇದಾಧ್ಯಯನ, ವೇದಾಂತಪಾಠ, ಪ್ರವಚನ ಇತ್ಯಾದಿಗಳಲ್ಲಿ ಒಂದನ್ನು ಅನುಕೂಲದ ಮೇರೆ ಅನುಸರಿಸಿ ಅದಕ್ಕೆ ಪೂರಕವಾಗಿ ನಿತ್ಯನೈಮಿತ್ತಿಕ ಕರ್ಮಗಳನ್ನು ಭಗವಂತನ ಪ್ರೀತ್ಯರ್ಥವಾಗಿ, ಕರ್ತವ್ಯ ಎಂಬ ದೃಷ್ಟಿಯಿಂದ, ಸಮರ್ಪಣಬುದ್ಧಿಯಿಂದ ಮಾಡುವುದೇ ಕರ್ಮ.

ಕರ್ಮವನ್ನು ಪ್ರೀತಿಯಿಂದ. ಭಗವದರ್ಪಣಬುದ್ಧಿಯಿಂದ ಮತ್ತು ಭಗವಂತನ ಅಭಿ ಮತಕ್ಕೆ ವಿರೋಧವಲ್ಲದ ರೀತಿಯಲ್ಲಿ ಮಾಡುವುದೇ ಕೈಂಕರ್ಯ ಎಂದು ಹೇಳಲಾಗಿದೆ. ಕೈಂಕರ್ಯದಲ್ಲಿ ಭಗವತ್ಕೈಂಕರ್ಯ, ಭಾಗವತ ಕೈಂಕರ್ಯ, ಆಚಾರ್ಯ ಕೈಂಕರ್ಯ ಎಂಬ ಒಳಭೇದಗಳಿವೆ. ಒಟ್ಟಿನಲ್ಲಿ ನಿಷ್ಕಾಮಸೇವೆ, ಭಗವಂತನ ಆರಾಧನೆಗೆಂದು ಕೈಕೊಳ್ಳುವ ಎಲ್ಲಾ ಕೆಲಸಗಳೂ ಕೈಂಕರ್ಯ ಎಂದು ತಾತ್ಪರ್ಯವಾಗಿ ಹೇಳಬಹುದು.

ಹೀಗೆ ಕರ್ಮಜ್ಞಾನಗಳಿಂದ ಪರಿಪೋಷಿತವಾಗಿ ಜೀವವು ಕೈಂಕರ್ಯವಾದಾಗ ಭಕ್ತಿಯು ಮೂಡಿಬರುವುದು. ಭಕ್ತಿ ಪರಿಪಕ್ವವಾದಾಗ ಭಕ್ತನ ಮೇಲೆ ಭಗವಂತನ ಅನುಗ್ರಹ ಒದಗಿಬರುತ್ತದೆ. ಆಗ ಭಕ್ತನು ಭವಬಂಧನದಿಂದ ಮುಕ್ತನಾಗಿ ಭಗವಂತನ ಧಾಮದಲ್ಲಿ ಪರಮಾತ್ಮನ ಸೇವೆಯಲ್ಲಿ ತಲ್ಲೀನನಾಗಿ ದಿವ್ಯಾನಂದಸುಖದಲ್ಲಿರುತ್ತಾನೆ. ಭಕ್ತಿಯು ಪಕ್ವವಾಗಲು ಪ್ರಪತ್ತಿಯು ಜೀವನದಲ್ಲಿ ಅನುಷ್ಠಾನಕ್ಕೆ ಬರಬೇಕು. ಪ್ರಪತ್ತಿಯು ಭಕ್ತಿಯ ಪರಿಪಕ್ವತೆಗೆ ಇರುವ ಪ್ರತಿಬಂಧಕಗಳನ್ನು ತೊಡೆದುಹಾಕುತ್ತದೆ.

ಪ್ರಪತ್ತಿ : ಪ್ರಪತ್ತಿ ಎಂದರೆ ಭಗವಂತನಲ್ಲಿ ಸಂಪೂರ್ಣ ಶರಣಾಗತಿ ಎಂದು ಅರ್ಥ. ಯಜಮಾನನಿಗೆ ತನ್ನ ಇಷ್ಟದ ಅನುಸಾರವಾಗಿ ವಿನಿಯೋಗಿಸಲು ಅರ್ಹವಾದ ವಸ್ತುವು ಶೇಷ. ಜೀವವು ಭಗವಂತನ ಶೇಷಭೂತವಾಗಿದೆ. ಈ ವಿಚಾರವನ್ನು ನೆನಪಿಡುತ್ತಾ ಭಗವಂತನಲ್ಲಿ ಸಂಪೂರ್ಣವಾದ ಸಮರ್ಪಣಭಾವನೆಯಿಂದ ಶರಣಾಗುವುದೇ ಪ್ರಪತ್ತಿ.

ಪ್ರಪತ್ತಿಯ ವೃತ್ತಿಯನ್ನು ಅವಲಂಬಿಸಿರುವವನು ಪ್ರಸನ್ನನು. ಪ್ರಪತ್ತಿಯಲ್ಲಿ ಸ್ವನಿಷ್ಠಾ, ಉಕ್ತಿನಿಷ್ಠಾ, ಆಚಾರ್ಯನಿಷ್ಠಾ ಎಂಬ ಮೂರು ಪ್ರಕಾರಗಳಿವೆ. ಪ್ರಪತ್ತಿಶಾಸ್ತ್ರವನ್ನು ವಿವರವಾಗಿ ತಿಳಿದು ತಾನೇ ಅನುಷ್ಠಾನ ಮಾಡುವುದು ಸ್ವನಿಷ್ಠೆ, ಪೂರ್ತಿ ಶಾಸ್ತ್ರಜ್ಞಾನ ವಿಲ್ಲದೆ ಆಚಾರ್ಯನಿಂದ ಉಪದೇಶಿಸಲ್ಪಟ್ಟ ವಾಕ್ಯಗಳನ್ನು ಭಗವಂತನ ಪ್ರೀತ್ಯರ್ಥವಾಗಿ ಸದಾ ಅನುಷ್ಠಾನ ಮಾಡುತ್ತಾ ಎಂದರೆ ಆಚರಣೆಯಲ್ಲಿ ಹೇಳುತ್ತಾ ಬರುವುದೇ ಉಕ್ತಿ ನಿಷ್ಠೆ. ಶಿಷ್ಯನು ಆತ್ಮೀಯನಾಗಿ ಭಕ್ತಿಗೌರವಗಳಿಂದ ಆಚಾರ್ಯನನ್ನು ಸೇವಿಸುವುದೇ ಆಚಾರ್ಯನಿಷ್ಠೆ.

ರಹಸ್ಯತ್ರಯ : ವಿಶಿಷ್ಟಾದ್ವೈತಮತದಲ್ಲಿ ಚಿತ್ ಅಚಿತ್ ಮತ್ತು ಈಶ್ವರ ಎಂಬ ತತ್ತ್ವತ್ರಯ ಇದ್ದಂತೆ ರಹಸ್ಯತ್ರಯವೂ ಇದ್ದು ಅದು ಈ ಮತದ ಮುಖ್ಯಾಂಶವಾಗಿರು ತ್ತದೆ. ರಹಸ್ಯ ಎಂದರೆ ಗುಟ್ಟು. ಮೂರು ಗುಟ್ಟುಗಳೇ 'ರಹಸ್ಯತ್ರಯ'. ಅವು ಯಾವುವೆಂದರೆ :

(೧) ತಿರುಮಂತ್ರ, (೨) ದ್ವಯ, (೩) ಚರಮಶ್ಲೋಕ.

ರಹಸ್ಯತ್ರಯವು ಭಗವಂತನ ನೆಲೆಯನ್ನು ಸೇರಲು ಸಾಧಕನು ಅನುಸರಿಸಬೇಕಾದ ಸಾಧನಾ ಉಪಾಯಗಳ ಹಂತದಲ್ಲಿ ಅವನಿಗೆ ಪೂರ್ಣವಾಗಿ ನೆರವಾಗುವ ಮೂರು ಅಂಶಗಳಾಗಿವೆ.

ವಿಶಿಷ್ಟಾದ್ವೈತದರ್ಶನದಲ್ಲಿ ಶ್ರೀಲಕ್ಷ್ಮೀನಾರಾಯಣನೆಂದೂ, ಶ್ರೀ ವಿಷ್ಣು ಎಂದೂ ಭಗವಂತನನ್ನು ಹಲವು ಹೆಸರುಗಳಿಂದ ಸಂಬೋಧಿಸಲಾಗಿದೆ. ಲಕ್ಷ್ಮೀಸಮೇತನಾದ ವಿಷ್ಣುವನ್ನು ಆರಾಧಿಸುವವರಾದ್ದರಿಂದ ವಿಶಿಷ್ಟಾದ್ವೈತ ಸಂಪ್ರದಾಯದವರಿಗೆ ಶ್ರೀವೈಷ್ಣವರು ಎಂಬ ಪರ್ಯಾಯವಾದ ಹೆಸರಿದೆ. ವಿಶಿಷ್ಟಾದ್ವೈತದ ರೀತಿಯ ಸಾಧನೆಗೆ ಶ್ರೀವೈಷ್ಣವ ಸಾಧನೆ ಎಂದೂ ಹೇಳುತ್ತಾರೆ.

ತಿರುಮಂತ್ರ : ಪ್ರತಿಯೊಬ್ಬ ಶ್ರೀವೈಷ್ಣವಸಾಧಕನು ಶ್ರೀವೈಷ್ಣವ ಸಂಪ್ರದಾಯದ ಗುರುವಿನಿಂದ ಸೂಕ್ತವಾದ ರೀತಿಯಲ್ಲಿ ಉಪದೇಶ–ಆಶೀರ್ವಾದಗಳನ್ನು ಪಡೆಯಬೇಕು. ಹಾಗೆ ಪಡೆಯುವುದನ್ನು ಶ್ರೀವೈಷ್ಣವದೀಕ್ಷೆ ಎಂದು ಹೇಳುತ್ತಾರೆ. ಶ್ರೀವೈಷ್ಣವದೀಕ್ಷೆ ಯನ್ನು ಕೈಕೊಂಡಾಗ ಗುರುವಿನಿಂದ ಪಡೆಯುವ ಪವಿತ್ರವಾದ ಅಷ್ಟಾಕ್ಷರಗಳಿಂದ ಕೂಡಿದ 'ಓಂ ನಮೋ ನಾರಾಯಣಾಯ' ಎನ್ನುವ ಮಂತ್ರವೇ ತಿರುಮಂತ್ರವಾಗಿದೆ.

ದ್ವಯ : ಜೀವಾತ್ಮನು ಪರಮಾತ್ಮನ ಅನುಗ್ರಹಕ್ಕೆ ಪಾತ್ರನಾಗುವಂತೆ ಮಾಡುವವಳು "ಶ್ರೀ", ಎಂದರೆ ಜಗನ್ಮಾತೆಯಾದ ಲಕ್ಷ್ಮೀದೇವಿ. ಶ್ರೀಮನ್ನಾರಾಯಣನು ಕರ್ಮದ ಶಕ್ತಿಯಾದರೆ ಶ್ರೀ ಲಕ್ಷ್ಮೀದೇವಿಯು ಕೃಪೆಯ ಶಕ್ತಿ. ಈ "ದ್ವಯ" ಶಕ್ತಿಗಳಲ್ಲಿರುವ ಸಮನ್ವಯವನ್ನು ಗ್ರಹಿಸಿ ಶ್ರೀಲಕ್ಷ್ಮೀದೇವಿಯ ಮೂಲಕ ಶ್ರೀಮನ್ನಾರಾಯಣನನ್ನು ಆಶ್ರಯಿಸಬೇಕು ಎನ್ನುವುದು ಈ "ದ್ವಯದ" ಸಾರಾಂಶ. ದ್ವಯದ ಮಂತ್ರವೊಂದಿದ್ದು ಅದನ್ನು ಪ್ರತಿಯೊಬ್ಬ ಶ್ರೀವೈಷ್ಣವನೂ ಗುರುಮುಖೇನ ಶಾಸ್ತ್ರೋಕ್ತವಾಗಿ ಪಡೆದು ಜೀವನದಲ್ಲಿ ಆಚರಣೆಗೆ ತರಬೇಕು. "ಶ್ರೀಮನ್ನಾರಾಯಣಚರಣೌ ಶರಣಂ ಪ್ರಪದ್ಯೇ, ಶ್ರೀಮತೇ ನಾರಾಯಣಾಯ ನಮಃ" ಎನ್ನುವುದೇ ಆ ಪವಿತ್ರವಾದ ದ್ವಯಮಂತ್ರ.

ಚರಮಶ್ಲೋಕ: ಇದು ಶ್ರೀಮದ್ ಭಗವದ್ಗೀತೆಯ ಹದಿನೆಂಟನೇ ಅಧ್ಯಾಯದ ಅರವತ್ತಾರನೇ ಶ್ಲೋಕಕ್ಕೆ ವಿಶಿಷ್ಟಾದ್ವೈತಮತದಲ್ಲಿ ನೀಡಿರುವ ಹೆಸರಾಗಿದೆ. "ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ । ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥ ಎಂಬುದೇ ಚರಮಶ್ಲೋಕವೆಂದು ಕರೆಯಲ್ಪಟ್ಟಿರುವ ಗೀತಾಶ್ಲೋಕವಾಗಿದೆ. (ತಾತ್ಪರ್ಯ: ಸರ್ವಧರ್ಮಗಳನ್ನೂ ತ್ಯಾಗಮಾಡಿ ನನ್ನೊಬ್ಬ ನನ್ನೇ ಶರಣುಹೊಂದು; ನಾನು ನಿನ್ನನ್ನು ಸಕಲಪಾಪಗಳಿಂದ ಬಿಡಿಸಿ ಮುಕ್ತನನ್ನಾಗಿ ಮಾಡುವೆನು.) ಈ ಶ್ಲೋಕದಲ್ಲಿ ಸಾಧಕನು ಸಾಧನೆಗಳನ್ನು ಮಾಡಿದನಂತರ ಪರಿತ್ಯಾಗ ಮಾಡಬೇಕಾದ ಸೂಚನೆ ಇರುವಂತೆ ಭಗವಂತನಲ್ಲಿ ಸಂಪೂರ್ಣ ಶರಣಾಗತಿಯ ಧರ್ಮದ ತತ್ತ್ವವೂ ಅಡಕವಾಗಿರುತ್ತದೆ. ಹೀಗೆ ಈ ಶ್ಲೋಕವು ತ್ಯಾಗ ಮತ್ತು ಶರಣಾಗತಿಯನ್ನು ಹೇಳುವಂತೆ ಭಗವಂತನು ಭಕ್ತನ ಉದ್ಧಾರವನ್ನು ಮಾಡುತ್ತಾನೆ ಎಂಬ ಭರವಸೆಯನ್ನು ನೀಡುತ್ತದೆ. ವಿಶಿಷ್ಟಾದ್ವೈತದ ದರ್ಶನದ ಸಾರವೂ ತ್ಯಾಗ, ಭಗವಂತನಲ್ಲಿ ಅನನ್ಯವಾದ ವಿಶ್ವಾಸ ಮತ್ತು ಸಂಪೂರ್ಣ ಶರಣಾಗತಿಯೇ ಆಗಿರುತ್ತದೆ. ಹಾಗಾಗಿ ಈ ಶ್ಲೋಕವನ್ನು ಚರಮಶ್ಲೋಕ ಎಂದು ಪರಿಗಣಿಸಲಾಗಿದ್ದು ಇದರಲ್ಲಿ ಹೇಳಿರುವ ವಿಚಾರಗಳನ್ನು ಪ್ರತಿಯೊಬ್ಬ ಶ್ರೀವೈಷ್ಣವನೂ ಸರಿಯಾಗಿ ಅರ್ಥಮಾಡಿಕೊಂಡು ಅದಕ್ಕೆ ಅನುಗುಣವಾಗಿ ತನ್ನ ಜೀವನವನ್ನು ನಿರ್ವಹಿಸಬೇಕು ಎಂಬುದು ವಿಶಿಷ್ಟಾದ್ವೈತಮತದ ಸಾರಸಂದೇಶವಾಗಿದೆ.

ಹೀಗೆ ತತ್ತ್ವತ್ರಯಗಳನ್ನು ತಿಳಿದು, ರಹಸ್ಯತ್ರಯಗಳನ್ನು ಅರ್ಥಮಾಡಿಕೊಂಡು ಅನುಷ್ಠಾನ ಮಾಡುತ್ತಾ, ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳನ್ನು ಸಂಪಾದಿಸಲು ಜೀವನು ಪ್ರಯತ್ನಿಸಬೇಕು ಎಂದು ಸವಿಸ್ತಾರವಾಗಿ ವಿಶಿಷ್ಟಾದ್ವೈತಮತದಲ್ಲಿ ಹೇಳಿ ತತ್ಸಂಬಂಧವಾದ ಸಾಧನಾವಿವರಗಳನ್ನು ನೀಡಲಾಗಿರುತ್ತದೆ.

ಈ ರೀತಿಯಲ್ಲಿ ವಿಶಿಷ್ಟಾದ್ವೈತಮತವು ಬ್ರಹ್ಮ, ಜೀವ, ಜಗತ್ತು ಎಲ್ಲವನ್ನೂ ಸತ್ಯ ಎಂದು ಘೋಷಿಸಿ ಭಕ್ತಿ ಮತ್ತು ಪ್ರಪತ್ತಿಗಳಿಂದ ಪರಿಪೋಷಿತವಾದ ಶರಣಾಗತಿಯೇ ಮೋಕ್ಷಕ್ಕೆ ಸಾಧನ ಎಂದು ಹೇಳಿ ಜೀವಿಯ ಉನ್ನತಿಗೆ ಮಾರ್ಗದರ್ಶನವನ್ನು ನೀಡಿರುತ್ತದೆ. ವಿಶಿಷ್ಟಾದ್ವೈತಮತದ ಸಂಬಂಧವಾಗಿ ಶ್ರೀಮದ್ ರಾಮಾನುಜ ಆಚಾರ್ಯರ ಶ್ರೀಭಾಷ್ಯ, ವೇದಾರ್ಥಸಂಗ್ರಹ, ಗೀತಾಭಾಷ್ಯ ಮತ್ತು ಶ್ರೀ ಶ್ರೀನಿವಾಸದಾಸರ ಯತೀಂದ್ರಮತದೀಪಿಕಾ ಗ್ರಂಥಗಳು ಪ್ರಸಿದ್ಧವಾದವುಗಳಾಗಿವೆ.

## ದ್ವೈತಮತ

ದ್ವೈತಮತದ ಪ್ರವರ್ತನಾಚಾರ್ಯರು ಭಗವದ್ ಶ್ರೀ ಮಧ್ವಾಚಾರ್ಯರು. ಇವರು ದ್ವೈತಮತವನ್ನು ಪ್ರತಿಪಾದಿಸುವ ಮೊದಲೇ ದ್ವೈತಮತದ ಸಿದ್ಧಾಂತಗಳು ಇದ್ದುವಾದರೂ ಶ್ರೀ ಮಧ್ವಾಚಾರ್ಯರೇ ಅವುಗಳನ್ನು ಕ್ರೋಢೀಕರಿಸಿ ಸಿದ್ಧಾಂತಗಳಿಗೆಲ್ಲಾ ಸರಿಯಾದ ಶಾಸ್ತ್ರಾಧಾರವನ್ನು ಪ್ರತಿಪಾದಿಸಿ ಪ್ರಕಾಶಗೊಳಿಸಿದವರಾಗಿರುತ್ತಾರೆ. ಭಗವದ್ ಶ್ರೀ ಮಧ್ವಾಚಾರ್ಯರಿಗೆ ಪೂರ್ಣಬೋಧ, ಪೂರ್ಣಪ್ರಜ್ಞ, ಶ್ರೀ ಆನಂದತೀರ್ಥ ಎಂಬ ಹೆಸರುಗಳೂ ಇವೆ. ಇವರ ಕಾಲ ಕ್ರಿ.ಶ. ಹದಿಮೂರನೇ ಶತಮಾನ ಎಂದು ನಿರ್ಧರಿಸ

ಲಾಗಿದೆ. ದ್ವೈತ ಎಂದರೆ ದ್ವಿತ, ಎರಡು ಎಂದು ಅರ್ಥವಾಗುತ್ತದೆ. ದ್ವೈತ ಎಂದರೆ ಭೇದ ಎಂಬ ಇನ್ನೊಂದು ಅರ್ಥವೂ ಇದೆ. ಒಟ್ಟಿನಲ್ಲಿ ದ್ವೈತ ಎಂದರೆ ಎರಡು, ಒಂದಲ್ಲ ಎಂದು ತಾತ್ಪರ್ಯ. ಈ ಮತದಲ್ಲಿ ಜೀವ, ಜಗತ್ತು, ಪರಮಾತ್ಮ ಇವರ ಒಳಗೆ ಇಹ ಮತ್ತು ಪರಗಳಲ್ಲಿ ಪಾರಮಾರ್ಥಿಕವಾದ ಭೇದ ಇದೆ ಎಂಬುದನ್ನು ಪ್ರತಿಪಾದಿಸಲಾಗಿದೆ. ಹಾಗಾಗಿ ಈ ಮತಕ್ಕೆ ದ್ವೈತ ಎಂದು ಹೇಳಲಾಗಿದೆ. ಜಗತ್ತಿನಲ್ಲಿ ಇರುವ ತತ್ತ್ವಗಳನ್ನು ಸರಿಯಾಗಿ ಪರಿಶೀಲಿಸಿದರೆ ಸ್ವತಂತ್ರವಾದ ಮತ್ತು ಅಸ್ವತಂತ್ರವಾದ ಎರಡು ತತ್ತ್ವಗಳು ಕಾಣುತ್ತವೆ. ದ್ವೈತಮತದಲ್ಲಿ ಈ ತತ್ತ್ವವನ್ನು ಆಧರಿಸಿ ವಸ್ತುವಿನ ನಿರೂಪಣೆ ಮಾಡ ಲಾಗಿದೆ. ಆದುದರಿಂದ ಇದಕ್ಕೆ ದ್ವೈತ ಎಂಬ ಹೆಸರು ಬಂದಿದೆ ಎಂದು ಹೇಳುವುದೂ ಇದೆ. ದ್ವೈತವಾದವನ್ನು ಒಳಗೊಂಡ ಈ ಮತವನ್ನು 'ತತ್ತ್ವವಾದ' ಎಂದೂ ಕರೆಯು ತ್ತಾರೆ. ಹಾಗೆಯೇ ಈ ಮತಕ್ಕೆ ಬ್ರಹ್ಮಸಂಪ್ರದಾಯ, ಮಾಧ್ವಮತ ಎಂಬ ಹೆಸರುಗಳೂ ರೂಢಿಯಲ್ಲಿವೆ.

ದ್ವೈತಮತದ ಸಿದ್ಧಾಂತಗಳಿಗೆ ಶ್ರೀಮಧ್ವಾಚಾರ್ಯರ ಪ್ರಸ್ಥಾನತ್ರಯ ಭಾಷ್ಯಗಳು, ಮಹಾಭಾರತತಾತ್ಪರ್ಯನಿರ್ಣಯ, ಭಾಗವತತಾತ್ಪರ್ಯನಿರ್ಣಯ, ವಿಷ್ಣುತತ್ತ್ವ ವಿನಿರ್ಣಯ, ಶ್ರೀಮನ್ನ್ಯಾಯಸುಧಾ, ಇವುಗಳು ಪ್ರಸಿದ್ಧವಾದ ಆಧಾರಗ್ರಂಥಗಳಾಗಿವೆ. ಈ ಮತದಲ್ಲಿ ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಎಂಬ ಮೂರು ಪ್ರಮಾಣಗಳನ್ನು ಸ್ವೀಕರಿಸಲಾಗಿದೆ. ದ್ವೈತಸಿದ್ಧಾಂತವನ್ನು ಸಂಗ್ರಹವಾಗಿ ಹೇಳುವ ಸುಪ್ರಸಿದ್ಧವಾದ ಶ್ಲೋಕವೊಂದು ಇದ್ದು ಅದರಲ್ಲಿ ದ್ವೈತಮತದ ತತ್ತ್ವಗಳು ಸುಲಭವಾಗಿ ಅರ್ಥವಾಗುವ ಹಾಗೆ ಸಂಗ್ರಹಿಸಲ್ಪಟ್ಟಿರುತ್ತದೆ :

> ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ ತತ್ತ್ವತಃ
> ಭಿನ್ನಾ ಜೀವಗಣಾಃ ಹರೇರನುಚರಾಃ ನೀಚೋಚ್ಚಭಾವಂ ಗತಾಃ ।
> ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
> ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ॥

ಶ್ಲೋಕದ ಅರ್ಥ ಹೀಗಿದೆ :

(೧) ಶ್ರೀಮಧ್ವಮತದಲ್ಲಿ ಹರಿಯು ಸರ್ವೋತ್ತಮನು.

(೨) ಈ ಜಗತ್ತು ಸತ್ಯವಾದುದು, ಮಿಥ್ಯೆಯಲ್ಲ.

(೩) ಚೇತನ, ಅಚೇತನ ಮತ್ತು ಈಶ್ವರ—ಇವರಿಗೆ ಇರುವ ಭೇದವು ಸತ್ಯವಾದುದು, ಪಾರಮಾರ್ಥಿಕವಾದುದು.

(೪) ಸಕಲ ಜೀವರೂ ಶ್ರೀಹರಿಗೆ ಅಧೀನರು ಮತ್ತು ಅವನ ದಾಸರು.

(೫) ಜೀವರು ಪರಸ್ಪರ ಭೇದವುಳ್ಳವರು.

(೬) ಜೀವನಿಗೆ ಸ್ವರೂಪ ಆನಂದದ ಅಭಿವ್ಯಕ್ತಿಯೇ ಮುಕ್ತಿ.

(೭) ಅಂತಹ ಮೋಕ್ಷಕ್ಕೆ ನಿರ್ಮಲ ಪರಿಶುದ್ಧವಾದ ಭಕ್ತಿಯೇ ಮುಖ್ಯ ಸಾಧನ.

(೮) ಪ್ರತ್ಯಕ್ಷ, ಅನುಮಾನ, ಆಗಮ ಎಂಬುದಾಗಿ ಪ್ರಮಾಣಗಳು ಮೂರು ಬಗೆ ಯಾಗಿವೆ.

(೯) ಶ್ರೀಹರಿಯು ವೇದೈಕವೇದ್ಯನಾಗಿದ್ದಾನೆ. ಅಂದರೆ ಸಮಸ್ತ ವೇದ-ಶಾಸ್ತ್ರಗಳೆಲ್ಲದರಲ್ಲೂ ಪ್ರತಿಪಾದಿಸಲ್ಪಟ್ಟವನಾಗಿ ಸರ್ವೋತ್ತಮನೆಂದು ವೇದ್ಯನಾಗಿರುತ್ತಾನೆ.

ಈ ನವರತ್ನ ತತ್ತ್ವಗಳೇ ದ್ವೈತಸಿದ್ಧಾಂತದ ಸಾರಸರ್ವಸ್ವವಾಗಿರುತ್ತವೆ.

ದ್ವೈತಮತದಲ್ಲಿ ಇತರ ಮತಗಳಂತೆ ಪ್ರಸ್ತಾಪಿಸಿ ವಿವರಿಸಿರುವ ವಿಚಾರಗಳು ಮುಖ್ಯವಾಗಿ ಐದು ಆಗಿದ್ದು ಅವು ಬ್ರಹ್ಮ, ಲಕ್ಷ್ಮಿ, ಪ್ರಕೃತಿ, ಜಗತ್ತು, ಜೀವ, ಮೋಕ್ಷ ಎಂದು ಹೇಳಬಹುದು. ವಿಶಿಷ್ಟಾದ್ವೈತಮತಕ್ಕೂ ದ್ವೈತಮತಕ್ಕೂ ಹಲವು ತತ್ತ್ವವಿಚಾರಗಳಲ್ಲಿ ಒಮ್ಮತವಿದೆ ಎನ್ನುವುದು ಇಲ್ಲಿ ಗಮನಿಸಬೇಕಾದ ಅಂಶವಾಗಿದೆ.

ಬ್ರಹ್ಮ: ಬ್ರಹ್ಮನನ್ನು ಶ್ರೀಮನ್ನಾರಾಯಣ, ಶ್ರೀವಿಷ್ಣು, ಶ್ರೀಹರಿ, ಪರಮಾತ್ಮ ಎಂದೆಲ್ಲ ಹೆಸರುಗಳಿಂದ ಕರೆಯಲಾಗಿದೆ. ಶ್ರೀಮನ್ನಾರಾಯಣ, ಶ್ರೀಹರಿ ಎಂಬ ಹೆಸರುಗಳು ವ್ಯವಹಾರಪ್ರಸಿದ್ಧಿಯಾದವುಗಳಾಗಿವೆ. ಶ್ರೀಹರಿಯು ಸರ್ವೋತ್ತಮನೂ ಆಗಿದ್ದು ಜಗತ್ತಿನ ಕಾರಣನೂ ಆಗಿರುತ್ತಾನೆ. ಪರಮಾತ್ಮನಾದ ಶ್ರೀಹರಿಯು ಸರ್ವಶಕ್ತನೂ ಭಗವಂತನೂ ಸರ್ವಜ್ಞನೂ ಆಗಿರುತ್ತಾನೆ. ಅವನು ಚಿತ್-ಅಚಿತ್ ಶಕ್ತಿಗಳ ನಿಯಾಮಕನು ಮತ್ತು ಯಜಮಾನನೂ ಆಗಿರುತ್ತಾನೆ. ಭಗವಂತನು ಅಣುಗಳಿಗಿಂತಲೂ ಅಣುಪರಿಮಾಣವುಳ್ಳವನೂ ಮಹತ್ತಿಗಿಂತಲೂ ಮಹಾಪರಿಮಾಣವುಳ್ಳವನೂ ಆಗಿರುತ್ತಾನೆ. ಜಡಪ್ರಕೃತಿ ಅಂದರೆ ಅಚಿತ್ ವಸ್ತುವು ಭಗವಂತನಿಗಿಂತ ಭಿನ್ನವಾಗಿದೆ. ಶ್ರೀಹರಿಯು ಲಕ್ಷ್ಮೀದೇವಿಯ ಮೂಲಕ ಪ್ರಕೃತಿಯನ್ನು ಶಕ್ತಿಪೂರ್ಣವಾಗಿಸಿ ಜಗತ್ತನ್ನು ನಿರ್ಮಿಸುತ್ತಾನೆ. ಜಗತ್ತಿನಲ್ಲಿ ಜೀವಿಗಳ ಉದ್ಧಾರಕ್ಕಾಗಿ ಅವತರಿಸುತ್ತಾನೆ. ರಾಮ, ಕೃಷ್ಣ ಇತ್ಯಾದಿ ಅವತಾರರೂಪಗಳನ್ನು ಧರಿಸುತ್ತಾನೆ. ಭಗವಂತನು ವಿಗ್ರಹಗಳಲ್ಲಿ ಪ್ರಕಟವಾಗುತ್ತಾನೆ, ಅಲ್ಲದೆ ಜೀವರ ಅಂತರ್ಯಾಮಿಯಾಗಿಯೂ ಆಗಿದ್ದಾನೆ. ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳು ಬ್ರಹ್ಮನಿಂದಾಗಿ ಅಂದರೆ ಅವನ ನಿಯಂತ್ರಣದಿಂದಾಗಿ ಆಗುತ್ತವೆ. ಬ್ರಹ್ಮನು ಮಾತ್ರ ಏಕನಾಗಿದ್ದು ಯಾವ ನಿಯಂತ್ರಣಕ್ಕೂ ಒಳಗಾಗದೆ ಜೀವ, ಜಗತ್ತುಗಳಿಂದ ಬೇರೆಯೇ ಆಗಿರುತ್ತಾನೆ.

ಲಕ್ಷ್ಮಿ: ಲಕ್ಷ್ಮೀದೇವಿಯು ಶ್ರೀಹರಿಯ ಮಹಿಷಿಯಾಗಿದ್ದು ವೈಕುಂಠವಾಸಿಯಾಗಿರುತ್ತಾಳೆ. ಶ್ರೀಲಕ್ಷ್ಮೀದೇವಿಯು ಪರಮಾತ್ಮನ ಅಧೀನವಾದ ಚೇತನವಾಗಿರುತ್ತಾಳೆ. ಜ್ಞಾನ, ಆನಂದ, ಅನಂತಕಲ್ಯಾಣಗುಣಗಳಿಂದ ಶ್ರೀಲಕ್ಷ್ಮಿಯು ಕೂಡಿರುತ್ತಾಳೆ. ಶ್ರೀಲಕ್ಷ್ಮಿಯು ಭಗವಂತನ ಕ್ರಿಯಾಚೈತನ್ಯ ಎಂದು ತಾತ್ಪರ್ಯ. ಭಗವಂತನ ಅವತಾರಲೀಲೆಯನ್ನು ಅನುಸರಿಸಿ ಲಕ್ಷ್ಮೀದೇವಿಯು ಸೀತೆ, ರುಕ್ಮಿಣಿ ಇತ್ಯಾದಿಯಾಗಿ ಇಹದಲ್ಲಿ ಅವತರಿಸುತ್ತಾಳೆ. ಶ್ರೀಲಕ್ಷ್ಮಿಯು ಸಕಲ ಜೀವರುಗಳಿಗಿಂತ ಅನೇಕ ಕೋಟಿ ಅಂಶಗಳಲ್ಲಿ ಸರ್ವೋತ್ತಮಳಾಗಿದ್ದು ಪರಮಾತ್ಮನಾದ ಶ್ರೀಹರಿಗಿಂತ ಮಾತ್ರ ಕಡಿಮೆಯವಳಾಗಿರುತ್ತಾಳೆ. ಸಕಲ ಜೀವರಿಗೆ ಶ್ರೀಹರಿಯು ಪಿತೃಸ್ಥಾನೀಯನಾದರೆ ಶ್ರೀಲಕ್ಷ್ಮಿಯು ಮಾತೃಸ್ಥಾನದವಳಾಗಿರುತ್ತಾಳೆ. ಶ್ರೀಲಕ್ಷ್ಮಿಯೇ ಮಾಯೆ. ಮಾಯೆಯು ಭಗವಂತನ ಅಧೀನಚೇತನವಾಗಿದ್ದು ಸತ್ಯವೂ ನಿತ್ಯವೂ ಆಗಿರುತ್ತದೆ.

ಪ್ರಕೃತಿ ಮತ್ತು ಜಗತ್ತು: ಪ್ರಕೃತಿಯು ಜಡವಸ್ತುವಾಗಿದೆ (ಅಚಿತ್). ಲಕ್ಷ್ಮೀದೇವಿ

ಯಿಂದಾಗಿ ಅದು ಕ್ರಿಯಾಪೂರ್ಣವೂ ಸತ್ವಪೂರ್ಣವೂ ಆಗುತ್ತದೆ. ಅವಿದ್ಯೆಯು ಅನಾದಿಯಾದ ಪ್ರಕೃತಿಯ ಒಂದು ಸ್ವರೂಪ ಪ್ರಕಟಣೆಯಾಗಿದೆ. ಮಹತ್, ಅಹಂಕಾರ, ಬುದ್ಧಿ, ಮನಸ್ಸು, ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ, ಶಬ್ದ, ರಸ, ರೂಪ, ಸ್ಪರ್ಶ, ಗಂಧ ಎಂಬ ವಿಷಯವಸ್ತುಗಳು ಮತ್ತು ಪಂಚಮಹಾಭೂತಗಳು ಇವುಗಳು ಜಡ ಪ್ರಕೃತಿಯ ಪರಿವರ್ತನಗಳಾಗಿವೆ. ಪರಿವರ್ತನೆಯ ಪೂರ್ವದಲ್ಲಿ ಇವು ಸೂಕ್ಷ್ಮಪ್ರಕೃತಿಯಲ್ಲಿರುತ್ತವೆ. ಪರಮಾತ್ಮನು ಜಗತ್ತಿನ ಸೃಷ್ಟಿಗೆ ನಿಮಿತ್ತಕಾರಣನಾಗಿದ್ದು ಪ್ರಕೃತಿಯು ಜಗತ್ತಿನ ಸೃಷ್ಟಿಗೆ ಮೂಲದ್ರವ್ಯ ಆಗಿರುತ್ತದೆ. ಹೀಗೆ ಪರಮಾತ್ಮನಿಂದಾಗಿ ಉತ್ಪತ್ತಿಯಾದ ಜಗತ್ತು ಸತ್ಯವಾಗಿರುತ್ತದೆ.

**ಜೀವ :** "ಜೀವ ಎಂದರೆ, ಜೀವನದ ಸುಖವನ್ನೂ ದುಃಖಗಳನ್ನೂ ಅನುಭವಿಸುತ್ತಾ ಬಂಧನಕ್ಕೆ ಒಳಗಾದವನೂ ಮತ್ತು ಮುಕ್ತಿಗೆ ಅರ್ಹನೂ, ಎಲ್ಲಾ ಸಂದರ್ಭಗಳಲ್ಲಿ 'ನಾನು ಇದ್ದೇನೆ' ಎಂಬ ಅರಿವು ಇರುವವನೇ ಆಗಿರುತ್ತಾನೆ" ಎಂಬುದಾಗಿ ದ್ವೈತಮತದ ಸಿದ್ಧಾಂತವಾಗಿರುತ್ತದೆ. ಜೀವರುಗಳು ಅಸಂಖ್ಯಗಳಾಗಿದ್ದು ಅನಾದಿಯಾಗಿರುವುವು ಮಾತ್ರವಲ್ಲದೆ ಪರಸ್ಪರ ಭೇದದಿಂದ ಕೂಡಿದ್ದು ಪರಮಾತ್ಮನ ಸೃಷ್ಟಿಗೆ-ನಿಯಂತ್ರಣಕ್ಕೆ ಒಳಗಾಗಿರುತ್ತವೆ. ಪರಮಾಣುಪ್ರದೇಶದಲ್ಲಿ ಅನಂತಜೀವರಾಶಿಗಳು ಈ ಪ್ರಪಂಚದಲ್ಲಿ ತುಂಬಿಕೊಂಡಿರುತ್ತವೆ. ಜೀವಿಗಳು ತಮ್ಮ ಪೂರ್ವಕರ್ಮಸಂಸ್ಕಾರಕ್ಕೆ ಅನುಗುಣವಾಗಿ ಜನ್ಮತಳೆಯುತ್ತವೆ. ಯೋಗ್ಯ ಜೀವಿಗಳು ಸ್ವತಃ ಆನಂದಸ್ವರೂಪರು ಆಗಿದ್ದು ಪರಮಾತ್ಮನಿಂದ ದೇಹಯೋಗರೂಪವಾದ ಉತ್ಪತ್ತಿ ಉಳ್ಳವರಾಗಿರುತ್ತಾರೆ. ಪೂರ್ವಕರ್ಮ ಮತ್ತು ಸಂಸ್ಕಾರಕ್ಕೆ ಅನುಗುಣವಾಗಿ ಶರೀರಧಾರಿಗಳಾಗಿ, ಅನುಕ್ರಮವಾಗಿ ಸುಃಖದುಃಖಗಳನ್ನು ಜೀವರು ಅನುಭವಿಸಬೇಕಾಗುತ್ತದೆ.

ಜೀವಾತ್ಮನು ಶರೀರಿಯ ಹೃದಯಸ್ಥನಾಗಿದ್ದಾನೆ. ಆದರೂ ಶರೀರವನ್ನೆಲ್ಲಾ ವ್ಯಾಪಿಸಿರುತ್ತಾನೆ. ಜಗತ್ತಿನ ಸರ್ವ ಆಗುಹೋಗುಗಳೂ ಪರಮಾತ್ಮನಿಂದಲೇ ಆಗುತ್ತವೆ ಎಂಬುದು ನಿಜವಾದರೂ ಅದನ್ನು ಅರಿಯದೆ ಸರ್ವಸ್ವವೂ ತನ್ನಿಂದಲೇ ಆಗುತ್ತದೆ ಎಂದು ಜೀವನು ಭಾವಿಸುವುದೇ ಅವಿದ್ಯೆ. ಈ ಅವಿದ್ಯೆಯೇ ಜೀವನ ಸಂಸಾರಬಂಧನಕ್ಕೆ ಕಾರಣ. ಅಲ್ಲದೆ ಅವನ ಸ್ವಭಾವವು ಜ್ಞಾನವಾಗಿದೆಯಾದರೂ ಸ್ವಭಾವ ಅಜ್ಞಾನದಿಂದ ಜೀವನು ಈ ಜಗತ್ತಿನಲ್ಲಿ ವ್ಯವಹರಿಸುತ್ತಾನೆ. ಈ ಸ್ವಭಾವ ಅಜ್ಞಾನದಿಂದ ಸಂಸಾರ ಬಂಧನಕ್ಕೆ ಕಾರಣವಾಗಿದೆ.

ಜೀವಿಗಳಲ್ಲಿ ಪರಸ್ಪರ ಭೇದವಿದೆ. ಹಾಗೆಯೇ ಜಗತ್ತಿನಲ್ಲಿ ಮುಖ್ಯವಾಗಿ ಜೀವನಿಗೂ ಪರಮಾತ್ಮನಿಗೂ ಎಂಬಂತೆ ಪಂಚವಿಧದ ಭೇದಗಳಿವೆ. ಅವು ಯಾವುವೆಂದರೆ :

(೧) ಜೀವ ಮತ್ತು ಜೀವರ ಪರಸ್ಪರ ಭೇದ.

(೨) ಜೀವ ಮತ್ತು ಈಶ್ವರ ಭೇದ.

(೩) ಜೀವನಿಗೂ ಮತ್ತು ಜಗತ್ತಿಗೂ ಇರುವ ಭೇದ.

(೪) ಜಡ ಮತ್ತು ಜಡಕ್ಕೂ ಇರುವ ಭೇದ.

(೫) ಜಡಕ್ಕೂ ಮತ್ತು ಈಶ್ವರನಿಗೂ ಇರುವ ಭೇದ.

ಈ ಐದು ಭೇದಗಳನ್ನು ಪಂಚಭೇದ ಅಥವಾ ಭೇದಪಂಚಕ ಎಂದು ಕರೆಯಲಾಗಿದೆ. ಅಧೀನಚೇತನರಲ್ಲಿ (ಜೀವರುಗಳಲ್ಲಿ) ಮುಖ್ಯವಾಗಿ ಮೂರು ವಿಧಗಳು :

(೧) ನಿತ್ಯಮುಕ್ತರು, (೨) ಮುಕ್ತರು, (೩) ಬದ್ಧರು.

ನಿತ್ಯಮುಕ್ತರೆಂದರೆ ಸಂಸಾರಕ್ಕೆ ಸಿಲುಕದ ಚೇತನಗಳು ಎಂದು ತಾತ್ಪರ್ಯ. ಉದಾ : ಶ್ರೀಲಕ್ಷ್ಮೀದೇವಿ.

ಮುಕ್ತರೆಂದರೆ ಸಂಸಾರಕ್ಕೆ ಸಿಲುಕಿ ಶ್ರೀಹರಿಯ ಕೃಪೆಯಿಂದ ಮುಕ್ತರಾದವರು. ಉದಾ : ಮಹಾಮುನಿಗಳು, ದೇವತೆಗಳು, ಋಷಿಗಳು, ಮನುಷ್ಯರು ಮತ್ತು ಪಿತೃಗಳು.

ಬದ್ಧರು : ಸಂಸಾರಚಕ್ರದಲ್ಲಿ ಸಿಲುಕಿ ಸುಖದುಃಖಗಳನ್ನು ಜೀವನದಲ್ಲಿ ಅನುಭವಿಸುತ್ತಿರುವವರು.

ಬದ್ಧಜೀವರಲ್ಲಿ ಎರಡು ಭಾಗಗಳಿವೆ. ಅವು ಯಾವುವೆಂದರೆ :

(೧) ಮುಕ್ತಿಯೋಗ್ಯರು, (೨) ಮುಕ್ತಿಗೆ ಅಯೋಗ್ಯರು.

ಮುಕ್ತಿಗೆ ಅಯೋಗ್ಯರಲ್ಲಿ ಪುನಃ ಎರಡು ವಿಭಾಗಗಳಿವೆ :

(೧) ನಿತ್ಯಸಂಸಾರಿಗಳು : ಸಂಸಾರಚಕ್ರದಲ್ಲಿ ಪುನಃಪುನಃ ಸಿಲುಕಿ ಜೀವನದ ಅನುಭವಕ್ಕೆ ಪಾತ್ರರಾಗುವವರೇ ನಿತ್ಯಸಂಸಾರಿಗಳು. ಇವರು ರಾಜಸಿಕ ಜೀವಿಗಳು. ಇವರು ಅಸಂಖ್ಯಾತರು.

(೨) ತಮೋಯೋಗ್ಯರು : ತಮೋಯೋಗ್ಯರಲ್ಲಿ ದೈತ್ಯ, ರಾಕ್ಷಸ, ಪಿಶಾಚ ಮತ್ತು ಮನುಷ್ಯಾಧಮ ಎಂಬ ನಾಲ್ಕು ಪ್ರಕಾರಗಳಿವೆ. ಇವರು ಪುನಃಪುನಃ ನರಕಕ್ಕೇ ತೆರಳಿ ಅತ್ಯಂತ ಕಠೋರವಾದ ನರಕದ ಅನುಭವವನ್ನೇ ಪಡೆಯುತ್ತಿರುತ್ತಾರೆ. ಇವರು ತಮೋಗುಣಿಗಳು.

ಮೋಕ್ಷ : ಮೋಕ್ಷವು ಮಾನವನ ಮಹೋನ್ನತವಾದ ಪುರುಷಾರ್ಥವಾಗಿದೆ. ಮೋಕ್ಷಪ್ರಾಪ್ತಿಯಾದಾಗ ಜೀವನು ಭಗವಂತನಲ್ಲಿ ಐಕ್ಯವಾಗುವುದಿಲ್ಲ. ಜೀವನು ತನ್ನ ಸ್ವಭಾವ ಜ್ಞಾನವನ್ನು ಪಡೆಯುತ್ತಾನೆ. ದುಃಖಲೇಶಸ್ಪರ್ಶವಿಲ್ಲದೆ ಸ್ವಸ್ವರೂಪಸುಖಾನುಭವವೇ ಮೋಕ್ಷ ಎಂದು ದ್ವೈತಸಿದ್ಧಾಂತದಲ್ಲಿ ಹೇಳಲಾಗಿದೆ. ಮೋಕ್ಷ ಲಭಿಸಿದನಂತರ ಜೀವನು ಸಂಸಾರದುಃಖಗಳಿಂದ ವಿಮುಕ್ತನಾಗುತ್ತಾನೆ. ಮೋಕ್ಷ ಲಭ್ಯವಾಗಲು ಭಗವಂತನ ಅನುಗ್ರಹ ಬೇಕು. ಭಗವಂತನ ಅನುಗ್ರಹ ಲಭ್ಯವಾಗಲು ಸಾಧನೆ ಬೇಕು. ಸಾಧನೆ ಸಾಗಲು ಸ್ವಪ್ರಯತ್ನ ಬೇಕು. ಮೋಕ್ಷದಲ್ಲಿ ಜೀವರುಗಳ ಸಾಧನೆ–ಅನುಷ್ಠಾನಗಳಿಗೆ ತಕ್ಕಂತೆ ಮುಕ್ತಿಯ ಆನಂದ ಲಭಿಸುತ್ತದೆ. ಹೀಗೆ ಮುಕ್ತಿಯಲ್ಲಿ ಜೀವರುಗಳಿಗೆ ವ್ಯಕ್ತಿತ್ವಕ್ಕೆ ಅನುಗುಣವಾಗಿ ಅವರು ಅನುಭವಿಸುವ ಆನಂದದಲ್ಲಿ ತಾರತಮ್ಯವಿವೆ. ಪಾತ್ರೆಗಳಲ್ಲಿ ಆಳತೆ, ಪ್ರಮಾಣಗಳ ವ್ಯತ್ಯಾಸವಿದ್ದರೂ ಎಲ್ಲಾ ಪಾತ್ರೆಗಳಲ್ಲಿ ನೀರನ್ನು ತುಂಬಿಸಿದಾಗ ಪ್ರತಿಯೊಂದು ಪಾತ್ರೆಯೂ ಪೂರ್ಣವಾಗಿರುವಂತೆ, ಜೀವರುಗಳಲ್ಲಿ ವ್ಯತ್ಯಾಸವಿದ್ದರೂ ಅವರು ಮುಕ್ತಿಹೊಂದಿದಾಗ ಅವರವರ ಯೋಗ್ಯತೆಗೆ ತಕ್ಕಂತೆ ಪೂರ್ಣ ಆನಂದವುಳ್ಳವರಾಗಿರುತ್ತಾರೆ.

### ಮೋಕ್ಷಕ್ಕೆ ಅನುಕೂಲವಾದ ಸಾಧನೆ

ಮೋಕ್ಷ ಪಡೆಯಲು ಸಾಧನೆ ಅವಶ್ಯ. ಸಾಧನೆಯ ಮೊದಲ ಹಾಗೂ ಮೂಲ ಶಕ್ತಿಯೇ ವೈರಾಗ್ಯ. ದೇಹಾತ್ಮವಿವೇಕ ಮತ್ತು ಜೀವ–ಈಶ್ವರವಿವೇಕದಿಂದ ಕೂಡಿದ ವೈರಾಗ್ಯವೇ ನಿಜವಾದ ವೈರಾಗ್ಯ. ಜೀವ–ಈಶ್ವರ ವಿವೇಕವೇ ಜ್ಞಾನ. ಜ್ಞಾನವೈರಾಗ್ಯ ಗಳಿಂದ ಕರ್ಮವನ್ನು ಮಾಡುವಾಗ ಭಕ್ತಿ ಉಂಟಾಗುತ್ತದೆ. ಭಕ್ತಿ ಮತ್ತು ಜ್ಞಾನ ಬೇರೆಯಲ್ಲ, ಅವು ಒಂದೇ ಪ್ರತಿಪಾದನೆಯ ಬೇರೆಬೇರೆ ಮುಖಗಳಷ್ಟೆ. ಭಕ್ತಿಯೇ ಮುಕ್ತಿಗೆ ಸಾಧನ. ಹಾಗಿದ್ದರೂ ಭಕ್ತಿಯು ಸಾಧನಮಾತ್ರವಾಗಿರದೆ ಸಾಧನೆಯ ಕೊನೆಯೂ ಆಗಿರುತ್ತದೆ. ಸಾಧನೆಯ ಮೊದಲ ಹೆಜ್ಜೆ ವೈರಾಗ್ಯವಾದರೆ ವೈರಾಗ್ಯಯುಕ್ತ ನಾಗಿ ಸಾಧನೆ ಮಾಡುವುದೇ ಉಪಾಸನೆ. ಗುರುಭಕ್ತಿ, ಗುರುಕುಲವಾಸ, ಶಾಸ್ತ್ರಾಧ್ಯಯನ ಸಂಪತ್ತಿ. ಸತ್‌ಶಾಸ್ತ್ರಶ್ರವಣ, ಮನನ, ವೈರಾಗ್ಯ, ಶಮಾದಿ ಗುಣಸಂಪತ್ತುಗಳು, ಪಂಚ ಭೇದಜ್ಞಾನ, ಪರಮಾತ್ಮಭಕ್ತಿ, ಸರ್ವಕರ್ಮಸಮರ್ಪಣ, ಶರಣಾಗತಿ ಇವುಗಳೆಲ್ಲ ಉಪಾಸನೆ–ಸಾಧನೆಗಳಿಗೆ ನೆರವಾಗುವ ಅಂಶಗಳು. ಗುರುಮಾರ್ಗದರ್ಶನ, ಶ್ರೀಹರಿಯ ಕೃಪೆ ಇವುಗಳು ಸಾಧನೆಗೆ ಹಾಗೂ ಸಿದ್ಧಿಗೆ ಅತ್ಯಂತ ಅಗತ್ಯ.

ಪರಮಪದ, ವೈಕುಂಠ, ಶ್ವೇತದ್ವೀಪ—ಇವುಗಳು ಪವಿತ್ರವೂ ಆನಂದಮಯವೂ ಮಂಗಳಕರವೂ ಆದ ಮೋಕ್ಷದ ಪರಮಪದವಿಯ ಸ್ಥಾನಗಳು. ವೈಕುಂಠವು ಶ್ರೀಹರಿಯ ಮಂಗಳಕರವಾದ ದಿವ್ಯಧಾಮ. ಜೀವರು ಅವರವರ ಸಾಧನೆ–ಯೋಗ್ಯತೆಗಳಿಗೆ ಅನುಸಾರ ವಾಗಿ ಮುಕ್ತಿಯನ್ನು ಪಡೆದು ಈ ಒಂದೊಂದು ಸ್ಥಳದಲ್ಲಿ ಇದ್ದು ದಿವ್ಯವಾದ ಮೋಕ್ಷಾ ನಂದವನ್ನು ಅನುಭವಿಸುತ್ತಿರುತ್ತಾರೆ.

ಹೀಗೆ ದ್ವೈತಮತವು ಬ್ರಹ್ಮ–ಜೀವ–ಜಗತ್ತು ಇವುಗಳ ಒಳಗೆ ಭೇದವನ್ನು ಹೇಳಿ ಮುಕ್ತಿಗೆ ಸುಸೂತ್ರವಾದ ಅನುಷ್ಠಾನಮಾರ್ಗವನ್ನು ಸೂಚಿಸಿರುತ್ತದೆ. ಕರ್ಮ, ಜ್ಞಾನ, ಭಕ್ತಿಗಳನ್ನು ಬೇರೆ ಬೇರೆ ಎಂದು ಹೇಳದೆ ಮುಕ್ತಿಗೆ ಒಯ್ಯುವ ಒಂದೇ ಹಾದಿಯ ಮೂರು ಘಟ್ಟಗಳು ಎಂದು ಹೇಳಿರುತ್ತದೆ.

### ಮತತ್ರಯಗಳ ಸಂಗ್ರಹ

ವೇದಾಂತದರ್ಶನದಿಂದ ಹುಟ್ಟಿಕೊಂಡ ಸುಪ್ರಸಿದ್ಧ ಮತತ್ರಯಗಳಾದ ಅದ್ವೈತ, ವಿಶಿಷ್ಟಾದ್ವೈತ, ದ್ವೈತಮತಗಳ ಸಿದ್ಧಾಂತಗಳನ್ನು ಸಂಕ್ಷೇಪವಾಗಿ ಹೀಗೆ ಹೇಳಬಹುದು :

(೧) ಅದ್ವೈತಮತದ ಪ್ರಕಾರವಾಗಿ ಪರಬ್ರಹ್ಮನು ನಿರ್ಗುಣನಿರಾಕಾರನೂ ನಿಧರ್ಮ ಕನೂ ಆಗಿರುತ್ತಾನೆ. ಜಗತ್ತಿನ ದೃಷ್ಟಿಯಿಂದ ಭಗವಂತನಾಗಿ ಸಗುಣಸಾಕಾರನಾಗಿರುತ್ತಾನೆ. ಅವನೇ ಸಗುಣಬ್ರಹ್ಮ ಎಂದೆನಿಸಿಕೊಳ್ಳುತ್ತಾನೆ. ಪರಬ್ರಹ್ಮನು ನಾವು ಗ್ರಹಿಸುವ ಎಲ್ಲಾ ಪ್ರಮಾಣಗಳಿಗಿಂತ ಅತೀತನಾಗಿರುತ್ತಾನೆ. ಅವನು ಏಕಮೇವಾದ್ವಿತೀಯನೂ ಸಚ್ಚಿದಾ ನಂದಾತ್ಮಕನೂ ಆಗಿರುತ್ತಾನೆ.

ವಿಶಿಷ್ಟಾದ್ವೈತಮತದ ಪ್ರಕಾರವಾಗಿ ಪರಬ್ರಹ್ಮನು ಪರಿಪೂರ್ಣನೂ, ವಿಶಿಷ್ಟಗುಣ ಗಳುಳ್ಳವನೂ ಆಗಿದ್ದು ಸದಾ ಸಾಕಾರನಾಗಿರುತ್ತಾನೆ. ಜಗತ್ತು ಅವನ ಶರೀರವಾಗಿರುತ್ತದೆ.

ದೇವರು ಸರ್ವರ ಅಂತರ್ಯಾಮಿಯೂ ಸರ್ವಜ್ಞನೂ ಸರ್ವಶಕ್ತನೂ ಆಗಿರುತ್ತಾನೆ. ಅವನು ಅಪ್ರಾಕೃತ ದಿವ್ಯಮಂಗಳದೇಹಧಾರಿಯಾಗಿರುತ್ತಾನೆ.

ವಿಶಿಷ್ಟಾದ್ವೈತಮತದ ಪ್ರಕಾರವಾಗಿ ಜಗತ್ತು ಮಿಥ್ಯೆಯಲ್ಲ. ಎಲ್ಲಾ ದೃಷ್ಟಿಗಳಿಂದಲೂ ಸತ್ಯವಾದುದಾಗಿದೆ. ಆದರೆ ಜಗತ್ತು ಭಗವಂತನ ಪ್ರಕಾರ(ಶರೀರ)ವಾಗಿದ್ದು ಅವನು ಜಗತ್ತಿನ ಸರ್ವವ್ಯಾಪಾರಗಳಿಂದ ಸ್ವತಂತ್ರನಾಗಿ ಅದರ ನಿಯಾಮಕನಾಗಿರುತ್ತಾನೆ. ಆದರೆ ಜಗತ್ತು ಭಗವಂತನಿಂದ ಬೇರೆಯಲ್ಲ. ದ್ವೈತಮತದ ಪ್ರಕಾರವಾಗಿ ಜಗತ್ತು ಸತ್ಯ, ಭಗವಂತನೂ ಸತ್ಯ. ಜಗತ್ತು ಭಗವಂತನಿಂದ ನಿಶ್ಚಯವಾಗಿಯೂ ಬೇರೆಯೇ ಆಗಿದ್ದು ಭಗವಂತನಿಗೆ ಅಧೀನವಾಗಿರುತ್ತದೆ.

ದ್ವೈತಮತದ ಪ್ರಕಾರ ಭಗವಂತನು ಸರ್ವಶಕ್ತನೂ ಸರ್ವೋತ್ತಮನೂ ಆಗಿದ್ದು ಜೀವ–ಜಗತ್ತುಗಳ ನಿಮಿತ್ತಕಾರಣನಾಗಿದ್ದು ಅವುಗಳಿಂದ ಪ್ರತ್ಯೇಕನಾಗಿರುತ್ತಾನೆ; ಅಪ್ರಾಕೃತ ಜ್ಞಾನಾನಂದಾತ್ಮಕ ದೇಹವುಳ್ಳವನಾಗಿರುತ್ತಾನೆ.

(೨) ಅದ್ವೈತಮತದ ಪ್ರಕಾರವಾಗಿ ಜಗತ್ತು ಸಾಪೇಕ್ಷಿಕ ಸತ್ಯ ಎಂದರೆ ವ್ಯವಹಾರದಲ್ಲಿ ಮಾತ್ರ ಸತ್ಯವಾದುದಾಗಿದೆ; ಪಾರಮಾರ್ಥಿಕವಾಗಿ ಮಿಥ್ಯೆಯಾಗಿದೆ. ಕಾಣುವ ನಾಮ, ರೂಪಗಳೆಲ್ಲವೂ ಮಾಯಾಕಲ್ಪಿತವಾದವುಗಳು. ಜೀವನಿಗೆ ತನ್ನ ಜೀವತ್ವದ ಅರಿವು ಇರುವ ತನಕ ಮಾತ್ರ ಜಗತ್ತು ಸತ್ಯ. ಬ್ರಹ್ಮಸಾಕ್ಷಾತ್ಕಾರವಾದಾಗ ಎಲ್ಲವೂ ಬ್ರಹ್ಮ ಎಂಬ ಅರಿವಾಗಿ ಭೇದಗಳೆಲ್ಲಾ ಅಳಿದು ಜೀವನು ಸಚ್ಚಿದಾನಂದಸ್ವರೂಪನಾದ ಬ್ರಹ್ಮನೇ ಆಗುತ್ತಾನೆ. ಉಪಾಧಿಗಳು ಇರುವ ತನಕ ಜೀವನೂ ಬ್ರಹ್ಮನೂ ಬೇರೆ ಎಂದು ಇರುವುದಾಗಿದೆಯೇ ವಿನಾ ಮೂಲತಃ ಜೀವ–ಬ್ರಹ್ಮ ಎಂಬ ಭೇದವೇ ಇಲ್ಲ. ಇದಕ್ಕೆ ಸುಷುಪ್ತಿ ಅವಸ್ಥೆಯೇ ದೃಷ್ಟಾಂತ. ಇರುವುದೆಲ್ಲವೂ ಬ್ರಹ್ಮವೇ ವಿನಾ ಬೇರೇನೂ ಇಲ್ಲ. ಹಾಗಾಗಿ ಜೀವ–ಜಗತ್ತು ಎನ್ನುವುದು ಪಾರಮಾರ್ಥಿಕವಾಗಿ ಇಲ್ಲವೇ ಇಲ್ಲ. ಹೀಗೆ ಜಗತ್ತು ಪಾರಮಾರ್ಥಿಕ ದೃಷ್ಟಿಯಿಂದ ಸತ್ಯವಲ್ಲ, ವ್ಯವಹಾರ ದೃಷ್ಟಿಯಿಂದ ಮಾತ್ರ ಸತ್ಯ.

(೩) ಅದ್ವೈತಮತದ ಪ್ರಕಾರವಾಗಿ ಜೀವಭಾವವು ಸಾಪೇಕ್ಷವಾಗಿ, ವ್ಯಾವಹಾರಿಕವಾಗಿ ಮಾತ್ರ ಸತ್ಯ. ಶರೀರ, ಕೋಶಗಳೆಂಬ ಉಪಾಧಿಗಳಿಗೆ ಜೀವವು ತಾನು ಒಳಗಾಗಿರುವನು ಎಂಬ ಅನುಭವ ಇರುವವರೆಗೆ ಅದಕ್ಕೆ ಪ್ರತ್ಯೇಕತೆ ಇದೆ. ಉಪಾಧಿಗಳು ಬ್ರಹ್ಮಜ್ಞಾನದಿಂದಾಗಿ ಇಲ್ಲವೆಂದಾಗ ಜೀವನಿಗೆ ತನ್ನ ನಿಜಸ್ವರೂಪವಾದ ಬ್ರಹ್ಮದ ಅರಿವಾಗಿ ಜೀವ-ಬ್ರಹ್ಮ ಭೇದವೇ ಇಲ್ಲ ಎಂದು ಅನುಭವಕ್ಕೆ ಬರುವುದು. ಪಾರಮಾರ್ಥಿಕವಾಗಿ ಇರುವುದು ಒಂದೇ—ಅದೇ ಬ್ರಹ್ಮ, ಅದೇ ಸಚ್ಚಿದಾನಂದವಾದ ಬ್ರಹ್ಮ.

ವಿಶಿಷ್ಟಾದ್ವೈತಮತದ ಪ್ರಕಾರ ಪ್ರತಿಯೊಂದು ಜೀವವೂ ಸತ್ಯವಾಗಿದೆ. ಮಾತ್ರವಲ್ಲದೆ ಸದಾಕಾಲಕ್ಕೂ ಭಗವಂತನು ಜೀವಿಗಳ ಅಂತರ್ಯಾಮಿಯಾಗಿರುತ್ತಾನೆ. ಜೀವಿಗಳು ಅಸಂಖ್ಯ ಮತ್ತು ಅನಾದಿಯಾಗಿದ್ದು ಭಗವಂತನ ನಿಯಂತ್ರಣಕ್ಕೆ ಒಳಗಾಗಿವೆ. ಜೀವಿಗಳ ಒಳಗೆ ಪರಸ್ಪರ ಸತ್ವಮೂಲದಲ್ಲಿ ವ್ಯತ್ಯಾಸವಿರುವುದಿಲ್ಲ.

ದ್ವೈತಮತದ ಪ್ರಕಾರ ಜೀವರುಗಳು ಅಸಂಖ್ಯ ಮತ್ತು ಅನಾದಿಯಾಗಿರುವರು. ಜೀವರುಗಳೆಲ್ಲಾ ಭಗವಂತನಿಂದ ಬೇರೆಯೇ ಆಗಿದ್ದು ಯಾವ ಕಾಲಕ್ಕೂ ಅವನೊಡನೆ

ಒಂದಾಗುವುದಿಲ್ಲ. ಜೀವಿಗಳ ಒಳಗೆ ಪರಸ್ಪರ ಭೇದವಿದೆ. ಭಗವಂತನು ಜೀವಿಗಳ ಅಂತರ್ಯಾಮಿಯಾಗಿರುತ್ತಾನೆ.

(೪) ಅದ್ವೈತಮತದ ಪ್ರಕಾರ ಮೋಕ್ಷ ಎಂದರೆ ಜೀವನಿಗೆ ಸಂಸಾರಬಂಧನದಿಂದ ಬಿಡುಗಡೆ ಮಾತ್ರವಲ್ಲದೆ ಮಾಯಾಜಗತ್ತಿನ ವಿಶಿಷ್ಟ ಬಂಧನದಿಂದ ಪೂರ್ತಿಯಾದ ಬಿಡುಗಡೆಯೂ ಆಗಿದ್ದು ತನ್ನ ನಿಜಸ್ವರೂಪದ ಅರಿವು ಆಗುವುದಾಗಿದೆ. ಮೋಕ್ಷವೆಂದರೆ ಹೊಸದಾಗಿ ಜೀವನು ಪ್ರಯತ್ನದಿಂದ ಸೃಷ್ಟಿಸುವ ಒಂದು ಪದವಿಯಲ್ಲ. ಮೋಕ್ಷವು ದೊರೆಯಲು ನಿಜವಾಗಿಯೂ ಜೀವನು ಬಂಧನಕ್ಕೆ ಒಳಗಾಗಿಯೇ ಇರುವುದಿಲ್ಲ. ಏಕೆಂದರೆ ಜೀವನು ಮೂಲತಃ ಬ್ರಹ್ಮನೇ ಆಗಿರುತ್ತಾನೆ. ಕೊರಳಲ್ಲೇ ಇರುವ ಸುವರ್ಣಹಾರವನ್ನು ಕೊರಡಿಯಲ್ಲಿ ಎಲ್ಲೆಲ್ಲಿಯೂ ಹುಡುಕಿ ಕೊನೆಗೆ ತನ್ನ ಕೊರಳಲ್ಲೇ ಅದನ್ನು ಕಾಣುವಂತೆ ಜೀವನು ಉಪಾಧಿಗೆ ಸಿಲುಕಿದಾಗಲೂ ಕೂಡ ಮೂಲತಃ ಬ್ರಹ್ಮನೇ ಆಗಿದ್ದು ಅಜ್ಞಾನವು ಜ್ಞಾನದಿಂದ ನಾಶವಾದಾಗ ತನ್ನ ನಿಜಸ್ವರೂಪದ ಅರಿವು ಆಗುತ್ತದೆ. ಇದೇ ಮೋಕ್ಷ. ಜೀವನು ದೇಹಧಾರಿಯಾಗಿರುವಾಗ ಎಂದರೆ ಉಪಾಧಿಗಳಿಗೆ ಒಳಗಾಗಿರುವಾಗಲೇ ಜ್ಞಾನದ ಸಹಾಯದಿಂದ ಮೋಕ್ಷವನ್ನು ಅನುಭವಿಸಲು ಸಾಧ್ಯವಿದೆ. ಅದೇ ಜೀವನ್ಮುಕ್ತಿ. ದೇಹವು ಅಳಿದಾಗ ಜೀವನು ವಿದೇಹಮುಕ್ತಿಯನ್ನು ಪಡೆಯುತ್ತಾನೆ. ದೇಹಸಹಿತವಾದ ಮುಕ್ತಿ ಜೀವನ್ಮುಕ್ತಿಯಾದರೆ ದೇಹರಹಿತವಾದ ಮುಕ್ತಿ ವಿದೇಹಮುಕ್ತಿ. ಎರಡರಲ್ಲೂ ತತ್ತ್ವ ಒಂದೇ ಆಗಿರುತ್ತದೆ. ಜೀವನ್ಮುಕ್ತಿ ಮತ್ತು ವಿದೇಹಮುಕ್ತಿಗಳಲ್ಲಿ ಜೀವನು ಶಾಶ್ವತ ವಾದ ಸತ್ ಚಿತ್ ಆನಂದದಲ್ಲಿ ಲೀನವಾಗಿ ಸಚ್ಚಿದಾನಂದಸ್ವರೂಪನಾಗಿ ಏಕಮೇವಾ ದ್ವಿತೀಯವಾದ ಬ್ರಹ್ಮನೇ ಆಗುತ್ತಾನೆ.

ವಿಶಿಷ್ಟಾದ್ವೈತಮತದ ಪ್ರಕಾರವಾಗಿ ಮೋಕ್ಷ ಎಂದರೆ ಜೀವನು ಸಂಸಾರಬಂಧನ ದಿಂದ ಬಿಡುಗಡೆಯನ್ನು ಹೊಂದಿ ಪರಮಪದ ವೈಕುಂಠಲೋಕದಲ್ಲಿ ಭಗವಂತನೊಡನೆ ಸಮಾನವಾದ ಆನಂದವನ್ನು ಹೊಂದುವುದಾಗಿದೆ. ಜೀವನು ಭಗವಂತನಲ್ಲಿ ಒಂದಾಗುವು ದಿಲ್ಲ. ಬದಲು ದಿವ್ಯಾನಂದದಿಂದ ಕೂಡಿದ ಭಗವಂತನಿಂದ ಬೇರೆಯಾಗಿ ಉಳಿದು ಅವನ ಸೇವೆ–ದರ್ಶನಗಳ ಆನಂದದಿಂದ ಕೂಡಿರುತ್ತಾನೆ. ಜೀವನ್ಮುಕ್ತಿ ಎಂಬುದನ್ನು ವಿಶಿಷ್ಟಾ ದ್ವೈತಮತವು ಒಪ್ಪುವುದಿಲ್ಲ.

ದ್ವೈತಮತದ ಪ್ರಕಾರ ಮೋಕ್ಷ ಎಂದರೆ ಜೀವನಿಗೆ ತನ್ನ ಅನಾದಿ ಅಜ್ಞಾನವು ಹೋಗಿ ಸ್ವಭಾವಜ್ಞಾನವಾಗುವುದೇ ಆಗಿದ್ದು ಸಂಸಾರದ ಬಂಧನದಿಂದ ಬಿಡುಗಡೆ ಯಾಗಿದೆ. ಆದರೆ ಜೀವರು ಎಲ್ಲರೂ ಮುಕ್ತಿಗೆ ಅರ್ಹರಲ್ಲ. ಜೀವರ ಗುಣ-ಯೋಗ್ಯತೆ ಗಳಿಗೆ ಅನುಗುಣವಾಗಿ ಮುಕ್ತಿಯು ಪ್ರಾಪ್ತವಾಗುತ್ತದೆ. ಮುಕ್ತಿಪ್ರಾಪ್ತಿಯಾದನಂತರ ಜೀವನು ಭಗವಂತನಲ್ಲಿ ಲೀನವಾಗುವುದಿಲ್ಲ. ಭಗವಂತನಿಗಿಂತ ಬೇರೆಯೇ ಆಗಿ ಉಳಿಯು ತ್ತಾನೆ. ಮುಕ್ತಿಯ ಸುಖ–ಆನಂದಗಳನ್ನು ಜೀವನು ತನ್ನ ಗುಣ–ಯೋಗ್ಯತೆಗಳ ತಾರತಮ್ಯಕ್ಕನುಗುಣವಾಗಿ ಅನುಭವಿಸುತ್ತಾನೆ.

(೫) ಅದ್ವೈತಮತದ ಪ್ರಕಾರ ಗುರು, ಪೂಜೆ, ದೇವರು, ಶಾಸ್ತ್ರ, ವ್ರತ, ವರ್ಣಾ ಶ್ರಮಧರ್ಮ ಇತ್ಯಾದಿಗಳೆಲ್ಲ ವ್ಯವಹಾರದೃಷ್ಟಿಯಿಂದ ಅಗತ್ಯ ಹಾಗೂ ಸತ್ಯವಾಗಿವೆ

ಜೀವನು ತನ್ನ ನಿಜಸ್ವರೂಪವನ್ನು ತಿಳಿಯದೇ ಇರುವತನಕ ಈ ಜಗತ್ತೆಲ್ಲವೂ ಜೀವನಿಗೆ ಸತ್ಯವೇ ಆಗಿ ಕಾಣುತ್ತದೆ. ಆಗ ಜೀವನಿಗೆ ತನ್ನ ನಿಜವಾದ ಸ್ವರೂಪವನ್ನು ಅರಿಯಲು ಕರ್ಮ, ಭಕ್ತಿ ಇವುಗಳು ಅಗತ್ಯ. ಕರ್ಮ, ಭಕ್ತಿ ಇವುಗಳಿಂದ ಚಿತ್ತಶುದ್ಧಿಯಾಗಿ ಜ್ಞಾನ ದೊರೆಯಲು ಸಹಾಯವಾಗುತ್ತದೆ; ಜ್ಞಾನದಿಂದ ಮೋಕ್ಷ ಲಭಿಸುತ್ತದೆ—ಎಂಬುದು ಅದ್ವೈತಮತದ ನಿಲವು ಆಗಿರುತ್ತದೆ.

ವಿಶಿಷ್ಟಾದ್ವೈತಮತದ ಪ್ರಕಾರ ಕರ್ಮ ಮತ್ತು ಜ್ಞಾನ ಇವುಗಳು ಭಕ್ತಿಗೆ ಸಾಧನವಾಗಿದ್ದು ಭಕ್ತಿಯು ಮೋಕ್ಷಸಾಧನವಾಗಿರುತ್ತದೆ. ಈ ಸಿದ್ಧಾಂತದಲ್ಲಿ ಭಕ್ತಿಯೇ ಮೋಕ್ಷಕ್ಕೆ ಸಾಧನ ಎಂದಾಗಿರುವಂತೆ ಅಧಿಕಾರಭೇದದಿಂದ ಪ್ರಪತ್ತಿಯೂ ಮೋಕ್ಷಕ್ಕೆ ನೇರವಾಗಿ ಸಾಧನವಾಗಿರುತ್ತದೆ.

ದ್ವೈತಮತದ ಪ್ರಕಾರ ಕರ್ಮ, ಜ್ಞಾನ, ಭಕ್ತಿಗಳು ಬೇರೆಬೇರೆಯಾಗಿರದೆ ಮೋಕ್ಷ ಸಾಧನೆಯ ಒಂದೇ ಮಾರ್ಗದ ಮೂರು ಹಂತಗಳು. ಕರ್ಮ, ಜ್ಞಾನಗಳಿಂದಾಗಿ ಭಕ್ತಿ ಮೂಡಿ ಭಕ್ತಿಯಿಂದ ಮೋಕ್ಷ ಲಭಿಸುವುದಾಗಿದ್ದು, ಭಕ್ತಿಯಿಂದಲೇ ಪರಮಾತ್ಮನ ಅನುಗ್ರಹವಾಗಿ, ಅವನ ಪ್ರಸಾದದಿಂದ ಮುಕ್ತಿ ಆಗುತ್ತದೆ.

**ವೇದಾಂತದರ್ಶನದಿಂದ ಹುಟ್ಟಿದ ಇತರ ಮತಗಳು**

ಕಾಲವು ಸರಿದಂತೆ ವೇದಾಂತದರ್ಶನದಿಂದ ಈ ಮೂರು ಮತಗಳಲ್ಲದೇ ಇನ್ನೂ ಕೆಲವು ಮತಗಳು ಹುಟ್ಟಿಕೊಂಡವು. ಬಹುಮಟ್ಟಿಗೆ ಈ ಮತಗಳ ಒಳಗೆ ಪರಸ್ಪರ ಮಹತ್ತರವಾದ ವ್ಯತ್ಯಾಸಗಳು ಇಲ್ಲವಾದರೂ ತಾತ್ತ್ವಿಕವಾಗಿ ಕೆಲವು ವ್ಯತ್ಯಾಸಗಳು ಮಾತ್ರ ಇದ್ದೇ ಇವೆ. ಹೀಗೆ ಹುಟ್ಟಿಕೊಂಡ ಮತಗಳಲ್ಲಿ ಪ್ರಮುಖವಾದ ಮತಗಳು ಯಾವುವೆಂದರೆ :

(೧) ಶ್ರೀ ವಲ್ಲಭಾಚಾರ್ಯರ ಶುದ್ಧಾದ್ವೈತಮತ.
(೨) ಶ್ರೀ ನಿಂಬಾರ್ಕಾಚಾರ್ಯರ ಭೇದಾಭೇದಮತ.
(೩) ಶ್ರೀ ಕೃಷ್ಣಚೈತನ್ಯರ ಅಚಿಂತ್ಯಭೇದಾಭೇದಮತ.

ವಿಷ್ಣುವಿನ ಆರಾಧನೆ ಪೂಜೆಗಳ ಪರಂಪರೆಗೆ ಅಥವಾ ಸಂಪ್ರದಾಯಕ್ಕೆ ಸೇರಿದವರೆಲ್ಲರನ್ನೂ ಅವರೊಳಗೂ ಕೂಡ ಸೂಕ್ಷ್ಮವಾದ ತಾತ್ತ್ವಿಕ ಹಾಗೂ ಆಚಾರಸಂಬಂಧವಾದ ವ್ಯತ್ಯಾಸಗಳು ಇದ್ದರೂ ಕೂಡ ವೈಷ್ಣವರೆಂದೂ ಅವರ ಮತವನ್ನು 'ವೈಷ್ಣವ ಮತ' ಎಂದೂ ಕರೆಯಲಾಯಿತು.

ವೈಷ್ಣವಮತದ ಗುಂಪಿನಲ್ಲಿ ಸೇರಿದ ಮತಗಳು ಯಾವುವೆಂದರೆ :

(೧) ಶ್ರೀ ರಾಮಾನುಜಾಚಾರ್ಯರ ಶ್ರೀವೈಷ್ಣವಮತ (ವಿಶಿಷ್ಟಾದ್ವೈತಮತ)
(೨) ಶ್ರೀ ಮಧ್ವಾಚಾರ್ಯರ ಸದ್ವೈಷ್ಣವಮತ (ದ್ವೈತಮತ)
(೩) ಶ್ರೀ ರಾಮಾನಂದರ ಶ್ರೀರಾಮವೈಷ್ಣವಮತ (ಶ್ರೀರಾಮಾನಂದೀಯಮತ)
(೪) ಶ್ರೀ ವಲ್ಲಭಾಚಾರ್ಯರ ಶ್ರೀನಾಥವೈಷ್ಣವಮತ (ಶ್ರೀನಾಥಪಂಥ)
(೫) ಶ್ರೀ ನಿಂಬಾರ್ಕಾಚಾರ್ಯರ ಶ್ರೀಕೃಷ್ಣವೈಷ್ಣವಮತ (ಶ್ರೀನಿಂಬಾರ್ಕಪಂಥ)
(೬) ಶ್ರೀ ಕೃಷ್ಣಚೈತನ್ಯರ ಶ್ರೀರಾಧಾಕೃಷ್ಣವೈಷ್ಣವಮತ (ಶ್ರೀಚೈತನ್ಯಪಂಥ)

ಇದರಂತೆ ಶಿವನೇ ಸರ್ವೋತ್ತಮನು ಎಂದು ಹೇಳಿ ಶಿವನನ್ನು ಆರಾಧಿಸುವವರ ಪಂಗಡವೊಂದು ರೂಪುಗೊಂಡಿತು. ಆ ಪಂಥದವರ ಮತವನ್ನು ಶೈವಮತ ಎಂದು ಕರೆಯಲಾಗಿದೆ. ಶೈವಮತದಲ್ಲಿ (೧) ದ್ವೈತಪಾಶುಪತ, (೨) ದ್ವೈತ ಅದ್ವೈತ ಲಕುಲೀಶ ಪಾಶುಪತ, (೩) ದ್ವೈತಶೈವಸಿದ್ಧಾಂತ, (೪) ಶೈವವಿಶಿಷ್ಟಾದ್ವೈತ, (೫) ವೀರಶೈವ, (೬) ನಂದಿಕೇಶ್ವರಶೈವ, (೭) ರಸೇಶ್ವರಶೈವ, (೮) ಕಾಶ್ಮೀರಶೈವ ಎಂಬ ಎಂಟು ಪ್ರಭೇದಗಳಿವೆ. ತಮಿಳುನಾಡಿನಲ್ಲಿ, ಕಾಶ್ಮೀರದಲ್ಲಿ ಮತ್ತು ಕನ್ನಡನಾಡಿನಲ್ಲಿ ಶೈವಮತ ವನ್ನು ಅನುಸರಿಸುವವರು ವಿಪುಲಸಂಖ್ಯೆಯಲ್ಲಿದ್ದು ಆಯಾಯ ಪ್ರಾಂತ್ಯಗಳಲ್ಲಿ ಈ ಶೈವ ಮತಗಳು ಪ್ರಚಾರದಲ್ಲಿವೆ.

ದೇವರನ್ನು ಶಕ್ತಿ, ದೇವಿ, ಜಗನ್ಮಾತೆ ಎಂದು ಕರೆದು ದೇವಿಯೇ ಸರ್ವೋತ್ತಮಳು ಎಂದು ಪ್ರತಿಪಾದಿಸಿ ಪೂಜಿಸುವ ಮತವೊಂದು ಹುಟ್ಟಿ ಅದನ್ನು ತಂತ್ರಮತ, ಶಾಕ್ತಮತ ಎಂಬ ಹೆಸರುಗಳಿಂದ ಕರೆಯಲಾಗಿದೆ.

## ಶೈವಮತ

ಶಿವನನ್ನೇ ಪರಬ್ರಹ್ಮಸ್ವರೂಪನೆಂದು ಪರಿಗಣಿಸಿ ಶಿವನೇ ಸರ್ವೋತ್ತಮನೆಂದು ನಂಬಿ ಆರಾಧಿಸುವವರ ಮತವೇ ಶೈವಮತವಾಗಿರುತ್ತದೆ. ಶಿವನ ಆರಾಧನೆಯು ವೇದಕಾಲ ದಿಂದಲೇ ಸಾಗಿಬಂದಿದ್ದು ಈ ಬಗೆಗೆ ಯಜುರ್ವೇದದಲ್ಲಿನ ಶತರುದ್ರೀಯ ಅಧ್ಯಾಯವು ಉಜ್ವಲವಾದ ನಿದರ್ಶನವಾಗಿದೆ. ಶೈವಮತವು ಅತಿಪ್ರಾಚೀನವಾದುದು ಎಂಬುದಕ್ಕೆ ಮೊಹೆಂಜೋದಾರೋ ಮತ್ತು ಹರಪ್ಪ ಪಟ್ಟಣಗಳಲ್ಲಿ ಸಂಶೋಧನೆ ನಡೆಸಿದಾಗ ದೊರೆತ ಅವಶೇಷಗಳಲ್ಲಿ ಶಿವಲಿಂಗಗಳು ಇದ್ದದ್ದೇ ಸಾಕ್ಷ್ಯವಾಗಿದೆ. ಹಾಗೆಯೇ ಭಾರತದಲ್ಲಿ ಪ್ರಾಚೀನ ಕ್ಷೇತ್ರಗಳಾದ ಕಾಶಿ, ಕೇದಾರ, ಶ್ರೀಶೈಲ, ರಾಮೇಶ್ವರ, ಗೋಕರ್ಣ ಮೊದಲಾದ ಶೈವಕ್ಷೇತ್ರಗಳೂ ಶೈವಮತದ ಪ್ರಾಚೀನತೆಯನ್ನು ಮತ್ತು ಪ್ರಮುಖ ತೆಯನ್ನು ಸ್ಪಷ್ಟಪಡಿಸುತ್ತವೆ. ಪಶು ಎಂದರೆ ಜೀವರಿಗೆ ಒಡೆಯನಾದವನ ಕುರಿತಾದ ತತ್ತ್ವ, ಸಾಧನಾ ವಿವರಗಳನ್ನು ಒಳಗೊಂಡ ಮತವಾದುದರಿಂದ ಶೈವಮತಕ್ಕೆ ಪಾಶುಪತಮತ ಎಂಬ ಬೇರೊಂದು ಹೆಸರೂ ಪ್ರಚಾರದಲ್ಲಿದೆ.

ಶೈವಮತದಲ್ಲಿ ಪ್ರತಿಪಾದಿತವಾಗಿರುವ ತತ್ತ್ವಗಳು ವೇದೋಪನಿಷತ್ತುಗಳನ್ನೇ ಆಧರಿಸಿವೆಯಾದರೂ ನೇರವಾಗಿ ಅವುಗಳು ಈ ಮತದ ಆಧಾರಗ್ರಂಥಗಳಾಗಿರುವುದಿಲ್ಲ. ಶೈವಮತದ ಆಧಾರಗ್ರಂಥಗಳು ಯಾವುವೆಂದರೆ :

(೧) ಕಾಮಿಕಾದಿ ವಾತುಲಪರ್ಯಂತವಾದ 'ಇಪ್ಪತ್ತೆಂಟು ಶೈವಾಗಮ'ಗಳು.

(೨) ಶೈವಸಂತರ ಜೀವನಚರಿತಾಮೃತವಾಗಿರುವ 'ಪೆರಿಯಾಪುರಾಣ' ಎಂಬ ಗ್ರಂಥ.

(೩) ಶೈವಸ್ತೋತ್ರಸಂಗ್ರಹವಾಗಿರುವ 'ತಿರುಮುರೈ' ಎಂಬ ಗ್ರಂಥ.

(೪) ತಮಿಳುಭಾಷೆಯಲ್ಲಿರುವ ಶೈವಸಂತರ ಆಧ್ಯಾತ್ಮರೂಪಕಾರ್ಥವುಳ್ಳ ರಹಸ್ಯ ಬರಹಗಳು, ಸಂದೇಶಗಳು. ಉದಾ : 'ತಿರುವಾಚಕಮ್', 'ತೇವಾರಮ್' ಎಂಬ ತಮಿಳು ಗ್ರಂಥಗಳು.

(೫) ಮೇಕಂಡರ್ ಮಹರ್ಷಿಯವರ 'ಶಿವಜ್ಞಾನಬೋಧಮ್' ಎಂಬ ಗ್ರಂಥ.
(೬) ಅರುಳನಂದಿಯವರ 'ಶಿವಜ್ಞಾನಸಿದ್ಧಿಯಾರ್' ಎಂಬ ಗ್ರಂಥ.
(೭) ಉಮಾಪತಿ ಆಚಾರ್ಯರ ಉಪದೇಶಾತ್ಮಕ ಗ್ರಂಥಗಳು.
(೮) ಕಾಶ್ಮೀರಶೈವರ ಗ್ರಂಥಗಳು.

ಶೈವಸಿದ್ಧಾಂತಸಾರ: ಶಿವನೇ ಸರ್ವೋತ್ತಮನೂ ಸರ್ವಶಕ್ತನೂ ಪರಬ್ರಹ್ಮನೂ ಆಗಿರುತ್ತಾನೆ ಎಂಬುದು ಶೈವಸಿದ್ಧಾಂತದ ಮೊದಲ ಅಂಶವಾಗಿರುತ್ತದೆ. ಶಿವನು ಮಂಗಲನೂ ಪ್ರೇಮಸ್ವರೂಪನೂ ಸರ್ವಾಂತರ್ಯಾಮಿಯೂ ಆಗಿರುತ್ತಾನೆ. ಜೀವರುಗಳು ಶಿವಸ್ವರೂಪರೇ ಆಗಿದ್ದು ಶಿವನ ಸತ್ವವುಳ್ಳವರಾಗಿರುತ್ತಾರೆ. ಶಿವನು ಪತಿ ಎಂದರೆ ಒಡೆಯ. ಜೀವರುಗಳು ಪಶು ಎಂದರೆ ಒಡೆಯನ ಅಧೀನಕ್ಕೆ ಒಳಗಾದವರು. ಜೀವರುಗಳ ಬಂಧನವನ್ನು ಪಾಶ ಎಂದು ಕರೆಯಲಾಗಿದೆ. ಜನ್ಮಮೃತ್ಯುಗಳೆಂಬ ಸಂಸಾರ ಬಂಧನವೇ ಪಾಶ. ಶಿವನು ಜೀವರುಗಳ ಒಡೆಯನಾದ್ದರಿಂದ ಅವನು ಪಶುಪತಿ. ಜೀವನು ಪಾಶಕ್ಕೆ ಒಳಗಾಗಿರುವುದರಿಂದ ಪಶು ಎಂದು ಕರೆಯಲ್ಪಟ್ಟಿರುತ್ತಾನೆ. ಶಿವನು ಸೃಷ್ಟಿ, ಸ್ಥಿತಿ, ಸಂಹಾರ, ತಿರೋಧಾನ, ಅನುಗ್ರಹ ಎಂಬ ಪಂಚಕ್ರಿಯೆ ಉಳ್ಳವನಾಗಿದ್ದಾನೆ. ಈ ಜಗತ್ತು ಮೂವತ್ತಾರು ತತ್ತ್ವಗಳಿಂದ ಕೂಡಿದೆ. ಜಗತ್ತು, ಜೀವ, ಶಿವ ಎಲ್ಲವೂ ಸತ್ಯ. ಜಗತ್ತು ಶಿವನಿಂದಲೇ ಸೃಷ್ಟಿಯಾಗಲ್ಪಟ್ಟು ಶಿವನು ವಿಶ್ವಮಯನಾಗಿರುತ್ತಾನೆ. ಶಕ್ತಿಯು ಶಿವನ ಚೇತನವಾಗಿದ್ದು ಶಕ್ತಿಯ ಮೂಲಕ ಶಿವನು ತನ್ನ ಸೃಷ್ಟಿಲೀಲೆಯನ್ನು ನಡೆಸುತ್ತಾನೆ. ಶಿವನಿಗೂ ಶಕ್ತಿಗೂ ಭೇದವಿಲ್ಲ. ಬೆಂಕಿಯಲ್ಲಿ ಸುಡುವ ಶಕ್ತಿ ಸೇರಿದಂತೆ ಶಿವಶಕ್ತಿಯರ ಐಕ್ಯವಿರುತ್ತದೆ. ಜೀವರುಗಳು ಅನಂತ ಮತ್ತು ಸನಾತನವಾಗಿವೆ. ಪಾಶದಿಂದಾಗಿ ಜೀವಾತ್ಮನು ಬಂಧನಕ್ಕೆ ಒಳಗಾಗಿರುತ್ತಾನೆ. ಪಾಶವನ್ನು ಮಲ ಎಂದು ಕರೆಯುತ್ತಾರೆ. ಅಜ್ಞಾನವೇ ಬಂಧನ, ಜ್ಞಾನವೇ ಬಂಧನಿವೃತ್ತಿ. ಮಲದಲ್ಲಿ ಮೂರು ವಿಧ: ಆಣವ, ಮಾಯಾ ಮತ್ತು ಕಾರ್ಯ ಎಂಬವುಗಳು. ಜೀವನು ಈ ಮೂರು ವಿಧದ ಬಂಧನಕ್ಕೆ ಒಳಗಾಗಿ ಸಂಸಾರಕ್ಕೆ ಸಿಲುಕಿರುತ್ತಾನೆ. ಮೋಕ್ಷವಾಗಬೇಕಾದರೆ ಈ ಮೂರು ವಿಧದ ಮಲಗಳ ನಿವೃತ್ತಿಯಾಗಬೇಕು. ಮೋಕ್ಷ ಎಂದರೆ ಜೀವನು ಶಿವಸ್ವರೂಪ ಪಡೆದು ಶಿವತ್ವದಿಂದ ಕೂಡಿ ಶಿವನಲ್ಲಿ ನೆಲಸುವುದಾಗಿದೆ. ಮೋಕ್ಷ ದೊರೆತಾಗ ಜೀವನಿಗೆ ಶಿವತ್ವ ದೊರೆತರೂ ಶಿವೈಕ್ಯವುಂಟಾಗುವುದಿಲ್ಲ. ಜೀವನು ಸಕಲ ವಿಧದ ಬಂಧಗಳಿಂದ ನಿವೃತ್ತನಾಗಿ ಶಿವತ್ವದಿಂದ ಕೂಡಿ ಶಿವನಲ್ಲಿ ತನ್ನ ಪ್ರತ್ಯೇಕತೆಯನ್ನು ಉಳಿಸಿಕೊಂಡು ಶಿವಾನಂದದಿಂದ ಕೂಡಿರುತ್ತಾನೆ. ಇದನ್ನೇ ಮುಕ್ತಿ ಎಂದು ಕರೆಯಲಾಗಿದೆ.

ಮುಕ್ತಿಗೆ ಜೀವನು ಸರಿಯಾದ ರೀತಿಯಲ್ಲಿ ಸಾಧನೆಯನ್ನು ಮಾಡಬೇಕು. ತಪಸ್ಸು ಮತ್ತು ಶಿಸ್ತುಗಳಿಂದ ಕೂಡಿದ ಸಾಧನೆಯನ್ನು ಗುರುವಿನ ಸಹಾಯದಿಂದ ಮಾಡಬೇಕು. ಸಾಧಕನು ಸರಿಯಾದ ರೀತಿಯಲ್ಲಿ ಸಾಧನೆ ಮಾಡಿದಾಗ ಶಿವನ ಅನುಗ್ರಹಕ್ಕೆ ಪಾತ್ರನಾಗುತ್ತಾನೆ. ಶಿವಾನುಗ್ರಹವಿಲ್ಲದೆ ಮುಕ್ತಿ ದೊರೆಯಲಾರದು. ಸಾಧನೆಯ ಅಂಗಗಳು ಚರ್ಯ, ಕ್ರಿಯಾ ಮತ್ತು ಯೋಗ ಎಂದು ಮೂರು ವಿಧಗಳಾಗಿವೆ. ಶಿವದೀಕ್ಷೆ, ಶಿವಲಿಂಗಪೂಜೆ, ಶಿವಪಂಚಾಕ್ಷರಿಮಂತ್ರಜಪ, ಭಸ್ಮರುದ್ರಾಕ್ಷಿಧಾರಣ ಇವುಗಳೆಲ್ಲ ಸಾಧನೆಯ ಅಂಶ

ಗಳಾಗಿವೆ. ಶಿಸ್ತಿನಿಂದ ಕೂಡಿದ ಸಾಧನೆಯಿಂದ ಜ್ಞಾನ ಪ್ರಾಪ್ತಿಯಾದಾಗ ಜೀವನಿಗೆ ಶಿವತ್ವ ಅರ್ಥಾತ್ ಮೋಕ್ಷ ಲಭಿಸುತ್ತದೆ.

ಶೈವಮತದಲ್ಲಿ ಅನೇಕ ಒಳಭೇದಗಳಿದ್ದು ಕಾಶ್ಮೀರಶೈವ, ದ್ರಾವಿಡಶೈವ ಮತ್ತು ವೀರಶೈವ ಎಂಬುವುಗಳೇ ಮುಖ್ಯವಾದ ಮೂರು ಒಳಪ್ರಭೇದಗಳು. ಶೈವಧರ್ಮವನ್ನು ಅವಲಂಬಿಸಿ ತಮಿಳುನಾಡಿನ ಅರವತ್ತುಮೂರು ಮಂದಿ ಪುರಾತನರು ಕೃತಾರ್ಥರಾಗಿ ಜಗತ್ತಿಗೆ ಶೈವಮತದ ಸಂದೇಶಗಳ ಬೆಳಕನ್ನು ಬೀರಿದಂತೆ, ಕಾಶ್ಮೀರಶೈವಮತದ ಮತ್ತು ವೀರಶೈವಮತದ ಆಚಾರ್ಯಪುರುಷರು ಕೂಡ ಪ್ರಪಂಚಕ್ಕೆ ಆಯಾಯ ಮತದ ದಿವ್ಯ ಹಾಗೂ ಪವಿತ್ರವಾದ ಸಂದೇಶವನ್ನು ನೀಡಿರುತ್ತಾರೆ.

### ವೀರಶೈವಮತ

ವೀರಶೈವಮತವು ಶೈವಮತದಿಂದ ಒಡಮೂಡಿದ ಮತವಾಗಿದ್ದು ಅನೇಕ ಸ್ವತಂತ್ರ ಸಿದ್ಧಾಂತಗಳಿಂದ ಕೂಡಿರುತ್ತದೆ. ಈ ಮತದಲ್ಲಿ ಯೋಗ, ಜ್ಞಾನ ಮತ್ತು ಕ್ರಿಯೆ ಮೂರಕ್ಕೂ ಪ್ರಾಧಾನ್ಯ ಇದೆ. 'ಕ್ರಿಯಾಜ್ಞಾನಸಮಾಯುಕ್ತಂ ವೀರಶೈವಸ್ಯ ಲಕ್ಷಣಮ್' ಎಂಬ ಪ್ರಮಾಣವಚನವು ಈ ಅಂಶವನ್ನು ಸ್ಪಷ್ಟಪಡಿಸುತ್ತದೆ. ವೀರಶೈವಮತದಲ್ಲಿ ವೇದಾಂತತತ್ತ್ವಗಳು ಹಾಗು ವಿಶೇಷವಾದ ಉಪಾಸನಾವಿಧಾನಗಳೂ ಮಿಳಿತವಾಗಿರುತ್ತವೆ. ಹೀಗೆ ಜ್ಞಾನ ಮತ್ತು ಕ್ರಿಯೆಗಳ ಸಮ್ಮಿಳನವಾದ ಭಕ್ತಿಗೆ ವೀರಶೈವಮತದಲ್ಲಿ ಪ್ರಾಶಸ್ತ್ಯ. ಶಿವನೊಬ್ಬನೇ ಪರಬ್ರಹ್ಮ, ಶಿವನೊಬ್ಬನನ್ನೇ ಪೂಜಿಸಬೇಕು ಎಂಬ ಏಕ ದೇವತೋಪಾಸನೆಯು ವೀರಶೈವಮತದ ಮುಖ್ಯಲಕ್ಷಣವಾಗಿರುತ್ತದೆ.

ಶಿವನು ಲಿಂಗ, ಜೀವಿಗಳು ಅಂಗ. ಲಿಂಗಾಂಗಸಾಮರಸ್ಯವೇ ಗುರಿ. ಈ ಗುರಿಯನ್ನು ಸಾಧಿಸುವುದರಲ್ಲಿ ವೀರತನ ಉಳ್ಳವರು, ಸಾಹಸವುಳ್ಳವರು ವೀರಶೈವರು. ಎಂತಹ ಕಷ್ಟ ಬಂದರೂ ಶಿವನ ಆರಾಧನೆಯನ್ನು ಎಂದರೆ ಲಿಂಗಪೂಜೆಯನ್ನು, ಧರ್ಮಾಚರಣೆಯನ್ನು ಬಿಡದೆ ಎಲ್ಲವನ್ನೂ ವೀರತನದಿಂದ ಎದುರಿಸಿ ಆಚರಿಸಬೇಕೆಂಬ ಅಂಶವು 'ವೀರ' ಶಬ್ದದಿಂದ ಸೂಚಿತವಾಗಿದೆ. ಕೀಳುಕರ್ಮಗಳನ್ನು ತ್ಯಜಿಸಿ ದೃಢಮನದಿಂದ ಶಿವಭಕ್ತಿ-ಶಿವಜ್ಞಾನಗಳಿಂದ ಕೂಡಿರುವುದೇ 'ವೀರಶೈವ' ಎಂದು ಅರ್ಥವನ್ನು ಹೇಳುವುದೂ ಇದೆ. 'ವಿ' ಎಂಬುದು ಲಿಂಗಾಂಗಸಾಮರಸ್ಯರೂಪ, ಶಿವಜೀವೈಕ್ಯವಿದ್ಯೆಯನ್ನು ಬೋಧಿಸುತ್ತದೆ. ಅಂತಹ ಲಿಂಗ–ಅಂಗ ಸಾಮರಸ್ಯರೂಪದ ಶಿವಜೀವೈಕ್ಯವಿದ್ಯೆಯಲ್ಲಿ ಯಾರು ವಿನೋದದಿಂದ ಕ್ರೀಡಿಸುತ್ತಾರೋ ಅವರು 'ವೀರಶೈವರು' ಎಂಬುದಾಗಿ 'ಸಿದ್ಧಾಂತ ಶಿಖಾಮಣಿ' ಮತ್ತು 'ಕ್ರಿಯಾಸಾರ' ಎಂಬ ವೀರಶೈವ ಗ್ರಂಥಗಳಲ್ಲಿ ಹೇಳಲಾಗಿದೆ.

ವೀರಶೈವಮತವನ್ನು ಶಿವಾದ್ವೈತ, ಮಾಹೇಶ್ವರಮತ, ಲಿಂಗಾಯತಮತ, ಷಟ್ಸ್ಥಲ ಸಿದ್ಧಾಂತಮತ, ಶಿವಮತ, ಶಿವಧರ್ಮ, ಶಕ್ತಿವಿಶಿಷ್ಟಾದ್ವೈತ ಎಂಬ ಹೆಸರುಗಳಿಂದ ಕರೆಯುವ ರೂಢಿ ಬಂದಿದೆ. ಶಿವನಲ್ಲದೆ ಬೇರೆ ದೇವರಿಲ್ಲ. ಶಿವನು ಏಕಮೇವಾದ್ವಿತೀಯ ಎಂದು ಹೇಳುವ ಮತವಾದ್ದರಿಂದ ಇದಕ್ಕೆ ಶಿವಾದ್ವೈತ ಎಂಬ ಹೆಸರು ಬಂದಿದೆ. ಶಿವನೇ ಸರ್ವೋತ್ತಮನು, ಅವನೇ ಪರಮಾತ್ಮನು, ಅವನು ಶಕ್ತಿವಿಶಿಷ್ಟ

ನಾಗಿರುವನು. ಪರಮಾತ್ಮನಂತೆಯೇ ಈ ಶಕ್ತಿಯು ಸಚ್ಚಿದಾನಂದರೂಪಿಣಿಯಾಗಿ ಪರಾಶಕ್ತಿ ಎನಿಸಿದ್ದು ತನ್ನ ಒಂದಂಶದಿಂದ ಪರಮಾತ್ಮನ ವಿನೋದಕ್ಕಾಗಿ ಜಡರೂಪ ದಿಂದ ಪರಿಣಮಿಸಿ ಮಾಯಾಶಕ್ತಿ ಎನಿಸಿರುತ್ತದೆ. ಈ ಮಾಯಾಶಕ್ತಿಯು ಜೀವನನ್ನು ಆವರಿಸಿರುತ್ತದೆ. ಪರಾಶಕ್ತಿವಿಶಿಷ್ಟ ಪರಮಾತ್ಮನಲ್ಲಿ ಮಾಯಾಶಕ್ತಿವಿಶಿಷ್ಟ ಜೀವನು ಸಮರಸವಾಗಿ ಸೇರುವುದನ್ನು ಬೋಧಿಸುವ ಮತವೇ ಶಕ್ತಿವಿಶಿಷ್ಟಾದ್ವೈತಮತವಾಗಿರು ತ್ತದೆ. ಶಕ್ತಿಯು ಶಿವನ ವಿಶಿಷ್ಟವಾದ ಗುಣ. ಅವನು ಶಕ್ತಿವಿಶಿಷ್ಟನಾಗಿರುತ್ತಾನೆ. ಶಕ್ತಿ ಶಿವನಿಂದ ಬೇರೆಯಾಗಿರದೆ, ಬೆಂಕಿ ಮತ್ತು ಅದರ ಸುಡುವ ಶಕ್ತಿ ಇರುವಂತೆ, ಶಬ್ದ ಮತ್ತು ಅದರ ಅರ್ಥ ಇರುವಂತೆ, ರತ್ನ ಮತ್ತು ಅದರ ಕಾಂತಿ ಇರುವಂತೆ, ಶಿವಶಕ್ತಿ ಯರು ಒಂದೇ ಆಗಿರುತ್ತಾರೆ. ಆದುದರಿಂದ ಶಿವನು ಒಬ್ಬನೇ. ಅವನು ಅದ್ವಿತೀಯನು. ಆದರೆ ಶಕ್ತಿವಿಶಿಷ್ಟನಾಗಿರುತ್ತಾನೆ. ಹೀಗೆ ಶಕ್ತಿವಿಶಿಷ್ಟನಾಗಿದ್ದು ಅದ್ವಿತೀಯನಾಗಿರುವ ಶಿವನ ಕುರಿತಾದ ಉಪಾಸನಾಮತವಾದ್ದರಿಂದ ಈ ಮತಕ್ಕೆ ಶಕ್ತಿವಿಶಿಷ್ಟಾದ್ವೈತಮತ ಎಂಬ ಹೆಸರು ಬಂದಿರುತ್ತದೆ ಎಂಬುದಾಗಿ ಇನ್ನೊಂದು ವಿವರಣೆ ಇದೆ.

ವೀರಶೈವಮತದ ಇನ್ನೊಂದು ಹೆಸರು 'ಲಿಂಗಾಯತಮತ'. ಕೆಲವೆಡೆಗಳಲ್ಲಿ 'ಶಿವಾಚಾರಮತ' ಎಂದೂ ಕರೆದಿರುತ್ತದೆ. ಲಿಂಗಧಾರಣೆ ಮಾಡಿ, ಲಿಂಗರೂಪದಲ್ಲಿದೆ ಶಿವನನ್ನು ಅಂದರೆ ಪರಮಾತ್ಮನನ್ನು ಪೂಜಿಸುವವರ ಮತವೇ 'ಲಿಂಗಾಯತಮತ'. ಹಾಗೆಯೇ ಶಿವನ ಕುರಿತಾದ ಆಚಾರವಿಚಾರವುಳ್ಳ ಮತವಾದ್ದರಿಂದ 'ಶಿವಾಚಾರಮತ' ಎಂಬ ಹೆಸರೂ ರೂಢಿಯಲ್ಲಿ ಬಂದಿರುತ್ತದೆ.

ವೀರಶೈವಮತವು ಭಾರತದ ವಿವಿಧ ಭಾಗಗಳಲ್ಲಿ ರೂಢಿಯಲ್ಲಿದೆ. ಆದರೂ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಪ್ರಚಾರವಿರುವ ಭಾಗವು ಕರ್ಣಾಟಕ ರಾಜ್ಯವಾಗಿರುತ್ತದೆ. ಮೂಲತಃ ಈ ಮತವನ್ನು ಎಲ್ಲಿ ಯಾರು ಯಾವಾಗ ಆರಂಭಿಸಿದರು ಎಂದು ಹೇಳುವುದರ ಬಗೆಗೆ ಸಮಂಜಸವಾದ ಆಧಾರಗಳು ಇನ್ನೂ ದೊರೆತಿರುವುದಿಲ್ಲ. ಈ ಕುರಿತಾಗಿ ವಿದ್ವಾಂಸರು ಸಂಶೋಧನೆ ನಡೆಸುತ್ತಿದ್ದಾರೆ. ಶ್ರೀ ರೇಣುಕಾಚಾರ್ಯ, ಶ್ರೀ ಪಂಡಿತಾರಾಧ್ಯ ಮೊದಲಾದ ಆಚಾರ್ಯರು ಈ ಮತವನ್ನು ಪ್ರಾಚೀನಕಾಲದಲ್ಲಿ ಪ್ರಚಾರಮಾಡಿರು ತ್ತಾರೆ. ಜೇಡರದಾಸಿಮಯ್ಯ, ಶಂಕರದಾಸಿಮಯ್ಯ, ಕೊಂಡಗುಳಿ ಕೇಶಿರಾಜ, ಏಕಾಂತದ ರಾಮಯ್ಯ, ಮಾದರ ಚೆನ್ನಯ್ಯ, ಡೋಹರ ಕಕ್ಕಯ್ಯ ಮೊದಲಾದ ಭಕ್ತಮಹನೀಯರೂ, ಚೆನ್ನಬಸವೇಶ್ವರ, ಅಲ್ಲಮಪ್ರಭು, ಸಿದ್ಧರಾಮೇಶ್ವರ ಮೊದಲಾದ ಪೂಜ್ಯಮಹಾತ್ಮರೂ ವೀರಶೈವಮತದ ತತ್ತ್ವಗಳನ್ನು ಕರ್ಣಾಟಕದಲ್ಲಿ ಕ್ರಿ.ಶ. ೧೨ನೇ ಶತಮಾನದಲ್ಲಿ ಪ್ರಚಾರ ಮಾಡಿರುತ್ತಾರೆ. ಆದರೆ ಕ್ರಿ.ಶ. ೧೨ನೇ ಶತಮಾನದಲ್ಲಿ ಕಲ್ಯಾಣದ ಕಳಚೂರಿ ಬಿಜ್ಜಳ ಅರಸನ ಮಂತ್ರಿಯಾಗಿದ್ದ ಶ್ರೀ ಬಸವೇಶ್ವರರು ವೀರಶೈವಮತದ ತತ್ತ್ವಗಳನ್ನು ಕ್ರೋಢೀಕರಿಸಿ ನವಚೇತನವನ್ನು ತುಂಬಿ, ನಾಡಿನಲ್ಲಿ ಕನ್ನಡ ವಚನಶಾಸ್ತ್ರದ ಮೂಲಕ ಈ ಮತದ ಸಂದೇಶಗಳನ್ನು ವಿಶೇಷವಾಗಿ ಪ್ರಸಾರಮಾಡಿದರು. ಮಹಾತ್ಮರಾದ ಶ್ರೀ ಬಸವೇಶ್ವರರು ವೀರಶೈವಮತದ ಉದ್ಧಾರಕರಾಗಿದ್ದು ನವಯುಗಪ್ರವರ್ತಕ ಆಚಾರ್ಯರಾಗಿರುತ್ತಾರೆ.

**ವೀರಶೈವಮತದ ತತ್ತ್ವಸಾರಸಂಗ್ರಹ**

ಶಿವ : ವೀರಶೈವಮತದ ಪ್ರಕಾರ ಶಿವನು ಸರ್ವೋತ್ತಮನು. ಅವನು ಪರಬ್ರಹ್ಮ ಪರವಸ್ತು, ಪರತತ್ತ್ವವಾಗಿರುತ್ತಾನೆ, ಶಿವನು ಸೃಷ್ಟಿಸ್ಥಿತಿಲಯಗಳನ್ನು ಮಾಡುವವ ನಾಗಿರುತ್ತಾನೆ. ಶಿವನು ಶಕ್ತಿವಿಶಿಷ್ಟನು. ಅವನು ಪೂರ್ಣನಾಗಿದ್ದು, ಲಿಂಗಸ್ವರೂಪ ನಾಗಿರುತ್ತಾನೆ. ಶಿವನು ಸರ್ವಜ್ಞನೂ ಸರ್ವಶಕ್ತನೂ ಆಗಿರುತ್ತಾನೆ.

ಜೀವ : ಜೀವರುಗಳು ಶಿವನಿಂದ ಸೃಷ್ಟಿಸಲ್ಪಟ್ಟವರು. ಜೀವರು ಅಂಗಗಳು. ಬೆಂಕಿ ಯಿಂದ ಕಿಡಿಗಳು ಬರುವಂತೆ, ಶಿವನಿಂದ ಜೀವಿಗಳು ಉತ್ಪತ್ತಿಯಾಗಿವೆ. ಬೆಂಕಿಗೂ ಕಿಡಿಗೂ ತಾರತಮ್ಯವು ಸ್ವರೂಪದಲ್ಲಿ ಅಗ್ನಿತ್ವ ಮತ್ತು ಕಣತ್ವಗಳಿಂದ ಇದೆಯಾದರೂ ದಾಹಕತ್ವರೂಪಧರ್ಮದಿಂದ ಭೇದವಿರುವುದಿಲ್ಲ. ಹೀಗೆ ಜೀವರಿಗೂ ಶಿವನಿಗೂ ವಿಭುತ್ವ ರೂಪದಿಂದ, ಅಣುತ್ವರೂಪದಿಂದ ಭೇದವಿದೆಯಾದರೂ ಚೇತನರೂಪದಿಂದ ಭೇದವಿಲ್ಲ. ಜೀವಿಗಳು ಶಿವನ ಅಧೀನ. ಶಿವನು ಸತ್ಯವಾಗಿರುವಂತೆ ಜೀವಿಗಳೂ ಸತ್ಯ, ಜೀವಿಗಳೆಲ್ಲಾ ಶಿವರೂಪರೇ ಆಗಿರುತ್ತಾರೆ.

ಜಗತ್ತು : ಶಿವನಿಂದ ಸೃಷ್ಟಿಸಲ್ಪಟ್ಟ ಈ ಜಗತ್ತು ಮಿಥ್ಯೆಯಲ್ಲ. ಅದು ಶಿವನಂತೆಯೇ ಸತ್ಯ. ಸಾಂಖ್ಯರು ಹೇಳುವ ಇಪ್ಪತ್ತೈದು ತತ್ತ್ವಗಳಂತಲ್ಲದೆ ಈ ಜಗತ್ತು ಒಟ್ಟು ಮುವತ್ತಾರು ತತ್ತ್ವಗಳಿಂದ ಕೂಡಿದುದಾಗಿದೆ ಎಂದು ವೀರಶೈವಸಿದ್ಧಾಂತದಲ್ಲಿ ಪ್ರತಿಪಾದಿಸಲಾಗಿದೆ.

ಜೀವಿಗಳ ಬಂಧನ : ಜೀವಿಗಳು ಆಣವ, ಮಾಯಿಕ ಮತ್ತು ಕಾರ್ಮಿಕ ಎಂಬ ಮೂರು ಮಲಗಳಿಂದ ಸಂಸಾರಬಂಧನಕ್ಕೆ ಒಳಗಾಗಿರುತ್ತಾರೆ. ಮಲ ಎಂದರೆ ಬಂಧನ ಎಂದು ಅರ್ಥ. ಶಿವರೂಪನಾದ ಜೀವಿಯು ಆಣವ ಮಲದಿಂದಾಗಿ ತಾನು ಅಣು, ಸೂಕ್ಷ್ಮನು ಎಂಬ ಭಾವನೆಯನ್ನು ಪಡೆಯುತ್ತಾನೆ. ಹಾಗಾಗಿ ಅಣುವೆಂದು ಕರೆಯ ಲ್ಪಡುತ್ತಾನೆ. ಪರಶಿವನ ಅಂತಃಕರಣರೂಪವಾದ ಚಿಚ್ಛಕ್ತಿಯು ಸ್ವಸ್ಥಾನದಿಂದ ವಿಭಕ್ತ ವಾಗಿ ಸಂಕೋಚವನ್ನು ಹೊಂದಿ ಚಿತ್ತ ಎಂದಾಯಿತು. ಚಿತ್ತವು ನಾನು ಸರ್ವಾತ್ಮನಲ್ಲ, ಸರ್ವಾಧಿಪನಲ್ಲ ಎಂಬ ವೃತ್ತಿಗೆ ಕಾರಣವಾಯಿತು. ಚಿತ್ತವೇ ಆಣವಮಲ. ಅದು ಅತಿ ಸೂಕ್ಷ್ಮವಾದ ಮಲವಾಗಿರುತ್ತದೆ. ಆ ಚಿತ್ತದಿಂದ ಕೂಡಿದವನು ಜೀವ ಎಂದೆನಿಸಿರು ತ್ತಾನೆ. ಚಿತ್ತವೆಂದರೆ ಪ್ರಕೃತಿಯ ಕಾರ್ಯವಲ್ಲ. ಅದು ಮಲತ್ರಯಗಳ ಸ್ವರೂಪ.

ಮಾಯಾಮಲವು ಸೂಕ್ಷ್ಮವಾದುದು. ಈ ಮಲದಿಂದಾಗಿ ನಾನು ಶಿವನಲ್ಲ, ಶಿವನು ನಾನಲ್ಲ ; ಜ್ಞಾನವು ಕ್ರಿಯೆಯಲ್ಲ, ಕ್ರಿಯೆಯು ಜ್ಞಾನವಲ್ಲ ಎಂಬ ಭೇದಜ್ಞಾನವು ಜೀವನಿಗೆ ಹುಟ್ಟುತ್ತದೆ. ನಾನು ಇದನ್ನು ಅರಿಯೆ ಎಂಬುದೇ ಮುಖ್ಯವಾಗಿ ಮಾಯಾಮಲದ ಪ್ರಭಾವ, ಅರ್ಥಾತ್ ಕೆಲಸವಾಗಿರುತ್ತದೆ. ಕಾರ್ಮಿಕ ಮಲವು ಸ್ಥೂಲವಾದುದು. ಪ್ರಧಾನತತ್ತ್ವದಿಂದ ಹುಟ್ಟಿದ ಸ್ಥೂಲಶರೀರವೇ ಕಾರ್ಮಿಕಮಲ. ದೇಹೇಂದ್ರಿಯಗಳ ಮಲ ಎಂದರೆ ಬಂಧವೇ ಕಾರ್ಮಿಕಮಲ. ನಾನು ಪುಣ್ಯಾಪುಣ್ಯಕರ್ಮಗಳಿಗೂ ಅವುಗಳಿಂದ ಉಂಟಾದ ಸುಖಃದುಃಖಗಳಿಗೂ ಭಾಗಿಯಾಗಿದ್ದೇನೆ ಎಂಬುದೇ ಕಾರ್ಮಿಕಮಲದ ಪ್ರಭಾವ. ಆಣವಮಲದಿಂದ ಆವೃತನಾದುದರಿಂದ ಜೀವನಿಗೆ 'ಅಣು' ಎಂದೂ ಮಾಯಿಕ ಮಲದಿಂದ ಆವೃತನಾಗಿ ತಾನು ಕಿಂಚಿಜ್ಞ ಎಂದು ತಿಳಿದುದರಿಂದ 'ಕಿಂಚಿಜ್ಞ' ಎಂದೂ,

ಪಾಪಪುಣ್ಯಗಳ ಕರ್ಮಗಳಿಗೆ ಒಳಗಾಗಿ ದೇಹೇಂದ್ರಿಯಗಳ ಬಂಧನಕ್ಕೆ ಒಳಗಾಗುತ್ತಾ ಕಾರ್ಮಿಕಮಲಕ್ಕೆ ಒಳಗಾದುದರಿಂದ ಪಶು ಎಂದೂ ಮೂರು ಹೆಸರುಗಳು ಬಂದಿರುತ್ತವೆ. ಈ ಮಲತ್ರಯಗಳ ಪರಿಣಾಮವಾಗಿಯೇ ಜೀವನು ಜನ್ಮಮೃತ್ಯುಗಳ ಈ ಸಂಸಾರ ಚಕ್ರಕ್ಕೆ ಸಿಲುಕಿ ಸುಖದುಃಖಗಳ ಅನುಭವಗಳಿಗೆ ಒಳಗಾಗುತ್ತಾನೆ.

ಮೋಕ್ಷವಿಚಾರ : ಮಲತ್ರಯಗಳಿಗೆ ಒಳಗಾದ ಜೀವನು ಕೊನೆಗೆ ಸಾಧನೆಯ ಮೂಲಕ ಶಿವಸ್ವರೂಪವನ್ನು ಪಡೆದು ಶಿವನಲ್ಲಿ ಐಕ್ಯವಾಗುತ್ತಾ ಶಿವನೇ ಆಗುತ್ತಾನೆ. ಜೀವನು ಶಿವೈಕ್ಯನಾಗುವುದು, ಪರಶಿವತ್ವವನ್ನು ಹೊಂದುವುದು, ಲಿಂಗ–ಅಂಗಗಳ ಸಾಮರಸ್ಯ ಹೊಂದುವುದು ವೀರಶೈವಸಿದ್ಧಾಂತದ ಪ್ರಕಾರ ಮೋಕ್ಷದ ಸ್ವರೂಪವಾಗಿದೆ. ಮಾಯಾ ಪಾಶಗಳೆಲ್ಲ ನಿವೃತ್ತಿಯಾಗಿ ಪರಮಪುರುಷಾರ್ಥವಾದ ಶಿವತ್ವಪ್ರಾಪ್ತಿಯೇ ಮೋಕ್ಷ. ದೇಹಸಹಿತನಾಗಿ ಜೀವನ್ಮುಕ್ತನಾಗಿ ಇರಲು ಸಾಧ್ಯವಿದೆ ಎಂದು ಈ ಮತವು ಹೇಳಿ ಜೀವನ್ಮುಕ್ತಿಗೆ ಪ್ರಾಶಸ್ತ್ಯವನ್ನು ನೀಡಿದೆ.

ಮೋಕ್ಷಸಾಧನಾಮಾರ್ಗಗಳು : ಶಿವತ್ವಪ್ರಾಪ್ತಿಗೆ ಭಕ್ತಿಯು ಮುಖ್ಯವಾದುದಾದರೂ ಜ್ಞಾನವೂ ಅಗತ್ಯ. ಶಿವಯೋಗದ ಮೂಲಕ ಜೀವನು ಶಿವನಾಗಬಹುದು, ಶಿವೈಕ್ಯನಾಗ ಬಹುದು. ಶಿವಯೋಗದಲ್ಲಿ ಜ್ಞಾನಭಕ್ತಿಗಳೂ ಸೇರಿವೆ. ಶಿವಜ್ಞಾನ, ಶಿವಭಕ್ತಿ, ಶಿವ ಧ್ಯಾನ, ಶಿವವ್ರತ, ಶಿವಪೂಜೆ ಎಂಬ ಐದು ವಿಚಾರಗಳು ಶಿವಯೋಗದಲ್ಲಿ ಸೇರಿರುತ್ತವೆ. ಶಿವಯೋಗವನ್ನು ಅನುಷ್ಠಾನಮಾಡಲು ಶಿವದೀಕ್ಷೆಯನ್ನು ಪಡೆಯಬೇಕು. ಗುರುವಿನಿಂದ ಶಿವದೀಕ್ಷೆಯನ್ನು ಪಡೆಯದೆ ಯಾವ ಸಾಧನೆಯನ್ನೂ ಸಾಧಕನು ಮಾಡುವಂತಿಲ್ಲ, ಮಾಡಬಾರದು,

ಶಿವದೀಕ್ಷೆ : ಆಗಮಶಾಸ್ತ್ರೋಕ್ತವಾದ ರೀತಿಯಲ್ಲಿ ಇಷ್ಟಲಿಂಗವನ್ನು ಗುರುವಿನಿಂದ ಶಿವದೀಕ್ಷಾಮಾರ್ಗದಲ್ಲಿ ಧಾರಣಮಾಡಿ ಶಿವಯೋಗಕ್ಕೆ ಸನ್ನದ್ಧನಾಗುವುದೇ ಶಿವದೀಕ್ಷೆ. ಶಿವದೀಕ್ಷೆಯನ್ನು ಪಡೆದನಂತರ ಜೀವಿಯು ಶಿವಾಚಾರದವನಾಗುತ್ತಾನೆ, ವೀರಶೈವನಾಗುತ್ತಾನೆ. ಲಿಂಗಧಾರಣಮಾಡುವುದರಿಂದ ಲಿಂಗಾಯತನಾಗುತ್ತಾನೆ. ಶ್ರೀಗುರುವು ಕಾರಣ, ಸ್ಥೂಲ, ಸೂಕ್ಷ್ಮ ಎಂಬ ಮೂರು ಶರೀರಗಳನ್ನು ಅಂಟಿಕೊಂಡಿರುವ ಆಣವ, ಮಾಯಾ, ಕಾರ್ಮಿಕ ಎಂಬ ಮಲತ್ರಯಗಳನ್ನು ವೇಧಾ, ಮನು, ಕ್ರಿಯೆಗಳೆಂಬ ಮೂರು ವಿಧದ ದೀಕ್ಷೆಗಳಿಂದ ದಹಿಸಿ ಇಷ್ಟ, ಪ್ರಾಣ, ಭಾವ ಎಂಬ ಮೂರು ಲಿಂಗಗಳನ್ನು ಸಾಧಕನ ಮೇಲೆ ಹೇಳಿದ ಮೂರು ಶರೀರಗಳಲ್ಲಿ ಧರಿಸುತ್ತಾನೆ. ಲಿಂಗಧಾರಣದಂತೆ ಓಂಕಾರ ಯುಕ್ತ ಶಿವಪಂಚಾಕ್ಷರಿ ಎಂಬ ಪವಿತ್ರಮಂತ್ರದ ಉಪದೇಶವು ಗುರುವಿನಿಂದ ಸಾಧಕನಿಗೆ ದೊರೆಯುತ್ತದೆ. ಲಿಂಗಧಾರಣ ಮತ್ತು ಓಂಕಾರಯುಕ್ತ ಶಿವಪಂಚಾಕ್ಷರಿ ಮಂತ್ರದ ಉಪದೇಶವು ಶಿವದೀಕ್ಷೆಯ ಮುಖ್ಯಾಂಶವಾಗಿರುತ್ತದೆ. ಶಿವದೀಕ್ಷೆಪಡೆದು ಶಿವಾಚಾರಿ ಲಿಂಗಾಯತನಾದ, ಶಿವಯೋಗಾಭ್ಯಾಸಿಯಾದ ಸಾಧಕನು ಪಂಚಾಚಾರ, ಅಷ್ಟಾವರಣ ಮತ್ತು ಷಟ್‌ಸ್ಥಲ ಎಂಬ ಮೂರು ಅಂಶಗಳನ್ನು ಅನುಷ್ಠಾನಕ್ಕೆ ಅಳವಡಿಸಬೇಕು. ಈ ಮೂರು ಅಂಶಗಳೇ ಮುಕ್ತಿಗೆ ಇರುವ ಸಾಧನೆಯ ಸೋಪಾನಗಳು.

ಪಂಚಾಚಾರ : ಶಿವಾಚಾರ, ಲಿಂಗಾಚಾರ, ಸದಾಚಾರ, ಭೃತ್ಯಾಚಾರ ಮತ್ತು ಗಣಾ ಚಾರ ಎಂಬುವುಗಳೇ ಪಂಚಾಚಾರಗಳು.

ಶಿವಾಚಾರ : ಶಿವನೇ ಸರ್ವೋತ್ತಮನು, ಪರತತ್ತ್ವವು ಹಾಗೂ ಪರಬ್ರಹ್ಮನು, ಶಿವನಿಗಿಂತ ಬೇರೆ ದೇವರಿಲ್ಲ ಎಂಬ ದೃಢವಿಶ್ವಾಸ ಮತ್ತು ಶಿವಭಕ್ತರ ಒಳಗೆ ಭೇದ ಎಣಿಸದೆ ಇರುವಿಕೆಯೇ ಶಿವಾಚಾರವಾಗಿರುತ್ತದೆ.

ಲಿಂಗಾಚಾರ : ಲಿಂಗವು ಶಿವನ ಸ್ವರೂಪ ; ಅದು ಶಿವನ ಪದವಾಚ್ಯವಾಗಿದ್ದು ಶಿವಕಲಾಸಮಾವಿಷ್ಟವಾಗಿರುತ್ತದೆ ಎಂಬ ದೃಢಸಂಬಿಕೆಯಿಂದ, ನಿಶ್ಚಲಭಕ್ತಿಯಿಂದ ದಿನಂಪ್ರತಿಯೂ ಲಿಂಗವನ್ನು ಪೂಜಿಸುವುದೇ ಲಿಂಗಾಚಾರವಾಗಿರುತ್ತದೆ. ಲಿಂಗದಲ್ಲಿ ಮುಖ್ಯವಾಗಿ ಎರಡು ವಿಧ : ಸ್ಥಾವರ, ಇಷ್ಟಲಿಂಗ. ಶಿವಾಲಯದಲ್ಲಿ ಗರ್ಭಗುಡಿಯಲ್ಲಿ ಪ್ರತಿಷ್ಠಾಪನೆಗೊಂಡ ಲಿಂಗವು ಸ್ಥಾವರಲಿಂಗ, ಶರೀರದಲ್ಲಿ ಭಕ್ತನು ಧರಿಸಿರುವ ಲಿಂಗವು ಇಷ್ಟಲಿಂಗ ಎಂದೆನಿಸಿರುತ್ತದೆ. ಆ ಇಷ್ಟಲಿಂಗವನ್ನು ಕೊರಳಲ್ಲಿ ಧರಿಸಿ ಸಾಧಕನು ನಿತ್ಯವೂ ಆಮರಣಾಂತವಾಗಿ ಅದನ್ನು ಪೂಜಿಸಬೇಕು. ಇಷ್ಟಲಿಂಗವು ಸಾಧಕನು ದೇಹತ್ಯಾಗ ಮಾಡಿದಾಗ ಅವನೊಡನೆ ಲೀನವಾಗುತ್ತದೆ.

ಸದಾಚಾರ : ಪವಿತ್ರ ಹಾಗೂ ಧಾರ್ಮಿಕವಾದ ಜೀವನವನ್ನು ನಡೆಸುವುದೇ ಸದಾಚಾರ ವಾಗಿರುತ್ತದೆ. ಬಡಬಗ್ಗರ ಸೇವೆ, ಜಂಗಮರ ಸೇವೆ, ಸದ್ವರ್ತನೆ, ಸತ್ಕರ್ಮ ಇವುಗಳೆಲ್ಲ ಸದಾಚಾರದ ಅಂಗಗಳಾಗಿವೆ.

ಭೃತ್ಯಾಚಾರ : ಶಿವ ಮತ್ತು ಶಿವಭಕ್ತರಲ್ಲಿ ಸಂಪೂರ್ಣವಾದ ವಿನಮ್ರಭಾವನೆಯುಳ್ಳವ ನಾಗಿ ಕಾರ್ಯತಃ ಜೀವನದಲ್ಲಿ ಆಚರಣೆಗೆ ಅವನ್ನು ತರುವುದು, ಶಿವಸೇವೆ, ಶಿವಭಕ್ತರ ಹಿತಕ್ಕಾಗಿ ದುಡಿಯುವುದು, ಸ್ತ್ರೀಪುರುಷರು–ಮೂಕಪ್ರಾಣಿಗಳು ಇವರೆಲ್ಲರ ಬಗೆಗೆ ದಯೆ–ವಿನಯಗಳಿಂದ ಕೂಡಿರುವುದು—ಇವು ಭೃತ್ಯಾಚಾರವಾಗಿರುತ್ತದೆ.

ಗಣಾಚಾರ : ಶಿವಭಕ್ತರೆಲ್ಲರೂ ಶಿವನ ಗಣಗಳು. ಶಿವಭಕ್ತವೃಂದಕ್ಕೆ, ಶಿವಯೋಗಿಗಳ ಸಮಾಜಕ್ಕೆ ಉಪಕಾರವಾಗುವಂತೆ ಸೇವೆಸಲ್ಲಿಸುವುದು, ಶಿವ ಶಿವಭಕ್ತರ ಶಿವಾಚಾರವಂತರ ಸಮಾಜಕ್ಕೆ ಅವಹೇಳನ–ಅಪಚಾರ ಉಂಟಾಗದಂತೆ ಜಾಗ್ರತೆ ವಹಿಸುವುದು ಮತ್ತು ಸಹಕಾರಿಯಾಗಿರುವುದು—ಇವುಗಳೇ ಗಣಾಚಾರವಾಗಿರುತ್ತದೆ.

ಅಷ್ಟಾವರಣ : ಆವರಣ ಎಂದರೆ ರಕ್ಷಣೆ ಮಾಡುವ ಹೊದಿಕೆ ಎಂದು ತಾತ್ಪರ್ಯ. ಸಾಧಕನನ್ನು ಪ್ರಪಂಚದಲ್ಲಿನ ಅನೇಕ ದುಷ್ಟಶಕ್ತಿಗಳಿಂದಲೂ ತೊಂದರೆಗಳಿಂದಲೂ ರಕ್ಷಿಸುವುದು ಮಾತ್ರವಲ್ಲದೆ ಶಿವಯೋಗಸಾಧನೆಯಲ್ಲಿ ಮುನ್ನಡೆದು ಸಿದ್ಧಿಯನ್ನು ಪಡೆಯಲು ಈ ಅಷ್ಟ ಆವರಣವು ಸಹಾಯಮಾಡುತ್ತದೆ. ಈ ಅಷ್ಟಾವರಣಗಳು ಯಾವುವೆಂದರೆ : ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಭಸ್ಮ, ರುದ್ರಾಕ್ಷಿ ಮತ್ತು ಮಂತ್ರ. ಇವುಗಳ ಕುರಿತಾಗಿ ಈಗ ವಿಚಾರ ಮಾಡೋಣ.

ಗುರು : ಗುರುವು ಪರಶಿವನ ರೂಪ. ಶಿವನೇ ಗುರುವಾಗಿ ಭಕ್ತರನ್ನು ಉದ್ಧರಿಸಲು ಬರುತ್ತಾನೆ. ಹಾಗಾಗಿ ಗುರುವು ಸಾಕ್ಷಾತ್ ಪರಶಿವನೇ ಆಗಿರುತ್ತಾನೆ. ಗುರುವು ಸೂಕ್ತ ವಾದ ಶಾಸ್ತ್ರವಿಧಿಗಳಿಗೆ ಅನುಸಾರವಾಗಿ ಸಾಧಕನಿಗೆ ವೀರಶೈವದೀಕ್ಷೆಯನ್ನು ನೀಡುತ್ತಾನೆ. ಗುರುವನ್ನು ಸದಾ ಗೌರವಿಸುತ್ತಾ, ಸ್ಮರಿಸುತ್ತಾ, ಪೂಜಿಸುತ್ತಿರಬೇಕು. ಗುರುವು ಸಾಧನೆಯ ಪಥದಲ್ಲಿ ಮುನ್ನಡೆದು ಸಿದ್ಧಿಯನ್ನು ಗಳಿಸಿದವನಾಗಿರುವುದರಿಂದ ಶಿಷ್ಯನಿಗೆ

ಸೂಕ್ತವಾದ ಮಾರ್ಗದರ್ಶನವನ್ನು ನೀಡಿ ಮುನ್ನಡೆಸುತ್ತಾನೆ. ಹಾಗಾಗಿ ಗುರುವು ಅಷ್ಟಾವರಣಗಳಲ್ಲಿ ಪ್ರಥಮ ಹಾಗೂ ಪ್ರಮುಖ ಆವರಣವಾಗಿರುತ್ತಾನೆ.

(೨) ಲಿಂಗ : ಲಿಂಗವು ಪರಶಿವನ ಸ್ವರೂಪ. ಗುರುವಿನಿಂದ ನೀಡಲ್ಪಟ್ಟು ಭಕ್ತನು ಶರೀರದಲ್ಲಿ ಧರಿಸುವ ಲಿಂಗವು ಪರಮಪವಿತ್ರವಾದುದು. ದಿನನಿತ್ಯವೂ ಲಿಂಗದ ಪೂಜೆ ಕ್ರಮವಾಗಿ ನಡೆಸಬೇಕು. ಲಿಂಗದ ಪೂಜೆ ಪರಶಿವನಿಗೂ ಭಕ್ತನಿಗೂ ಅಂದರೆ ಲಿಂಗನಿಗೂ ಅಂಗನಿಗೂ ಇರುವ ದಿವ್ಯವಾದ ಸಂಬಂಧವಾಗಿದೆ. ಇಷ್ಟಲಿಂಗಪೂಜೆಯು ತನ್ನ ಬಾಳಿನ ಮಹೋನ್ನತಗುರಿಯಾದ ಶಿವಸಾಕ್ಷಾತ್ಕಾರವನ್ನು ಸಾಧಕನ ನೆನಪಿಗೆ ತರುತ್ತದೆ.

(೩) ಜಂಗಮ : ಶಿವಸಾಕ್ಷಾತ್ಕಾರ ಅಥವಾ ಶಿವತ್ವವನ್ನು ಪಡೆದವನೇ ಜಂಗಮ ನಾಗಿದ್ದು ಅವನು ಜೀವನ್ಮುಕ್ತನಾಗಿರುತ್ತಾನೆ. ಜಂಗಮರು ಸಾಧನೆಯ ಸಿದ್ಧಿಯನ್ನು ಪಡೆದ ಪವಿತ್ರಾತ್ಮರು, ಶಿವಸ್ವರೂಪರು. ಅವರ ಆಶೀರ್ವಾದವು ಸಾಧಕನಿಗೆ ರಕ್ಷೆ ಹಾಗೂ ಮಾರ್ಗದರ್ಶಕವಾಗುತ್ತದೆ. ಸಾಧಕನು ಜಂಗಮರನ್ನು ಗೌರವಿಸುವುದು ಮಾತ್ರವಲ್ಲದೆ ಅವರ ಸೇವೆ, ಪೂಜಾದಿಗಳನ್ನು ನಡೆಸಬೇಕು. ಗುರು, ಲಿಂಗ, ಜಂಗಮ ಇವರೊಳಗೆ ಯಾವ ಭೇದವೂ ಇಲ್ಲವೆಂದು ಪರಿಗಣಿಸಿ ವೀರಶೈವ ಸಾಧಕರು ಈ ಮೂರನ್ನೂ ಸಮಾನಗೌರವಪೂಜ್ಯತೆಗಳಿಂದ ಕಾಣಬೇಕು.

(೪) ಪಾದೋದಕ : ಗುರು, ಲಿಂಗ ಮತ್ತು ಜಂಗಮರ ಪಾದವನ್ನು ಅರ್ಚನೆ ಮಾಡಿ ಅಭಿಷೇಕ ಮಾಡಿದ ಪವಿತ್ರ ಉದಕವೇ ಪಾದೋದಕ. ದಿನವೂ ಸಾಧಕನು ಪಾದೋದಕ ವನ್ನು ಭಕ್ತಿಯಿಂದ ಸ್ವೀಕರಿಸಬೇಕು. ಗುರು, ಜಂಗಮರು ಪಾದಪೂಜೆಗೆ ಸಿಕ್ಕದಿದ್ದಾಗ ಇಷ್ಟಲಿಂಗೋದಕ ಇದ್ದೇ ಇರುತ್ತದೆ. ಗುರು, ಜಂಗಮ, ಲಿಂಗ ಇವು ಮೂರರ ಒಳಗೆ ಯಾವ ರೀತಿಯ ಭೇದವೂ ಇಲ್ಲದ್ದರಿಂದ ಪಾದೋದಕದಲ್ಲೂ ಭೇದ ಇರುವುದಿಲ್ಲ. ಗುರು, ಜಂಗಮ, ಲಿಂಗಗಳ ಪವಿತ್ರ ಪಾದಗಳನ್ನು ತೊಳೆದ ಉದಕವು ಅನುಗ್ರಹ-ಆಶೀರ್ವಾದಗಳ ದ್ಯೋತಕವಾಗಿರುತ್ತದೆ. ಇದಕ್ಕೆ ಶಿವಾಗಮಗಳಲ್ಲಿ ಪ್ರಮಾಣವಿದೆ.

(೫) ಪ್ರಸಾದ : ಭಗವಂತನಿಗೆ ಅರ್ಪಣೆಮಾಡಿ ಅನಂತರ ಪಡೆದುಕೊಳ್ಳುವ ವಸ್ತುವೇ ಪ್ರಸಾದ. ಶಿವಭಕ್ತನು ಸ್ವೀಕರಿಸುವ ಆಹಾರವನ್ನು ಲಿಂಗಕ್ಕೆ ಅರ್ಪಿಸಿ ಅನಂತರ ಅದನ್ನು ಶಿವನ ಪ್ರಸಾದವೆಂದು ಸ್ವೀಕರಿಸಬೇಕು. (ಗುರು, ಜಂಗಮರಿಗೆ ಅರ್ಪಿಸಿದ ವಸ್ತುವೂ ಪ್ರಸಾದವಾಗುತ್ತದೆ.) ಪ್ರಸಾದವು ಸಮರ್ಪಣತ್ವದಿಂದ ಕೂಡಿದ್ದು ಸರ್ವವನ್ನೂ ಲಿಂಗಕ್ಕೆ ಅರ್ಪಿಸುವ ಕ್ರಿಯೆಯ ಗುರುತಾಗಿರುತ್ತದೆ. ಶಿವಭಕ್ತನು ತನ್ನದೆಂದು ಯಾವುದೂ ಇಲ್ಲ, ಎಲ್ಲವೂ ಶಿವನದೇ ಎಂಬ ಸಮರ್ಪಣಮನೋಭಾವವನ್ನು ತಳೆಯಬೇಕು ಎಂದು ಎನ್ನುವುದೇ ಪ್ರಸಾದ ಆವರಣದಲ್ಲಿನ ತತ್ತ್ವಾಂಶವಾಗಿರುತ್ತದೆ. ಪ್ರಸಾದವನ್ನು ದಿನವೂ ಶಿವಭಕ್ತನು ಸ್ವೀಕರಿಸಬೇಕು. ಇದರಿಂದ ಸಾಧಕನಲ್ಲಿ ಎಲ್ಲವೂ ಶಿವನಿಗೇ ಸೇರಿದ್ದು, ಎಲ್ಲಕ್ಕೂ ಶಿವನು ಒಡೆಯ ಎಂಬ ಶಿವಾರ್ಪಣಭಾವನೆಯು ಉಂಟಾಗುತ್ತದೆ.

(೬) ಭಸ್ಮ (ವಿಭೂತಿ) : ಭಸ್ಮವು ಸಾಧಕನಿಗೆ ಆಂತರಿಕವಾದ ಮತ್ತು ಬಾಹ್ಯವಾದ ಶುದ್ಧಿಯನ್ನು ಪಡೆಯಲು ಸಹಕಾರಿಯಾದ ಪವಿತ್ರವಸ್ತುವಾಗಿರುತ್ತದೆ. ಜೀವನನ್ನು ಆವರಿಸಿರುವ ಕಾರ್ಮಿಕಮಲ ಇತ್ಯಾದಿಗಳನ್ನು ದಹಿಸಿ ಶಿವಜ್ಞಾನವನ್ನು ನೀಡುವ

ದಿವ್ಯಜ್ಞಾನಶಕ್ತಿಯನ್ನು 'ಭಸ್ಮ' ಎಂದು ಹೇಳಲಾಗಿದೆ. ಈ ತತ್ತ್ವದ ಬಾಹ್ಯಸಂಕೇತ ವಾಗಿ ವಿಭೂತಿಧಾರಣವು ವೀರಶೈವಸಾಧಕನಿಗೆ ಅಗತ್ಯವಾದ ಒಂದು ಆವರಣವಾಗಿರು ತ್ತದೆ. ವಿಭೂತಿಯು ತ್ಯಾಗದ ಕುರುಹು, ವೈರಾಗ್ಯದ ಚಿಹ್ನೆ. ಭಸ್ಮವನ್ನು ದೇಹದ ಮೇಲೆ ನಿಯಮದಂತೆ ಧಾರಣಮಾಡಿ ಶಿವನನ್ನು ಧ್ಯಾನಿಸಬೇಕು. ಭಸ್ಮವು ವೈರಾಗ್ಯದ ಕುರುಹು ಆದಂತೆ ಶಿವನ ಸ್ಮರಣೆಯನ್ನು ಉಂಟುಮಾಡುವ ಪವಿತ್ರ ಸಾಧನವೂ ಆಗಿರುತ್ತದೆ.

(೭) ರುದ್ರಾಕ್ಷ : ರುದ್ರದೇವ ಶಿವನ ದಿವ್ಯಜ್ಞಾನದ ಕಣ್ಣೇ ರುದ್ರಾಕ್ಷ. ರುದ್ರನು ರಾಕ್ಷಸರ ಸಂಹಾರಕಾಲದಲ್ಲಿ ತನ್ನ ನೇತ್ರಗಳಿಂದ ದಿಟ್ಟಿಸಿ ನೋಡಿದಾಗ ಅವನ ಕಣ್ಣಿಂದ ನೀರು ಹರಿದುಬಿದ್ದಿತು. ರುದ್ರನ ಕಣ್ಣುಗಳಿಂದ ಹರಿದುಬಿದ್ದ ನೀರೇ ರುದ್ರಾಕ್ಷವೆನಿಸಿದವು ಎಂದು ರುದ್ರಾಕ್ಷದ ಕುರಿತಾಗಿ ಹೇಳುತ್ತಾರೆ. ಶಿವಭಕ್ತನು ಜೀವನದ ವಿಶಿಷ್ಟ ವಿಚಾರಗಳ ಮೇಲೆ ದಿವ್ಯವಾದ ಭಾವನೆಯ ದೃಷ್ಟಿ ತಳೆದು ಎಲ್ಲೆಲ್ಲೂ ದಿವ್ಯತೆಯನ್ನು ಕಾಣಲು ಯತ್ನಿಸಿ ಕೃತಕಾರ್ಯನಾಗಬೇಕು. ಇದೇ ಜ್ಞಾನದ ದೃಷ್ಟಿ. ಅದೇ ರುದ್ರನ ಅಕ್ಷಿ. ಈ ತತ್ತ್ವದ ಬಾಹ್ಯಸಂಕೇತವಾಗಿ ಶಿವಭಕ್ತನು ರುದ್ರಾಕ್ಷಿ ಎಂಬ ಪವಿತ್ರವಾದ ಮಹತ್ಪೂರ್ಣವಾದ ದೈವಿಕಶಕ್ತಿಯುಳ್ಳ ವನಸ್ಪತಿ ಮಣಿಗಳ ಮಾಲೆಯನ್ನು ಶರೀರದಲ್ಲಿ ಧರಿಸಬೇಕು. ರುದ್ರಾಕ್ಷಧಾರಣವು ಶಿವನ ದರ್ಶನಕ್ಕೆ ಶಿವಭಕ್ತನು ಪಾತ್ರನಾಗಲು ನೆರವಾಗುತ್ತದೆ.

(೮) ಮಂತ್ರ : ಶಿವನ ಪವಿತ್ರವಾದ ಹೆಸರೇ ಮಂತ್ರ ಆವರಣ. ಅದು ಐದು ಅಕ್ಷರ ಗಳಿಂದ ಕೂಡಿದ್ದು ಪಂಚಾಕ್ಷರೀ ಮಂತ್ರ ಎಂದು ಅದನ್ನು ಕರೆಯಲಾಗಿದೆ. "ಓಂ" ಎಂಬ ದಿವ್ಯವಾದ ಪ್ರಣವ ಅಕ್ಷರದಿಂದ ಕೂಡಿದಾಗ ಅದು ಪ್ರಣವಸಹಿತವಾಗಿರುವ ಪಂಚಾಕ್ಷರೀ ಮಂತ್ರ ಅಥವಾ ಷಡಕ್ಷರೀ ಮಂತ್ರ ಎಂದೆನಿಸುತ್ತದೆ. "ನಮಃ ಶಿವಾಯ" ಎಂಬುದು ಪವಿತ್ರವಾದ ಪಂಚಾಕ್ಷರೀ ಮಂತ್ರವಾಗಿರುತ್ತದೆ. 'ಓಂ' ಎಂಬ ಪ್ರಣವ ಅಕ್ಷರಸಹಿತವಾಗಿ ಶಿವಪಂಚಾಕ್ಷರೀ ಮಂತ್ರದ ಜಪವನ್ನು ಗುರುವಿನ ಉಪದೇಶದಂತೆ ಸಾಧಕನು ನಿರ್ವಹಿಸಬೇಕು. ಮಂತ್ರವು ಕೇವಲ ಅಕ್ಷರಗಳ ಸಮೂಹವಲ್ಲ ; ಅದು ಶಿವನ ಶಬ್ದಸ್ವರೂಪವಾಗಿದ್ದು ಶಿವಮಯವಾಗಿರುತ್ತದೆ. ಮಾನವನನ್ನು (ಜೀವನನ್ನು) ಆವರಿಸಿ ರುವ ಮಲಗಳನ್ನು ಪರಿಹರಿಸಿ ಅವನನ್ನು ನಿರ್ಮಲನನ್ನಾಗಿ ಮಾಡುವ ದಿವ್ಯಶಕ್ತಿ ಈ ಮಂತ್ರಕ್ಕಿದೆ. ಶಿವಪಂಚಾಕ್ಷರೀ ಮಂತ್ರವು ವೇದ-ಆಗಮಗಳಲ್ಲಿ ಹೇಳಲ್ಪಟ್ಟಿದ್ದು ಸಕಲ ಸತ್ಫಲದಾಯಕವಾದ ಪವಿತ್ರಮಂತ್ರವಾಗಿರುತ್ತದೆ.

ಈ ಮೇಲೆ ವಿವರಿಸಿದ ಎಂಟು ಅಂಶಗಳನ್ನು ಶಿವಭಕ್ತಿಸಾಧಕನು ದಿನನಿತ್ಯವೂ ಸರಿಯಾಗಿ ಪಾಲಿಸಬೇಕಾಗಿದ್ದು ಇದನ್ನು ಅಷ್ಟಾವರಣವ್ರತ ಎಂದು ಹೇಳುತ್ತಾರೆ. ಪಂಚಾಚಾರ, ಅಷ್ಟಾವರಣವ್ರತಗಳಿಂದ ಕೂಡಿದ ಶಿವಯೋಗಿಯು ಷಟ್ಸ್ಥಲಯೋಗ ವನ್ನು ಅನುಷ್ಠಾನಮಾಡಿ ಶಿವಸಾಕ್ಷಾತ್ಕಾರವನ್ನು ಪಡೆಯಬೇಕು.

ಷಟ್ಸ್ಥಲಯೋಗ : ಷಟ್ ಎಂದರೆ ಆರು, ಸ್ಥಲ ಎಂದರೆ ಸ್ಥಳ, ಯೋಗ ಎಂದರೆ ಕೂಡುವಿಕೆ ಎಂಬುದು ಸಾಮಾನ್ಯವಾದ ತಾತ್ಪರ್ಯ. ಷಟ್ಸ್ಥಲ ಎಂದರೆ ಆರು ಸ್ಥಳ ಗಳಲ್ಲಿ ಕೂಡುವಿಕೆ ಎಂದು ಅರ್ಥವಾಗುತ್ತದೆ. ಈ ಶಬ್ದದ ಅಂತರಾರ್ಥವು ಇನ್ನೊಂದಿದೆ. ಸ್ಥಲ ಎಂದರೆ ಪರತತ್ತ್ವ ಅಥವಾ ಪರಶಿವ. ಕಾಣುವ ಪ್ರಪಂಚವು ಉತ್ಪತ್ತಿಯಾದ ಮತ್ತು ತನ್ನ ಅಸ್ತಿತ್ವಕ್ಕೆ ಚೇತನವನ್ನು ಪಡೆಯುವ ಮೂಲಕೇಂದ್ರ ಅಥವಾ ಸ್ಥಳ

ಎಂಬುದನ್ನು 'ಸ್ಥ' ಎಂಬ ಅಕ್ಷರವು ಸೂಚಿಸುತ್ತದೆ. 'ಲ' ಎಂದರೆ ಜಗತ್ತು ಸಾಗುವ ಗುರಿ ಮತ್ತು ಸೇರುವ ಅಂತಿಮ ನೆಲೆಯನ್ನು ಸೂಚಿಸುತ್ತದೆ. ಜಗತ್ತು ಶಿವನಿಂದ ಹುಟ್ಟಿ ಶಿವನಿಂದ ಲಯವಾಗುವುದರಿಂದ ಶಿವನನ್ನು 'ಸ್ಥಲ' ಎಂದು ವೀರಶೈವಸಿದ್ಧಾಂತದಲ್ಲಿ ಕರೆಯಲಾಗಿದೆ. ಸ್ಥಲಯೋಗ ಎಂದರೆ ಶಿವನಲ್ಲಿ ಐಕ್ಯವಾಗುವುದು. ಷಟ್ ಎಂದರೆ ಆರು. ಆರು ಸ್ಥಳಗಳಲ್ಲಿ ಶಿವನೊಡನೆ ಐಕ್ಯವಾಗುವುದು ಎಂದು ಒಟ್ಟಿನಲ್ಲಿ ತಾತ್ಪರ್ಯ. ಎಂದರೆ ಶಿವನು ಯಾರೊಡನೆಯೂ ಐಕ್ಯವಾಗಬೇಕಾಗಿಲ್ಲವಾಗಿದ್ದು ಜೀವನೇ ಶಿವೈಕ್ಯವಾಗುವುದಾದ್ದರಿಂದ ಜೀವನು ಶಿವನೊಡನೆ ಸೇರುವುದೇ ಷಟ್‌ಸ್ಥಲಯೋಗ. ಷಟ್‌ಸ್ಥಲಯೋಗಕ್ಕೆ 'ಶಿವಯೋಗ' ಎಂಬ ಇನ್ನೊಂದು ಹೆಸರೂ ರೂಢಿಯಲ್ಲಿದೆ.

ಜೀವನ ಶರೀರದಲ್ಲಿ ಆರು ಎಡೆಗಳಲ್ಲಿ ಯೋಗದೃಷ್ಟಿಯಿಂದ ಕಾಣುವ ದಿವ್ಯವಾದ ಆರು ಚಕ್ರಗಳಿವೆ. ಅವುಗಳಲ್ಲಿ ದಿವ್ಯವಾದ ಪದ್ಮಗಳಿವೆ. ಆ ಪ್ರತಿಯೊಂದು ಪದ್ಮದಲ್ಲಿ ಶಿವನು ಲಿಂಗರೂಪನಾಗಿರುತ್ತಾನೆ. ಒಂದೊಂದು ಪದ್ಮದಲ್ಲಿ ನೆಲಸಿರುವ ಶಿವನಿಗೆ ಒಂದೊಂದು ಹೆಸರಿದೆ. ಶಿವಯೋಗಸಾಧಕನು ತನ್ನ ಶರೀರದ ಈ ಆರು ಸ್ಥಳಗಳಲ್ಲಿ ಯೋಗಲಿಂಗರೂಪದಲ್ಲಿ ಇರುವ ಶಿವನನ್ನು ಸಾಕ್ಷಾತ್ಕಾರಮಾಡಿಕೊಳ್ಳುತ್ತಾ ಶಿವೈಕ್ಯತೆಯನ್ನು ಹೊಂದಿ ಜೀವನ್ಮುಕ್ತನಾಗುವುದೇ ಷಟ್‌ಸ್ಥಲಯೋಗದ ಗುರಿ. ದೇಹದ ಯಾವ ಯಾವ ಸ್ಥಾನಗಳಲ್ಲಿ ಯಾವ ಯಾವ ಲಿಂಗಗಳಿವೆ ? ಅದರ ಹಿನ್ನೆಲೆ ಏನು ? ಎಂಬ ಗಹನವಾದ ಯೋಗವಿಚಾರಗಳು ಷಟ್‌ಸ್ಥಲಸಿದ್ಧಾಂತದಲ್ಲಿ ವಿಸ್ತಾರವಾಗಿ ನಿರೂಪಿತವಾಗಿವೆ. ಯೋಗಸ್ಥಲಗಳಾದ ಶರೀರದ ಆರು ಚಕ್ರಗಳಾಗಲಿ, ಲಿಂಗಗಳಾಗಲಿ, ಪದ್ಮಗಳಾಗಲಿ ಹೊರಕಣ್ಣಿಗೆ ಕಾಣುವುದಿಲ್ಲ. ಅವು ಸಾಧಕನಿಗೆ ದಿವ್ಯವಾದ ಯೋಗದೃಷ್ಟಿಯಿಂದ ಮಾತ್ರ ಕಾಣುತ್ತವೆ—ಎಂದು ಷಟ್‌ಸ್ಥಲಸಿದ್ಧಾಂತದಲ್ಲಿ ನಿರೂಪಣೆ ಇದೆ. ಶಿವನು ಅದ್ವಿತೀಯನಾಗಿದ್ದರೂ ತನ್ನ 'ಈಶಚ್ಚಲನ'ದಿಂದ ಲಿಂಗ ಮತ್ತು ಅಂಗ ಎಂಬ ಎರಡು ಭಾವಗಳಲ್ಲಿ ಪ್ರಕಟಗೊಂಡನು. ಲಿಂಗವು ಪೂಜ್ಯಸ್ಥಾನದಲ್ಲಿದ್ದರೆ, ಅಂಗವು ಪೂಜಕಸ್ಥಾನದಲ್ಲಿ ಇರುವಂತಾಯಿತು. ಹೀಗೆ ಶರೀರದ ಯೋಗದ ಆರು ಚಕ್ರಗಳಲ್ಲಿ ಪ್ರತಿಯೊಂದರಲ್ಲೂ ಒಂದೊಂದರಂತೆ ಆರು ಲಿಂಗಗಳೂ ಆರು ಅಂಗಗಳೂ ಇದ್ದು ಪ್ರತಿಯೊಂದು ಚಕ್ರದಲ್ಲಿ ಲಿಂಗ-ಅಂಗಗಳ ಸಾಮರಸ್ಯವನ್ನು ಶಿವಯೋಗಿಯು ಯೋಗದ ಮೂಲಕ ಸಾಧಿಸಬೇಕು. ಶರೀರದಲ್ಲಿ ಇರುವ ಆರು ಲಿಂಗಗಳ ಸ್ಥಾನವಿವರ ಹೀಗಿದೆ :

| ಚಕ್ರಗಳು | | ಲಿಂಗಗಳು |
|---|---|---|
| (೧) ಮೂಲಾಧಾರದಲ್ಲಿ | — | ಆಚಾರಲಿಂಗ |
| (೨) ಸ್ವಾಧಿಷ್ಠಾನದಲ್ಲಿ | — | ಗುರುಲಿಂಗ |
| (೩) ಮಣಿಪೂರದಲ್ಲಿ | — | ಶಿವಲಿಂಗ |
| (೪) ಅನಾಹತಚಕ್ರದಲ್ಲಿ | — | ಜಂಗಮಲಿಂಗ |
| (೫) ವಿಶುದ್ಧಚಕ್ರದಲ್ಲಿ | — | ಪ್ರಸಾದಲಿಂಗ |
| (೬) ಆಜ್ಞಾಚಕ್ರದಲ್ಲಿ | — | ಮಹಾಲಿಂಗ |

ಇರುವ ಒಂದು ಸ್ಥಲವು ಎಂದರೆ ಶಿವನು ಲಿಂಗ ಮತ್ತು ಅಂಗ ಎಂದು ಎರಡಾದ

ನಂತರ ಪ್ರತಿಯೊಂದು ಲಿಂಗವೂ ಮತ್ತು ಅಂಗವೂ ಮೂರು ಮೂರು ವಿಧಗಳಲ್ಲಿ ಪರಿವರ್ತನೆಯಾಗಿ ಒಟ್ಟು ಆರು ಲಿಂಗಗಳೂ ಆರು ಅಂಗಗಳೂ ಆಗುತ್ತವೆ. ಹೀಗೆ ಇಷ್ಟ ಪ್ರಾಣ ಭಾವ ಎಂಬ ಮೂರು ಲಿಂಗಗಳೂ, ತ್ಯಾಗಾಂಗ ಭೋಗಾಂಗ ಮತ್ತು ಯೋಗಾಂಗ ಎಂಬ ಮೂರು ಅಂಗಗಳೂ ಉಂಟಾದುವು. ಅನಂತರ ಭಾವಲಿಂಗದಿಂದ ಮಹಾಲಿಂಗ ಪ್ರಸಾದಲಿಂಗಗಳು ಹುಟ್ಟಿಕೊಂಡವು. ಪ್ರಾಣಲಿಂಗದಿಂದ ಶಿವಲಿಂಗ ಜಂಗಮಲಿಂಗಗಳು (ಚರಲಿಂಗ) ಹುಟ್ಟಿಕೊಂಡವು. ಇಷ್ಟಲಿಂಗದಿಂದ ಗುರುಲಿಂಗ ಆಚಾರಲಿಂಗಗಳು ಹುಟ್ಟಿ ಕೊಂಡವು. ಶಿವನೊಳಗಿನ ಶಕ್ತಿಯು ಪ್ರಕಟವಾಗಿ ಕ್ರಮವಾಗಿ (೧) ಚಿಚ್ಛಕ್ತಿ, (೨) ಪರಾ ಶಕ್ತಿ, (೩) ಆದಿಶಕ್ತಿ, (೪) ಇಚ್ಛಾಶಕ್ತಿ, (೫) ಜ್ಞಾನಶಕ್ತಿ, (೬) ಕ್ರಿಯಾಶಕ್ತಿ ಎಂದು ಆರು ವಿಧವಾಯಿತು. ಈ ಶಕ್ತಿಯು ಕ್ರಮವಾಗಿ ಮಹಾಲಿಂಗ, ಜಂಗಮಲಿಂಗ, ಗುರು ಲಿಂಗ, ಆಚಾರಲಿಂಗಗಳನ್ನು ಸೇರಿತು. ತ್ಯಾಗಾಂಗ, ಭೋಗಾಂಗ ಮತ್ತು ಯೋಗಾಂಗ ಎಂಬ ಆರು ಅಂಗಸ್ಥಲಗಳಿಂದ ಕ್ರಮವಾಗಿ (೧) ಮಹೇಶ್ವರ ಮತ್ತು ಭಕ್ತ, (೨) ಪ್ರಾಣ ಲಿಂಗ ಮತ್ತು ಪ್ರಸಾದಿ, (೩) ಶರಣ ಮತ್ತು ಐಕ್ಯ ಎಂಬ ಆರು ಲಿಂಗಗಳಾದುವು. ಲಿಂಗವು ಉಪಾಸ್ಯ ಅಥವಾ ಪೂಜ್ಯವಾದುದು, ಅಂಗವು ಉಪಾಸಕ ಅಥವಾ ಪೂಜಕ ವಾಗಿದೆ. ತ್ಯಾಗಾಂಗದಿಂದ ಯೋಗಾಂಗದವರೆಗಿನ ಆರು ಹಂತಗಳನ್ನು ಶಿವಯೋಗಿ ಸಾಧಕನು ಸೂಕ್ತವಾದ ಸಾಧನೆಯ ಮೂಲಕ ಏರಿ ಕೊನೆಗೆ ಶಿವೈಕ್ಯವನ್ನು ಪಡೆಯಬೇಕು. ಷಟ್‌ಸ್ಥಲಯೋಗಸಿದ್ಧಾಂತವು ಪ್ರತಿ ಅಂಗ-ಲಿಂಗಗಳ ವಿಸ್ತಾರವಾದ ವಿವರಣೆ ಮಹತ್ವ ಅಂತರಾರ್ಥಗಳನ್ನು ಹೇಳುತ್ತಾ ಶಿವಭಕ್ತನು ಯಾವ ಯಾವ ರೀತಿಯಲ್ಲಿ ಈ ಆರು ಸ್ಥಳ ಗಳಲ್ಲಿ ಇರುವ ಶಿವಶಕ್ತಿಯನ್ನು ಯೋಗದ ಮೂಲಕ ಸೇರಬೇಕು ಎಂಬುದನ್ನು ಕುರಿತು ವಿಸ್ತಾರವಾದ ವಿವರಣೆ ಮಾರ್ಗದರ್ಶನಗಳನ್ನು ನೀಡುತ್ತದೆ. ಪಂಚಾಚಾರ, ಅಷ್ಟಾವರಣ ವ್ರತಗಳಿಂದ ಕೂಡಿ ಷಟ್‌ಸ್ಥಲಯೋಗವನ್ನು ಅಭ್ಯಾಸಮಾಡಹೊರಟ ಶಿವಭಕ್ತನು ಹಂತಹಂತವಾಗಿ ತನ್ನ ಯೋಗಾಭ್ಯಾಸದಲ್ಲಿ ಮುಂದುವರಿದು ಕೊನೆಗೆ ಷಟ್‌ಸ್ಥಲ ಯೋಗದ ಸಿದ್ಧಿಯನ್ನು ಪಡೆಯುತ್ತಾನೆ. ಅದೇ ಕೈವಲ್ಯ. ಷಟ್‌ಸ್ಥಲಯೋಗದ ಮೂಲಕ ಶಿವಭಕ್ತನ ಅಂಗಗುಣವಳಿದು ಅವನು ಲಿಂಗೈಕ್ಯನಾಗಿ ಎಂದರೆ ಲಿಂಗಾಂಗಸಾಮರಸ್ಯವನ್ನು ಹೊಂದಿ ಶಿವಾನುಭವಪಡೆದು 'ಶಿವೋಽಹಂ' ಭಾವನಾನುಭವಸಂಪನ್ನನಾಗಿ ಅವಿರಳ ಆನಂದದ ಅನುಭವವನ್ನು ಪಡೆಯುತ್ತಾನೆ. ಈ ಸ್ಥಿತಿಯನ್ನು ಪಡೆದ ಶಿವಯೋಗಿಗೆ "ಷಟ್‌ಸ್ಥಲಬ್ರಹ್ಮಿ", "ಅತಿವರ್ಣಾಶ್ರಮಿ" ಎಂಬ ಪರ್ಯಾಯವಾದ ಹೆಸರಿದೆ. ಜೀವ ಸಹಿತ ಈ ಸ್ಥಿತಿಗೆ ಏರಿದ ಶಿವಯೋಗಿಯು ಜೀವನ್ಮುಕ್ತ ಶಿವಶರಣನಾಗುತ್ತಾನೆ.

ಹೀಗೆ ವೀರಶೈವಮತದಲ್ಲಿ ಹೇಳಿದ ರೀತಿಯಲ್ಲಿ ಸಾಧನೆಯನ್ನು ಮಾಡಿ ಶಿವಾನುಭವ ಕೈವಲ್ಯವನ್ನು ಪಡೆಯಲು ಸಾಧಕನು ಕರ್ಮ, ಭಕ್ತಿ, ಜ್ಞಾನ—ಇವುಗಳನ್ನು ಅಳವಡಿಸಿ ಕೊಳ್ಳಬೇಕು. ಇವು ಮೂರಕ್ಕೂ ವೀರಶೈವಮತದಲ್ಲಿ ಸೂಕ್ತವಾದ ಸ್ಥಾನವಿದೆ. ವೀರಶೈವ ಮತದಲ್ಲಿ ಅಹಿಂಸೆ, ಸಮತೆ, ವಿಶ್ವಪ್ರೇಮ, ದಯಾಧರ್ಮ, ಅನುಭಾವ ಎಂಬ ವಿಚಾರ ಗಳಿಗೆ ವಿಶೇಷವಾದ ಮಹತ್ವ ಮತ್ತು ಸ್ಥಾನವಿದೆ. 'ದ್ವೈತಾದ್ವೈತಸಮಾಯುಕ್ತಂ ವೀರ ಶೈವಸ್ಯ ಲಕ್ಷಣಮ್' ಎಂಬ ಶಾಸ್ತ್ರವಾಕ್ಯದಂತೆ ವೀರಶೈವರು ಷಟ್‌ಸ್ಥಲಯೋಗಸಾಧನೆ ಯಲ್ಲಿ ದ್ವೈತವನ್ನೂ ಸಿದ್ಧಾವಸ್ಥೆಯಲ್ಲಿ ಅದ್ವೈತವನ್ನೂ ಅಂಗೀಕರಿಸಿರುತ್ತಾರೆ;

ವೀರಶೈವಮತಕ್ಕೆ ವೇದೋಪನಿಷತ್ತುಗಳು, ಆಗಮ, ಪುರಾಣ, ಸ್ಮೃತಿ, ತಂತ್ರ ಇವುಗಳು ಆಧಾರಗ್ರಂಥಗಳಾಗಿವೆ. ವರ್ಣಾಶ್ರಮಧರ್ಮ, ವೇದೋಕ್ತ ಕರ್ಮಕಾಂಡದ ಯಜ್ಞ ಯಾಗಾದಿಗಳು ಇವುಗಳನ್ನು ಅನುಸರಿಸದ ವೀರಶೈವಮತವು ವೇದದ ಜ್ಞಾನ ಕಾಂಡವನ್ನು ಒಪ್ಪಿದ್ದು, ಇದು ತಾಂತ್ರಿಕ ವೈದಿಕ ಮತವಾಗಿರುತ್ತದೆ.

**ಶಾಕ್ತಮತ**

ಶಿವ–ಶಕ್ತಿಯರು ವಿಚಾರದಲ್ಲಿ ಒಂದಕ್ಕೊಂದು ಭೇದವಿಲ್ಲ ಎಂದು ಹೇಳಿ ಶಿವನೇ ಸರ್ವೋತ್ತಮನು ಎಂದು ಸಾರಿದ ಮತವು ಶೈವಮತವಾಯಿತು. ಶಕ್ತಿಯೇ ಸರ್ವೋತ್ತಮವಾದುದು ಎಂದು ಹೇಳಿ ಪರತತ್ತ್ವವನ್ನು ದೇವಿ ಎಂದು ಆರಾಧಿಸಿದ ಸಂಪ್ರದಾಯವು ಶಕ್ತಿಸಂಪ್ರದಾಯವಾಯಿತು. ಶಾಕ್ತ ಮತ್ತು ಶೈವಮತಗಳ ತತ್ತ್ವವಿಚಾರಗಳಲ್ಲಿ ಬಹುಮಟ್ಟಿಗೆ ಏಕರೂಪತೆ ಇದ್ದು ಭೇದವು ಬಹಳ ಕಡಿಮೆ ಇರುತ್ತದೆ, ಹಾಗಾಗಿ ಶಾಕ್ತ ಮತ್ತು ಶೈವಮತಗಳು ಒಂದೇ ಕಾಂಡದ ಎರಡು ಕೊಂಬೆಗಳಂತೆ ಇವೆ ಎಂದು ಹೇಳ ಬಹುದು. ಜೀವಿಗಳು ಬಂಧವಿಮೋಚನೆಗೆ ಅನುಸರಿಸುವ ಸಾಧನ ಅನುಷ್ಠಾನಗಳ ವಿಚಾರ ದಲ್ಲಿ, ವಿಧಿನಿಯಮಗಳಲ್ಲಿ ಶೈವ ಮತ್ತು ಶಾಕ್ತಮತಗಳ ಒಳಗೆ ವಿಶೇಷವಾದ ವ್ಯತ್ಯಾಸ ಗಳು ಇರುತ್ತವೆ.

ಶಕ್ತಿಮತವನ್ನು ಶಾಕ್ತಮತ, ತಂತ್ರಮತ, ತಾಂತ್ರಿಕಮತ, ದೇವೀಪಂಥ—ಎಂದು ಕರೆಯುತ್ತಾರೆ. ತಾಂತ್ರಿಕಮತ ಎಂದರೆ ತತ್ತ್ವ ಮತ್ತು ಮಂತ್ರಗಳಿಂದ ಕೂಡಿದ ಮತ ಎಂದು ತಾತ್ಪರ್ಯ. ಕಾಮಿಕಾಗಮತಂತ್ರಾಂತರಪಟಲದಲ್ಲಿ ತಂತ್ರವೆಂದರೇನು ?— ಎಂಬುದಕ್ಕೆ ಹೀಗೆ ವಿವರಣೆ ನೀಡಲಾಗಿದೆ :

> **ತನೋತಿ ವಿಪುಲಾನ್ ಅರ್ಥಾನ್ ತಂತ್ರಮಂತ್ರಸಮನ್ವಿತಾನ್ ।**
> **ತ್ರಾಣಂ ಚ ಕುರುತೇ ಯಸ್ಮಾತ್ ತಂತ್ರಮಿತ್ಯಭಿಧೀಯತೇ ॥**

"ತಂತ್ರ ಮತ್ತು ಮಂತ್ರಗಳಿಂದ ಕೂಡಿದ ಅನೇಕ ಅರ್ಥಗಳನ್ನು ಹೇಳುವುದರಿಂದ ಮತ್ತು ಮನುಷ್ಯನನ್ನು ರಕ್ಷಿಸುವುದರಿಂದ ಈ ಶಾಸ್ತ್ರವು ತಂತ್ರವೆಂದು ಎನಿಸಿರುತ್ತದೆ." ದೇವರನ್ನು ಶಕ್ತಿ, ಭಗವತಿ, ದೇವಿ, ದುರ್ಗೆ, ಸರಸ್ವತಿ, ಲಕ್ಷ್ಮಿ, ಮಹಾಕಾಳಿ, ಲಲಿತೆ, ತ್ರಿಪುರಸುಂದರಿ, ರಾಜರಾಜೇಶ್ವರಿ ಎಂದು ಸಂಬೋಧಿಸಿ ತದನುಸಾರವಾದ ವಿಚಾರ ಗಳಿಂದ ಕೂಡಿರುವ ಪಂಥವಾದ್ದರಿಂದ ಇದನ್ನು 'ದೇವೀಪಂಥ', 'ಶಾಕ್ತಪಂಥ' ಎಂದು ಕರೆಯುತ್ತಾರೆ.

ವೇದದಲ್ಲಿ ಬರುವ ಶ್ರೀಸೂಕ್ತ, ಭೂಸೂಕ್ತ, ದುರ್ಗಾಸೂಕ್ತ, ಅಂಭ್ರಣಿಸೂಕ್ತ ಇವುಗಳನ್ನು ಆಧರಿಸಿ ಮೂಲವಾಗಿ ಶಾಕ್ತಮತವು ರೂಪುಗೊಂಡಿತು ಎಂದು ಶಾಕ್ತಮತದ ಕುರಿತಾದ ವಿವರಗಳಿಂದ ತಿಳಿದುಬರುತ್ತದೆ. ಆದರೆ ಶಕ್ತಿತಂತ್ರಗಳು ಮತ್ತು ಶಾಕ್ತ ಆಗಮಗ್ರಂಥಗಳು ಈ ಮತಕ್ಕೆ ಮುಖ್ಯವಾದ ಪ್ರಮಾಣಗ್ರಂಥಗಳಾಗಿವೆ. ಹಾಗಿದ್ದರೂ, ಶಾಕ್ತಸಂಪ್ರದಾಯವನ್ನು ವಿವರಿಸುವ ಬೇರೆ ಉಪನಿಷತ್ತುಗಳೇ ಇದ್ದು ಅವುಗಳಲ್ಲಿ ತ್ರಿಪುರೋಪನಿಷತ್, ಭಾವನೋಪನಿಷತ್, ಕೌಲೋಪನಿಷತ್ ಇವುಗಳು ಪ್ರಸಿದ್ಧವಾಗಿವೆ.

ಪುರಾಣಗಳಲ್ಲಿ ದೇವೀಭಾಗವತ ಪುರಾಣವು ಶಕ್ತಿಮತದ ಪ್ರಸಿದ್ಧವಾದ ಒಂದು ಆಧಾರ ಗ್ರಂಥವಾಗಿರುತ್ತದೆ.

ತತ್ತ್ವವಿಚಾರ : ಪರವಸ್ತು ಪರತತ್ತ್ವವನ್ನು ಪರಮಶಿವ ಎಂದು ಶಕ್ತಿಮತದಲ್ಲಿ ಹೇಳಲಾಗಿದೆ. ಪರಮಶಿವನ ಎರಡು ಸ್ವರೂಪಗಳೇ ಶಿವಶಕ್ತಿಯರು. ಪರವಸ್ತುವಿನ ನಿರ್ಗುಣ ಶುದ್ಧಸ್ವರೂಪವೇ ಶಿವ. ಪರವಸ್ತುವಿನ ಅಂತರ್ಗತವಾದ ಇಚ್ಛಾ, ಜ್ಞಾನ, ಕ್ರಿಯಾ ಮತ್ತು ಸ್ವಾತಂತ್ರ್ಯಗಳ ಸಮುದಾಯವೇ "ಶಕ್ತಿ". ಅದನ್ನು ವಿಮರ್ಶರೂಪ ಎಂದೂ ಹೇಳುತ್ತಾರೆ. ಮೂಲತಃ ಶಿವಶಕ್ತಿಯರು ಬೇರೆಯಲ್ಲ, ಒಂದೇ ವಸ್ತುವಿನ ಎರಡು ರೂಪಭೇದಗಳಷ್ಟೆ. ಶಿವನು ಶುದ್ಧಸತ್ವವಾದರೆ ಶಕ್ತಿಯು ಆ ಸತ್ವದ ನಿರ್ಮಾಣಶಕ್ತಿ ಸ್ವಭಾವವಾಗಿದೆ. ಚಂದ್ರ ಮತ್ತು ಬೆಳದಿಂಗಳಿನಂತೆ, ಅಗ್ನಿ ಮತ್ತು ಸುಡುವ ಶಕ್ತಿಯಂತೆ ಶಿವಶಕ್ತಿಯರಲ್ಲಿ ಭೇದವಿರುವುದಿಲ್ಲ. ಶಿವನು ನಿರ್ಗುಣ ನಿರಾಕಾರನಾಗಿದ್ದು ಶಕ್ತಿಯುತನಾಗಿದ್ದರೆ ಶಕ್ತಿಯು ಇಚ್ಛಾ, ಜ್ಞಾನ, ಕ್ರಿಯಾ, ಸ್ವಾತಂತ್ರ್ಯಸಮುದಾಯವಾಗಿದ್ದು, ಚೈತನ್ಯದಿಂದ ಕೂಡಿದ್ದು ವಿಶ್ವವ್ಯವಹಾರದಲ್ಲಿ ಶಿವನಿಗಿಂತ ಹೆಚ್ಚು ಪ್ರಾಧಾನ್ಯವನ್ನು ಪಡೆದಿರುತ್ತದೆ. ಶಿವ-ಶಕ್ತಿಯರೆಂದರೆ ಶಬ್ದ ಮತ್ತು ಶಬ್ದಾರ್ಥದಂತೆ ಪರಸ್ಪರ ನಿತ್ಯ ಸಂಬಂಧವೂ ನಿತ್ಯ ಐಕ್ಯವೂ ಉಳ್ಳವರಾಗಿದ್ದಾರೆ. ಶಕ್ತಿಯಿಂದಲೇ ಈ ಜಗತ್ತು, ಚರಾಚರ ವಸ್ತುಗಳೆಲ್ಲವೂ ಸೃಷ್ಟಿಯಾಗಿದೆ. ಜಗತ್ತಿನ ಸೃಷ್ಟಿಗೆ ಕಾರಣವಾದ ಶಕ್ತಿಯು ಪರಾಶಕ್ತಿಯಾಗಿ ಜಗನ್ಮಾತೆ ಎಂದೆನಿಸಿರುತ್ತಾಳೆ. ಜಗನ್ಮಾತೆಯು ಸೃಷ್ಟಿಸ್ಥಿತಿಸಂಹಾರಕಾರಿಣಿಯಾಗಿದ್ದಾಳೆ. ಬ್ರಹ್ಮ, ವಿಷ್ಣು, ಶಿವ ಎಂಬ ಈ ದೇವತಾರೂಪಗಳೆಲ್ಲವೂ ಶಕ್ತಿಯ ಗುಣಗಳಾಗಿವೆ.

ಶಕ್ತಿಯಿಂದ ಜಗತ್ತಿನ ಮೂವತ್ತಾರು ತತ್ತ್ವಗಳು ಉತ್ಪತ್ತಿಯಾಗಿರುತ್ತವೆ. ಈ ಜಗತ್ತು, ಜೀವರುಗಳು ಎಲ್ಲರೂ ಪರಶಿವನ ಶಕ್ತಿಯಿಂದಾಗಿ ಉತ್ಪನ್ನವಾದವರಾದುದರಿಂದ ಜಗತ್ತು, ಜೀವರುಗಳು ಎಲ್ಲರೂ ಸತ್ಯವಾಗಿದ್ದಾರೆ. ಮೂವತ್ತಾರು ತತ್ತ್ವಗಳು ಯಾವುವೆಂದರೆ :

| | |
|---|---|
| ಪಂಚಭೂತಗಳು | ೫ |
| ಪಂಚತನ್ಮಾತ್ರಗಳು | ೫ |
| ಹನ್ನೊಂದು ಇಂದ್ರಿಯಗಳು | ೧೧ |
| ಅಹಂಕಾರ, ಮಹತ್ ಮತ್ತು ಮೂಲಪ್ರಕೃತಿ | ೩ |
| ಪುರುಷರು, ಪಂಚಕಂಚುಗಳು, ಮಾಯೆ | ೭ |
| ವಿದ್ಯಾ, ಈಶ್ವರ, ಸದಾಶಿವ, ಶಕ್ತಿ, ಶಿವ | ೫ |
| | ೩೬ |

ಸೂರ್ಯನು ತನ್ನ ಕಿರಣಗಳ ತಾಪದಿಂದ ಮೇಘಗಳ ಉತ್ಪತ್ತಿಗೆ ಕಾರಣನಾಗುತ್ತಾನೆ. ಆ ಮೇಘಗಳು ಸೂರ್ಯನನ್ನು ಮರೆಮಾಡುತ್ತವೆ. ಹಾಗೆಯೇ ಶಿವನು ತನ್ನ ಮಾಯಾಶಕ್ತಿಯಿಂದ ತಾನು 'ಅಪೂರ್ಣ' ಎಂಬ ಸಂಕೋಚತೆಗೆ ಒಳಗಾಗಿ ಜೀವನಾಗುತ್ತಾನೆ. ಜೀವಿಗಳು ಅಸಂಖ್ಯವಾಗಿವೆ. ಜೀವಿಗಳು ಆಣವ, ಮಾಯಿಕ ಮತ್ತು ಕಾರ್ಮ ಎಂಬ

ಮಲತ್ರಯಗಳಿಂದಾಗಿ ಸಂಸಾರಬಂಧನಕ್ಕೆ ಒಳಗಾಗಿವೆ. ಮಲತ್ರಯ ನಿವೃತ್ತಿಯಾದಾಗ ಜೀವನು ಶಿವನಾಗುತ್ತಾನೆ. ಜೀವನಿಗೆ ಶಿವಜ್ಞಾನ ಬಂದು ಶಿವ-ಶಕ್ತಿಗಳ ಐಕ್ಯವಾಗುತ್ತದೆ.

ಈ ವಿಶ್ವವು ಶಕ್ತಿಯಿಂದ ಹುಟ್ಟಿದ್ದು ಇದನ್ನು ಬ್ರಹ್ಮಾಂಡ ಎಂದು ಕರೆಯಲಾಗಿದೆ. ಬ್ರಹ್ಮಾಂಡದಲ್ಲಿ ಇರುವ ಮೂವತ್ತಾರು ತತ್ತ್ವಗಳು ಪಿಂಡಾಂಡವಾದ ಜೀವನಲ್ಲೂ ಸೇರಿರುತ್ತವೆ. ಜೀವಿಯು ಬ್ರಹ್ಮಾಂಡದ ಸೂಕ್ಷ್ಮಪ್ರತೀಕನಾಗಿದ್ದಾನೆ. ಪಿಂಡಾಂಡವನ್ನು ಸರಿಯಾಗಿ ಅರಿತಾಗ ಬ್ರಹ್ಮಾಂಡದ ಯಥಾರ್ಥಜ್ಞಾನ ಉಂಟಾಗುತ್ತದೆ.

ಅನುಷ್ಠಾನ ವಿಚಾರ : ಮೋಕ್ಷವೆಂದರೆ ಜೀವನು ತನ್ನ ಮಲತ್ರಯಗಳಿಂದ ವಿಮುಕ್ತನಾಗಿ ಶಕ್ತಿ—ಅಭಿನ್ನವಾದ ಶಿವನಲ್ಲಿ ಐಕ್ಯವಾಗುವುದಾಗಿದೆ. ಮೋಕ್ಷಪ್ರಾಪ್ತಿಗೆ ಸೂಕ್ತವಾದ ಸಾಧನೆಯನ್ನು ಮಾಡಬೇಕು. ಸಾಧನೆಗೆ ಗುರುವಿನ ಮಾರ್ಗದರ್ಶನ ಅತ್ಯಂತ ಅಗತ್ಯ. ಗುರುವಿನ ಉಪದೇಶ ಮತ್ತು ಮಾರ್ಗದರ್ಶನವಿಲ್ಲದೆ ಯಾವ ಸಾಧನೆಯನ್ನೂ ಮಾಡಬಾರದು. ಮಾಡಿದರೆ ಅದು ಅಪಾಯಕಾರಿಯಾಗಿ ಪರಿಣಮಿಸೀತು ಎಂಬುದು ಶಾಕ್ತಮತದ ಸ್ಪಷ್ಟವಾದ ನಿಲವು ಆಗಿದೆ.

ಶಾಕ್ತಸಾಧಕರನ್ನು ತಂತ್ರಶಾಸ್ತ್ರದಲ್ಲಿ ಪಶು, ವೀರ, ದಿವ್ಯ ಎಂದು ಮೂರು ವಿಧವಾಗಿ ವರ್ಗೀಕರಿಸಲಾಗಿದೆ.

ಪಶುವರ್ಗ (ಸ್ಪರ್ಶಕ) : ಪಶುವರ್ಗದಲ್ಲಿ ತಮೋಗುಣವು ಪ್ರಧಾನವಾಗಿದ್ದು ಅವರು ಕಾಮಕ್ರೋಧಾದಿ ಷಡ್ವೈರಿಗಳ ಪ್ರಭಾವಕ್ಕೆ ಒಳಗಾಗಿ ಅತ್ಯಂತ ಲೌಕಿಕರಾಗಿ ಇರುತ್ತಾರೆ. ಇವರು ಬಾಹ್ಯವಾದ ಪೂಜಾಚರಣೆಗಳಿಂದ ಕೂಡಿ ಸಾಧನೆಮಾಡುತ್ತಿದ್ದರೂ ಇವರಲ್ಲಿ ಪರಿಶುದ್ಧತೆ ಇರುವುದಿಲ್ಲ. ಇವರು ಪಶುವೃತ್ತಿ, ಪಶುಸ್ವಭಾವಗಳಿಂದ ಕೂಡಿರುತ್ತಾ ತುಂಬಾ ಕನಿಷ್ಠತರಹದ ಸಾಧಕರಾಗಿರುತ್ತಾರೆ.

ವೀರವರ್ಗ (ಚುಂಬಕ) : ವೀರಸ್ವಭಾವದ ಸಾಧಕರಲ್ಲಿ ರಜೋಗುಣವು ಪ್ರಧಾನವಾದುದಾಗಿರುತ್ತದೆ. ಈ ವರ್ಗದ ಸಾಧಕರು ವೀರರೂ, ಇಂದ್ರಿಯನಿಗ್ರಹಗಳಿಂದ ಕೂಡಿದವರೂ ಆಗಿರುತ್ತಾರೆ. ಇವರು ಪಂಚತತ್ತ್ವಕ್ರಿಯಾದಿಗಳನ್ನು ಮಾಡುತ್ತಾ ವಾಮಮಾರ್ಗಸಾಧನೆ ಮಾಡುತ್ತಿರುತ್ತಾರೆ.

ದಿವ್ಯವರ್ಗ (ಭೋಜಕ) : ಇವರಲ್ಲಿ ಸತ್ತ್ವಗುಣವು ಪ್ರಧಾನವಾಗಿದ್ದು ಇವರು ಜಗನ್ಮಾತೆಯನ್ನು ಎಲ್ಲೆಲ್ಲೂ ದರ್ಶಿಸುತ್ತಾ ದಿವ್ಯ ಆನಂದಭಾವದಲ್ಲಿ ಇರುತ್ತಾರೆ. ಇವರು ಇಂದ್ರಿಯನಿಗ್ರಹವನ್ನು ಆಗಲೇ ಪಡೆದವರಂತಿದ್ದು ಬಾಹ್ಯವಾದ ಎಲ್ಲಾ ವ್ರತ-ಆಚಾರಗಳಿಂದ ಅತೀತರಾಗಿ ಆಂತರಿಕವಾಗಿಯೇ ಉಪಾಸನೆಮಾಡುತ್ತಾ ದಿವ್ಯವಾದ ಆನಂದವನ್ನು ಅನುಭವಿಸುತ್ತಾರೆ.

ತಂತ್ರಸಾಧನೆಯಲ್ಲಿ ವೇದದ ಕರ್ಮಕಾಂಡ, ಉಪನಿಷತ್ತಿನ ವಿವೇಕವೈರಾಗ್ಯ, ರಾಜಯೋಗದ ಯಮನಿಯಮಾದಿಗಳು, ಪುರಾಣಗಳಲ್ಲಿ ವಿವರಿಸಿದ ರೀತಿಯ ಭಗವಂತನ ಮೇಲಿನ ಪ್ರೀತಿ—ಅವನಿಗಾಗಿ ಹಂಬಲಿಸುವಿಕೆ, ಈ ಎಲ್ಲ ಅಂಶವೂ ಸೇರಿದ್ದು ಇದೊಂದು ಸಾಧನಮಾರ್ಗಗಳ ಸಮನ್ವಯದಂತೆ ಇದೆ ಎಂದು ಪ್ರಸಿದ್ಧವಾಗಿರುತ್ತದೆ. ಸ್ವಪ್ರಯತ್ನ, ಶರಣಾಗತಿ ಮತ್ತು ದೇವರ ದಯೆಗಾಗಿ ಪ್ರಾರ್ಥನೆ ಇವು ಮೂರೂ ಮುಖ್ಯ ಎಂದು

ತಂತ್ರಸಾಧನೆಯಲ್ಲಿ ಹೇಳಲಾಗಿದೆ. ಲೌಕಿಕ ಸುಖಭೋಗ ಮತ್ತು ಪಾರಮಾರ್ಥಿಕ ಶಾಂತಿ-ಮುಕ್ತಿಗಳು ತಂತ್ರಸಾಧನೆಯಿಂದ ದೊರೆಯುತ್ತವೆ ಎಂದು ತಂತ್ರಗ್ರಂಥಗಳಲ್ಲಿ ವಿವರಿಸಲಾಗಿದೆ.

ತಂತ್ರಸಾಧನೆಯಲ್ಲಿ ಎರಡು ಮಾರ್ಗಗಳಿದ್ದು ಅವುಗಳಲ್ಲಿ ಒಂದು ಸಮಯಾಚಾರ ಅಥವಾ ದಕ್ಷಿಣಾಚಾರ, ಇನ್ನೊಂದು ಕೌಲಾಚಾರ ಅಥವಾ ವಾಮಾಚಾರವಾಗಿರುತ್ತದೆ.

ದಕ್ಷಿಣಾಚಾರವು ವೇದೋಕ್ತವಾದ ಕರ್ಮ-ಸಂಸ್ಕಾರ ವಿಶೇಷಗಳನ್ನು ಅನುಸರಿಸುವ ಮಾರ್ಗವಾಗಿದೆ. ಇದು ಸಾಂಪ್ರದಾಯಿಕ, ವೈದಿಕ, ದಿವ್ಯವಾದ ಮಾರ್ಗವಾಗಿದೆ. ಈ ಮಾರ್ಗಗಾಮಿಗಳಲ್ಲಿ ಜಗನ್ಮಾತೆಯನ್ನು ಶ್ರೀಲಲಿತಾ, ತ್ರಿಪುರಸುಂದರಿ, ಶ್ರೀರಾಜರಾಜೇಶ್ವರಿ ಎಂದು ವಿಶೇಷವಾಗಿ ಕೊಂಡಾಡಿ ಯಂತ್ರ, ಮಂತ್ರ, ತಂತ್ರಗಳ ಮೂಲಕ ಆರಾಧಿಸುವವರಿದ್ದು ಅವರನ್ನು ಶ್ರೀವಿದ್ಯಾ ಉಪಾಸಕರೆಂದು, ಆ ಸಂಪ್ರದಾಯವನ್ನು ಶ್ರೀವಿದ್ಯಾ ಸಂಪ್ರದಾಯ ಎಂದು ಕರೆಯಲಾಗಿದೆ. ವಾಮಾಚಾರಮಾರ್ಗ ಎಂದರೆ ವೇದೋಕ್ತವಲ್ಲದ ತಾಂತ್ರಿಕವಾದ ಕ್ರಿಯೆ-ಸಂಸ್ಕಾರಗಳನ್ನು ಅನುಸರಿಸಿ ಸಾಧನಮಾರ್ಗಗಳನ್ನು ಹೇಳುವ ಮಾರ್ಗ. ಈ ಮಾರ್ಗವನ್ನು ಸ್ವತಂತ್ರ. ಎಡ ಎಂದು ಕರೆಯುತ್ತಾರೆ. (ವಾಮೋ ವಿಪರೀತೋ ವೇದವಿರುದ್ಧೋ ವಾ ಆಚಾರಃ ವಾಮಾಚಾರಃ—ಶಬ್ದಕಲ್ಪದ್ರುಮ.) ಆಂತರಿಕವಾದ ಧ್ಯಾನಪ್ರಧಾನವಾದ ಉಪಾಸನೆಯನ್ನು ಸಮಯಾಚಾರ ಎಂತಲೂ, ಬಾಹ್ಯವಾದ ವಿವಿಧ ಪೂಜಾದಿಗಳನ್ನು ಅನುಸರಿಸುವುದನ್ನು ಕೌಲಮಾರ್ಗ ಎಂದೂ ಹೇಳುತ್ತಾರೆ.

ಶಕ್ತಿಸಾಧನೆಯ ಗುರಿಯು ಕುಂಡಲಿನೀ ಶಕ್ತಿಯನ್ನು ಜಾಗ್ರತಗೊಳಿಸುವುದೇ ಆಗಿದ್ದು, ದಕ್ಷಿಣ ಮತ್ತು ವಾಮಮಾರ್ಗಗಳಲ್ಲಿ ಈ ಕುಂಡಲಿನಿಯನ್ನು ಜಾಗ್ರತಗೊಳಿಸುವ ಕ್ರಮದಲ್ಲಿ ವ್ಯತ್ಯಾಸವೇ ವಿನಾ ಮೂಲ ಉದ್ದೇಶ, ಸಾಧನೆಯ ಗುರಿ ಇವುಗಳಲ್ಲಿ ವ್ಯತ್ಯಾಸವೇನೂ ಇರುವುದಿಲ್ಲ.

ಸಾಧನೆಯ ಹಿಂದಿರುವ ತತ್ತ್ವ : ಜಗನ್ಮಾತೆಯು ಬ್ರಹ್ಮಾಂಡದಲ್ಲೆಲ್ಲಾ ಇರುವಂತೆ ಪಿಂಡಾಂಡದಲ್ಲಿಯೂ ವ್ಯಾಪಿಸಿರುತ್ತಾಳೆ. ಪಿಂಡಾಂಡದಲ್ಲಿ ಆಕೆಯ ಸಾಕ್ಷಾತ್ಕಾರ ಆದರೆ ಮುಕ್ತಿಪ್ರಾಪ್ತಿ ಆಗುತ್ತದೆ. ಪಿಂಡಾಂಡವಾದ ಈ ಶರೀರದಲ್ಲಿ ಆಕೆಯು ಆರು ಚಕ್ರಗಳಲ್ಲಿ ಆರು ಯೋಗಿನಿಯಾಗಿ ಆರು ಶಕ್ತಿಸ್ವರೂಪಿಣಿಯಾಗಿ ಇರುತ್ತಾಳೆ. ಶ್ರೀದೇವಿಯು ಮನುಷ್ಯಶರೀರದ ಮೂಲಾಧಾರಸ್ಥಳದಲ್ಲಿ ಮೂಲಾಧಾರಚಕ್ರದಲ್ಲಿ ಮೂಲವಾಗಿ ಕುಂಡಲಿನೀಶಕ್ತಿಯಾಗಿ ನಿದ್ರಿಸುತ್ತಿದ್ದಾಳೆ. ಸಾಧನೆಯಿಂದ ಕುಂಡಲಿನಿಯನ್ನು ಜಾಗ್ರತಗೊಳಿಸಿ ಶರೀರದ ವಿವಿಧ ಭಾಗಗಳಲ್ಲಿ ಇರುವ ಆರು ಚಕ್ರಗಳ ಮೂಲಕ ಹರಿಯಿಸಿ "ಸಹಸ್ರಾರ"ದಲ್ಲಿ ಶಿವೈಕ್ಯವಾಗಿಸಬೇಕು. ಆಗ ಶಿವ–ಶಕ್ತಿ ಸಂಯೋಗವಾಗಿ ಮೋಕ್ಷ ಅರ್ಥಾತ್ ಸಚ್ಚಿದಾನಂದ ಪ್ರಾಪ್ತಿಯಾಗುತ್ತದೆ.

ಕುಂಡಲಿನೀಶಕ್ತಿಯೆಂದು ಹೆಸರು ಬರಲು ಚಕ್ರಾಕಾರದಲ್ಲಿ ಕುಂಡಲಿನೀರೂಪದಲ್ಲಿ ದಿವ್ಯಶಕ್ತಿಯು ಸುರುಳಿಕೊಂಡು ಮೂಲಾಧಾರದಲ್ಲಿ ಇರುವುದೇ ಕಾರಣವಾಗುತ್ತದೆ. ಯೋಗದ ದೃಷ್ಟಿಯಿಂದ ಮಾತ್ರ ಈ ಚಕ್ರಗಳೂ ಚಕ್ರಗಳ ಒಳಗೆ ಇರುವ ಪದ್ಮಗಳೂ

ಕಾಣುತ್ತವೆ. ಕುಂಡಲಿನಿಯನ್ನು ಜಾಗ್ರತಗೊಳಿಸುವ ಒಂದು ವಿಧದ ಯೋಗಮಾರ್ಗ ವಾದ್ದರಿಂದ ಇದಕ್ಕೆ 'ಕುಂಡಲಿನೀಯೋಗ' ಎಂಬ ಹೆಸರೂ ಬಂದಿರುತ್ತದೆ. ಯೋಗವು ಸರಿಯಾಗಿ ಸಾಗಬೇಕಾದರೆ ಬಾಹ್ಯ ಮತ್ತು ಆಂತರಿಕವಾದ ಕ್ರಿಯಾಸಾಧನೆಗಳು ನೆರವೇರ ಬೇಕು. ಹಾಗಾಗಿ ತಂತ್ರಸಾಧನೆಯಲ್ಲಿ ಬಾಹ್ಯಾಚರಣೆಗೆ ಸಾಕಷ್ಟು ಪ್ರಾಶಸ್ತ್ಯ ಇದ್ದು ಆಂತರಿಕ ಆಚರಣೆಯು ಅಷ್ಟೇ ಮುಖ್ಯವಾಗಿರುತ್ತದೆ. ಮಾನವನ ಶಾರೀರಿಕ ಮತ್ತು ಮಾನಸಿಕವಾದ ಶಕ್ತಿ ಆಸೆ ಆಕಾಂಕ್ಷೆ ಪ್ರವೃತ್ತಿಗಳನ್ನು ಸರಿಯಾದ ಹಾದಿಯಲ್ಲಿ ಹರಿಯು ವಂತೆ ಮಾಡಿ ತನ್ಮೂಲಕ ಸಾಧಕನು ಸಚ್ಚಿದಾನಂದದ ಅನುಭವವನ್ನು ಪಡೆಯುವಂತೆ ಮಾಡುವುದೇ ಶಾಕ್ತಸಾಧನೆಯ ಗುರಿ. ಆದುದರಿಂದ ಶಾರೀರಿಕ ಹಾಗೂ ಮಾನಸಿಕ ಪ್ರವೃತ್ತಿಗಳನ್ನು ಉದಾತ್ತೀಕರಣಮಾಡಲು ತಂತ್ರೋಕ್ತಸಾಧನಗಳಲ್ಲಿ ಬಾಹ್ಯಪೂಜಾದಿ ಗಳು, ಆಂತರಿಕವಾದ ಜಪಧ್ಯಾನಾದಿಗಳು ಹೇಳಲ್ಪಟ್ಟಿರುತ್ತವೆ.

ತಂತ್ರಸಾಧನೆಯ ಮುಖ್ಯ ಸಲಕರಣಾಂಶಗಳು : ಗುರು, ಯಂತ್ರ, ಮಂತ್ರ ಮತ್ತು ತಂತ್ರ.

ಗುರು : ತಂತ್ರಸಾಧನೆಯಲ್ಲಿ ಸಿದ್ಧಿಪಡೆದವರು, ಶಾಸ್ತ್ರಗಳನ್ನು ಬಲ್ಲವರು, ಸಾಧಕನಿಗೆ ಎಲ್ಲಾ ವಿಧದಲ್ಲೂ ನೆರವು-ಮಾರ್ಗದರ್ಶನ ಮತ್ತು ರಕ್ಷಣೆಯನ್ನು ನೀಡುವವರೇ ಗುರು.

ಯಂತ್ರ : ಯಂತ್ರವೆಂದರೆ ಸಾಧಕನ ಉಪಾಸನಾದೇವತೆಯ ರೇಖಾಕೃತಿ ಆಗಿದ್ದು ಅದಕ್ಕೆ ತಂತ್ರಸಾಧನೆಯಲ್ಲಿ ಮಹತ್ತರವಾದ ಸ್ಥಾನವಿದೆ. ದೈವೀಶಕ್ತಿಯನ್ನು ಅದರಲ್ಲಿ ನಿಯಂತ್ರಣಮಾಡುವುದರಿಂದ ಇದಕ್ಕೆ ಯಂತ್ರ ಎಂದು ಕರೆಯುತ್ತಾರೆ. ಯಂತ್ರಕ್ಕೆ ನಿಜವಾದ ಶಕ್ತಿಯನ್ನು ಸಾಧಕನು ಮಂತ್ರ ಮತ್ತು ಉಪಾಸನೆಗಳಿಂದ ತುಂಬಿದಾಗ ಅದರಲ್ಲಿ ದೇವಿಯು ಆವಿರ್ಭವಿಸುತ್ತಾಳೆ. ಯಂತ್ರವು ತಂತ್ರಸಾಧನೆಯಲ್ಲಿ ಉಪಾಸನೆಯ ವಸ್ತು (ಬಾಹ್ಯವಸ್ತು) ಆಗಿದೆ. ದೇವಮೂರ್ತಿಗಳು ದೇವಿಯ ಸ್ಪರ್ಶವೇದ್ಯವಾದ ನಿಜ ವಾದ ಪ್ರತಿನಿಧಿಗಳಾಗಿವೆ. ಮಂತ್ರಗಳೆಲ್ಲವನ್ನೂ ರೇಖೆ, ಬಿಂದುಗಳಿಂದ ನೇರ ಹಾಗೂ ಅಂಕುಡೊಂಕಾಗಿ ಚಿತ್ರಿಸುತ್ತಾರೆ, ಲೋಹದ ಹಲಗೆಗಳ ಮೇಲೆ ಕೆತ್ತುತ್ತಾರೆ. ಶಕ್ತಿ ಸ್ವರೂಪಿಣಿಯಾದ ಜಗನ್ಮಾತೆಯು ಮನುಷ್ಯನ ಶರೀರದಲ್ಲಿ ಎಲ್ಲೆಲ್ಲಿ ಯಾವ ಯಾವ ರೂಪದಿಂದ ನೆಲಸಿರುತ್ತಾಳೆ ಎಂಬುದನ್ನು ಸಾಂಕೇತಿಕವಾಗಿ ಯಂತ್ರಗಳು ಸೂಚಿಸುತ್ತವೆ. ಯಂತ್ರಗಳಲ್ಲೆಲ್ಲಾ ಶ್ರೀಚಕ್ರ ಯಂತ್ರವು ಅತ್ಯಂತ ಪವಿತ್ರ, ಮಹತ್ವಪೂರ್ಣ ಹಾಗೂ ಪ್ರಸಿದ್ಧವಾದುದಾಗಿರುತ್ತದೆ. ಶ್ರೀಚಕ್ರವೇ ಜಗನ್ಮಾತೆಯ ಸಾಕ್ಷಾತ್ ಸ್ವರೂಪ ಎಂದು (ಚಕ್ರಸ್ಯಾಪಿ ಮಹೇಶ್ಯಾ ನ ಭೇದಲೇಶೋಽಪಿ ಭಾವ್ಯತೇ ವಿಬುಧೈಃ—ಕಾಮಕಲಾ ವಿಲಾಸ) ಹೇಳಲಾಗಿದೆ. ಯಂತ್ರವು ಶ್ರೀದೇವಿಯ ರೇಖೆಗಳ ಮೂಲಕವಾದ ಪ್ರಕಟೀಕರಣ ವಾಗಿದ್ದು ಯಂತ್ರಕ್ಕೂ ದೇವಿಗೂ ಸಾನ್ನಿಧ್ಯದಲ್ಲಿ ಅಂತರವೇನೂ ಇರುವುದಿಲ್ಲ. ಶ್ರೀದೇವಿಯ ಮಹಾಕಾಳಿ, ಮಹಾಲಕ್ಷ್ಮಿ, ಮಹಾಸರಸ್ವತಿ, ಮಹೇಶ್ವರಿ, ತ್ರಿಪುರಸುಂದರಿ, ಲಲಿತಾಂಬಿಕಾ ಇತ್ಯಾದಿ ವಿವಿಧ ಶಕ್ತಿಸ್ವರೂಪಗಳನ್ನು ಕುರಿತಾಗಿ ಸಾಧಕನು ಉಪಾಸನೆ ಮಾಡಿ ಕೊನೆಗೆ ಶಿವಶಕ್ತಿಯಲ್ಲಿ ಐಕ್ಯವಾಗುವುದಕ್ಕೆ ಆಯಾಯ ದೇವತಾಯಂತ್ರಗಳು ನೆರವಾಗುತ್ತವೆ.

ಮಂತ್ರ : "ಮನನಾತ್ ತ್ರಾಯತೇ ಇತಿ ಮಂತ್ರಃ" ಎಂದರೆ ಚಿಂತನೆ ಮಾಡಿದಾಗ ಮುಕ್ತಿಯನ್ನು ನೀಡುವುದಕ್ಕೆ ಯಾವುದು ನೆರವಾಗುವುದೋ ಅದೇ ಮಂತ್ರ. ಮನನ ಎಂದರೆ ಯೋಚಿಸುವುದು, ತ್ರಾಣ ಎಂದರೆ ಸಂಸಾರದಿಂದ ಮುಕ್ತಿ. ಒಟ್ಟಿನಲ್ಲಿ ಯಾವುದನ್ನು ಪುನಃಪುನಃ ಉಚ್ಚರಿಸಿ ಚಿಂತಿಸಿದುದರಿಂದ ಸಂಸಾರಮುಕ್ತಿ ಲಭಿಸುವುದೋ ಅದೇ ಮಂತ್ರ ಎಂದು ಹೇಳಬಹುದು. ಮಂತ್ರವು ಶ್ರೀದೇವಿಯ ಶಬ್ದಪ್ರತೀಕ, ಮಂತ್ರ ಬೇರೆ ದೇವಿ ಬೇರೆಯಲ್ಲ. ಶ್ರೀದೇವಿಯು ಮಂತ್ರಶಬ್ದರೂಪಿಣಿಯಾಗಿರುತ್ತಾಳೆ. ಮಂತ್ರದ ಉಚ್ಚಾರಣೆ, ಮನನಗಳಿಂದ ಶಬ್ದಶಕ್ತಿ ಉತ್ಪತ್ತಿಯಾಗಿ, ತನ್ಮೂಲಕ ದೇವಿಯ ಶಕ್ತಿ ಪ್ರಕಟವಾಗಿ ಸಾಧಕನಿಗೆ ದೇವಿಯ ಅಸ್ತಿತ್ವದ ಅರಿವು, ಅನುಗ್ರಹದ ಭಾಗ್ಯ ಲಭ್ಯವಾಗುತ್ತದೆ. ಶ್ರೀದೇವಿಯ ನಾಮಗಳೆಲ್ಲವೂ ಮಂತ್ರಗಳೇ. ಅಕ್ಷರಗಳು ಆಕೆಯ ವರ್ಣಮಾಲೆಗಳು. ಅವುಗಳಲ್ಲಿ ಪಂಚದಶ ಅಕ್ಷರಗಳಿಂದ ಕೂಡಿರುವ 'ಪಂಚದಶಾಕ್ಷರೀ' ಎಂಬ ಮಂತ್ರವು ಶ್ರೀದೇವಿಯ ಮಂತ್ರಸ್ವರೂಪವೇ ಆಗಿದ್ದು ಅತ್ಯಂತ ಪವಿತ್ರವೂ ಮಹತ್ವಪೂರ್ಣವೂ ಮತ್ತು ಮುಖ್ಯವೂ ಆದುದಾಗಿದೆ. ಶಾಕ್ತಸಾಧನೆಯಲ್ಲಿ ಈ ಮಂತ್ರವು ಶಕ್ತಿಗಾಯಿತ್ರೀ ಎಂದು ಪ್ರಸಿದ್ಧಿಯನ್ನು ಪಡೆದಿದೆ. ಈ ಮಂತ್ರವನ್ನು ಸಾಧಕನು ಗುರುವಿನಿಂದ ಉಪದೇಶವಾಗಿ ಪಡೆಯಬೇಕಾಗಿದ್ದು ಮಂತ್ರವು ರಹಸ್ಯವಾದುದಾಗಿದೆ. ಮಂತ್ರೋಪಾಸನೆಯಿಂದ ಸಾಧಕನು ಮಂತ್ರ ಮತ್ತು ಮಂತ್ರದ ದೇವತೆ ಬೇರೆ ಅಲ್ಲ ಎಂದು ತಿಳಿಯುತ್ತಾನೆ.

ತಂತ್ರ : ಗುರುವಿನ ಮುಖೇನ ಉಪದೇಶದಂತೆ ಮಂತ್ರಗಳನ್ನು ಉಪಯೋಗಿಸಿ ಯಂತ್ರ ಮುಖೇನವಾಗಿಯೂ, ಮೂರ್ತಿಮುಖಾಂತರವಾಗಿಯೂ ಶ್ರೀದೇವಿಯನ್ನು ಆರಾಧಿಸುವುದು, ಕುಂಡಲಿನೀಯೋಗಾಭ್ಯಾಸ ಮಾಡುವುದು—ಇವುಗಳ ಕ್ರಮಗಳಿಗೆಲ್ಲಾ 'ತಂತ್ರ' ಎಂದು ಹೇಳುತ್ತಾರೆ. ತಂತ್ರದಲ್ಲಿ ಮುದ್ರೆ, ನ್ಯಾಸ ಎಂಬಿತ್ಯಾದಿ ಹಲವಾರು ಬಾಹ್ಯವಾದ ಪೂಜೆ, ಉಪಾಸನಾ ವಿಧಾನಗಳು ಇದ್ದು ತಂತ್ರವು ಯಂತ್ರ ಮಂತ್ರ ಯೋಗಗಳಿಗೆ ಪೂರಕವಾದುದಾಗಿದೆ. ಶಾಕ್ತಸಾಧನೆಯ ಅಂಗಗಳು :

(೧) ಪೂಜೆ : ಪ್ರತಿಮೆ, ಯಂತ್ರಗಳ ಪೂಜೆ.

(೨) ವ್ರತ : ಉಪವಾಸ, ಪೂಜಾದಿಗಳನ್ನು ನಿಯಮಿತ ಹಾಗೂ ಪರ್ವಕಾಲಗಳಲ್ಲಿ ಮಾಡುವಿಕೆ.

(೩) ತಪಸ್ಸು : ಯಮನಿಯಮಾದಿ ಶಿಸ್ತುಗಳ ಪಾಲನೆ.

(೪) ಭೂತಶುದ್ಧಿ : ಶರೀರತ್ರಯಗಳ ಶುದ್ಧಿ.

(೫) ಜಪ : ಮಂತ್ರದ ಉಚ್ಚಾರಣೆ, ಚಿಂತನೆ.

(೬) ಸ್ತವ : ಶ್ರೀದೇವಿಯ ಸ್ತೋತ್ರಪಠನ.

(೭) ನ್ಯಾಸ : ಶರೀರದ ವಿವಿಧ ಭಾಗಗಳಲ್ಲಿ ದೇವಿಯ ಇರವಿನ ಭಾವನೆಯೊಡನೆ ಭಾವನಾತ್ಮಕವಾಗಿ ಮಂತ್ರೋಚ್ಚಾರಣೆ ಮಾಡುತ್ತಾ ಬೆರಳಿನ ತುದಿಯಿಂದ ನಿಯಮ ಪ್ರಕಾರ ಮುಟ್ಟುವುದು.

(೮) ಮುದ್ರೆ : ಸಾಂಕೇತಿಕವಾಗಿ ಕೈಯಿಂದ ವ್ಯಕ್ತಪಡಿಸುವ ಭಾವಾಭಿನಯಗಳು ;

ಇದರಿಂದ ಮಾನಸಿಕವಾದ ಮತ್ತು ಆಧ್ಯಾತ್ಮಿಕವಾದ ಭಾವನೆಗಳು ವ್ಯಕ್ತಗೊಂಡು ದೇವಿಯ ಪ್ರೀತಿಗೆ ಸಾಧಕನು ಪಾತ್ರನಾಗುತ್ತಾನೆ.

(೯) ಧ್ಯಾನ : ಇಷ್ಟದೇವತೆಯನ್ನು ಕುರಿತು ಒಂದೇ ಮನಸ್ಸಿನಿಂದ ಚಿಂತಿಸುವಿಕೆ.

(೧೦) ಹೋಮ : ಸರ್ವಸಮರ್ಪಣ ಭಾವನಾತ್ಮಕವಾದ ಸಾಂಕೇತಿಕ ಕ್ರಿಯೆ.

ಶಾಕ್ತಸಾಧನೆಯ ಸೋಪಾನಗಳು : ಶಾಕ್ತಸಾಧಕನಿಗೆ ಶರೀರವು ಮುಖ್ಯಸಾಧನವಾಗಿದೆ. ಶರೀರದ ವಿವಿಧ ಭಾಗಗಳಲ್ಲಿ ಶಕ್ತಿಯ ವಿವಿಧ ಸ್ವರೂಪಗಳಾದ ದೇವತೆಗಳನ್ನು ನಿಶ್ಚಯಿಸುವಿಕೆ, ಶರೀರತ್ರಯಗಳನ್ನು (ಸ್ಥೂಲ, ಸೂಕ್ಷ್ಮ, ಕಾರಣ) ಶುದ್ಧಪಡಿಸುವಿಕೆ, ಪ್ರಾಣಾಯಾಮ, ಧ್ಯಾನ, ದೇವಿಯ ಪ್ರತೀಕವಾದ ಯಂತ್ರ–ಪ್ರತಿಮೆಗಳಿಗೆ ಪ್ರಾಣಪ್ರತಿಷ್ಠೆಮಾಡಿ ಬಾಹ್ಯ ಮತ್ತು ಮಾನಸಿಕವಾಗಿ ಪೂಜಿಸುವಿಕೆ—ಇವುಗಳು ಮುಖ್ಯವಾಗಿ ಶಕ್ತಿಸಾಧನೆಯ ಅಂಶಗಳೆಂದು ಸ್ಪಷ್ಟಪಡಿಸಲಾಗಿದೆ. ಶರೀರದಲ್ಲಿರುವ ಆರು ಯೋಗಚಕ್ರಗಳು ಇರುವ ಸ್ಥಾನಗಳು ಯಾವುವೆಂದರೆ :

(೧) ಮೂಲಾಧಾರ—ಬೆನ್ನುಹುರಿಯ ಕೊನೆಯಲ್ಲಿನ ಸ್ಥಾನ.

(೨) ಸ್ವಾಧಿಷ್ಠಾನ—ಜನನೇಂದ್ರಿಯದಿಂದ ಸ್ವಲ್ಪ ಮೇಲೆ.

(೩) ಮಣಿಪೂರ—ನಾಭಿಯ ಹತ್ತಿರ.

(೪) ಅನಾಹತ—ಹೃದಯಕ್ಕೆ ಹತ್ತಿರ.

(೫) ವಿಶುದ್ಧ—ಕಂಠದ ಹತ್ತಿರ.

(೬) ಆಜ್ಞಾ—ಎರಡು ಹುಬ್ಬುಗಳ ಮಧ್ಯಸ್ಥಳದಲ್ಲಿ. ಇವುಗಳೆಲ್ಲದರ ಮೇಲೆ ಶಿರಸ್ಸಿನಲ್ಲಿ ಸಹಸ್ರದಳದ ಪದ್ಮರೂಪ 'ಸಹಸ್ರಾರ' ಎಂಬ ಚಕ್ರವಿದೆ. ಶಕ್ತಿಸಾಧಕನು ಕುಂಡಲಿನೀ ಯೋಗದ ಮೂಲಕ ಶಿವಶಕ್ತಿ ಐಕ್ಯವನ್ನು ಪಡೆಯುವುದಕ್ಕೆ ಏರಬೇಕಾದ ಸಾಧನಾ ಸೋಪಾನಗಳನ್ನು ಅನುಕೂಲಕ್ಕಾಗಿ 'ಪಂಚಸೋಪಾನ' ಎಂದು ಹೇಳಬಹುದು. ಅವು ಯಾವುವೆಂದರೆ :

(೧) ಸ್ನಾನ : ಬಾಹ್ಯ ಶುಚೀಕರಣವೇ ಸ್ನಾನ. ತೀರ್ಥಜಲ, ಪವಿತ್ರ ಜಲಗಳಿಂದ ಮಾಡುವ ಸ್ನಾನವು ಶುದ್ಧಿಯನ್ನು ನೀಡುತ್ತದೆ.

(೨) ತರ್ಪಣ : ಯಮನಿಯಮಗಳನ್ನು ಅನುಸರಿಸುತ್ತಾ ಬಾಹ್ಯಶುದ್ಧಿಯಿಂದ ಕೂಡಿ, ಅಂತರ್ಯದಲ್ಲಿ ಪಡೆಯುವ ತೃಪ್ತಿಯೇ ತರ್ಪಣ.

(೩) ಭೂತಶುದ್ಧಿ : ಆಸನ, ಪ್ರಾಣಾಯಾಮಾಗಳಿಂದ ಸ್ಥೂಲ, ಸೂಕ್ಷ್ಮ ಮತ್ತು ಕಾರಣಶರೀರಗಳಲ್ಲಿ ಇರುವ ಮೂಲಧಾತುಗಳನ್ನು (ಪಂಚಭೂತಗಳನ್ನು) ಶುದ್ಧಿಗೊಳಿಸುವುದು.

(೪) ಧ್ಯಾನ : ಸಾಧಕನು ಉಪಾಸನಾದೇವತೆಯೊಡನೆ ಏಕೀಭಾವ ಹೊಂದುವುದು ಎಂದರೆ ದಿವ್ಯದೇವಿಯಂತೆ ದಿವ್ಯತೆಯನ್ನು ಪಡೆಯುವಿಕೆಯಾಗಿದೆ. ದಿವ್ಯತೆಯೇ ದೇವಿಯ ಅನುಗ್ರಹಕ್ಕೆ ಪಾತ್ರನಾಗಲು ಬೇಕಾದ ಅಂಶವಾಗಿದೆ. ಧ್ಯಾನದ ಮಟ್ಟಕ್ಕೆ ಸಾಧಕನು ಏರಿದಾಗ ಅವನು ಪಶುವೃತ್ತಿಗಳನ್ನೆಲ್ಲಾ ನೀಗಿಕೊಂಡು ದಿವ್ಯತೆಯನ್ನು ಪಡೆಯುತ್ತಾನೆ. ದಿವ್ಯನಾದಾಗ ಮಾತ್ರ ದಿವ್ಯದೇವಿಯನ್ನು ಸಾಧಕನು ಅರಿತು, ಪೂಜಿಸಿ ಆಕೆಯ ಪೂರ್ಣ ಅನುಗ್ರಹಕ್ಕೆ ಪಾತ್ರನಾಗಲು ಸಾಧ್ಯ,

(೫) ಹೋಮ : "ಇಂದ್ರಿಯಾಣಿ ಶುಚಿಃ ವೇದ್ಯಂ ಹವಿಃ । ಸ್ವಾತ್ಮಾ ಹೋತಾ ಚಿದಗ್ನಿಃ ಪಾವಕಃ"—ಎಂದರೆ. ಸಾಧಕನು ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ವಿಷಯಗಳನ್ನು (ಭೋಗ್ಯಪದಾರ್ಥಗಳನ್ನು) ಚಿದ್ರೂಪವಾದ ಅಗ್ನಿಯಲ್ಲಿ, ಎಂದರೆ ದೇವಿಗೆ, ಆರಾಧನಾರೂಪವಾಗಿ ಅರ್ಪಿಸುತ್ತಾ ಕ್ರಿಯೆಗಳಲ್ಲಿ ತನ್ನತನವನ್ನು ಅರ್ಪಿಸುವುದೇ ಹೋಮ ಎಂದು ತಾತ್ಪರ್ಯ. ಹೀಗೆ ಸಾಧಕನು ಶ್ರೀದೇವಿಯಲ್ಲಿ ಸಂಪೂರ್ಣ ಶರಣಾಗಿ ಕುಂಡಲಿನೀಯೋಗದ ಕೊನೆಯ ಹಂತವನ್ನು ಏರಿ ತಾನು ಮತ್ತು ದೇವಿ ಎಂಬ ಭೇದವಿಲ್ಲದೆ ಶಿವಶಕ್ತಿಯಲ್ಲಿ ಒಂದಾಗುತ್ತಾನೆ. ಇದೇ ಶಾಕ್ತಸಾಧನೆಯ ಕೊನೆಯ ಗುರಿ. ಇಲ್ಲಿಗೆ ತಲಪಿದಾಗ ಸರ್ವಬಂಧನಗಳು ನಿವೃತ್ತಿಯಾಗಿ ಜೀವನು ಸಕಲದುಃಖಗಳಿಂದ, ಸಂಸಾರದಿಂದ ಮುಕ್ತನಾಗುತ್ತಾನೆ.

ಹೀಗೆ ಜಪ, ಪೂಜಾ, ಭಾವನ ಮತ್ತು ಉಪಾಸನ ಎಂಬ ನಾಲ್ಕು ಸಾಧನ ಅಂಶಗಳಿಂದ ಕೂಡಿದ್ದು ಪಶುಭಾವ ಹೊಂದಿದ ಜೀವನನ್ನು ಮಾಯಿಕ, ಕಾರ್ಮಿಕ, ಆಣವ ಎಂಬ ಮಲತ್ರಯಗಳಿಂದ ಬಿಡಿಸಿ ಇಹಲೋಕದ ಸುಖದುಃಖಗಳಿಂದ ಪರತತ್ತ್ವದ ಪರಶಿವಭಾವದ ಪರಮಾನಂದ ಪದವಿಗೆ ಏರಿಸಲು ಮಾರ್ಗ ತೋರಿರುವ ಶಾಕ್ತಮತವು ತನ್ನದೇ ಆದ ಅನೇಕ ವೈಶಿಷ್ಟ್ಯಗಳಿಂದ ಕೂಡಿದ ಪ್ರಸಿದ್ಧವಾದ ಮತವಾಗಿರುತ್ತದೆ.

೨೯

# ಹಿಂದೂಧರ್ಮದ ನಾಲ್ಕು ಯೋಗಗಳು

ಜೀವನದ ಪರಮಗುರಿಯು ಭಗವಂತನ ಸಾಕ್ಷಾತ್ಕಾರ ಎಂದು ಹಿಂದೂಧರ್ಮವು ಸಾರುತ್ತದೆ. ಭಗವಂತನ ಸಾಕ್ಷಾತ್ಕಾರವೇ ಮುಕ್ತಿ. ಜನ್ಮತಳೆದ ಮಾನವನು ಈ ಲೋಕದಲ್ಲಿ ಜೀವನವನ್ನು ಸಾರ್ಥಕವಾದ ರೀತಿಯಲ್ಲಿ ನಿರ್ವಹಿಸಿ ಬಾಳಿನ ಕರ್ತವ್ಯಗಳನ್ನು ಪೂರೈಸಿ ಕೊನೆಗೆ ಬದುಕಿನ ಪರಮಗುರಿಯಾದ ಭಗವಂತನ ಸಾಕ್ಷಾತ್ಕಾರವನ್ನು ಹೊಂದುವುದು ಹಿಂದೂಧರ್ಮದ ಪ್ರಕಾರ ಜೀವನದ ಸರಿಯಾದ ಗುರಿಯಾಗಿರುತ್ತದೆ.

ಭಗವಂತನು ಸರ್ವಶಕ್ತನೂ ಸರ್ವವ್ಯಾಪಕನೂ ಸರ್ವಜ್ಞನೂ ಸರ್ವಾಂತರ್ಯಾಮಿಯೂ ಆಗಿರುತ್ತಾನೆ ಎಂಬುದು ಹಿಂದೂಧರ್ಮದ ಸ್ಪಷ್ಟವಾದ ಸಿದ್ಧಾಂತವಾಗಿರುತ್ತದೆ. ಈ ಜಗತ್ತು ಭಗವಂತನ ಸುಂದರ ಕೃತಿ ಎಂದು ತಿಳಿದ ಮಾನವನು ಜಗತ್ತಿನ ಜೀವನದಲ್ಲಿ ಭಗವಂತನನ್ನು ಕಾಣಬೇಕು. ಜಗತ್ತಿನ ಚರಾಚರ ವಸ್ತುಗಳ ಹಿನ್ನೆಲೆಯಲ್ಲಿ ಜಗನ್ನಿಯಾಮಕನಾದ ಭಗವಂತನ ಕೈವಾಡವಿದೆ ಎಂಬುದನ್ನು ಗ್ರಹಿಸಬೇಕು. ಭಗವಂತನು 'ಸತ್ಯಂ ಶಿವಂ ಸುಂದರಂ' ಆಗಿರುತ್ತಾನೆ. ಹಾಗೆಯೇ ಜೀವಿಯ ಜೀವನವು ಸತ್ಯವೂ ಸುಂದರವೂ ಆಗಿ ಶಿವಮಯವಾಗಬೇಕು. ಹಾಗಾಗಲು ಭಗವಂತನು ಬೇರೆ, ಜೀವನ ಬೇರೆ ಎಂದಾಗಬಾರದು. ಈ ದೃಷ್ಟಿಯಿಂದ ಜೀವನದ ದಿನನಿತ್ಯದ ಸಕಲ ಆಗುಹೋಗುಗಳ ಒಡನೆ ಭಗವಂತನ ನೆನಪು, ಕಲ್ಪನೆಗಳು ಜೀವಿಯಲ್ಲಿ ಇರಬೇಕು. ಆಗ ಜೀವನ ಸುಖಮಯವೂ ಯಶೋದಾಯಕವೂ ಆಗಿ ಜೀವಿಯು ಭಗವಂತನನ್ನು ಸಾಕ್ಷಾತ್ಕರಿಸಲು ಸಾಧ್ಯವಾಗುತ್ತದೆ.

ಈ ರೀತಿ ಮಾನವನ ಜೀವನ ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ಸುಖಪ್ರದವೂ ಸುಭದ್ರವೂ ಆಗಿ ಜೀವನಿಗೆ ಭಗವಂತನ ಸಾಕ್ಷಾತ್ಕಾರಕ್ಕೆ ಸಾಧನವಾಗುವಂತೆ ಇರುವ ಮಾರ್ಗವನ್ನೇ 'ಯೋಗ' ಎಂದು ಹೇಳುತ್ತಾರೆ. ಇದನ್ನೇ ಇನ್ನೊಂದು ಮಾತಿನಲ್ಲಿ ಜೀವಾತ್ಮನು ಪರಮಾತ್ಮನಲ್ಲಿ ಐಕ್ಯವಾಗುವುದು ಎಂದು ಹೇಳಬಹುದು. ಮತ್ತೊಂದು ದೃಷ್ಟಿಯಿಂದ ಹೇಳುವುದಾದರೆ ಪರತತ್ತ್ವದ ವಿಚಾರವಾದ ಸತ್ಯಜ್ಞಾನದ ನೇರವಾದ ಅನುಭವ ಮತ್ತು ಅಂತಹ ಅನುಭವ ಪಡೆಯಲು ಅನುಸರಿಸಬೇಕಾದ ಸಾಧನಕ್ರಮವೇ 'ಯೋಗ' ಎಂದು ಹೇಳಬಹುದು.

ಯೋಗ ಎಂದರೆ ಜೋಡಿಸುವುದು, ಐಕ್ಯಮಾಡುವುದು, ಮಿಲನ ಮಾಡುವುದು ಎಂದು ಅರ್ಥ. ಇದು 'ಯುಜ್' ಧಾತುವಿನಿಂದ ಉತ್ಪತ್ತಿಯಾಗಿದೆ. ಯುಜ್ ಎಂದರೆ ಕೂಡಿಸುವುದು ಎಂದು ಅರ್ಥ.

ಮನುಷ್ಯರ ಮನಸ್ಸ್ವಭಾವ, ಜೀವನದೃಷ್ಟಿ, ಬುದ್ಧಿಯ ಪರಿಪಕ್ವತೆ, ಅಧ್ಯಾತ್ಮವಿಚಾರವಾಗಿ ತಿಳಿವಳಿಕೆ ಇತ್ಯಾದಿಗಳನ್ನು ಹೊಂದಿಕೊಂಡು ಯೋಗವು ಸಾಧನಾವಿಧಾನಗಳಲ್ಲಿ ಬೇರೆಬೇರೆಯಾಗಿದೆ. ಸಾಮಾನ್ಯವಾಗಿ ಮನುಷ್ಯರನ್ನು ಅವರವರ ಸ್ವಭಾವ-ಗುಣಧರ್ಮಗಳಿಗೆ ಅನುಸಾರವಾಗಿ ನಾಲ್ಕು ವರ್ಗಗಳಾಗಿ ವಿಂಗಡಿಸಬಹುದು :

(೧) ಕ್ರಿಯಾಶೀಲರು, (೨) ಭಾವನಾತ್ಮಕತೆ ಉಳ್ಳವರು, ಭಾವುಕರು,
(೩) ಅಂತರ್ದೃಷ್ಟಿ ಉಳ್ಳವರು, (೪) ತತ್ತ್ವಜ್ಞಾನದೃಷ್ಟಿಯುಳ್ಳವರು.

ಈ ನಾಲ್ಕು ವರ್ಗಗಳಿಗೆ ಅನುಗುಣವಾಗಿ ಮುಖ್ಯವಾಗಿ ನಾಲ್ಕು ವಿಧದ ಯೋಗ ಮಾರ್ಗಗಳು ರೂಪುಗೊಂಡು ಪ್ರಸಿದ್ಧವಾಗಿವೆ. ಹೆಚ್ಚುಕಡಿಮೆ ಈ ನಾಲ್ಕು ವಿಧದ ಯೋಗಸಾಧನಾ ವಿಭಾಗದ ಒಳಗೆ ಮಾನವರೆಲ್ಲರೂ ಗಣನೆಗೆ ಬರುತ್ತಾರೆ ಎಂಬುದರಿಂದಲೇ ಹಿಂದೂಧರ್ಮದ ಮುಖ್ಯವಾದ ನಾಲ್ಕು ಯೋಗಮಾರ್ಗಗಳು ಪ್ರಸಿದ್ಧವೂ ಪ್ರಾಯೋಗಿಕವೂ ಆಗಿರುತ್ತವೆ. ಮೇಲಿನ ನಾಲ್ಕು ವರ್ಗೀಕರಣವನ್ನು ಅನುಸರಿಸಿ ಇರುವ ಮುಖ್ಯವಾದ ನಾಲ್ಕು ಯೋಗಗಳು ಯಾವುವೆಂದರೆ :

(೧) ಕರ್ಮಯೋಗ, (೨) ಭಕ್ತಿಯೋಗ, (೩) ರಾಜಯೋಗ, (೪) ಜ್ಞಾನಯೋಗ,

ಪ್ರತಿಯೊಬ್ಬರಲ್ಲೂ ಈ ನಾಲ್ಕು ಯೋಗಕ್ಕೆ ಸಂಬಂಧಿಸಿದ ಗುಣಧರ್ಮಗಳು ಸ್ವಲ್ಪ ಸ್ವಲ್ಪ ಇವೆ. ಆದರೆ ಅವುಗಳಲ್ಲಿ ಒಂದು ಗುಣ ಮಾತ್ರ ಹೆಚ್ಚಿದ್ದು ಆ ಗುಣವು ಆ ನಿಶ್ಚಿತ ವ್ಯಕ್ತಿಯಲ್ಲಿ ಪ್ರಧಾನವಾಗಿರುತ್ತದೆ, ಅದಕ್ಕೆ ಅನುಗುಣವಾಗಿ ಅವರವರು ಆಯಾಯಾ ಯೋಗಮಾರ್ಗವನ್ನು ಅನುಸರಿಸಿರುತ್ತಾರೆ. ಉಳಿದ ಸ್ವಭಾವಗಳು ವ್ಯಕ್ತಿಯ ಪ್ರಧಾನ ಗುಣಕ್ಕೆ ಹಿನ್ನೆಲೆಯಾಗಿರುತ್ತವೆ.

ಈ ರೀತಿಯ ಯೋಗದ ಹಾಗೂ ಮನುಷ್ಯರ ಗುಣಧರ್ಮಗಳ ವರ್ಗೀಕರಣವು ಮಾನವರ ಜಾತಿ, ಮತ, ಜನಾಂಗ, ದೇಶಗಳ ತಾರತಮ್ಯವಿಲ್ಲದೆ ಗುಣಧರ್ಮ, ಸ್ವಭಾವಧರ್ಮ ಮತ್ತು ಜೀವನದೃಷ್ಟಿಗಳನ್ನು ಅನುಸರಿಸಿಕೊಂಡಿರುತ್ತದೆ. ಹಾಗಾಗಿ ಈ ಯೋಗ ಮಾರ್ಗಗಳೆಲ್ಲಾ ಸರ್ವಕಾಲ, ಸರ್ವಜನಾಂಗ, ಸರ್ವರಾಷ್ಟ್ರಗಳಿಗೆ ಮಾನ್ಯವಾಗಿವೆ ಎನ್ನುವುದು ಈ ವರ್ಗೀಕರಣದ ಹೆಚ್ಚುಗಾರಿಕೆಯಾಗಿದ್ದು ಅದೇ ಹಿಂದೂ ಧರ್ಮದ ಯೋಗಗಳ ವೈಶಿಷ್ಟ್ಯವಾಗಿದೆ. ಪ್ರಸಿದ್ಧವಾದ ನಾಲ್ಕು ಯೋಗಗಳಲ್ಲಿ ಯಾವುದೂ ಒಂದಕ್ಕೊಂದು ಮೇಲಾಗಲಿ ಕೀಳಾಗಲಿ ಆಗಿರುವುದಿಲ್ಲ. ಎಲ್ಲವೂ ಸಮಾನ ಯೋಗ್ಯತೆಯಿಂದ ಕೂಡಿದ್ದು ಒಂದೇ ಗುರಿಯನ್ನು ಮುಟ್ಟಲಿರುವ ನಾಲ್ಕು ಪಥಗಳಾಗಿವೆ ಎನ್ನುವುದು ಈ ಯೋಗಮಾರ್ಗಗಳ ವಿಶೇಷತೆಯಾಗಿರುತ್ತದೆ.

ಭಗವಂತನ ಸಾಕ್ಷಾತ್ಕಾರಕ್ಕೆ ಸಾಧಕನು ಈ ನಾಲ್ಕು ವಿಧದ ಯೋಗಮಾರ್ಗಗಳಲ್ಲಿ ಎಲ್ಲವನ್ನೂ ಅನುಸರಿಸಬೇಕಾಗಿಲ್ಲ. ಯಾವುದಾದರೂ ಒಂದನ್ನು ಮಾತ್ರ ಅನುಸರಿಸಿ ಜೀವನದ ಗುರಿಯನ್ನು ತಲಪಬಹುದು, ಅಥವಾ ಎಲ್ಲಾ ಯೋಗಗಳ ಸಮನ್ವಯ

ಮಾಡುತ್ತಾ ಸಾಧನೆಯ ಗುರಿಯನ್ನು ಸೇರಬಹುದು. ಸಾಮಾನ್ಯವಾಗಿ ಯಾವ ಯೋಗ ಮಾರ್ಗವನ್ನು ಅನುಸರಿಸಿದರೂ ಕೂಡ ಉಳಿದ ಮೂರು ಯೋಗಮಾರ್ಗಗಳ ವಿಚಾರಗಳು ಪರೋಕ್ಷವಾಗಿ ಗೌಣರೂಪದಲ್ಲಿ ನಿಶ್ಚಿತವಾಗಿ ಸಾಧಕನು ಅನುಸರಿಸುವ ಯೋಗ ಮಾರ್ಗದ ಸಾಧನಾವಿಚಾರಾಂಶಗಳಲ್ಲಿ ಸೇರಿಕೊಳ್ಳುತ್ತವೆ. ಈ ಅಂಶವು ನಾಲ್ಕು ಯೋಗಗಳ ಒಳಗೆ ಇರುವ ಅತಿಸೂಕ್ಷ್ಮವಾದ ಸಂಬಂಧದ ಪರಿಣಾಮವೂ ಹೌದು, ರಹಸ್ಯವೂ ಹೌದು.

ಯೋಗವೆಂದರೆ ಐಕ್ಯ, ಕೂಡುವಿಕೆ ಎಂದು ಹೇಳಿದ್ದಾಯಿತು. ಭಗವಂತನಲ್ಲಿ ಐಕ್ಯವಾಗಲು ಯಾರು ಯತ್ನಿಸುವರೋ ಅವರು ಯೋಗಿಗಳು. ನಾಲ್ಕು ಯೋಗಗಳಿರುವಂತೆ ಆದರದರ ಸಾಧನಾಮಾರ್ಗವನ್ನು ಅವಲಂಬಿಸಿ ಸಾಧನೆ ಮಾಡುವ ಯೋಗಿಗಳನ್ನು ಅನುಕ್ರಮವಾಗಿ (೧) ಕರ್ಮಯೋಗಿ, (೨) ಭಕ್ತಿಯೋಗಿ, (೩) ರಾಜಯೋಗಿ, (೪) ಜ್ಞಾನಯೋಗಿ ಎಂದು ಕರೆಯುತ್ತಾರೆ.

**ಕರ್ಮಯೋಗ**

'ಕರ್ಮ' ಎಂಬ ಶಬ್ದವು 'ಕೃ' ಎಂಬ ಧಾತುವಿನಿಂದ ಹುಟ್ಟಿರುತ್ತವೆ. 'ಕೃ' ಎಂದರೆ ಮಾಡುವುದು, ವ್ಯವಹರಿಸುವುದು, ವ್ಯಾಪಾರ, ಅಲೆದಾಟ ಎಂದು ಅರ್ಥವಾಗುತ್ತದೆ. ಹಾಗಾಗಿ ಒಟ್ಟಿನಲ್ಲಿ ಕರ್ಮ ಎಂದರೆ ಕೆಲಸ ಎಂದು ತಾತ್ಪರ್ಯ. ಕರ್ಮಯೋಗದ ಸಂಬಂಧವಾಗಿ ಕರ್ಮ ಎಂದರೆ ಕೆಲಸ ಎಂಬ ಅರ್ಥವಾದಂತೆ ಕರ್ಮ ಎನ್ನುವ ಶಬ್ದಕ್ಕೆ ತಾಂತ್ರಿಕವಾಗಿ ಪರಿಣಾಮ ಎಂಬ ಅರ್ಥವೂ ಇದೆ. ಆದರೆ ನಮಗಿಲ್ಲಿ ಆ ಅರ್ಥ ಬೇಕಾಗಿರದೆ ಕರ್ಮ ಎಂದರೆ ಕೆಲಸ ಎಂಬ ಅರ್ಥವು ಪ್ರಕೃತವಾಗಿರುತ್ತದೆ. ಕರ್ಮ ಎಂದರೆ 'ಕೆಲಸ'ವಾದರೆ ಕರ್ಮಯೋಗ ಎಂದರೆ ಕೆಲಸದ ಮೂಲಕ ಪರಮಾತ್ಮನನ್ನು ಸೇರುವಿಕೆ ಎಂದು ತಾತ್ಪರ್ಯ.

ಮನುಷ್ಯನು ಕ್ರಿಯಾಜೀವಿಯಾಗಿರುತ್ತಾನೆ. ದೈಹಿಕ ಹಾಗು ಮಾನಸಿಕವಾಗಿ ಒಂದಲ್ಲ ಒಂದು ವಿಧದ ಕೆಲಸವನ್ನು ಮನುಷ್ಯನು ಸದಾ ಮಾಡುತ್ತಲೇ ಇರುತ್ತಾನೆ. ಮಾಡುವ ಪ್ರತಿಯೊಂದು ಕೆಲಸಕ್ಕೂ ತಕ್ಕ ಫಲ ಬಂದೇ ಬರುತ್ತದೆ. ಕೆಲಸದ ಮೇಲಿನ ಆಸೆಯಿಂದಾಗಿ ಕೆಲಸಗಳನ್ನು ಮಾಡುತ್ತಾ ಫಲವನ್ನು ಅನುಭವಿಸುತ್ತಾ ಫಲದ ಅನುಭವದ ಆಸೆಯಿಂದಾಗಿ ಮನುಷ್ಯನು ಕರ್ಮಬಂಧನಕ್ಕೆ ಒಳಗಾಗುತ್ತಾನೆ. ಪರಿಣಾಮವಾಗಿ ಮತ್ತೆ ಮತ್ತೆ ಈ ಹುಟ್ಟುಸಾವುಗಳಿಂದ ಕೂಡಿರುವ ಜೀವನಚಕ್ರಕ್ಕೆ ಸಿಲುಕುತ್ತಾನೆ. ತಾನು ಮಾಡುವ ಕೆಲಸಗಳು ಯಾವಾಗ ಬಂಧನ ಎಂದಾಗುವುದಿಲ್ಲವೋ ಆಗ ಆದರಿಂದ ಜೀವಿಯು ಬಂಧಮುಕ್ತನಾಗುತ್ತಾನೆ. ಆದುದರಿಂದ ಒಂದೆಡೆ ಕೆಲಸಗಳು ಜೀವಿಯನ್ನು ಜೀವನ ಬಂಧನಕ್ಕೆ ಒಳಪಡಿಸಿದರೆ ಅದೇ ಕೆಲಸಗಳು ಸರಿಯಾದ ರೀತಿಯಲ್ಲಿ ನಿರ್ವಹಿಸಲ್ಪಟ್ಟಾಗ ಜೀವಿಯ ಬಂಧವಿಮೋಚನೆಗೆ ಸಾಧನವಾಗುತ್ತವೆ. ಹೀಗೆ ಜೀವಿಯು ತಾನು ಮಾಡುವ ಕೆಲಸಗಳು ತನಗೆ ಬಂಧನ ಎಂದಾಗದೆ ಅದೇ ಕೆಲಸಗಳು ಜೀವಿಯ ಆತ್ಮಸಾಕ್ಷಾತ್ಕಾರಕ್ಕೆ, ಮುಕ್ತಿಗೆ ಸಾಧನವಾಗುವಂತೆ ಪರಿವರ್ತಿಸುವುದೇ ಕರ್ಮಯೋಗವಾಗಿರುತ್ತದೆ. ಜೀವನದ

ಸಾಮಾನ್ಯವಾದ ಕರ್ತವ್ಯಗಳು, ದೈನಂದಿನ ಕಾರ್ಯಕಲಾಪಗಳು, ಸಂಸಾರದ ಜವಾಬ್ದಾರಿಗಳು—ಇವುಗಳನ್ನು ಅಲಕ್ಷಿಸದೆ ದೃಢತೆ ಮತ್ತು ಸಮದೃಷ್ಟಿಯ ಭಾವನೆಯಿಂದ ಕೆಲಸ ಮಾಡುವುದು ಕರ್ಮಯೋಗದ ತತ್ತ್ವವಾಗಿದೆ. ಕೆಲಸಗಳನ್ನು ಆಧ್ಯಾತ್ಮದೃಷ್ಟಿಯಿಂದ ಆತ್ಮಸಾಕ್ಷಾತ್ಕಾರದ ಸಾಧನೆ ಎಂದು ಮಾಡಿದಾಗ ಅದು ಕರ್ಮಯೋಗವಾಗುತ್ತದೆ. ಆದರೆ ಉದಾತ್ತವಾದ ಕರ್ಮಯೋಗದ ತತ್ತ್ವದೃಷ್ಟಿಯಿಲ್ಲದೆ ಮಾಡುವ ಕೆಲಸಗಳೆಲ್ಲವೂ ಬರಿಯ 'ಕೆಲಸ'ವೆಂದಾಗಿ ಅವುಗಳಿಂದ ಜೀವಿಯ ಸಂಸಾರಬಂಧನಿವೃತ್ತಿ, ಶಾಶ್ವತ ಸುಖದ ಪ್ರಾಪ್ತಿ ಆಗಲಾರದು ಎಂಬುದು ನೆನಪಿಡಬೇಕಾದ ಮುಖ್ಯಾಂಶವಾಗಿರುತ್ತದೆ.

ಕಾರ್ಯತತ್ಪರರೂ ಕ್ರಿಯಾಶೀಲರೂ ಆದವರಿಗಾಗಿಯೇ ಕರ್ಮಯೋಗದ ಮಾರ್ಗವು ಇದ್ದು ಕರ್ಮಯೋಗದಲ್ಲಿ ಕೆಲಸಗಳ ವ್ಯವಸ್ಥಾಬದ್ಧವಾದ ನಿರ್ವಹಣೆ, ಅದಕ್ಕೆ ಬೇಕಾದ ಮನಸ್ಸಿನ ಸ್ಥಿತಿ, ಜೀವನದೃಷ್ಟಿ ಇತ್ಯಾದಿಗಳೆಲ್ಲ ಯಥೋಚಿತವಾಗಿ ವಿವರಿಸಲ್ಪಟ್ಟಿವೆ. ಉಪನಿಷತ್ತಿನಲ್ಲಿ ಸೂಕ್ಷ್ಮರೂಪದಲ್ಲಿ ಪ್ರಸ್ತಾಪಿಸಲ್ಪಟ್ಟ ಕರ್ಮಯೋಗವು ಶ್ರೀಮದ್ ಭಗವದ್ಗೀತೆಯಲ್ಲಿ ಸವಿಸ್ತಾರವಾಗಿ ನಿರೂಪಿಸಲ್ಪಟ್ಟಿರುತ್ತದೆ. ಹಾಗಾಗಿ ಶ್ರೀಮದ್ ಭಗವದ್ಗೀತೆಯು ಕರ್ಮಯೋಗದ ಬಗ್ಗೆ ಮಾರ್ಗದರ್ಶನ ನೀಡುವ ಆಧಾರಗ್ರಂಥವೆಂದು ಪರಿಗಣಿಸಲಾಗಿರುತ್ತದೆ.

ಕರ್ಮಯೋಗದಲ್ಲಿ ಅಡಗಿರುವ ಮುಖ್ಯವಾದ ತತ್ತ್ವಸಂಗತಿಗಳನ್ನು ಸಂಕ್ಷೇಪವಾಗಿ ಹೀಗೆ ವಿಂಗಡಿಸಬಹುದು :

(೧) 'ಕರ್ಮಯೋಗ'ವೆಂದರೆ ಜಗತ್ತಿನಲ್ಲಿ ಕರ್ಮಗಳನ್ನು ಯೋಗಯುಕ್ತವಾಗಿ ಮಾಡುತ್ತಾ ತನ್ಮೂಲಕ ಭಗವಂತನ ಸಾಕ್ಷಾತ್ಕಾರವನ್ನು ಹೊಂದುವುದೇ ಆಗಿದೆ.

(೨) ಜೀವಿಯು ತಾನು ಭಗವಂತನ ಆಯುಧವೆಂಬ ದೃಷ್ಟಿಯಿಂದ ಕೆಲಸಮಾಡುತ್ತಾ ಜಗತ್ತಿನ ಹಿತವನ್ನು ಬಯಸಿ, ಜಗದ ಹಿತವೇ ತನ್ನ ಹಿತ, ಜಗದ ಸೇವೆಯೇ ಜಗದೀಶ್ವರನ ಸೇವೆ ಎಂಬ ನಿಃಸ್ವಾರ್ಥದೃಷ್ಟಿಯಿಂದ ಕೆಲಸಕಾರ್ಯಗಳನ್ನು ನಿರ್ವಹಿಸುವಿಕೆಯು ಕರ್ಮಯೋಗದ ತತ್ತ್ವವಾಗಿರುತ್ತದೆ.

(೩) ಕರ್ಮಫಲಾಸಕ್ತಿಯನ್ನು ಮತ್ತು ಕರ್ಮಫಲವನ್ನು ತ್ಯಾಗಮಾಡಬೇಕೆಂಬುದು ಕರ್ಮಯೋಗದ ತತ್ತ್ವವಲ್ಲದೆ ಕರ್ಮಗಳನ್ನು ಬಿಡಬೇಕೆಂಬುದಲ್ಲ. ಕೆಲಸಗಳ ಪ್ರತಿಫಲಾಪೇಕ್ಷೆ ಇಲ್ಲದೆ, ಕರ್ತವ್ಯಗಳ ಕ್ರಮಬದ್ಧ ನಿರ್ವಹಣೆಯನ್ನು ಸಹನೆ, ಸಾಹಸ, ಸದ್ವರ್ತನೆಗಳಿಂದ ಕೂಡಿ ಎಸಗುವುದು ಕರ್ಮಯೋಗಕ್ಕೆ ಸೇರಿದುದಾಗಿದೆ.

(೪) ಸ್ವಾರ್ಥತ್ಯಾಗ, ಸ್ವತಂತ್ರವಾಗಿ ಕೆಲಸ ಮಾಡುತ್ತೇನೆ ಎಂಬ ಅಹಂಕಾರದ ಭಾವನೆಯ ತ್ಯಾಗ—ಇವುಗಳು ಕರ್ಮಯೋಗದಲ್ಲಿ ಹೇಳಿರುವ ಇತರ ತ್ಯಾಗಗಳಾಗಿವೆ.

(೫) ಲೋಕದ ವಿಚಾರಗಳಲ್ಲಿ ಆಸಕ್ತರಾಗಿರುವ ಭೋಗಾಸಕ್ತನಾದ ಲೌಕಿಕನನ್ನು ಕರ್ಮಯೋಗವು ಯೋಗಯುಕ್ತನಾದ ಕರ್ಮಯೋಗಿಯಾಗಿ ಪರಿವರ್ತಿಸಿ, ಸಂಸಾರಬಂಧನದಿಂದ ಮುಕ್ತನನ್ನಾಗಿ ಮಾಡುತ್ತದೆ.

(೬) ಜೀವನದ ದಿನನಿತ್ಯದ ಸಮಸ್ತ ಕಾರ್ಯಕಲಾಪಗಳಲ್ಲಿ ಕರ್ಮಯೋಗವು ಶಿಸ್ತು, ವ್ಯವಸ್ಥೆ ಮತ್ತು ಹೊಂದಾಣಿಕೆಯನ್ನುಂಟುಮಾಡಿ ಜೀವಿಯ ಜೀವನವು ಬಾಳಿನ ಪರಮ

ಗುರಿಯಾದ ಆತ್ಮಸಾಕ್ಷಾತ್ಕಾರದ ಎಡೆಗೆ ಸುಗಮವಾಗಿ ಸಾಗಲು ಎಡೆಮಾಡಿಕೊಳ್ಳುತ್ತಾ ಪರಿಣಾಮದಲ್ಲಿ ಮೋಕ್ಷಸಾಧನವೂ ಆಗುತ್ತದೆ.

(೭) ಮನುಷ್ಯನ ಸಹಜವಾದ ಗುಣಧರ್ಮಗಳು ಯುಕ್ತವಾದ ರೀತಿಯಲ್ಲಿ ವಿಕಾಸ ವಾಗಿ ಕಾರ್ಯರೂಪದಲ್ಲಿ ಪ್ರಕಟಗೊಂಡು ತನ್ಮೂಲಕ ಆಧ್ಯಾತ್ಮಿಕವಾದ ಗುರಿಯನ್ನು ಸೇರಲು ಅನುಕೂಲವಾಗುವಂತೆ ಅವನು ಅವುಗಳನ್ನು ಉಪಯೋಗಿಸಿಕೊಳ್ಳುವಂತೆ ಕರ್ಮಯೋಗವು ನೆರವಾಗುತ್ತದೆ.

(೮) ಜೀವನದ ಯಾವ ಕೆಲಸಗಳೂ ಮತ್ತು ಅವುಗಳನ್ನು ನಿರ್ವಹಿಸುವ ವ್ಯಕ್ತಿಗಳು, ಬಾಳಿನ ವಿವಿಧ ಹಂತಗಳು ಯೋಗ್ಯತೆಯಲ್ಲಿ ಒಂದಕ್ಕೊಂದು ಕಡಿಮೆಯಾಗಿರುವುದಿಲ್ಲ. ಆಯಾಯ ಸ್ಥಾನದಲ್ಲಿ ಆಯಾಯ ಕೆಲಸಗಳು, ವ್ಯಕ್ತಿಗಳು ಗಣ್ಯ ಹಾಗು ದೊಡ್ಡವು ಗಳು. ಜೀವನದ ಸ್ವಧರ್ಮ–ಸ್ವಕರ್ಮಗಳಿಗೆ ಅನುಗುಣವಾಗಿ ಕೆಲಸಗಳನ್ನು ಸರಿಯಾಗಿ ಮಾಡುತ್ತಾ ಸ್ವಕರ್ಮದ ಮೂಲಕವೇ ಮುಕ್ತಿಪಡೆಯಲು ಸಾಧ್ಯ ಎಂಬುದು ಕರ್ಮ ಯೋಗದ ನಿಲವಾಗಿದೆ.

(೯) ಕೆಲಸದ ಸ್ವರೂಪ ಏನೇ ಇರಲಿ, ಅದು ಮುಖ್ಯವಲ್ಲ. ಕೆಲಸದ ನಿರ್ವಹಣೆಯಲ್ಲಿ ಕೆಲಸಮಾಡುವವನು ತೋರಿಸುವ ಕರ್ಮಕುಶಲತೆ, ಕೆಲಸದ ಬಗೆಗೆ ತಳೆದಿರುವ ಭಾವನೆಯ ಪರಿಶುದ್ಧತೆ ಇವುಗಳು ಮುಖ್ಯ ಎಂಬುದು ಕರ್ಮಯೋಗದ ತತ್ತ್ವವಾಗಿದೆ, ಕೆಲಸಕ್ಕಾಗಿ ಕೆಲಸ ಮಾಡುವುದು ಎಂಬ ಮನೋಭಾವನೆ ಕರ್ಮಯೋಗದಲ್ಲಿ ಆವಶ್ಯಕ.

(೧೦) ಕರ್ಮಯೋಗದಲ್ಲಿ ನೀತಿ, ನಿಯಮ, ಧರ್ಮದೃಷ್ಟಿಗಳೆಲ್ಲವೂ ಸೇರಿದ್ದು ಸತ್ಕರ್ಮ-ಸದಾಚಾರಗಳಿಂದ ಜೀವಿಯು ಸಂಸಾರಚಕ್ರದಿಂದ ಬಂಧವಿಮುಕ್ತನಾಗು ವುದಕ್ಕೆ ಸಾಧ್ಯವಾದ ಯೋಗಸಾಧನೆಯು ನಿರ್ದೇಶಿಸಲ್ಪಟ್ಟಿರುತ್ತದೆ.

(೧೧) ಪರಮಾತ್ಮನ ಸಗುಣ ಸಾಕಾರ ಸ್ವರೂಪದಲ್ಲಿ ವಿಶ್ವಾಸ ಅಥವಾ ಪೂಜೆ, ಪ್ರಾರ್ಥನೆ ಇತ್ಯಾದಿಗಳಿಗೆ ಸಂಬಂಧಿಸಿದಂತೆ ದೇವರ ಇರವಿನಲ್ಲಿ ನಂಬಿಕೆ ಇವುಗಳು ಇಲ್ಲ ದವರೂ ಕರ್ಮಯೋಗವನ್ನು ಅನುಷ್ಠಾನಮಾಡುತ್ತಾ ಸಂಸಾರಬಂಧನದಿಂದ ಮುಕ್ತರಾಗ ಬಹುದು. ಮನುಷ್ಯನು ಯಾವುದನ್ನು ನಂಬದಿದ್ದರೂ ತನ್ನ ಇರುವಿಕೆಗೆ ಆಧಾರವಾದ 'ನಾನು' ಎಂಬುದನ್ನು ನಂಬಲೇಬೇಕು. ಪ್ರಕೃತಿಯಿಂದಾಗಿ ದೊರೆತ ದೇಹೇಂದ್ರಿಯ ಗಳುಳ್ಳ ಜೀವನು ಜಗತ್ತಿನಲ್ಲಿ ಕರ್ಮಗಳನ್ನು ಮಾಡುತ್ತಾನೆ. ಆದರೆ ನಿಜವಾದ 'ನಾನು' ಆ ಕ್ರಿಯೆಗಳಲ್ಲಿ ಭಾಗಿಯಾಗಿರುವುದಿಲ್ಲ ಎಂಬ ನಿಶ್ಚಿತಬುದ್ಧಿಯುಳ್ಳವನಾಗಿ ಇರುವಾಗ (ಪ್ರಕೃತಿಯ ನಿಯಮದಂತೆ) ಕ್ರಿಯೆ ತನ್ನಷ್ಟಕ್ಕೆ ತಾನೇ ನಡೆಯುತ್ತದೆ. ಯಾವಾಗ ಕರ್ಮಮಾಡುವವನು 'ನಾನು' 'ನನ್ನದು' ಎಂಬ ಭಾವನೆಯಿಂದ ಕೂಡಿರುವುದಿಲ್ಲವೋ ಆಗ ಕರ್ಮದ ಫಲದಲ್ಲೂ ಕೂಡ ಮಮತೆಯಾಗಲಿ, ಮೋಹವಾಗಲಿ ಉಳಿಯುವುದಿಲ್ಲ. ಅದೇ ಕರ್ಮಯೋಗದ ತತ್ತ್ವವೂ ಆಗಿರುತ್ತದೆ.

(೧೨) ಸತ್ಯವಾದುದು ಯಾವುದು ? ಸದ್ವಸ್ತು ಯಾವುದು ? ಅಸತ್ಯವಾದುದು ಯಾವುದು ? ಅಸದ್‌ವಸ್ತು ಯಾವುದು ? ಎಂಬುದರ ಕುರಿತಾದ ವಿವೇಕದಿಂದ ಕೂಡಿ ಜೀವನದಲ್ಲಿ ಕರ್ಮಯೋಗವನ್ನು ಅನುಷ್ಠಾನಮಾಡುತ್ತಾ, ನಡೆಯುವ ಕರ್ಮಗಳೆಲ್ಲವೂ

ಅಸದ್ವಸ್ತುವಾದ ದೇಹೇಂದ್ರಿಯಗಳಿಂದಾಗಿ ಆಗುತ್ತವೆ ಎಂದು ತಿಳಿಯುವುದು— ಕರ್ಮಯೋಗದಲ್ಲಿ ನಿರತನಾಗಿದ್ದೂ ದೇವರ ಇರವನ್ನು ನಂಬಿರದವನ ದೃಷ್ಟಿ ಮತ್ತು ಕರ್ತವ್ಯಗಳಾಗಿವೆ. ಈ ರೀತಿ ಕರ್ಮಗಳನ್ನು ಮಾಡುತ್ತಾ ಕೊನೆಗೆ ಸುಖದುಃಖಗಳಿಂದ ಪ್ರಭಾವಿತನಾಗದೆ ನೀರಿನಲ್ಲಿರುವ ತಾವರೆ ಎಲೆಯಂತೆ ನಿರ್ಲಿಪ್ತನಾಗಿ ಕರ್ಮಯೋಗಿ ಯಾಗಿ (ಕರ್ಮವಿಲ್ಲದಿರುವಿಕೆಯನ್ನು ಕಾಣುತ್ತಾ) ಬೆಳಗುತ್ತಾನೆ.

(೧೩) ಹೀಗೆ ಕರ್ಮಯೋಗವನ್ನು ಅನುಷ್ಠಾನ ಮಾಡುತ್ತಾ ಜಗತ್ತಿನ ಒಡೆಯನು ಭಗವಂತನು ಎಂದೂ ನಂಬಿರುವವನು ಅವನನ್ನು ಸೇರಬಹುದು. ಆ ನಂಬಿಕೆ ಇಲ್ಲದಿದ್ದರೆ ಜಗತ್ತಿನಲ್ಲಿ ಇರುವ ವಿಪುಲವಾದ ಪ್ರಕೃತಿಭೇದಗಳು, ನಿಯಮಗಳು, ವೈಚಿತ್ರ್ಯಗಳು ಇವುಗಳ ಹಿನ್ನೆಲೆಯಲ್ಲಿ ಅಡಗಿರುವ ಪ್ರಕೃತಿಶಕ್ತಿಯನ್ನು ಗ್ರಹಿಸಿ ಅದರ ಸಾಕ್ಷಾತ್ಕಾರವನ್ನು ಮಾಡಬಹುದು. ಆಗ 'ನಾನು' ಎಂಬ ಸಂಕುಚಿತ ಬಂಧನದಿಂದ ಮುಕ್ತನಾಗಿ 'ಸರ್ವ' ಎಂಬ ವಿಶ್ವವಿಶಾಲವಾದ, ಸ್ವಾತಂತ್ರ್ಯಾನಂದದ ನೆಲೆಗೆ ಸೇರಲು ಸಾಧ್ಯವಾಗುತ್ತದೆ.

(೧೪) ಇರುವುದೆಲ್ಲೆಲ್ಲೂ ಪರಮಾತ್ಮನ ಪರತತ್ತ್ವವೇ ಆಗಿದ್ದು ಅದು ಜಗತ್ತು, ಜೀವನ ಎಲ್ಲವನ್ನೂ ಆವರಿಸಿದೆ ಎಂಬ ದಿವ್ಯಸತ್ಯವನ್ನು ಕರ್ಮಯೋಗದ ಮೂಲಕ ಅನುಭವಿಸಲು ಸಾಧ್ಯ. ಈ ಅನುಭವ ಗಳಿಸಲು ಮಾಡಬೇಕಾದ ಸಾಧನೆಗಾಗಿ ಜಗತ್ತಿನಲ್ಲಿ ಇರುವ ತನ್ನ ಸ್ಥಾನ, ಸಂಸಾರಗಳನ್ನು ತ್ಯಜಿಸಬೇಕಾಗಿಲ್ಲ. ಅವುಗಳ ಸಹಿತವಾಗಿ ಜೀವನ ರಂಗದಲ್ಲಿ ಅಲ್ಲಲ್ಲೇ ಇದ್ದು ಕರ್ಮಯೋಗವನ್ನು ಅನುಷ್ಠಾನ ಮಾಡಬಹುದು ಮತ್ತು ಅನುಷ್ಠಾನ ಬಲದಿಂದ ಗುರಿಯನ್ನು ಸೇರಬಹುದು.

(೧೫) ನಿಷ್ಕಾಮಭಾವನೆಯಿಂದ, ಕ್ರಮನಿಯಮಗಳಿಂದ ಪ್ರಕೃತಿಯಲ್ಲಿ ನಿತ್ಯವೂ ಕೆಲಸ ಕಾರ್ಯಗಳು ಜಗತ್ತಿನ ಸರ್ವಾಂಗೀಣ ಹಿತಕ್ಕಾಗಿ ನೆರವೇರುತ್ತಿವೆ. ಕರ್ಮಯೋಗದ ತತ್ತ್ವವೂ ಇದೇ ಆಗಿದ್ದು ಅದನ್ನು ಕರ್ಮಯೋಗಿಯು ಸರಿಯಾಗಿ ಪರಿಪಾಲಿಸುವುದರ ಮೂಲಕ ನಿಷ್ಕಾಮನೂ ನಿರ್ಲಿಪ್ತನೂ ನಿರಹಂಕಾರಿಯೂ ಆಗಿ ನಿತ್ಯಾನಂದದ ಅನುಭವ ಉಳ್ಳವನಾಗುತ್ತಾನೆ. ಅಂತಹ ಜೀವಿಗಳು ನಿರ್ವಹಿಸುವ ಕೆಲಸಗಳು ಯೋಗಯುಕ್ತವಾದ ದಿವ್ಯ ಪವಿತ್ರ ಕೆಲಸಗಳಾಗಿ ಮಾನವಕುಟುಂಬಕ್ಕೆ ಮಹತ್ವಪೂರ್ಣವಾದ ಆಶೀರ್ವಾದ ದಂತಿದ್ದು ಅದರಿಂದ ಇತರರಿಗೆ ಸ್ಫೂರ್ತಿ, ಬೆಳಕು ಮತ್ತು ಮಾರ್ಗದರ್ಶನಗಳು, ದೊರೆಯುತ್ತವೆ. ಕರ್ಮಯೋಗಿಯ ಜೀವನ ಪವಿತ್ರವಾದಂತೆ ಇತರರ ಜೀವನವು ಪಾವನವೂ ಮಂಗಳಪ್ರದವೂ ಆಗಲು ಕರ್ಮಯೋಗಿಯು ನೆರವಾದಂತಾಗುತ್ತದೆ. ಕರ್ಮಯೋಗಿಯು ಕೆಲಸಗಳನ್ನು ಮಾಡುತ್ತಿದ್ದರೂ ಅದು ಯೋಗಯುಕ್ತವಾದ ಕರ್ಮ ಗಳಾದುದರಿಂದ ಮಾಡಿಯೂ ಮಾಡದಂತೆ ಇದ್ದು ಕರ್ಮಯೋಗಿಯು ಅವರ್ಣನೀಯ ವಾದ ಶಾಂತಿಸುಖಗಳ ಆನಂದವನ್ನು ಪಡೆಯುತ್ತಿರುತ್ತಾನೆ. ಆಗ ಅವನು ನೀರಿನಲ್ಲಿದ್ದರೂ ಇಲ್ಲದಂತಿರುವ ತಾವರೆ ಎಲೆಯಂತೆ ನಿರ್ಲಿಪ್ತನಾಗಿ ಜೀವನದಲ್ಲಿ ಬೆಳಗುತ್ತಿರುತ್ತಾನೆ.

ಕರ್ಮಯೋಗದಲ್ಲಿ ಅಡಗಿರುವ ಮುಖ್ಯ ಸಂಗತಿಗಳು ಈ ಮೇಲಿನ ವಿವರಗಳಂತಿದ್ದರೆ ಕರ್ಮಯೋಗಿಯಾಗಬೇಕಾದ ಸಾಧಕನು ಪಡೆದಿರಬೇಕಾದ ಗುಣಯೋಗ್ಯತೆ ಮತ್ತು ಮನೋದೃಷ್ಟಿ ವಿಚಾರಗಳ ಸಂಕ್ಷೇಪವಾದ ವಿವರಣೆಯನ್ನು ಹೀಗೆ ಕ್ರೋಢೀಕರಿಸ ಬಹುದು :

(೧) ಕರ್ಮಯೋಗಿಯಾಗಬೇಕಾಗಿರುವವನು ತಾನು ಮಾಡುವ ಕರ್ಮಗಳ ಕುರಿತಾದ ಫಲಾಫಲಗಳ ವಿಚಾರದಲ್ಲಿ ಚಿಂತನೆ, ಆಸಕ್ತಿಗಳನ್ನು ಹೊಂದಿರಬಾರದು. ಕರ್ಮವನ್ನು ಫಲಚಿಂತನೆ ಇಲ್ಲದೆ ಮಾಡಬೇಕು.

(೨) ತನ್ನಲ್ಲಿರುವುದನ್ನು ಇತರರಿಗೆ ಕೊಡಬೇಕು, ಆದರೆ ತಾನು ಇತರರಿಂದ ಏನನ್ನೂ ಹಿಂದಕ್ಕೆ ಅದಕ್ಕಾಗಿ ನಿರೀಕ್ಷಿಸಬಾರದು. ತಾನು ಇತರರಿಂದ ಏನನ್ನೂ ನಿರೀಕ್ಷಿಸದೆ ತನ್ನ ಪಾಲಿನ ಕೆಲಸವನ್ನು ಸರಿಯಾಗಿ ನಿರ್ವಹಿಸಬೇಕು. ತಾನು ಮಾಡಿದ ಕೆಲಸ, ನೀಡಿದ್ದ ವಸ್ತು–ವಿಚಾರಗಳು, ಇವುಗಳ ಬಗ್ಗೆ ಕೀರ್ತಿ, ಹೊಗಳಿಕೆ, ಕೃತಜ್ಞತೆ ಇತ್ಯಾದಿ ಏನನ್ನೂ ನಿರೀಕ್ಷಿಸಬಾರದು. ಕೆಲಸವನ್ನು ಮಮಕಾರರಹಿತನಾಗಿ ನಿಸ್ಸಂಗಬುದ್ಧಿಯಿಂದ ನಿರ್ವಹಿಸಬೇಕು.

(೩) ಕೆಲಸದ ವಿಚಾರವಾಗಿ ಎಂದರೆ ಅದರ ಸಾಧನಾವಿವರಗಳಿಗೆ ಕೆಲಸದ ಗುರಿಯಷ್ಟೇ ಪ್ರಾಮುಖ್ಯವನ್ನು ನೀಡಿ ಸೂಕ್ತವಾದ ಎಚ್ಚರಿಕೆ, ತಿಳಿವಳಿಕೆಗಳಿಂದ ಕೂಡಿ ಮಾಡುವ ಕೆಲಸವಾವುದೇ ಆಗಲಿ. ಅದನ್ನು ಸರಿಯಾಗಿ ಕೌಶಲಪೂರ್ಣವಾಗಿ ನಿರ್ವಹಿಸಬೇಕು.

(೪) ಬೆಂಕಿಯಲ್ಲಿ ಹೊಗೆ ಇರುವಂತೆ ಪ್ರತಿಯೊಂದು ಕೆಲಸದಲ್ಲೂ ಅಪರಿಪೂರ್ಣತೆ ಎಂಬ ಅಂಶ ಇದ್ದೇ ಇರುತ್ತದೆ. ನಿಃಸ್ವಾರ್ಥಬುದ್ಧಿ, ನಿರಹಂಕಾರವಾದ ಮನೋಭಾವನೆ ಇದ್ದರೆ ಈ 'ಅಪರಿಪೂರ್ಣತೆ'ಯಿಂದ ಕರ್ಮಯೋಗಿಗೆ ತೊಂದರೆಯಾಗದು. ಈ ತತ್ತ್ವವನ್ನು ಕರ್ಮಯೋಗಿಯು ಸ್ಪಷ್ಟವಾಗಿ ತಿಳಿದಿರಬೇಕು.

(೫) ತನ್ನಲ್ಲಿರುವ ದೈಹಿಕ, ಮಾನಸಿಕ ಮತ್ತು ಆಧ್ಯಾತ್ಮಿಕವಾದ ಸಕಲಶಕ್ತಿಗಳನ್ನೂ ಯೋಗಯುಕ್ತವಾದ ರೀತಿಯಲ್ಲಿ ಉಪಯೋಗಿಸಿ, ಉದಾತ್ತೀಕರಿಸಿ, ಜಗತ್ಕಲ್ಯಾಣ ದೃಷ್ಟಿಯಿಂದ ಉಪಯುಕ್ತವಾದ ರೀತಿಯಲ್ಲಿ ವಿನಿಯೋಗಿಸಬೇಕು.

ಈ ರೀತಿಯ ಮಾನಸಿಕ ಸಿದ್ಧತೆ–ಸಾಧನಾ ತಯಾರಿಗಳನ್ನು ಮಾಡಿಕೊಂಡ ಕರ್ಮಯೋಗಿಯು ನಿರ್ವಹಿಸುವ ಕರ್ಮಯೋಗದಲ್ಲಿ ಅಡಗಿರುವ ಸಾಧನಾವಿಚಾರ ಮತ್ತು ಸಾಧನಾಸೋಪಾನಗಳು ಮುಖ್ಯವಾಗಿ ಐದು ಆಗಿವೆ :

(೧) ಕರ್ಮಜ್ಞಾನ ಮತ್ತು ಕಾರ್ಯಕುಶಲತೆ, (೨) ಸಮತ್ವದೃಷ್ಟಿ (ಚಿತ್ತಸ್ಥಿರತೆ), (೩) ನಿಷ್ಕಾಮಭಾವನೆ, (೪) ಕರ್ಮಫಲತ್ಯಾಗ, (೫) ಈಶ್ವರಾರ್ಪಣ.

(೧) ಕರ್ಮಜ್ಞಾನ ಮತ್ತು ಕರ್ಮಕುಶಲತೆ : ಮಾಡುವ ಕೆಲಸದ ವಿಚಾರವಾಗಿ ಸರಿಯಾದ ತಿಳಿವಳಿಕೆ ಇಲ್ಲದಿದ್ದರೆ ಕೆಲಸವನ್ನು ಸರಿಯಾಗಿ ನಿರ್ವಹಿಸಲು ಸಾಧ್ಯವಾಗದು. ಹಾಗೆಯೇ ಮಾಡುವ ಯಾವ ಕೆಲಸವೇ ಆಗಿರಲಿ ಅದರ ಕುರಿತಾಗಿ ಸೂಕ್ತವಾದ ಕಾರ್ಯನಿರ್ವಾಹಕಸಾಮರ್ಥ್ಯ, ಕಾರ್ಯಗಳನ್ನು ಕುಶಲತೆಯಿಂದ ನಿರ್ವಹಿಸುವ ಶಕ್ತಿ ಇರಬೇಕು. ಕೌಶಲಪೂರ್ಣವಾಗಿ ಕೆಲಸಗಳನ್ನು ನಿರ್ವಹಿಸದಿದ್ದರೆ ಕೆಲಸವು ಸರಿಯಾಗಿ ಹೊಂದಿಬರಲಾರದು. ಹೀಗೆ ಕೆಲಸಗಳ ಕುರಿತಾದ ವಿಧಾನ-ವಿವರಗಳ ಪರಿಜ್ಞಾನ ಮತ್ತು ಕೆಲಸಗಳನ್ನು ಕೌಶಲಪೂರ್ಣವಾಗಿ ನಿರ್ವಹಿಸುವ ಕರ್ಮಕುಶಲತೆ ಇವೆರಡೂ ಕರ್ಮಯೋಗಿಗೆ ಅತ್ಯಂತ ಮುಖ್ಯವಾದ ಪ್ರಥಮ ಸಾಧನಾಸೋಪಾನವಾಗಿದೆ.

(೨) ಸಮತ್ವದೃಷ್ಟಿ (ಚಿತ್ತಸ್ಥಿರತೆ) : ಮಾಡುವ ಕೆಲಸ ಯಾವುದೇ ಆಗಲಿ ಅದು ಅದಕ್ಕೆ ತಕ್ಕ ಫಲವನ್ನು ಕೊಟ್ಟೇಕೊಡುತ್ತದೆ. ಕೆಟ್ಟ ಕೆಲಸಗಳನ್ನು ಮಾಡಿದರೆ ಕೆಟ್ಟ ಫಲವೂ, ಒಳ್ಳೆಯ ಕೆಲಸಗಳನ್ನು ಮಾಡಿದರೆ ಒಳ್ಳೆಯ ಫಲವೂ ಬಂದೇ ಬರುತ್ತದೆ. ಹಾಗೆಯೇ ಕೆಲವು ಕೆಲಸಗಳಿಂದ ನೆನಸಿದಂತೆ ಉತ್ತಮ ಪರಿಣಾಮ ಬಾರದೇ ದುಃಖವೇ ಬರಬಹುದು ; ಅಥವಾ ನೆನಸಿದ್ದಕ್ಕಿಂತ ಹೆಚ್ಚಿನ ಸುಖವೇ ಬರಬಹುದು. ದುಃಖ ಬಂದಾಗ ಕುಗ್ಗಿದರೆ ಮುಂದೆ ಕೆಲಸಗಳನ್ನು ಸರಿಯಾಗಿ ಮಾಡುವ ಸಾಮರ್ಥ್ಯವು ತುಂಬಾ ಕಡಿಮೆ ಯಾಗುತ್ತದೆ ಅಥವಾ ಪೂರ್ತಿ ಸಾಮರ್ಥ್ಯವೇ ಇಲ್ಲದಂತಾಗಬಹುದು. ಇಲ್ಲವೇ ಕೆಲಸ ಗಳನ್ನು ಸರಿಯಾಗಿ ನಿರ್ವಹಿಸಲು ಅತಿ ವಿಳಂಬವಾಗಲೂಬಹುದು. ಸುಖ ಬಂದಾಗ ಹಿಗ್ಗಿದರೆ ಅದರಿಂದ ಅಹಂಕಾರ–ಮಮಕಾರಗಳುಂಟಾಗಿ ಅಥವಾ ಸುಖದ ಅನುಭವವನ್ನು ಹೆಚ್ಚು ಹೆಚ್ಚು ಪಡೆಯಬೇಕೆಂಬ ಆಸೆಯಿಂದ ಕೆಲಸಕಾರ್ಯಗಳನ್ನು ಸರಿಯಾಗಿ ನಿರ್ವಹಿ ಸಲು ಸಾಧ್ಯವಾಗದೇ ಹೋಗಬಹುದು. ವ್ಯಕ್ತಿಯು ನಿರ್ವಹಿಸುವ ಜೀವನದ ದಿನನಿತ್ಯದ ಕೆಲಸಗಳು ಅವನ ಜೀವನದ ಮೇಲೆ ಪರಿಣಾಮವನ್ನು ಉಂಟುಮಾಡುವಂತೆ ಅವನು ಜೀವಿಸುತ್ತಿರುವ ಸಮಾಜದ ಮತ್ತು ದೇಶದ ಮೇಲೆ ಪರಿಣಾಮವನ್ನುಂಟುಮಾಡುತ್ತದೆ. ಹಾಗಾಗಿ ವ್ಯಕ್ತಿಯು ಕೆಲಸಗಳನ್ನು ಸರಿಯಾಗಿ ಮಾಡಬೇಕಾದುದು ಅತ್ಯಂತ ಅಗತ್ಯ ಮತ್ತು ಮುಖ್ಯ. ಹೀಗೆ ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸಲು ವ್ಯಕ್ತಿಯಲ್ಲಿ ಚಿತ್ತಶುದ್ಧಿ ಬೇಕೇಬೇಕು. ಶುದ್ಧವಾಗಿರುವ ಮನಸ್ಸು ಸುಖದುಃಖಗಳ ಅನುಭವಕ್ಕೆ ಮಾರುಹೋಗು ವುದಿಲ್ಲ ; ಅದರ ಪ್ರಭಾವಕ್ಕೆ ಒಳಗಾಗುವುದಿಲ್ಲ. ಈ ರೀತಿಯ ಮಾನಸಿಕ ದೃಷ್ಟಿಯೇ 'ಸಮದೃಷ್ಟಿ'. ಸುಖ ಬಂದಾಗ ಹಿಗ್ಗದೆ, ದುಃಖ ಬಂದಾಗ ಕುಗ್ಗದೆ ಕೆಲಸಕಾರ್ಯಗಳನ್ನು ಮಾಡುತ್ತಾ ಹೋಗುವುದು ಚಿತ್ತಸ್ಥಿರತೆಯ ರಹಸ್ಯವೂ ಹೌದು, ಸ್ವರೂಪವೂ ಹೌದು.

(೩) ನಿಷ್ಕಾಮಭಾವನೆ (ನಿಃಸ್ವಾರ್ಥತೆ) : ಮಾಡುವ ಕೆಲಸಗಳಿಂದ ಇಂತಹ ಫಲವೇ ಬರಬೇಕೆಂದು ಬಯಸುವುದು, ಕೆಲಸಮಾಡುವ ಮೊದಲೇ ಎಣಿಕೆಹಾಕುವುದು, ಆ ಬಗ್ಗೆ ಕಾತರನಾಗಿರುವುದು, ಇವುಗಳನ್ನು ಕಾಮನೆ ಎಂದು ಹೇಳುತ್ತಾರೆ. ಈ ರೀತಿ ಕಾಮನೆ ಯಿಂದ ಕೂಡಿ ಕೆಲಸವನ್ನು ಮಾಡಿದಾಗ ಮಾಡಿದ ಕೆಲಸ ನಿರೀಕ್ಷಿಸಿದ ಫಲ ಕೊಡದೇ ಹೋದರೆ ವ್ಯಕ್ತಿಯು ಅತೀವವಾದ ದುಃಖಕ್ಕೆ ಒಳಗಾಗುತ್ತಾನೆ, ನಿರಾಶೆಗೆ ಸಿಲುಕುತ್ತಾನೆ. ನೆನಸಿದಂತೆ ಫಲ ದೊರೆತಾಗ ಇನ್ನೂ ಹೆಚ್ಚಿನ ಫಲ ದೊರೆಯಲಿ ಎಂಬ ದುರಾಶೆ ಉಂಟಾಗುತ್ತದೆ. ಆಸೆ–ದುರಾಶೆ, ದುಃಖ–ನಿರಾಶೆಗಳಿಂದಾಗಿ ಮನುಷ್ಯನ ಮಾನಸಿಕ, ದೈಹಿಕ, ಸಾಮಾಜಿಕ ಸ್ಥಿತಿಗತಿಗಳು ಹೀನವಾಗಿ ಜೀವನ ತುಂಬ ಕಷ್ಟದಾಯಕವಾಗುತ್ತದೆ. ಫಲದಾಸೆ, ಫಲಸ್ವರೂಪದ ಕಲ್ಪನೆಗಳಿಂದ ಕೂಡಿ ಕಾಮನೆಯ ದೃಷ್ಟಿಯಿಂದ ಕೆಲಸ ಮಾಡಿದರೆ ಕರ್ಮಮಾಡುವವನು ತನಗೆ ಅರಿವಿಲ್ಲದೆಯೋ, ತಾನು ನಿರೀಕ್ಷಿಸದೆಯೋ ಎಂಬಂತೆ ಹಲವಾರು ರೀತಿಯ ಕಷ್ಟನಷ್ಟಗಳಿಗೆ ಒಳಗಾಗುತ್ತಾನೆ. ಪರಿಣಾಮವಾಗಿ ಕರ್ಮಬಂಧನ, ಸಂಸಾರಪಾಶಗಳಿಗೆ ಮತ್ತೂ ಮತ್ತೂ ಒಳಗಾಗುತ್ತಾನೆ. ಚಿತ್ತದ ಸ್ವಾಸ್ಥ್ಯ, ಕರ್ಮಕುಶಲತೆಗಳನ್ನು ಕಳಕೊಳ್ಳುತ್ತಾನೆ. ಕರ್ಮಯೋಗದ ಪ್ರಗತಿಯ ಪಥದಲ್ಲಿ ಮುನ್ನಡೆ ಯದೆ ಉಳಿಯುತ್ತಾನೆ. ಆದುದರಿಂದ ಕರ್ಮಯೋಗಿಯು ಮಾಡುವ ಕೆಲಸವನ್ನು ಫಲಾಪೇಕ್ಷೆ ಇಲ್ಲದೆ, ನಿಷ್ಕಾಮಭಾವನೆಯಿಂದ, ಕೆಲಸಕ್ಕಾಗಿ ಕೆಲಸ ಎಂಬ ನಿರ್ಲಿಪ್ತಭಾವನೆ

ಯಿಂದ ಮಾಡಬೇಕು. ಹೀಗೆ ಕೆಲಸವನ್ನು ಮಾಡುವುದರಿಂದ ಆ ಕೆಲಸದ ಫಲಗಳು ಏನೇ ಆದರೂ ವ್ಯಕ್ತಿಯ ಮನೋಧರ್ಮಕ್ಕೆ, ಜೀವನದೃಷ್ಟಿಗೆ ತೊಂದರೆ ಉಂಟಾಗುವುದಿಲ್ಲ. ಕರ್ಮಯೋಗಿಯು ನಿಸ್ಸಂಗನೂ ನಿರ್ಮಮನೂ ಆಗಿ ತನ್ನ ಬಾಳಿನ ಪಥದಲ್ಲಿ ಸುಗಮವಾಗಿ ಮುಂದೆ ಸಾಗಲು ನಿಷ್ಕಾಮಭಾವನೆಯು ಸಹಕಾರಿಯಾಗಿರುತ್ತದೆ. ಮಾತ್ರವಲ್ಲದೆ ಚೈತನ್ಯ ದಾಯಕವೂ ಆಗಿರುತ್ತದೆ.

(೪) ಕರ್ಮಫಲತ್ಯಾಗ : ಮಾಡುವ ಕರ್ಮದಿಂದ ಇಂತಹ ಫಲ ಬರುತ್ತದೆ ಎಂದು ಎಣಿಸುವುದು, ಅದನ್ನು ಮೊದಲೇ ಬಯಸುವುದು, ಇವುಗಳಿಂದ ಕೆಲಸದ ಮೇಲೆ ಮೋಹ ಉಂಟಾಗುತ್ತದೆ ಎಂದು ಈಗಾಗಲೇ ವಿವರಿಸಿಯಾಗಿದೆ. ಹೀಗಾಗಲು ಕರ್ಮದ ಕಾಮನೆಯು ಕಾರಣವಾದರೆ ಕರ್ಮದ ಫಲ ದೊರೆತಾಗ ಅದರ ಬಗ್ಗೆ ಆಸಕ್ತಿವಹಿಸಿ ನಾನು, ನನ್ನದು ಎಂಬ ಅಹಂಕಾರ-ಮಮಕಾರಗಳನ್ನು ತಳೆಯುವುದು ಕರ್ಮಫಲ ವ್ಯಾಮೋಹದ (ಆಸಕ್ತಿಯ) ಪರಿಣಾಮವಾಗಿದೆ.

ಕರ್ಮಫಲದ ಮೇಲೆ ಆಸಕ್ತಿ ತಳೆದಾಗ ಆ ಫಲದ ಅನುಭವ ಮತ್ತು ಇನ್ನೂ ಅನುಭವಿಸ ಬೇಕೆಂಬ ಹಂಬಲ ಉಂಟಾಗುತ್ತದೆ. ಫಲದ ಸುಖ ಮುಗಿದಾಗ ಅಥವಾ ಸುಖಕ್ಕೆ ತೊಂದರೆ-ಆತಂಕಗಳು ಬಂದಾಗ ಪರಿಣಾಮವಾಗಿ ಸಿಟ್ಟು, ದ್ವೇಷ ಇತ್ಯಾದಿ ಮನೋ ವಿಕಾರಗಳು ಉಂಟಾಗಿ ಜೀವಿಗೆ ಅದರಿಂದ ಕಷ್ಟನಷ್ಟಗಳು ಒದಗುತ್ತವೆ. ಆಗ ಮುಂದಿನ ಕೆಲಸವನ್ನು ಸರಿಯಾಗಿ ಮಾಡಲಾಗದೆ ಯೋಗದ ಹಾದಿಯಲ್ಲಿ ಮುನ್ನಡೆಯದೆ ಕಷ್ಟಗಳಿಗೆ ಒಳಗಾಗುವಂತಾಗುತ್ತದೆ. ಫಲ ಒಳ್ಳೆಯದಾಗಲಿ ಕೆಟ್ಟದಾಗಲಿ, ಅದರ ಪ್ರಭಾವಕ್ಕೆ ಒಳಗಾಗದೆ, ಫಲವಾಗಲಿ ಪರಿಣಾಮವಾಗಲಿ ಆಸೆಯಿಂದ ತನ್ನದು, ತನಗೆ ಬೇಕು ಎನ್ನದೆ ಇರುವುದೇ ಫಲತ್ಯಾಗ. ಕರ್ಮದಿಂದಾಗಿ ದೊರೆತ ಕೀರ್ತಿ, ಗೌರವ, ಐಶ್ವರ್ಯ ಇತ್ಯಾದಿಗಳ ಬಗೆಗೆ ತಾನು, ತನ್ನದು ಎಂಬ ತ್ಯಾಗಮಾಡುವುದಾದರೆ ಯಾರಿಗಾಗಿ ತ್ಯಾಗಮಾಡಬೇಕು ಎನ್ನುವ ಪ್ರಶ್ನೆ ಉದ್ಭವಿಸುತ್ತದೆ. ಸಾಧಕನು ಈ ಹಂತಕ್ಕೆ ಬಂದನಂತರ ಅವನು ಏರ ಬೇಕಾದ ಮುಂದಿನ ಹಂತವೇ ಈಶ್ವರಾರ್ಪಣ.

(೫) ಈಶ್ವರಾರ್ಪಣವು ಕರ್ಮಯೋಗದ ಸಾಧನೆಯ ಕೊನೆಯ ಹಂತ. ಮಾಡುವ ಎಲ್ಲಾ ಕೆಲಸಗಳನ್ನೂ ನಾನು ಮಾಡುತ್ತೇನೆ ಎಂಬ ಅಹಂಕಾರವಿಲ್ಲದೆ, ಎಲ್ಲವೂ ಸರ್ವ ಶಕ್ತನಾದ ಭಗವಂತನೇ ತನ್ನ ಮೂಲಕ ಮಾಡಿಸುತ್ತಾನೆ ಎಂದು ನೆನೆಸುವುದೇ ಈಶ್ವರಾ ರ್ಪಣದ ಪೂರ್ವಭಾಗ. ಕೆಲಸಮಾಡುವಿಕೆ ಮಾತ್ರ ತನಗಿರುವ ಹಕ್ಕಾಗಿದ್ದು, ಕೆಲಸವನ್ನು ಕುಶಲತೆಯಿಂದ ನಿರ್ವಹಿಸಿ, ಕೆಲಸದ ಶುಭಾಶುಭಫಲಗಳನ್ನು ಲೆಕ್ಕಿಸದೇ ಇದ್ದು, ದೊರೆತ ಫಲವನ್ನು ಭಗವಂತನಿಗೆ ಸಮರ್ಪಿತ ಎಂಬ ಭಾವನೆಯನ್ನು ತಳೆದು, ಫಲವೆಲ್ಲವನ್ನೂ ಪರಮಾತ್ಮನಿಗೆ ಅರ್ಪಿಸುವುದು ಈಶ್ವರಾರ್ಪಣದ ಉತ್ತರಭಾಗ. ಕೆಲಸವನ್ನು ಮಾಡಿಸುವ ಭಗವಂತನಿಗೆ ಫಲದ ಅಧಿಕಾರ ಇರುವುದು ಸಹಜವೇ ಸರಿ. ಈಶ್ವರನಿಗೆ ಅರ್ಪಿತವಾದದ್ದು ಪವಿತ್ರವಾಗಿ ಅದು ಅವನ ಪ್ರಸಾದವಾಗುತ್ತದೆ. ಈಶ್ವರಪ್ರಸಾದದಿಂದ ಕರ್ಮಯೋಗಿಯ ಸಕಲ ದುಃಖಬಂಧನಗಳೂ ನಿವೃತ್ತಿಯಾಗುತ್ತವೆ. ಹೀಗೆ ಭಗವದರ್ಪಣಭಾವದಿಂದ ನಿರ್ವಹಿಸುವ ಕೆಲಸಗಳೆಲ್ಲವೂ ದೇವರ ಪೂಜೆಯಂತಾಗುತ್ತದೆ. ಅಲ್ಲದೆ ಸರ್ವಶಕ್ತನಾದ

ಭಗವಂತನೇ ತನ್ನ ಹಿಂದೆ ನಿಂತು ಕೆಲಸ ಮಾಡಿಸುತ್ತಾನೆ ಎಂದಾಗ ಧೈರ್ಯ, ಭರವಸೆ, ಕುಶಲತೆಗಳು ಹೆಚ್ಚಿ ಕೆಲಸ ಶ್ರೇಷ್ಠವುಟ್ಟದ್ದಾಗುತ್ತದೆ. ಹೀಗೆ ಈಶ್ವರಾರ್ಪಣಭಾವನೆಯಿಂದ ಮಾಡುವ ಕೆಲಸಗಳ ಮೂಲಕ ಜೀವಿಯ ಜೀವನವು ಪಾವನವೂ ಪರಿಶುದ್ಧವೂ ಆಗಿ ಮುಕ್ತಿಗೆ ಸಾಧನವಾಗುತ್ತದೆ.

ಈ ರೀತಿ ಪಂಚಸೋಪಾನಗಳನ್ನು ಅನುಸರಿಸಿ ಕರ್ಮಯೋಗದ ಸಾಧನೆಯನ್ನು ಮಾಡಿದ ಕರ್ಮಯೋಗಿಯು ತನ್ನ ಕೆಲಸಗಳ ಮೂಲಕ ಭಗವಂತನಲ್ಲಿ ಒಂದಾಗುತ್ತಾನೆ. ಕರ್ಮಯೋಗದ ಹಿನ್ನೆಲೆಯಲ್ಲಿ ಅಡಕವಾಗಿರುವ ಕೆಲವು ಮುಖ್ಯವಾದ ತತ್ತ್ವಗಳ ವಿವೇಚನೆಯನ್ನು ಮಾಡಿದರೆ ಕರ್ಮಯೋಗದ ವಿಚಾರವನ್ನು ಮತ್ತಷ್ಟು ವಿವರವಾಗಿ ತಿಳಿಯಲು ಸಹಾಯವಾಗುವುದು.

(೧) ದೇವರ ಸರ್ವವ್ಯಾಪಕತೆ : ಕರ್ಮಯೋಗಿಯು ತಾನು ಮಾಡುವ ಎಲ್ಲ ಕೆಲಸಗಳನ್ನೂ ಕೆಲಸಕ್ಕಾಗಿ ಕೆಲಸ ಎನ್ನುತ್ತ ದೇವರ ಕೈಯಲ್ಲಿ ತಾನೊಂದು ನಿಮಿತ್ತಮಾತ್ರ ಎಂಬ ಭಾವನೆಯಿಂದ ಮಾಡುತ್ತಾನೆ. ಕರ್ಮಯೋಗಿಯು ನೆನಸುವ ದೇವರು ದೇಗುಲದಲ್ಲಿ ಮಾತ್ರವಿದ್ದು ಅಲ್ಲಿಗೇ ಸೀಮಿತನಾಗಿರುವುದಿಲ್ಲ. ಆತನು ಕಾರ್ಖಾನೆಯ ಯಂತ್ರಗಳಲ್ಲೂ, ಕಾರ್ಮಿಕನ ಹೃದಯದಲ್ಲೂ. ಮಾರುಕಟ್ಟೆಯ ಅಂಗಡಿಯಲ್ಲೂ ಗಿರಾಕಿಗಳಲ್ಲೂ, ರೈತನ ನೇಗಿಲಿನಲ್ಲೂ ಉಳುವವನಲ್ಲೂ, ಕಚೇರಿಯಲ್ಲೂ ಶಾಲೆಗಳಲ್ಲೂ—ಎಲ್ಲೆಲ್ಲೂ ಇದ್ದಾನೆ. ಆಯಾಯ ವೃತ್ತಿ-ಸನ್ನಿವೇಶಗಳಿಗೆ ಅನುಗುಣವಾಗಿ ಮಾಡುವ ಪ್ರತಿಯೊಂದು ಕೆಲಸವೂ ದೇವರ ಪ್ರೀತ್ಯರ್ಥವೆಂದಾಗಿ ದೇವರ ಆರಾಧನೆಯೇ ಆಗುತ್ತದೆ. ದೇವರು ಸರ್ವಶಕ್ತನೂ ಸರ್ವಾತ್ಮನೂ ಆಗಿದ್ದು ಈ ಜಗತ್ತೆಲ್ಲವೂ ಅವನಿಂದ ಆವೃತವಾಗಿದೆ. ಅವನನ್ನು ತನ್ನ ಸ್ವಭಾವ-ಸ್ವಧರ್ಮಗಳಿಗೆ ಅನುಗುಣವಾಗಿ ದೊರೆತ ವೃತ್ತಿಯ ಮೂಲಕ ಆರಾಧಿಸುವುದೇ ಕರ್ಮಯೋಗ. ಹೀಗೆ ಸ್ವಕರ್ಮದ ನಿರ್ವಹಣೆ ಎಂಬ ವಿಧಾನದಲ್ಲಿ ಆರಾಧಿಸುವುದರ ಮೂಲಕ ಅವನನ್ನು ಸೇರಲು ಸಾಧ್ಯ ಎಂದು ಕರ್ಮಯೋಗಿಯು ತಿಳಿದಿರುತ್ತಾನೆ. ಈ ತತ್ತ್ವವನ್ನು ಅನುಸರಿಸಿ ಕರ್ಮವನ್ನು ಮಾಡುವುದರಿಂದ ಕರ್ಮಯೋಗಿಯ ಹೃದಯ ವಿಶಾಲವಾಗಿ ಅವನ ವಿವೇಕ ವರ್ಧಿಸುತ್ತದೆ, ಭಗವಂತನ ಇರವನ್ನು ಎಲ್ಲೆಲ್ಲೂ ಕಾಣಲು ಕರ್ಮಯೋಗಿಗೆ ಸಾಧ್ಯವಾಗುತ್ತದೆ.

(೨) ಜಗದ ಜೀವಿಗಳಮೇಲಿನ ಪ್ರೇಮವೇ ಭಗವಂತನ ಪ್ರೇಮ : ಜಗದ ಜೀವಿಗಳು, ಜಗತ್ತು, ತಾನು ಮತ್ತು ತನ್ನ ಕೆಲಸ, ಇವುಗಳೆಲ್ಲವೂ ಭಗವಂತನಿಂದ ಕೂಡಿವೆ— ಭಗವಂತನೇ ಎಲ್ಲಕ್ಕೂ ಅಧಿಕಾರಿ ಎಂಬ ಭಾವನೆ ಕರ್ಮಯೋಗಿಯಲ್ಲಿ ಉಂಟಾಗುತ್ತದೆ. ಅದು ಜೀವನದಲ್ಲಿ ತನ್ನ ಕರ್ಮ ಮತ್ತು ಕರ್ಮಯೋಗದ ದೃಷ್ಟಿಯ ಮೂಲಕ ಅನುಷ್ಠಾನಕ್ಕೆ ಬಂದಾಗ ಜೀವಿಯು ಎಲ್ಲೆಲ್ಲೂ ಭಗವಂತನನ್ನೇ ಕಾಣುವಂತಾಗುತ್ತದೆ. ಆಗ ತಾನು ಮಾಡುವ ಕರ್ಮಗಳು ಬಂಧನಗಳಾಗದೆ ಬದಲು ಎಲ್ಲವೂ ಭಗವಂತನ ಸೇವೆ ಎಂದು ಆಗುತ್ತದೆ. ಜೀವಿಯು ಎಲ್ಲೆಲ್ಲೂ ಭಗವಂತನನ್ನೇ ಕಾಣುವಂತಾದ್ದರಿಂದ ಅವನು ಜೀವಿಗಳನ್ನು ಪ್ರೀತಿಸುವುದು ಭಗವಂತನನ್ನು ಪ್ರೇಮಿಸಿದಂತಾಗುತ್ತದೆ. ಹೀಗೆ ಕೆಲಸವೇ ಪೂಜೆಯಾಗುತ್ತದೆ, ಜೀವನವೇ ಆರಾಧನೆಯಾಗುತ್ತದೆ, ಜೀವಿಗಳೇ ಆರಾಧ್ಯಾನಾ

ಪೂರ್ತಿಗಳಾಗುತ್ತಾರೆ. ಆಗ ಜೀವನವೇ ಯೋಗವಾಗಿ ಜೀವಿಗೆ ಶಾಶ್ವತಾನಂದ ಪ್ರಾಪ್ತಿಯಾಗುತ್ತದೆ.

(೩) ಆತ್ಮದ ಹಿತ ಮತ್ತು ಜಗತ್ತಿನ ಹಿತ : ಕರ್ಮಯೋಗಿಯು ನಿಷ್ಕಾಮಭಾವನೆಯಿಂದ ಕರ್ಮಮಾಡುವಿಕೆ, ಕರ್ಮದಿಂದ ಬರುವ ಫಲವನ್ನು ಭಗವಂತನಿಗೆ ಅರ್ಪಿಸುವಿಕೆ —ಹೀಗೆ ಮಾಡುವುದರಿಂದ ಅವನ ವ್ಯಕ್ತಿಗತವಾದ ಜೀವನ ಪರಿಶುದ್ಧವೂ ಪವಿತ್ರವೂ ಆಗುತ್ತದೆ. ವ್ಯಕ್ತಿ ಉತ್ತಮನಾದಾಗ ಅವನಿಂದಾಗಿ ಇತರರಿಗೆ ಸ್ಫೂರ್ತಿ, ಮಾರ್ಗದರ್ಶನ, ಸೇವೆ—ಇವುಗಳು ದೊರೆಯುತ್ತವೆ. ಹೀಗೆ ಕರ್ಮಯೋಗಿಯು ತಾನು ಉತ್ತಮನಾಗಿ ತನ್ನ ಆತ್ಮದ ಹಿತ ಸಾಧಿಸುವುದಲ್ಲದೆ ಜಗತ್ತಿನ ಹಿತವನ್ನೂ ಬಯಸುವವನಾಗಿ ಲೋಕ ಕಲ್ಯಾಣಕಾರಣನಾದ ಕರ್ತೃವೂ ಆಗುತ್ತಾನೆ.

(೪) ಕರ್ಮಯೋಗಿಗೆ ಜೀವನದ ಯಾವ ಘಟ್ಟದ ಕೆಲಸಗಳೂ ಕಡಿಮೆಯಲ್ಲ : ಕರ್ಮಯೋಗಿಗೆ ಕರ್ಮವೇ ಪೂಜೆ—ಸೇವೆಯೇ ಭಗವಂತನ ಆರಾಧನೆ. ಹಾಗಾಗಿ ಜೀವನದಲ್ಲಿ ತನ್ನ ಎಲ್ಲ ಸಾಧನೆಗಳೂ ಕರ್ತವ್ಯಗಳೂ ಸಮಾನ ಬೆಲೆಯಿಂದ ಮುಖ್ಯ ಹಾಗೂ ಗಣ್ಯವಾದವುಗಳು. ಭೇದಬುದ್ಧಿ-ದ್ವೇಷಭಾವನೆಗಳಿಗೆ ಕರ್ಮಯೋಗದಲ್ಲಿ ಸ್ಥಾನವಿಲ್ಲ. ಆಸೆ-ನಿರಾಶೆಗಳ ಪ್ರಭಾವಕ್ಕೆ ಕರ್ಮಯೋಗಿ ನಿಲುಕುವುದಿಲ್ಲ. ಕರ್ತವ್ಯನಿರ್ವಹಣೆಯು ಕರ್ಮಯೋಗದ ಮುಖ್ಯಾಂಶ ಎನ್ನುತ್ತಾ, ಕರ್ತವ್ಯವನ್ನು ಸಮದೃಷ್ಟಿಯಿಂದ ಕುಶಲತೆಯಿಂದ ನಿರ್ವಹಿಸುತ್ತಾ, ಕರ್ಮಯೋಗಿಯು ಫಲವನ್ನು ದೇವರಿಗೆ ಅರ್ಪಿಸುತ್ತಾನೆ. ತನಗೆ ಜೀವನದಲ್ಲಿ ದೊರೆಯುವ ಎಲ್ಲ ಅವಕಾಶಗಳೂ ಭಗವಂತನ ಆರಾಧನೆಗೆ ದೊರೆಯುವ ಅಪೂರ್ವವಾದ ಅವಕಾಶಗಳು ಎಂದು ಪರಿಗಣಿಸುತ್ತಾ ಕರ್ಮಯೋಗಿಯು ಜೀವನವನ್ನು ನಿರ್ವಹಿಸುತ್ತಾನೆ. ಹಾಗಾಗಿ ಜೀವನವು ಕಷ್ಟನಷ್ಟಗಳ ಕಥೆ, ಭಗವಂತನ ಶಾಪ ಎಂದಾಗದೆ ಪರಮಾತ್ಮನ ಪವಿತ್ರ ಆರಾಧನೆಗೆ, ಸಾಕ್ಷಾತ್ಕಾರಕ್ಕೆ ದೊರೆತ ಉತ್ತಮ ಅವಕಾಶ ಎಂದಾಗಿ ಜೀವಿಯು ಜೀವನವನ್ನು ತುಂಬು ವಿಶ್ವಾಸ-ಪ್ರೀತಿಯಿಂದ ನಿರ್ವಹಿಸುತ್ತಾನೆ. ತನಗೆ ಜೀವನದಲ್ಲಿ ದೊರೆತ ಸ್ಥಾನ-ಜವಾಬ್ದಾರಿಗಳನ್ನು ಉತ್ತಮವಾದ ಯೋಗಯುಕ್ತವಾದ ರೀತಿಯಲ್ಲಿ ಪರಿವರ್ತಿಸಿಕೊಂಡು ತನ್ಮೂಲಕ ತನ್ನ ಆತ್ಮಸಾಕ್ಷಾತ್ಕಾರಕ್ಕೆ ಅನುಕೂಲ ಮಾಡಿಕೊಳ್ಳುತ್ತಾನೆ. ಹೀಗೆ ಕರ್ಮಯೋಗಿಗೆ ಜೀವನದ ಯಾವ ಘಟ್ಟವಾಗಲಿ ಕೆಲಸವಾಗಲಿ, ಕಡಿಮೆ-ಮೇಲು-ಕೀಳು ಎಂದಾಗದೆ ಎಲ್ಲವೂ ಸಹ ಮುಖ್ಯ ಹಾಗೂ ಉಪಯುಕ್ತ ಎಂದಾಗುತ್ತದೆ.

(೫) ತಾನು ಇರುವ ತನ್ನ ಸಂಸಾರದಲ್ಲೇ ಉಳಿದುಕೊಂಡು ಬಾಳಿನ ರಂಗದಲ್ಲಿ ಜೀವನದ ದಿನನಿತ್ಯದ ಕೆಲಸಕಾರ್ಯಗಳನ್ನು ನಿರ್ವಹಿಸುತ್ತಾ ಕರ್ಮಯೋಗವನ್ನು ಅನುಷ್ಠಾನಮಾಡಿ ಸಿದ್ಧಿಯನ್ನು ಪಡೆಯಬಹುದು.

ಕರ್ಮಯೋಗಿಯು ಜೀವನದಲ್ಲಿ ತನ್ನ ಸಂಸಾರದಲ್ಲಿಯೇ ಇದ್ದುಕೊಂಡು ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸಿಕೊಂಡುಬರುತ್ತಾ ತನ್ಮೂಲಕ ಮುಕ್ತಿಯನ್ನು ಪಡೆಯಲು ಸಾಧ್ಯವಾಗುತ್ತದೆ. ಮನೆಮಠ, ಸುಖದುಃಖಗಳು, ಲಾಭನಷ್ಟಗಳು ಜೀವಿಗೆ ಮುಕ್ತಿ ಸಾಧನೆಗೆ ಪ್ರತಿಬಂಧಕಗಳಾಗದೆ ಕರ್ಮಯೋಗದ ಮೂಲಕ ಸಾಧನಸಹಾಯಕಗಳಾಗು

ತ್ತಾನೆ. ತನ್ನ ಮನೆಯನ್ನೇ ಜಗತ್ತೆಂದೂ ತನ್ನವರೇ ತನ್ನ ಕುಟುಂಬ ಎಂದೂ ತಿಳಿದ ಜೀವಿಯು ಕರ್ಮಯೋಗದ ಮೂಲಕ ಜಗತ್ತೇ ತನ್ನ ಮನೆ, ಜಗತ್ತಿನ ಜೀವಿಗಳೇ ತನ್ನ ಸಂಸಾರದವರು ಎಂಬ ಉದಾತ್ತವೂ ವಿಶಾಲವೂ ಉನ್ನತವೂ ಆದ ಭಾವನೆಯ ಅನುಭವದ ಮಟ್ಟಕ್ಕೆ ತಲಪುತ್ತಾ ತನ್ಮೂಲಕ ಲೋಕದ ಸಂಸಾರಬಂಧನದಿಂದ ಮುಕ್ತನಾಗುತ್ತಾನೆ. ಹೀಗೆ ತಾನೆಲ್ಲಿ ಇದ್ದೇನೆಯೋ ಅಲ್ಲಿಯೇ ತನ್ನ ಸಹಜಧರ್ಮಕ್ಕೆ ಅನುಸಾರವಾದ ವೃತ್ತಿಯ ಮೂಲಕ ಭಗವಂತನ ಸಾಕ್ಷಾತ್ಕಾರ-ಆತ್ಮೋನ್ನತಿಗಳನ್ನು ಸಾಧಿಸಲು ಸಾಧ್ಯ ಎನ್ನುವುದು ಕರ್ಮಯೋಗದ ತತ್ತ್ವ ಹಾಗೂ ಸಿದ್ಧಾಂತವಾಗಿದೆ.

ಈ ರೀತಿಯಲ್ಲಿ ಕರ್ಮಯೋಗವು ಜಗತ್ತಿನಲ್ಲಿ ಜನ್ಮತಳೆದ ಜೀವಿಯು ಕರ್ಮವನ್ನು ಹೇಗೆ ನಿರ್ವಹಿಸಿ ಅದನ್ನು ಯೋಗವಾಗಿ ಮಾಡಿ ಸುಖಶಾಂತಿಗಳನ್ನು ತನ್ಮೂಲಕ ಅನುಭವಿಸುತ್ತಾ ಭಗವಂತನ ಸಾಕ್ಷಾತ್ಕಾರವನ್ನು ಮಾಡಬಹುದು ಎಂಬುದನ್ನು ತೋರಿಸಿ ಕೊಡುತ್ತದೆ. ತ್ಯಾಗದ ಬೋಧನೆಯಿಂದ ಜೀವನವನ್ನು ಒಂದು ಸರ್ವಹಿತಕಾರಿಯಾದ ಯಜ್ಞದಂತೆ ಮಾಡಲು ಕರ್ಮಯೋಗವು ದಾರಿತೋರಿಸುತ್ತದೆ. ತನ್ನಲ್ಲಿರುವ ಹಣ, ಬುದ್ಧಿ, ಶಕ್ತಿ, ಪ್ರೀತಿ, ಇತರ ಯಾವ ಉಪಯುಕ್ತ ವಸ್ತುವಿಚಾರಗಳನ್ನೂ ಇತರರ ಹಿತಕ್ಕಾಗಿ ತ್ಯಾಗದಿಂದ, ಅರ್ಪಣಬುದ್ಧಿಯಿಂದ ನೀಡಲು ಕರ್ಮಯೋಗವು ಹೇಳಿ ಅದನ್ನು 'ಯಜ್ಞ' ಎಂದು ಕರೆದಿರುತ್ತದೆ. ಯಾವಾಗ 'ಯಜ್ಞ' ಎಂಬ ದೃಷ್ಟಿಯಿಂದ ಕರ್ಮವನ್ನು ಮಾಡುತ್ತೇವೋ ಆಗ ಕರ್ಮಗಳು ನಮ್ಮನ್ನು ಬಂಧನಕ್ಕೆ ಒಳಪಡಿಸುವುದಿಲ್ಲ. ಹೀಗೆ ಕರ್ಮಯೋಗವು ಮನುಷ್ಯನು ತನ್ನ ನಿತ್ಯಜೀವನದ ಕರ್ಮದ ಮೂಲಕ ಭಗವಂತನನ್ನು ಸೇರಲು ಸರಿಯಾದ ವಿಧಿವಿಧಾನಗಳನ್ನು ಒಳಗೊಂಡಿರುವ ಸಾಧನಾಮಾರ್ಗವಾಗಿದ್ದು ಜೀವಿಯ ಬಂಧಮುಕ್ತಿ ಮತ್ತು ಶಾಶ್ವತಸುಖಪ್ರಾಪ್ತಿಯೇ ಅದರ ಗುರಿಯಾಗಿರುತ್ತದೆ.

ಕರ್ಮಯೋಗದ ಕುರಿತಾಗಿ ಶ್ರೀಮದ್ ಭಗವದ್ಗೀತೆ ಸುಪ್ರಸಿದ್ಧವಾದ ಪ್ರಮಾಣ ಗ್ರಂಥವಾಗಿದೆ ಎಂದು ಈಗಾಗಲೇ ಹೇಳಿಯಾಗಿರುತ್ತದೆ. ಗೀತಾಗ್ರಂಥದಿಂದ ಕರ್ಮಯೋಗದ ವಿಚಾರದ ಕೆಲವು ಆಧಾರಶ್ಲೋಕಗಳನ್ನು ವಿಷಯದ ಸ್ಪಷ್ಟೀಕರಣಕ್ಕಾಗಿ ಇಲ್ಲಿ ಉದಾಹರಿಸಲಾಗಿದೆ :

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾ ಚ ನ ।**
**ಮಾ ಕರ್ಮಫಲಹೇತುರ್ಭೂರ್ಮಾ ತೇ ಸಂಗೋಽಸ್ತ್ವಕರ್ಮಣಿ ॥**

—ಅಧ್ಯಾಯ ೨, ಶ್ಲೋಕ ೪೭

"ಕರ್ಮ ಮಾಡುವುದಕ್ಕೆ ಮಾತ್ರ ನಿನಗೆ ಅಧಿಕಾರ, ಅದರಿಂದ ಹುಟ್ಟುವ ಫಲಗಳ ಅಧಿಕಾರ ನಿನಗೆಂದಿಗೂ ಇಲ್ಲ. ಆದ್ದರಿಂದ ಕರ್ಮಫಲಕ್ಕಾಗಿ ಎಂದಿಗೂ ಕೆಲಸ ಮಾಡಬೇಡ. ಕರ್ಮಗಳನ್ನು ಮಾಡದೆ ಉಳಿಯಲೂ ಬೇಡ."

**ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।**
**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ॥**

—ಅಧ್ಯಾಯ ೨, ಶ್ಲೋಕ ೪೮

"ಎಲ್ಲಾ ಆಸಕ್ತಿಯನ್ನೂ ತ್ಯಜಿಸಿ ಯೋಗಸ್ಥನಾಗಿ ಎಂದರೆ ಕರ್ಮಗಳ ಸಫಲತೆ-

ಅಸಫಲತೆಗಳಲ್ಲಿ ಸಮಭಾವ ಉಳ್ಳವನಾಗಿ ಕರ್ಮವನ್ನು ಮಾಡು. ಸಮತ್ವವೇ ಯೋಗ ಎನಿಸುವುದು."

**ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ ।**
**ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ॥**

—ಅಧ್ಯಾಯ ೩, ಶ್ಲೋಕ ೧೯

"ಆದುದರಿಂದ ನೀನು ಮಾಡಬೇಕಾದ ಕೆಲಸವನ್ನು ಸಂಗರಹಿತನಾಗಿ (ಎಂದರೆ ಫಲದ ಆಸಕ್ತಿ ಇಲ್ಲದೆ) ಯಾವಾಗಲೂ ಮಾಡುತ್ತಿರು. ನಿಸ್ಸಂಗನಾಗಿ ಇದ್ದುಕೊಂಡು ಕರ್ಮ ಮಾಡುವ ಮನುಷ್ಯನು ಮೋಕ್ಷವನ್ನು ಹೊಂದುತ್ತಾನೆ."

**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ॥**

—ಅಧ್ಯಾಯ ೩, ಶ್ಲೋಕ ೨೭

"ಎಲ್ಲ ಕರ್ಮಗಳೂ ಪ್ರಕೃತಿಯ ಗುಣಗಳ ಮೂಲಕ ನಡೆಯುತ್ತವೆ. ಅಹಂಕಾರದಿಂದ ಮೂಢನಾಗಿ ಮನುಷ್ಯನು ಕರ್ಮಗಳ ವಿಚಾರದಲ್ಲಿ ನಾನೇ ಕರ್ತೃ (ಮಾಡುವವನು) ಎಂದು ತಿಳಿಯುತ್ತಾನೆ."

**ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಽಧ್ಯಾತ್ಮಚೇತಸಾ ।**
**ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥**

—ಅಧ್ಯಾಯ ೩, ಶ್ಲೋಕ ೩೦

"ಅಧ್ಯಾತ್ಮಚಿತ್ತದ ಮೂಲಕ ಎಲ್ಲಾ ಕರ್ಮಗಳನ್ನೂ ನನ್ನಲ್ಲಿ (ಭಗವಂತನಲ್ಲಿ) ಅರ್ಪಿಸಿ ಆಸಕ್ತಿ-ಮಹತ್ವಗಳನ್ನು ಬಿಟ್ಟು ರಾಗರಹಿತನಾಗಿ (ತಾಪಗಳಿಲ್ಲದವನಾಗಿ) ನೀನು ಯುದ್ಧವನ್ನು ಮಾಡು."

**ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ ।**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥**

—ಅಧ್ಯಾಯ ೫, ಶ್ಲೋಕ ೧೦

"ಯಾವನು ಭಗವಂತನಲ್ಲಿ (ಬ್ರಹ್ಮನಲ್ಲಿ) ಕರ್ಮಗಳನ್ನು ಸಮರ್ಪಿಸಿ ಫಲದಲ್ಲಿ ಆಸಕ್ತಿಯನ್ನು ಬಿಟ್ಟು ಕರ್ಮವನ್ನು ಮಾಡುತ್ತಾನೆಯೋ ಅವನು ನೀರಿನಲ್ಲಿರುವ ತಾವರೆ ಎಲೆಯಂತೆ ನೀರಿನಿಂದ ಲಿಪ್ತವಾಗದ ರೀತಿಯಲ್ಲಿ ಪಾಪಗಳಿಂದ ಲಿಪ್ತನಾಗುವುದಿಲ್ಲ."

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ ತಪಸ್ಯಸಿ ಕೌಂತೇಯ ತತ್ ಕುರುಷ್ವ ಮದರ್ಪಣಮ್ ॥**

—ಅಧ್ಯಾಯ ೯, ಶ್ಲೋಕ ೨೭

"ನೀನು ಏನನ್ನು ಮಾಡುತ್ತೀಯೋ, ಏನನ್ನು ತಿನ್ನುತ್ತೀಯೋ, ಯಾವುದನ್ನು ಹೋಮದಲ್ಲಿ ಅರ್ಪಿಸುತ್ತೀಯೋ, ಯಾವುದನ್ನು ದಾನವಾಗಿ ನೀಡುತ್ತೀಯೋ, ಯಾವ ತಪಸ್ಸನ್ನು ಮಾಡುತ್ತೀಯೋ, ಅವುಗಳೆಲ್ಲವನ್ನೂ ನನಗೆ (ಭಗವಂತನಿಗೆ) ಸಮರ್ಪಿಸು,"

ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ ।
ಸನ್ನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ॥

—ಅಧ್ಯಾಯ ೯, ಶ್ಲೋಕ ೨೮

"ಹೀಗೆ ಶುಭಾಶುಭಫಲಗಳುಳ್ಳ ಕರ್ಮಗಳ ಬಂಧನದಿಂದ ನೀನು ಬಿಡುಗಡೆಯನ್ನು ಹೊಂದುವೆ. ಸಂನ್ಯಾಸ ಮತ್ತು ಯೋಗ ಇವುಗಳಿಂದ ಕೂಡಿದ ಅಂತಃಕರಣವುಳ್ಳವನಾಗಿ ಮುಕ್ತನಾಗಿ ನನ್ನನ್ನು ಸೇರುವೆ."

ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।
ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥

"ದೇಹಧಾರಿಯಾದವನಿಂದ (ಮನುಷ್ಯನಿಂದ) ಕರ್ಮಗಳನ್ನು ಸಂಪೂರ್ಣವಾಗಿ ತ್ಯಾಗ ಮಾಡುವುದಕ್ಕೆ ಆಗುವುದಿಲ್ಲ. ಯಾವನು ಕರ್ಮಫಲತ್ಯಾಗಿಯೋ ಅವನೇ ತ್ಯಾಗಿಯೆಂದು ಹೇಳಲ್ಪಡುವನು."

ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಮ್ ।
ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್ ॥

—ಅಧ್ಯಾಯ ೧೮, ಶ್ಲೋಕ ೧೧ ೧೨

"ತ್ಯಾಗಮಾಡದವನಿಗೆ ಸಮಯಾನುಸಾರ ಅಶುಭ, ಶುಭ, ಶುಭಾಶುಭ ಎಂಬ ಮೂರು ವಿಧದ ಕರ್ಮಫಲವು ಲಭಿಸುತ್ತದೆ. ಆದರೆ ತ್ಯಾಗಿಗೆ (ಸಂನ್ಯಾಸಿಗೆ) ಆ ಫಲವು ಎಂದಿಗೂ ಇರುವುದಿಲ್ಲ."

ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥

"ಯಾವನ ದೆಸೆಯಿಂದ ಪ್ರಾಣಿಗಳ ಪ್ರವೃತ್ತಿವ್ಯಾಪಾರಗಳು ಉಂಟಾಗುವುವೋ ಯಾವನಿಂದ ಈ ಜಗತ್ತೆಲ್ಲವೂ ವ್ಯಾಪ್ತವಾಗಿರುವುದೋ ಅದನ್ನು ಸ್ವಕರ್ಮದಿಂದ (ತನ್ನ ಸ್ವಂತ ಕರ್ಮದಿಂದ) ಆರಾಧಿಸುತ್ತಾ ಮನುಷ್ಯನು ಮೋಕ್ಷವನ್ನು ಪಡೆಯುತ್ತಾನೆ."

ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।
ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥

"ಚೆನ್ನಾಗಿ ಅನುಷ್ಠಾನಮಾಡಿದ ಪರಧರ್ಮಕ್ಕಿಂತಲೂ ಗುಣವಿಲ್ಲದ ಸ್ವಧರ್ಮವೇ ಶ್ರೇಯಸ್ಕರವಾದುದು. (ಚೆನ್ನಾಗಿ ಆಚರಿಸಿದರೂ ಕೂಡ ಇತರರ ಕರ್ತವ್ಯಕ್ಕಿಂತ ಗುಣ ವಿಲ್ಲದ ತನ್ನ ಸ್ವಂತ ಕರ್ತವ್ಯದ ಪಾಲನೆಯೇ ಶ್ರೇಯಸ್ಕರವಾದುದು.) ತನ್ನ ಸ್ವಭಾವಕ್ಕೆ ಅನುಗುಣವಾದ ಕರ್ಮವನ್ನು ಮಾಡುವವನಿಗೆ ಪಾಪವು ಅಂಟದು."

ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ ।
ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥

—ಅಧ್ಯಾಯ ೧೮, ಶ್ಲೋಕ ೪೬-೪೮

"ಸಹಜವಾಗಿ ತನಗೆ ಪ್ರಾಪ್ತವಾದ ಎಂದರೆ ತಾನು ಜೀವನದಲ್ಲಿ ಪಡೆದಿರುವ ಸಹಜ ವಾದ ಕರ್ಮವನ್ನು ದೋಷವುಳ್ಳದ್ದಾದರೂ ಮಾಡದೇ ಬಿಡಕೂಡದು. ಏಕೆಂದರೆ

ಅಗ್ನಿಯೊಂದಿಗೆ ಹೊಗೆ ಇರುವಂತೆಯೇ ಸಕಲ ಕರ್ಮಗಳೊಂದಿಗೆ ಅದರ ದೋಷವೂ ಇದ್ದೇ ಇರುತ್ತದೆ."

**ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ ।**
**ಕುರ್ಯಾದ್ವಿದ್ವಾಂಸ್ತಥಾಸಕ್ತಶ್ಚಿಕೀರ್ಷುರ್ಲೋಕಸಂಗ್ರಹಮ್ ॥**

—ಅಧ್ಯಾಯ ೩, ಶ್ಲೋಕ ೨೫

"ಅಜ್ಞಾನಿಗಳು ಆಸಕ್ತರಾಗಿ (ಕರ್ಮಫಲಾಸಕ್ತರು) ಕೆಲಸಮಾಡುವಂತೆ ಜ್ಞಾನಿಯು (ಕರ್ಮಯೋಗಿಯು) ಆಸಕ್ತಿ ಇಲ್ಲದೆ ಕೇವಲ ಲೋಕಕಲ್ಯಾಣದ ಇಚ್ಛೆಯಿಂದ ಕೆಲಸ ಮಾಡಬೇಕು."

### ಭಕ್ತಿಯೋಗ

ಭಗವಂತನು ಪ್ರೇಮಾನಂದಮಯನಾಗಿರುತ್ತಾನೆ. ಭಕ್ತಿ ಎಂದರೆ ಪ್ರೀತಿ, ಸೇವೆ ಎಂದು ಅರ್ಥ. ಭಗವಂತನನ್ನು ಪ್ರೀತಿಸುತ್ತಾ ಪ್ರೀತಿಯಿಂದ ಜೀವನದ ಸಕಲ ಕೆಲಸ ಕಾರ್ಯಗಳನ್ನು ದೇವರ ಸೇವೆ ಎಂದು ನಡೆಸಿ ಕೊನೆಗೆ ಪ್ರೀತಿಯ ಮೂಲಕವೇ ಭಗವಂತನನ್ನು ಸೇರಲು ಇರುವ ಸಾಧನಾಮಾರ್ಗವೇ ಭಕ್ತಿಯೋಗ.

ಪ್ರೀತಿಯೆನ್ನುವುದು ಭಗವಂತನ ದಿವ್ಯವಾದ ಮತ್ತು ಮಹತ್ಪೂರ್ಣವಾದ ಶಕ್ತಿಯಾಗಿದ್ದು ಜಗತ್ತಿನಲ್ಲಿ ವಿವಿಧ ರೂಪಗಳಲ್ಲಿ ಜನಜೀವನದಲ್ಲಿ ಕ್ರಿಯಾಶಕ್ತಿಯಾಗಿ ಪ್ರಕಟಗೊಂಡಿರುತ್ತದೆ. ಅನುಸಾರವಾಗಿ ತಾಯಿ, ಬಳಗ, ಪತಿ-ಪತ್ನಿ, ಸ್ನೇಹಿತ, ದೇಶ, ನಾಡು-ನುಡಿ ಎಂದು ಹೀಗೆ ವಿವಿಧ ತರಹದಲ್ಲಿ ನಾವು ಪರಸ್ಪರ ಪ್ರೀತಿಸುತ್ತೇವೆ. ಪ್ರೀತಿಯನ್ನು ಜೀವನದಲ್ಲಿ ಬಳಸುತ್ತೇವೆ. ಆದರೆ ಈ ಪ್ರೀತಿಯಿಂದಾಗಿ ಹಲವು ರೀತಿಯ ದುಃಖ-ತೊಂದರೆಗಳಿಗೆ ನಾವು ತುತ್ತಾಗುವುದೂ ಇದೆ. ಇವೆಲ್ಲ ಅಲ್ಪವಾದ, ಅಶಾಶ್ವತವಾದ ವಸ್ತುವಿಶೇಷಗಳಾದುದರಿಂದ ಅವುಗಳಿಂದ ನಮಗೆ ಶಾಶ್ವತವಾದ ಸುಖವು ದೊರೆಯದು. ಯಾವುದು ಶಾಶ್ವತವೋ ಅದನ್ನು ಪ್ರೀತಿಸಿದಾಗ ಅದರಿಂದ ಮಾತ್ರ ನಮಗೆ ಶಾಶ್ವತವಾದ ಸುಖವು ಲಭ್ಯವಾಗಬಹುದು. ಶಾಶ್ವತವಾದುದೊಂದೇ—ಅದು ಪರವಸ್ತು, ಅದೇ ಪರಮಾತ್ಮ. ಅದನ್ನೇ ಭಗವಂತ, ದೇವರು ಎಂದು ವಿವಿಧ ಹೆಸರುಗಳಿಂದ ನಾವು ಸಂಬೋಧಿಸುತ್ತೇವೆ. ಹಾಗಾಗಿ ಶಾಶ್ವತನಾದ ಭಗವಂತನನ್ನು ಪ್ರೀತಿಸಿದಾಗ ಮಾತ್ರ ಶಾಶ್ವತವಾದ ಸುಖ ದೊರೆತೀತು ; ಜೀವನದ ಕಷ್ಟನಷ್ಟ ಬಂಧನಗಳಿಂದ ಮುಕ್ತಿ ದೊರೆತೀತು. ದೇವರನ್ನು ಪ್ರೀತಿಸಬೇಕಾದರೆ ಲೋಕದ ಜೀವನ ಸಂಬಂಧದ ಇತರ ವಸ್ತುಗಳನ್ನು, ವ್ಯಕ್ತಿಗಳನ್ನು ಕೈಬಿಡಬೇಕಾಗಿಲ್ಲ. ಆದರೆ ಅವುಗಳೆಲ್ಲಾ ದೇವರನ್ನು ಮರೆಯಲು ಕಾರಣವಾಗದೆ ದೇವರಲ್ಲಿ ಪ್ರೀತಿಯನ್ನು ಬೆಳೆಸಲು ಸಹಾಯವಾಗಬೇಕು: ಹೀಗೆ ಲೋಕದ ಪ್ರೀತಿಯನ್ನು ಭಗವಂತನ ಎಡೆಗೆ ತಿರುಗಿಸಿ ಅಥವಾ ಭಗವನ್ಮಯವಾಗಿಸಿ ಜೀವನದ ಸಕಲಕಾರ್ಯಗಳನ್ನು ಮಾಡುತ್ತಾ, ಭಗವಂತನನ್ನು ಎಲ್ಲದರ ಹಿನ್ನೆಲೆಯಲ್ಲಿ ಕಾಣುತ್ತಾ, ಭಗವಂತನ ಪ್ರೀತಿಯಲ್ಲಿ ಸರ್ವಸುಖವನ್ನು ಕಾಣುವುದು ಮತ್ತು ತನ್ಮೂಲಕ ಭಗವದಾನಂದವನ್ನು ಅನುಭವಿಸುತ್ತಾ ಭಗವಂತನನ್ನು ಸೇರುವುದೇ "ಭಕ್ತಿಯೋಗ"ವಾಗಿರುತ್ತದೆ.

ಮನುಷ್ಯಜೀವನದಲ್ಲಿ, ಏಕೆ—ಲೋಕದ ವಿಶಿಷ್ಟಜೀವನದಲ್ಲಿಯೇ ಪ್ರೀತಿಯು ಕ್ರಿಯಾ ಶಕ್ತಿಯಾಗಿ ಪ್ರಕಟಗೊಂಡು, ಪರಿಣಾಮವಾಗಿ ಸಾಹಿತ್ಯ, ಕಲೆ, ಸಂಗೀತ, ಸಂತಾನೋತ್ಪತ್ತಿ, ಸಂಸಾರನಿರ್ವಹಣೆ ಇತ್ಯಾದಿಗಳು ನೆರವೇರುತ್ತವೆ. ಇವೆಲ್ಲವೂ ಪ್ರೀತಿಯ ಆಧಾರದಲ್ಲಿ ನೆರವೇರುತ್ತಿದ್ದು ಪ್ರೀತಿಯು ಲೋಕದಲ್ಲಿ ಈ ರೀತಿ ಅಭಿವ್ಯಕ್ತವಾಗುತ್ತಿದೆ. ಅದೇ ಪ್ರೀತಿಯು ಅಧ್ಯಾತ್ಮವಾದ ದೃಷ್ಟಿಯಿಂದ ಭಗವಂತನ ಎಡೆಗೆ ಪ್ರಯೋಗದಲ್ಲಿ ವ್ಯಕ್ತ ಗೊಂಡಾಗ ಭಕ್ತಿಯಾಗಿ ಜೀವಾತ್ಮನನ್ನು ಅವನೆಡೆಗೆ ಕರೆದೊಯ್ಯುತ್ತದೆ.

"ಭಗವಂತನ ಮೇಲೆ ಪರಮಪ್ರೇಮವೇ ಭಕ್ತಿ", "ಪರಮಪ್ರೇಮರೂಪವಾದುದೇ ಭಕ್ತಿ", "ಈಶ್ವರನಲ್ಲಿ ಪರಮ ಅನುರಾಗವೇ ಭಕ್ತಿ" ಎಂದು ಭಕ್ತಿಯ ಬಗ್ಗೆ ಭಕ್ತಿಶಾಸ್ತ್ರ ಗಳಲ್ಲಿ ವಿವರಣೆ ಇದೆ.

ಈ ರೀತಿಯಲ್ಲಿ ಭಕ್ತಿಯೋಗವು ಪ್ರೀತಿಯಿಂದಲೇ ಆರಂಭವಾಗಿ, ಪ್ರೀತಿಯಿಂದಲೇ ಮುನ್ನಡೆದು, ಪ್ರೀತಿಯಲ್ಲಿಯೇ ಪರಿಪೂರ್ಣತೆಯನ್ನು ಪಡೆಯಲು ಜೀವಾತ್ಮನಿಗೆ ನೆರ ವಾಗುವ ಯೋಗಸಾಧನವಾಗಿದೆ. ಮನುಷ್ಯನ ಲೌಕಿಕವಾದ ಯಾವ ಸ್ಥಿತಿಗತಿಗಳನ್ನಾಗಲಿ ಸ್ವಭಾವಧರ್ಮಗಳನ್ನಾಗಲಿ ತ್ಯಜಿಸಬೇಕೆಂದು ಹೇಳದೆ ಅವುಗಳನ್ನು ಪರಿಶುದ್ಧವೂ ಉಪ ಯುಕ್ತವೂ ಆಗುವಂತೆ ಮಾಡಿ ಅವೆಲ್ಲವನ್ನೂ ಉಪಯೋಗಿಸಿಕೊಂಡು ಭಗವಂತನನ್ನು ಸೇರಲು ಸಾಧ್ಯವಾಗುವಂತೆ ಹಾದಿ ತೋರಿಸುವ ಭಕ್ತಿಯೋಗವು ಸಾಧನೆಗೆ ಸುಲಭ, ಸುಗಮ ಹಾಗೂ ಸರಳವಾದ ಯೋಗಮಾರ್ಗ ಎಂದು ಪ್ರಸಿದ್ಧವಾಗಿರುತ್ತದೆ.

ಭಕ್ತಿಯೋಗದ ತತ್ತ್ವಸೂತ್ರ ವಿಚಾರಗಳಿಗೆ ಮುಖ್ಯವಾಗಿ ನಾರದಭಕ್ತಿಸೂತ್ರ, ಶಾಂಡಿಲ್ಯಭಕ್ತಿಸೂತ್ರಗಳೆಂಬ ಸೂತ್ರಗ್ರಂಥಗಳೂ ಮತ್ತು ಶ್ರೀಮದ್ ಭಗವದ್ಗೀತೆಯೂ ಆಧಾರಗ್ರಂಥಗಳಾಗಿವೆ. ಮಾತ್ರವಲ್ಲದೆ, ಶ್ರೀಶಂಕರ, ಶ್ರೀರಾಮಾನುಜ, ಶ್ರೀಮಧ್ವಾ ಚಾರ್ಯ ಮೊದಲಾದ ಅನೇಕ ಮತಾಚಾರ್ಯರುಗಳೂ ಭಕ್ತಿಯೋಗದ ವಿಚಾರವಾಗಿ ವಿಶೇಷವಾದ ಬೋಧನೆಗಳನ್ನು ನೀಡಿರುತ್ತಾರೆ. ಇವುಗಳೂ ಭಕ್ತಿಯೋಗದ ಕುರಿತಾದ ವಿವರಣೆಯ ಬಗ್ಗೆ ಆಧಾರಗಳಾಗಿವೆ. ಅವುಗಳಂತೆಯೇ ಕೆಲವು ಪುರಾಣಗ್ರಂಥಗಳೂ, ಮುಖ್ಯವಾಗಿ ಶ್ರೀಮದ್ ಭಾಗವತಪುರಾಣವು ಭಕ್ತಿಯೋಗದ ಬಗೆಗೆ ಆಧಾರಗ್ರಂಥ ವಾಗಿರುತ್ತದೆ. ಯಾವುದೇ ಯೋಗಸಾಧನೆಗಳನ್ನು ಮಾಡಲು ಸಾಧಕನಲ್ಲಿ ಇರಬೇಕಾದ ಪ್ರಥಮ ಯೋಗ್ಯತೆಯೇ ಚಿತ್ತಶುದ್ಧಿ. ಇದನ್ನು ಸಾಧಿಸಲು ಒಂದೊಂದು ಯೋಗ ಮಾರ್ಗವೂ ಒಂದೊಂದು ರೀತಿಯ ವಿಧಿವಿಧಾನಗಳನ್ನು ನಿರ್ದೇಶಿಸಿರುತ್ತದೆ. ಮಾತ್ರ ವಲ್ಲದೆ ಪ್ರತಿಯೊಂದು ಯೋಗಮಾರ್ಗದಲ್ಲೂ ಸಾಧಕನು ಅನುಷ್ಠಾನಪರನಾಗಿ ಸಾಗಲು ನಿಶ್ಚಿತವಾದ ಸಾಧನಾಸೋಪಾನಗಳೂ ಇರುತ್ತವೆ. ಅವೆಲ್ಲವೂ ಭಕ್ತಿಯೋಗದ ಶಾಸ್ತ್ರ ಗ್ರಂಥಗಳಲ್ಲಿ ನಿರೂಪಿಸಲ್ಪಟ್ಟಿವೆ.

ಭಕ್ತಿಯೋಗದ ಸಾಧಕನು ಪ್ರಥಮತಃ ತನ್ನಲ್ಲಿ ರೂಢಿಸಿಕೊಳ್ಳಬೇಕಾದ ಗುಣಗಳು, ಯೋಗ್ಯತಾವಿಶೇಷಗಳು ಒಟ್ಟು ಏಳು ಅಂಶಗಳಿಂದ ಕೂಡಿವೆ :

(೧) ವಿವೇಕ, (೨) ವಿಮೋಕ, (೩) ಅಭ್ಯಾಸ, (೪) ಕ್ರಿಯೆ, (೫) ಕಲ್ಯಾಣ, (೬) ಅನವಸಾದ, (೭) ಅನುದ್ಧರ್ಷ.

ವಿವೇಕ: ವಿವೇಕ ಎಂದರೆ ಉತ್ತಮವಾದುದು ಯಾವುದು, ಅನುತ್ತಮವಾದುದು ಯಾವುದು, ಹಿತವಾದುದು ಶುದ್ಧವಾದುದು ಯಾವುದು, ಅಹಿತವೂ ಅಶುದ್ಧವೂ ಆದುದು ಯಾವುದು—ಎಂಬುದರ ವಿವೇಚನೆಯಾಗಿದೆ. ಮಾತ್ರವಲ್ಲದೆ ಅವುಗಳನ್ನು ಜೀವನದಲ್ಲಿ ಕಾರ್ಯತಃ ಅನುಸರಿಸುವುದಾಗಿದೆ. ಮನುಷ್ಯನು ಶರೀರದ ಐದು ಇಂದ್ರಿಯಗಳ ಮೂಲಕ ಪ್ರಪಂಚದಿಂದ ವಿಷಯಗಳನ್ನು ಸ್ವೀಕರಿಸುತ್ತಾನೆ. ಇದರಲ್ಲಿ ಆಹಾರ-ವಿಚಾರಗಳೆಲ್ಲವೂ ಸೇರಿವೆ. ಈ ಆಹಾರ ವಿಚಾರಗಳೆಲ್ಲವೂ ವ್ಯಕ್ತಿಯ ಮನಸ್ಸು ನಡವಳಿಕೆ ಜೀವನಗಳನ್ನು ರೂಪಿಸುತ್ತವೆ. ಭಕ್ತಿಯೋಗದ ಸಾಧಕನು ಮೊತ್ತಮೊದಲಿಗೆ ಈ ಆಹಾರ-ವಿಚಾರಗಳ ಆಯ್ಕೆ-ಸ್ವೀಕರಣೆಗಳಲ್ಲಿ ಅತ್ಯಂತ ಜಾಗ್ರತೆ-ವಿವೇಚನೆಗಳನ್ನು ಅನುಸರಿಸಬೇಕು. ಅದನ್ನೇ ವಿವೇಕ ಎಂದು ಕರೆಯಲಾಗಿದೆ.

ಮನುಷ್ಯನು ಸ್ವೀಕರಿಸುವ ಆಹಾರವು ಸಾಮಾನ್ಯವಾಗಿ ಮೂರು ತರಹದ ದೋಷ ಗಳಿಗೆ ಒಳಗಾಗುತ್ತದೆ: (೧) ಆಶ್ರಯದೋಷ. (೨) ನಿಮಿತ್ತದೋಷ, (೩) ಸ್ವರೂಪ ದೋಷ. ಆಹಾರವನ್ನು ಯಾರಿಂದ ಪಡೆಯುವೆವೋ ಅವರು 'ಆಶ್ರಯ'. ಆಹಾರ ನೀಡುವವರು ಶುದ್ಧರೂ ಯೋಗ್ಯರೂ ಆಗಿರಬೇಕು. ಎಂದರೆ ಆಹಾರದ ಸಂಪಾದನೆ ಶುದ್ಧವಾದ ರೀತಿಯಲ್ಲಿ ನಡೆದಿರಬೇಕು ಎಂಬುದು ತಾತ್ಪರ್ಯ.

ಆಹಾರವು ಯಾರ ಕೈಯಲ್ಲಿ ಸೇರಿ ಯಾರ ಮೂಲಕ ಬರುವುದೋ ಅದೇ 'ನಿಮಿತ್ತ'. ಅಶುದ್ಧರ, ಅಯೋಗ್ಯರ ಕೈಯಿಂದ ಆಹಾರ ಸ್ವೀಕರಿಸಿದರೆ ಅದು ಅಶುಚಿಯಾಗುತ್ತದೆ.

ಆಹಾರದ ಸ್ವರೂಪ ಎಂದರೆ ಅದರ ಗುಣಧರ್ಮಗಳು. ಮನಸ್ಸನ್ನು ಉದ್ರೇಕ ಗೊಳಿಸುವ ಅಥವಾ ತಾಮಸಿಕವಾದ (ಮನಸ್ಸನ್ನು ಹೀನಸ್ಥಿತಿಗೆ ಇಳಿಸುವ) ಆಹಾರ ವನ್ನು ಎಂದಿಗೂ ಸ್ವೀಕರಿಸಬಾರದು. ಹಾಗೆ ಹೀನಸ್ವರೂಪದ ಆಹಾರವು ಸ್ವರೂಪದೋಷ ದಿಂದ ಕೂಡಿರುತ್ತದೆ.

ಊಟೋಪಚಾರ ಮೂಲಕವಾಗಿ ಹೀಗೆ (ಅನ್ನಮಯಕೋಶಕ್ಕೆ) ಸೇವಿಸುವ ಆಹಾರವು ಶುದ್ಧವಾದರೆ ಮಾತ್ರ ಸಾಲದು. ಮನಸ್ಸಿಗೆ ಇಂದ್ರಿಯಗಳ ಮೂಲಕ ಪಡೆಯುವ ವಿಚಾರ ಪಠಣ ಮನನ ಶ್ರವಣಗಳೆಲ್ಲವೂ, ಉತ್ತಮ ಉದಾತ್ತ ಹಾಗೂ ಉತ್ಸಾಹಯುತವೂ, ಸಾಧಕನಿಗೆ ಉಪಯುಕ್ತವೂ ಆಗಿರಬೇಕು.

ವಿಮೋಕ: 'ವಿಮೋಕ' ಎಂದರೆ ಇಂದ್ರಿಯನಿಗ್ರಹ ಎಂದು ತಾತ್ಪರ್ಯ. ಲೌಕಿಕ ಸುಖದ ಆಸೆಯನ್ನು ಹತೋಟಿಯಲ್ಲಿಡಬೇಕಾಗಿರುವುದು 'ವಿಮೋಕ'ದ ಮುಖ್ಯಾಂಶ ವಾಗಿರುತ್ತದೆ. ಅನಿತ್ಯವಾದ ಪ್ರಾಪಂಚಿಕ ಸುಖಭೋಗಗಳ ಆಸೆಯನ್ನು ಹತೋಟಿ ಯಲ್ಲಿಡದಿದ್ದರೆ ದೇವರ ಸಾಕ್ಷಾತ್ಕಾರದ ಸುಖಕ್ಕಿಂತ ಲೋಕದ ಸಂಸಾರಸುಖವೇ ಮೇಲೆಂದು ಆಗುತ್ತದೆ. ಪ್ರಾಪಂಚಿಕ ಸುಖ ಮೇಲೆಂದು ತಿಳಿದಿರುವ ಸಾಧಕನಿಗೆ ದೇವರ ಮೇಲೆ ಪ್ರೀತಿ ಉಂಟಾಗುವುದಿಲ್ಲ, ದೇವರು ಬೇಕೆಂದಾಗುವುದಿಲ್ಲ. ಹಾಗಾಗಿ ಇಹಲೋಕದ ಸುಖವು ಭಗವಂತನ ಸಾಕ್ಷಾತ್ಕಾರಸುಖದ ಒಂದು ಅಣುಸ್ವರೂಪ ಎನ್ನುತ್ತಾ ಈ ಸುಖ ವನ್ನು ಬಯಸದೆ ಭಗವಂತನ ಸುಖಕ್ಕಾಗಿ ಹಾತೊರೆಯುವ ಮನೋವೃತ್ತಿ ಬೆಳೆಸಬೇಕು. ಇದಕ್ಕೆ ಲೌಕಿಕ ಸುಖಗಳನ್ನು ಸಾಧನ ಎಂದು ಪರಿಗಣಿಸಬೇಕೇ ವಿನಾ ಅವನ್ನು ಸುಖದ

ಪರಮಾವಧಿ ಎಂದು ತಿಳಿಯಬಾರದು. ಎಲ್ಲಿ ಲೌಕಿಕಸುಖದ ಕಾಮನೆ ಇದೆಯೋ ಅಲ್ಲಿ ಭಗವಂತನ ಮೇಲಿನ ಪ್ರೇಮ ಇರದು. ಎಲ್ಲಿ ಭಗವಂತನ ಮೇಲೆ ಪ್ರೇಮವಿಲ್ಲವೋ ಅಲ್ಲಿ ಭಗವಂತನು ಪ್ರಕಟಗೊಳ್ಳುವುದಿಲ್ಲ.

ಅಭ್ಯಾಸ: ಭಗವಂತನಲ್ಲಿ ನಿಶ್ಚಲವಾದ ಭಕ್ತಿ, ಅವನು ಬೇಕೆಂಬ ತೀವ್ರವಾದ ವ್ಯಾಕುಲತೆ ಮತ್ತು ಅದಕ್ಕಾಗಿ ಜೀವನದ ಎಲ್ಲಾ ಸಂದರ್ಭಗಳಲ್ಲೂ ಸತತವಾಗಿ ಪ್ರಯತ್ನ ವುಳ್ಳವನಾಗಿ, ಭಕ್ತಿ ಶ್ರದ್ಧೆ ವ್ಯಾಕುಲತೆಗಳನ್ನು ಕಾರ್ಯಾಚರಣೆಯಲ್ಲಿ ತರುವುದು 'ಅಭ್ಯಾಸ' ಎಂದೆನಿಸಿರುತ್ತದೆ. ಭಗವಂತನು ಜಗತ್ತಿನ ಒಡೆಯ, ಸೃಷ್ಟಿಸ್ಥಿತಿಸಂಹಾರಕರ್ತೃವಾಗಿ ದ್ದಾನೆ. ಅವನನ್ನು ಪಡೆಯಲು ಸಾಧ್ಯ. ಅವನು ದೊರೆತಾಗ ತನಗೆ ಅವರ್ಣನೀಯವಾದ ಆನಂದ ಲಭ್ಯವಾಗುತ್ತದೆ ಎಂಬ ನಿಶ್ಚಯವೇ ಶ್ರದ್ಧೆ. ಈ ರೀತಿಯ ಶ್ರದ್ಧೆಯು ಭಕ್ತಿಯ ಒಂದಂಶ. ಅಚಲವಾದ ಶ್ರದ್ಧೆಯಿಂದ ಭಗವಂತನಲ್ಲಿ ಪ್ರೀತಿ ಸಹಜವಾಗಿ ಉಂಟಾಗಿ ಅದೇ ಭಕ್ತಿಯಾಗಿ ಪರಿಣಮಿಸುತ್ತದೆ.

ಭಕ್ತಿಶ್ರದ್ಧೆಗಳಿಂದ ಕೂಡಿದವನಾಗಿ ಸಾಧಕನು ದಿನನಿತ್ಯವೂ ದೈನಂದಿನ ಜೀವನದ ಕೆಲಸಕಾರ್ಯಗಳನ್ನು ನಿರ್ವಹಿಸುತ್ತಾ, ಶ್ರದ್ಧೆಭಕ್ತಿಗಳನ್ನು ಅಭ್ಯಾಸದಿಂದ ಹೆಚ್ಚಿಸುತ್ತಾ. ದೃಢಗೊಳಿಸುತ್ತಾ ಬರಬೇಕು. ತನ್ನ ಜೀವನದ ಪರಮಗುರಿಯಾದ ಭಗವಂತ, ಅವನನ್ನು ಪಡೆಯಲು ತಾನು ಕೈಕೊಂಡ ಸಾಧನೆ—ಇವುಗಳ ನೆನವು ದೃಢವಾಗಿ ಸದಾ ಸಾಧಕನಲ್ಲಿ ಇರಬೇಕು. ಇವೆಲ್ಲಾ 'ಅಭ್ಯಾಸ' ಎಂದೆನಿಸಿರುತ್ತವೆ.

ಕ್ರಿಯೆ: ಭಗವಂತನ ಮೇಲಿನ ಅತೀವವಾದ ಪ್ರೀತಿ, ಭಗವಂತನೊಬ್ಬನೇ ತನ್ನ ಬಾಳಿನ ಗುರಿ ಎಂಬ ನಿಶ್ಚಲ ನಿರ್ಧಾರ, ಭಗವಂತನಲ್ಲದೆ ಬೇರೇನೂ ಬೇಕಿಲ್ಲ ಎಂಬ ತೀವ್ರವಾದ ವ್ಯಾಕುಲತೆ ಇವುಗಳು ಕಾರ್ಯಾಚರಣೆಯಲ್ಲಿ ಬರುವುದೇ ಕ್ರಿಯೆಯಾಗಿದೆ. ನಿಃಸ್ವಾರ್ಥತೆಯು ಕ್ರಿಯೆಯ ಮುಖ್ಯಾಂಶವಾಗಿದೆ. ನಾನು–ನನ್ನದು ಎನ್ನುವುದೇ ಸ್ವಾರ್ಥ. ಸ್ವಾರ್ಥ ಎಲ್ಲಿದೆಯೋ ಅಲ್ಲಿ ಪ್ರೀತಿ ಸಂಕುಚಿತವಾಗುತ್ತದೆ. ಪ್ರೀತಿ ಎಲ್ಲಿ ಸಾಕಷ್ಟು ಇಲ್ಲವೋ ಅಲ್ಲಿ ಪ್ರೀತಿಸ್ವರೂಪನಾದ ಭಗವಂತನ ಪ್ರಕಟಣೆ ಇರುವುದಿಲ್ಲ. ಸರ್ವಚರಾಚರವಸ್ತು ಗಳ ಹಿನ್ನೆಲೆಯಲ್ಲಿ ಭಗವಂತನಿದ್ದು ಅವನೇ ಸರ್ವಸ್ವನಾಗಿದ್ದಾನೆ ಎಂಬುದೇ ನಿಃಸ್ವಾರ್ಥ ದೃಷ್ಟಿ. ಭಗವಂತನು ಎಲ್ಲೆಲ್ಲೂ ಇದ್ದಾನೆ ಎಂಬ ದೃಷ್ಟಿಯಿಂದ ದಯೆ–ಪ್ರೀತಿಗಳಿಂದ ಕೂಡಿ ಇತರರಿಗೆ ಒಳಿತನ್ನು ಬಯಸಿ ಕೆಲಸಗಳನ್ನು ಮಾಡುತ್ತಾ ಬಾಳನ್ನು ಸಾಗಿಸುವುದೇ ಕ್ರಿಯೆ. ಅದೇ ನಿಃಸ್ವಾರ್ಥತೆ. ನಿಃಸ್ವಾರ್ಥದಿಂದ ಹೃದಯವಿಕಾಸವಾಗುತ್ತದೆ. ಹೃದಯದ ವಿಕಾಸವಾದಾಗ ಭಗವಂತ ಅಲ್ಲಿ ಪ್ರಕಟಗೊಳ್ಳುತ್ತಾನೆ. ಭಕ್ತಿಯೋಗದ ಸಾಧಕನು ದಿನನಿತ್ಯವೂ ಭಕ್ತರು, ಅತಿಥಿಗಳು ಪ್ರಾಣಿಗಳು, ಎಂಬಿತ್ಯಾದಿ ಇತರರಿಗೆ ತನ್ನಿಂದಾದ ರೀತಿ ಯಲ್ಲಿ, ದಯೆ ಅನುಕಂಪ ನೆರವುಗಳನ್ನು ನೀಡುತ್ತಾ ಪ್ರೀತಿಯನ್ನೇ ಪ್ರಾಯೋಗಿಕವಾಗಿ ಕೆಲಸಗಳ ಮೂಲಕ ಅನುಷ್ಠಾನಕ್ಕೆ ತರಬೇಕು.

ಕಲ್ಯಾಣ: ತ್ರಿಕರಣಪೂರ್ವಕವಾದ ಪರಿಶುದ್ಧತೆ ಮತ್ತು ಶಕ್ತಿಯೇ 'ಕಲ್ಯಾಣ' ಎಂದು ಎನಿಸಿರುತ್ತದೆ.

ತ್ರಿಕರಣಶುದ್ಧಿ ಎಂದರೆ :

(೧) ಶರೀರದ ಶುದ್ಧಿ ಮತ್ತು ಪವಿತ್ರತೆ.

(೨) ಮಾನಸಿಕವಾದ ಶುದ್ಧಿ : ಮಾಡುವ ಯೋಚನೆ ಭಾವನೆಗಳು ಪರಿಶುದ್ಧವೂ ಸತ್ಯಸಮ್ಮತವೂ ಆಗಿರಬೇಕು.

(೩) ವಾಚಿಕವಾದ ಶುದ್ಧಿ : ನುಡಿಯುವ ಮಾತುಗಳು ಪರಿಶುದ್ಧವೂ ಹಿತಪ್ರದವೂ ಆಗಿರಬೇಕು.

'ಕಲ್ಯಾಣ' ಎಂಬ ವಿಚಾರದಲ್ಲಿ ಸತ್ಯ, ಪ್ರಾಮಾಣಿಕತನ, ದಯೆ. ಅಹಿಂಸೆ, ದಾನ—ಇವುಗಳು ಸೇರಿದ್ದು ಭಕ್ತಿಯೋಗದ ಸಾಧಕನು ತನ್ನಲ್ಲಿ ಈ ಐದು ಗುಣಗಳನ್ನು ಬೆಳೆಸಿಕೊಳ್ಳಬೇಕು. ಮಾತ್ರವಲ್ಲದೆ ದೃಢಾರೋಗ್ಯವುಳ್ಳವನಾಗಿರಬೇಕು. ಸುದೃಢಶರೀರವಿಲ್ಲದಿದ್ದರೆ ಸಾಧನೆ ಸಾಗಲಾರದು. ಬಲಹೀನನಿಗೆ ಬದುಕಿನಲ್ಲಿ ಏನನ್ನೂ ಸಾಧಿಸಲು ಸಾಧ್ಯವಿಲ್ಲ ಎಂಬುದನ್ನು ಸಾಧಕನು ಸದಾ ನೆನಪಿನಲ್ಲಿಟ್ಟುಕೊಂಡು ಸುದೃಢಶರೀರವನ್ನು ಬೆಳೆಸಿಕೊಳ್ಳಬೇಕು.

ಅನವಸಾದ : ಮಂದಹಾಸದಿಂದ ಕೂಡಿರುವಿಕೆಯೇ ಅನವಸಾದ ಎಂಬುದರ ತಾತ್ಪರ್ಯವಾಗಿದೆ. ಭಕ್ತಿಯೋಗಿಯು ದುಃಖದಿಂದ ಅಥವಾ ಅಳುಮೋರೆಯಿಂದ ಇರಬಾರದು. ಭಗವಂತನು ಪ್ರೇಮಸ್ವರೂಪನು. ಪ್ರೇಮವಿದ್ದಲ್ಲಿ ದುಃಖಕ್ಕೆ, ಭಯಕ್ಕೆ, ದ್ವೇಷಕ್ಕೆ ಎಡೆಯಿಲ್ಲ. ಪ್ರೀತಿಯ ಮೂಲಕ ಭಗವಂತನನ್ನು ಸೇರಹೊರಟಿರುವ ಸಾಧಕನು ಸದಾ ಪ್ರೀತಿಯ ಭಾವನೆಯಿಂದ ಕೂಡಿದ್ದು ಮಂದಹಾಸಯುಕ್ತನಾಗಿರಬೇಕು. ಸದಾ ಸಂತೋಷಚಿತ್ತನಾಗಿರುವುದು ಚಿತ್ತಶುದ್ಧಿಯ ಕುರುಹು. ಶುದ್ಧಚಿತ್ತದಲ್ಲಿ ಭಗವಂತನ ಮೋಹಕ ದಿವ್ಯಮಂಗಳ ರೂಪದ ಪ್ರತಿಬಿಂಬವು ಕಾಣುವುದು. ಆದ್ದರಿಂದ ಭಕ್ತಿಯೋಗಿಯು ಸದಾ ಪ್ರಸನ್ನಚಿತ್ತನಾಗಿರಬೇಕು.

ಅನುದ್ಧರ್ಷ : ಸಂತೋಷದ ಅತಿರೇಕಸ್ಥಿತಿಯ ಅಭಾವವೇ ಅನುದ್ಧರ್ಷ. ಅತಿ ಆನಂದ, ಅತಿ ಸಂತೋಷ, ಅತಿ ನಗು ಎಂಬೀ ಸಂತೋಷದ ಅತಿರೇಕಗಳನ್ನು ಭಕ್ತನು ಹೊಂದಬಾರದು, ಅವುಗಳಿಂದ ಕೂಡಿರಬಾರದು. ಅತಿ ಸಂತೋಷಕ್ಕೆ ಅವಕಾಶವಿತ್ತರೆ ಆದರಿಂದ ಮನಸ್ಸಿನ ಚಂಚಲತೆ ಉಂಟಾಗಿ ಮನಸ್ಸು ಕ್ಷೀಣವಾಗಿ ಭಕ್ತನು ತನ್ನ ಮನೋನಿರ್ಧಾರ ಸ್ಥೈರ್ಯ ಯೋಗ್ಯತೆಗಳನ್ನು ಕಳೆದುಕೊಳ್ಳುತ್ತಾನೆ. ಪರಿಶುದ್ಧವೂ ಶಕ್ತಿಪೂರ್ಣವೂ ಆದ ಮನಸ್ಸಿದ್ದರೆ ಮಾತ್ರ ಭಕ್ತನು ಭಗವಂತನನ್ನು ಸರಿಯಾಗಿ ಪ್ರೀತಿಸಲು ಸಾಧ್ಯ, ತನ್ನ ಸಾಧನೆಯನ್ನು ಸರಿಯಾಗಿ ನಿರ್ವಹಿಸಲು ಸಾಧ್ಯ. ಆದುದರಿಂದ ಅನುದ್ಧರ್ಷನಾಗಿರುವುದು ಭಕ್ತನಿಗೆ ಅಗತ್ಯದ ಗುಣವಾಗಿರುತ್ತದೆ.

ಈ ಏಳು ಅಂಶಗಳನ್ನು ಸಾಧಕನು ಮೂಲವಾಗಿ ತನ್ನಲ್ಲಿ ರೂಢಿಸಿಕೊಂಡಾಗ ಅವನು ಭಕ್ತಿಯೋಗದ ಸಾಧನೆಗೆ ಅರ್ಹನಾಗಿರುತ್ತಾನೆ. ಭಕ್ತಿಯೋಗದ ಸಾಧಕನು ಭಕ್ತನೆಂದು ಕರೆಯಲ್ಪಡುತ್ತಾನೆ.

ಸಾಮಾನ್ಯವಾಗಿ ಭಕ್ತರಲ್ಲಿ ನಾಲ್ಕು ವರ್ಗಗಳಿದ್ದು ಈ ವರ್ಗೀಕರಣವನ್ನು ಲೋಕದಲ್ಲಿರುವ ಭಕ್ತರ ಗುಣಸ್ವಭಾವ ಜೀವನದೃಷ್ಟಿಗಳನ್ನು ಅನುಸರಿಸಿ ಮಾಡಲಾಗಿದೆ. ಈ ನಾಲ್ಕು ವರ್ಗದವರಲ್ಲಿ ಎಲ್ಲರೂ ಭಕ್ತಿಯೋಗಿಗಳು ಅಲ್ಲದಿದ್ದರೂ ತಿಳಿದೋ ತಿಳಿಯ

ದೆಯೋ ಭಕ್ತಿಯೋಗದ ಪಥದಲ್ಲಿ ನಡೆಯುತ್ತಿರುವವರಾಗಿದ್ದಾರೆ. ಈ ನಾಲ್ಕು ವರ್ಗದವರಲ್ಲಿ ಕೆಲವರು ತುಂಬಾ ಅಪರಿಪಕ್ವವಾದ ಸ್ಥಿತಿಯಲ್ಲಿ ಇದ್ದರೆ ಇನ್ನು ಕೆಲವರು ಆಗಲೇ ಪರಿಪಕ್ವವಾಗಿರುತ್ತಾರೆ.

ನಾಲ್ಕು ವಿಧದ ಭಕ್ತರು ಯಾರೆಂದರೆ :

(೧) ಆರ್ತಭಕ್ತರು. (೨) ಅರ್ಥಾರ್ಥಿಭಕ್ತರು, (೩) ಜಿಜ್ಞಾಸುಭಕ್ತರು, (೪) ಜ್ಞಾನಿ ಭಕ್ತರು.

(೧) ಆರ್ತಭಕ್ತರು : ನರಳುವಿಕೆ, ಕಷ್ಟ, ನಷ್ಟ ಎಂಬಿತ್ಯಾದಿ ಜೀವನದ ನೋವುಗಳಿಗೆ ತುತ್ತಾದವರು ದೇವರನ್ನು ತಮ್ಮ ಕಷ್ಟನಿವಾರಣೆಗಾಗಿ ಮರೆಹೋಗುತ್ತಾರೆ. ಈ ವಿಧದ ಭಕ್ತರನ್ನು ಆರ್ತಭಕ್ತರು ಎಂದು ಹೇಳಲಾಗಿದೆ.

(೨) ಅರ್ಥಾರ್ಥಿ : ನಿರ್ದಿಷ್ಟವಾದ ವಸ್ತು ಧನಕನಕಾದಿಗಳ ಸುಖಗಳನ್ನು ಬಯಸಿ ಅವನ್ನು ಪಡೆಯುವುದಕ್ಕಾಗಿ ದೇವರ ನೆರವನ್ನು ಬಯಸಿ ಭಕ್ತಿಯಿಂದ ಭಗವಂತನನ್ನು ಪೂಜಿಸುವವರು ಅರ್ಥಾರ್ಥಿಭಕ್ತರು ಇವರು ಬಯಸುವ ವಸ್ತುಭೋಗಗಳು ಎಲ್ಲವೂ ಲೌಕಿಕವಾದವು.

(೩) ಜಿಜ್ಞಾಸು : ಜೀವನದ ಗುರಿಯೇನು? ಎಂದು ಪ್ರಶ್ನಿಸುತ್ತಾ ಜೀವನದ ಪರಮ ಗುರಿಯಾದ ಭಗವಂತನ ಕುರಿತಾದ ಜ್ಞಾನವನ್ನು ಪಡೆಯಲು ಆಶಿಸುವವರೇ ಜಿಜ್ಞಾಸು ಭಕ್ತರು.

(೪) ಜ್ಞಾನಿ : ಭಗವಂತನ ಸಾಕ್ಷಾತ್ಕಾರವಾಗಿ ಜೀವನ್ಮುಕ್ತರಾದವರೇ ಜ್ಞಾನಿಗಳು. ಅವರು ಭಗವಂತನನ್ನು ಸರ್ವ ಚರಾಚರ ವಸ್ತುಗಳಲ್ಲಿ ಕಾಣುತ್ತಾ, ಭಗವಂತನ ದಿವ್ಯ ದರ್ಶನಾನಂದವನ್ನು ಅನುಭವಿಸುತ್ತಾ, ಭಗವಂತನನ್ನು ಯಾವ ಕಾಮನೆಗಳೂ ಇಲ್ಲದೆ ಪ್ರೇಮಕ್ಕಾಗಿ ಪ್ರೇಮಿಸಿ ಪ್ರೇಮದಿಂದ ಜೀವಿಸಿ ಪ್ರೇಮಸ್ವರೂಪರೇ ಆಗಿರುತ್ತಾರೆ. ಜೀವನ-ಜಗತ್ತು, ಭಗವಂತ ಈ ಸಂಬಂಧದ ಸತ್ಯವಾದ ಪರಿಜ್ಞಾನ ಇವರಿಗೆ ಇರುತ್ತದೆ.

ಆರ್ತ ಮತ್ತು ಅರ್ಥಾರ್ಥಿ ಹಂತದಿಂದ ಜಿಜ್ಞಾಸುವಾಗಿ ಕೊನೆಗೆ ಜ್ಞಾನಿಯಾಗುವುದೇ ಭಕ್ತಿಯೋಗದ ಸಾಧಕನ ಗುರಿಯಾಗಿರಬೇಕು. ಭಕ್ತಿಯೋಗದಲ್ಲಿ ಗೌಣ (ಅಪರಾ) ಮತ್ತು ಪರಾ ಎಂಬ ಎರಡು ಹಂತಗಳಿವೆ. ಅಪರಭಕ್ತಿಯು ಮೊದಲನೇ ಘಟ್ಟವಾದರೆ ಪರಾಭಕ್ತಿಯು ಕೊನೆಯ ಹಂತವಾಗಿದೆ. ಸಾಧಕನು ಜ್ಞಾನಿಯಾಗಿ ಪರಾಭಕ್ತಿಯ ಫಲವಾಗಿ ರೂಪುಗೊಳ್ಳುತ್ತಾನಾಗಿದ್ದು ಆರ್ತ ಮತ್ತು ಅರ್ಥಾರ್ಥಿಯಾಗಿ, ಜಿಜ್ಞಾಸುವಾಗಿ ಬೆಳವಣಿಗೆ ಹೊಂದುವುದು ಗೌಣಭಕ್ತಿಯ ಹಂತದ ಸಾಧನೆಯ ಫಲವಾಗಿರುತ್ತದೆ. ಗೌಣಭಕ್ತಿಯನ್ನು ವೈದೀಭಕ್ತಿ ಎಂದೂ ಪರಾಭಕ್ತಿಯನ್ನು ರಾಗಾತ್ಮಿಕಾಭಕ್ತಿ ಎಂದೂ ಕರೆಯುವುದಿದೆ. ದೇವರು ಬೇರೆ—ತಾನು ಬೇರೆ ಎಂದು ತಿಳಿದು ಅನಂತರ ದೇವರು ಪೂರ್ಣ—ತಾನು ದೇವರ ಅಂಶ ಎಂಬ ಭಾವನೆಯ ಹಂತವನ್ನು ಏರಿ, ಭಕ್ತಿಯಿಂದ ಸಾಧಕನು ಕೊನೆಗೆ ದೇವರು ಪೂರ್ಣ—ತಾನೂ ಪೂರ್ಣ, ದೇವರು ಸರ್ವಾಂತರ್ಯಾಮಿಯಾಗಿದ್ದು ತನ್ನಲ್ಲೂ ಅಡಗಿರುತ್ತಾನೆ ಎಂಬ ಅನುಭವದ ನೆಲೆಗೆ ತಲಪುತ್ತಾನೆ. ಮೊದಲಿನ ಎರಡು ನೆಲೆಗಳು ಗೌಣಭಕ್ತಿಯಲ್ಲೂ ಕೊನೆಯ ಘಟ್ಟವು ಪರಾಭಕ್ತಿಯಲ್ಲೂ ಮುಖ್ಯಾಯಗೊಳ್ಳುತ್ತವೆ.

ಗೌಣಭಕ್ತಿ : ಭಕ್ತಿಯೋಗಿಯು ಭಕ್ತನಾಗಿ ಭಗವಂತನನ್ನು ಸರ್ವಶಕ್ತನೆಂದೂ, ಸಗುಣ ಸಾಕಾರನೆಂದೂ ಪ್ರೀತಿಸಿ ಪೂಜಿಸುತ್ತಾನೆ. ದೇವರ ವಿಗ್ರಹಗಳು, ಅವತಾರಪುರುಷರು, ದೇವರ ಕಥೆ-ಪುರಾಣಗಳು, ಭಗವಂತನ ನಾಮಸ್ಮರಣೆ—ಇವುಗಳು ಭಕ್ತನ ಭಕ್ತಿಯ ಬೆಳವಣಿಗೆ ಪೋಷಣೆ ರಕ್ಷಣೆಗಳಿಗೆ ಸಾಧನವಾಗುತ್ತವೆ. ಇವುಗಳಿಂದೆಲ್ಲ ಕೂಡಿದ ಭಕ್ತಿಯೇ ಗೌಣಭಕ್ತಿ ಆಗಿರುತ್ತದೆ. ಗೌಣಭಕ್ತಿಯನ್ನು ಮೂರು ಹಂತಗಳಲ್ಲಿ ಸಾಧಕನು ಸಾಧಿಸಿ ಮುಗಿಸುತ್ತಾನೆ. ಆ ಹಂತಗಳು ಯಾವುವೆಂದರೆ .

(೧) ಬಾಹ್ಯಭಕ್ತಿ, (೨) ಅನನ್ಯಭಕ್ತಿ, (೩) ಏಕಾಂತಭಕ್ತಿ.

ಬಾಹ್ಯಭಕ್ತಿ : ಭಕ್ತನು ದೇವರನ್ನು ಮೊದಲು ಬಾಹ್ಯವಾಗಿ, ಬಹಿರಂಗವಾದ ಸಾಧನ ಸಲಕರಣೆಗಳ ಮೂಲಕ ಪೂಜಿಸುವುದೇ ಬಾಹ್ಯಭಕ್ತಿ. ದೇವರು ತನಗಿಂತ ಹೊರಗಾಗಿ ಬೇರೆಯಾಗಿ ಇದ್ದಾನೆ ಎಂದು ಈ ಹಂತದಲ್ಲಿ ಭಕ್ತನು ಭಾವಿಸುತ್ತಾನೆ. ಅಲ್ಲದೆ ದೇವರು ದೇವಸ್ಥಾನ, ಮೂರ್ತಿ, ತೀರ್ಥಕ್ಷೇತ್ರ ಎಂಬಿತ್ಯಾದಿ ನಿಶ್ಚಿತ ಸ್ಥಳದಲ್ಲಿ ಮಾತ್ರ ನೆಲಸಿರುತ್ತಾನೆ ಎಂದು ಭಕ್ತನು ಭಾವಿಸುತ್ತಾನೆ. ದೇವಸ್ಥಾನಗಳಲ್ಲಿ ದೇವರನ್ನು ವಿಗ್ರಹಗಳ ಮೂಲಕ ಪೂಜಿಸುವಿಕೆ, ತೀರ್ಥಯಾತ್ರೆ ಹೋಗುವಿಕೆ, ಪವಿತ್ರ ಗ್ರಂಥಗಳನ್ನು ಪೂಜಿಸುವಿಕೆ—ಇವುಗಳು ಬಾಹ್ಯಭಕ್ತಿಯ ಅಂಶಗಳಾಗಿರುತ್ತವೆ.

ಅನನ್ಯಭಕ್ತಿ : ಅನನ್ಯ ಎಂದರೆ ಬೇರೊಂದು ಇಲ್ಲ ಎಂಬ ತಾತ್ಪರ್ಯ. ಅನನ್ಯಭಕ್ತಿ ಎಂದರೆ ಪರಮಾತ್ಮನಾದ ಭಗವಂತನಲ್ಲದೆ ಇತರ ಸಮಸ್ತ ಆಶ್ರಯಗಳನ್ನೂ ತ್ಯಜಿಸುವುದಾಗಿರುತ್ತದೆ. ಭಕ್ತನು ದೇವರೊಬ್ಬನೇ ತನಗೆ ಗತಿ, ಆಶ್ರಯ ಎಂದು ನಿಶ್ಚಯಿಸಿ ದೇವರನ್ನು ಪ್ರೀತಿಸಿ ಅವನಿಗೆ ನಿಶ್ಚಿತವಾದ ಒಂದು ಸ್ವರೂಪ ಇದೆ ಎಂದು ಗ್ರಹಿಸಿ ತನಗೆ ಇಷ್ಟವಾದ ಒಂದು ಸ್ವರೂಪವನ್ನು ಆರಿಸಿಕೊಳ್ಳುತ್ತಾನೆ. ಆ ರೂಪವೇ ಭಕ್ತನ ಇಷ್ಟಮೂರ್ತಿ, ಇಷ್ಟದೇವತೆಯಾಗುತ್ತದೆ. ಇಷ್ಟದೇವರು ತನ್ನ ಹೃದಯದಲ್ಲಿ ಮತ್ತು ಎಲ್ಲೆಲ್ಲೂ ವಾಸವಿರುತ್ತಾನೆ ಎಂದು ಭಕ್ತನು ಭಾವಿಸುತ್ತಾನೆ. ತನ್ನ ಇಷ್ಟದೇವರಲ್ಲಿ ದೇವರ ಸರ್ವಸ್ವರೂಪಗಳೂ ಅಡಗಿವೆ ಎಂದು ಭಕ್ತನು ತಿಳಿಯುತ್ತಾ ತನ್ನ ಇಷ್ಟದಲ್ಲಿ ಸರ್ವಸ್ವವನ್ನೂ, ಸರ್ವರೂಪಗಳಲ್ಲಿ ತನ್ನ ಇಷ್ಟವನ್ನೂ ಕಾಣುತ್ತಾನೆ. ಇಷ್ಟದೇವತೆಯ ಆರಾಧನೆಯನ್ನು ಭಕ್ತಿಯ ವಿವಿಧ ಪ್ರಕಾರಗಳಿಂದ ಭಕ್ತನು ನಿರ್ವಹಿಸುತ್ತಾನೆ. ಇಷ್ಟದೇವತೆಯ ಆರಾಧನೆ, ಒಲವುಗಳಲ್ಲಿ ತನ್ನ ಇಷ್ಟದೇವತೆ ಮಾತ್ರ ಸತ್ಯ ಎಂಬ ಸಂಕುಚಿತವಾದ ಮತ್ತು ಇತರ ದೇವತಾರೂಪುಗಳೆಲ್ಲವೂ ಕೀಳು, ಹಾಳು ಎಂಬ ತಪ್ಪು ಭಾವನೆಯೂ ಭಕ್ತನನ್ನು ತೊಂದರೆಗೆ ಈಡುಮಾಡಲು ಈ ಹಂತದಲ್ಲಿ ಯತ್ನಿಸುತ್ತದೆ. ಸರಿಯಾದ ತಿಳಿವಳಿಕೆ, ತನ್ನ ಇಷ್ಟದೇವತೆಯಲ್ಲಿ ಅಚಲವಾದ ಭಕ್ತಿ, ಶ್ರದ್ಧೆ, ಸಮರ್ಪಣ ಭಾವ ಇವುಗಳಿಂದ ಭಕ್ತನು ಅನನ್ಯಭಕ್ತಿಯನ್ನು ಅನುಷ್ಠಾನಮಾಡಲು ಸಾಧ್ಯವಾಗುತ್ತದೆ.

ಏಕಾಂತಭಕ್ತಿ : ದೇವರು ಅಲ್ಲದೆ ಬೇರೇನೂ ಬೇಡ ಎಂಬ ಸ್ವಭಾವ ಬೆಳೆದು ಜೀವನದಲ್ಲಿ ಅದು ಅನುಷ್ಠಾನಕ್ಕೆ ಬರುವುದೇ ಏಕಾಂತಭಕ್ತಿ. ಈ ಹಂತಕ್ಕೆ ತಲಪಿದ ಭಕ್ತನು ದೇವರ ವಿಚಾರವಾಗಿಯೇ ಮಾತನಾಡುತ್ತಾ, ಚಿಂತಿಸುತ್ತಾ, ಜಗತ್ತಿನ ಆಕರ್ಷಣೆ ಸಂಸಾರದ ಆಸೆ–ಸುಖಗಳಿಗೆ ಒಂದಿಷ್ಟೂ ಇಷ್ಟಪಡದವನಾಗಿ, ಭಗವಂತನನ್ನು ಮಾತ್ರ ಬಯಸುತ್ತಾ,

ಅವನನ್ನು ಮಾತ್ರ ಚಿಂತಿಸುತ್ತಾ, ಭಗವಂತನೊಬ್ಬನೇ ತನಗೆ ಪ್ರಿಯ-ಸಖ ಎನ್ನುತ್ತಾ ಬಾಳುತ್ತಾನೆ.

ಗೌಣಭಕ್ತಿಯಲ್ಲಿ ಈ ಮೂರು ಹಂತಗಳಿರುವಂತೆ ಮೂರು ಪ್ರಕಾರದ ಗುಣಭೇದಗಳು ಭಕ್ತರ ಸ್ಥಿತಿಯನ್ನು ಅನುಸರಿಸಿ ಉಂಟಾಗುತ್ತವೆ. ಅವನ್ನು ಗುಣಭೇದ, ಆರ್ತಭೇದ ಎಂದೂ ಹೇಳಲಾಗಿದೆ.

ಗುಣಕ್ಕೆ ಸಂಬಂಧಪಟ್ಟ ಭೇದಗಳನ್ನು ತಾಮಸಭಕ್ತಿ, ರಾಜಸಭಕ್ತಿ, ಸಾತ್ವಿಕಭಕ್ತಿ ಎಂದು ವಿಭಾಗಿಸಲಾಗಿದೆ. ತಾಮಸಭಕ್ತಿಯು ಅಜ್ಞಾನದಿಂದ ಕೂಡಿದೆ. ತಾಮಸಿಕ ಗುಣ ದಿಂದ ಕೂಡಿದ ಭಕ್ತನ ಪೂಜೆ ದಾನಾದಿ ಕ್ರಿಯೆಗಳು ಬೇರೆಯವರಿಗೆ ಹಾನಿಯನ್ನುಂಟು ಮಾಡುವ ದೃಷ್ಟಿಯಿಂದ ಆಚರಿಸಲ್ಪಡುತ್ತವೆ. ಇತರರ ಅಭ್ಯುದಯ ಬಯಸದಿರುವಿಕೆ, ಇತರರ ಮೇಲಿನ ದ್ವೇಷ ತೀರಿಸುವಿಕೆ ಇತ್ಯಾದಿ ಪ್ರತೀಕಾರದ ಭಾವನೆ ಈ ಭಕ್ತಿಯಲ್ಲಿ ಸೇರಿದೆ. ರಾಜಸಭಕ್ತನು ಹಣ, ಸುಖ, ಕೀರ್ತಿ ಇತ್ಯಾದಿ ಫಲಾಪೇಕ್ಷೆಯಿಂದ ತಪಸ್ಸು ಪೂಜಾದಿಗಳನ್ನು ಮಾಡುತ್ತಾನೆ. ಈ ಭಕ್ತಿಯಲ್ಲಿ ಬಾಹ್ಯಾಡಂಬರವೇ ಜಾಸ್ತಿ. ಕರ್ಮದ ಫಲಗಳನ್ನೆಲ್ಲಾ ಭಗವಂತನಿಗೆ ಅರ್ಪಿಸಿ ತನ್ನ ಪಾಪಗಳನ್ನೆಲಾ ತೊಳೆದು ಕೇವಲ ಶುದ್ಧ ಭಕ್ತಿಜ್ಞಾನಗಳಿಗಾಗಿ ಭಗವಂತನನ್ನು ಪ್ರಾರ್ಥಿಸುತ್ತಾ ನಿರ್ವಹಿಸುವ ತಪಸ್ಸುಪೂಜಾದಿ ಗಳೇ ಸಾತ್ವಿಕಭಕ್ತಿ. ಇದರಲ್ಲಿ ಕೀರ್ತಿ, ಕಾಮನೆ, ಬಾಹ್ಯಾಡಂಬರ, ಪ್ರದರ್ಶನಗಳು ಯಾವುವೂ ಇರುವುದಿಲ್ಲ. (ಭಾಗವತ, ೩.೨೯.೧೦)

ಆರ್ತಭೇದವೆಂದರೆ ದೇವರನ್ನು ಪ್ರಾರ್ಥಿಸುವ ಭಕ್ತರ ಉದ್ದೇಶದ ಭೇದಗಳು. ಅವು ಆರ್ತ, ಅರ್ಥಾರ್ಥಿ, ಜಿಜ್ಞಾಸು ಎಂದು ಮೂರು ವಿಧವಾಗಿದ್ದು ಅವನ್ನು ಈಗಾಗಲೇ ವಿವರಿಸಿಯಾಗಿದೆ.

ಈ ಮೂರು ಭೇದಗಳಲ್ಲಿ ತಾಮಸಿಕಭಕ್ತಿಗಿಂತ ರಾಜಸಿಕಭಕ್ತಿಯೂ ರಾಜಸಿಕಭಕ್ತಿ ಗಿಂತ ಸಾತ್ವಿಕಭಕ್ತಿಯೂ ಶ್ರೇಷ್ಠವಾಗಿರುತ್ತದೆ. ಹಾಗೆಯೇ ಆರ್ತನಿಗಿಂತ ಅರ್ಥಾರ್ಥಿ, ಅರ್ಥಾರ್ಥಿಗಿಂತ ಜಿಜ್ಞಾಸಿಭಕ್ತನು ಶ್ರೇಷ್ಠನಾಗಿರುತ್ತಾನೆ.

ಗೌಣೀಭಕ್ತಿಯು ಈ ಮೂರು ಹಂತಗಳನ್ನು ಸರಿಯಾದ ಅನುಷ್ಠಾನಬಲದಿಂದ ಪರಿಪಾಲಿಸಿ ಭಕ್ತಿಯ ಪಥದಲ್ಲಿ ಮುನ್ನಡೆದು ಮುಂದಿನ ಹಂತವಾದ ಪರಾಭಕ್ತಿಯನ್ನು ಸೇರಲು ಸಾಧಕನು ಮುಖ್ಯವಾಗಿ ಒಂಬತ್ತು ತರಹದ ಸಾಧನಾಂಶಗಳನ್ನು ಅನುಸರಿಸ ಬೇಕು. ಇವನ್ನು ನವವಿಧ ಭಕ್ತಿ ಎಂದು ಕರೆಯಲಾಗಿದೆ :

(೧) ಶ್ರವಣ, (೨) ಕೀರ್ತನ, (೩) ಸ್ಮರಣ, (೪) ಪಾದಸೇವನ, (೫) ಅರ್ಚನ, (೬) ವಂದನ, (೭) ದಾಸ್ಯ, (೮) ಸಖ್ಯ, (೯) ಆತ್ಮನಿವೇದನ.

**ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ ।**
**ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥**

ಶ್ರವಣ . ಯಾವ ವಿದ್ಯೆಯೇ ಆಗಲಿ ಅದು ಗುರುವಿಲ್ಲದೆ ತಿಳಿಯಲಾಗದು, ತಿಳಿಯಲು ಸಾಧ್ಯವಾಗದು. ಭಕ್ತಿಯೋಗಿಯೂ ಕೂಡ ಗುರುವಿನಿಂದ ಸೂಕ್ತವಾದ ಆಶೀರ್ವಾದ, ಮಾರ್ಗದರ್ಶನಗಳನ್ನು ಪಡೆಯದೇ ಇದ್ದರೆ ಸಾಧನೆಯಲ್ಲಿ ಮುಂದುವರಿಯಲು ಸಾಧ್ಯ

ವಿಲ್ಲ. ಹಾಗಾಗಿ ಭಕ್ತಿಶಾಸ್ತ್ರ ಮತ್ತು ಯೋಗಾನುಷ್ಠಾನಗಳಲ್ಲಿ ಪರಿಣತನೂ, ಸಿದ್ಧಿಯುಳ್ಳವನೂ ಆದ ಗುರುವೊಬ್ಬನನ್ನು ಭಕ್ತನು ಆರಿಸಿಕೊಂಡು ಗುರುವಿನಿಂದ ಇಷ್ಟದೇವತಾಮಂತ್ರದ ಉಪದೇಶ, ಯೋಗಸಾಧನಾ ವಿವರಗಳನ್ನೆಲ್ಲಾ ಪಡೆಯಬೇಕು. ಗುರುವೆಂದರೆ ಸಾಕ್ಷಾತ್ ಭಗವಂತನೇ ದೇಹಧಾರಿಯಾಗಿ ಭಕ್ತನ ಉದ್ಧಾರಕ್ಕಾಗಿ ಬರುತ್ತಾನೆ ಎಂದು ಭಕ್ತಿಯೋಗದ ಶಾಸ್ತ್ರಗ್ರಂಥಗಳು ಸಾರುತ್ತವೆ. ಅನುಸಾರವಾಗಿ ಗುರುವಿನಲ್ಲಿ ಅಚಲವಾದ ಶ್ರದ್ಧೆಭಕ್ತಿಗಳು ಭಕ್ತನಿಗೆ ಇರಬೇಕು. ಆಗ ಗುರುಮಂತ್ರ, ಗುರೂಪದೇಶ ಇವುಗಳು ಶಿಷ್ಯನಾದ ಭಕ್ತಿಯೋಗಿಗೆ ಉಪಯುಕ್ತವಾಗಿ ಸಾಧನೆಯಲ್ಲಿ ಮುಂದುವರಿಯಲು ಮತ್ತು ಸಿದ್ಧಿಯನ್ನು ಪಡೆಯಲು ನೆರವಾಗುತ್ತವೆ. ಭಗವಂತನ ವಿಚಾರವಾಗಿ ಗುರುಮುಖದಿಂದ, ಸಂತಮಹಾತ್ಮರಿಂದ ಶಾಸ್ತ್ರಗಳ ವಿಚಾರದ ಆಧಾರವಾಗಿಯೂ, ಅನುಭವ ಆಧಾರವಾಗಿಯೂ ಕೇಳುವುದು, ಭಕ್ತಿಸಾಧನೆ ಬಗ್ಗೆ ಸೂಕ್ತವಾದ ಮಾರ್ಗದರ್ಶನ ಪಡೆಯುವುದು, ಭಗವಂತನ ಮಹಿಮೆ ಗುಣಗಾನಗಳನ್ನು ಕೇಳುವುದು—ಇವುಗಳೆಲ್ಲಾ 'ಶ್ರವಣ' ಎಂದು ಎನಿಸಿರುತ್ತವೆ. ಶ್ರವಣ ಎಂದರೆ ಕಿವಿಯಿಂದ ಕೇಳುವುದು ಎಂದು ಅರ್ಥ. ಭಕ್ತಿಯೋಗದ ವಿಚಾರವಾಗಿ ಹಿರಿಯರಿಂದ ಹೇಳಲ್ಪಡುವ ಮಾತುಗಳನ್ನು ಕಿವಿಯಿಂದ ಕೇಳುವುದು, ತಿಳಿಯುವುದು ಎಂದು ತಾತ್ಪರ್ಯ.

ಕೀರ್ತನ: ತಾನು ಕೇಳಿದ ದಿವ್ಯವಾದ ವಿಚಾರಗಳನ್ನು ನೆನಸಿಕೊಂಡು, ಭಗವಂತನ ಕುರಿತಾಗಿ ಅವನ ಗುಣಕೀರ್ತನೆಗಳನ್ನು ನಾಮ, ಸ್ತುತಿ, ಹಾಡು, ಮಂತ್ರ ಇತ್ಯಾದಿಗಳ ಮೂಲಕ ಕೀರ್ತಿಸುವುದು, ಹೇಳುವುದು, ಹಾಡುವುದು—ಇವೇ ಕೀರ್ತನಭಕ್ತಿ. ದೇವರ ಕುರಿತಾದ, ಸಂತಮಹಾತ್ಮರ ಕುರಿತಾದ ಭಕ್ತಿಪ್ರಚೋದಕವಾದ ಗ್ರಂಥಗಳ ಪಠಣ, ವ್ಯಾಸಂಗ ಇವುಗಳೂ ಕೀರ್ತನಕ್ಕೆ ಸೇರಿವೆ. ಕೀರ್ತನೆಯನ್ನು ಭಕ್ತನು ಹಲವು ಭಕ್ತರೊಡನೆ ಸೇರಿ ಅಥವಾ ಒಬ್ಬನೇ ಮಾಡಬಹುದು. ಹೀಗೆ ಕೀರ್ತನೆಯಲ್ಲಿ ಏಕಾಂತಕೀರ್ತನೆ, ಕೀರ್ತನೆ, ನಿರಂತರವೂ ಮಾಡುವ ಸಾಮೂಹಿಕ ಅಖಂಡಕೀರ್ತನೆ ಎಂಬ ಮೂರು ವಿಧಗಳಿವೆ.

ಸ್ಮರಣ: ಶ್ರವಣ, ಕೀರ್ತನೆಗಳಾದನಂತರದ ಭಕ್ತಿಯೇ ಸ್ಮರಣ. ಭಗವಂತನನ್ನು ನಿತ್ಯವೂ ಸ್ಮರಿಸಿಕೊಳ್ಳುತ್ತಾ ಜೀವನದ ಎಲ್ಲಾ ಕೆಲಸಗಳನ್ನೂ ನಿರ್ವಹಿಸುವುದು, ಮತ್ತು ಭಗವಂತನ ಲೀಲೆ, ಅವನ ದಿವ್ಯಗುಣಗಳ ವಿಚಾರವನ್ನು ಮನನ ಮಾಡುವುದು—ಇವು 'ಸ್ಮರಣ'ವಾಗಿರುತ್ತದೆ. ಸ್ಮರಣೆಯಲ್ಲಿ ಮನನ ಎಂದರೆ ಪುನಃಪುನಃ ಯೋಚಿಸುವುದೂ ಸೇರಿದ್ದು ಸ್ಮರಣಮನನಗಳು ಒಂದಕ್ಕೊಂದು ಪೂರಕವಾಗಿದೆ.

ಪಾದಸೇವನ: ಗುರುಗಳು, ಭಕ್ತಮಹನೀಯರು, ಸಾಧುಸಂತರು, ದೇವತಾಮೂರ್ತಿ ಪ್ರತೀಕಗಳು—ಇವರ ಪಾದವನ್ನು ಸೇವಿಸುವುದು, ಭಕ್ತಿಯಿಂದ ಪೂಜಿಸುವುದು, ಪಾದಸೇವನಭಕ್ತಿಯಾಗಿದೆ. ಭಗವಂತನು ಎಲ್ಲೆಲ್ಲೂ ಇದ್ದಾನೆ. ಜಗತ್ತು ಭಗವಂತನ ಸೃಷ್ಟಿ. ಚರಾಚರ ವಸ್ತುಗಳೆಲ್ಲವೂ ಭಗವಂತನ ನಿರ್ಮಾಣ. ಮಾನವಕೋಟಿಗೆ, ಜಗತ್ತಿಗೆ ಮಾಡಿದ ಸೇವೆ ಭಗವಂತನಿಗೆ ಸಲ್ಲಿಸುವ ಸೇವೆ. ಮಾಡುವ ಪ್ರತಿಯೊಂದು ಕೆಲಸವನ್ನೂ (ಕಾಯಿಕ, ಮಾನಸಿಕ ಮತ್ತು ವಾಚಿಕ ಎಂಬೀ ಮೂರು ವಿಧದಲ್ಲೂ ಕೂಡ) ಭಗವಂತನ

ಸೇವೆ ಎಂಬ ಭಾವನೆಯಿಂದ, ಪ್ರೀತಿಯಿಂದ ಮಾಡುವುದು ಪಾದಸೇವನೆಯ ಅಂಶವಾಗಿದೆ. ಭಗವಂತನ ಹೆಸರಲ್ಲಿ ದೇವಮಂದಿರ, ಸಂಘಸಂಸ್ಥೆಗಳಲ್ಲಿ ಸೇವೆಸಲ್ಲಿಸುವುದೂ ಭಗವಂತನ ಪಾದಸೇವನಾಭಕ್ತಿಯಾಗಿದೆ. ಈ ಪಾದಸೇವನಾಭಕ್ತಿಯಿಂದ ಭಕ್ತನ ಹೃದಯ ವಿಶಾಲವಾಗಿ ತನ್ನ ಜೀವನದಲ್ಲಿ, ಸಂಸಾರದಲ್ಲಿ, ತನ್ನ ಉದ್ಯೋಗದಲ್ಲಿ, ಸಮಾಜದಲ್ಲಿ—ಎಲ್ಲೆಲ್ಲೂ ಭಗವಂತನನ್ನೇ ಕಾಣುತ್ತಾ ಭಕ್ತಿಯನ್ನೂ ಪರಿಪಕ್ವಗೊಳಿಸಲು ಸಾಧ್ಯವಾಗುತ್ತದೆ. ಮಾಡುವ ಎಲ್ಲಾ ಕೆಲಸಗಳೂ ಆಗ ಪರಮಾತ್ಮನ ಪೂಜೆ ಎಂದಾಗುತ್ತದೆ.

ಅರ್ಚನ: ಪುಷ್ಪಗಂಧಾದಿಗಳಿಂದ ಭಗವಂತನನ್ನು ಅರ್ಚಿಸುವುದು, ಅವನನ್ನು ತನ್ನ ಇಷ್ಟದೇವತೆಯ ಸ್ವರೂಪದ ಮೂಲಕ ಪೂಜಿಸುವುದು ಅರ್ಚನಭಕ್ತಿಯಾಗಿದೆ. ಅರ್ಚನೆಯನ್ನು ಮಾಡಲು ಭಕ್ತನು ಭಗವಂತನ ಸ್ವರೂಪವೊಂದನ್ನು ಆರಿಸಿಕೊಳ್ಳುತ್ತಾನೆ. ಹಿಂದೆ ಹೇಳಿದಂತೆ ಅದೇ ಭಕ್ತನ ಇಷ್ಟದೇತಾರೂಪವಾಗುತ್ತದೆ. ಇಷ್ಟಸ್ವರೂಪದ ಪ್ರತೀಕವೊಂದನ್ನು ಇಟ್ಟುಕೊಂಡು ಭಕ್ತನು ಅದನ್ನು ಪ್ರೀತಿಯಿಂದ ಪೂಜಿಸುತ್ತಾನೆ. ಇಷ್ಟದೇವತೆಯ ಚಿತ್ರಗಳು, ಪ್ರತಿಮೆಗಳು, ವಿಗ್ರಹಗಳು, ಯಾವುದೇ ಆದರೂ ಪೂಜೆಗೆ ಆಗಬಹುದು. ಭಕ್ತನು ಈ ಪ್ರತೀಕವನ್ನು ಭಗವಂತನ ಸಾಕ್ಷಾತ್ ಪ್ರತೀಕ ಎಂದು ತಿಳಿಯುತ್ತಾನೆ. ಪ್ರತಿಮೆಗಳಿಗೆ ಸರ್ವಶಕ್ತನಾದ, ಸರ್ವಾಂತರ್ಯಾಮಿಯಾದ ಭಗವಂತನು ಸೀಮಿತನಾಗಿರುವುದಿಲ್ಲ ಎಂದು ತಿಳಿದಿರುತ್ತಾನೆ. ಆದರೆ ಸಾಗರದ ನೀರು ಘನೀಭೂತವಾಗುವಂತೆ, ಭಗವಂತನು ಮೂರ್ತಿಯ ಮೂಲಕ, ಭಕ್ತನಿಗೆ ಇಷ್ಟದೇವತಾರ್ಚನೆಗೆ ಅವಕಾಶ ನೀಡುತ್ತಾನೆ. ಸರ್ವಾಂತರ್ಯಾಮಿಯೂ ಸರ್ವವ್ಯಾಪಕನೂ ಆದ ಭಗವಂತನು ಮೂರ್ತಿಯಲ್ಲಿಯೂ ಇದ್ದೇ ಇರಬೇಕಾದುದು ಸಹಜ. ಭಕ್ತನು ತಾನು ಆರಾಧನೆ ಮಾಡುವ ಭಗವಂತನ ಪ್ರತೀಕಗಳಿಗೆ ಪ್ರಾಣಪ್ರತಿಷ್ಠೆಯನ್ನು ಶಾಸ್ತ್ರೋಕ್ತವಾಗಿ ಮಾಡಿ ಅವುಗಳನ್ನು ಸಾಕ್ಷಾತ್ ಭಗವಂತ ಎಂದು ಪೂಜಿಸುತ್ತಾನೆ. ಪ್ರತಿಮೆಗಳು ತನ್ನ ಮನೆಯಲ್ಲಿ ಏರ್ಪಡಿಸಿದ ಪ್ರಾರ್ಥನಾಮಂದಿರದಲ್ಲಿ, ಊರಿನ ದೇವಾಲಯಗಳಲ್ಲಿ ಇರುತ್ತವೆ. ಅನುಕೂಲಕ್ಕೆ ತಕ್ಕಂತೆ ಭಕ್ತನು ಅವುಗಳನ್ನು ಪೂಜಿಸುತ್ತಾನೆ, ಆರಾಧಿಸುತ್ತಾನೆ.

ದೇವರ ಅರ್ಚನೆಗೆ ಬೇಕಾದ ಮೂಲ ವಿಷಯವೇ ಭಕ್ತಿ ಮತ್ತು ಶ್ರದ್ಧೆ. ಅರ್ಚನೆಯನ್ನು ಭಕ್ತನು ಹದಿನಾರು ವಿಧದ ಉಪಚಾರಗಳಿಂದ ನಿರ್ವಹಿಸುತ್ತಾನೆ. ಇದನ್ನೇ 'ಷೋಡಶ ಉಪಚಾರ ಪೂಜೆ' ಎನ್ನುತ್ತಾರೆ. ಮಾನವೀಯವಾದ ಜೀವನದ ನಡವಳಿಕೆಗಳ ದೃಷ್ಟಿಯನ್ನು ತಳೆದು, ಪ್ರೀತಿಯಿಂದ, ಭಕ್ತಿಯಿಂದ ಮತ್ತು ಗೌರವದಿಂದ ಕೂಡಿ, ಭಗವಂತನನ್ನು ಭಕ್ತನು ಆರಾಧಿಸುತ್ತಾನೆ. ಅದಕ್ಕೆ ಅನುಗುಣವಾಗಿ ಪೂಜಾಸಲಕರಣೆ, ಉಪಚಾರ ವಿಧಾನಗಳನ್ನು ಅರ್ಚನಭಕ್ತಿಯಲ್ಲಿ ಅಳವಡಿಸಿಕೊಳ್ಳುತ್ತಾನೆ.

ಷೋಡಶೋಪಚಾರದಂತೆ ತ್ರಯೋಪಚಾರ ಪಂಚೋಪಚಾರ ದಶೋಪಚಾರ ಪೂಜೆಗಳನ್ನು ಭಕ್ತರು ತಮ್ಮ ಅನುಕೂಲದಂತ ಮಾಡುತ್ತಾರೆ. ಈ ನಾಲ್ಕು ವಿಧದ ಪೂಜೆಗಳಲ್ಲಿ ಸೇರಿರುವ ಉಪಚಾರ ವಿಷಯಗಳು ಯಾವುವೆಂದರೆ :

ತ್ರಯೋಪಚಾರ : (೧) ಧೂಪ–ಸುಗಂಧದ್ರವ್ಯಗಳನ್ನು ಉರಿಸುವಿಕೆ. (೨) ದೀಪ–ಜ್ಯೋತಿಗಳನ್ನು ಬೆಳಗಿಸುವಿಕೆ. (೩) ನೈವೇದ್ಯ-ಹಣ್ಣು ಹಾಲು, ಆಹಾರಗಳನ್ನು ಸಮರ್ಪಿಸುವಿಕೆ.

ಪಂಚೋಪಚಾರ : (೧) ಗಂಧಸಮರ್ಪಣೆ, (೨) ಪುಷ್ಪಗಳ ಸಮರ್ಪಣೆ, (೩) ಧೂಪ, (೪) ದೀಪ, (೫) ನೈವೇದ್ಯ.

ದಶೋಪಚಾರ : (೧) ಅರ್ಘ್ಯ, (೨) ಪಾದ್ಯ, (೩) ಆಚಮನ, (೪) ಸ್ನಾನ, (೫) ಗಂಧ, (೬) ಪುಷ್ಪ, (೭) ಧೂಪ, (೮) ದೀಪ, (೯) ನೈವೇದ್ಯ. (೧೦) ಪುನರಾಚಮನ.

ಷೋಡಶೋಪಚಾರ :

(೧) ಧ್ಯಾನ—ದೇವರನ್ನು (ಇಷ್ಟದೇವತೆಯನ್ನು) ತನ್ನೊಳಗೆ ಧ್ಯಾನಿಸುವಿಕೆ.
(೨) ಆವಾಹನ—ಧ್ಯಾನದನಂತರ ಪೂಜೆಗೆ ಆಹ್ವಾನಿಸುವಿಕೆ.
(೩) ಆಸನ—ಉಚಿತವಾದ ಆಸನದಲ್ಲಿ ಕೂಡಿಸುವಿಕೆ.
(೪) ಪಾದ್ಯ—ಪಾದಗಳನ್ನು ಪವಿತ್ರ ಜಲದಿಂದ ತೊಳೆಯುವಿಕೆ.
(೫) ಅರ್ಘ್ಯ—ಅರ್ಘ್ಯಮೂಲಕ ಸತ್ಕರಿಸುವಿಕೆ, ಕೈತೊಳೆಯುವಿಕೆ.
(೬) ಸ್ನಾನ—ಸ್ನಾನಮಾಡಿಸುವಿಕೆ (ಅಭಿಷೇಕ ಮಾಡುವಿಕೆ).
(೭) ವಸ್ತ್ರ—ವಸ್ತ್ರಸಮರ್ಪಣೆ.
(೮) ಯಜ್ಞೋಪವೀತ ಸಮರ್ಪಣೆ.
(೯) ಚಂದನ—ಗಂಧಚಂದನಗಳ ಸಮರ್ಪಣೆ.
(೧೦) ಪುಷ್ಪ—ಪುಷ್ಪಗಳ ಸಮರ್ಪಣೆ.
(೧೧) ಧೂಪ—ಸುಗಂಧದ್ರವ್ಯಗಳನ್ನು ಉರಿಸುವಿಕೆ.
(೧೨) ದೀಪ—ಜ್ಯೋತಿಗಳನ್ನು ಬೆಳಗುವಿಕೆ.
(೧೩) ನೈವೇದ್ಯ—ಹಣ್ಣು, ಹಾಲು, ಅನ್ನ ಆಹಾರಾದಿ ತಿಂಡಿತೀರ್ಥಗಳ ಸಮರ್ಪಣೆ.
(೧೪) ತಾಂಬೂಲ—ತಾಂಬೂಲ ಸಮರ್ಪಣೆ.
(೧೫) ನೀರಾಜನಾ—ಆರತಿ ಬೆಳಗುವಿಕೆ.
(೧೬) ಸುವರ್ಣಪುಷ್ಪ—ಧನಕನಕಗಳ ಸಮರ್ಪಣೆ.

ಈ ಉಪಚಾರಗಳನ್ನು ಒಳಗೊಂಡ ಪೂಜೆಯ ಕೊನೆಯಲ್ಲಿ ಭಕ್ತನು ಪೂಜೆಯ ಫಲವನ್ನು ದೇವರಿಗೆ ಅರ್ಪಿಸುತ್ತಾ ತನ್ನನ್ನೂ ಭಗವಂತನಿಗೇ ಅರ್ಪಿಸಿಕೊಳ್ಳುತ್ತಾ ಸಾಷ್ಟಾಂಗ ಪ್ರಣಾಮವನ್ನು ಮಾಡುತ್ತಾನೆ. ಅಷ್ಟೇ ಅಲ್ಲದೆ, ಭಕ್ತಿಶ್ರದ್ಧೆಗಳಿಗಾಗಿ ಭಗವಂತನನ್ನು ಪ್ರಾರ್ಥಿಸಿಕೊಳ್ಳುತ್ತಾನೆ. ಹೀಗೆ ವಂದನೆ ಪ್ರಾರ್ಥನೆ ಸಮರ್ಪಣೆ ಭಾವ ಇವುಗಳು ಪೂಜೆ ಅರ್ಚನೆಗಳಲ್ಲಿ ಸೇರಿರುವ ಅಂಶವಾಗಿರುತ್ತವೆ. ಈ ಮೇಲೆ ಹೇಳಿದ ಉಪಚಾರಗಳನ್ನು ಒಳಗೊಂಡ ಪೂಜೆಯನ್ನು ಬಾಹ್ಯಸಲಕರಣೆಗಳಿಂದ ಕೂಡಿ ತನ್ನ ಇಷ್ಟದೇವತೆಯ ಪ್ರತಿಮೆಗೆ ಪ್ರತಿನಿತ್ಯವೂ ಸಲ್ಲಿಸಬೇಕು. ದೇವರು ಸ್ವತಃ ಪ್ರತಿಮಾರೂಪದಲ್ಲಿ ಬಂದಿರುತ್ತಾನೆ ಎಂಬ ಭಾವನೆಯಿಂದ ಪೂಜಕನೇ ದೇವರಿಗೆ ಅರ್ಘ್ಯಸ್ನಾನಾದಿಗಳ ಉಪಚಾರ ಮಾಡಬೇಕು. ಹೃದಯದಲ್ಲೇ, ಹೃದಯಕಮಲ ಮಂದಿರದಲ್ಲೇ ಭಗವಂತನಿದ್ದಾನೆ ಎಂದು ಭಕ್ತಿಯಿಂದ ಕಲ್ಪಿಸಿಕೊಂಡು ಮಾನಸಿಕವಾಗಿ ಈ ಉಪಚಾರಗಳನ್ನು ಭಾವಿಸಿಕೊಂಡು ಭಗವಂತನ ಪೂಜೆಯನ್ನು ಬಾಹ್ಯಸಲಕರಣೆಗಳು ಇಲ್ಲದೆಯೇ ಮಾಡಬಹುದು.

ಅದನ್ನು 'ಮಾನಸಿಕ ಪೂಜೆ' ಎಂದು ಕರೆಯುತ್ತಾರೆ. ಬಾಹ್ಯಪೂಜೆಗಿಂತ ಮಾನಸಿಕ ಪೂಜೆ ಉತ್ತಮವಾದುದು, ಶ್ರೇಷ್ಠವಾದುದು ಎಂದು ಭಕ್ತಿಶಾಸ್ತ್ರಗಳಲ್ಲಿ ಹೇಳಲಾಗಿದೆ. ಹೀಗೆ ಅರ್ಚನೆಯಲ್ಲಿ ಬಾಹ್ಯ ಮತ್ತು ಮಾನಸಿಕ ಎಂದು ಎರಡು ವಿಧಗಳಿವೆ.

ವಂದನ : ಭಗವಂತನಿಗೆ ನಮಸ್ಕಾರವನ್ನು ಮಾಡುವುದೇ ವಂದನಾಭಕ್ತಿ. ಅಂದರೆ ಭಗವಂತನ ದಿವ್ಯ ದೇವಾಲಯ. ಭಗವಂತನ ಭಕ್ತರು, ಸಾಧುಸಂತರು, ಗುರುಗಳು, ಭಗವಂತನ ಚಿತ್ರಪ್ರತಿಮೆಗಳು, ಇವರಿಗೆಲ್ಲಾ ನಮಸ್ಕಾರವನ್ನು ಭಕ್ತಿಯಿಂದ ಮಾಡಬೇಕು. ವಂದನೆಯನ್ನು ಮಾಡುವಾಗ ವಿನಯಭಾವದಿಂದ, ಗೌರವ ಪ್ರೀತಿ ಭಾವನೆಗಳಿಂದ ಎಲ್ಲರೂ ಭಗವಂತನ ಪ್ರತೀಕ ಎಂದು ನಮಸ್ಕರಿಸಬೇಕು. ವಿನಯ, ಭಗವಂತನಲ್ಲಿ ತನ್ನನ್ನು ಸಮರ್ಪಿಸಿಕೊಳ್ಳುವ ಭಾವ, ಇವುಗಳು ವಂದನಾಭಕ್ತಿಯಿಂದ ಹೆಚ್ಚಾದಂತೆ ವಂದನೆಯಿಂದ ಭಕ್ತನು ದೇವರ ಕೃಪೆಗೆ, ಆಶೀರ್ವಾದಕ್ಕೆ ಪಾತ್ರನಾಗುತ್ತಾನೆ.

ದಾಸ್ಯ (ಭಕ್ತಿ) : ಭಕ್ತರಿಗೆ, ಸಂತರಿಗೆ, ದೇವರ ಸಂಸ್ಥೆ (ದೇವಾಲಯ, ಸಂಘ), ಜನ ಸಮೂಹಕ್ಕೆ, ಸಮಾಜಕ್ಕೆ, ದೇಶಕ್ಕೆ ಹೀಗೆ ಹಲವು ರೀತಿಯಲ್ಲಿ ಭಕ್ತನು ತನ್ನಿಂದಾದ ಸೇವೆಯನ್ನು ಕೆಲಸಗಳ ಮೂಲಕ, ತ್ಯಾಗದಾನಗಳ ಮೂಲಕ ಸಲ್ಲಿಸಬಹುದು. ಹೀಗೆ ಸೇವೆಸಲ್ಲಿಸುವಾಗ ತಾನು ಮಾಡುವ ಎಲ್ಲಾ ಕೆಲಸಗಳೂ ಭಗವಂತನಿಗೇ ಸೇರಿದ್ದು, ಅವನ ಪ್ರೀತ್ಯರ್ಥವಾಗಿ ಸಲ್ಲಿಸುತ್ತೇನೆ ಎಂದು ನೆನೆಸುತ್ತಾ ಸೇವೆಯನ್ನು ಮಾಡಬೇಕು. ಇದರಿಂದ ಹೃದಯ ಪರಿಶುದ್ಧವಾಗಿ, ವಿಶಾಲಭಾವನೆ, ಪ್ರೀತಿಗಳು ಹೆಚ್ಚಾಗಿ ಭಕ್ತಿ ಬೆಳೆಯುತ್ತದೆ, ಪರಿಪಕ್ವವಾಗುತ್ತದೆ. ಒಟ್ಟಿನಲ್ಲಿ ಭಗವಂತನ ಹೆಸರಿನಲ್ಲಿ ಭಕ್ತನು ಕೈಗೊಳ್ಳುವ ಸೇವಾಕೆಲಸಗಳು ದಾಸ್ಯಭಕ್ತಿಯಾಗುತ್ತದೆ.

ಸಖ್ಯ (ಭಕ್ತಿ) : ಯಾರನ್ನೂ ದ್ವೇಷಿಸದೆ, ಎಲ್ಲರನ್ನೂ ಪ್ರೀತಿಸುತ್ತಾ, ಎಲ್ಲರೂ ಭಗವಂತನ ರೂಪ ಎಂದು ತಿಳಿದು, ಸರ್ವರೊಡನೆ ಸ್ನೇಹ ಮೈತ್ರಿ ಸಖ್ಯಗಳಿಂದ ಕೂಡಿ ಸಹಕಾರ ದೃಷ್ಟಿಯಿಂದ ವ್ಯವಹರಿಸುತ್ತಾ ಜೀವಿಸುವುದೇ ಸಖ್ಯಭಕ್ತಿ. ಈ ಸಾಧನೆಯಿಂದ ಭಕ್ತನು ಎಲ್ಲೆಲ್ಲೂ ಭಗವಂತನನ್ನು ಕಾಣಲು ಸಾಧ್ಯವಾಗುತ್ತದೆ. ಅಲ್ಲದೆ ಪ್ರೀತಿ ದಯೆ ಅನುಕಂಪಗಳು ಬೆಳೆದು ಭಕ್ತಿ ವರ್ಧಿಸಲು ಸಹಕಾರಿಯಾಗುತ್ತದೆ.

ಆತ್ಮನಿವೇದನ : ಹಿಂದಿನ ಎಂಟು ವಿಧದ ಭಕ್ತಿಯನ್ನು ಅನುಷ್ಠಾನ ಮಾಡಿಕೊಂಡು ಬಂದಂತೆ ಭಕ್ತನು ಎಲ್ಲವೂ ಭಗವಂತನ ಅಧೀನ, ಆಗುಹೋಗುಗಳು ಎಲ್ಲವೂ ಭಗವಂತನ ಇಚ್ಛೆಯಂತೆ ಆಗುತ್ತದೆ ಎಂಬ ದೃಷ್ಟಿಯನ್ನು, ದೃಢವಿಶ್ವಾಸವನ್ನು ತಳೆಯುತ್ತಾನೆ. ಆಗ ತನ್ನದೆಂದು ಯಾವುದೂ ಇಲ್ಲ ಎಂದು ಹೇಳುತ್ತಾ ತನ್ನ ಸರ್ವಸ್ವವನ್ನೂ ಭಗವಂತನಿಗೆ ಅರ್ಪಿಸುತ್ತಾನೆ. 'ನಾನು, ನನ್ನದು' ಎಂಬುದರ ಬದಲು 'ನೀನು, ನಿನ್ನದು' ಎಂದು ಭಕ್ತನು ಹೇಳುತ್ತಾನೆ. ಇದೇ ಆತ್ಮನಿವೇದನಾಭಕ್ತಿ. ಭಕ್ತನು ಭಗವಂತನಿಗೆ ತನ್ನ ಆತ್ಮವನ್ನು ನಿವೇದಿಸಿ ತನ್ನತನವೆಂಬುದು ಏನೂ ಇಲ್ಲ ಎಂದು ಭಾವಿಸುವುದೇ ಆತ್ಮನಿವೇದನಾ ಭಕ್ತಿ. ಆತ್ಮನಿವೇದನದ ಹಂತಕ್ಕೆ ಭಕ್ತನು ಬಂದಾಗ ಅವನಿಗೆ ಪ್ರೀತಿಯ ದಿವ್ಯ ಅನುಭವ ಆಗಿ ಆ ಪ್ರೀತಿಯ ಮೂಲಕ ಅವನು ಭಗವಂತನನ್ನು ಕಾಣುತ್ತಾ ಭಗವಂತನ ಒಡನೆ ಒಂದೊಂದು ಭಾವಗಳಿಂದ ವ್ಯವಹರಿಸುವವನಾಗುತ್ತಾನೆ. ಹೀಗೆ ವಿವಿಧ ಭಾವಗಳಿಂದ

ಕೂಡಿದ ಭಕ್ತಿಯು ಸ್ಥಿತಿಯೇ ಪರಾಭಕ್ತಿ. ಪರಾಭಕ್ತಿಯು ಭಕ್ತಿಯೋಗದ ಕೊನೆಯ ಹಂತ. ಆತ್ಮನಿವೇದನಾಭಕ್ತಿಯ ಹಂತವನ್ನು ಏರಿ ನವವಿಧಭಕ್ತಿಯನ್ನು ತನ್ಮೂಲಕ ಪೂರ್ತಿಯಾಗಿ ಅನುಷ್ಠಾನಮಾಡಿದಾಗ ಭಕ್ತನು ಪರಿಪಕ್ವವಾಗಿ ಪರಾಭಕ್ತಿಯ ಸಾಧನೆಗೆ, ಫಲಸ್ವೀಕಾರಕ್ಕೆ ಅರ್ಹನಾಗುತ್ತಾನೆ.

ಪರಾಭಕ್ತಿ : ವೈರಾಗ್ಯ ಮತ್ತು ಅನುರಾಗಗಳು ಪರಾಭಕ್ತಿಯ ಪ್ರಥಮ ಸೋಪಾನಗಳಾಗಿವೆ. ಭಗವಂತನೊಬ್ಬನೇ ಬೇಕು, ಅವನಿಗೆ ಸಂಬಂಧಪಟ್ಟ ಸುಖವೇ ನಿಜವಾದ ಸುಖ, ಜೀವನದ ಈ ಲೌಕಿಕ ಸುಖಗಳು ಅಲ್ಲ ಎಂಬ ಭಾವನೆ ತಳೆದು ಲೌಕಿಕ ಸುಖಗಳ ಆಸಕ್ತಿ ಒಂದಿಷ್ಟೂ ಇಲ್ಲದಿರುವಿಕೆಯೇ ವೈರಾಗ್ಯ. ಅನುರಾಗ ಎಂದರೆ ಭಗವಂತನ ಪ್ರೀತಿಯ ಸುಖದಲ್ಲಿ ಅನನ್ಯವಾದ ಬಯಕೆಯಾಗಿದೆ. ವೈರಾಗ್ಯಕ್ಕೆ ಅನುರಾಗವು ಅಗತ್ಯವಾಗಿರುವಂತೆ ಅನುರಾಗಕ್ಕೆ ವೈರಾಗ್ಯವೂ ಅಗತ್ಯ. ಇವು ಒಂದಕ್ಕೊಂದು ಪೂರಕವೇ ವಿನಾ ಬೇರೆಯಾಗಿರುವುದಿಲ್ಲ. ಪರಮಪ್ರೇಮರೂಪವಾದುದೇ ಪರಾಭಕ್ತಿ ಎಂದು ಭಕ್ತಿಶಾಸ್ತ್ರದಲ್ಲಿ ಹೇಳಿದೆ. ಭಗವಂತನಲ್ಲಿ ಸಂಪೂರ್ಣ ಶರಣಾಗಿ ಕೆಲಸಕಾರ್ಯಗಳೆಲ್ಲವನ್ನೂ ನಿರ್ವಹಿಸುವುದು ಮತ್ತು ಕ್ಷಣಕಾಲ ದೇವರನ್ನು ಮರೆತರೂ ಕೂಡ ಅತ್ಯಂತ ವ್ಯಾಕುಲಪಡುವುದೇ ಪರಾಭಕ್ತಿ ಎಂದು ಮತ್ತೊಂದು ವಿವರಣೆಯನ್ನು ಭಕ್ತಿಶಾಸ್ತ್ರಗಳಲ್ಲಿ ನೀಡಲಾಗಿದೆ. ಪರಾಭಕ್ತಿಯ ಗುರಿ ನಿಷ್ಕಾಮ, ನಿರ್ವ್ಯಾಜ, ನಿರ್ಭಯವಾದ ಪ್ರೇಮಪ್ರಾಪ್ತಿಯೇ ವಿನಾ ಇನ್ನೇನೂ ಅಲ್ಲ. ಭಕ್ತನಲ್ಲಿ ಇಂತಹ ಪರಾಭಕ್ತಿ ಉಂಟಾದರೆ ಅವನಿಗೆ ಭಗವಂತನ ಕೃಪೆಯಿಂದ ಸಮಸ್ತ ಕಲ್ಯಾಣವೂ ಸಿದ್ಧಿಸಿ ಭವಬಂಧನದಿಂದ ಮುಕ್ತನಾಗುತ್ತಾನೆ. ಪರಾಭಕ್ತಿ ಅಥವಾ ಪರಮಪ್ರೇಮ ಹೇಗಿದೆ—ಎಂದು ಹೇಳಲು ಸಾಧ್ಯವಿಲ್ಲ. ಅದು ಅನುಭವವೇದ್ಯವಾದುದೇ ವಿನಾ ವರ್ಣನೆಗೆ ಸಿಲುಕುವಂತಹದ್ದಲ್ಲ. ಪರಾಭಕ್ತಿಯನ್ನು ಪಡೆದ ಭಕ್ತಿಯೋಗಿಯು ಭಗವಂತನನ್ನೇ ಎಲ್ಲಾ ಕಡೆಗಳಲ್ಲಿಯೂ ನೋಡುತ್ತಾನೆ. ಭಗವಂತನ ವಿಷಯವನ್ನೇ ಕೇಳುತ್ತಾನೆ. ಅವನ ವಿಷಯವನ್ನೇ ಮಾತನಾಡುತ್ತಾನೆ. ಅವನನ್ನೇ ಚಿಂತಿಸುತ್ತಾನೆ.

ಪರಾಭಕ್ತಿಯನ್ನು ಪಡೆದ ಭಕ್ತನು ಮಾಯೆಯನ್ನು ದಾಟುತ್ತಾನೆ, ಜೊತೆಗೆ ಇತರರನ್ನೂ ದಾಟಿಸುತ್ತಾನೆ ಎಂದು ಭಕ್ತಿಶಾಸ್ತ್ರದಲ್ಲಿ ಹೇಳಲಾಗಿದೆ.

ಪರಾಭಕ್ತಿಯಲ್ಲಿ ಐದು ವಿಧಗಳು ಇದ್ದು ಸಾಧಕನು ಅವುಗಳಲ್ಲಿ ಒಂದೊಂದರ ಮೂಲಕ ಸಾಧನೆಮಾಡಿ ಭಗವಂತನನ್ನು ಸೇರಲು ಸಾಧ್ಯವಿದೆ. ಅವು ಯಾವುವೆಂದರೆ :

(೧) ಶಾಂತ, (೨) ದಾಸ್ಯ, (೩) ಸಖ್ಯ, (೪) ವಾತ್ಸಲ್ಯ, (೫) ಮಧುರ.

ಶಾಂತಭಾವ : ಶಾಂತಸ್ವಭಾವದಿಂದ ಕೂಡಿ ಜಗತ್ತಿನಲ್ಲಿ ಯಾವ ಗೊಂದಲವನ್ನೂ ಉಂಟುಮಾಡದೆ, ಸೌಮ್ಯರೀತಿಯಲ್ಲಿ ಬಾಳುತ್ತ ಭಗವಂತನನ್ನು ಪ್ರೀತಿಸುತ್ತಾ ಭಗವಂತನೊಡನೆ ಪ್ರೀತಿ ಮತ್ತು ಪ್ರೇಮದ ಸಂಬಂಧವನ್ನು ಇಟ್ಟುಕೊಳ್ಳುವುದೇ ಶಾಂತಭಕ್ತಿ. ಭಗವಂತನು ವೈಭವ, ಶ್ರೀಗಳಿಂದ ಕೂಡಿದವನು ಎಂದು ಭಕ್ತನು ತಿಳಿಯುತ್ತಾ ಅವನೊಡನೆ ಪ್ರೀತಿಯ, ಪ್ರೇಮದ ಅತಿಹತ್ತಿರದ ಸಂಬಂಧವನ್ನು ಇಟ್ಟುಕೊಳ್ಳುತ್ತಾನೆ. ಭಗವಂತನ ಪ್ರೀತಿ ವಿನಾ ಬೇರೇನೂ ಶಾಂತಭಕ್ತನಿಗೆ ಬೇಕಾಗಿರುವುದಿಲ್ಲ.

ದಾಸ್ಯಭಾವ: ಭಗವಂತನು ಒಡೆಯ, ತಾನು ಭಗವಂತನ ದಾಸ, ಸೇವಕ ಎಂಬ ಭಾವನೆಯಿಂದ ಭಗವಂತನೊಡನೆ ಸಂಬಂಧವನ್ನು ಇಟ್ಟುಕೊಂಡು ಬಾಳುವುದೇ ದಾಸ್ಯ ಭಕ್ತಿ. ಈ ಭಾವದಲ್ಲಿ ಭಕ್ತನು ಭಗವಂತನ ದಾಸನಾಗುತ್ತಾನೆ. ಅವನ ಜೀವನವಿಡೀ ಭಗವಂತನ ಸೇವೆಯಾಗುತ್ತದೆ.

ಸಖ್ಯಭಾವ: ಭಗವಂತನು ಆತ್ಮೀಯನು, ಹತ್ತಿರದ ಸ್ನೇಹಿತನು, ಹಿತಕಾರಿ ಹಾಗೂ ಸಹಕಾರಿ ಎಂಬ ಭಾವನೆಯನ್ನು ತಳೆದು ಭಗವಂತನೊಡನೆ ಪ್ರೀತಿಯ ಸಂಬಂಧ ಇಟ್ಟು ಕೊಳ್ಳುವುದೇ ಸಖ್ಯಭಕ್ತಿ. ಮಾನವರ ದಿನನಿತ್ಯದ ಜೀವನದಲ್ಲಿ ಕಂಡುಬರುವ ಸ್ನೇಹ-ಸಲಿಗೆಗಳು ಈ ಸಖ್ಯಭಕ್ತಿಯಲ್ಲಿ ಕಾಣುತ್ತವೆ. ಭಗವಂತನು ಭಕ್ತನ ದೃಷ್ಟಿಯಲ್ಲಿ ನಿಕಟ ಸ್ನೇಹಿತನೂ ರಕ್ಷಕನೂ ಆಗುತ್ತಾನೆ. ಭಕ್ತನು ಭಗವಂತನೊಡನೆ ತನ್ನ ಹೃದಯಪೂರ್ವಕ ವಾದ ಸಲಿಗೆ-ಸ್ನೇಹ-ಪ್ರೀತಿಗಳಿಂದ ವ್ಯವಹರಿಸುತ್ತಾನೆ. ಇದೇ ಸಖ್ಯಭಾವ.

ವಾತ್ಸಲ್ಯಭಾವ: ವಾತ್ಸಲ್ಯಭಾವದಲ್ಲಿ ಭಕ್ತನು ಭಗವಂತನನ್ನು ತನ್ನ ಮಗು ಎಂದು ಭಾವಿಸುತ್ತಾನೆ. ತಾಯಿ–ಮಗುವಿನ ಒಳಗಿನ ಪ್ರೀತಿಯೇ ವಾತ್ಸಲ್ಯಭಕ್ತಿಯ ಸ್ವರೂಪ ವಾಗಿದೆ. ದೇವರು ಸರ್ವಶಕ್ತ, ಸೃಷ್ಟಿಸ್ಥಿತಿಸಂಹಾರಗಳ ಕರ್ತೃ ಎಂಬ ಆತನ ದಿವ್ಯಶಕ್ತಿ ಗಳ ಕಲ್ಪನೆಯಿಂದ ಭಕ್ತನಿಗೆ ದೇವರ ಬಗ್ಗೆ ಭಯದ ಭಾವನೆ ಹೋಗಲು ಈ ಭಕ್ತಿಯು ಸಹಕರಿಸುತ್ತದೆ. ಪ್ರೀತಿಯೇ ಭಕ್ತಿಯೋಗದ ಜೀವಾಳ, ನಿಜವಾದ ಪ್ರೀತಿಗೆ ಭಯ-ಫಲಾಪೇಕ್ಷೆ ಭೇದಗಳು ಸೇರುವಂತಿಲ್ಲ. ಹಾಗಾಗಿ ಪರಿಶುದ್ಧಪ್ರೀತಿಯು ನೆಲೆಗೊಳ್ಳುವಿಕೆ ಗಾಗಿ ತಾಯಿ–ಮಗುವಿನ ಭಾವನೆಯ ಸಂಬಂಧದ, ವಾತ್ಸಲ್ಯಭಕ್ತಿಯನ್ನು ಭಕ್ತನು ಅಭ್ಯಾಸಮಾಡುತ್ತಾನೆ. ಈ ಭಾವದಲ್ಲಿ ಭಕ್ತನು ಭಗವಂತನಿಂದ ಏನನ್ನೂ ಬಯಸದೆ ಭಗವಂತನನ್ನು ಪ್ರೀತಿಸುತ್ತಾನೆ. ವಾತ್ಸಲ್ಯಭಾವದಿಂದ ಅವನೊಡನೆ ಸಂಬಂಧವನ್ನು ಇಟ್ಟುಕೊಳ್ಳುತ್ತಾನೆ.

ಮಧುರಭಾವ: ಮಧುರ ಎಂದರೆ ಸಿಹಿ. ಎಂದರೆ ಹಿತವಾದ, ವಿರುದ್ಧವಲ್ಲದ, ಆನಂದದಾಯಕವಾದ ಅನುಭವ ಎಂದು ಸ್ಥೂಲವಾಗಿ ಹೇಳಬಹುದು. ಮಧುರಭಾವ ಎಂದರೆ ಭಕ್ತನು ಭಗವಂತನ ಪ್ರೀತಿಯನ್ನು ಪರಿಶುದ್ಧವಾದ ರೀತಿಯಲ್ಲಿ ಅನುಭವಿಸು ವುದೇ ಆಗಿರುತ್ತದೆ. ಈ ಭಾವದಲ್ಲಿ ಮೊದಲು ಪತಿ–ಪತ್ನಿಯರ, ಪ್ರಣಯ-ಪ್ರಣಯಿನಿ ಯರ ಪ್ರೇಮದ ಕಲ್ಪನೆ ಇದ್ದು ಕೊನೆಗೆ ಭಕ್ತ–ಭಗವಂತ–ಭಕ್ತಿ ಈ ಮೂರೂ ಒಂದಾಗಿ ಸಚ್ಚಿದಾನಂದ ಅನುಭವವನ್ನು ಭಕ್ತನು ಪಡೆಯುತ್ತಾ ಆನಂದದಲ್ಲಿ ಲೀನವಾಗುತ್ತಾನೆ. ಸಕ್ಕರೆಗೊಂಬೆಯೊಂದು ಸಕ್ಕರೆಪಾಕದಲ್ಲಿ ಕರಗಿ ಒಂದಾಗುವಂತೆ ಭಕ್ತನು ಭಗವಂತನಲ್ಲಿ ಒಂದಾಗುತ್ತಾನೆ. ಭಕ್ತನು ಮಧುರಭಾವದ ಭಕ್ತಿಯಲ್ಲಿ ಭಗವಂತ ನನ್ನವನು, ನಾನು ಭಗವಂತನಿಗೆ ಸೇರಿದವನು ಎಂಬ ಪ್ರಣಯಸಂಬಂಧವನ್ನು ಬೆಳೆಸುತ್ತಾನೆ, ಪ್ರಣಯವು ಸರ್ವವೂ ಭಗವಂತ ಎಂದಾಗಿ ಭಕ್ತ-ಭಕ್ತಿ-ಭಗವಂತ ಎಲ್ಲವೂ ಒಂದಾಗುತ್ತದೆ. ಇಲ್ಲಿಗೆ ಮಧುರಭಾವದ ಗುರಿ ತಲಪಿದಂತಾಗಿ ಭಕ್ತಿಯೋಗಿಯು ದಿವ್ಯ ಆನಂದದ ಅನುಭವ ವನ್ನು ಪಡೆದು ಸರ್ವಬಂಧನಗಳಿಂದ ಮುಕ್ತನಾಗುತ್ತಾನೆ.

ಈ ಐದು ತರಹದ ಭಕ್ತಿಯ ಭಾವಗಳಲ್ಲಿ ಯಾವುದೇ ಒಂದನ್ನು ಅನುಸರಿಸಿದರೂ

ಭಕ್ತಿಯೋಗಿಯು ಭಗವದಾನಂದವನ್ನು ಹೊಂದಿ ಭವಬಂಧನದಿಂದ ಮುಕ್ತನಾಗುತ್ತಾನೆ. ಈ ಐದು ಭಾವಗಳಲ್ಲಿ ಮೊದಲನೆಯ ಶಾಂತಭಾವವು ಒಂದನೇ ಹಂತವೆಂದೂ ಮಧುರ ಭಾವವು ಕೊನೆಯ ಹಂತವೆಂದೂ ಭಕ್ತಿಯೋಗಿಯು ಮೊದಲನೇ ಹಂತದಿಂದ ಆರಂಭಿಸಿ ಸಾಧನೆ ಮಾಡುತ್ತಾ ಕೊನೆಯ ಹಂತವಾದ ಮಧುರಭಾವವನ್ನು ತಲಪಿ ಭಕ್ತಿಯೋಗ ಸಾಧನೆಯ ಪೂರ್ಣತೆಯನ್ನು ಪಡೆಯಬೇಕೆಂದೂ, ಈ ಪಂಚಹಂತಗಳಲ್ಲಿ ಪ್ರತಿಯೊಂದಕ್ಕಿಂತ ಮುಂದಿನದು ಉತ್ತಮವಾಗಿದ್ದು ಮಧುರಭಾವವು ಕಡೆಯ ಹಾಗೂ ಸರ್ವಭಾವಗಳ ಮಿಲನದ ಸರ್ವೋತ್ಕೃಷ್ಟಭಾವ ಎಂದೂ ಸ್ವಾಮಿ ವಿವೇಕಾನಂದರು ಹೇಳಿರುತ್ತಾರೆ. (ಸ್ವಾಮಿ ವಿವೇಕಾನಂದರ 'ಭಕ್ತಿಯೋಗ' ಗ್ರಂಥವನ್ನು ನೋಡಿರಿ.)

ಹೀಗೆ ಭಕ್ತಿಯೋಗವು ಮನುಷ್ಯನ ಸಹಜವಾದ ಗುಣಧರ್ಮ, ಸ್ವಭಾವಗಳಿಗೆ ಹಂತ ಹಂತದಲ್ಲಿ ಶಿಕ್ಷಣ ನೀಡಿ ಸುಗಮವಾಗಿ ಸಾಗಿಸಿಕೊಂಡು ಬಂದು ಮುಕ್ತಿಯನ್ನು ನೀಡಲು ನೆರವಾಗುತ್ತದೆ. ಪ್ರಪಂಚದಲ್ಲಿ ಸಂಸಾರದ ವಿವಿಧ ಪರಿಸ್ಥಿತಿಗಳಲ್ಲಿದ್ದುಕೊಂಡು ದೈನಂದಿನ ಜೀವನದ ಅನುಭವ-ಕರ್ತವ್ಯಗಳನ್ನು ಒಳಗೊಂಡು ಜೀವನವನ್ನು ನಿರ್ವಹಿಸುತ್ತಾ, ಭಕ್ತನು ಭಕ್ತಿಯೋಗವನ್ನು ಅನುಷ್ಠಾನಮಾಡಿ ಮುಕ್ತಿಪಡೆಯಲು ಸಾಧ್ಯವಿದೆ. ತನ್ನಲ್ಲಿರುವ ಸಹಜವಾದ ಗುಣಾವಗುಣಗಳನ್ನು ಭಕ್ತಿಯೋಗದ ಮೂಲಕ ಭಕ್ತಿಸಾಧನೆಯಲ್ಲಿ ಅಳವಡಿಸಿ ಶ್ರದ್ಧೆ, ಪೂಜೆ, ಪ್ರಾರ್ಥನೆ ಮತ್ತು ಶರಣಾಗತಿಯ ಮೂಲಕ ಭಗವಂತನನ್ನು ಪಡೆಯಲು ಸಾಧ್ಯವಿದೆ ಎಂಬುದು ಭಕ್ತಿಯೋಗದ ನಿಶ್ಚಯವಾಗಿರುತ್ತದೆ. ಹಾಗಾಗಿ ಹಿಂದೆ ಹೇಳಿದಂತೆ ಭಕ್ತಿಯೋಗವು ಯೋಗಮಾರ್ಗಗಳಲ್ಲಿ ಅತ್ಯಂತ ಸರಳವೂ ಸುಗಮವೂ ಆಗಿದೆ ಎಂದು ಪ್ರಸಿದ್ಧವಾಗಿರುತ್ತದೆ.

ಭಕ್ತಿಯೋಗದ ಕುರಿತಾಗಿ ನಾರದಭಕ್ತಿಸೂತ್ರ, ಶಾಂಡಿಲ್ಯಭಕ್ತಿಸೂತ್ರ ಮತ್ತು ಶ್ರೀಮದ್ ಭಗವದ್ಗೀತೆಯಿಂದ ಕೆಲವು ಆಧಾರಸೂತ್ರಗಳನ್ನು ಮತ್ತು ಶ್ಲೋಕಗಳನ್ನು ವಿಷಯದ ಸ್ಪಷ್ಟೀಕರಣಕ್ಕಾಗಿ ಈ ಕೆಳಗೆ ನೀಡಲಾಗಿದೆ :

**೧. ಸಾ ತ್ವಸ್ಮಿನ್ ಪರಮಪ್ರೇಮರೂಪಾ ॥**

ಅದು (ಭಕ್ತಿಯು) ಇವನಲ್ಲಿ (ಈಶ್ವರನಲ್ಲಿ) ಪರಮಪ್ರೇಮರೂಪವಾದುದು.

**೨. ಅಮೃತಸ್ವರೂಪಾ ಚ ॥**

—ನಾರದಭಕ್ತಿಸೂತ್ರಗಳು, ಸೂತ್ರ ೨–೩

ಅಮೃತಸ್ವರೂಪವೂ ಆಗಿರುವುದು.

**೩. ಸಾ ಪರಾನುರಕ್ತಿರೀಶ್ವರೇ ॥**

—ಶಾಂಡಿಲ್ಯಭಕ್ತಿಸೂತ್ರ

ಆ (ಭಕ್ತಿಯು) ಈಶ್ವರನ ಕುರಿತಾದ ಪರಮ ಅನುರಾಗವಾಗಿದೆ.

**೪. ಲೋಕೇಽಪಿ ಭಗವದ್ಗುಣಶ್ರವಣಕೀರ್ತನಾತ್ ॥**

—ನಾರದಭಕ್ತಿಸೂತ್ರಗಳು, ೩೭

ಪ್ರಪಂಚದ ಕೆಲಸದಲ್ಲಿ ನಿರತವಾಗಿರುವಾಗಲೂ ಭಗವಂತನ ಗುಣಗಳನ್ನು ಕೇಳುತ್ತಾ ಕೀರ್ತನೆ ಮಾಡುತ್ತಾ ಇರುವುದರಿಂದ (ಅದು ದೊರಕುತ್ತದೆ.)

**೫. ಮುಖ್ಯತಸ್ತು ಮಹತ್ಕೃಪಯೈವ ಭಗವತ್ಕೃಪಾಲೇಶಾದ್ವಾ ॥**

(ಪರಾಭಕ್ತಿಯು) ಮುಖ್ಯವಾಗಿ ಮಹಾತ್ಮರ ಕೃಪೆಯಿಂದಲೂ, ಭಗವಂತನ ಕೃಪಾಲೇಶದಿಂದಲೂ (ಲಭಿಸುವುದು.)

**೬. ಮಹತ್ಸಂಗಸ್ತು ದುರ್ಲಭೋಽಗಮ್ಯೋಽಮೋಘಶ್ಚ ॥**

ಮಹಾತ್ಮರ ಸಂಗವು ದುರ್ಲಭ, ಅಗಮ್ಯ ಮತ್ತು ಅಮೋಘವಾದುದು.

**೭. ಲಭ್ಯತೇ ಅಪಿ ತತ್ಕೃಪಯೈವ ॥**

—ಅದೇ, ೩೮, ೩೯. ೪೦

ಆದರೂ ಭಗವಂತನ ದಯೆಯಿಂದಲೇ ಲಭಿಸುವುದು.

**೮. ತಸ್ಮಿಂಸ್ತಜ್ಜನೇ ಭೇದಾಭಾವಾತ್ ॥** —ಅದೇ, ೪೧

ಏಕೆಂದರೆ ಭಗವಂತನಿಗೂ ಅವನ ಭಕ್ತರಿಗೂ ಯಾವ ಭೇದಭಾವವೂ ಇಲ್ಲ.

**೯. ದುಸ್ಸಂಗಃ ಸರ್ವಥೈವ ತ್ಯಾಜ್ಯಃ ॥** —ಅದೇ, ೪೩

ದುಸ್ಸಂಗವನ್ನು ಎಲ್ಲಾ ವಿಧದಿಂದಲೂ ತ್ಯಜಿಸಬೇಕು.

**೧೦. ಅನಿರ್ವಚನೀಯಂ ಪ್ರೇಮಸ್ವರೂಪಮ್ ॥** —ಅದೇ, ೫೧

ಪ್ರೇಮದ ಸ್ವರೂಪ ಅನಿರ್ವಚನೀಯವಾದುದು.

**೧೧. ತತ್ಪ್ರಾಪ್ಯ ತದೇವ ಅವಲೋಕಯತಿ, ತದೇವ ಶೃಣೋತಿ, ತದೇವ ಭಾಷಯತಿ, ತದೇವ ಚಿಂತಯತಿ ॥** —ಅದೇ, ೫೫

ಪರಮಪ್ರೇಮ ಪ್ರಾಪ್ತವಾದರೆ ಭಗವಂತನನ್ನೇ (ಎಲ್ಲಾ ಕಡೆಯಲ್ಲಿಯೂ) ನೋಡುವನು, ಅವನ ವಿಷಯವನ್ನೇ ಕೇಳುವನು, ಅವನ ವಿಷಯವನ್ನೇ ಕುರಿತು ಮಾತನಾಡುವನು, ಅವನನ್ನೇ ಕುರಿತು ಚಿಂತಿಸುವನು.

**೧೨. ಲೋಕಹಾನೌ ಚಿಂತಾ ನ ಕಾರ್ಯಾಃ ನಿವೇದಿತಾತ್ಮಲೋಕವೇದತ್ವಾತ್ ॥**

—ಅದೇ, ೬೧

ಭಕ್ತನು ಪ್ರಪಂಚದ ಕಷ್ಟನಷ್ಟಗಳಿಂದ ವ್ಯಥಿತನಾಗಬೇಕಾಗಿಲ್ಲ. ಅವನು ತನ್ನ ಆತ್ಮ, ಲೋಕ, ವೇದಗಳನ್ನೆಲ್ಲಾ ಭಗವಂತನಿಗೆ ಅರ್ಪಿಸಿರುವನು.

**೧೩. ತದರ್ಪಿತ-ಅಖಿಲ-ಆಚಾರಃ ಸನ್ ಕಾಮಕ್ರೋಧಾಭಿಮಾನಾದಿಕಂ ತಸ್ಮಿನ್ನೇವ ಕರಣೀಯಮ್ ॥** —ಅದೆ, ೬೫

ಸರ್ವಕರ್ಮಗಳನ್ನು ಭಗವಂತನಿಗೆ ಅರ್ಪಿಸಬೇಕು. ಕಾಮ ಕ್ರೋಧ ಅಭಿಮಾನ ಮೊದಲಾದುವುಗಳನ್ನು ದೇವರ ಕಡೆಗೆ ತಿರುಗಿಸಬೇಕು.

**೧೪. ಭಕ್ತಾಃ ಏಕಾಂತಿನೋ ಮುಖ್ಯಾಃ ॥** —ಅದೇ, ೬೭

ಭಕ್ತರಲ್ಲಿ ಏಕಾಂತಿಕ ಭಕ್ತಿಯುಳ್ಳವರೇ ಶ್ರೇಷ್ಠರು.

**೧೫. ತೀರ್ಥೀಕುರ್ವನ್ತಿ ತೀರ್ಥಾನಿ, ಸುಕರ್ಮೀಕುರ್ವನ್ತಿ ಕರ್ಮಾಣಿ, ಸಚ್ಛಾಸ್ತ್ರೀಕುರ್ವಂತಿ ಶಾಸ್ತ್ರಾಣಿ ॥** —ಅದೇ, ೬೯

ಭಕ್ತರು ತೀರ್ಥಗಳನ್ನು ಪವಿತ್ರಮಾಡುವರು. ಸಾಧಾರಣ ಕರ್ಮವನ್ನು ಸಂಕರ್ಮ ಮಾಡುವರು, ಶಾಸ್ತ್ರಗಳನ್ನು ಸತ್‌ಶಾಸ್ತ್ರಗಳನ್ನಾಗಿ ಮಾಡುವರು.

**೧೬. ನಾಸ್ತಿ ತೇಷು ಜಾತಿ-ವಿದ್ಯಾ-ರೂಪ-ಕುಲ-ಧನ-ಕ್ರಿಯಾದಿಭೇದಃ ॥**

—ಅದೇ, ೭೨

ಭಕ್ತರಲ್ಲಿ ಜಾತಿ ವಿದ್ಯಾ ಕುಲ ರೂಪ ಧನ ಕ್ರಿಯಾದಿಗಳ ಭೇದಗಳಿಲ್ಲ.

**೧೭. ಅಹಿಂಸಾಸತ್ಯಶೌಚದಯಾಽಽಸ್ತಿಕ್ಯಾದಿಚಾರಿತ್ರ್ಯಾಣಿ ಪರಿಪಾಲನೀಯಾನಿ ॥**

—ಅದೇ, ೭೮

ಭಕ್ತನು ಅಹಿಂಸೆ, ಸತ್ಯ, ಶೌಚ, ದಯೆ, ಆಸ್ತಿಕ್ಯಬುದ್ಧಿ ಮುಂತಾದ ಗುಣಗಳನ್ನು ರೂಢಿಸಿಕೊಳ್ಳಬೇಕು.

**೧೮. ಗುಣಮಾಹಾತ್ಮ್ಯಾಸಕ್ತಿ-ರೂಪಾಸಕ್ತಿ-ಸ್ಮರಣಾಸಕ್ತಿ-ದಾಸ್ಯಾಸಕ್ತಿ-ಸಖ್ಯಾಸಕ್ತಿ-ವಾತ್ಸಲ್ಯಾಸಕ್ತಿ-ಕಾಂತಾಸಕ್ತಿ-ಆತ್ಮನಿವೇದನಾಸಕ್ತಿ-ಪರಮವಿರಹಾಸಕ್ತಿ-ರೂಪಾ ಏಕಧಾ ಅಪಿ ಏಕಾದಶಧಾ ಭವತಿ.**

—ಅದೇ, ೮೨

ಭಕ್ತಿ ಒಂದೇ ಆದರೂ ಅದು ಹನ್ನೊಂದು ರೀತಿಯಲ್ಲಿ ವ್ಯಕ್ತವಾಗುವುದು: ಗುಣ ಮಾಹಾತ್ಮ್ಯದಲ್ಲಿ ಆಸಕ್ತಿ, ರೂಪದಲ್ಲಿ ಆಸಕ್ತಿ, ಪೂಜೆಯಲ್ಲಿ ಆಸಕ್ತಿ, ಸ್ಮರಣದಲ್ಲಿ ಆಸಕ್ತಿ, ದಾಸ್ಯದಲ್ಲಿ ಆಸಕ್ತಿ, ಸಖ್ಯದಲ್ಲಿ ಆಸಕ್ತಿ, ವಾತ್ಸಲ್ಯದಲ್ಲಿ ಆಸಕ್ತಿ, ಸತೀಭಾವದಲ್ಲಿ ಆಸಕ್ತಿ, ಆತ್ಮನಿವೇದನೆಯಲ್ಲಿ ಆಸಕ್ತಿ.

**೧೯. ಭಕ್ತಿಶಾಸ್ತ್ರಾಣಿ ಮನನೀಯಾನಿ ತದುದ್ಬೋಧಕ ಕರ್ಮಾಣಿ ಕರಣೀಯಾನಿ ॥**

—ಅದೇ, ೭೬

ಭಕ್ತಿಶಾಸ್ತ್ರವನ್ನು ಮನನಮಾಡಬೇಕು. ಅದನ್ನು ವೃದ್ಧಿಗೊಳಿಸುವ ಕರ್ಮಗಳನ್ನು ಮಾಡುತ್ತಿರಬೇಕು.

**೨೦. ತ್ರಿಸತ್ಯಸ್ಯ ಭಕ್ತಿರೇವ ಗರೀಯಸೀ, ಭಕ್ತಿರೇವ ಗರೀಯಸೀ ॥** —ಅದೇ, ೮೧

ಶಾಶ್ವತ ವಸ್ತುವಿನ ಭಕ್ತಿಯೇ ಶ್ರೇಷ್ಠ, ಭಕ್ತಿಯೇ ಶ್ರೇಷ್ಠ.

**ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥**

—ಗೀತಾ, ಅಧ್ಯಾಯ ೪, ಶ್ಲೋಕ ೧೧

ಯಾರು ನನ್ನನ್ನು ಯಾವ ರೀತಿಯಲ್ಲಿ ಭಜಿಸಿ ಆಶ್ರಯವನ್ನು ಬಯಸಿ ಬರುತ್ತಾರೋ ಅವರಿಗೆ ಅದೇ ರೀತಿಯಲ್ಲಿ ನಾನು ಅನುಗ್ರಹಿಸುತ್ತೇನೆ. ಮನುಷ್ಯರು ಅನುಸರಿಸುವ ಎಲ್ಲಾ ಪ್ರಕಾರದ ಹಾದಿಗಳೂ ಕೂಡ ನನ್ನವೇ ಆಗಿದ್ದು ಅವು ನನ್ನ ಎಡೆಗೇ ಬಂದು ಸೇರುತ್ತವೆ.

**ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥**

—ಗೀತಾ, ಅಧ್ಯಾಯ ೭, ಶ್ಲೋಕ ೧೬

ಆರ್ತ, ಜಿಜ್ಞಾಸು, ಅರ್ಥಾರ್ಥಿ ಮತ್ತು ಜ್ಞಾನಿ ಎಂಬ ನಾಲ್ಕು ತರಹದ ಸುಕೃತಿಗಳಾದ ಜನರು ನನ್ನನ್ನು ಭಜಿಸುತ್ತಾರೆ.

**ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ ।**
**ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ॥**

—ಗೀತಾ, ಅಧ್ಯಾಯ ೭, ಶ್ಲೋಕ ೨೧

ಯಾವ ಯಾವ ಭಕ್ತನು ಯಾವ ಯಾವ ದೇವತಾಸ್ವರೂಪವನ್ನು ಶ್ರದ್ಧೆಯಿಂದ ಪೂಜಿಸಲು ಇಚ್ಛಿಸುತ್ತಾನೋ ಅವನವನಿಗೆ ಆಯಾಯಾ ದೇವತಾ ವಿಷಯವಾದ ಶ್ರದ್ಧೆಯನ್ನು ನಾನು ಕೊಡುವೆನು.

**ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ ।**
**ಲಭತೇ ಚ ತತಃ ಕಾಮಾನ್ ಮಯೈವ ವಿಹಿತಾನ್ ಹಿ ತಾನ್ ॥**

—ಗೀತಾ, ಅಧ್ಯಾಯ ೭, ಶ್ಲೋಕ ೨೨

ಶ್ರದ್ಧೆಯಿಂದ ಕೂಡಿದವನಾಗಿ ಆ ಭಕ್ತನು ಆ ದೇವತೆಯ ಆರಾಧನೆಯನ್ನು ಮಾಡುತ್ತಾನೆ ಮತ್ತು ಅದರಿಂದ ನನ್ನಿಂದಲೇ ಕೊಡಲ್ಪಟ್ಟು ವಿಹಿತವಾದ ಅವನ ಇಚ್ಛೆಗಳ ಪೂರೈಕೆಯನ್ನು ಪಡೆಯುತ್ತಾನೆ.

**ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।**
**ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ॥**

—ಗೀತಾ, ಅಧ್ಯಾಯ ೮, ಶ್ಲೋಕ ೨೨

ಪ್ರಾಣಿಗಳು ಯಾವನ ಒಳಗೆ ಇರುವುವೋ, ಯಾವನಿಂದ (ಈ ಜಗತ್ತು) ಇವೆಲ್ಲಾ ಪ್ರಾಪ್ತವಾಗಿದೆಯೋ ಆ ಪರಮಪುರುಷನು ಅನನ್ಯವಾದ ಭಕ್ತಿಯಿಂದ ಲಭ್ಯನು.

**ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।**
**ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥**

—ಗೀತಾ, ಅಧ್ಯಾಯ ೯, ಶ್ಲೋಕ ೧೩

ದೈವೀಸ್ವಭಾವವನ್ನು ಆಶ್ರಯಿಸಿದ ಮಹಾತ್ಮರು ಸರ್ವಭೂತಗಳಿಗೆ ಕಾರಣನೂ ಅವ್ಯಯನೂ ಆದ ನನ್ನನ್ನು ತಿಳಿದು ಅನನ್ಯಮನಸ್ಕರಾಗಿ ಭಜಿಸುತ್ತಾರೆ.

**ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ ।**
**ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥**

—ಗೀತಾ, ಅಧ್ಯಾಯ ೯, ಶ್ಲೋಕ ೧೪

ಯಾವಾಗಲೂ ನನ್ನನ್ನು ಕೀರ್ತಿಸುತ್ತಿರುವ, ಪ್ರಯತ್ನಿಸುತ್ತಿರುವ, ಭಕ್ತಿಯಿಂದ ನಮಸ್ಕರಿಸುತ್ತಿರುವ, ದೃಢವ್ರತರೂ ನಿತ್ಯಯುಕ್ತರೂ ಆದ (ಮಹಾತ್ಮರು) ನನ್ನನ್ನು ಉಪಾಸನೆ ಮಾಡುತ್ತಾರೆ.

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥**

—ಗೀತಾ, ಅಧ್ಯಾಯ ೯, ಶ್ಲೋಕ ೨೨

ಅನನ್ಯರಾಗಿ ನನ್ನನ್ನು ಧ್ಯಾನಿಸುತ್ತಿರುವ ಯಾವ ಜನರು ಉಪಾಸನೆ ಮಾಡು ತ್ತಾರೆಯೋ ಅಂತಹ ನಿತ್ಯಯುಕ್ತರಾದ ಭಕ್ತರ ಯೋಗಕ್ಷೇಮವನ್ನು ನಾನು ವಹಿಸಿ ಕೊಳ್ಳುತ್ತೇನೆ,

ಯಾಂತಿ ದೇವವ್ರತಾ ದೇವಾನ್ ಪಿತೄನ್ ಯಾಂತಿ ಪಿತೃವ್ರತಾಃ ।
ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿನೋಽಪಿ ಮಾಮ್ ॥

—ಗೀತಾ, ಅಧ್ಯಾಯ ೯, ಶ್ಲೋಕ ೨೫

ದೇವತೆಗಳಲ್ಲಿ ಭಕ್ತಿಯುಳ್ಳವರು ದೇವತೆಗಳನ್ನು ಸೇರುತ್ತಾರೆ. ಪಿತೃಭಕ್ತರು ಪಿತೃ ಗಳನ್ನು ಸೇರುವರು. ಭೂತಗಳನ್ನು ಪೂಜಿಸುವವರು ಭೂತಗಳನ್ನು ಸೇರುವರು. ನನ್ನನ್ನು (ಪರಮಾತ್ಮನನ್ನು) ಪೂಜಿಸುವವರು ನನ್ನನ್ನೇ ಸೇರುತ್ತಾರೆ.

ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।
ತದಹಂ ಭಕ್ತ್ಯುಪಹೃತಂ ಅಶ್ನಾಮಿ ಪ್ರಯತಾತ್ಮನಃ ॥

—ಗೀತಾ, ಅಧ್ಯಾಯ ೯, ಶ್ಲೋಕ ೨೬

ಯಾವನು ನನಗೆ ಎಲೆಯನ್ನಾಗಲಿ, ಹೂವನ್ನಾಗಲಿ, ಹಣ್ಣನ್ನಾಗಲಿ, ನೀರನ್ನಾಗಲಿ ಭಕ್ತಿಯಿಂದ ಕೊಡುವನೋ (ಅಂತಹ) ಶುದ್ಧಚಿತ್ತವುಳ್ಳವನು ಭಕ್ತಿಯಿಂದ ಸಮರ್ಪಿಸಿದ ಅದನ್ನು ನಾನು ಸ್ವೀಕರಿಸುತ್ತೇನೆ.

ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।
ಸಾಧುರೇವ ಸ ಮಂತವ್ಯಃ ಸಮ್ಯಗ್ ವ್ಯವಸಿತೋ ಹಿ ಸಃ ॥

ಗೀತಾ, ಅಧ್ಯಾಯ ೯, ಶ್ಲೋಕ ೩೦

ಅತ್ಯಂತ ದುರಾಚಾರಿಯಾಗಿದ್ದರೂ ಅನನ್ಯಭಕ್ತಿಯಿಂದ ನನ್ನನ್ನು ಭಜಿಸಿದರೆ ಅವನು ಸಾಧುವೆಂದೇ ತಿಳಿಯತಕ್ಕದ್ದು ; ಏಕೆಂದರೆ ಅವನು ಸರಿಯಾದ ನಿಶ್ಚಯವುಳ್ಳವನಾಗಿ ಇರುತ್ತಾನೆ.

ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ।
ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥

—ಗೀತಾ, ಅಧ್ಯಾಯ ೯, ಶ್ಲೋಕ ೩೧

ಅವನು ಬೇಗನೇ ಧರ್ಮಾತ್ಮನಾಗುತ್ತಾನೆ ಮತ್ತು ಶಾಶ್ವತವಾದ ಚಿರಶಾಂತಿಯನ್ನು ಹೊಂದುತ್ತಾನೆ. ಎಲೈ ಅರ್ಜುನ, ನನ್ನ ಭಕ್ತನು ಎಂದಿಗೂ ನಾಶವಾಗುವುದಿಲ್ಲ ಎಂದು ತಿಳಿದುಕೊ.

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥

—ಗೀತಾ, ಅಧ್ಯಾಯ ೯, ಶ್ಲೋಕ ೩೪

ನನ್ನಲ್ಲಿಯೇ ಮನಸ್ಸುಳ್ಳವನಾಗಿರು. ನನ್ನ ಭಕ್ತನಾಗಿರು. ನನ್ನನ್ನು ಪೂಜಿಸಿದವ ನಾಗಿರು. ನನ್ನನ್ನು ನಮಸ್ಕರಿಸು. ಹೀಗೆ ನಾನೇ ಪರಮಗತಿ ಎಂದು ತಿಳಿದುಕೊಂಡು ನನ್ನಲ್ಲಿ ಮನಸ್ಸನ್ನು ನಿಲ್ಲಿಸಿದರೆ, ನನ್ನನ್ನು ಹೊಂದುವೆ.

ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥

ಎಲೈ ಅರ್ಜುನ, ಸರ್ವ ಪ್ರಾಣಿಗಳನ್ನು ಯಂತ್ರಾರೂಢವಾದ ಬೊಂಬೆಗಳಂತೆ ಮಾಯೆಯಿಂದ ತಿರುಗಿಸುತ್ತಾ ಈಶ್ವರನು ಸರ್ವಜೀವರ ಹೃದಯಪ್ರದೇಶದಲ್ಲಿ ನೆಲಸಿರುತ್ತಾನೆ.

ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।
ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ॥

—ಗೀತಾ, ಅಧ್ಯಾಯ ೧೮, ಶ್ಲೋಕ ೬೧–೬೨

ಎಲೈ ಭಾರತ, ಸರ್ವಭಾವದಿಂದ ಅವನನ್ನೇ ಶರಣುಹೊಂದು, ಅವನ ಅನುಗ್ರಹ ದಿಂದ ಪರಮಶಾಂತಿಯನ್ನೂ ಶಾಶ್ವತವಾದ ಸ್ಥಾನವನ್ನೂ ಹೊಂದುವಿ.

ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್ ।
ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥

ಅವ್ಯಕ್ತದಲ್ಲಿ ಆಸಕ್ತವಾದ ಮನಸ್ಸುಳ್ಳವರಿಗೆ ಕ್ಲೇಶವು ಹೆಚ್ಚಾಗಿರುತ್ತದೆ; ಏಕೆಂದರೆ ದೇಹವಂತರಿಗೆ ಅವ್ಯಕ್ತ ಎಂಬ ಗತಿಯು ದುರ್ಲಭವಾಗಿರುತ್ತದೆ.

ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ ।
ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ॥
ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।

—ಗೀತಾ, ಅಧ್ಯಾಯ ೧೨, ಶ್ಲೋಕ ೫–೭

ಯಾರು ಸಮಸ್ತ ಕರ್ಮಗಳನ್ನು ನನ್ನಲ್ಲಿ ಅರ್ಪಿಸಿ ಮತ್ಪರರಾಗಿ ಅನನ್ಯವಾದ ಯೋಗ ದಿಂದಲೇ ನನ್ನನ್ನು ಧ್ಯಾನಿಸುತ್ತಾ ಉಪಾಸನೆ ಮಾಡುತ್ತಾರೆಯೋ ನನ್ನಲ್ಲಿ ಮನಸ್ಸುಳ್ಳ ಅಂತಹವರನ್ನು ನಾನು ಮೃತ್ಯುಸಂಸಾರಸಾಗರದಿಂದ ಶೀಘ್ರವಾಗಿ ಉದ್ಧಾರಮಾಡುತ್ತೇನೆ.

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥

—ಗೀತಾ, ಅಧ್ಯಾಯ ೧೮, ಶ್ಲೋಕ ೬೬

ಸರ್ವಧರ್ಮಗಳನ್ನೂ ಪರಿತ್ಯಾಗಮಾಡಿ ನನ್ನೊಬ್ಬನನ್ನೇ ಶರಣುಹೊಂದು. ನಾನು ನಿನ್ನನ್ನು ಸರ್ವಪಾಪಗಳಿಂದಲೂ ಬಿಡಿಸುವೆನು. ಶೋಕಿಸಬೇಡ.

ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।
ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ॥
ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।
ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಃ ಸ ಮೇ ಪ್ರಿಯಃ ॥

ಯಾವನು ಸರ್ವಪ್ರಾಣಿಗಳನ್ನು ದ್ವೇಷಿಸುವುದಿಲ್ಲವೋ, ಮಿತ್ರಭಾವದಿಂದ ಕೂಡಿರು ವನೋ, ಕರುಣೆಯುಳ್ಳವನೋ, ಅಹಂಕಾರಮಮಕಾರಗಳು ಇಲ್ಲದವನೋ, ಸುಖದುಃಖ

ಗಳಲ್ಲಿ ಸಮವಾಗಿರುವವನೋ, ಕ್ಷಮಾಶೀಲನೋ, ಯಾವಾಗಲೂ ಸಂತುಷ್ಟನೋ, ಯೋಗಿಯೋ, ಯತಾತ್ಮನೋ, ದೃಢನಿಶ್ಚಯನೋ, ನನ್ನಲ್ಲಿ ಅರ್ಪಿಸಲ್ಪಟ್ಟ ಮನ ಬುದ್ಧಿಗಳುಳ್ಳ ಭಕ್ತನೋ—ಅವನು ನನಗೆ ಪ್ರಿಯನು.

**ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ।**
**ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ ॥**

ಯಾವನಿಂದ ಜನರು ಉದ್ವೇಗವನ್ನು ಹೊಂದುವುದಿಲ್ಲವೋ, ಯಾವನು ಜನರಿಂದ ಉದ್ವೇಗವನ್ನು ಪೊಂದುವುದಿಲ್ಲವೋ ಮತ್ತು ಯಾವನಿಗೆ ಹರ್ಷ ಅಸಹನೆ ಭಯ ಉದ್ವೇಗ—ಇವುಗಳು ಇಲ್ಲವೋ ಅವನು ನನಗೆ ಪ್ರಿಯನು.

**ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ ।**
**ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥**

ಯಾವ ನನ್ನ ಭಕ್ತನು ಅಪೇಕ್ಷಾಶೂನ್ಯನೋ, ಶುಚಿಯೋ, ಸಮರ್ಥನೋ, ಉದಾಸೀನನೋ, ವ್ಯಥೆಯಿಲ್ಲದವನೋ, ಸರ್ವಕರ್ಮಪರಿತ್ಯಾಗಿಯೋ ಅವನು ನನಗೆ ಪ್ರಿಯನು.

**ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ ।**
**ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯಃ ಸ ಮೇ ಪ್ರಿಯಃ ॥**

ಯಾವನು ಹರ್ಷಿಸುವುದಿಲ್ಲವೋ, ದ್ವೇಷಿಸುವುದಿಲ್ಲವೋ, ಶೋಕಿಸುವುದಿಲ್ಲವೋ, ಇಚ್ಛಿಸುವುದಿಲ್ಲವೋ, ಶುಭಾಶುಭಗಳನ್ನು ಪರಿತ್ಯಾಗಮಾಡಿರುತ್ತಾನೋ, ಭಕ್ತಿಯುಳ್ಳವನೋ ಅವನು ನನಗೆ ಪ್ರಿಯನು.

**ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।**
**ಶೀತೋಷ್ಣಸುಖದುಃಖೇಷು ಸಮಃ ಸಂಗವಿವರ್ಜಿತಃ ॥**
**ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನಕೇನಚಿತ್ ।**
**ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ ಮೇ ಪ್ರಿಯೋ ನರಃ ॥**

—ಗೀತಾ, ಅಧ್ಯಾಯ ೧೨, ಶ್ಲೋಕ ೧೩–೧೯

ಶತ್ರುಮಿತ್ರರಲ್ಲಿ ಸಮಬುದ್ಧಿಯುಳ್ಳವನೂ, ಮಾನಾಪಮಾನಗಳಲ್ಲಿಯೂ ಶೀತ-ಉಷ್ಣ ಸುಖ-ದುಃಖಗಳಲ್ಲಿಯೂ ಸಮನಾಗಿರುವವನೂ, ಆಸಕ್ತಿ ಇಲ್ಲದವನೂ, ಸ್ತುತಿ-ನಿಂದೆಗಳಲ್ಲಿ ಸಮಭಾವನೆಯುಳ್ಳವನೂ ಮೌನಿಯೂ, ಯತ್ಕಿಂಚಿತ್ ಲಾಭದಲ್ಲಿ ಸಂತುಷ್ಟನೂ, ನಿರ್ದಿಷ್ಟಸ್ಥಾನವಿಲ್ಲದವನೂ, ಸ್ಥಿರಬುದ್ಧಿಯುಳ್ಳವನೂ, ಭಕ್ತಿಮಂತನೂ ಆದ ಮನುಷ್ಯನು ನನಗೆ ಪ್ರಿಯನು.

### ರಾಜಯೋಗ

ಮನಸ್ಸಿನ ಏಕಾಗ್ರತೆಯ ಮೂಲಕ ಜೀವಾತ್ಮನನ್ನು ಪರಮಾತ್ಮನಲ್ಲಿ ಒಂದುಗೂಡಿಸುವ ಯೋಗವೇ ರಾಜಯೋಗ. ಮನಸ್ಸುಳ್ಳವನು ಮನುಷ್ಯನು. ದೇಶ ಕಾಲ ಜನಾಂಗಗಳ ಭೇದವಿದ್ದರೂ ಮನುಷ್ಯನು ಮನಸ್ಸುಳ್ಳವನಾಗಿರುವುದರಿಂದ ಮನುಷ್ಯನೇ ಆಗಿರುತ್ತಾನೆ.

ಆದುದರಿಂದ ಮನಸ್ಸಿನ ಏಕಾಗ್ರತೆಗೆ ಯಾವ ಮನುಷ್ಯನು ಬೇಕಾದರೂ ಪ್ರಯತ್ನ ಪಡಬಹುದು. ರಾಜಮಾರ್ಗದಲ್ಲಿ ಯಾರು ಬೇಕಾದರೂ ಹೋಗಬಹುದಾಗಿದ್ದು ಅದು ಹೇಗೆ ಸಾರ್ವಜನಿಕ ರಸ್ತೆ ಆಗಿದೆಯೋ ಹಾಗೆಯೇ ಮನಸ್ಸಿನ ಏಕಾಗ್ರತೆಯ ಮೂಲಕ ಬ್ರಹ್ಮಜ್ಞಾನವನ್ನು ಯಾರು ಬೇಕಾದರೂ ಪಡೆಯಬಹುದು. ಹೀಗೆ ಸರ್ವರಿಗೂ ಬ್ರಹ್ಮ ಜ್ಞಾನಪಡೆಯಲು, ಸಾಧನೆಯ ಮೂಲಕ ಸಾಗಲು, ಅವಕಾಶವೀಯುವ ಯೋಗ ವಾಗಿರುವುದರಿಂದ ಇವಕ್ಕೆ ರಾಜಯೋಗ ಎಂಬ ಹೆಸರು ಬಂದಿದೆ ಎಂದು ಪ್ರಾಜ್ಞರು ಹೇಳುತ್ತಾರೆ. ಸಾಂಖ್ಯ ಮತ್ತು ಯೋಗದರ್ಶನಗಳ ತತ್ತ್ವವಿಚಾರಗಳಲ್ಲಿ ಬಹಳ ಸಾಮ್ಯತೆ ಇದ್ದು ಅದಕ್ಕಿಂತ ಮಿಗಿಲಾಗಿ ಯೋಗದರ್ಶನವು ಈಶ್ವರ ಅಥವಾ ದೇವರನ್ನು ಒಪ್ಪಿರು ತ್ತದೆ. ಹಾಗಾಗಿ ಯೋಗದರ್ಶನವನ್ನು ಸೇಶ್ವರ ಸಾಂಖ್ಯಯೋಗ ಎಂದೂ ಹೇಳುತ್ತಾರೆ.

ಈ ಜಗತ್ತು ಎಂದರೇನು ? ಹುಟ್ಟುಸಾವುಗಳ ಈ ಅನಂತಚಕ್ರದಿಂದ ಮಾನವನಿಗೆ ಬಿಡುಗಡೆ ಇದೆಯೇ ? ಕಾಣುವ ಈ ಜಗತ್ತಿನ ನಾಮರೂಪಗಳ ಹಿನ್ನೆಲೆಯಲ್ಲಿ ಏನು ಅಡಕವಾಗಿದೆ ? ದೇವರಿದ್ದಾನೆಯೇ ? ಆತ್ಮ ಎನ್ನುವುದು ಸತ್ಯವೇ ? ಜಗತ್ತಿಗೂ ಜೀವಿ ಗಳಿಗೂ ಇರುವ ಸಂಬಂಧವೇನು ? ಎಂಬಿತ್ಯಾದಿ ಗಹನವಾದ ವಿಚಾರಗಳಿಗೆ ಸವಿವರವಾದ ಉತ್ತರವನ್ನು ಸಾಧನೆಯ ಮೂಲಕ ಕಂಡುಹಿಡಿಯಲು ರಾಜಯೋಗವು ಸಾಧನಾ ಮಾರ್ಗವನ್ನು ನಿರ್ದೇಶಿಸುತ್ತದೆ.

ಮನಸ್ಸಿನ ಶಕ್ತಿಯನ್ನು ಮನುಷ್ಯನು ಪ್ರಪಂಚದ ಬಾಹ್ಯವಸ್ತುಗಳ ಸಂಶೋಧನೆ, ಹಾಗೂ ಅವುಗಳ ಸೃಷ್ಟಿಗಳಿಗೆ ಉಪಯೋಗಿಸಿ ಜೀವನದ ಸುಖಕ್ಕಾಗಿ ಅನೇಕ ವಿಧದ ಸಲಕರಣೆಗಳನ್ನು ಕಂಡುಹಿಡಿದಿರುತ್ತಾನೆ. ಇದರಿಂದ ಮನುಷ್ಯನ ಜೀವನ ಸುಖಮಯ ವಾದಂತೆ ಅವನು ಕಂಡುಹಿಡಿದ ರಾಕೆಟ್, ಸ್ಪುಟ್ನಿಕ್, ಬಾಂಬುಗಳು ಇತ್ಯಾದಿಗಳಿಂದ ಲೋಕಜೀವನದ ಭದ್ರತೆಗೇ ಭಯವೂ ಅಪಾಯವೂ ಉಂಟಾಗಿರುತ್ತವೆ. ಹೀಗೆ ಮನುಷ್ಯನು ತನ್ನ ಮನಸ್ಸಿನ ಶಕ್ತಿಯನ್ನು ಉಪಯೋಗಿಸಿ ಕಂಡುಹಿಡಿದ ವಸ್ತುಗಳಿಂದ ಅವನು ಮತ್ತೆ ಮತ್ತೆ ಈ ಜಗತ್ತಿನ ಬಂಧನಕ್ಕೆ ಒಂದಲ್ಲ ಒಂದು ವಿಧದಲ್ಲಿ ಒಳಗಾಗು ವಂತೆ ಆಗಿರುತ್ತದೆ. ಹಾಗಾಗಿ ಬಾಹ್ಯರೀತಿಯಲ್ಲಿ ಮನಸ್ಸಿನ ಶಕ್ತಿಯ ಹರಿಯುವಿಕೆ ಯಿಂದಾಗಿ ಮನುಷ್ಯನಿಗೆ ಮೋಕ್ಷವನ್ನು ಪಡೆಯಲು ಅವು ಸಹಕಾರಿಯಾಗದೆ ಅವನನ್ನು ಜಗತ್ತಿನ ಜೀವನಬಂಧನಕ್ಕೆ ಸಿಲುಕಿಸುವಂತಾಗಿದೆ. ಮನಸ್ಸಿನ ಬಾಹ್ಯಚಟುವಟಿಕೆಗಳ ಹಿನ್ನೆಲೆಯ ಮನಶ್ಶಕ್ತಿಯನ್ನು ಉಪಯೋಗಿಸಿಕೊಂಡು ಅಂತರ್ಮುಖವಾಗಿ ತಿರುಗಿಸಿ ತನ್ಮೂಲಕ ನಿರಂತರವಾದ ಆನಂದವನ್ನು ಪಡೆದು ಮಾನವನು ಜೀವನದ ಭದ್ರತೆಗೆ ಮಾತ್ರವಲ್ಲದೆ ಜೀವನದ ಸಕಲ ಬಂಧನಗಳಿಂದ ಮುಕ್ತನಾಗಲು ರಾಜಯೋಗವು ದಾರಿ ಯನ್ನು ತೋರಿಸುತ್ತದೆ.

ರಾಜಯೋಗದಲ್ಲಿ ಹೇಳಿದ ಸಾಧನಾವಿಚಾರಗಳು ಕೇವಲ ಕಲ್ಪನೆಗಳಾಗಿರದೆ ಪ್ರಯೋಗ ಸಾಧ್ಯವಾದ ಸತ್ಯಗಳಾಗಿವೆ. ಕಾಣುವ ಈ ಹೊರಪ್ರಪಂಚವು ಮಾನವನ ಅಂತರ್ಯದಲ್ಲಿ ಸೂಕ್ಷ್ಮರೂಪವಾಗಿರುವ ಆತ್ಮದ ಬಾಹ್ಯವಾದ ಪ್ರಕಟಣೆಯಷ್ಟೆ. ಹೊರಗಿನ ಈ ಪ್ರಕಟಣೆಗೆ ಒಳಗಿನ ಸೂಕ್ಷ್ಮರೂಪದಲ್ಲಿನ ಆತ್ಮದ ಇರುವಿಕೆಯೇ ಕಾರಣವಾಗಿದ್ದು ಅದರ

ಪರಿಣಾಮರೂಪದ ಪ್ರಕಟಣೆಯೇ ಈ ಪ್ರಪಂಚವಾಗಿರುತ್ತದೆ. ಅಂತರ್ಯದಲ್ಲಿ ಅಡಗಿರುವ ಆತ್ಮತತ್ತ್ವವನ್ನು ಅರಿತಾಗ ಈ ಜಗತ್ತು–ಜೀವನ—ಎಲ್ಲದರ ಕುರಿತಾದ ಸತ್ಯದ ಸಾಕ್ಷಾತ್ಕಾರವಾಗುವುದು ಮಾತ್ರವಲ್ಲದೆ ಅಂತರ್ಯದಲ್ಲಿರುವ ಆತ್ಮದ ಜ್ಞಾನವುಂಟಾದಾಗ ಬಾಹ್ಯ ಮತ್ತು ಅಂತರ್ಯದ ಜಗತ್ತುಗಳ ಮೇಲಿನ ಸರ್ವವಿಧದ ಹತೋಟಿಯೂ ಯೋಗಿಗೆ ದೊರೆಯುತ್ತದೆ. ಆಗ ಅವನು ದುಃಖನೋವುಗಳಿಗೆಲ್ಲಾ ಅತೀತನಾಗುತ್ತಾನೆ ಎಂದು ರಾಜಯೋಗವು ಹೇಳುತ್ತದೆ.

ಶರೀರದ ದೃಢತೆ, ಪರಿಶುದ್ಧತೆ, ಶರೀರದ ಮೂಲಶಕ್ತಿಯಾಗಿರುವ ಉಸಿರಾಟದ ಪ್ರಾಣವಾಯುವಿನ ಚಲನೆಯ ನಿಯಂತ್ರಣ, ಮನಸ್ಸಿನ ಪರಿಶುದ್ಧತೆ ಇತ್ಯಾದಿ ವಿಚಾರಗಳ ಆಧಾರದಲ್ಲಿ ರಾಜಯೋಗದ ಸಾಧನೆಯು ರೂಪುಗೊಂಡಿರುತ್ತದೆ. ರಾಜಯೋಗಿಯು ಜೀವನರಂಗದಲ್ಲಿ ಇದ್ದು ಜೀವನ ನಿರ್ವಹಿಸುತ್ತಿದ್ದರೂ ಕೂಡ ಅವನು ಯಾವುದಕ್ಕೂ ಅಡಿಯಾಳಾಗಿರದೆ ಎಲ್ಲದರ ಒಡೆಯನಂತೆ ಇದ್ದು ಪೂರ್ಣಶಕ್ತಿ, ಪೂರ್ಣಜ್ಞಾನ, ಪೂರ್ಣಾನಂದದಿಂದ ಕೂಡಿರುತ್ತಾನೆ. ದೇಹವಳಿದಾಗ ಪೂರ್ಣನಾಗಿದ್ದವನು ಪೂರ್ಣನಾಗಿಯೇ ಪೂರ್ಣವಾದ ಆನಂದದಲ್ಲಿ, ಬ್ರಹ್ಮನಲ್ಲಿ ಐಕ್ಯವಾಗುತ್ತಾನೆ. ಜೀವನಾಧಾರವಾದ ಪ್ರಾಣವಾಯುವನ್ನು ಪ್ರಾಣಾಯಾಮದ ಮೂಲಕ ನಿಯಂತ್ರಣಗೊಳಿಸಿ ಚಿತ್ತಶುದ್ಧಿಯನ್ನು ಪಡೆದು ತನ್ಮೂಲಕ ಆಂತರಿಕ ಆತ್ಮಶಕ್ತಿಯನ್ನು ಜಾಗ್ರತಗೊಳಿಸಿ ಅದರ ಮೂಲಕ ಬಾಹ್ಯಪರಿಸ್ಥಿತಿಗಳನ್ನು ಹತೋಟಿಯಲ್ಲಿ ತಂದುಕೊಂಡು ಆಂತರಿಕ ಹಾಗೂ ಬಾಹ್ಯವಾದ ಸರ್ವತೋಮುಖವಾದ ಸಮರಸ, ಸಮನ್ವಯ, ಶಾಂತಿ ಮತ್ತು ಆನಂದಗಳನ್ನು ಜೀವನು ಅನುಭವಿಸುತ್ತಾ ಜೀವನದ ಸರ್ವಬಂಧನಗಳಿಂದ ಮುಕ್ತನಾಗಿ ಮೋಕ್ಷಾನಂದ ಅರ್ಥಾತ್ ಆತ್ಮಸಾಕ್ಷಾತ್ಕಾರವನ್ನು ಹೊಂದುವುದೇ ರಾಜಯೋಗದ ಗುರಿಯಾಗಿದೆ.

ರಾಜಯೋಗಕ್ಕೆ ಮುಖ್ಯವಾದ ಆಧಾರಗ್ರಂಥವು ಪಾತಂಜಲಯೋಗಸೂತ್ರವಾಗಿದೆ. ಆದುದರಿಂದ ಈ ಯೋಗಕ್ಕೆ ಪಾತಂಜಲಯೋಗ ಎಂಬ ಇನ್ನೊಂದು ವ್ಯಾವಹಾರಿಕ ಹೆಸರೂ ರೂಢಿಯಲ್ಲಿ ಇದೆ. ಪತಂಜಲಿ ಮಹರ್ಷಿಗಳು ಪ್ರಕೃತಿ ಪುರುಷ ಈಶ್ವರ ಇವುಗಳ ವಿಷಯದಲ್ಲಿ ನೀಡಿದ ತಮ್ಮ ದರ್ಶನವಿಚಾರಗಳನ್ನು ಸಾಕ್ಷಾತ್ಕಾರ ಮಾಡಲು ಇರುವ ಸಾಧನಾಮಾರ್ಗವನ್ನೂ ಯೋಗದರ್ಶನದಲ್ಲಿ ಹೇಳಲಾಗಿದ್ದು ಆ ಸಾಧನೆಯ ಸಂಗತಿಯೇ ರಾಜಯೋಗ ಎಂದು ಪ್ರಸಿದ್ಧವಾಗಿರುತ್ತದೆ. (ದರ್ಶನದ ವಿವರಗಳನ್ನು ಯೋಗದರ್ಶನ ಅಧ್ಯಾಯದಲ್ಲಿ ಈಗಾಗಲೇ ಹೇಳಿಯಾಗಿರುತ್ತದೆ.)

ರಾಜಯೋಗದಲ್ಲಿ ಸಾಧಕನಿಗೆ ಸಾಧನೆಯ ಎಂಟು ಸೋಪಾನಗಳಿವೆ. ಆದುದರಿಂದ ಈ ಯೋಗವನ್ನು ಅಷ್ಟಾಂಗಯೋಗ (ಎಂಟು ಅಂಗಗಳಿಂದ ಕೂಡಿದ) ಎಂದೂ ಕರೆಯುವ ರೂಢಿ ಇದೆ. ಈ ಎಂಟು ಸಾಧನಾ ಅಂಗಗಳಲ್ಲಿ ಮನುಷ್ಯನ ಚಿತ್ತದ ವೃತ್ತಿಗಳನ್ನು ನಿರೋಧಿಸುವುದಕ್ಕಾಗಿ ಹಂತಹಂತದ ಸಾಧನಾವ್ಯವಸ್ಥೆಗಳನ್ನು ನಿರೂಪಿಸಲಾಗಿದೆ. ವೈಜ್ಞಾನಿಕವಾಗಿಯೂ, ಮನಶ್ಶಾಸ್ತ್ರೀಯವಾಗಿಯೂ, ಆಧ್ಯಾತ್ಮಿಕವಾಗಿಯೂ ಎಲ್ಲಾ ದೃಷ್ಟಿಗಳಿಂದಲೂ ಈ ಎಂಟು ಸಾಧನಾಮೆಟ್ಟಲುಗಳು ಮಾನವನ ಮನಸ್ಸನ್ನು ಶುದ್ಧ

ಗೊಳಿಸಿ ಏಕಾಗ್ರತೆಯನ್ನು ಬೆಳಸಿ ಆತ್ಮಸಾಕ್ಷಾತ್ಕಾರದ ದಿವ್ಯ ಆನಂದದಲ್ಲಿ ಐಕ್ಯವಾಗಿಸುವ ಸಾಮರ್ಥ್ಯದಿಂದ ಕೂಡಿರುತ್ತವೆ.

ಪತಂಜಲಿ ಮಹರ್ಷಿಗಳು ತಮ್ಮ ಯೋಗಸೂತ್ರದಲ್ಲಿ ಯೋಗ ಎಂದರ ಚಿತ್ತವೃತ್ತಿಗಳನ್ನು ನಿರೋಧ ಮಾಡುವುದು ಎಂದು ಹೇಳಿರುತ್ತಾರೆ. ಮನಸ್ಸಿನ ಬಾಹ್ಯವಾದ ವಿವಿಧ ವೃತ್ತಿಗಳನ್ನು ನಿರೋಧಮಾಡಿದಾಗ ಮನಸ್ಸು ಅಂತರ್ಮುಖಿಯಾಗಿ ಶುದ್ಧವಾಗುತ್ತದೆ. ಶುದ್ಧಮನಸ್ಸಿನಲ್ಲಿ ಏಕಾಗ್ರತೆಯ ಶಕ್ತಿ ಪೂರ್ಣವಿದ್ದು ಶುದ್ಧಚಿತ್ತದ ಏಕಾಗ್ರತೆಯಿಂದ ಆತ್ಮಸಾಕ್ಷಾತ್ಕಾರ ಸಾಧ್ಯವಾಗುತ್ತದೆ ಎಂಬುದು ರಾಜಯೋಗದ ಸ್ಪಷ್ಟವಾದ ನಿಲವು ಆಗಿದೆ. ಈ ಯೋಗದಲ್ಲಿ ಮನಸ್ಸಿನ ಏಕಾಗ್ರತೆ, ದಿವ್ಯಧ್ಯಾನ ಇವುಗಳಿಗೆ ಮಹತ್ತರವಾದ ಸ್ಥಾನವೂ ಪ್ರಾಧಾನ್ಯವೂ ನೀಡಲ್ಪಟ್ಟಿರುತ್ತದೆ. ಹಾಗಾಗಿ ಈ ಯೋಗವನ್ನು ಧ್ಯಾನ ಯೋಗ ಎಂದೂ ಕರೆಯುವ ರೂಢಿ ಇದೆ. ಧ್ಯಾನ ಮತ್ತು ಚಿತ್ತದ ಏಕಾಗ್ರತೆಗಳ ವಿಚಾರದಲ್ಲಿ ಉಪನಿಷತ್ತು, ಗೀತೆ, ಬ್ರಹ್ಮಸೂತ್ರ-ಗ್ರಂಥಗಳಲ್ಲಿ ಪ್ರಸ್ತಾಪ ಹಾಗೂ ಸೂಕ್ಷ್ಮ ವಿವರಣೆಗಳು ಬಂದಿವೆ. ಆದರೆ ಅವುಗಳ ಬಗೆಗೆ ವಿಸ್ತಾರವಾದ ವರ್ಣನೆ, ಸಾಧನಾವಿವರಗಳು ದೊರೆಯುವುದು ಮಾತ್ರ ಪಾತಂಜಲಯೋಗಸೂತ್ರಗಳಲ್ಲೇ.

ಯೋಗವೆಂದರೆ ಮನಸ್ಸಿನ ವೃತ್ತಿಗಳ ನಿರೋಧ ಎಂದು ಹೇಳಿ, ಅದನ್ನು ಹೇಗೆ ಸಾಧಿಸಬಹುದು ?—ಎನ್ನುವುದಕ್ಕೆ ಅಭ್ಯಾಸ ಮತ್ತು ವೈರಾಗ್ಯಗಳ ಮೂಲಕ ಎಂದು ರಾಜಯೋಗದಲ್ಲಿ ಉತ್ತರ ಹೇಳಲಾಗಿದೆ. ಈ ಅಭ್ಯಾಸವೈರಾಗ್ಯಗಳನ್ನು ಉಪಯೋಗಿಸಿಕೊಂಡು ಸಾಧಕನು ಹೇಗೆ ಸಾಧನ ಮಾಡಬೇಕು, ಸಾಧನೆಯ ವಿವರ-ಫಲಗಳು ಏನೇನು ಎಂಬುದನ್ನು ಅಷ್ಟಾಂಗಸಾಧನಾಸೋಪಾನ ವಿವರಿಸುತ್ತದೆ.

ನೀತಿಯೇ ಯಶಸ್ವೀ ಜೀವನದ ಅಡಿಗಲ್ಲು. ನೈತಿಕ ಬಲವಿಲ್ಲದೆ ಯಾವ ಕಾರ್ಯದಲ್ಲೂ ಜಯವನ್ನು ಗಳಿಸಲು ಸಾಧ್ಯವಿಲ್ಲ. ರಾಜಯೋಗದ ಸಾಧಕನೂ ಕೂಡ ನೀತಿವಂತನಾಗಿ ನೈತಿಕ ಬಲದಿಂದ ಪರಿಪುಷ್ಟನಾಗಿರಬೇಕು. ಅದಕ್ಕಾಗಿ ಅಷ್ಟಾಂಗಯೋಗದ ಮೊದಲ ಎರಡು ಸೋಪಾನಗಳು ನೀತಿಯ ಬಲದ ವೃದ್ಧಿ ಮತ್ತು ನೆಲೆಗೊಳ್ಳುವಿಕೆಗೆ ಸಹಾಯಕ ವಾಗಿವೆ.

ಅಷ್ಟಾಂಗಸಾಧನಾಸೋಪಾನಗಳು

(೧) ಯಮ, (೨) ನಿಯಮ, (೩) ಆಸನ, (೪) ಪ್ರಾಣಾಯಾಮ, (೫) ಪ್ರತ್ಯಾಹಾರ, (೬) ಧಾರಣಾ, (೭) ಧ್ಯಾನ, (೮) ಸಮಾಧಿ.

ಯಮ : ನೀತಿಯ ನಿಶ್ಚಯದ ಪಾಠವನ್ನು ಸಾಧಕನು ಈ ಮೆಟ್ಟಲಲ್ಲಿ ಕಲಿಯ ಬೇಕಾಗಿದ್ದು ನೀತಿಯ ಕುರಿತಾದ ಮುಖ್ಯವಾದ ಗುಣಗಳನ್ನು ರೂಢಿಸಿಕೊಳ್ಳುವುದೇ ಯಮವಾಗಿರುತ್ತದೆ. ಯಮ ಎಂಬುದು ಐದು ವಿಧದ ನೈತಿಕ ಗುಣಗಳಿಂದ ಕೂಡಿರುತ್ತದೆ. ಅದೇ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ. ತ್ರಿಕರಣ ಪೂರ್ವಕವಾಗಿ ಇತರ ಜೀವಿಗಳಿಗೆ ನೋವನ್ನು ಉಂಟುಮಾಡದಿರುವುದೇ ಅಹಿಂಸೆ. ನಡೆನುಡಿಗಳಲ್ಲಿ ಸಾಮರಸ್ಯವಿದ್ದು ಎರಡೂ ಸತ್ಯಸಮ್ಮತವಾಗಿರಬೇಕು. ಸುಳ್ಳು, ಅನ್ಯಾಯ, ಮೋಸಗಳಿಗೆ ಎಡೆಕೊಡದೆ ವ್ಯವಹರಿಸುತ್ತಾ ಬಾಳುವುದೇ ಸತ್ಯ. ಇತರರ

ವಸ್ತುಗಳನ್ನು ಕದಿಯದಿರುವುದೇ ಅಸ್ತೇಯ. ಕದಿಯುವುದು ಎಂದರೆ ಯಾವುದು ತನಗೆ ಹಕ್ಕಿಲ್ಲವೋ, ತನ್ನದಲ್ಲವೋ ಅದನ್ನು ತನ್ನದಾಗಿಸಿಕೊಳ್ಳುವುದಾಗಿರುತ್ತದೆ. ಇಂದ್ರಿಯ ನಿಗ್ರಹವೇ ಬ್ರಹ್ಮಚರ್ಯ. ಇಂದ್ರಿಯಗಳ ಸಂಭೋಗದಿಂದ ಬರುವ ಸುಖ ಸುಖ ವಾದರೂ ಅದರಿಂದ ನಿಜವಾದ, ಶಾಶ್ವತವಾದ ಸುಖವಾಗಲಿ, ಸಮಾಧಾನವಾಗಲಿ ದೊರೆಯುವುದಿಲ್ಲ. ಇಂದ್ರಿಯನಿಗ್ರಹದಲ್ಲಿ ನಿಜವಾದ ಶಾಂತಿ ಇದೆ ಎಂದು ತಿಳಿಯುವುದು ಬ್ರಹ್ಮಚರ್ಯದ ಮೊದಲ ಭಾಗ. ಆದರೆ ಕಾರ್ಯತಃ ವೀರ್ಯರಕ್ಷಣೆ ಇಂದ್ರಿಯಗಳ ಸಂಯಮ ಮಾಡುವುದು. ಉತ್ತರಭಾಗ ಬ್ರಹ್ಮಚರ್ಯವಿಲ್ಲದೆ-ರಾಜಯೋಗ ಸಾಧನೆ ಸಾಧ್ಯವಿಲ್ಲ ಎನ್ನುವುದನ್ನು ಸ್ಪಷ್ಟಪಡಿಸಲಾಗಿದೆ. ಬ್ರಹ್ಮಚರ್ಯದಿಂದ ವೀರ್ಯವೃದ್ಧಿ ಯಾಗಿ, ವೀರ್ಯಶಕ್ತಿಯಿಂದ ಓಜಸ್ಸೆಂಬ ಶಕ್ತಿಯುಂಟಾಗಿ ಅದು ಪವಿತ್ರಶಕ್ತಿಯಾಗಿ ಪರಿವರ್ತನೆಹೊಂದಿ ಸಾಧಕನಿಗೆ ಶಾರೀರಿಕ, ಮಾನಸಿಕ ಮತ್ತು ಆಧ್ಯಾತ್ಮಿಕ ಶಕ್ತಿಗಳನ್ನು ನೀಡುತ್ತದೆ. ಬೇರೆಯವರಿಂದ ಯಾವ ವಸ್ತುಗಳನ್ನೂ ದಾನವಾಗಿ ಮತ್ತು ಕೊಡುಗೆಯಾಗಿ ಸ್ವೀಕರಿಸದಿರುವುದೇ ಅಪರಿಗ್ರಹ. ಬೇರೆಯವರಿಗೆ ಕೈಚಾಚಿ ದಾನ ಮತ್ತು ಕೊಡುಗೆ ಗಳನ್ನು ಸ್ವೀಕರಿಸಿದರೆ ಅವರ ಋಣಕ್ಕೆ ಪಾತ್ರನಾದಂತಾಯಿತು. ಅವರ ಪ್ರಭಾವಕ್ಕೆ ಒಳಗಾದಂತಾಗಿ ಸಾಧಕನ ಜೀವನಸ್ವಾತಂತ್ರ್ಯಕ್ಕೆ ಧಕ್ಕೆಬರುತ್ತದೆ. ಆಗ ಅದರಿಂದಾಗಿ ನಿರ್ಭಯತೆ ಅಳಿಯುತ್ತದೆ. ಮನಸ್ಸು ಚಂಚಲತೆ ಸಂಶಯ ಸಂಕೀರ್ಣತೆಗಳಿಗೆ ಒಳಗಾಗು ತ್ತದೆ. ಆಗ ಸಾಧಕನು ಸಾಧನೆ ಮಾಡಲಾರದವನಾಗುತ್ತಾನೆ. ಹಾಗೆಯೇ ವಸ್ತುಗಳ ಅನಗತ್ಯದ ಸಂಗ್ರಹಣೆಯನ್ನು ಮಾಡದೆ ಸಾಧಕನು ಸರಳಜೀವಿಯಾಗಿರಬೇಕೆಂಬ ತತ್ತ್ವವೂ ಅಪರಿಗ್ರಹದಲ್ಲಿ ಅಡಕವಾಗಿದೆ.

ನಿಯಮ ; ಯಮವೆಂಬ ಮೆಟ್ಟಿಲಿನ ಪಂಚಗುಣಶೀಲಗಳನ್ನು ರೂಢಿಸಿಕೊಂಡನಂತರ ಸಾಧಕನು ಏರಬೇಕಾದ ಮೆಟ್ಟಿಲೇ ನಿಯಮ. ಯಮವು ಪಂಚಶೀಲಗಳಿಂದ ಕೂಡಿದ್ದರೆ ನಿಯಮವು ಪಂಚ ಅಂಗಗಳಿಂದ ಕೂಡಿರುತ್ತದೆ. ಅವು ಯಾವುವೆಂದರೆ :

(೧) ಶೌಚ, (೨) ಸಂತೋಷ (ತೃಪ್ತಿ), (೩) ತಪಸ್ಸು, (೪) ಸ್ವಾಧ್ಯಾಯ, (೫) ಈಶ್ವರಪ್ರಣಿಧಾನ.

ಶೌಚ : ಬಾಹ್ಯ ಮತ್ತು ಅಂತರ್ಯವಾದ ಶುಚಿ ಅಂದರೆ ದೇಹ, ಮತ್ತು ಮನಸ್ಸು ಗಳನ್ನು ಶುಚಿಯಾಗಿಡುವುದೇ ಶೌಚವಾಗಿದೆ. ದೈಹಿಕವಾದ ಶುಚಿ, ಶುದ್ಧವಾದ ಸಾತ್ವಿಕ ವಾದ ಆಹಾರ ಸೇವನೆ ಉದಾತ್ತ ವಿಚಾರಗಳ ಚಿಂತನೆ ಮನೋಭಾವನೆಗಳಿಂದ ಕೂಡಿರುವುದೇ ಶೌಚ ಎಂದು ತಾತ್ಪರ್ಯ.

ಸಂತೋಷ (ತೃಪ್ತಿ) : ಮನುಷ್ಯನಿಗೆ ಎಷ್ಟು ಸುಖ ದೊರೆತರೂ ತೃಪ್ತಿ ಇಲ್ಲ. ಪ್ರಾಪಂಚಿಕವಾಗಿ ಸಿಗುವ ಸುಖ ಸುಖವಲ್ಲ ; ಆಧ್ಯಾತ್ಮಿಕವಾದ ಸುಖವೇ ನಿಜವಾದ ಸುಖ. ಜೀವನದ ತನ್ನ ಪರಿಸ್ಥಿತಿಯ ಕುರಿತು ಒದಗಿಬರುವ ಸುಖ ಕಷ್ಟ, ನಷ್ಟಗಳಿಂದ ಪ್ರಭಾವಿತನಾಗದೇ ಇರುವುದು ತೃಪ್ತಿಯ ಕುರುಹು. ಹಾಗೆಂದು ಆಧ್ಯಾತ್ಮಿಕ ಉನ್ನತಿಗೆ, ಧರ್ಮಸಮ್ಮತವಾದ ಲೌಕಿಕ ಪ್ರಗತಿಗೆ ಯತ್ನಿಸಬಾರದೆಂದು ಅರ್ಥವಲ್ಲ ಬಾಳಿನಲ್ಲಿ ಏನೇ ಆದರೂ ಸದಾ ಸಂತೋಷವುಳ್ಳವನಾಗಿರುವುದು ತೃಪ್ತಿಯ ಪ್ರಾಯೋಗಿಕ ಲಕ್ಷಣ.

ತೃಪ್ತಿ ಇಲ್ಲದಿದ್ದರೆ ಆಸಕ್ತಿ, ಆಕಾಂಕ್ಷೆ, ಭಯ, ದುಃಖ, ಉದ್ವೇಗಗಳುಂಟಾಗಿ ಮನಸ್ಸು ಮಲಿನವಾಗುವುದು.

ತಪಸ್ಸು : ಸಂತೋಷತೃಪ್ತಿಗಳು ಭದ್ರವಾಗಿ ನೆಲೆನಿಲ್ಲಲು ಸಾಧಕನು ಸದಾ ಅಭ್ಯಾಸ ಮಾಡಬೇಕು. ಅಭ್ಯಾಸವು ಶರೀರ, ಮನಸ್ಸು ಮತ್ತು ಮಾತು ಎಂದು ಮೂರು ವಿಧವಾಗಿ ಏಕರೀತಿಯಲ್ಲಿ ನಡೆಯಬೇಕು. ಗುರು ಮತ್ತು ಇಷ್ಟದೇವರ ಪೂಜೆ, ಮಂತ್ರಜಪ, ಶೀತೋಷ್ಣಸುಖದುಃಖಾದಿಗಳನ್ನು ಸಹಿಸಿ ಸಮಭಾವದಿಂದ ಇರುವಿಕೆ, ಸತ್ಯವಚನ, ಉಪವಾಸಾದಿ ವ್ರತಗಳನ್ನು ನಿಯಮದಿಂದ ಪಾಲಿಸುವಿಕೆ ಇತ್ಯಾದಿಗಳೆಲ್ಲಾ ತಪಸ್ಸಿನ ಅಂಗಗಳಾಗಿವೆ.

ಸ್ವಾಧ್ಯಾಯ : ಸ್ವ-ಅಧ್ಯಾಯ ಎಂದರೆ ಸ್ವಂತದ ಅಧ್ಯಾಯ. ಸ್ವ ಎಂದರೆ ಆತ್ಮ ಎಂದೂ ಅರ್ಥವಾಗುತ್ತದೆ. ಆತ್ಮವನ್ನು ಅಧ್ಯಯನ ಮಾಡುವುದು ಎಂದರೆ ಆತ್ಮವಿಚಾರ ವನ್ನು ತಿಳಿಯುವುದು ಎಂದು ತಾತ್ಪರ್ಯ. ಶಾಸ್ತ್ರಗ್ರಂಥಗಳನ್ನು ಓದಿ ಆತ್ಮವಿಚಾರ, ಸಾಧನಾವಿಚಾರ ಇವುಗಳನ್ನೆಲ್ಲಾ ತಿಳಿಯುವುದು ಸ್ವ-ಅಧ್ಯಾಯ ಎಂದೆನಿಸುತ್ತದೆ. ಓಂ ಮೊದಲಾದ ಪವಿತ್ರ ಮಂತ್ರಗಳ ಜಪವೂ ಸ್ವಾಧ್ಯಾಯವಾಗಿರುತ್ತದೆ. ಶಾಸ್ತ್ರಗ್ರಂಥ ಗಳನ್ನು ಒಮ್ಮೆ ಓದಿದರೆ ಅದರಿಂದ ಫಲ ದೊರೆಯದು, ವಿವರ ಸರಿಯಾಗಿ ತಿಳಿಯದು. ಅದಕ್ಕಾಗಿ ಅವುಗಳನ್ನು ಮತ್ತೆ ಮತ್ತೆ ಓದಬೇಕು, ವ್ಯಾಸಂಗ ಮಾಡಬೇಕು. ಹೀಗೆ ನಿಯಮಪ್ರಕಾರವಾಗಿ ದಿನದಿನವೂ ಗ್ರಂಥಗಳ ಅಧ್ಯಯನ, ಆತ್ಮಚಿಂತನೆ ಇವುಗಳಿಂದ ಸದ್ ವಿಚಾರಗಳು ಮನಸ್ಸಿಗೆ ಒದಗುತ್ತವೆ. ಪರಿಣಾಮವಾಗಿ ದಿನವೂ ಉತ್ತಮ ಮಾನಸಿಕ ಸಂಸ್ಕಾರಗಳುಂಟಾಗುತ್ತವೆ. ಇದರಿಂದ ಮನಶ್ಶುದ್ಧಿಯಾಗಲು ಅನುಕೂಲ ವಾಗುತ್ತದೆ. ಸದ್ವಿಚಾರಗಳ ತಿಳಿವಳಿಕೆ, ಸದ್ವಿಚಾರಶಕ್ತಿ ಇವುಗಳು ಸಾಧಕನಲ್ಲಿ ಉಂಟಾಗಿ ಅವನು ಸಾಧನೆಯ ಪಥದಲ್ಲಿ ಮುನ್ನಡೆಯಲು ಅವನಿಗೆ ಸುಗಮವಾದ ಮಾರ್ಗದರ್ಶನ ಗಳು ದೊರೆಯುತ್ತವೆ.

ಈಶ್ವರಪ್ರಣಿಧಾನ : ಭಗವಂತನು ಈ ಜಗತ್ತನ್ನು ಸೃಷ್ಟಿಮಾಡಿ, ಸ್ಥಿತಿಗೊಳಿಸಿ, ಸಂಹಾರಮಾಡುತ್ತಿದ್ದು ತನ್ಮೂಲಕ ಜೀವರುಗಳ ಹಾಗೂ ಜಗತ್ತಿನ ಜೀವನಕ್ಕೆ ಕಾರಣ ನಾಗುತ್ತಾನೆ. ಅವನೇ ಈಶ್ವರ. ಅವನೇ ಜಗತ್ತಿನ ಹಾಗೂ ಜೀವರ ಒಡೆಯ. ಸಾಧಕನು ಯೋಗದ ಸಾಧನೆಯಲ್ಲಿ ಗುರಿಯನ್ನು ಮುಟ್ಟಬೇಕಾದರೆ ಸರ್ವೇಶ್ವರನಾದ ಈಶ್ವರನಲ್ಲಿ ಶರಣುಹೋಗಿ ಅವನ ಅನುಗ್ರಹವನ್ನು ಬೇಡಿ ಮಾರ್ಗದರ್ಶನಕ್ಕಾಗಿ ಪ್ರಾರ್ಥಿಸಬೇಕು. ಪ್ರಾರ್ಥನೆಯು ಭಗವಂತನಿಗೂ ಸಾಧಕನಿಗೂ ಸಂಬಂಧವನ್ನು ಕಲ್ಪಿಸುವ ಪವಿತ್ರವಾದ ಹಾಗೂ ಪರಿಣಾಮಕಾರಿಯಾದ ಅಧ್ಯಾತ್ಮತಂತುವಾಗಿರುತ್ತದೆ. ಈಶ್ವರನಲ್ಲಿ ಶರಣು ಹೋಗುವಿಕೆಯು ಪ್ರಾರ್ಥನೆಯ ತಂತುವಿನ ಶಕ್ತಿಯಾಗಿದೆ. ಸಾಧಕನು ಹೀಗೆ ಈಶ್ವರನಲ್ಲಿ ಭಕ್ತಿಶ್ರದ್ಧೆಗಳಿಂದ ಕೂಡಿ ಅವನಿಗೆ ಶರಣಾಗಿ ದಿನದಿನವೂ ಪ್ರಾರ್ಥನೆಯನ್ನು ಸಲ್ಲಿಸುತ್ತಾ ಬರುವುದೇ ಈಶ್ವರಪ್ರಣಿಧಾನ. ಭಕ್ತಿಶ್ರದ್ಧೆಗಳು ಈಶ್ವರಪ್ರಣಿಧಾನದ ಒಂದಂಶವಾದರೆ ಇನ್ನೊಂದಂಶ ಪ್ರಾರ್ಥನೆ ಮತ್ತು ಶರಣಾಗತಿಗಳಾಗಿರುತ್ತವೆ. ಈಶ್ವರನಿಗೆ ತಾನು ಮಾಡುವ ಸರ್ವಕರ್ಮಗಳ ಅರ್ಪಣೆ ಕೂಡ ಈಶ್ವರಪ್ರಣಿಧಾನವಾಗಿರುತ್ತದೆ.

ಆಸನ : ಆಸನ ಎಂದರೆ ಕುಳಿತುಕೊಳ್ಳುವ ಪೀಠ, ಭಂಗಿ ಎಂದು ಸ್ಥೂಲವಾದ ಅರ್ಥ. ಸ್ಥಿರವಾಗಿ ಮತ್ತು ಸುಖವಾಗಿ ಒಂದೆಡೆ ದೀರ್ಘಕಾಲದ ತನಕ ಕುಳಿತುಕೊಳ್ಳುವುದು ಎಂಬುದು ಆಸನ ಶಬ್ದದ ತಾತ್ಪರ್ಯಾರ್ಥವಾಗಿದೆ. ಭಗವಂತನ ಪ್ರಾರ್ಥನೆ, ಜಪ ಧ್ಯಾನಾದಿಗಳನ್ನು ಮಾಡುವಾಗ ದೀರ್ಘಕಾಲ ಕುಳಿತುಕೊಳ್ಳಬೇಕಾಗುತ್ತದೆ. ಆಕಳಿಕೆ, ಮೈಗಳ್ಳತನ, ನಿದ್ರೆ ಇತ್ಯಾದಿಗಳು ಬರುವಿಕೆ, ಕುಳಿತ ಭಂಗಿಯನ್ನು ಆಗಾಗ ಬದಲಾಯಿಸುವಿಕೆ ಇವುಗಳಿಂದ ಮನಸ್ಸು ಕೇಂದ್ರೀಕೃತವಾಗಲು ಕಷ್ಟವಾಗುವುದರ ಜೊತೆಗೆ ಸಾಧನೆಯನ್ನು ಸರಿಯಾಗಿ ಮಾಡಲು ಸಾಧ್ಯವಾಗುವುದಿಲ್ಲ. ಆದರೆ ಒಂದೇ ಎಡೆ ದೀರ್ಘಕಾಲದ ತನಕ ಮೈಬೆನ್ನುಗಳನ್ನು ನೆಟ್ಟಗೆ ಮಾಡಿ ಕುಳಿತುಕೊಳ್ಳಲು ಸಾಧ್ಯವಾಗಬೇಕು. ಶರೀರದ ದೃಢಾರೋಗ್ಯ ಮತ್ತು ದೀರ್ಘಾಯುಸ್ಸನ್ನು ಬಯಸಿ ಸಾಧನೆ ಮಾಡುವ 'ಹಠಯೋಗಿ' ಎಂಬ ಸಾಧಕವರ್ಗದವರು ಆಸನ ಎಂಬ ಹೆಸರಿನಲ್ಲಿ ಹಲವಾರು ಭಂಗಿಗಳನ್ನು ಹೇಳುತ್ತಾರೆ. ರಾಜಯೋಗಾಭ್ಯಾಸಿಗೆ ಈ ಹಠಯೋಗದ ಆಸನಗಳು ಅಗತ್ಯವಿರುವುದಿಲ್ಲ. ಸುಖಾಸನ, ಪದ್ಮಾಸನ ಇವುಗಳಲ್ಲಿ ಯಾವುದಾದರೂ ಒಂದನ್ನು ಅಥವಾ ತನಗೆ ಅನುಕೂಲವಾದ ರೀತಿಯಲ್ಲಿ ಎದೆ-ಬೆನ್ನುಗಳನ್ನು ನೇರವಾಗಿಟ್ಟುಕೊಂಡು ದೀರ್ಘಕಾಲ ಕುಳಿತುಕೊಳ್ಳಲು ಸಾಧ್ಯವಾಗುವಂತೆ ಅಭ್ಯಾಸಮಾಡಿದರೆ ಸಾಕು. ರಾಜಯೋಗಾಭ್ಯಾಸವನ್ನು ಹೆಚ್ಚುಕಾಲ ಕುಳಿತುಕೊಂಡೇ ಸಾಧನೆ ಮಾಡಬೇಕಾಗಿರುವುದರಿಂದ ಆಸನಸಿದ್ಧಿ ಎಂದರೆ ದೀರ್ಘಕಾಲ ಒಂದೇ ಆಸನದಲ್ಲಿ ಕುಳಿತುಕೊಳ್ಳುವ ಸಾಧ್ಯತೆಯು ಸಾಧಕನಿಗೆ ಅಗತ್ಯವಾಗಿರುತ್ತದೆ.

ಪ್ರಾಣಾಯಾಮ : ಪ್ರಾಣ ಎಂದರೆ ಜೀವದ ಹಾಗೂ ಜಗತ್ತಿನ ಎಲ್ಲದರ ಚೇತನಶಕ್ತಿಯಾಗಿದೆ. ನಾವು ವಾಯುವನ್ನು ಉಸಿರಾಡುತ್ತೇವೆ. ಉಸಿರಾಟಕ್ಕೆ ಕಾರಣವಾದ ವಾಯುವಿನ ಚೇತನವೇ ಪ್ರಾಣವಾಗಿದೆ. ಈ ಉಸಿರಾಟದ ಕ್ರಿಯೆಗೂ, ಮನಸ್ಸಿನ ಯೋಚನೆವೃತ್ತಿಗಳಿಗೂ ನಿಕಟವಾದ ಸಂಬಂಧವಿದೆ ಎಂದು ಅರ್ಥ. ಪ್ರಾಣದ ಚಲನೆಯನ್ನು ನಿಯಂತ್ರಿಸಿದಾಗ ಅದರಿಂದ ಶರೀರದಲ್ಲಿ ರಕ್ತಶುದ್ಧಿಯಾಗಿ ದೇಹಾರೋಗ್ಯ ವೃದ್ಧಿ, ಮಾನಸಿಕ ಪರಿಶುದ್ಧತೆ ಮತ್ತು ಸ್ಥಿರತೆಗಳು ಉಂಟಾಗುತ್ತವೆ. ಪ್ರಾಣಾಯಾಮವನ್ನು ಮಾಡಲು ನಿಶ್ಚಿತವಾದ ವಿಧಾನವಿದೆ. ಒಳಗೆ ಸೇದಿಕೊಳ್ಳುವ ಉಸಿರನ್ನು ನಿಶ್ಚಿತವಾದ ಅವಧಿಯಲ್ಲಿ ಒಳಸೇದಿಕೊಳ್ಳುವುದು (ಪೂರಕ), ಒಳಗೆ ಸೇದಿಕೊಂಡ ಉಸಿರನ್ನು ನಿಶ್ಚಿತವಾದ ಅವಧಿ ತನಕ ಹಠೋಟಿಯಲ್ಲಿ ಒಳಗೇ ಇಟ್ಟುಕೊಳ್ಳುವುದು (ಕುಂಭಕ), ಅನಂತರ ನಿಶ್ಚಿತವಾದ ಅವಧಿಯಲ್ಲಿ ನಿಯಮದಿಂದ ಅದನ್ನು ಹೊರಕ್ಕೆ ಬಿಡುವುದು (ರೇಚಕ), ಮೂಗಿನ ಒಂದು ದ್ವಾರದ ಮೂಲಕ ಉಸಿರನ್ನು ಒಳಗೆ ಸೆಳೆದುಕೊಳ್ಳುವುದು, ಇನ್ನೊಂದು ದ್ವಾರದ ಮೂಲಕ ಹೊರಬಿಡುವುದು—ಇವುಗಳೆಲ್ಲಾ ಪ್ರಾಣಾಯಾಮದ ವಿಧಾನ ಹಾಗೂ ಸಾಧನಾ ಅಂಶಗಳಾಗಿವೆ. ಪ್ರಾಣಾಯಾಮವನ್ನು ಅದರ ವಿಧಿಗೆ ಸರಿಯಾಗಿ ಮಾಡುತ್ತಾಬಂದಂತೆ ಮನಸ್ಸಿನ ಚಂಚಲತೆ ಇಲ್ಲದಂತಾಗಿ ಯೋಗಿಯು ಪರಿಶುದ್ಧ ಮನಸ್ಕನಾಗುತ್ತಾ ಪರಿವರ್ತನೆಯನ್ನು ಹೊಂದುತ್ತಾನೆ.

ಪ್ರತ್ಯಾಹಾರ : ಪಂಚೇಂದ್ರಿಯಗಳ ಮೂಲಕ ಮನಸ್ಸು ಬಹಿರಂಗವಾದ ಹಾಗೂ

ಪ್ರಾಪಂಚಿಕವಾದ ವಿಷಯವಸ್ತುಗಳ ಕಡೆಗೆ ಹರಿದುಹೋಗುತ್ತದೆ. ಹೊರಗಿನ ಆಕರ್ಷಣೆಗಳು ಮನಸ್ಸಿನ ಸ್ಥಿರತೆಯನ್ನು ಅಸ್ಥಿರಗೊಳಿಸುತ್ತಾ ಇರುತ್ತವೆ. ಹೀಗೆ ಹೊರಗಿನ ಆಕರ್ಷಣೆಗಳಿಗೆ ಮನಸ್ಸು ಹರಿಯದಂತೆಯೂ ಮನಸ್ಸಿನ ಒಳಗೆ ಹೊರಗಿನ ಆಕರ್ಷಣೆ ಬಂದು ಸೇರದಂತೆಯೂ ಇಂದ್ರಿಯಗಳನ್ನು ತಡೆಹಿಡಿದು ಮನಸ್ಸನ್ನು ಅಧೀನಕ್ಕೆ ತರುವುದೇ ಪ್ರತ್ಯಾಹಾರ. ಇಂದ್ರಿಯಗಳು ಬಾಹ್ಯವಾಗಿ ಹೋಗುವುದನ್ನು ತಡೆಹಿಡಿದಾಗ ಅವು ಆಕರ್ಷಕ ವಿಷಯಗಳ ಕಡೆಗೆ ಹೋಗದೆ ಮನಸ್ಸನ್ನು ಅನುಸರಿಸಿ ಮನಸ್ಸಿನ ಅಧೀನವಾಗುತ್ತವೆ.

ಧಾರಣಾ : ಇಚ್ಛಿಸಿದ ವಸ್ತು ಅಥವಾ ವಿಚಾರದ ಮೇಲೆ ಮನಸ್ಸನ್ನು ನಿಲ್ಲಿಸುವುದೇ ಧಾರಣ. ಧಾರಣದ ಅಭ್ಯಾಸದಿಂದ ಚಿತ್ತದ ಏಕಾಗ್ರತೆಯುಂಟಾಗಿ ಮನಸ್ಸನ್ನು ಒಂದೇ ವಿಚಾರದ ಕುರಿತಾಗಿ, ಬೇರೆ ಯಾವುದನ್ನೂ ಚಿಂತಿಸದೆ, ಮಗ್ನವಾಗಿರಿಸಲು ಸಾಧ್ಯವಾಗುತ್ತದೆ. ಹೀಗೆ ಧಾರಣಮಾಡುವುದನ್ನು ಶರೀರದ ಯಾವ ಭಾಗದ ಮೇಲಾಗಲಿ, ಅಥವಾ ಇಷ್ಟದೇವತೆಯ ಮೂರ್ತಿಸ್ವರೂಪ, ಜೀವನಚರಿತ್ರೆಯ ಮೇಲಾಗಲಿ, ಓಂ ಎಂಬ ದಿವ್ಯ ಶಬ್ದದ ಮೇಲೆಯಾಗಲಿ, ಸಾಧಕನಿಗೆ ಇಷ್ಟವಿರುವ ವಸ್ತುವಿಷಯಗಳ ಮೇಲೆಯಾಗಲಿ ಅಭ್ಯಾಸಮಾಡಬಹುದು. ಚಿತ್ತದ ಏಕಾಗ್ರತೆಯಲ್ಲಿ ಸಾಧಕನು ಪರಿಣತನಾದಾಗ ಮುಂದಿನ ಹೆಜ್ಜೆಯಾದ ಧ್ಯಾನವನ್ನು ಅನುಸರಿಸಲು ಸಾಧ್ಯವಾಗುತ್ತದೆ.

ಧ್ಯಾನ : ಧ್ಯಾನ ಎಂದರೆ ಮನಸ್ಸನ್ನು ಏಕಾಗ್ರಗೊಳಿಸಿ ಧ್ಯಾನವಸ್ತುವಿನ ಮೇಲೆ ಮನಸ್ಸನ್ನು ತನ್ಮಯಗೊಳಿಸುವುದಾಗಿದೆ. ಒಂದು ಪಾತ್ರೆಯಿಂದ ಇನ್ನೊಂದು ಪಾತ್ರೆಗೆ ತೈಲವನ್ನು ಸುರಿಯುವಾಗ ಅದರ ಧಾರೆ ಹೇಗೆ ಅವಿಚ್ಛಿನ್ನವಾಗಿ ಹರಿಯುವುದೋ ಹಾಗೆಯೇ ಧ್ಯಾನಮಾಡುವಾಗ ಸಾಧಕನು ತನ್ನ ಇಷ್ಟವಾಗಿ ಸ್ವೀಕರಿಸಿರುವ ಭಗವಂತನ ಆಕಾರ ಅಥವಾ ಗುಣಗಳ ಕುರಿತಾಗಿ ಚಿಂತನೆ ತನ್ಮಯತೆಗಳು ಅವಿಚ್ಛಿನ್ನವಾಗಿ ಸಾಗಬೇಕು. ದೇಹದ ಬೋಧೆಯು ಇಲ್ಲದಂತಾಗಿ ಧ್ಯಾನಮಾಡುವವನು, ಧ್ಯಾನದ ವಸ್ತು ಎರಡೂ ಒಂದಾಗುವಂತೆ ಸಾಧಕನು ಧ್ಯಾನದ ಮೆಟ್ಟಿಲಿನ ಸಾಧನೆಯಲ್ಲಿ ಮುಂದುವರಿಯಬೇಕು. ಆಗ ಅವನು ಮುಂದಿನ ಹಾಗೂ ಕೊನೆಯ ಮೆಟ್ಟಿಲಾದ ಸಮಾಧಿಯನ್ನು ತಲುಪಲು ಸಾಧ್ಯವಾಗುತ್ತದೆ.

ಸಮಾಧಿ : ಧ್ಯಾನಮಾಡುತ್ತಾ ದೇಹದ ಬೋಧೆ ಇಲ್ಲದಂತಾಗಿ ತನ್ನನ್ನು ಮರೆತು ತನ್ಮಯನಾಗಿ ಧ್ಯಾನದ ವಸ್ತುವಿನ ರೂಪ ಆರಾಧನೆಗಳನ್ನು ಬಿಟ್ಟು ಸಾರತತ್ತ್ವದಲ್ಲಿ ಲೀನವಾಗುವುದೇ ಸಮಾಧಿ. ಸಮಾಧಿಯು ರಾಜಯೋಗದ ಅಷ್ಟಾಂಗ ಮೆಟ್ಟಿಲಿನ ಕೊನೆಯ ಮೆಟ್ಟಿಲಾಗಿದೆ. ಸಮಾಧಿಯಲ್ಲಿ ಎರಡು ವಿಧಗಳಿವೆ : ಒಂದು ಸಂಪ್ರಜ್ಞಾತ ಸಮಾಧಿ, ಇನ್ನೊಂದು ಅಸಂಪ್ರಜ್ಞಾತ ಸಮಾಧಿ. ಸಂಪ್ರಜ್ಞಾತ ಸಮಾಧಿ ಎಂದರೆ ಪ್ರಜ್ಞೆಯಿಂದ ಕೂಡಿದ ಸಮಾಧಿಯಾಗಿದೆ. ಇದರಲ್ಲಿ ಮನಸ್ಸು ಧ್ಯೇಯವಸ್ತುವಿನ ಮೇಲೆ ಪೂರ್ಣ ಕೇಂದ್ರೀಕೃತವಾಗಿದ್ದರೂ ಕೂಡ ಮನಸ್ಸಿನ ಇರವು ಅನುಭವಕ್ಕೆ ಬರುತ್ತದೆ. ಅಸಂಪ್ರಜ್ಞಾತ ಸಮಾಧಿ ಎಂದರೆ ಮನಸ್ಸಿನ ಪ್ರಜ್ಞೆ ಇಲ್ಲದ ಸ್ಥಿತಿ. ಈ ಸ್ಥಿತಿಯಲ್ಲಿ ಮನಸ್ಸು ಕೆಲಸ ಮಾಡುವುದು ನಿಲ್ಲುತ್ತದೆ. ಧ್ಯಾನದ ವಿಷಯ, ಧ್ಯಾನಮಾಡುವ

ಸಾಧನವಾದ ಮನಸ್ಸು ಮತ್ತು ಧ್ಯಾನ ಎಂಬ ಕ್ರಿಯೆ ಇವು ಮೂರೂ ಬೇರೆ ಇಲ್ಲದಂತಾಗಿ ಆತ್ಮಾನಂದದ ಸ್ಥಿತಿ ಒಂದೇ ಇದ್ದು ಆತ್ಮವು ತನ್ನ ಆನಂದದಲ್ಲಿ ತನ್ಮಯವಾಗಿರುತ್ತದೆ. ಈ ಸ್ಥಿತಿಯನ್ನೇ ಕೈವಲ್ಯ ಎಂದು ಹೇಳಲಾಗಿದೆ. ಸಂಪ್ರಜ್ಞಾತಸಮಾಧಿಯಿಂದ ಆತ್ಮನಿಗೆ ಮೋಕ್ಷ ದೊರೆಯುವುದಿಲ್ಲ. ಅಸಂಪ್ರಜ್ಞಾತ ಸಮಾಧಿಯಿಂದ ಕೈವಲ್ಯ ದೊರೆಯುತ್ತದೆ. ಕೈವಲ್ಯಪ್ರಾಪ್ತಿಯಾದಾಗ ಆತ್ಮದ ಅಮರತ್ವದ ಅರಿವಿನ ಆನಂದದಲ್ಲಿ ಯೋಗಿಯು ತನ್ಮಯನಾಗಿ ಆತ್ಮಾನಂದಸ್ವರೂಪನಾಗಿ ಬೆಳಗುತ್ತಾನೆ.

ಧ್ಯಾನ, ಧಾರಣ, ಸಮಾಧಿ ಈ ಮೂರು ಮೆಟ್ಟಲುಗಳನ್ನು ಒಟ್ಟಾಗಿ ಉಪಯೋಗಿಸು ವುದನ್ನು ಸಂಯಮ ಎಂದು ಕರೆಯಲಾಗಿದೆ. ಹೀಗೆ ಸಂಯಮದ ಮೂಲಕ ಸಮಾಧಿಯ ಸಾಧನೆ ಸಾಗಿದಾಗ ಸಾಧಕನು ತಾನು ಶರೀರವಲ್ಲ, ಅನಂತಶಕ್ತಿಯುತವಾದ ಅಮರ ಆತ್ಮ; ಶರೀರ, ಕಾಲ, ನಿಮಿತ್ತ, ತ್ರಿಗುಣ—ಇತ್ಯಾದಿಗಳಿಂದ ಅತೀತನಾಗಿರುವವನು ಎಂಬ ಅರಿವನ್ನು ಪಡೆಯುತ್ತಾನೆ. ಈ ಕೈವಲ್ಯಪದವಿಯನ್ನು ಪಡೆದ ಸಾಧಕನು ಒಣಗಿದ ತೆಂಗಿನಕಾಯಿಯ ಒಳಗಿನ ಕೊಬ್ಬರಿಯಂತೆ ಬೇರೆಯಾಗಿ ದೇಹದಲ್ಲಿ ಆತ್ಮಸ್ವರೂಪನಾಗಿ ಇರುತ್ತಾನೆ. ಇವನೇ ಜೀವನ್ಮುಕ್ತ. ದೇಹ ಅಳಿದನಂತರ ಆತ್ಮವು ಸಚ್ಚಿದಾನಂದ ಪರಮಾತ್ಮನಲ್ಲಿ ಐಕ್ಯವಾಗುತ್ತದೆ. ಅದೇ ವಿದೇಹಮುಕ್ತಿ.

ರಾಜಯೋಗದ ಅಭ್ಯಾಸವನ್ನು ಆರಂಭಿಸಿ ಸಾಧನೆಯ ಮೆಟ್ಟಲುಗಳನ್ನು ಏರಿದಂತೆ ಧಾರಣ, ಧ್ಯಾನ, ಸಮಾಧಿಗಳನ್ನು ಒಟ್ಟಾಗಿ ಸಂಯಮವಿಧಾನದಲ್ಲಿ ಉಪಯೋಗಿಸಿದಾಗ ಅನೇಕ ರೀತಿಯ ಪವಾಡಗಳೂ, ಅಮಾನುಷವಾದ ಶಕ್ತಿಗಳೂ ರಾಜಯೋಗದ ಸಾಧಕ ನಿಗೆ ಲಭ್ಯವಾಗುತ್ತದೆ. ಹಿಂದಿನ ಜನ್ಮದ ಸ್ಮರಣೆಯನ್ನು ಪಡೆಯುವಿಕೆ, ಇಚ್ಛಿಸಿದ ವಸ್ತುವನ್ನು ಯತ್ನವಿಲ್ಲದೆ ಪಡೆಯುವಿಕೆ, ಅತೀಂದ್ರಿಯಶಕ್ತಿಯಿಂದ ಬಹುದೂರದಲ್ಲಿ ಇರುವ ವಸ್ತುಗಳನ್ನು ನೋಡುವ ಸಾಧ್ಯತೆ, ಅತಿದೂರದಿಂದ ಮಾತುಗಳನ್ನೂ ಶಬ್ದ ಗಳನ್ನೂ ಕೇಳುವಿಕೆ, ಇತರರ ಮನಸ್ಸಿನಲ್ಲಿ ಇರುವುದನ್ನು ತಿಳಿಯುವಿಕೆ, ಅದೃಶ್ಯನಾಗುವಿಕೆ ಇತ್ಯಾದಿ ಅನೇಕ ತರಹದ ಸಿದ್ಧಿಗಳು ಲಭ್ಯವಾಗಿ, ಪವಾಡಗಳನ್ನು ಮಾಡಲು ಸಾಧ್ಯ ವಾಗುವ ಶಕ್ತಿಯು ಲಭಿಸುತ್ತದೆ. ಈ ಶಕ್ತಿಯನ್ನು ಉಪಯೋಗಿಸಿ ಪವಾಡಗಳನ್ನು ಮಾಡಿದರೆ ಸಾಧಕನು ಮತ್ತೆ ಮನಸ್ಸಿನ ಬಾಹ್ಯ ಆಕರ್ಷಣೆಗೆ, ಷಡ್ವೈರಿಗಳ ಪ್ರಭಾವಕ್ಕೆ, ಹಲವು ರೀತಿಯ ಲೌಕಿಕ-ಆಧ್ಯಾತ್ಮಿಕ ಮತ್ತು ಮಾನಸಿಕ ತೊಂದರೆಗಳಿಗೆ ತುತ್ತಾಗಿ ಅಪಾಯಕ್ಕೆ ಸಿಲುಕುತ್ತಾನೆ. ಪರಿಣಾಮವಾಗಿ, ಯೋಗಭ್ರಷ್ಟನಾಗುತ್ತಾನೆ. ಸಿದ್ಧಿಪವಾಡ ಗಳಿಂದ ಯೋಗಿಗೆ ಭಗವಂತನು ದೊರೆಯುವುದಿಲ್ಲ, ಆತ್ಮಸಾಕ್ಷಾತ್ಕಾರವಾಗುವುದಿಲ್ಲ. ಆದ್ದರಿಂದ ಸಾಧಕನು ಈ ಸಿದ್ಧಿಗಳಿಂದೆಲ್ಲ ಆಕರ್ಷಿತನಾಗದೆ ದೃಢಮನಸ್ಕನಾಗಿ ಸಾಧನೆ ಯಲ್ಲಿ ಆತ್ಮಸಾಕ್ಷಾತ್ಕಾರದ ಗುರಿಯೊಂದನ್ನೇ ಇಟ್ಟುಕೊಂಡು ಮುಂದುವರಿಯಬೇಕು. ಸಿದ್ಧಿಗಳು ಲಭಿಸುವುದು ಮಾತ್ರವಲ್ಲದೆ ಹಲವು ರೀತಿಯ ದೇವದೇವಿಯರ ದರ್ಶನಗಳೂ ರಾಜಯೋಗದ ಸಾಧಕನಿಗೆ ತನ್ನ ಯೋಗಸಾಧನೆಯ ವಿವಿಧ ಹಂತಗಳಲ್ಲಿ ಲಭಿಸುತ್ತವೆ. ಇವುಗಳಲ್ಲೇ ತೃಪ್ತನಾಗದೆ ನಾಮರೂಪಗಳಿಗೆ ಅತೀತವಾದ ದಿವ್ಯವಾದ ಶಾಶ್ವತ ಆನಂದದ ಎಡೆಗೆ ಸಾಧಕನು ಸಾಗಬೇಕು. ಹಾಗಾದರೆ ಮಾತ್ರ ರಾಜಯೋಗಿಯು ಶಾಶ್ವತವಾದ

ಆಸ್ವಾದವನ್ನು ಪಡೆಯಬಲ್ಲವನಾಗುತ್ತಾನೆ. ಹೀಗೆ ರಾಜಯೋಗದಲ್ಲಿ ಸಾಧಕನು ತನ್ನ ಗುರಿಯನ್ನು ಸರಿಯಾಗಿ ಸೇರಲು ಸಾಕಷ್ಟು ಸುಗಮವಾದ ಸಾಧನಾ ಹಾದಿ ಇದೆಯಾದರೂ ಗುರಿ ತಪ್ಪಲು ಬೇಕಷ್ಟು ದಾರಿಬದಿಯ ಆಕರ್ಷಣೆಗಳೂ ಇವೆ. ಸಮರ್ಥನಾದ ಗುರುವಿನ ಮಾರ್ಗದರ್ಶನ, ಭಗವಂತನ ಅನುಗ್ರಹ, ಸ್ವಪ್ರಯತ್ನ ಮತ್ತು ಕ್ರಮಬದ್ಧವಾದ ಸಾಧನೆ ಇವುಗಳಿಂದ ಸಾಧಕನು ರಾಜಯೋಗದ ಪಥದಲ್ಲಿ ಸುಗಮವಾಗಿ ಸಾಗಿ ಗುರಿಯನ್ನು ಸುರಕ್ಷಿತವಾಗಿ ಸೇರಲು ಸಾಧ್ಯವಾಗುತ್ತದೆ.

ರಾಜಯೋಗದ ಸಾಧಕನು ದೇವರನ್ನು ನಂಬಿ, ದೇವರಲ್ಲಿ ಶರಣಾಗಿ ತನ್ನ ಸಾಧನೆಯನ್ನು ಮಾಡುತ್ತಾನೆ. ಇಷ್ಟದೇವತೆ, ಗುರು, ಗುರುವಿನಿಂದ ಮಂತ್ರದ ಉಪದೇಶ, ಶಾಸ್ತ್ರಪಠಣ, ಜಪ, ಧ್ಯಾನಾದಿಗಳು ರಾಜಯೋಗದಲ್ಲಿ ಅಡಕವಾಗಿರುವ ಸಾಧನಾಂಶಗಳು ಆಗಿರುತ್ತವೆ.

ಹೀಗೆ ರಾಜಯೋಗವು ಜೀವಾತ್ಮನನ್ನು ಜಗತ್ತಿನ ಸಂಸಾರಬಂಧನದಿಂದ ಬಿಡಿಸಿ ಪರಮಾತ್ಮನಲ್ಲಿ ಐಕ್ಯಗೊಳಿಸುವ ಸಾಧನಾಮಾರ್ಗದಿಂದ ಕೂಡಿರುವ ಒಂದು ಯೋಗಮಾರ್ಗವಾಗಿದ್ದು ಪ್ರಸಿದ್ಧವಾಗಿರುತ್ತದೆ.

ರಾಜಯೋಗದ ವಿಷಯದ ಸ್ಪಷ್ಟೀಕರಣೆಗಾಗಿ ಆಧಾರಗ್ರಂಥಗಳಿಂದ ಕೆಲವು ಸೂತ್ರ, ಶ್ಲೋಕಗಳನ್ನು ಈ ಕೆಳಗೆ ಉದಾಹರಿಸಲಾಗಿದೆ :

**ಯೋಗಶ್ಚಿತ್ತವೃತ್ತಿನಿರೋಧಃ ॥** —ಪಾತಂಜಲ ಯೋಗಸೂತ್ರಗಳು, ೧.೧

ಚಿತ್ತವೃತ್ತಿಗಳನ್ನು ನಿರೋಧಿಸುವುದೇ ಯೋಗ.

**ಅಭ್ಯಾಸವೈರಾಗ್ಯಾಭ್ಯಾಂ ತನ್ನಿರೋಧಃ ॥** —ಅದೇ, ೧.೧೨

ಅವುಗಳನ್ನು ಅಭ್ಯಾಸ ಮತ್ತು ವೈರಾಗ್ಯಗಳಿಂದ ನಿರೋಧಿಸುವುದು.

**ಕ್ಲೇಶಕರ್ಮವಿಪಾಕಾಶಯೈರಪರಾಮೃಷ್ಟಃ ಪುರುಷವಿಶೇಷ ಈಶ್ವರಃ ॥**

—ಅದೇ, ೧.೨೪

ಕ್ಲೇಶ, ಕರ್ಮ, ಅವುಗಳ ಫಲ ಮತ್ತು ಸಂಸ್ಕಾರಗಳಿಂದ ಕೂಡಿರದ ಪುರುಷವಿಶೇಷನೇ ಈಶ್ವರ.

**ತಸ್ಯ ವಾಚಕಃ ಪ್ರಣವಃ ॥** —ಅದೇ, ೧.೨೭

ಆವನ (ಈಶ್ವರನ) ವಾಚಕ ಶಬ್ದವು ಓಂ ಆಗಿರುತ್ತದೆ.

**ಯಮ-ನಿಯಮ-ಆಸನ-ಪ್ರಾಣಾಯಾಮ-ಪ್ರತ್ಯಾಹಾರ-ಧಾರಣಾ-ಧ್ಯಾನ-ಸಮಾಧಯೋಽಷ್ಟಾವಂಗಾನಿ ॥** —ಅದೇ, ೨.೨೯

ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಧಾರಣ ಧ್ಯಾನ ಮತ್ತು ಸಮಾಧಿ—ಇವು ಯೋಗದ ಎಂಟು ಅಂಗಗಳಾಗಿವೆ.

**ತೇ ಸಮಾಧಾವುಪಸರ್ಗಾ ವ್ಯುತ್ಥಾನೇ ಸಿದ್ಧಯಃ ॥** —ಅದೇ ೩.೩೮

ಇವುಗಳು (ಸಿದ್ಧಿಗಳು) ಸಮಾಧಿಯನ್ನು ಪಡೆಯುವುದಕ್ಕೆ ಆತಂಕಗಳು ; ಆದರೆ ವ್ಯವಹಾರದಶೆಯಲ್ಲಿ ವಿಶೇಷವಾದ ಶಕ್ತಿಗಳು.

ಪುರುಷಾರ್ಥಶೂನ್ಯಾನಾಂ ಗುಣಾನಾಂ ಪ್ರತಿಪ್ರಸವಃ ಕೈವಲ್ಯಂ ಸ್ವರೂಪ
ಪ್ರತಿಷ್ಠಾ ಚಿತಿಶಕ್ತಿರಿತಿ ॥
—ಅದೇ. ೪ ೩೩

(ಸಾಧಿಸಬೇಕಾದ) ಪುರುಷಾರ್ಥಗಳಿಲ್ಲದಿರುವ ಗುಣಗಳು (ಪ್ರಧಾನದಲ್ಲಿ) ಲಯ ಹೊಂದುವುದೇ ಕೈವಲ್ಯ ; ಅಥವಾ ಚಿತಿಶಕ್ತಿಯು ತನ್ನ ಸ್ವರೂಪದಲ್ಲಿ ನೆಲೆನಿಲ್ಲುವುದೇ (ಕೈವಲ್ಯ).

ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ ।
ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ॥
—ಗೀತಾ, ಅಧ್ಯಾಯ ೬, ಶ್ಲೋಕ ೧೦

ನಿರ್ಜನಪ್ರದೇಶದಲ್ಲಿ ಇದ್ದುಕೊಂಡು, ಏಕಾಕಿಯಾಗಿ, ಯತಚಿತ್ತಾತ್ಮನೂ ನಿರಾಶಿಯೂ ಅಪರಿಗ್ರಹನೂ ಆಗಿ ಯೋಗಿಯು ಯಾವಾಗಲೂ ಮನಸ್ಸನ್ನು ಯೋಗದಲ್ಲಿ ಇಡಬೇಕು.

ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ ।
ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮವಿಶುದ್ಧಯೇ ॥
—ಗೀತಾ, ಅಧ್ಯಾಯ ೬, ಶ್ಲೋಕ ೧೨

ಆ ಆಸನದ ಮೇಲೆ ಕುಳಿತುಕೊಂಡು, ಮನಸ್ಸನ್ನು ಏಕಾಗ್ರವಾಗಿ ಮಾಡಿ, ಚಿತ್ತೇಂದ್ರಿಯಗಳನ್ನು ನಿಗ್ರಹಿಸಿ ಅಂತಃಕರಣಶುದ್ಧಿಯಾಗಿ ಯೋಗವನ್ನು ಮಾಡಬೇಕು.

ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ ।
ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥
—ಗೀತಾ, ಅಧ್ಯಾಯ ೬, ಶ್ಲೋಕ ೧೪

ಪ್ರಶಾಂತಾತ್ಮನೂ, ನಿರ್ಭಯನೂ ಆಗಿ, ಬ್ರಹ್ಮಚರ್ಯವ್ರತದಲ್ಲಿ ಇರುವವನಾಗಿ, ಮನಸ್ಸನ್ನು ಸಂಯಮ ಮಾಡಿಕೊಂಡು ತನ್ನಲ್ಲಿಯೇ ಚಿತ್ತವುಳ್ಳವನಾಗಿ ನಾನೇ ಪರಮ ಗತಿಯೆಂದು ಭಾವಿಸಿ (ಯೋಗ)ಯುಕ್ತನಾಗಿರಬೇಕು.

ಯುಂಜನ್ನೇವಂ ಸದಾಽಽತ್ಮಾನಂ ಯೋಗೀ ನಿಯತಮಾನಸಃ ।
ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥
—ಗೀತಾ, ಅಧ್ಯಾಯ ೬, ಶ್ಲೋಕ ೧೫

(ಹೀಗೆ) ಮನಸ್ಸನ್ನು ನಿಗ್ರಹಿಸಿದ ಯೋಗಿಯು ಮನಸ್ಸನ್ನು ತನ್ನಲ್ಲಿಯೇ ಯಾವಾಗಲೂ ಸೇರಿಸಿಕೊಳ್ಳುತ್ತಾ ನನ್ನನ್ನು ಪಡೆದರೆ ಸಿಗುವ ಮೋಕ್ಷರೂಪವಾದ ಪರಮ ಶಾಂತಿಯನ್ನು ಪಡೆಯುತ್ತಾನೆ.

ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।
ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥
—ಗೀತಾ, ಅಧ್ಯಾಯ ೧೫, ಶ್ಲೋಕ ೧೭

ಆಹಾರವಿಹಾರದಲ್ಲಿಯೂ, ಬೇರೆ ಕರ್ಮಗಳಲ್ಲಿಯೂ, ನಿದ್ದೆ-ಎಚ್ಚರಗಳಲ್ಲಿಯೂ ಪರಿಮಿತಿಯುಳ್ಳ ಮನುಷ್ಯನ ಯೋಗವು ದುಃಖನಾಶಕವಾಗುತ್ತದೆ.

ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।
ಯತ್ರ ಚೈವಾತ್ಮನಾಽಽತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥

ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಮ್ ।
ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥
ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।
ಯಸ್ಮಿನ್ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥
ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್ ।
ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣಚೇತಸಾ ॥

—ಗೀತಾ, ಅಧ್ಯಾಯ ೬, ಶ್ಲೋಕ ೨೦-೨೩

ಯಾವಾಗ ಯೋಗಸೇವೆಯಿಂದ ನಿರೋಧಿಸಲ್ಪಟ್ಟ ಚಿತ್ತವು ಶಾಂತವಾಗುವುದೋ, ಯಾವಾಗ ಶುದ್ಧವಾದ ಮನಸ್ಸಿನಿಂದ ಆತ್ಮನನ್ನು ನೋಡುತ್ತಾ ಇವನು ತನ್ನಲ್ಲಿಯೇ ಸಂತೋಷಪಡುವನೋ ಮತ್ತು ಬುದ್ಧಿಗ್ರಾಹ್ಯವೂ ಇಂದ್ರಿಯಾತೀತವೂ ನಿತ್ಯವೂ ಆದ ಯಾವ ಸುಖವಿದೆಯೋ ಅದನ್ನು ತಿಳಿಯುತ್ತಾನೋ, ಯಾವುದರಲ್ಲಿ ಇದ್ದುಕೊಂಡು ತತ್ತ್ವದಿಂದ ಚಲಿಸದೆ ಇರುವನೋ, ಯಾವುದನ್ನು ಹೊಂದಿ ಬೇರೆ ಲಾಭವನ್ನು ಅದಕ್ಕಿಂತ ಅಧಿಕ ಎಂದು ಎಣಿಸುವುದಿಲ್ಲವೋ, ಯಾವುದರಲ್ಲಿ ಇದ್ದುಕೊಂಡು ಮಹತ್ತಾದ ದುಃಖದಿಂದಲೂ ಚಲಿಸದೆ ಇರುವನೋ, ದುಃಖಸಂಬಂಧವನ್ನು ದೂರಮಾಡುವ ಅದನ್ನು ಯೋಗ ಎಂಬ ಹೆಸರುಳ್ಳದ್ದು ಎಂದು ತಿಳಿಯಬೇಕು. ಅಂತಹ ಯೋಗವನ್ನು ನಿಶ್ಚಯವಾದ ಮತ್ತು ಉತ್ಸಾಹಯುಕ್ತವಾದ ಚಿತ್ತದಿಂದ ಮಾಡಬೇಕು.

ಸಂಕಲ್ಪಪ್ರಭವಾನ್ ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ ।
ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ ॥
ಶನೈಃ ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ ।
ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ ॥

—ಗೀತಾ, ಅಧ್ಯಾಯ ೬, ಶ್ಲೋಕ ೨೪-೨೫

ಸಂಕಲ್ಪದಿಂದ ಉತ್ಪನ್ನವಾದ ಎಲ್ಲಾ ಕಾಮಗಳನ್ನೂ ಸಂಪೂರ್ಣವಾಗಿ ತ್ಯಜಿಸಿ, ಮನಸ್ಸಿನಿಂದಲೇ ಇಂದ್ರಿಯಗಳ ಸಮೂಹವನ್ನು ಎಲ್ಲಾ ಕಡೆಯಿಂದಲೂ ನಿಗ್ರಹಿಸಿ, ಧೈರ್ಯದಿಂದ ಕೂಡಿದ ಬುದ್ಧಿಯಿಂದ ಮೆಲ್ಲಮೆಲ್ಲಗೆ ಹಿಂತಿರುಗಬೇಕು; ಮನಸ್ಸನ್ನು ಆತ್ಮನಲ್ಲಿ ನಿಲ್ಲಿಸಿ ಏನನ್ನೂ ಚಿಂತಿಸಕೂಡದು.

ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ ।
ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥

—ಗೀತಾ, ಅಧ್ಯಾಯ ೬, ಶ್ಲೋಕ ೨೬

ಚಂಚಲವೂ ಅಸ್ಥಿರವೂ ಆದ ಮನಸ್ಸು ಯಾವ ಯಾವ ವಿಷಯದಿಂದ ಹೊರ ಬರುವುದೋ ಆ ವಿಷಯದಿಂದ ಇದನ್ನು (ಮನಸ್ಸನ್ನು) ನಿಗ್ರಹಿಸಿ ಆತ್ಮನಲ್ಲಿಯೇ ವಶಪಡಿಸಿಕೊಳ್ಳಬೇಕು.

ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।
ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಮ್ ॥

ಪ್ರಶಾಂತಚಿತ್ತನೂ ರಜೋಗುಣ ಇಲ್ಲದವನೂ ಕಲ್ಮಷರಹಿತನೂ ಬ್ರಹ್ಮಭಾವವನ್ನು ಹೊಂದಿದವನೂ ಆದ ಈ ಯೋಗಿಯನ್ನು ಉತ್ತಮ ಸುಖವು ಬಂದು ಸೇರುತ್ತದೆ.

ಯುಂಜನ್ನೇವ ಸದಾऽऽತ್ಮಾನಂ ಯೋಗೀ ವಿಗತಕಲ್ಮಷಃ ।
ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ॥

ಹೀಗೆ ಆತ್ಮನನ್ನು ಯಾವಾಗಲೂ ಯೋಗದಲ್ಲಿಟ್ಟುಕೊಂಡು ಕಲ್ಮಷರಹಿತನಾದ ಯೋಗಿಯು ಆಯಾಸವಿಲ್ಲದೆ ಬ್ರಹ್ಮಸಂಸ್ಪರ್ಶವೆಂಬ ಉತ್ಕೃಷ್ಟವಾದ ಸುಖವನ್ನು ಪಡೆಯುತ್ತಾನೆ.

ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।
ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶಿನಃ ॥

ಎಲ್ಲೆಲ್ಲಿಯೂ ಸಮದರ್ಶಿಯಾಗಿರುವ ಯೋಗಯುಕ್ತಾತ್ಮನು ಆತ್ಮನನ್ನು ಸರ್ವ ಪ್ರಾಣಿಗಳಲ್ಲಿಯೂ, ಸರ್ವಪ್ರಾಣಿಗಳನ್ನು ಆತ್ಮನಲ್ಲಿಯೂ ಕಾಣುತ್ತಾನೆ.

ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।
ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥

—ಗೀತಾ, ಅಧ್ಯಾಯ ೬, ಶ್ಲೋಕ ೨೮-೩೦

ಯಾವನು ನನ್ನನ್ನು ಎಲ್ಲೆಲ್ಲಿಯೂ ನೋಡುವನೋ ಮತ್ತು ಎಲ್ಲವನ್ನೂ ನನ್ನಲ್ಲಿಯೇ ನೋಡುವನೋ ಅವನಿಗೆ ನಾನು ಕಾಣದೆ ಹೋಗುವುದಿಲ್ಲ ಮತ್ತು ಅವನು ನನಗೆ ಕಾಣದೆ ಹೋಗುವುದಿಲ್ಲ.

ಯಥೈವ ಬಿಂಬಂ ಮೃದಯೋಪಲಿಪ್ತಂ
ತೇಜೋಮಯಂ ಭ್ರಾಜಯತೇ ತತ್ಸುಧಾಂತವ್ ।
ತದ್ವಾऽऽತ್ಮತತ್ತ್ವಂ ಪ್ರಸಮೀಕ್ಷ್ಯ ದೇಹೀ
ಏಕಃ ಕೃತಾರ್ಥೋ ಭವತೇ ವೀತಶೋಕಃ ॥

—ಶ್ವೇತಾಶ್ವತರೋಪನಿಷತ್ ಅಧ್ಯಾಯ ೨, ಶ್ಲೋಕ ೧೪

ಧೂಳಿನಿಂದ ಆವೃತವಾದ ಕನ್ನಡಿಯು ಧೂಳನ್ನು ಒರೆಸಿ ಶುಚಿಗೊಳಿಸಿದಾಗ ನಿರ್ಮಲ ವಾದ ತೇಜೋಮಯವಾಗುವಂತೆ ದೇಹಧಾರಿಯಾದವನು ಆತ್ಮತತ್ತ್ವವನ್ನು ಅರಿತಾಗ (ಸಾಕ್ಷಾತ್ಕಾರ ಮಾಡಿಕೊಂಡಾಗ) ಅದ್ವಿತೀಯನೂ, ಕೃತಾರ್ಥನೂ ಆಗಿ ಶೋಕರಹಿತ ನಾಗುತ್ತಾನೆ.

### ಜ್ಞಾನಯೋಗ

ಜ್ಞಾನ ಎಂದರೆ ವಿಚಾರ, ತಿಳಿವಳಿಕೆ. ಜ್ಞಾನಯೋಗ ಎಂದರೆ ವಿಚಾರ-ವಿವೇಕಗಳ ಮೂಲಕ ಜೀವಾತ್ಮನು ಜೀವನದ ಬಂಧನಗಳಿಂದ ಮುಕ್ತನಾಗಿ ಪರಮಾತ್ಮನಲ್ಲಿ ಐಕ್ಯವಾಗುವುದು ಎಂದು ತಾತ್ಪರ್ಯ. ಬ್ರಹ್ಮವೊಂದೇ ಸತ್ಯ, ಉಳಿದುದೆಲ್ಲವೂ ಮಿಥ್ಯೆ ಎಂಬುದನ್ನು ವಿಚಾರದ ಮೂಲಕ, ವಿವೇಕದ ಮೂಲಕ ಜೀವನು ತಿಳಿದುಕೊಂಡು ಬ್ರಹ್ಮಸಾಕ್ಷಾತ್ಕಾರಪಡೆಯುವುದೇ ತಾತ್ಪರ್ಯವಾಗಿ ಜ್ಞಾನಯೋಗ ಎಂದೆನಿಸಿರುತ್ತದೆ.

ಜೀವನದ ಆಗುಹೋಗುಗಳಾದ ಸೃಷ್ಟಿಸ್ಥಿತಿಲಯಗಳು, ಸುಖದುಃಖಗಳು—ಇವುಗಳು ಏಕೆ ಆಗುತ್ತಿವೆ? ಇವುಗಳ ಹಿನ್ನೆಲೆಯಲ್ಲಿ ಇವಕ್ಕೆಲ್ಲ ಕಾರಣವಾಗಿ ಏನಿದೆ? 'ಪಂಚಭೂತ ಗಳಿಂದ ರೂಪುಗೊಂಡಿರುವುದೆಂದು ಹೇಳಲಾಗಿರುವ ಈ ಶರೀರ ಎಂದರೆ ಏನು ?—

ಜೀವನದಲ್ಲಿ 'ನಾನು' ಎಂಬ ಭಾವನೆಯೊಡನೆ ನಡೆಸುವ ವ್ಯವಹಾರಗಳ ಹಿನ್ನೆಲೆಯಲ್ಲಿರುವ ಈ 'ನಾನು' ಎಂದರೆ ಯಾರು ? ಈಗ ಚೆನ್ನಾಗಿದ್ದು ನಾಳೆ ಹಾಳಾಗುವ ಈ ಶರೀರವೇ 'ನಾನು' ಎಂದು ಹೇಳಬೇಕೆ ? ಅಥವಾ ಇಲ್ಲವೇ ? ದೇವರೆಂದರೆ ಯಾರು ? ಅವನು ಸರ್ವಾಂತರ್ಯಾಮಿಯೇ ? ಸರ್ವಶಕ್ತನೇ ? ಅವನು ಸಗುಣಸಾಕಾರನೇ ? ನಿರ್ಗುಣ ನಿರಾಕಾರನೇ ? ಅವನ ಸೃಷ್ಟಿಯಲ್ಲಿ ಇಷ್ಟೊಂದು ವೈವಿಧ್ಯವೈಚಿತ್ರ್ಯಗಳೇಕೆ ಇವೆ ?— ಎಂಬಿತ್ಯಾದಿ ಗಹನವಾದ ವಿಚಾರಗಳ ಕುರಿತಾಗಿ ಜ್ಞಾನಯೋಗದ ಸಾಧಕನು ಪ್ರಶ್ನಿಸಿ, ಆಳವಾಗಿ ಚಿಂತಿಸಿ, ವಿವರವಾಗಿ ವಿಮರ್ಶಿಸಿ ಸತ್ಯವನ್ನು ಕಾಣುತ್ತಾನೆ. ಸರಿಯಾದ ಉತ್ತರವನ್ನು ವಿವೇಕದ ಬೆಳಕಿನಲ್ಲಿ ಅನ್ವೇಷಿಸಿ ಸ್ವತಃ ಅನುಭವದ ಮೂಲಕ ಪಡೆಯುತ್ತಾನೆ. ಇದೇ ಜ್ಞಾನಯೋಗ ಎಂದೆನಿಸಿರುತ್ತದೆ. ಜ್ಞಾನ ಎಂದರೆ ತಿಳಿವಳಿಕೆ ಎಂದರ್ಥವಾದರೂ, ಪುಸ್ತಕದ ಜ್ಞಾನ ಇಲ್ಲಿ ನಿಜವಾದ ಜ್ಞಾನವಲ್ಲ. ಪರಾ ಮತ್ತು ಅಪರಾ ಎಂಬ ಎರಡು ತರಹದ ಜ್ಞಾನ ಇದೆ ಎಂದು ಜ್ಞಾನಯೋಗಶಾಸ್ತ್ರ ಹೇಳುತ್ತದೆ. ಅಪರಾಜ್ಞಾನವು ಲೌಕಿಕಶಾಸ್ತ್ರ, ಗಣಿತ, ರಾಜಕೀಯ ವಿದ್ಯೆ, ಶಾಸ್ತ್ರವಿಚಾರಗಳು, ಚಿತ್ರಕಲೆ, ಶಿಲ್ಪ ಇತ್ಯಾದಿಗಳ ಜ್ಞಾನವೇ ಆಗಿರುತ್ತದೆ. ಪರಾಜ್ಞಾನ ಎಂದರೆ ಬ್ರಹ್ಮ ಜಗತ್ತು ಜೀವ ಇವುಗಳಿಗೆ ಸಂಬಂಧಪಟ್ಟುದಾಗಿದ್ದು ಶಾಶ್ವತವಾದ ಜ್ಞಾನವಾಗಿರುತ್ತದೆ. ಪರಾಜ್ಞಾನವೇ ಜ್ಞಾನಯೋಗದ ಗುರಿಯಾಗಿದ್ದು ಸಾಧಕನು ಪ್ರತ್ಯಕ್ಷವಾಗಿ ಆತ್ಮಾನುಭೂತಿಯನ್ನು ಪಡೆಯುವುದೇ ಈ ಯೋಗದ ಸಾಧನಾಸಿದ್ಧಿಯಾಗಿರುತ್ತದೆ.

ಜ್ಞಾನಯೋಗದ ಸಾಧಕನು ಭಾವುಕತೆ, ಭಯ, ದಾಕ್ಷಿಣ್ಯಸ್ವಭಾವ ಇತ್ಯಾದಿಗಳನ್ನೆಲ್ಲ ಪೂರ್ತಿಯಾಗಿ ತ್ಯಜಿಸಿ ದೃಢಮನಸ್ಸು, ಅತಿಚುರುಕುಬುದ್ಧಿ, ಆಳವಾದ ಶ್ರದ್ಧೆ, ಅಚಲವಾದ ಆತ್ಮವಿಶ್ವಾಸಗಳಿಂದ ಕೂಡಿರಬೇಕು. ಜೀವನದ ಪ್ರತಿ ಸನ್ನಿವೇಶ ಸಂಗತಿಗಳನ್ನು ವಿಚಾರದ ಒರೆಗಲ್ಲಿಗೆ ಹಚ್ಚಿ ಶಾಶ್ವತವಾದುದನ್ನು ಮಾತ್ರ ಆರಿಸಿ, ಸ್ವೀಕರಿಸಿ, ಅಶಾಶ್ವತವಾದುದನ್ನು ಬೇರ್ಪಡಿಸಿ ಬಿಟ್ಟುಬಿಡುತ್ತಾ ಸಾಧನೆಯ ಪಥದಲ್ಲಿ ಮುಂದೆ ಸಾಗಬೇಕು. ವೇದೋಪನಿಷದಾದಿ ಶ್ರುತಿಶಾಸ್ತ್ರದಲ್ಲಿ ಹೇಳಿರುವ ಆತ್ಮವಿದ್ಯಾವಿಚಾರಗಳನ್ನು ಜ್ಞಾನಯೋಗಿಯು ಗುರುಮುಖೇನ ಕೇಳಿ ತನ್ನಲ್ಲಿ ಮನನಮಾಡಿ ಅವುಗಳ ಕುರಿತಾಗಿ ವಿಚಾರ ಮಾಡುತ್ತಾ ಅವುಗಳಲ್ಲಿ ಹೇಳಿದ ಸತ್ಯವನ್ನು ಸ್ವತಃ ಸಾಕ್ಷಾತ್ಕರಿಸುತ್ತಾನೆ. ಜ್ಞಾನಯೋಗ ಸಾಧನೆಯನ್ನು ಮಾಡುತ್ತಾ, ಬ್ರಹ್ಮ, ಜೀವ, ಜಗತ್ತು ಎಂಬೀ ವಿಚಾರಗಳ ಕುರಿತಾಗಿ ತರ್ಕ, ನ್ಯಾಯ, ವಿಮರ್ಶೆಗಳನ್ನು ಮಾಡಿ ಜ್ಞಾನಯೋಗಿಯು ಪರವಸ್ತು ಅಥವಾ ಬ್ರಹ್ಮವಸ್ತು ಇದಲ್ಲ, 'ನೇತಿ, ನೇತಿ' ಎನ್ನುತ್ತಾ ಕೊನೆಗೆ ಶಾಶ್ವತವಾಗಿ ಇರುವ, ನಿಜವಾಗಿ ಒಂದೇ ತತ್ತ್ವವಾದ 'ಬ್ರಹ್ಮ'ದ ಸಾಕ್ಷಾತ್ಕಾರವನ್ನು ಪಡೆಯುತ್ತಾನೆ. ಜಗತ್ತಿನಲ್ಲಿ ಸತ್ಯವಾದುದು ಬ್ರಹ್ಮವಸ್ತು ಒಂದೇ. ಉಳಿದುದೆಲ್ಲವೂ ಬರೇ ನಾಮರೂಪಗಳಾಗಿದ್ದು ಮಿಥ್ಯೆಯಾಗಿವೆ —ಎಂಬ ದಿವ್ಯತತ್ತ್ವಜ್ಞಾನವು ಜ್ಞಾನಯೋಗಿಯ ನಿತ್ಯದನುಭವವಾಗುತ್ತದೆ. ಅದೇ ಜ್ಞಾನಯೋಗದ ಗುರಿಯಾಗಿರುತ್ತದೆ.

ಜ್ಞಾನಯೋಗಿಯು ಜೀವನದ ಕಷ್ಟಸುಖಗಳಿಂದಾಗಲಿ ಲಾಭನಷ್ಟಗಳಿಂದಾಗಲಿ ಪ್ರಭಾವಿತನಾಗದೆ ಪರವಸ್ತುವಾದ ಏಕಮೇವಾದ್ವಿತೀಯವಾದ 'ಬ್ರಹ್ಮ'ದ ಅನುಭವ

ಆನಂದವನ್ನು ಅನುಭವಿಸುತ್ತ ಸದಾ ಸಂತುಷ್ಟನೂ ತೃಪ್ತನೂ ಸ್ಥಿತಪ್ರಜ್ಞನೂ ಆಗಿ ಜಗತ್ತಿನಲ್ಲಿ ಬ್ರಹ್ಮವೊಂದಲ್ಲದೆ ಬೇರೆ ಏನನ್ನೂ ಕಾಣದೇ ಬ್ರಹ್ಮಾನಂದಸ್ವರೂಪನಾಗಿರುತ್ತಾನೆ.

ಜ್ಞಾನಯೋಗದಿಂದ ಆಧಿಭೌತಿಕ ತಿಳಿವಳಿಕೆಯೂ, ಆಧ್ಯಾತ್ಮಿಕ ಸಾಕ್ಷಾತ್ಕಾರವೂ ಲಭಿಸುತ್ತದೆ. ಜ್ಞಾನಯೋಗದಿಂದ ಜ್ಞಾನಯೋಗಿಯು ಸರ್ವವ್ಯಾಪಿಯಾದ ಬ್ರಹ್ಮವನ್ನು ಜಗದ ಹಾಗೂ ಜೀವನದ ವಿಶಿಷ್ಟವ್ಯಾಪಾರಗಳಲ್ಲಿ ಅನುಭವಿಸಿ 'ಸರ್ವಂ ಖಲ್ವಿದಂ ಬ್ರಹ್ಮ' —ಎಲ್ಲವೂ ಬ್ರಹ್ಮವೇ ಎಂಬ ದಿವ್ಯ ಅನುಭೂತಿಯನ್ನು ಪಡೆಯುತ್ತಾನೆ. ತನ್ಮೂಲಕ ಜೀವನದ ಸಂಸಾರಬಂಧನದಿಂದ ಮುಕ್ತನಾಗಿ 'ಜೀವನ್ಮುಕ್ತ' ಎಂದೆನಿಸುತ್ತಾನೆ.

ತನ್ನ ಶರೀರ ಜಗತ್ತು ತಾನು ಎಲ್ಲವೂ ಅವಿನಾಶಿಯೂ, ಸತ್ಯಸನಾತನವೂ ಆದ ಬ್ರಹ್ಮ ಎಂಬ ದಿವ್ಯಜ್ಞಾನ ಉಂಟಾಗಿ, ಜೀವನ್ಮುಕ್ತನೂ ನಿತ್ಯತೃಪ್ತನೂ ನಿತ್ಯಾನಂದಸ್ವರೂಪನೂ ನಿರಂಜನನೂ ಆಗುತ್ತಾನೆ. ಹೀಗೆ ಮೊದಲು ವಿಚಾರವಿಮರ್ಶೆಗಳ ಹಂತದಲ್ಲಿ ಆರಂಭ ಮಾಡಿ ಕೊನೆಗೆ ಜ್ಞಾನಯೋಗಿಯು ಸರ್ವಸಂಶಯಗಳಿಂದ ನಿವೃತ್ತನಾಗಿ ನಿತ್ಯಮುಕ್ತನಾಗುತ್ತಾನೆ. ಜ್ಞಾನಯೋಗಿಯು ಈ ಜೀವನದಲ್ಲಿಯೇ ದೇಹಸಹಿತನಾಗಿ ಮುಕ್ತಿಯನ್ನು ಪಡೆಯಬಹುದು ಎಂದು ಹೇಳಿ ಅದನ್ನು 'ಜೀವನ್ಮುಕ್ತಿ' ಎಂದು ಕರೆಯಲಾಗಿದೆ. ದೇಹಸಹಿತನಾಗಿರುವಾಗ ಜೀವನ್ಮುಕ್ತನಾದವನು ಪಂಚಭೂತಗಳಿಂದ ಆದ ದೇಹವು ಮರಳಿ ತನ್ನ ಮೂಲಕ್ಕೆ ಸೇರಿದಾಗ ವಿದೇಹಮುಕ್ತಿಯನ್ನು ಪಡೆಯುತ್ತಾನೆ.

ಯಾವ ಯೋಗವೇ ಆಗಲಿ ಅದು ಜೀವಾತ್ಮನು ಪರಮಾತ್ಮನನ್ನು ಸೇರಲು ಇರುವ ಒಂದು ಪಥವೇ ವಿನಾ ಬೇರೇನಲ್ಲ. ಪ್ರತಿಯೊಂದು ಯೋಗಕ್ಕೂ ಪೂರ್ವಭಾವಿಯಾಗಿ ಸಾಧಕನು ಚಿತ್ತಶುದ್ಧಿ ಹಾಗೂ ಸಾಧನಾಸಿದ್ಧತೆಗಳನ್ನು ಮಾಡಿ ಸಾಧನೆಗೆ ಅರ್ಹತೆಯನ್ನು ಗಳಿಸಬೇಕಾಗಿದೆ. ಹಾಗೆಯೆ ಜ್ಞಾನಯೋಗಕ್ಕೂ ಕೂಡ ಸಂಬಂಧಿಸಿದ ಯಥೋಚಿತವಾದ ಸಾಧನಾವಿವರಗಳು ಇವೆ. ಅವುಗಳನ್ನು ಸಾಧಕನು ಅಭ್ಯಾಸ ಮಾಡಿ ತನ್ನಲ್ಲಿ ರೂಢಿಸಿಕೊಂಡಾಗ ಮಾತ್ರ ಅವನ ಮುಂದಿನ ಹಾದಿ ಸುಗಮವಾಗಿ ಗುರಿಯನ್ನು ಸೇರಲು ಸಾಧ್ಯವಾಗುತ್ತದೆ.

ಜ್ಞಾನಯೋಗದ ಸಾಧಕನು ರೂಢಿಸಿಕೊಳ್ಳಬೇಕಾದ ಗುಣಾಂಶಗಳನ್ನು ನಾಲ್ಕು ಎಂದು ನಿಶ್ಚಯಿಸಲಾಗಿದೆ. ಅದನ್ನು ಸಾಧನಚತುಷ್ಟಯ ಎಂದು ಕರೆಯುತ್ತಾರೆ. ಅವು ಯಾವುವೆಂದರೆ :

(೧) ನಿತ್ಯಾನಿತ್ಯ-ವಸ್ತು ವಿವೇಕ. (ವಿವೇಕ)

(೨) ಇಹಾಮುತ್ರಾರ್ಥ-ಫಲಭೋಗ-ವಿರಾಗ. (ವೈರಾಗ್ಯ)

(೩) ಶಮಾದಿಷಟ್ಕ-ಸಂಪತ್ತು.

(೪) ಮುಮುಕ್ಷುತ್ವ.

(ಸಾಧನಚತುಷ್ಟಯ ಮತ್ತು ಜ್ಞಾನಯೋಗದ ಇತರ ಕೆಲವು ಸಂಗತಿಗಳ ಬಗೆಗೆ 'ಅದ್ವೈತಮತ' ಎಂಬ ಅಧ್ಯಾಯದಲ್ಲಿ ಯಥೋಚಿತವಾದ ವಿವರವನ್ನು ಈಗಾಗಲೇ ನೀಡಿ ಆಗಿದೆ. ಪುನಃ ಅದನ್ನು ಇಲ್ಲಿ ವಿವರಿಸುವುದು ಅಗತ್ಯವಿಲ್ಲ. ಆದರೂ ಕೂಡ ಅಧ್ಯಾಯದ ವಿಷಯದ ಸಂಕ್ಷೇಪವಾದ ಸ್ಪಷ್ಟೀಕರಣೆಗಾಗಿ ಮತ್ತು ಈ ಅಧ್ಯಾಯಕ್ಕೆ

ಸಂಬಂಧಿಸಿದ ವಿಚಾರವನ್ನು ಒಂದೆಡೆಯಲ್ಲೇ ಸಂಗ್ರಹಮಾಡಲು ಮತ್ತು ತಿಳಿಯಲು ಅನುಕೂಲವಾಗುವುದಕ್ಕಾಗಿ ಮತ್ತೊಮ್ಮೆ ಅವುಗಳನ್ನು ಇಲ್ಲಿ ವಿವರಿಸಲಾಗಿದೆ.)

ನಿತ್ಯಾನಿತ್ಯವಸ್ತುವಿವೇಕ : ಜಗತ್ತಿನಲ್ಲಿ ನಿತ್ಯವಾದ ವಸ್ತುವಾವುದು, ಅನಿತ್ಯವಾದ ವಸ್ತುವಾವುದು ? ಈ ಪ್ರಪಂಚದ ಆಗುಹೋಗುಗಳ ಹಿನ್ನೆಲೆಯಲ್ಲಿ ಏನಿದೆ ?—ಎಂದು ವಿಚಾರಮಾಡಬೇಕು. ಆಗ, ಬದಲಾಗುತ್ತಿರುವ, ಅನಿತ್ಯವಾದ ಜೀವನ-ಜಗತ್ತುಗಳ ವಿಚಾರ—ವ್ಯವಹಾರಗಳ ಹಿಂದೆ ಬದಲಾಗದ, ಶಾಶ್ವತವಾದ ಒಂದು ತತ್ತ್ವ ಇದೆ ; ಅದೇ ಬ್ರಹ್ಮ ಎಂಬ ತಿಳಿವಳಿಕೆ, ದೃಢನಂಬಿಕೆ ಉಂಟಾಗುತ್ತದೆ. ಇದನ್ನೇ ನಿತ್ಯ ಅನಿತ್ಯ ವಸ್ತು ವಿವೇಕ ಎಂದು ಹೇಳಿದೆ. ಈ ವಿವಿಧ ಆಕರ್ಷಣೆ, ಸುಖದುಃಖಗಳಿಂದ ಕೂಡಿರುವ ಪ್ರಪಂಚದ ಸಂಗತಿಗಳೆಲ್ಲವೂ ಅಶಾಶ್ವತ, ಅವುಗಳ ಹಿನ್ನೆಲೆಯಲ್ಲಿರುವ ಬ್ರಹ್ಮ (ಪರಮಾತ್ಮ) ಮಾತ್ರ ಶಾಶ್ವತ ಎಂಬ ವಿವೇಕ ಬೆಳೆದರೆ ಮಾತ್ರ ಜಗತ್ತಿನ ಆಕರ್ಷಣೆ, ಸುಖಭೋಗಗಳ ಬಗೆಗೆ ಸಾಧಕನಿಗೆ ವೈರಾಗ್ಯವು ಮೂಡುತ್ತದೆ. ಹಾಗಾಗಿ ವಿವೇಕವು ವೈರಾಗ್ಯಕ್ಕೆ ಅಗತ್ಯವಾದ ತಯಾರಿಯ ಹೆಜ್ಜೆಯಾಗಿದೆ.

ವೈರಾಗ್ಯ (ಇಹಾಮುತ್ರಾರ್ಥಫಲಭೋಗವಿರಾಗ) : ಜಗತ್ತಿನಲ್ಲಿ ಇಂದ್ರಿಯಗಳ ಮೂಲಕ ದೊರೆಯುವ ಸುಖಭೋಗ ಮತ್ತಿತರ ಆಕರ್ಷಣೆಗಳೆಲ್ಲವೂ ಅನಿತ್ಯ ಎಂದು ತಿಳಿದರೆ ಸಾಲದು. ಅವುಗಳಾವುದರಲ್ಲಿಯೂ ಆಸಕ್ತಿ ಇಲ್ಲದಿರಬೇಕು. ಇದನ್ನೇ ವೈರಾಗ್ಯ ಎಂದು ಹೇಳುವುದು. ಈ ಜಗತ್ತಿನಲ್ಲಿ ಮಾತ್ರವಲ್ಲ, ಸ್ವರ್ಗಾದಿ ಇತರ ಲೋಕಗಳಲ್ಲಿಯೂ ದೊರೆಯುವ ಸಕಲ ವಿಧದ ಸುಖಭೋಗಗಳ ಆಸೆ ಆಸಕ್ತಿಗಳು ಇಲ್ಲದಿರುವುದೇ ವೈರಾಗ್ಯದ ಸ್ವರೂಪವಾಗಿರುತ್ತದೆ. ಕುಬೇರನ ಸಂಪತ್ತೇ ಆಗಲಿ, ಜಗತ್ತು ಮತ್ತು ಪರಲೋಕಗಳ ಒಡೆತನ-ಅಧಿಕಾರಗಳೇ ಆಗಲಿ, ಅವಾವುದೂ ಸ್ಥಿರವಲ್ಲ ಎಂದು ಗ್ರಹಿಸಿ ಬರೇ ಹುಲ್ಲು ಕಡ್ಡಿಗೆ ಸಮ ಎಂದೆನ್ನುತ್ತಾ, ಅವುಗಳ ಮೇಲೆ ಆಸಕ್ತಿ ತಳೆಯದ ದೃಢವಾದ ಮನೋ ನಿರ್ಧಾರ, ವೈರಾಗ್ಯಮನಃಸ್ಥಿತಿಯು ಜ್ಞಾನಯೋಗದ ಸಾಧಕನಿಗೆ ಇರಬೇಕು. ಅಂತಹ ದೃಢವಾದ, ನಿಶ್ಚಿತವಾದ ಮನಃಸ್ಥಿತಿಯನ್ನು ಸದಾ ಉಳಿಸಿಕೊಳ್ಳಲು ಸಾಧಕನು ಶಮದಮಾದಿ ಆರು ಗುಣಸಂಪತ್ತನ್ನು ರೂಢಿಸಿಕೊಳ್ಳಬೇಕು.

ಶಮದಮಾದಿ ಷಟ್‌ಸಂಪತ್ತುಗಳು : ಶಮ, ದಮ, ಉಪರತಿ, ತಿತಿಕ್ಷಾ, ಶ್ರದ್ಧಾ, ಸಮಾಧಾನ ಎಂಬ ಆರು ಗುಣಗಳೇ ಶಮದಮಾದಿ ಷಟ್ಕ ಸಂಪತ್ತುಗಳಾಗಿವೆ.

ಶಮ : ಮನಸ್ಸು ಸಾಧಾರಣವಾಗಿ ಇಂದ್ರಿಯಸಂಬಂಧವಾದ ವಿಷಯವಸ್ತುಗಳ ಸುಖಭೋಗಗಳನ್ನು ಅರಸಿಕೊಂಡು ಹೋಗುತ್ತದೆ—ಮನಸ್ಸನ್ನು ನಿಗ್ರಹಿಸಿ, ಅದು ವಿಷಯ ವಸ್ತುಗಳ ಕುರಿತಾದ ಸುಖಭೋಗಗಳಿಗೆ ಇಷ್ಟಪಡದಂತೆ ಮಾಡುವುದೇ ಶಮ. ವಿಷಯ ವಾಸನಾತ್ಯಾಗವೇ ಶಮ ಎಂದು ತಾತ್ಪರ್ಯ.

ದಮ : ಮನಸ್ಸನ್ನು ಶಮಗುಣದ ಮೂಲಕ ನಿಗ್ರಹಿಸಿದರೆ ಮಾತ್ರ ಸಾಲದು. ವಿಷಯ ವಸ್ತುಗಳ ಕಡೆ ಮನಸ್ಸು ಹೊರಗೆ ಹರಿಯದಿದ್ದರೆ ಅಂತರ್ಯದಲ್ಲಿ ವಿಷಯವಸ್ತುಗಳ ಕಡೆ ಕುರಿತಾದ ಆಸೆಗಳು ಸೂಕ್ಷ್ಮವಾಗಿ ಮನಸ್ಸಿನಲ್ಲಿ ಕೂಡಿರುತ್ತವೆ, ಹೀಗೆ ಸೂಕ್ಷ್ಮವಾಗಿರುವ ಮಾನಸಿಕ ಆಸೆಗಳನ್ನು ನಿರ್ಮೂಲಮಾಡಿ ಇಂದ್ರಿಯಗಳು ಬಾಹ್ಯವಸ್ತುಗಳ ಎಡೆಗೆ ಹರಿಯ ದಂತೆ ಮಾಡುವುದೇ ದಮ. ಇಂದ್ರಿಯನಿಗ್ರಹವೇ ದಮ ಎಂದು ತಾತ್ಪರ್ಯ.

ಉಪರತಿ : ಶಮದಮಾದಿಗಳನ್ನು ರೂಢಿಸಿಕೊಂಡು ವಿಷಯಾಸಕ್ತಿ, ವಿಷಯಸುಖ ಪ್ರವೃತ್ತಿಗಳಿಂದ ಸಂಪೂರ್ಣ ಪರಾಙ್ಮುಖಿವೃತ್ತಿಯವನಾಗುವುದೇ ಉಪರತಿ. ಪ್ರಪಂಚದ ಸುಖಭೋಗಗಳಿಂದ ಪೂರ್ತಿ ನಿವೃತ್ತನಾಗಿ ತನ್ನ ಅಂತರಂಗದೊಳಗೆ ಆತ್ಮತತ್ತ್ವದ ಪರಿಶೀಲನೆಯಲ್ಲಿ ಪೂರ್ಣಮನಸ್ಸಿನಿಂದ ಪ್ರವೃತ್ತನಾಗುವುದೇ ಉಪರತಿ ಎಂದು ತಾತ್ಪರ್ಯ.

ತಿತಿಕ್ಷಾ : ಜೀವನದಲ್ಲಿ ಹಲವಾರು ರೀತಿಯ ಕಷ್ಟನಷ್ಟಗಳು, ದುಃಖಿಸೋವುಗಳು ಇತ್ಯಾದಿಗಳ ಅನುಭವಗಳು ಇದ್ದೇ ಇರುತ್ತದೆ. ಇವುಗಳ ಪ್ರಭಾವಕ್ಕೆ ಸಾಧಕನು ಒಳಗಾದರೆ ಅಥವಾ ಪ್ರತೀಕಾರ ಎಸಗಬಯಸಿದರೆ ಅವನು ತನ್ನ ಮನಸ್ಸಿನ ಸ್ಥಿರತೆಯನ್ನು ಕಳೆಕೊಳ್ಳುತ್ತಾನೆ. ಮತ್ತೆ ಕಾಮಕ್ರೋಧ ಮುಂತಾದ ಷಡ್ವೈರಿಗಳ, ಪಂಚೇಂದ್ರಿಯಗಳ ಪ್ರಭಾವಕ್ಕೆ ಸಿಲುಕುತ್ತಾನೆ. ಆಗಲೇ ಅಂತರ್ಮುಖಿಯಾದ ಮನಸ್ಸು ಮತ್ತೆ ಬಾಹ್ಯಕ್ಕೆ ಹರಿಯುತ್ತದೆ. ಆದುದರಿಂದ ಜ್ಞಾನಯೋಗದ ಸಾಧಕನು ಜೀವನದ ಶೀತ-ಉಷ್ಣ, ಮಾನ-ಅಪಮಾನ, ಸಿಹಿ-ಕಹಿ, ಕಷ್ಟ-ನಷ್ಟಗಳನ್ನೆಲ್ಲಾ ಸಹಿಸುವ ಸಹನಾಶಕ್ತಿ ಅಥವಾ ಸಹಿಷ್ಣುತೆಯನ್ನು ಬೆಳೆಸಿಕೊಳ್ಳಬೇಕು. ಈ ಸಹನಾಶಕ್ತಿ ಅಥವಾ ಸಹಿಷ್ಣುತೆಯೇ ತಿತಿಕ್ಷೆ. ಒಟ್ಟಿನಲ್ಲಿ ಜಗತ್ತಿನ ಆಗುಹೋಗುಗಳಿಂದ ಪ್ರಭಾವಿತನಾಗದಿರುವುದು ಮತ್ತು ತನ್ಮೂಲಕ ತನ್ನ ಮನಃಸ್ಥೈರ್ಯ ಇಂದ್ರಿಯನಿಗ್ರಹಗಳನ್ನು ಕಳೆದುಕೊಳ್ಳದಿರುವುದೇ ತಿತಿಕ್ಷೆ ಎಂದು ತಾತ್ಪರ್ಯ.

ಶ್ರದ್ಧೆ : ಸಹಿಷ್ಣುತೆಯನಂತರದ ಅಗತ ಗುಣಸಂಪತ್ತೇ ಶ್ರದ್ಧೆ. ಗುರುವಾಕ್ಯ ಮತ್ತು ವೇದಾದಿಶಾಸ್ತ್ರವಾಕ್ಯಗಳಲ್ಲಿ ಅಚಲವಾದ ಶ್ರದ್ಧೆ ಇಲ್ಲದಿದ್ದರೆ ಸಾಧನೆಯ ಪಥದಲ್ಲಿ ಅನೇಕ ರೀತಿಯ ಸಂಶಯಗಳು ಸಾಧಕನಿಗೆ ಬರುತ್ತವೆ. ಸಂಶಯಗಳು ಮನಸ್ಸಿನಲ್ಲಿ ಮೂಡಿದಾಗ- ಮನಸ್ಸಿಗೆ ಚಂಚಲವೃತ್ತಿ ಉಂಟಾಗಿ ಪುನಃ ಸಾಧಕನು ತನ್ನ ದೃಢತೆ, ಪರಿಶುದ್ಧತೆಗಳನ್ನು ಕಳೆದುಕೊಳ್ಳುತ್ತಾನೆ. ಸಾಧನೆಯ ಕಾಲದಲ್ಲಿ ಗುರುವಾಕ್ಯದಲ್ಲಿ, ಶಾಸ್ತ್ರವಾಕ್ಯಗಳಲ್ಲಿ ನಂಬಿಕೆ ಇಲ್ಲದೇ ಇದ್ದರೆ ಸಾಧಕನಿಗೆ ಈ ಜಗತ್ತಿನಲ್ಲಿ ಏನನ್ನು ನಂಬಬೇಕು ಎಂಬುದೇ ತಿಳಿಯದಾಗುತ್ತದೆ. ಆಗಲೇ ಜ್ಞಾನಯೋಗದ ಹಾದಿಯಲ್ಲಿ ಸಾಗಿ ಗುರಿ ತಲುಪಿದವರು ಗುರುಗಳು. ಸತ್ಯದರ್ಶನವಾದವರು ಹೇಳಿರುವ ಮಾರ್ಗದರ್ಶಕವಾದ ನುಡಿಗಳೇ ಶಾಸ್ತ್ರಗಳು. ಸಾಧಕನು ಇವುಗಳನ್ನು ನಂಬಿದಾಗ ತನ್ನ ಗುರಿ, ಸಾಧನೆಯ ಮಾರ್ಗ ಇವುಗಳ ಬಗ್ಗೆ ಸರಿಯಾದ ವಿವರ-ಭರವಸೆಗಳು ಅವನಿಗೆ ದೊರೆಯುತ್ತವೆ. ಶ್ರದ್ಧೆಯಿಂದ ಜ್ಞಾನ ಲಭಿಸುತ್ತದೆ. ಹಾಗಾಗಿ ಜ್ಞಾನಯೋಗಿಗೆ ಶ್ರದ್ಧೆ ಅಗತ್ಯದ ಒಂದು ಗುಣಸಂಪತ್ತಾಗಿದೆ. ಹೀಗೆ ಗುರು ಮತ್ತು ಶಾಸ್ತ್ರವಾಕ್ಯಗಳಲ್ಲಿ ನಂಬಿಕೆಯನ್ನು ತಳೆಯುವುದೇ ಶ್ರದ್ಧೆಯಾಗಿದ್ದು, ತನ್ನಲ್ಲಿ ತನಗೆ ನಂಬಿಕೆ ಇರುವುದೂ ಕೂಡ ಶ್ರದ್ಧೆಯಲ್ಲಿ ಅಡಕವಾಗಿರುವ ತತ್ತ್ವವಾಗಿರುತ್ತದೆ.

ಸಮಾಧಾನ : ಮಾನಸಿಕವಾದ ಯಾವ ಆಲಸ್ಯ ಅಶುದ್ಧತೆಗಳೂ ಇಲ್ಲದೆ ಶ್ರದ್ಧೆಯಿಂದ, ಚಿತ್ತಸ್ಥಿರತೆಯಿಂದ ಗುರು ಮತ್ತು ವೇದಾದಿ ಶಾಸ್ತ್ರವಾಕ್ಯಗಳನ್ನು ಶ್ರವಣ ಮನನ ಮಾಡುತ್ತಾ ಆತ್ಮಚಿಂತನೆಯಲ್ಲಿ ಮನಸ್ಸನ್ನು ನೆಲೆಗೊಳಿಸುವುದೇ ಸಮಾಧಾನ. ಎಲ್ಲವೂ-ಬ್ರಹ್ಮ, ಎಲ್ಲವೂ ಅವನ ಅವಿಭಾಜ್ಯ - ಎಂದು ದೃಢನಿಲುವನ್ನು ಸದಾ ತನ್ನ

ದಾಗಿಸಿಕೊಳ್ಳಲು ಈ ಹಂತದಲ್ಲಿ ಸಾಧಕನು ಯತ್ನಿಸುತ್ತಾನೆ. ಯಾವುದೇ ವಿಧವಾದ ಮಾನಸಿಕ ಉದ್ವೇಗ-ವಿಕಾರಗಳಿಗೆ ತುತ್ತಾಗದೆ, ಸಮತೆ-ಸಮಾಧಾನಗಳಿಂದ ಕೂಡಿರುವುದು ಸಮಾಧಾನದಲ್ಲಿ ಸೇರಿರುವ ತತ್ತ್ವಾಂಶವಾಗಿದೆ.

ಮುಮುಕ್ಷುತ್ವ : ಹಿಂದಿನ ಮೂರು ಗುಣಗಳನ್ನು ರೂಢಿಸಿಕೊಂಡನಂತರ ಮೋಕ್ಷ ಬೇಕು, ಮೋಕ್ಷವಲ್ಲದೆ ಬೇರೇನೂ ಬೇಕಾಗಿಲ್ಲ ಎಂಬ ಅತ್ಯಂತ ಆಳವಾದ ಕಾತರತೆಯೇ ಮುಮುಕ್ಷುತ್ವ. ಮುಮುಕ್ಷು ಎಂದರೆ ಮೋಕ್ಷಾಭಿಲಾಷಿ ಎಂದು ಅರ್ಥ. ಜಗತ್ತಿನಲ್ಲಿ ಇರುವ ಸುಖಭೋಗಗಳೆಲ್ಲವನ್ನೂ ಅನಿತ್ಯ ಎಂದು ಪರಿಗಣಿಸಿಬಿಟ್ಟನಂತರ ಸಾಧಕನಿಗೆ ಬೇಕಾಗುವ ನಿತ್ಯಸುಖವೇ 'ಮೋಕ್ಷ'. ತನ್ನ ಜೀವನದ ಗುರಿ ಮೋಕ್ಷಸಂಪಾದನೆ ಎಂಬ ಅಚಲವಾದ ನಿರ್ಧಾರವನ್ನು ಸಾಧಕನು ತಳೆಯುವುದೇ ಮುಮುಕ್ಷುತ್ವ ಎಂದು ತಾತ್ಪರ್ಯ. ಜ್ಞಾನಯೋಗದ ಸಾಧಕನು ಈ ಸಾಧನಚತುಷ್ಟಯ ಎಂಬ ನಾಲ್ಕು ಗುಣಸಂಪತ್ತನ್ನು ರೂಢಿಸಿಕೊಂಡಾಗ ಈ ಯೋಗದ ಸಾಧನೆಗೆ ಅರ್ಹನಾಗುತ್ತಾನೆ.

ಜ್ಞಾನಯೋಗದ ಸಾಧನೆಯಲ್ಲಿ ಮೂರು ಹಂತಗಳಿವೆ. ಅವು ಯಾವುವು ಎಂದರೆ : (೧) ಶ್ರವಣ, (೨) ಮನನ, (೩) ನಿದಿಧ್ಯಾಸನ.

ಶ್ರವಣ : ಗುರುವಿನ ಮೂಲಕ, ಬಲ್ಲವರ ಮೂಲಕ ಶಾಸ್ತ್ರಗಳಲ್ಲಿರುವ ಆತ್ಮತತ್ತ್ವದ ವಿಚಾರವಾಗಿ ವಿವರಗಳನ್ನು ಸಾಧಕನು ಕೇಳಿ ತಿಳಿಯಬೇಕು. ತಾನೇ ಸ್ವತಃ ಪುಸ್ತಕದಿಂದ ಓದಿ ತಿಳಿಯುವುದಕ್ಕಿಂತ ಬಲ್ಲವರಿಂದ ಹಾಗೂ ಜೀವನದಲ್ಲಿ ತತ್ತ್ವಗಳನ್ನು ಸರಿಯಾಗಿ ಅನುಷ್ಠಾನಮಾಡುವವರಿಂದ ಅವನ್ನು ಕೇಳಿ ತಿಳಿದರೆ ಹೆಚ್ಚು ಪರಿಣಾಮಕಾರಿಯಾಗಿ ಅರ್ಥವಾಗುತ್ತದೆ. ತಾವೇ ಸ್ವತಃ ಗಹನವಾದ ತತ್ತ್ವಗಳನ್ನು ಓದಿದರೆ ಅವರಿಂದ ಅರ್ಥ ವಿಪರೀತವಾಗಿ, ಅಪಾರ್ಥವಾಗಿ, ತಿಳಿವಳಿಕೆ ತಪ್ಪಾಗಿ ದೊರಕಿದಂತಾಗಿ ತೊಂದರೆ ಬರುವ ಸಂಭವ ಇದೆ. ಅದಕ್ಕಾಗಿ ಸಾಧಕನಿಗೆ ಶ್ರವಣವು ಅತಿ ಅಗತ್ಯ. ಆದುದರಿಂದ ಸಮರ್ಥನಾದ ಗುರುವೊಬ್ಬನನ್ನು ಸಂಧಿಸಿ ಅವನಿಂದ ಶಾಸ್ತ್ರವಾಕ್ಯ–ತತ್ತ್ವವಿಚಾರಗಳನ್ನು ಉಪದೇಶವಾಗಿ ಪಡೆಯಬೇಕು. ಸಾಧಕನು ಗುರುವಿನಿಂದ ಉಪದೇಶವಾಗಿ ಪಡೆಯುವ ಉಪದೇಶವಿಚಾರಗಳು ಅನೇಕವಾಗಿರುತ್ತವೆ. ಅವುಗಳಲ್ಲಿ ಅತ್ಯಂತ ಮುಖ್ಯವಾದುವು ನಾಲ್ಕು ವಾಕ್ಯಗಳ ರೂಪದಲ್ಲಿ ಪ್ರಸಿದ್ಧವಾಗಿದ್ದು ಅವನ್ನು ಉಪದೇಶಮಹಾವಾಕ್ಯಗಳೆಂದು ಹೇಳಲಾಗಿದೆ. ಅವು ಯಾವುವೆಂದರೆ :

(೧) ತತ್ತ್ವಮಸಿ (ನೀನು ಅದೇ [ಬ್ರಹ್ಮವೇ] ಆಗಿದ್ದೀಯೆ).
(೨) ಅಹಂ ಬ್ರಹ್ಮಾಸ್ಮಿ (ನಾನು ಬ್ರಹ್ಮವಾಗಿದ್ದೇನೆ).
(೩) ಅಯಮಾತ್ಮಾ ಬ್ರಹ್ಮ (ಈ ಆತ್ಮವು ಬ್ರಹ್ಮವೇ ಆಗಿದೆ).
(೪) ಪ್ರಜ್ಞಾನಂ ಬ್ರಹ್ಮ (ಪ್ರಜ್ಞೆಯು ಬ್ರಹ್ಮವಾಗಿದೆ).

ಈ ನಾಲ್ಕು ಮಹಾವಾಕ್ಯಗಳಲ್ಲಿ ಜ್ಞಾನಯೋಗಸಾಧಕನಿಗೆ ಬೇಕಾದ ಜ್ಞಾನದ ಕುರಿತಾದ ಸರ್ವ ಉಪದೇಶಗಳ ಸಾರ ಅಡಗಿರುತ್ತದೆ. ಗುರುವು ಈ ನಾಲ್ಕು ಮಹಾವಾಕ್ಯಗಳನ್ನು ಶಿಷ್ಯನಿಗೆ ಉಪದೇಶಿಸುತ್ತಾ "ಕಾಲ ದೇಶ ಹುಟ್ಟು ಸಾವುಗಳ ಕಟ್ಟಳೆಗೆ ಮೀರಿದ್ದು, ಸೃಷ್ಟಿಸ್ಥಿತಿಲಯಗಳ ಕಾರಣಕರ್ತವಾದುದೇ ಬ್ರಹ್ಮ ; ಅದು ನಿತ್ಯಸತ್ಯ.

ಸನಾತನವಾದುದು. ನೀನೇ ಆ ಬ್ರಹ್ಮವಾಗಿದ್ದಿ ಇದನ್ನು ಮನಸ್ಸಿನಲ್ಲಿ ಮನನಮಾಡು" ಎಂದು ಹೇಳುತ್ತಾನೆ. ಹೀಗೆ ಗುರುಮುಖೇನ ಪರತತ್ತ್ವ, ಪರಬ್ರಹ್ಮದ ವಿಚಾರವಾಗಿ ಉಪದೇಶಪಡೆಯುವಿಕೆ, ಶಾಸ್ತ್ರವಾಕ್ಯಗಳ ವಿವರಣೆಗಳನ್ನು ಪಡೆಯುವಿಕೆ—ಇವುಗಳನ್ನೇ 'ಶ್ರವಣ' ಎಂದು ಕರೆದಿದೆ.

ಮನನ : ಗುರುವಿನಿಂದ ಕೇಳಿದ ಶಾಸ್ತ್ರವಿಚಾರಗಳು ಉಪದೇಶಾದಿಗಳನ್ನು ತನ್ನಲ್ಲಿತಾನೇ ಅದು ಹೇಗೆ ? ಏಕೆ ? ಎಂದು ಪ್ರಶ್ನೆ ಹಾಕಿಕೊಳ್ಳುತ್ತಾ ವಿಚಾರಮಾಡುವುದೇ ಮನನ ಸಾಧಕನು ಗುರುಮುಖೇನ ಕೇಳಿದ ತತ್ತ್ವವಿಚಾರಗಳನ್ನು, ಉಪದೇಶವಿವರಗಳನ್ನು ತನ್ನಲ್ಲಿ ತಾನು ಪರಿಶೀಲಿಸಿ ಅರಗಿಸಿಕೊಳ್ಳದೇ ಇದ್ದರೆ ತನಗೆ ಅವು ಅರ್ಥವಾಗದೆ ಹಾಗೆಯೇ ಉಳಿಯುತ್ತವೆ. ತನ್ನಲ್ಲಿ ತಾನು ವಿಚಾರಮಾಡಿ ವಿಷಯಗಳನ್ನು ಅರ್ಥಮಾಡಿಕೊಳ್ಳುವುದು ಮನನವಾಗುತ್ತದೆ. ಶ್ರವಣ ಎಷ್ಟು ಮುಖ್ಯವೋ ಮನನವೂ ಅಷ್ಟೇ ಮುಖ್ಯ. ಶ್ರವಣವು ಬೀಜವನ್ನು ಬಿತ್ತಿದಂತೆ ಎಂದಾದರೆ ಮನನವು ಬೀಜದಿಂದ ಗಿಡ ಬೆಳೆಸಿ ಅದನ್ನು ಪೋಷಿಸುವಂತಾಗಿರುತ್ತದೆ.

ನಿದಿಧ್ಯಾಸ : ಪೋಷಿಸಿದ ಗಿಡ ಬಿಡುವ ಫಲವೇ ನಿದಿಧ್ಯಾಸನ. ಮನನದ ಮೂಲಕ ಸಾಧಕನು ಮುಂದುವರಿದು ಅದರ ಫಲವಾಗಿ ಗಾಢಧ್ಯಾನವನ್ನು ಪಡೆಯುತ್ತಾನೆ. ಇದೇ ನಿದಿಧ್ಯಾಸನ. ತನ್ನ ಅಂತರ್ಯದಲ್ಲಿ ಅಡಗಿದ್ದ ಆತ್ಮತತ್ತ್ವದ, ಆತ್ಮಜ್ಞಾನದ ಸಿಧಿಯನ್ನು ಸಾಧಕನು ಧ್ಯಾಸಮಾಡಿ (ಹುಡುಕಿ ಪತ್ತೆಹಚ್ಚಿ) ಕಾಣುತ್ತಾನೆ. ತಾನು ಕೇಳಿದ ಆತ್ಮತತ್ತ್ವ ವಿಚಾರಗಳು, ಸಾಧಕನಿಗೆ ಈ ಹಂತದಲ್ಲಿ ಜೀವಂತವಾಗಿ ಸ್ವತಃ ಅನುಭವಕ್ಕೆ ಬರುತ್ತವೆ. ಎಲ್ಲವೂ ಬ್ರಹ್ಮ. ಅದು ಒಂದೇ ಆಗಿದ್ದು, ಸತ್ಯವೂ ಸನಾತನವೂ ಆಗಿದೆ ಎಂದು ಕೇಳಿರುವ ವಿಚಾರವು ಈ ಹಂತದ ಕೊನೆಯಲ್ಲಿ ಸ್ವತಃ ಅನುಭವಕ್ಕೆ ಬಂದು ಎಲ್ಲವೂ ಬ್ರಹ್ಮ, "ಸರ್ವಂ ಖಲ್ವಿದಂ ಬ್ರಹ್ಮ", "ಅಹಂ ಬ್ರಹ್ಮಾಸ್ಮಿ" ಎಂಬ ಬ್ರಹ್ಮಾನಂದದ ಅನುಭವದ ಮೂಲಕ ಜೀವಂತವಾಗುತ್ತದೆ. ಸತ್ಯದ ದರ್ಶನವಾಗುತ್ತದೆ. ಸತ್ಯದರ್ಶನವಾಗಿ ಸತ್ ಚಿತ್ ಆನಂದದ ಅನುಭವವಾಗಿ ಸಾಧಕನು ಜೀವನದ ಸಂಸಾರಬಂಧನಗಳಿಂದ ಮುಕ್ತನಾಗುತ್ತಾನೆ. ಹೀಗೆ ಜ್ಞಾನಯೋಗಸಾಧಕನು ವಿಚಾರದ ತೀವ್ರವಾದ ಪಥದಲ್ಲಿ ಸಾಧಕನಾಗಿ ಹೊರಟು ತನ್ನ ಶ್ರದ್ಧೆ, ಮನೋದಾರ್ಢ್ಯತೆ, ಗುರೂಪದೇಶಗಳ ಮೂಲಕ ಜ್ಞಾನಯೋಗಿಯಾಗಿ ಬ್ರಹ್ಮ ಸಾಕ್ಷಾತ್ಕಾರವನ್ನು ಪಡೆದು ಶಾಶ್ವತವಾದ ಆನಂದವನ್ನು ಅನುಭವಿಸುತ್ತಾನೆ. ಆಗ ಸಾಧಕ, ಸಾಧನ, ಚಿಂತನೆಯ ವಸ್ತು, ಶುದ್ಧ ಚಿತ್ತ ಇವೆಲ್ಲವೂ ಒಂದೇ ಆಗುತ್ತಾ ಅವರ್ಣನೀಯವಾದ ಆನಂದದಲ್ಲಿ ಜ್ಞಾನಯೋಗಿ ಲೀನವಾಗಿರುತ್ತಾನೆ. ಈ ಸ್ಥಿತಿಯು ಅನುಭವಗೋಚರವೇ ವಿನಾ ವರ್ಣನಾಸಾಧ್ಯವಾದುದಲ್ಲ.

ಜ್ಞಾನಯೋಗಿಯು ದೇಹಸಹಿತನಾಗಿ ಪ್ರಪಂಚದಲ್ಲಿ ಉಳಿದಿರುವ ಕಾಲದಲ್ಲಿ ಅವನು 'ಜೀವನ್ಮುಕ್ತ'ನಾಗಿ ಜೀವನವನ್ನು ಮಾಡುತ್ತಾನೆ. ಆದರೆ ಅವನ ಜೀವನ ನೀರಿನಲ್ಲಿರುವ ತಾವರೆಯ ಎಲೆಯಂತೆ, ನೀರಿನಲ್ಲಿದ್ದರೂ ನೀರಿನಿಂದ ಅಲಿಪ್ತ, ಜಗತ್ತಿನಲ್ಲಿದ್ದರೂ ಜಗತ್ತಿನ ಸುಖದುಃಖ, ಬಂಧನ ತಪ್ಪುಗಳಿಂದ ಅವನು ಮುಕ್ತನಾಗಿರುತ್ತಾನೆ. ಅವನು ಮಾಡುವ ಕೆಲಸಕಾರ್ಯಗಳು ಎಲ್ಲವೂ "ಬ್ರಹ್ಮದಿಂದಲೇ, ಬ್ರಹ್ಮಕ್ಕೆ, ಬ್ರಹ್ಮದಲ್ಲಿ" ಎಂಬಂತಾಗು

ತ್ತದೆ. ಭಯ, ದ್ವೇಷ, ದುಃಖ, ನೋವು ಎಂಬಿತ್ಯಾದಿ ಜಗತ್ತಿನಲ್ಲಿರುವ ಜೀವಿಗಳ ಸಾಮಾನ್ಯ ಅನುಭವಗಳಿಂದ ಮುಕ್ತನಾದುದರಿಂದ ಜ್ಞಾನಯೋಗಿಯು ಇತರರಿಗೆ ಅಭಯ, ಪ್ರೇಮ, ಆನಂದಗಳ ಸಂದೇಶವನ್ನು ಲೋಕಕ್ಕೆ ನೀಡುತ್ತಾನೆ, ಆದರ್ಶವಾಗುತ್ತಾನೆ. ಜಗತ್ತಿನಿಂದ ತಾನೇನನ್ನೂ ಬಯಸದಿರುವುದರಿಂದ, ಜಗತ್ತಿನಲ್ಲಿ ತಾನು ಎಲ್ಲೆಲ್ಲೂ ಬ್ರಹ್ಮವನ್ನೇ ಚರಾಚರವಸ್ತುಗಳಲ್ಲಿ ದರ್ಶಿಸಿ ಅನುಭವಿಸುತ್ತಿರುವುದರಿಂದ ಜ್ಞಾನಯೋಗಿಯು ಮಾಡುವ ಕೆಲಸಗಳೆಲ್ಲವೂ ಬ್ರಹ್ಮನಿಂದ ಬ್ರಹ್ಮನಿಗಾಗಿ ಬ್ರಹ್ಮನ ಮೂಲಕ ಬ್ರಹ್ಮಾರ್ಪಣ ಎಂದಾಗುತ್ತದೆ. ಇನ್ನೂ ಬ್ರಹ್ಮಸಾಕ್ಷಾತ್ಕಾರವಾಗದ ಜೀವಿಗಳ ದೃಷ್ಟಿಯಿಂದ ಅವು ಅವರ ಹಾಗೂ ಜಗತ್ತಿನ ಹಿತಕಲ್ಯಾಣಗಳನ್ನುಂಟುಮಾಡುವಂತಹವು ಎಂದು ತೋರುತ್ತವೆ. ಜ್ಞಾನಯೋಗಿಯು ದೇಹಧಾರಿಯಾಗಿದ್ದರೂ ಕೂಡ 'ಜೀವನ್ಮುಕ್ತ'ನಾದುದರಿಂದ ಜಗತ್ತಿನಲ್ಲಿ ದಿವ್ಯತ್ವ–ಅಮರತ್ವಗಳಿಂದ ಕೂಡಿ ಬಾಳುತ್ತಾನೆ. ಅದೇ ರೀತಿಯ ವ್ಯತ್ಯಾಸವಿಲ್ಲದ, ಸತ್ಯವೂ ಪರಿಪೂರ್ಣವೂ ಆದ, ಬ್ರಹ್ಮಾನಂದದ ಅನುಭವದಲ್ಲೇ ದೇಹತ್ಯಾಗಮಾಡಿ ನಂತರ ಬ್ರಹ್ಮವು ಬ್ರಹ್ಮದಲ್ಲಿ ಲೀನವಾಗುತ್ತದೆ. ಬಿಂದುವು ಸಿಂಧುವಿನಲ್ಲಿ ಐಕ್ಯವಾಗುತ್ತದೆ.

ಹೀಗೆ ಜ್ಞಾನಯೋಗವು ವಿಚಾರದ ಮೂಲಕ ಜೀವಾತ್ಮನು ಪರಮಾತ್ಮನನ್ನು ಸೇರಲು ಇರುವ ಒಂದು ಯೋಗಮಾರ್ಗವಾಗಿರುತ್ತದೆ. ಈ ಯೋಗಮಾರ್ಗದಲ್ಲಿ ಸಾಧಕನು ಮುನ್ನಡೆಯಲು ಸ್ವಯಂ ಪ್ರಯತ್ನ, ನಿಶ್ಚಲವಾದ ಶ್ರದ್ಧೆ, ಗುರುವಿನ ಆಶೀರ್ವಾದ— ಇವುಗಳು ಅಗತ್ಯವಾಗಿವೆ. ಸಾಧನೆಯ ಅಂತ್ಯದಲ್ಲಿ ಸಿದ್ಧಿ ಪಡೆದಾಗ ಮಾತ್ರ ಸಾಧಕನು ಭೇದಭಾವನೆಯನ್ನು ಕಳೆದು ಸರ್ವವೂ ಬ್ರಹ್ಮ ಎಂಬ ದಿವ್ಯವಾದ ಆತ್ಮಾನಂದದ ಅದ್ವೈತಭಾವವನ್ನು ಅನುಭವಿಸುತ್ತಾನೆ.

ಜ್ಞಾನಯೋಗಿಗೆ ಈ ಲೋಕದಲ್ಲಿ ಎಲ್ಲ ವಿಧದ ನಾಮರೂಪಗಳ ಹಿನ್ನೆಲೆಯಲ್ಲಿ ಅವುಗಳಿಗೆಲ್ಲ ಆಧಾರವಾಗಿ ಎಲ್ಲೆಲ್ಲೂ ಅವಿನಾಶಿಯಾದ ಬ್ರಹ್ಮವೊಂದೇ ಇರುವುದು ಎಂಬ ದಿವ್ಯವಾದ ಅನುಭವವಾಗುತ್ತಿರುವುದರಿಂದ ಜಾತಿ, ಮತ, ಕಾಲ, ದೇಶಗಳ ಭೇದಗಳು ಇರುವುದಿಲ್ಲ.

ಜೀವನದ ಪರಮಗುರಿಯು ಶಾಶ್ವತವಾದ ಆನಂದದ ಸಂಪಾದನೆಯಾಗಿರುತ್ತದೆ. ನಿಜವಾದ ವಸ್ತುವಿನಿಂದಲೇ ಶಾಶ್ವತವಾದ ಆನಂದ ದೊರೆಯಲು ಸಾಧ್ಯ ಎಂಬ ವಿವೇಕದಿಂದ ಪ್ರಾರಂಭಿಸಿ ಸಾಧನೆಯನ್ನು ಮಾಡಿ ನಿಜವಾದ ಜ್ಞಾನದಿಂದ ಪಡೆಯುವ ಆನಂದವೇ 'ಬ್ರಹ್ಮಾನಂದ'. ಜೀವಿಯು ಜಗತ್ತಿನಲ್ಲಿರುವಾಗ ಜ್ಞಾನಿಯಾಗಿರುತ್ತಾನೆ. ಆದರೆ ಆ ಜ್ಞಾನ ಶಾಶ್ವತವಾದ ಜ್ಞಾನವಲ್ಲ. ಜ್ಞಾನದ ಬಗ್ಗೆ ಕಲ್ಪನೆ ಇದ್ದು ಇನ್ನೂ ತಿಳಿವಳಿಕೆಯ ಆರಂಭದಲ್ಲೇ ಜೀವಿಯು ಇರುತ್ತಾನೆ. ತಿಳಿವಳಿಕೆಯ ಅಂತ್ಯವನ್ನು ಜ್ಞಾನಯೋಗಿಯು ತಲಪಿ ಗುರಿಯಾದ ಶಾಶ್ವತ ಆನಂದವನ್ನು ಪಡೆಯುತ್ತಾನೆ. ಹೀಗೆ ತಿಳಿವಳಿಕೆಯ ಅಂತ್ಯವನ್ನು ಪಡೆಯಲು ನೆರವಾಗುವುದರಿಂದ ಜ್ಞಾನಯೋಗದ 'ಜ್ಞಾನ'ವನ್ನು 'ವೇದಾಂತ' ಎಂದು ವಾಡಿಕೆಯಾಗಿ ಕರೆಯಲಾಗಿದೆ. (ವೇದ=ತಿಳಿವಳಿಕೆ, ಅಂತ=ಅಂತ್ಯ.)

ಬ್ರಹ್ಮಸೂತ್ರ, ಉಪನಿಷತ್ತುಗಳು, ಶ್ರೀಮದ್ ಭಗವದ್ಗೀತೆ ಮತ್ತು ಜ್ಞಾನಯೋಗಿಗಳ ಅನೇಕರ ಉಪದೇಶಗಳು, ಜ್ಞಾನಯೋಗದ ಕುರಿತಾಗಿ ಸಾಧಾರವಾದ ವಿವರಗಳನ್ನು ನೀಡುತ್ತವೆ.

ವಿಷಯದ ಸ್ಪಷ್ಟೀಕರಣ ಮತ್ತು ವಿಚಾರ ವಿವರಗಳಿಗಾಗಿ ಜ್ಞಾನಯೋಗದ ಕುರಿತಾದ ಕೆಲವು ಆಧಾರಶ್ಲೋಕಗಳನ್ನು ಮತ್ತು ವಾಕ್ಯಗಳನ್ನು ಇಲ್ಲಿ ಉದಾಹರಿಸಲಾಗಿದೆ:

**ವಿವೇಕಿನೋ ವಿರಕ್ತಸ್ಯ ಶಮಾದಿಗುಣಶಾಲಿನಃ ।**
**ಮುಮುಕ್ಷೋರೇವ ಹಿ ಬ್ರಹ್ಮಜಿಜ್ಞಾಸಾಯೋಗ್ಯತಾ ಮತಾ ॥**

—ವಿವೇಕಚೂಡಾಮಣಿ, ಶ್ಲೋಕ ೧೭

ವಿವೇಕಿಯೂ ವಿರಕ್ತನೂ ಶಮ ದಮ ಮೊದಲಾದ ಗುಣಗಳಿಂದ ಕೂಡಿದವನೂ ಆದ ಮುಮುಕ್ಷುವಿಗೆ ಮಾತ್ರ ಬ್ರಹ್ಮವಿಚಾರವನ್ನು ಮಾಡುವುದರಲ್ಲಿ ಅರ್ಹತೆ ಇರುತ್ತದೆ.

**ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ ।**
**ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ॥**

—ಗೀತಾ, ಅಧ್ಯಾಯ ೪, ಶ್ಲೋಕ ೩೯

ಶ್ರದ್ಧೆಯುಳ್ಳವನೂ (ಆಸ್ತಿಕ್ಯಬುದ್ಧಿಯುಳ್ಳವನು) ತತ್ಪರನೂ (ಗುರುಸೇವೆ, ಜ್ಞಾನನಿಷ್ಠೆ ಮೊದಲಾದುವುಗಳಲ್ಲಿ ಆಸಕ್ತನಾಗಿರುವವನು) ಜಿತೇಂದ್ರಿಯನೂ (ಆದ ಮುಮುಕ್ಷುವು) ಜ್ಞಾನವನ್ನು ಪಡೆಯುತ್ತಾನೆ.

**ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ ।**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥**

—ಗೀತಾ, ಅಧ್ಯಾಯ ೪, ಶ್ಲೋಕ ೩೬

ನೀನು ಎಲ್ಲಾ ಪಾಪಿಗಳಿಗಿಂತಲೂ ಹೆಚ್ಚು ಪಾಪವನ್ನು ಮಾಡಿದ್ದರೂ (ಸಮುದ್ರದ ಹಾಗೆ ಇರುವ) ಆ ಸಮಸ್ತ ಪಾಪವನ್ನು ಜ್ಞಾನವೆಂಬ ನಾವೆಯಿಂದಲೇ ದಾಟುವೆ.

**ತಸ್ಮಾದಜ್ಞಾನಸಂಭೂತಂ ಹೃತ್ಸ್ಥಂ ಜ್ಞಾನಾಸಿನಾತ್ಮನಃ ।**
**ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥**

—ಗೀತಾ, ಅಧ್ಯಾಯ ೪, ಶ್ಲೋಕ ೪೨

ಆದ್ದರಿಂದ ಅಜ್ಞಾನದಿಂದ ಹುಟ್ಟಿದ, ನಿನ್ನ ಮನಸ್ಸಿನಲ್ಲಿ ಅಡಗಿರುವ ಆತ್ಮವಿಷಯಕ ವಾದ ಈ ಸಂಶಯವನ್ನು ಜ್ಞಾನವೆಂಬ ಕತ್ತಿಯಿಂದ ಕತ್ತರಿಸಿ ಯೋಗಾನುಷ್ಠಾನದಲ್ಲಿ ಆಶ್ರಯವನ್ನು ಪಡೆಯುತ್ತಾ ಎದ್ದೇಳು.

**ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ ಕುರುತೇಽರ್ಜುನ ।**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ ॥**

—ಗೀತಾ, ಅಧ್ಯಾಯ ೪, ಶ್ಲೋಕ ೩೭

ಎಲೈ ಅರ್ಜುನಾ, ಚೆನ್ನಾಗಿ ಪ್ರಜ್ವಲಿಸುತ್ತಿರುವ ಅಗ್ನಿಯು ಕಟ್ಟಿಗೆಗಳನ್ನು ಹೇಗೆ ಸುಟ್ಟು ಬೂದಿ ಮಾಡುತ್ತದೆಯೋ ಹಾಗೆಯೇ ಜ್ಞಾನವೆಂಬ ಅಗ್ನಿಯು ಕರ್ಮಗಳನ್ನೆಲ್ಲಾ ಭಸ್ಮಮಾಡಿಬಿಡುವುದು.

**ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।**
**ತತ್ ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥**

ಈ ಲೋಕದಲ್ಲಿ ಜ್ಞಾನಕ್ಕೆ ಸಮಾನವಾದ ಪವಿತ್ರ ವಸ್ತು ಯಾವುದೂ ಇರುವುದಿಲ್ಲ.

ಯೋಗದಿಂದ ಸಂಸಿದ್ಧಿಯನ್ನು ಹೊಂದುವವನು ಕಾಲಕ್ರಮದಲ್ಲಿ ಆ ಜ್ಞಾನವನ್ನು ತನ್ನಲ್ಲಿ ತಾನೇ ಪೊಂದುವನು.

ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ ।
ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ॥

—ಗೀತಾ, ಅಧ್ಯಾಯ ೫, ಶ್ಲೋಕ ೭

ಯೋಗದಿಂದ ಕೂಡಿದವನೂ ವಿಶುದ್ಧಾತ್ಮನೂ ವಿಜಿತಾತ್ಮನೂ ಜಿತೇಂದ್ರಿಯನೂ ಸರ್ವಭೂತಗಳ ಆತ್ಮವೆಂದು ಭಾವಿಸುವವನೂ (ಆದ ಪುರುಷನು ಕರ್ಮವನ್ನು) ಮಾಡುತ್ತಿದ್ದರೂ ಲಿಪ್ತನಾಗುವುದಿಲ್ಲ.

ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।
ತೇಷಾಮಾದಿತ್ಯವಜ್ಜ್ಞಾನಂ ಪ್ರಕಾಶಯತಿ ತತ್ಪರಮ್ ॥

—ಗೀತಾ, ಅಧ್ಯಾಯ ೫, ಶ್ಲೋಕ ೧೬

ಆದರೆ ಆತ್ಮಜ್ಞಾನದ ದ್ವಾರಾ ಯಾರ ಅಜ್ಞಾನವು ನಾಶವಾಗಿದೆಯೋ ಅವರ ಆತ್ಮಜ್ಞಾನವು ಸೂರ್ಯನ ಹಾಗೆ ಪರಬ್ರಹ್ಮವನ್ನು ಪ್ರಕಾಶಿಸುವುದು.

ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ ।
ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ ಬ್ರಹ್ಮಣಿ ತೇ ಸ್ಥಿತಾಃ ॥

—ಗೀತಾ, ಅಧ್ಯಾಯ ೫, ಶ್ಲೋಕ ೧೯

ಯಾರ ಮನಸ್ಸು ಸಾಮ್ಯದಲ್ಲಿ ನಿಂತಿರುವುದೋ ಅವರು ಇಲ್ಲಿಯೇ ಸಂಸಾರವನ್ನು ಜಯಿಸುತ್ತಾರೆ; ಏಕೆಂದರೆ ಬ್ರಹ್ಮವು ದೋಷರಹಿತವಾಗಿಯೂ ಸಮವಾಗಿಯೂ ಇರುತ್ತದೆ; ಆದುದರಿಂದ ಅವರು ಬ್ರಹ್ಮದಲ್ಲಿಯೇ ಸ್ಥಿತರಾಗಿದ್ದಾರೆ.

ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ಸುಖಮ್ ।
ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯ್ಯಮಶ್ನುತೇ ॥

—ಗೀತಾ, ಅಧ್ಯಾಯ ೫, ಶ್ಲೋಕ ೨೧

ಶಬ್ದಾದಿ ಬಾಹ್ಯವಿಷಯಗಳಲ್ಲಿ ಆಸಕ್ತಿ ಇಲ್ಲದವನು ಅಂತಃಕರಣದಲ್ಲಿ (ವಿಷಯನಿರಪೇಕ್ಷವಾದ) ಸುಖವನ್ನು ಪಡೆಯುತ್ತಾನೆ. ಬ್ರಹ್ಮಯೋಗದಿಂದ ಕೂಡಿದ ಆತ್ಮವುಳ್ಳ ಆ ಯೋಗಿಯು ಅಕ್ಷಯವಾದ ಸುಖವನ್ನು ಪಡೆಯುತ್ತಾನೆ.

ಯೋಽಂತಃಸುಖೋಽಂತರಾರಾಮಸ್ತಥಾಂತರ್ಜ್ಯೋತಿರೇವ ಯಃ ।
ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥

—ಗೀತಾ, ಅಧ್ಯಾಯ ೫, ಶ್ಲೋಕ ೨೪

ಯಾವನು ಆತ್ಮನಲ್ಲಿಯೇ ಸುಖವುಳ್ಳವನೋ, ಆತ್ಮನಲ್ಲಿಯೇ ಆರಾಮವುಳ್ಳವನೋ, ಹಾಗೆಯೇ ಆತ್ಮನಲ್ಲಿಯೇ ಪ್ರಕಾಶವುಳ್ಳವನೋ ಆ ಯೋಗಿಯು ಬ್ರಹ್ಮಸ್ವರೂಪವನ್ನು ಹೊಂದಿ ಮುಕ್ತಿಯನ್ನು ಪಡೆಯುತ್ತಾನೆ.

ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಮ್ ।
ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥

ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ ।
ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್ ॥

ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು ।
ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥
ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।
ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥
ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಮ್ ।
ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥

—ಗೀತಾ, ಅಧ್ಯಾಯ 13, ಶ್ಲೋಕ 8-11

ಹೆಮ್ಮೆಯಿಲ್ಲದಿರುವುದು, ಆತ್ಮಪ್ರಶಂಸೆಯನ್ನು ಮಾಡದಿರುವುದು, ಅಹಿಂಸೆ, ಸಹನೆ, ಸರಳತನ, ಗುರುಶುಶ್ರೂಷೆ, ಬಾಹ್ಯಾಂತರಶುದ್ಧಿ, ಸ್ಥೈರ್ಯ, ಮನೋನಿಗ್ರಹ, ಇಂದ್ರಿಯ ವಿಷಯಗಳಲ್ಲಿ ವಿರಕ್ತಿ, ಅಹಂಕಾರ ಇಲ್ಲದಿರುವುದು, ಹುಟ್ಟು ಮುಪ್ಪು ಕಾಹಿಲೆ ಸಾವು ಇವುಗಳಿಂದ ಉಂಟಾಗುವ ದುಃಖಗಳನ್ನು ಚೆನ್ನಾಗಿ ತಿಳಿದಿರುವುದು, ಮನೆ ಮಠ ಮಡದಿ ಮಕ್ಕಳು ಮೊದಲಾದ ವಿಚಾರದಲ್ಲಿ ಆಸಕ್ತಿಯನ್ನು ಮತ್ತು ತನ್ಮಯತೆಯನ್ನು (ಗಾಢ ಸ್ನೇಹವನ್ನು) ತೊರೆಯುವುದು, ಬೇಕಾದ್ದೂ ಬೇಡವಾದದ್ದೂ ಒದಗಿಬಂದಾಗ ಸಂತೋಷ ವ್ಯಸನಗಳಿಲ್ಲದೆ ಸಮಚಿತ್ತನಾಗಿ ಇರುವುದು, ನಾನೇ ಸರ್ವೋತ್ತಮನೆಂದರಿತು ನನ್ನಲ್ಲಿ ನಿಶ್ಚಲಭಕ್ತಿಯನ್ನು ಇಡುವುದು, ಏಕಾಂತದಲ್ಲಿ ಇರುವುದು, ಜನರ ಕೂಟದಲ್ಲಿ ಅನಾಸ್ಥೆ, ಬ್ರಹ್ಮಜ್ಞಾನದಲ್ಲಿ ಸ್ಥಿರವಿಶ್ವಾಸ, ತತ್ತ್ವಜ್ಞಾನಾರ್ಥದ ಆಲೋಚನೆ ಎಂಬಿವುಗಳಿಗೆ 'ಜ್ಞಾನ' ಎಂದು ಹೆಸರು. ಇದಕ್ಕೆ ವಿರುದ್ಧವಾದವುಗಳಿಗೆ 'ಅಜ್ಞಾನ' ಎಂದು ಹೆಸರಿರುತ್ತದೆ.

ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥

—ಗೀತಾ, ಅಧ್ಯಾಯ 5, ಶ್ಲೋಕ 18

ವಿದ್ಯಾವಿನಯಗಳಿಂದ ಕೂಡಿದ ಬ್ರಾಹ್ಮಣ, ಗೋವು, ಆನೆ, ನಾಯಿ ಮತ್ತು ನಾಯಿಯ ಮಾಂಸ ತಿನ್ನುವವನು—ಇವರೆಲ್ಲರಲ್ಲಿ ಜ್ಞಾನಿಗಳು ಸಮದರ್ಶಿಗಳಾಗಿರುವರು.

ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ ।
ತತ ಏವ ಚ ವಿಸ್ತಾರಂ ಬ್ರಹ್ಮಸಂಪದ್ಯತೇ ತದಾ ॥

—ಗೀತಾ, ಅಧ್ಯಾಯ 13, ಶ್ಲೋಕ 30

ಪ್ರಾಣಿಗಳ ಬೇರೆಬೇರೆಯಾಗಿರುವಿಕೆಯು ಒಂದೇ ಆತ್ಮದಲ್ಲಿ ಇರುವುದೆಂದೂ ಮತ್ತು ಅದರಿಂದಲೇ ಈ ಪ್ರಾಣಿಗಳೆಲ್ಲವೂ ವಿಕಾಸವನ್ನು ಹೊಂದಿವೆಯೆಂದೂ ಯಾವನು ನೋಡುತ್ತಾನೆಯೋ (ತಿಳಿಯುತ್ತಾನೆಯೋ) ಆಗ ಅವನು ಬ್ರಹ್ಮವನ್ನು ಹೊಂದುತ್ತಾನೆ.

ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।
ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥
ಸಂನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ ।
ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇ ರತಾಃ ॥

—ಗೀತಾ, ಅಧ್ಯಾಯ 12. ಶ್ಲೋಕ 3-4

ಇಂದ್ರಿಯಸಮುದಾಯವನ್ನು ನಿಗ್ರಹಿಸಿಕೊಂಡು, ಎಲ್ಲಾ ಕಾಲದಲ್ಲಿಯೂ ಸಮಬುದ್ಧಿ ಉಳ್ಳವರೂ, ಸರ್ವಪ್ರಾಣಿಗಳ ಹಿತದಲ್ಲಿ ನಿರತರೂ ಆದ ಯಾರು, ನಿರ್ದೇಶಿಸಲು

ಅಶಕ್ಯವೂ ಅವ್ಯಕ್ತವೂ ಸರ್ವವ್ಯಾಪಿಯೂ ಚಿಂತಿಸಲು ಅಶಕ್ಯವೂ ಕೂಟಸ್ಥವೂ ಅಚಲವೂ ಶಾಶ್ವತವೂ ಆದ ಅಕ್ಷರವನ್ನು ಉಪಾಸನೆ ಮಾಡುತ್ತಾರೆಯೋ ಅವರು ನನ್ನನ್ನೇ ಹೊಂದುತ್ತಾರೆ.

**ದೇಹೇಂದ್ರಿಯೇಷ್ವಹಂಭಾವ ಇದಂ ಭಾವಸ್ತದನ್ಯಕೇ ।**
**ಯಸ್ಯ ನೋ ಭವತಃ ಕ್ವಾಪಿ ಸ ಜೀವನ್ಮುಕ್ತ ಇಷ್ಯತೇ ॥**

—ವಿವೇಕಚೂಡಾಮಣಿ, ೪೩೯

ಯಾವನಿಗೆ ದೇಹೇಂದ್ರಿಯಗಳಲ್ಲಿ 'ನಾನು' ಎಂಬ ಭಾವವು ಅವುಗಳಿಗಿಂತ ವ್ಯತಿರಿಕ್ತವಾದ ವಸ್ತುಗಳಲ್ಲಿ ಇದು ಎಂಬ ಭಾವವು ಎಂದಿಗೂ ಉಂಟಾಗುವುದಿಲ್ಲವೋ ಅವನು ಜೀವನ್ಮುಕ್ತನು ಎನಿಸುವನು.

**ಗುಣದೋಷವಿಶಿಷ್ಟೇಽಸ್ಮಿನ್ ಸ್ವಭಾವೇನ ವಿಲಕ್ಷಣೇ ।**
**ಸರ್ವತ್ರ ಸಮದರ್ಶಿತ್ವಂ ಜೀವನ್ಮುಕ್ತಸ್ಯ ಲಕ್ಷಣಮ್ ॥**

—ವಿವೇಕಚೂಡಾಮಣಿ, ೪೩೪

ಗುಣದೋಷಗಳಿಂದ ಕೂಡಿ ಸ್ವಭಾವದಿಂದಲೇ ವಿಚಿತ್ರವಾಗಿರುವ ಈ ಜಗತ್ತಿನಲ್ಲಿ ಎಲ್ಲೆಲ್ಲಿಯೂ ಸಮಾನದೃಷ್ಟಿಯಿಂದ ನೋಡುವುದು ಜೀವನ್ಮುಕ್ತನ ಲಕ್ಷಣವು.

**ಯಸ್ತೇಜಸಿ ತಿಷ್ಠಂಸ್ತೇಜಸೋಽಂತರಃ, ಯಂ ತೇಜೋ ನ ವೇದ, ಯಸ್ಯ**
**ತೇಜಃ ಶರೀರಂ, ಯಸ್ತೇಜೋಽಂತರೋ ಯಮಯತಿ, ಏಷ ತ**
**ಆತ್ಮಾಂತರ್ಯಾಮ್ಯಮೃತಃ ॥**

—ಬೃಹದಾರಣ್ಯಕೋಪನಿಷತ್, ೩.೭.೧೨

ಯಾವನು ತೇಜಸ್ಸಿನಲ್ಲಿರುವವನಾಗಿ ತೇಜಸ್ಸಿನ ಒಳಗಿರುವನೋ, ಯಾವನನ್ನು ತೇಜಸ್ಸು ತಿಳಿಯದೋ, ಯಾವನಿಗೆ ತೇಜಸ್ಸು ಶರೀರವೋ, ಯಾವನು ಒಳಗಿದ್ದುಕೊಂಡು ತೇಜಸ್ಸನ್ನು ನಿಯಮಿಸುವನೋ ಅವನೇ ಅಂತರ್ಯಾಮಿಯು, ನಿನ್ನ ಅಮೃತನಾದ ಆತ್ಮನು.

**ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ ಸತ್ಯಂ ಸ ಆತ್ಮಾ**
**ತತ್ತ್ವಮಸಿ ಶ್ವೇತಕೇತೋ ।**

—ಛಾಂದೋಗ್ಯ ಉಪನಿಷತ್, ೬.೮.೭

ಯಾವುದು ಸೂಕ್ಷ್ಮವಾದ ಈ ಜಗನ್ಮೂಲವೋ ಅದರಿಂದಲೇ ಈ ಜಗತ್ತೆಲ್ಲವೂ ಆತ್ಮವಂತವಾಗಿದೆ. ಅದು ಸತ್ಯವು, ಅದು ಆತ್ಮನು. ಓ, ಶ್ವೇತಕೇತು, ಅದು ನೀನಾಗಿರುವೆ.

**ಏಕೋ ವಶೀ ಸರ್ವಭೂತಾಂತರಾತ್ಮಾ**
**ಏಕಂ ರೂಪಂ ಬಹುಧಾ ಯಃ ಕರೋತಿ ।**
**ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾ-**
**ಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಮ್ ॥**

—ಕಠ ಉಪನಿಷತ್, ೨.೫.೧೦

ಆತ್ಮನು ಅದ್ವಿತೀಯನು, ವಶಿ, ಸರ್ವಪ್ರಾಣಿಗಳ ಅಂತರಾತ್ಮ. ಒಂದು ರೂಪವನ್ನು ಬಹುವಿಧವಾಗಿ ಮಾಡಿಕೊಂಡಿರುತ್ತಾನೆ. ಆತ್ಮದಲ್ಲಿ ಚೈತನ್ಯರೂಪದಿಂದ ಇರುವ

ಆವನನ್ನು ಯಾವ ವಿವೇಕಿಗಳು ನೋಡುತ್ತಾರೆಯೋ ಅವರಿಗೇ ಶಾಶ್ವತವಾದ ಸುಖವು ಲಭಿಸುವುದು, ಇತರರಿಗಲ್ಲ.

> **ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾ-**
> **ಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್ ।**
> **ತತ್ಕಾರಣಂ ಸಾಂಖ್ಯಯೋಗಾಧಿಗಮ್ಯಂ**
> **ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ ॥**

(ಪರಮಾತ್ಮನು) ನಿತ್ಯವಸ್ತುಗಳಲ್ಲಿ ನಿತ್ಯನು, ಚೇತನರಲ್ಲಿ ಚೇತನನು. ಒಬ್ಬನೇ ಆಗಿದ್ದರೂ ಬಹುಜೀವರಿಗೆ ಭೋಗಗಳನ್ನು ಕೊಡುತ್ತಾನೆ. ಸಾಂಖ್ಯಯೋಗದಿಂದ ಹೊಂದಲ್ಪಡುವವನೂ ಸರ್ವಕಾರಣನೂ ಆದ ಆ ದೇವನನ್ನು ಅರಿತುಕೊಂಡವನು (ಅವಿದ್ಯೆಯೇ ಮೊದಲಾದ) ಸರ್ವಪಾಶಗಳಿಂದಲೂ ಮುಕ್ತನಾಗುತ್ತಾನೆ.

> **ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ**
> **ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ।**
> **ತಮೇವ ಭಾಂತಮನುಭಾತಿ ಸರ್ವಂ**
> **ತಸ್ಯ ಭಾಸಾ ಸರ್ವಮಿದಂ ವಿಭಾತಿ ॥**

—ಶ್ವೇತಾಶ್ವತರೋಪನಿಷತ್, ೬.೧೩,೧೪

ಆ ಪರಮಾತ್ಮನಲ್ಲಿ ಸೂರ್ಯನಾಗಲಿ, ಚಂದ್ರನಾಗಲಿ, ನಕ್ಷತ್ರಗಳಾಗಲಿ ಪ್ರಕಾಶಿಸು ವುದಿಲ್ಲ ; ಈ ಮಿಂಚುಗಳೂ ಪ್ರಕಾಶಿಸುವುದಿಲ್ಲ ; (ನಮ್ಮ ಕಣ್ಣಿಗೆ ಕಾಣುವ) ಈ ಅಗ್ನಿಯು ಪ್ರಕಾಶಿಸುವುದು ಎಲ್ಲಿ ? ಪ್ರಕಾಶಿಸುತ್ತಿರುವ ಅವನನ್ನೇ ಅನುಸರಿಸಿ ಎಲ್ಲವೂ ಪ್ರಕಾಶಿಸು ತ್ತಿರುವುದು. ಅವನ ಪ್ರಕಾಶದಿಂದಲೇ ಇದೆಲ್ಲವೂ ಪ್ರಕಾಶಿಸುತ್ತಿರುವುದು.

### ಯೋಗಸಮನ್ವಯ

ಹಿಂದೂಧರ್ಮದ ಈ ಚತುರ್ಯೋಗಗಳನ್ನು ಬೇರೆಬೇರೆ ಎಂಬುದಾಗಿ ಪರಿಗಣಿಸಿ ಒಂದಕ್ಕೊಂದು ಸಂಬಂಧವೇ ಇಲ್ಲ ಎಂದು ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ. ಏಕೆಂದರೆ ಒಂದೊಂದು ಯೋಗದಲ್ಲೂ ಇತರ ಯೋಗಗಳು ಪರೋಕ್ಷವಾಗಿ ಸೇರಿರುತ್ತವೆ. ಉದಾಹರಣೆಗೆ ಹೇಳುವುದಾದರೆ : ಕರ್ಮಯೋಗಿಯು ಕೆಲಸವನ್ನು ಸರಿಯಾಗಿ ನಿರ್ವಹಿಸಲು ಚಿತ್ತದ ಏಕಾಗ್ರತೆಯು ಅಗತ್ಯವಾಗಿರುತ್ತದೆ. ಹಾಗೆಯೇ ಕೆಲಸದ ಫಲವನ್ನು ಈಶ್ವರಾರ್ಪಣಬುದ್ಧಿಯಿಂದ ನಿರ್ವಹಿಸಲು ಭಕ್ತಿಯು ಅಗತ್ಯ. ಕೆಲಸವು ಕರ್ಮಯೋಗ ವಾದರೆ, ಭಕ್ತಿಯಿಂದ ಕೆಲಸದ ಫಲವನ್ನು ದೇವರಿಗೆ ಸಮರ್ಪಿಸುವುದು ಭಕ್ತಿಯೋಗ ವಾಯಿತು. ಕೆಲಸ ಭಕ್ತಿ ಧ್ಯಾನಗಳಿಗೆ ಬೇಕಾಗುವ ಏಕಾಗ್ರತೆಯು ರಾಜಯೋಗವಾಯಿತು. ಭಗವಂತ ಎಲ್ಲೆಲ್ಲೂ ಇದ್ದಾನೆ. ಲೋಕಕ್ಕೆ ಸಲ್ಲಿಸುವ ಸೇವೆ ಭಗವಂತನಿಗೆ ಸಲ್ಲಿಸುವ ಸೇವೆ ಆಗಿದೆ, ಎಂದು ತಿಳಿಯುವುದೇ ಜ್ಞಾನಯೋಗ.

ಶುದ್ಧಭಕ್ತಿಯೂ, ಶುದ್ಧಜ್ಞಾನವೂ ಒಂದೇ ಆಗುತ್ತದೆ. ಹೀಗೆ ಎಲ್ಲಾ ಯೋಗ ಗಳಲ್ಲಿಯೂ ಇತರ ಯೋಗಗಳು ಸೇರಿದ್ದರೂ ಒಂದೊಂದು ಯೋಗದಲ್ಲಿ ಒಂದೊಂದರ ಅಂಶ ಪ್ರಬಲವಾಗಿದೆ. ಭಗವಂತನನ್ನು ಸೇರಲು ಈ ನಾಲ್ಕು ಯೋಗಪಥಗಳು ಮುಖ್ಯ

ವಾಗಿರುವಂತೆ ಇವುಗಳೆಲ್ಲದರ ಪರಸ್ಪರ ಸಂಬಂಧವನ್ನು ಅರಿತುಕೊಂಡು ತದನುಸಾರವಾಗಿ ಯೋಗತತ್ತ್ವಗಳನ್ನು ಉಪಯೋಗಿಸಿಕೊಂಡು ಸಾಧನೆಮಾಡುವುದು ಸಮನ್ವಯಯೋಗ ವಾಗುತ್ತದೆ.

ಈ ನಾಲ್ಕು ಯೋಗಗಳಂತೆಯೇ ಒಳಭೇದಗಳ ಸಹಿತವಾಗಿ ಹಠಯೋಗ, ಜಪಯೋಗ, ನಾದಯೋಗ ಎಂಬಿತ್ಯಾದಿ ಯೋಗಗಳಿವೆ. ಆದರೆ ಇವುಗಳಲ್ಲಿ ಪ್ರಮುಖವಾದ ನಾಲ್ಕು ಯೋಗಗಳ ತತ್ತ್ವಗಳೇ ಸ್ವಲ್ಪ ಸ್ವಲ್ಪ ಒಳಭೇದಗಳಿಂದ ಒಳಗೊಂಡಿದ್ದು ಎಲ್ಲಾ ಯೋಗಗಳ ಗುರಿಯೂ ಭಗವಂತನ ಸಾಕ್ಷಾತ್ಕಾರವಾಗಿರುತ್ತದೆ. ಹಠಯೋಗದಲ್ಲಿ ಶರೀರದ ದೀರ್ಘ ಬಾಳಿಕೆ, ದೃಢ ಆರೋಗ್ಯದ ಪಾಲನೆಗಳನ್ನು ವಿಶೇಷವಾಗಿ ಪರಿಗಣಿಸಲಾಗಿದೆ. ಜಪಯೋಗ ಎಂದರೆ ಮಂತ್ರಜಪದ ಮೂಲಕ ಭಗವಂತನನ್ನು ಸೇರುವ ಯೋಗ ಮಾರ್ಗವಾಗಿದೆ. ನಾದಯೋಗ ಎಂದರೆ ಸಂಗೀತದ ಮೂಲಕ, ನಾದದ ಮೂಲಕ ಭಗವಂತನ ಆರಾಧನೆ ಮಾಡಿ ಆತ್ಮಸಾಕ್ಷಾತ್ಕಾರವನ್ನು ಪಡೆಯುವ ಹಾದಿಯಾಗಿದೆ.

ಮನುಷ್ಯನು ಸಂಸಾರಬಂಧನದಿಂದ ಮುಕ್ತನಾಗಿ ಶಾಶ್ವತವಾದ ಆನಂದವನ್ನು ಪಡೆಯುವುದೇ ಬಾಳಿನ ಪರಮಗುರಿ ಎಂಬುದನ್ನು ಹಿಂದೂಧರ್ಮವು ಸ್ಪಷ್ಟವಾಗಿ ಹೇಳುತ್ತದೆ. ಮೋಕ್ಷಾನಂದವನ್ನು ಪಡೆಯಲು ವಿವಿಧ ಸಾಧನಾಮಾರ್ಗಗಳಾದ ಈ ಯೋಗಪಥಗಳಲ್ಲಿ ಸಾಧಕನು ತನಗೆ ಇಷ್ಟ ಹಾಗೂ ಅನುಕೂಲವಾದ ಸಾಧನಾಮಾರ್ಗ ವನ್ನು ಅನುಸರಿಸಬಹುದು. ದಾರಿಗಳು ಬೇರೆಬೇರೆಯಾದಮಾತ್ರಕ್ಕೇ ಗುರಿಯಾಗಲಿ ಗುರಿಯ ಸ್ವರೂಪವಾಗಲಿ ಬದಲಾಗುವುದಿಲ್ಲ, ಯೋಗ ಹಾಗೂ ಧರ್ಮ ಇವುಗಳ ಕುರಿತಾಗಿ ಸಾಧನೆ ಮತ್ತು ತತ್ತ್ವಗಳ ದೃಷ್ಟಿಯಿಂದ ಮಹಾಯೋಗಿ ಸ್ವಾಮಿ ವಿವೇಕಾನಂದರು ಹೇಳಿರುವ ಈ ಕೆಳಗಿನ ಮಾತುಗಳು ಪ್ರಸ್ತುತದ ಯೋಗಸಾಧನಾ ವಿವಿಧ ಮಾರ್ಗಗಳ ವಿಚಾರದ ಮೇಲೆ ವಿಶೇಷವಾದ ಸ್ಪಷ್ಟೀಕರಣಾತ್ಮಕ ಬೆಳಕನ್ನು ಬೀರುತ್ತವೆ.

> "ಪ್ರತಿ ಜೀವವೂ ಸುಪ್ತದೈವವೇ. ಬಾಹ್ಯ ಮತ್ತು ಆಂತರಿಕ ಪ್ರಕೃತಿಯ ನಿಗ್ರಹದಿಂದ ಈ ಸುಪ್ತದೈವತ್ವವನ್ನು ವಿಕಾಸಗೊಳಿಸುವುದೇ ಮಾನವನ ಗುರಿ. ಕರ್ಮ, ಉಪಾಸನೆ, ಧ್ಯಾನ ಅಥವಾ ಜ್ಞಾನ—ಇವುಗಳಲ್ಲಿ ಒಂದು ಅಥವಾ ಹೆಚ್ಚಿನ ಇಲ್ಲವೇ ಎಲ್ಲಾ ಮಾರ್ಗಗಳನ್ನೂ ಅನುಸರಿಸಿ ಮುಕ್ತ ರಾಗುವುದೇ ಧರ್ಮದ ಸರ್ವಸ್ವ. ಮತಗಳು, ಪಂಥಗಳು, ಯಂತ್ರತಂತ್ರಗಳು, ಗ್ರಂಥಗಳು, ಮಂದಿರಗಳು, ವಿಗ್ರಹಗಳು—ಇವೆಲ್ಲವೂ ಸಹಾಯಕಾರಿ ಅಂಗಗಳು ಮಾತ್ರ."[1]

---

1. **Each Soul is Potentially divine.**

**The goal is to manifest this divine within, by controlling nature, external and internal.**

**Do this either by work, or worship, or psychic control, or philosophy by one, or more, or all of these—and be free.**

**This is the whole of religion, doctrines, or dogmas, or rituals, or books, or temples, or forms, are but secondary details.**

—*Swamy Vivekananda—Rajayoga*
(Commentary, Sutra 25, Chapt. II)

೬

# ಹಿಂದೂಧರ್ಮದ ನೀತಿತತ್ತ್ವ ವಿಚಾರಗಳು

ಮನುಷ್ಯನ ನಡವಳಿಕೆಗೆ ಸಂಬಂಧಿಸಿದ ಸೂತ್ರ-ನಿಯಮಾವಳಿಗಳೇ ನೀತಿಯಾಗಿದ್ದು ನೀತಿಯು ಮಾನವಜೀವನದ ಮೂಲಾಧಾರವಾದ ನೆಲೆಗಟ್ಟಾಗಿರುತ್ತದೆ.

ಜಗತ್ತಿನಲ್ಲಿ ಮನುಷ್ಯಜೀವನವು ಸುಗಮವಾಗಿ ಸಾಗಬೇಕಾದರೆ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ರಂಗಗಳಲ್ಲಿ ಮನುಷ್ಯರು ಪರಸ್ಪರ ನೀತಿಯಿಂದ ಕೂಡಿದವರಾಗಿ ನಿಯಮಶೀಲರಾಗಿ ವ್ಯವಹರಿಸಬೇಕು. ಮೈತ್ರಿ-ಸಹಕಾರ ಗಳಿಂದಾಗಿ ಬಾಳುತ್ತಾ ಸದಾಚಾರಿಗಳಾಗಿ ಬದುಕಬೇಕು. ನೀತಿಯುತವಾದ ನಡವಳಿಕೆ ಇಲ್ಲದಿದ್ದರೆ ಮನುಷ್ಯನು ತನ್ನ ಜೀವನವನ್ನು ಸರಿಯಾಗಿ ಮಾಡಲಾರದೆ ವೈಯಕ್ತಿಕವಾಗಿ ಹಾಳಾಗುತ್ತಾನೆ. ಮಾತ್ರವಲ್ಲದೆ ಸಾಮಾಜಿಕ ಜೀವನದ ಅಧಃಪತನಕ್ಕೂ ಆ ಮಟ್ಟಿಗೆ ಕಾರಣನಾಗುತ್ತಾನೆ. ಹೀಗೆ ನೀತಿತತ್ತ್ವವು ವ್ಯಕ್ತಿಯ ಸ್ವಂತ ಜೀವನದ ಕಲ್ಯಾಣಕ್ಕೂ ಸಾಮೂಹಿಕ ಜೀವನದ ಅಭಿವೃದ್ಧಿಗೂ ಕಾರಣವಾದ ಜೀವನಸೂತ್ರವಾಗಿರುತ್ತದೆ. ನೀತಿಸೂತ್ರಗಳ ಪ್ರಾಯೋಗಿಕ ಆಚರಣೆಯೇ ಆಚಾರ. ನೀತಿನಿಯಮಗಳನ್ನು ಸದಾಚಾರ, ಸಮಯೋಗ್ಯ ನಡವಳಿಕೆ ಎಂದೂ ಕರೆಯುತ್ತಾರೆ.

ಹಿಂದೂಧರ್ಮದ ಪ್ರಕಾರವಾಗಿ ಮನುಷ್ಯನ ಜೀವನ ಎಂದರೆ ಒಂದು ಯಾತ್ರೆ ಎಂದು ಪರಿಗಣಿತವಾಗಿರುತ್ತದೆ. ಯಾತ್ರೆ ಎಂದರೆ ಜೀವಾತ್ಮನು ಪರಮಾತ್ಮನನ್ನು ಸೇರಲು ಕೈಗೊಳ್ಳುವ ಯಾತ್ರೆಯಾಗಿದೆ. ಹಿಂದೂಧರ್ಮದ ಅನುಸಾರವಾಗಿ ಜೀವನ ಎಂದರೆ ಲೌಕಿಕವಾದ ಸುಖಭೋಗಗಳು ಮಾತ್ರ ಎಂದಾಗಲಿ, ಹುಟ್ಟಿನಿಂದ ಆರಂಭವಾಗಿ ಸಾವಿನೊಡನೆ ಅಂತ್ಯವಾಗುವ ಒಂದು ಪ್ರಕೃತಿನಿಯಮ ಎಂದಾಗಲಿ, ಅಥವಾ ಒಬ್ಬನ ಜೀವನ ಇನ್ನೊಬ್ಬನದಕ್ಕೆ ಸಂಬಂಧಿಸಿದ್ದಲ್ಲ ಎಂದಾಗಲಿ ಆಗಿರುವುದಿಲ್ಲ. ಹಾಗೆಯೇ ಆತ್ಮಸಾಕ್ಷಾತ್ಕಾರಕ್ಕೆ ಜೀವನದ ದಿನನಿತ್ಯದ ಕೆಲಸಕಾರ್ಯಗಳು ಪ್ರತಿಬಂಧಕಗಳಾಗಿವೆ ಎಂದಾಗಲಿ, ಜೀವನವೇ ಬೇರೆ ಆತ್ಮಸಾಕ್ಷಾತ್ಕಾರವೇ ಬೇರೆ ಎಂದಾಗಲಿ ಹಿಂದೂಧರ್ಮದಲ್ಲಿ ಹೇಳಿರುವುದಿಲ್ಲ. ಆದರೆ ಕಾಣುವ ಈ ನಾಮರೂಪಗಳ ಭೇದದ ಹಿನ್ನೆಲೆಯಲ್ಲಿ ಪರಸ್ಪರ ಸಂಬಂಧದ ತತ್ತ್ವವೊಂದು ಇದೆ ಎಂದು ಹಿಂದೂಧರ್ಮದಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಹಾಗಾಗಿ ನೀತಿತತ್ತ್ವಗಳು ವ್ಯಕ್ತಿಯ ಎಂದರೆ, ಒಂದು ಜೀವಿಯ ಉದ್ಧಾರಕ್ಕಾಗಿ

ಇರುವಂತೆಯೇ ಇತರ ಜೀವಿಗಳ ಉದ್ಧಾರಕ್ಕೆ ಪರಸ್ಪರ ನೆರವಾಗುವಂತೆ ಅನುಕೂಲ ವಾಗಲು ರೂಪಿಸಲ್ಪಟ್ಟಿದೆ. ಈ ಜಗತ್ತೆಲ್ಲವೂ ಭಗವಂತನಿಂದ ಆವೃತವಾದುದು ಎಂದು ಹೇಳಿರುವ ಹಿಂದೂಧರ್ಮದ ಸನಾತನ ತತ್ತ್ವಗಳನ್ನು ಕಂಡುಹಿಡಿದ ವೈದಿಕ ಋಷಿಗಳು ನೀತಿತತ್ತ್ವಗಳನ್ನು ವ್ಯಕ್ತಿಜೀವನದ ಮೂಲಕ ಸಮಗ್ರಜನಕೋಟಿಯ ಜೀವನದ ಉದ್ಧಾರ ಎಂಬ ತತ್ತ್ವವನ್ನು ಅಳವಡಿಸಿ ರೂಪಿಸಿರುತ್ತಾರೆ. ಅಂತೆಯೇ ಮನುಷ್ಯನಿಗೆ ತನ್ನ ದಿನನಿತ್ಯಜೀವನದ ಕೆಲಸಕಾರ್ಯಗಳ ನಿರ್ವಹಣೆ, ತನ್ಮೂಲಕ ಭಗವಂತನ ಸಾಕ್ಷಾತ್ಕಾರ ಮಾಡಿಕೊಳ್ಳಲು, ಒಟ್ಟಿನಲ್ಲಿ ಜೀವನದ ಸಂಸಾರಬಂಧನಗಳಿಂದ ಮುಕ್ತನಾಗಲು ಬೇಕಾದ ತಯಾರಿ-ಸಾಧನೆಗಳನ್ನು ನೀಡುವ ಸದವಕಾಶಯುಕ್ತವಾದ ವ್ಯಾಯಾಮಶಾಲೆಯೇ ಈ ಜಗತ್ತು. ಇದೇ ಹಿಂದೂಧರ್ಮದ ನಿಲುವು. ಹಾಗಾಗಿ ಜೀವನಗತಿಯ ಜೊತೆಗೆ ಜೀವಿಯ ಲೌಕಿಕ ಪ್ರಗತಿ. ಆತ್ಮೋನ್ನತಿಗಳನ್ನು ಸಾಧಿಸಲು ನೆರವಾಗುವಂತೆ ಸೂಕ್ತವಾದ ನೀತಿ ನಿಯಮಗಳನ್ನು, ಆಚಾರಗಳ ಸೂತ್ರಗಳನ್ನು ಹಿಂದೂಧರ್ಮವು ಒಳಗೊಂಡಿರುತ್ತದೆ.

ಮನುಷ್ಯನು ತನ್ನ ಮನಸ್ಸು, ಶರೀರ ಮತ್ತು ಇಂದ್ರಿಯಗಳನ್ನು ಉಪಯೋಗಿಸಿ ಕಾಯಿಕ ವಾಚಿಕ ಮಾನಸಿಕವಾಗಿ ಮೂರು ತರಹದ ಕ್ರಿಯೆಗಳನ್ನು ಮಾಡುತ್ತಾನೆ. ಅದರ ಫಲವಾಗಿ ಸುಖದುಃಖಗಳನ್ನು ಪಡೆದು ಜೀವನದಲ್ಲಿ ಅನುಭವಿಸುತ್ತಾ ವಿವಿಧ ಸಂಸ್ಕಾರಗಳ ಪ್ರಭಾವಗಳಿಗೆ ಒಳಗಾಗುತ್ತಾನೆ. ಜೀವನವು ಸುಖದುಃಖಗಳ ಅನುಭವದಿಂದ ಹೊರತಾಗಿರುವುದಿಲ್ಲ. ಜೀವನದ ಸುಖದುಃಖಗಳನ್ನು ತಪ್ಪಿಸಲೂ ಸಾಧ್ಯವಿಲ್ಲ. ಹಲವು ದೃಷ್ಟಿಯಿಂದ ಸುಖದುಃಖಗಳ ಆಗುಹೋಗುಗಳಿಗೆ ಮನುಷ್ಯನ ನಡವಳಿಕೆ, ಜೀವನದ ವರ್ತನೆಗಳೇ ಕಾರಣವಾಗಿರುತ್ತವೆ. ನೀತಿಯ ಬಲದಿಂದ, ನೈತಿಕ ಆಚಾರವ್ಯವಹಾರಗಳ ಸಹಾಯದಿಂದ, ಸುಖದುಃಖಗಳ ಪ್ರಭಾವದಿಂದ ಜೀವಿಯು ಬಹುಮಟ್ಟಿಗೆ ಪಾರಾಗಲು ಸಾಧ್ಯವಿಲ್ಲ.

ಹೀಗೆ ಹಿಂದೂಧರ್ಮದಲ್ಲಿ ನೀತಿನಿಯಮಗಳು ಎಂದರೆ 'ಬೇಕು-ಬೇಡ' ಎಂಬವುಗಳ ಒಂದು ಪಟ್ಟಿ ಎಂದಾಗಲಿ ಅಥವಾ ಸುಖದುಃಖಗಳ ಪ್ರಭಾವಗಳಿಗೆ ಜೀವಿಯು ಒಳಗಾಗದೆ ಅವುಗಳಿಂದ ಪಾರಾಗಬೇಕೆಂಬ ಒಂದು ಉಪಾಯಗಳ ಕಂತೆ ಎಂಬುದಾಗಲಿ ನಿರೂಪಿಸಲ್ಪಟ್ಟಿರುವುದಿಲ್ಲ.

ನೀತಿವಿಚಾರ. ನಡವಳಿಕೆಗಳ ಕುರಿತಾಗಿ ಹಿಂದೂಧರ್ಮದಲ್ಲಿ ಪ್ರಸಿದ್ಧವಾದ ಎರಡು ವರ್ಗೀಕರಣಗಳಿವೆ. ಒಂದು ಪುಣ್ಯ, ಇನ್ನೊಂದು ಪಾಪ. ಯಾವ ನಡವಳಿಕೆ—ಕ್ರಿಯೆಗಳಿಂದ ವ್ಯಕ್ತಿಯ ಮತ್ತು ಇತರರ ಹಿತವನ್ನು ಸಾಧಿಸಲು ಸಾಧ್ಯವಾಗುತ್ತದೆಯೋ ಅದೇ ಪುಣ್ಯ. ಯಾವುದರಿಂದ ವ್ಯಕ್ತಿಯ ವಿಕಾಸ ಹಾಗೂ ಸಮಾಜದ ಉನ್ನತಿ ಆಗುವುದಕ್ಕೆ ಆತಂಕ ಬರುವುದು ಮಾತ್ರವಲ್ಲದೆ ಅಪಾಯವುಂಟಾಗುವುದೋ ಅದೇ ಪಾಪ. ಈ ವಿಚಾರಗಳನ್ನೇ ಸಂಗ್ರಹವಾಗಿ "ಅಹಿಂಸಾ ಪರಮೋ ಧರ್ಮಃ" (ಮಹಾಭಾರತ, ಅನುಶಾಸನಪರ್ವ, ಅ. ೧೧೪) "ಅಹಿಂಸೆಯೇ ಪರಮಧರ್ಮ", "ಸತ್ಯಮೇವ ಜಯತೇ ನಾನೃತಂ" (ಮುಂಡಕೋಪನಿಷತ್, ೩-೧-೬), "ಸತ್ಯಕ್ಕೇ ಜಯ, ಅನೃತಕ್ಕೆ ಅಲ್ಲ", "ಸತ್ಯಂ ವದ, ಧರ್ಮಂ ಚರ", "ಸತ್ಯವನ್ನು ಹೇಳು, ಧರ್ಮವನ್ನಾಚರಿಸು" (ತೈತ್ತಿರೀಯೋಪನಿಷತ್,

೧೧ನೇ ಅನುವಾಕ) ಎಂಬಿತ್ಯಾದಿ ಅನೇಕ ಸಿದ್ಧಾಂತವಾಕ್ಯಗಳ ಮೂಲಕ ಸ್ಪಷ್ಟಪಡಿಸಲಾಗಿದೆ. ಸುಪ್ರಸಿದ್ಧವಾದ ಸಂಸ್ಕೃತ ಶ್ಲೋಕ ಒಂದರಲ್ಲಿ ಪಾಪಪುಣ್ಯಗಳೇನೆಂದು ಹೇಳಿ ಹದಿನೆಂಟು ಪುರಾಣಗಳಲ್ಲೆಲ್ಲಾ ವ್ಯಾಸಮಹರ್ಷಿಗಳು ಹೇಳಿರುವ ತತ್ತ್ವ ಎರಡೇ ಎಂದು ಹೇಳುತ್ತಾ ಹೀಗೆ ವಿವರಿಸಲಾಗಿದೆ :

ಅಷ್ಟಾದಶಪುರಾಣೇಷು ವ್ಯಾಸಸ್ಯ ವಚನದ್ವಯಮ್ ।
ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಮ್ ॥

"ಹದಿನೆಂಟು ಪುರಾಣಗಳಲ್ಲೆಲ್ಲಾ ವ್ಯಾಸಮಹರ್ಷಿಗಳು ಎರಡು ಮಾತುಗಳನ್ನೇ ಹೇಳಿರುತ್ತಾರೆ : ಇತರರಿಗೆ ಉಪಕಾರ ಮಾಡುವುದೇ ಪುಣ್ಯ, ಪರಪೀಡನೆಯೇ ಪಾಪ."

ಯಾವುದು ಪಾಪಫಲವನ್ನು ಈಯುತ್ತದೋ ಆ ಕೆಲಸವು ತಪ್ಪುಕೆಲಸ ಅರ್ಥಾತ್ ಮಾಡಬಾರದ ಕೆಲಸವಾಗುತ್ತದೆ. ಯಾವುದು ಪುಣ್ಯಫಲಪರಿಣಾಮದಾಯಕವಾಗುತ್ತದೋ ಆ ಕೆಲಸ ಸರಿಯಾದ ಹಾಗೂ ಯೋಗ್ಯವಾದ ಕೆಲಸ ಎಂದೆನಿಸುತ್ತದೆ.

ವರ್ತನೆ ಹಾಗೂ ಕೆಲಸಗಳ ಕುರಿತಾದ ಸರಿ-ತಪ್ಪುಗಳು, ಪಾಪಪುಣ್ಯಗಳು, ವ್ಯಕ್ತಿಯ ಜೀವನವನ್ನು ಸಮಾಜದ ಜೀವನವನ್ನು ಹೇಗೆ ಪ್ರಭಾವಿಸುತ್ತವೆ ಎನ್ನುವುದನ್ನು ಉದಾಹರಣೆಯೊಂದರಿಂದ ಸ್ಪಷ್ಟವಾಗಿ ತಿಳಿದುಕೊಳ್ಳಲು ಸಾಧ್ಯವಿದೆ.

ಇತರರ ವಸ್ತುಗಳನ್ನು ಕದಿಯಬಾರದು ಎನ್ನುವುದು ನೀತಿ, ಕದಿಯದೇ ಇರುವುದು ಅದರ ಆಚರಣೆ. ಕದಿಯಲು ಅವಕಾಶವಿದ್ದರೂ ಅದನ್ನು ಕದಿಯದೇ ಉಳಿಯಲು ಸಾಧ್ಯವಾಗುವಂತೆ ಮಾಡುವ ಮನೋನಿಶ್ಚಲತೆಯೇ ಧರ್ಮದ ಪ್ರಯೋಗಸ್ವರೂಪ. ಇತರರ ವಸ್ತುಗಳನ್ನು ತಾನು ದುಡಿದು ಸಂಪಾದಿಸದೆ, ಅವರಿಗೆ ತಿಳಿಯದೆ, ಅವರ ಅನುಮತಿ ಇಲ್ಲದೆ—ಈ ಮೂರು ರೀತಿಯಾಗಿ ಕದಿಯುವುದರಿಂದ ಇತರರಿಗೆ ಸಿಟ್ಟು, ಕಷ್ಟ, ತಪ್ಪುಗಳನ್ನುಂಟುಮಾಡುವುದರ ಜೊತೆಗೆ ಕದ್ದವನು ಇತರರ ಕೈಯಿಂದ ಶಿಕ್ಷೆ, ಅವಮರ್ಯಾದೆ ಇತ್ಯಾದಿಗಳನ್ನು ಅನುಭವಿಸುವಂತಾಗುತ್ತದೆ. ಆದರಿಂದ ಅವನ ಜೀವನ ವಿಕಾಸವಾಗುವುದು ಕುಂಠಿತವಾಗುತ್ತದೆ. ಇನ್ನೊಬ್ಬನನ್ನು ಕೊಲ್ಲಬಾರದು ಎನ್ನುವುದು ನೀತಿ. ಏಕೆಂದರೆ ತಾನು ಪ್ರಾಣಿಗಳ ಮಟ್ಟಕ್ಕೆ ಆ ಮೂಲಕ ಇಳಿಯುವುದು ಮಾತ್ರವಲ್ಲದೆ ಸಮಾಜದಲ್ಲಿ ಭಯ, ತೊಂದರೆಗಳ ಪರಿಸ್ಥಿತಿಯನ್ನುಂಟುಮಾಡುವವನಾಗುತ್ತಾನೆ. ಇದರಿಂದ ಯಾವ ರೀತಿಯಲ್ಲೂ ಜೀವಿಯ ಆತ್ಮೋನ್ನತಿಯಾಗಲಿ ಸಾಮಾಜಿಕ ಉತ್ಕರ್ಷವಾಗಲಿ ಆಗುವುದಿಲ್ಲ. ಇತರರಿಗೆ ಸಹಾಯಮಾಡಬೇಕು ಎನ್ನುವುದು ನೀತಿ. ಹಾಗೆ ಮಾಡಿದರೆ ತನ್ನಲ್ಲಿರುವ ಸಂಕೋಚಭಾವನೆ ಹೋಗಿ ವಿಶಾಲವಾದ ಮನೋಭಾವನೆ ಉಂಟಾಗಿ ಪ್ರೀತಿ, ಸಹಕಾರ ಇವುಗಳನ್ನು ಸಮಾಜದಲ್ಲಿ ಆಚರಣೆಗೆ ತಂದಂತೆ ಆಗುವುದು. ಮಾತ್ರವಲ್ಲದೆ ಆತ್ಮಸಾಕ್ಷಾತ್ಕಾರದ ದೃಷ್ಟಿಯಿಂದ ಪ್ರೀತಿ-ಕರುಣೆಗಳನ್ನು ಇತರರಿಗೆ ತೋರಿಸಿದರೆ ಭಗವಂತನು ಸರ್ವರಲ್ಲೂ ಇದ್ದಾನೆ ಎಂದು ತಿಳಿಯಲು ಬೇಕಾದ ಹೃದಯ ವಿಶಾಲತೆ, ಮಾನಸಿಕ ಪರಿಪಕ್ವತೆ ಉಂಟಾಗುತ್ತದೆ. ಹೀಗೆ ನೀತಿತತ್ತ್ವಗಳ ಪ್ರತಿಯೊಂದರ ಹಿನ್ನೆಲೆಯಲ್ಲೂ ಕೂಡ ಸರಿಯಾದ ತತ್ತ್ವ, ಅರ್ಥಗಳು ಅಡಗಿದೆ. ಜೀವನವನ್ನು ಸರಿಯಾಗಿ ಪರಿಶೀಲಿಸಿ ಅದರ ಇತಿಮಿತಿಗಳನ್ನು ಗೊತ್ತುಗುರಿಗಳನ್ನು ಕಂಡುಹಿಡಿದ ಮಹಾತ್ಮರಾದ

ಷಿಪ್ಮ್ರ ಆರ್ಯಋಷಿಗಳು ನೀತಿತತ್ತ್ವದ ಕುರಿತಾಗಿ ನಿಯಮಾವಳಿಗಳನ್ನು ರೂಪಿಸಿರುತ್ತಾರೆ. ಆ ನೀತಿನಿಯಮಾವಳಿಗಳು ಹಿಂದೂಧರ್ಮದಲ್ಲಿ ಶ್ರುತಿ, ಸ್ಮೃತಿ, ಪುರಾಣಗ್ರಂಥಗಳಲ್ಲಿ ವಿಸ್ತಾರವಾದ ಉದಾಹರಣೆ, ಕಥೆಗಳ ಚಿತ್ರಣದ ಮೂಲಕ ವಿವರಿಸಲ್ಪಟ್ಟಿವೆ. ಮನುಸ್ಮೃತಿ, ಶ್ರೀಮದ್ರಾಮಾಯಣ, ಶ್ರೀಮನ್ಮಹಾಭಾರತ, ಶ್ರೀಮದ್ಭಗವದ್ಗೀತಾ ಎಂಬ ಈ ಗ್ರಂಥಗಳಲ್ಲಿ ನೀತಿ-ಧರ್ಮಗಳ ಕುರಿತಾಗಿ ವಿಸ್ತಾರವಾದ ವಿವರಣೆಗಳು ನೀಡಲ್ಪಟ್ಟಿರುತ್ತವೆ.

ನೀತಿತತ್ತ್ವಗಳ ಆಚರಣೆಯು ಜೀವನದಲ್ಲಿ ಅನುಷ್ಠಾನಕ್ಕೆ ಬಂದಾಗ ಆಚಾರವಾಗಿ ಅದರಿಂದ ಉಂಟಾದ ಸಂಸ್ಕಾರವು ವ್ಯಕ್ತಿಯ ಜೀವನವನ್ನು ಆಧರಿಸಿ ನಿಲ್ಲಿಸುತ್ತದೆ, ಜೀವಿಯ ಜೀವನದ ಆರಂಭದ ಹಂತದಲ್ಲಿ ನೀತಿತತ್ತ್ವಗಳನ್ನು ಅನುಷ್ಠಾನಕ್ಕೆ ತರುವಾಗ ಅಹಿಂಸೆ ಎನ್ನುವ ನೀತಿಧರ್ಮವು ಹೇಡಿತನವೆಂದೂ ದೃಢಭಾವನೆಯು ಮೂರ್ಖತನ ಎಂದೂ ಇಂದ್ರಿಯನಿಗ್ರಹ ಎನ್ನುವುದು ಆತ್ಮಘಾತಕತನವೆಂದೂ ಕಂಡುಬಂದೀತು. ಆದರೆ ಸರಿಯಾದ ಅಭ್ಯಾಸದಿಂದ, ವಿವೇಕದಿಂದ ಕೂಡಿ ಅನುಷ್ಠಾನ ಮಾಡಿದಾಗ ನೀತಿನಿಯಮಗಳು ಅಂಧಾನುಕರಣೆ ಎಂದಾಗದೆ ತಿಳಿವಳಿಕೆಯ ಸಫಲ ಆಚರಣೆ ಎಂದಾಗುತ್ತದೆ. ಆಗ ಅದು ಶಕ್ತಿಪೂರ್ಣವಾಗಿ ಜೀವನದಲ್ಲಿ ಆಚರಿಸುವವನಿಗೆ ಬಲ-ರಕ್ಷಣೆಗಳನ್ನು ಕೊಡುತ್ತದೆ. ಆಗ ಅದು "ಧರ್ಮ"ವಾಗುತ್ತದೆ. ನೀತಿಯು ವ್ಯಕ್ತಿಗತವಾಗಿರುವಾಗ ವ್ಯಕ್ತಿನೀತಿ ಎಂದಾದರೆ ಸಾಮಾಜಿಕ ವ್ಯವಹಾರದಲ್ಲಿ ಸಮಾಜನೀತಿಯಾಗುತ್ತದೆ. ನೀತಿಯನ್ನು ಪರಸ್ಪರ ಮನುಷ್ಯರು ವ್ಯವಹರಿಸಿ ಅನುಸರಿಸುವಾಗ ಅದು ಶಿಷ್ಟವಾದ ಅಂದರೆ ನಿಯಮಬದ್ಧವಾದ ಆಚಾರವಾಗಿ ಅದನ್ನು ಶಿಷ್ಟಾಚಾರ ಎಂದು ವ್ಯವಹಾರದಲ್ಲಿ ಕರೆಯುತ್ತಾರೆ.

ನೀತಿತತ್ತ್ವಗಳ ಆಚರಣೆಯು ಬೀಜವಾದರೆ ಧರ್ಮವು ಅದರಿಂದ ಉತ್ಪತ್ತಿಯಾಗಿ ಬೆಳೆದುನಿಲ್ಲುವ ಮರವಾಗಿದೆ; ಧರ್ಮಯುತವಾದ ಜೀವನದಿಂದ ಬರುವ ಸುಖಶಾಂತಿ ಸಂತೋಷಗಳೇ ಈ ಧರ್ಮವೃಕ್ಷದಿಂದ ದೊರೆಯುವ ಫಲಗಳಾಗಿವೆ. ಒಟ್ಟಿನಲ್ಲಿ ಜೀವನ ಎಂಬ ಮಹಾಸೌಧದ ನೆಲಗಟ್ಟು ನೀತಿಯಾದರೆ ಧರ್ಮವು ಆ ನೆಲಗಟ್ಟಿನಿಂದಲೇ ಹುಟ್ಟಿದಂತಿರುವ ಅದರ ಆಧಾರಸ್ತಂಭವಾಗಿರುತ್ತದೆ.

ಹಿಂದೂಧರ್ಮದ ಪ್ರಕಾರವಾಗಿ ವ್ಯಕ್ತಿಯ ಜೀವನವನ್ನು ನಾಲ್ಕು ವಿಭಾಗ ಮತ್ತು ನಾಲ್ಕು ಘಟ್ಟಗಳಾಗಿ ಮಾಡಿ ಪ್ರತಿಯೊಂದು ಘಟ್ಟದಲ್ಲೂ ಅವನು ಅನುಸರಿಸಬೇಕಾದ ನೀತಿ-ಧರ್ಮಾಚರಣೆಗಳನ್ನು ನಿಶ್ಚಯಿಸಿರುತ್ತಾರೆ. ಅದರಂತೆ ಮನುಷ್ಯನ ಗುಣ, ಕರ್ಮಗಳ ಅನುಸಾರವಾಗಿ ನಾಲ್ಕು ವರ್ಣಗಳಾಗಿ ಅವರನ್ನು ವಿಂಗಡಿಸಲಾಗಿದೆ. ಜೀವನದ ನಾಲ್ಕು ವಿಭಾಗ ಹಾಗೂ ಘಟ್ಟಗಳನ್ನು ಚತುರಾಶ್ರಮ ಎಂದೂ ವರ್ಣ ಮತ್ತು ನಾಲ್ಕು ಆಶ್ರಮದ ಘಟ್ಟಗಳಲ್ಲಿ ಅನುಸರಿಸಬೇಕಾದ ಕರ್ತವ್ಯ, ಪದ್ಧತಿಗಳನ್ನು, ನೀತಿನಡವಳಿಕೆಗಳನ್ನು ಒಟ್ಟಾಗಿ 'ವರ್ಣಾಶ್ರಮಧರ್ಮ' ಎಂದೂ ಹೇಳುತ್ತಾರೆ. ವರ್ಣಾಶ್ರಮಧರ್ಮವು ಆಯಾಯಾ ಘಟ್ಟದಲ್ಲಿ ವ್ಯಕ್ತಿಯ ಜೀವನ ಉತ್ತಮವೂ ಉಪಯುಕ್ತವೂ ಆಗಿ ಬಾಳಿನ ಪರಮಗುರಿಯಾದ ಮುಕ್ತಿಯ ಪ್ರಾಪ್ತಿಗೆ ಆಯಾಯಾ ಘಟ್ಟಗಳು ಸಹಕಾರಿಯಾಗಿ ಪರಿವರ್ತನೆಹೊಂದಲು ಸಾಧ್ಯವಾಗುವಂತೆ ರೂಪಿಸಲ್ಪಟ್ಟಿರುತ್ತದೆ.

ನೀತಿನಡವಳಿಕೆಗಳ ನಿಯಮಾವಳಿಗಳನ್ನು ಹೇಳುತ್ತಾ ಹಿಂದೂಧರ್ಮವು ಮನುಷ್ಯನಾದವನು ಇಂತಹ ಸದ್ಗುಣಗಳಿಂದ ಕೂಡಿ ಶೀಲಸಂಪತ್ತು ಉಳ್ಳವನಾಗಬೇಕು ಎಂದೂ ನಿರ್ದೇಶಿಸಿರುತ್ತದೆ. ದುರ್ಗುಣಗಳ ತ್ಯಾಗ ಮತ್ತು ಸದ್ಗುಣಗಳ ರೂಢಿಯೇ ನೀತಿವೃದ್ಧಿಯಾಗಿದ್ದು ನೈತಿಕವಾಗಿ ಮನುಷ್ಯನು ವಿಕಾಸಹೊಂದುವುದೇ ವ್ಯಕ್ತಿಯ, ಧಾರ್ಮಿಕ ಜೀವನದ ಪ್ರಥಮ ಹಂತವಾಗಿರುತ್ತದೆ. ಹಿಂದೂಧರ್ಮದಲ್ಲಿ ಸದಾಚಾರದ ಆಧಾರವಾದ ಸದ್ಗುಣಗಳನ್ನು ಮುಖ್ಯವಾಗಿ ಐದು ಎಂದು ನಿಶ್ಚಯಿಸಲಾಗಿ ಅವುಗಳನ್ನು ಪಂಚಪ್ರಧಾನ ಗುಣಗಳು ಎಂದು ಕರೆಯುತ್ತಾರೆ. ಪಂಚಪ್ರಧಾನ ಗುಣಗಳಲ್ಲಿ ಅನೇಕವಾದ ಬೇರೆ ಸದ್ಗುಣಗಳೂ ಒಳಪಟ್ಟಿರುತ್ತವೆ. ಅವುಗಳನ್ನು ಕುರಿತು ಯಥೋಚಿತವಾದ ರೀತಿಯಲ್ಲಿ ಈಗ ವಿಚಾರಮಾಡೋಣ.

ಪಂಚಪ್ರಧಾನ ಗುಣಗಳು :

(೧) ಶೌಚ ಅಥವಾ ಸತ್ವಶುದ್ಧಿ
(೨) ಇಂದ್ರಿಯನಿಗ್ರಹ (ಶಮ ಮತ್ತು ದಮ)
(೩) ಅನಾಸಕ್ತಿ ಅಥವಾ ವೈರಾಗ್ಯ
(೪) ಸತ್ಯ
(೫) ಅಹಿಂಸೆ

ಹಿಂದೂಧರ್ಮದ ಪ್ರಕಾರವಾಗಿ ಮನುಷ್ಯನ ವ್ಯಕ್ತಿತ್ವ ಎಂದರೆ ಶರೀರ, ಮನಸ್ಸು ಮತ್ತು ಆತ್ಮ ಈ ಮೂರೂ ಗಣನೆಗೆ ಸೇರುತ್ತವೆ. ಅನುಸಾರವಾಗಿ ನೀತಿನಿಯಮ ಧರ್ಮಾಚರಣೆಗಳು ವ್ಯಕ್ತಿಯ ಈ ಮೂರು ವ್ಯಕ್ತಿತ್ವಾಂಶಗಳ ಸರ್ವಾಂಗೀಣ ಪ್ರಗತಿಗಾಗಿಯೂ ತನ್ಮೂಲಕ ಪರಮಗುರಿಯಾದ ಮೋಕ್ಷದ ಪ್ರಾಪ್ತಿಗಾಗಿಯೂ ನೆರವಾಗಲು ಅನುಕೂಲವಾಗುವಂತೆ ರೂಪಿತವಾಗಿವೆ. ಅದರಂತೆ ಸದ್ಗುಣಗಳ ಪ್ರಾಯೋಗಿಕ ಆಚರಣೆಯು ಈ ಮೂರು ಅಂಶಗಳನ್ನು ಸಮವಾಗಿ ಆಧರಿಸಿಯೇ ನಿರ್ವಹಿಸಲ್ಪಡಬೇಕು ಎಂಬುದೇ ಹಿಂದೂಧರ್ಮದ ನಿಲವು ಆಗಿರುತ್ತದೆ.

ಶೌಚ : ಶಾರೀರಿಕ ಮತ್ತು ಮಾನಸಿಕ ಶುದ್ಧಿಯೇ ಶೌಚ. ಅಶುದ್ಧಿಯಿಂದಾಗಿ ಶರೀರ ಮನಸ್ಸು ಬುದ್ಧಿಗಳು ಹಾಳಾಗಿ, ವಿಕಾರಹೊಂದಿ, ಪರಿಣಾಮವಾಗಿ ಶಾರೀರಿಕ ಆರೋಗ್ಯ, ಮನಸ್ಸಿನ ಆರೋಗ್ಯ ಇವುಗಳು ಕೆಡುತ್ತವೆ. ಅಂತಹ ಶರೀರ, ಮನಸ್ಸುಗಳಿಂದ ಕೂಡಿದ ವ್ಯಕ್ತಿಯ ಜೀವನ ಸಹಜವಾಗಿ ದುಃಖ-ಅವ್ಯವಸ್ಥೆಗಳ ಪರಂಪರೆಯಾಗುತ್ತದೆ. ಮಾಡುವ ಕೆಲಸ, ಆಡುವ ಮಾತು, ಚಿಂತಿಸುವ ಯೋಚನೆ ಇವುಗಳು ಶುದ್ಧವೂ ಸತ್ಯಪೂರ್ಣವೂ ಆಗಿರಬೇಕಾದುದು ಶೌಚದ ವ್ಯಾಪ್ತಿಗೆ ಸೇರಿದ ಅಂಶವಾಗಿದೆ. ಹೀಗೆ ಶೌಚ ಎಂದರೆ ಶರೀರ ಮನಸ್ಸು ಮಾತುಗಳ ಶುದ್ಧಿ ಮಾತ್ರವಲ್ಲದೆ ಅವುಗಳ ಮೂಲಕ ನಡೆಸುವ ಸಕಲಕ್ರಿಯೆಗಳ ಭಾವನೆ, ಉದ್ದೇಶ, ಕಾರ್ಯಾಚರಣೆಗಳ ಶುದ್ಧಿಯನ್ನೂ ಒಳಗೊಂಡಿರುತ್ತದೆ. ಅನುಸಾರವಾಗಿ ಹಿಂದೂಧರ್ಮದಲ್ಲಿ ಶೌಚಕ್ಕೆ ಸಂಬಂಧಿಸಿದಂತೆ ಅನೇಕ ವಿಧದ ವಿಧಿನಿಯಮಗಳು ಹೇಳಲ್ಪಟ್ಟಿದ್ದು ಶೌಚಯುಕ್ತನಾದವನನ್ನು 'ವಿಶುದ್ಧಾತ್ಮ' ಎಂದು ಕರೆಯಲಾಗಿದೆ.

ಇಂದ್ರಿಯನಿಗ್ರಹ : ಜೀವನದಲ್ಲಿ ನಾವು ಮಾಡುವ ಕೆಲಸಕಾರ್ಯಗಳಿಗೆ ಉಪಯೋಗಿಸುವ ಸಾಧನವು ಇಂದ್ರಿಯಗಳಾಗಿದ್ದು ನಮ್ಮ ಇಂದ್ರಿಯಗಳ ಬಗ್ಗೆ ನಮಗೆ ಹತೋಟಿ ಇಲ್ಲದಿದ್ದರೆ ಮಾಡುವ ಕೆಲಸಗಳು, ವ್ಯವಹಾರಗಳು ಎಲ್ಲವೂ ಹತೋಟಿ ತಪ್ಪುತ್ತವೆ, ಅವ್ಯವಸ್ಥೆ ಉಂಟಾಗುತ್ತದೆ. ಇಂದ್ರಿಯನಿಗ್ರಹವಿರುವವನನ್ನು ಗೀತೆಯಲ್ಲಿ 'ವಿಜಿತಾತ್ಮ' ಎಂದು ಕರೆಯಲಾಗಿದೆ. ದೈಹಿಕ ಮತ್ತು ಮಾನಸಿಕವಾದ ಸಂಯಮವನ್ನು ಇಂದ್ರಿಯ ನಿಗ್ರಹ ಎಂದು ಹೇಳುವುದಾಗಿದೆ.

ಮಾಡುವ ಕೆಲಸ, ನುಡಿಯುವ ನುಡಿ, ಚಿಂತಿಸುವ ಯೋಚನೆ ಈ ಮೂರು ಅಂಶಗಳಲ್ಲಿ ಸಂಯಮ, ಔಚಿತ್ಯಪರಿತ ಉಪಯೋಗ ಇವುಗಳು ಮನುಷ್ಯನಿಗೆ ಜೀವನದಲ್ಲಿ ಯಶಸ್ಸು, ಸರ್ವಾಂಗೀಣ ಉನ್ನತಿ ಇವುಗಳ ದೃಷ್ಟಿಯಿಂದ ಅತ್ಯಂತ ಅಗತ್ಯವಾಗಿವೆ. ಇಂದ್ರಿಯನಿಗ್ರಹವಿಲ್ಲದವನ ಬಾಳು ಕುದುರೆಗಳ ಮೇಲೆ ಹತೋಟಿ ಇಲ್ಲದೆ ಇರುವ ಸಾರಥಿ ಮತ್ತು ಆ ಪರಿಸ್ಥಿತಿಯಲ್ಲಿ ಓಡುತ್ತಿರುವ ರಥದಂತೆ ಆಗುತ್ತದೆ ಅಥವಾ ಬ್ರೇಕಿಲ್ಲದ ಬಸ್ಸಿನಂತಾಗುತ್ತದೆ. ಇಂದ್ರಿಯನಿಗ್ರಹದ ಕುರಿತಾಗಿ ಕಠೋಪನಿಷತ್ತು, ಭಗವದ್ಗೀತೆ ಇವುಗಳಲ್ಲಿ ತುಂಬಾ ವಿವರಣೆಗಳಿದ್ದು ಅವುಗಳು ಬಾಳಿಗೆ ಸಮರ್ಪಕವಾದ ರೀತಿಯಲ್ಲಿ ಮಾರ್ಗದರ್ಶನ ನೀಡುತ್ತವೆ.

ಇಂದ್ರಿಯನಿಗ್ರಹದಲ್ಲಿ ಸಮತ್ವ, ಲಜ್ಜೆ, ತುಷ್ಟಿ, ಶಮ, ದಮ, ಉಪೇಕ್ಷೆ, ಮೈತ್ರಿ, ಮುದಿತ, ಧೈರ್ಯ, ಶ್ರದ್ಧೆ, ವಿಧೇಯತೆ, ತಪಸ್ಸು ಎಂಬ ಈ ಮುಖ್ಯವಾದ ಹನ್ನೆರಡು ಗುಣಗಳು ಸೇರಿರುತ್ತವೆ.

ಈ ಗುಣಗಳ ಕುರಿತಾಗಿ ಸ್ವಲ್ಪಮಟ್ಟಿನ ವಿವರಗಳನ್ನು ಇನ್ನೀಗ ತಿಳಿಯೋಣ.

ಸಮತ್ವ : ಸುಖದುಃಖಗಳು, ಶೀತ ಉಷ್ಣಗಳು ಎಂಬಿತ್ಯಾದಿ ದ್ವಂದ್ವವಾದ ಅನುಭವವು ಮನುಷ್ಯನ ಜೀವನದಲ್ಲಿ ಕೂಡಿಬರುವುದು ಅನಿವಾರ್ಯ. ಸುಖ ಬಂದಾಗ ಹಿಗ್ಗಿದರೆ ದುಃಖ ಬಂದಾಗ ಕುಗ್ಗಿ ಕಷ್ಟವನ್ನು ಅನುಭವಿಸಲೇಬೇಕು. ಹಿಗ್ಗುವುದು ಕುಗ್ಗುವುದು ಇವುಗಳು ಮನಸ್ಸಿನ ವೃತ್ತಿಯಾಗಿ ಅದರಿಂದ ಶರೀರ—ಅನಂತರ ವ್ಯಕ್ತಿಯ ವೈಯಕ್ತಿಕ ಜೀವನ—ತನ್ಮೂಲಕ ಅವನ ಸಂಸಾರ ಸಮಾಜಗಳ ಮೇಲೆ ಅವು ಕೆಟ್ಟ ಪರಿಣಾಮವನ್ನು ಬೀರುತ್ತವೆ. ಸುಖದುಃಖಗಳೆಂಬ ದ್ವಂದ್ವ ಅನುಭವಗಳಿಗೆ ಒಳಗಾದರೂ ಮಾನಸಿಕವಾದ ಸಮತೆ, ಸ್ಥಿರತೆ—ಇವುಗಳನ್ನು ಕಳೆಕೊಳ್ಳದೆ ಸಮಾನದೃಷ್ಟಿಯಿಂದ ಸುಖದುಃಖಗಳನ್ನು ಎದುರಿಸುವುದೇ ಸಮತ್ವಗುಣ.

ಲಜ್ಜೆ : ಆತ್ಮಶ್ಲಾಘನೆ ಮತ್ತು ಅಕೃತ್ಯಗಳನ್ನು ಮಾಡುವಿಕೆಯಲ್ಲಿ ನಾಚಿಕೆ ಇರುವುದೇ ಲಜ್ಜೆ. ಲಜ್ಜೆ ಇಲ್ಲದ ಮನುಷ್ಯನು ವಿವೇಕವನ್ನು ಕಳಕೊಂಡು ಜೀವನದಲ್ಲಿ ಉತ್ತಮ ಗುರಿ, ಉದಾತ್ತ ದೃಷ್ಟಿ ಇವುಗಳಿಲ್ಲದೆ ಎಲ್ಲಾ ದೃಷ್ಟಿಗಳಿಂದಲೂ ಅಧೋಗತಿಯನ್ನು ಹೊಂದುವಂತಾಗುತ್ತದೆ.

ತುಷ್ಟಿ : ತನಗೆ ಇದ್ದುದರಲ್ಲಿ, ದೊರೆತುದರಲ್ಲಿ ಹಾಗೂ ಲೌಕಿಕ ಜೀವನದಲ್ಲಿ ತಾನು ಪಡೆದಿರುವ ಸ್ಥಾನ-ಪರಿಸ್ಥಿತಿಗಳಲ್ಲಿ ತೃಪ್ತಿಯನ್ನು ತಳೆದಿರುವುದೇ ತುಷ್ಟಿ. ಜೀವನದಲ್ಲಿ ತಾನಿರುವ ನೆಲೆಯಿಂದ ಅಭಿವೃದ್ಧಿ ಪಡೆಯಲು ಬಯಸಬಾರದೆಂದು ಇದರ ಅರ್ಥವಲ್ಲ.

ಆದರೆ ತನ್ನ ಸ್ಥಿತಿ ಹೀಗಾಗಿದೆಯಲ್ಲಾ, ತಾನು ಇತರರಿಗಿಂತ ಕೀಳಾಗಿದ್ದೇನಲ್ಲಾ ಎಂದು ದುಃಖ-ಮತ್ಸರಪಡುವುದು ಮಾತ್ರ ತಪ್ಪು ಎಂಬುದೇ ತಾತ್ಪರ್ಯ. ದುಃಖ-ಉದ್ವೇಗಗಳಿಂದ ಯಾವುದೂ ಕೂಡ ಸಾಧಿತವಾಗುವುದಿಲ್ಲ. ಅಭಿವೃದ್ಧಿಗೆ, ಪುರೋಗಮನಕ್ಕೆ ಯತ್ನಮಾಡುವುದು ಮಾನವಜೀವನಸೂತ್ರಗಳಲ್ಲಿ ಒಂದಾಗಿದೆ. ಉತ್ಸಾಹಪೂರ್ಣ ಯತ್ನದಲ್ಲಿ ಫಲ ಬರುವವರೆಗೆ ಇದ್ದುದರಲ್ಲಿ ಸಮಾಧಾನವಿರಬೇಕು. ಫಲ ದೊರೆತಾಗ ಯಾವುದು ಎಷ್ಟು ಬೇಕು—ಎಷ್ಟು ಸಾಕು ಎಂಬ ವಿವೇಚನೆ ನಡೆಸಿ ತೀರ್ಮಾನಕ್ಕೆ ಬಂದು ತದನುಸಾರವಾಗಿ ಜೀವನದಲ್ಲಿ ತನ್ನ ವರ್ತನೆಯನ್ನು ರೂಪಿಸಿಕೊಳ್ಳಬೇಕು. ತುಷ್ಟಿಯೇ ಸುಖದ ಮೂಲ ಎಂದು ಮನುಸ್ಮೃತಿಯಲ್ಲಿ ಹೇಳಲಾಗಿದೆ.

**ಸಂತೋಷಂ ಪರಮಾಸ್ಥಾಯ ಸುಖಾರ್ಥೀ ಸಂಯತೋ ಭವೇತ್ ।**
**ಸಂತೋಷಮೂಲಂ ಹಿ ಸುಖಂ ದುಃಖಮೂಲಂ ವಿಪರ್ಯಯಃ ॥**

—ಮ. ೪-೧೨

"ಸಂತೋಷವನ್ನು ಬಯಸುವವರು ಸಂಯಮಿಗಳಾಗಿರಬೇಕು ಮತ್ತು ತುಷ್ಟಿಯಲ್ಲಿ ಆಶ್ರಯವನ್ನು ಪಡೆದಿರಬೇಕು. ಸಂತೋಷವು ಸುಖದ ಮೂಲವು. ಅಸಂತೋಷವು ದುಃಖದ ಮೂಲವಾಗಿದೆ."

ಶಮ: ಮಾನವರಿಗೆ ಜೀವನದಲ್ಲಿ ಅಗತ್ಯದ ಮತ್ತು ಅನಗತ್ಯದ ವಿಚಾರ ಹಾಗೂ ವಸ್ತುಗಳ ಆಕರ್ಷಣೆಗಳಿವೆ. ಮಾನವನು ತನ್ನ ಮನಸ್ಸನ್ನು ಹತೋಟಿಯಲ್ಲಿ ಇಟ್ಟುಕೊಳ್ಳದೆ ಅನಗತ್ಯದ ವಿಚಾರಗಳಿಗೆ ಮತ್ತು ವಸ್ತುಲಾಭದ ಯತ್ನಗಳಿಗೆ ಮಾರುಹೋಗಿ ದುಃಖತೊಂದರೆಗಳಿಗೆ ತುತ್ತಾಗುತ್ತಾನೆ. ಹೀಗಾಗಲು ಅವನ ಮನಸ್ಸೇ ಕಾರಣ. ಮನಸ್ಸಿನಿಂದಲೇ ಮನುಷ್ಯನ ಮಾತು, ಕೆಲಸಗಳಿಗೆ ಪ್ರೇರಣೆಯುಂಟಾಗುವುದರಿಂದ ಮನಸ್ಸನ್ನು ಹತೋಟಿಯಲ್ಲಿಟ್ಟರೆ ಉಳಿದವೆಲ್ಲವೂ ಸರಿಹೋಗುತ್ತವೆ. ಮನಸ್ಸಿನಿಂದ ವಿಷಯಾಸಕ್ತ ಬುದ್ಧಿ ತೊಳೆದುಹೋದಾಗ ಮೋಕ್ಷಪ್ರಾಪ್ತಿಯಾಗುತ್ತದೆ ಎಂದು ಹಿಂದೂಧರ್ಮದ ಗ್ರಂಥಗಳಲ್ಲಿ ಉಲ್ಲೇಖನವಿದೆ :

**ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ।**
**ಬಂಧಾಯ ವಿಷಯಾಸಂಗಂ ಮೋಕ್ಷೋ ನಿರ್ವಿಷಯಂ ಸ್ಮೃತಮ್ ॥**

—ಮೈತ್ರೀ ಉಪನಿಷತ್, ಅಧ್ಯಾಯ ೬, ಶ್ಲೋಕ ೩೪

"ಮನುಷ್ಯನಿಗೆ (ಕರ್ಮದ) ಬಂಧ ಅಥವಾ ಮೋಕ್ಷ ಉಂಟಾಗಲಿಕ್ಕೆ ಮನಸ್ಸೇ ಕಾರಣವು; ಮನಸ್ಸು ವಿಷಯಾಸಕ್ತವಾಗುವುದೇ ಬಂಧ; ಅದು ನಿರ್ವಿಷಯ ಎಂದರೆ ನಿಷ್ಕಾಮ ಅಥವಾ ನಿಸ್ಸಂಗವಾಗುವುದೇ ಮೋಕ್ಷ." ಸ್ಥೂಲವಾಗಿ ಹೇಳುವುದಾದರೆ ಮನಸ್ಸನ್ನು ಹತೋಟಿಯಲ್ಲಿಡುವುದೇ ಶಮ ಎಂದು ಹೇಳಬಹುದು. ಉದಾತ್ತವಾದ ಭಾವನೆ, ಹಿರಿಯರ ಆದರ್ಶ, ಸತತವಾದ ಅಭ್ಯಾಸ ಮತ್ತು ವೈರಾಗ್ಯಗಳಿಂದ ಮನಸ್ಸನ್ನು ಹತೋಟಿಯಲ್ಲಿ ಇಡಬೇಕು. ಇವೆಲ್ಲ 'ಶಮ' ಗುಣಕ್ಕೆ ಸೇರಿದ ಅಂಶಗಳಾಗಿವೆ.

ದಮ : ಪಂಚೇಂದ್ರಿಯಗಳ ಮೂಲಕ ಬಾಹ್ಯಪ್ರಪಂಚದ ಆಗುಹೋಗುಗಳಲ್ಲಿ ಮಾನವನು ಭಾಗಿಯಾಗುತ್ತಾನೆ. ತನ್ನ ಕೆಲಸಕಾರ್ಯಗಳ ಪರಿಣಾಮವಾಗಿ ಸುಖದುಃಖ

ಗಳನ್ನು ಅನುಭವಿಸುತ್ತಾನೆ. ಅಶಾಶ್ವತವಾದ, ಅನಿತ್ಯವಾದ ಸುಖದಿಂದ ಮನುಷ್ಯನಿಗೆ ಸುಖವಿಲ್ಲ. ನಿಜವಾದ ಸುಖವಾವುದು ಎನ್ನುವುದನ್ನು ಭಗವದ್ಗೀತೆಯಲ್ಲಿ ಹೀಗೆ ಹೇಳಲಾಗಿದೆ :

**ಸುಖಮಾತ್ಯಂತಿಕಂ ಯತ್ತದ್ ಬುದ್ಧಿಗ್ರಾಹ್ಯಮತೀಂದ್ರಿಯಮ್ ॥**

—ಗೀತಾ, ೬–೨೧

"ಯಾವುದು ಕೇವಲ ಬುದ್ಧಿಯಿಂದಲೇ ಗ್ರಾಹ್ಯವಾದುದು ಆಗಿದ್ದು ಇಂದ್ರಿಯಾತೀತವಾಗಿರುತ್ತದೆಯೋ ಅದೇ ಆತ್ಯಂತಿಕ ಸುಖವು."

ಈ ಆತ್ಯಂತಿಕ ಸುಖದ ಸಂಪಾದನೆಯೇ ತನ್ನ ಜೀವನದ ಗುರಿ ಎಂಬ ಅರಿವು ಮನುಷ್ಯನಿಗೆ ಬರಬೇಕು. ತದನುಸಾರವಾಗಿ ಅವನು ಜೀವನದ ಕಾರ್ಯಗಳನ್ನು ನಿರ್ವಹಿಸುವುದರಲ್ಲಿ ಪ್ರವೃತ್ತನಾಗಬೇಕು. ಹಾಗೆ ಜೀವಿಯು ಜೀವನರಂಗದಲ್ಲಿ ಕಾರ್ಯ ಪ್ರವೃತ್ತನಾಗಿರುವಾಗ ಸುಖದುಃಖಗಳು ಅವನನ್ನು ಬಾಧಿಸುವುದು ಅನಿವಾರ್ಯವಾಗುತ್ತದೆ. ಆದರೆ ಅವುಗಳಿಂದ ಅವನು ನಿವೃತ್ತಿಯನ್ನು ಪಡೆಯಬೇಕಾಗಿರುವುದು ಜೊತೆಯಲ್ಲೇ ಅಗತ್ಯವಾಗಿರುತ್ತದೆ. ನಿವೃತ್ತಿಯನ್ನು ಪಡೆಯಬೇಕಾದರೆ ಪ್ರವೃತ್ತಿ ಮಾರ್ಗದಲ್ಲಿ ಹತೋಟಿಯಿಂದ ಸಾಗಬೇಕು. ಇಂದ್ರಿಯಸುಖಗಳನ್ನು ಮತ್ತು ಅವುಗಳ ಇತಿಮಿತಿಗಳನ್ನು ತಿಳಿದು, ಯೋಗ್ಯ-ಅಯೋಗ್ಯತೆಗಳನ್ನು ಗ್ರಹಿಸಿ, ಅನುಭವಿಸಿ, ಇಂದ್ರಿಯಗಳ ದಾಸನಾಗದೆ ಅವುಗಳ ಒಡೆಯನಾಗಬೇಕು. ಹೀಗೆ ಇಂದ್ರಿಯನಿಗ್ರಹ ಮಾಡಿ ಅವುಗಳ ಮೂಲಕ ದೊರೆಯುವ ಸುಖದುಃಖಗಳಿಗೆ ಅಧೀನನಾಗದೆ, ಇಂದ್ರಿಯಗಳ ವಿಷಯವಸ್ತುಗಳ ಆಕರ್ಷಣೆಗೆ ಒಳಗಾಗದೆ ಇರುವುದೇ ದಮ ಎಂದು ಹೇಳಲ್ಪಡುತ್ತದೆ.

ಉಪೇಕ್ಷೆ : ದುರ್ಜನರ ವಿಷಯದಲ್ಲಿ ಅಲಕ್ಷ್ಯಪ್ರಕಟಣೆಯನ್ನು ಉಪೇಕ್ಷೆ ಎಂದು ಹೇಳುವುದಾಗಿದೆ. ದುರ್ಜನರ ಬಗ್ಗೆ ನಾವು ಅಲಕ್ಷ್ಯಭಾವನೆಯಿಂದ ಕೂಡಿರಬೇಕು. ಅವರಲ್ಲಿ ದುರ್ಜನರ ಸಂಗರಹಿತರಾಗಿರಬೇಕೇ ವಿನಾ ವೈರತ್ವವುಳ್ಳವರಾಗಬಾರದು.

ಮೈತ್ರಿ : ಸಮಾನರೊಡನೆ, ಹಿತವಾದವರೊಡನೆ ಸ್ನೇಹಭಾವದಿಂದ ಇರುವುದೇ ಮೈತ್ರಿ. ಇತರರ ಒಡನೆ ಏಕೀಭಾವವನ್ನು ಅನುಭವಿಸುತ್ತಾ ಹೃದಯವಿಶಾಲತೆಯನ್ನು ಪಡೆಯಲು ಮೈತ್ರೀಗುಣವು ಸಹಕಾರಿಯಾಗಿದೆ.

ಮುದಿತ : ಮೇಲಂತಸ್ತಿನಲ್ಲಿ ಅಂದರೆ ತನಗಿಂತ ಹಿರಿಯರೂ ಯೋಗ್ಯರೂ ಆಗಿರುವವರ ಒಡನೆ ದಾಕ್ಷಿಣ್ಯದಿಂದ, ಗೌರವಭಾವದಿಂದ ನಡೆಕೊಳ್ಳುವಿಕೆಯೇ ಮುದಿತ. ಇದರಲ್ಲಿ ದಾಸ್ಯಭಾವವೆ ಇಲ್ಲದೆ ಗೌರವ-ಪೂಜ್ಯಭಾವನೆಗಳು ಸೇರಿರುತ್ತವೆ.

ಧೈರ್ಯ : ಬಾಳಿನ ಕರ್ತವ್ಯವನ್ನು ಸರಿಯಾಗಿ ಮಾಡುವಾಗ ತನ್ಮಧ್ಯೆ ಒದಗಿಬರುವ ವಿಪತ್ತುಗಳನ್ನು ಎದುರಿಸುವ, ವಿಪತ್ತುಗಳಿಂದಾಗಿ ಭಯಗೊಳ್ಳದ, ನಿರಾಶೆಹೊಂದದ ಮನಶ್ಶಕ್ತಿ-ಗುಣಧರ್ಮವೇ ಧೈರ್ಯ. ಜೀವನದ ಸರ್ವ ಕೆಲಸಗಳ ಸುಸೂತ್ರವಾದ ಸಾಧನೆಗೆ ಧೈರ್ಯವೇ ಮೂಲಶಕ್ತಿ. ಧೈರ್ಯವಿಲ್ಲದಿದ್ದರೆ ಅಶಕ್ತಿ-ಅಸ್ಥಿರತೆಗಳುಂಟಾಗಿ ವ್ಯಕ್ತಿಯು ಎಲ್ಲಿಯೂ ಬದುಕಲು ಸಾಧ್ಯವಿಲ್ಲ. ಧರ್ಮಸಮ್ಮತವಾದ ಕೆಲಸಗಳನ್ನು ಮಾಡುವಾಗ ಎಂತಹ ಪರಿಸ್ಥಿತಿ ಬಂದರೂ ಅದನ್ನು ಎದುರಿಸಿ ಕೆಲಸ ನಿರ್ವಹಿಸುವ

ಮನಶ್ಶಕ್ತಿಯೇ ಧೈರ್ಯ ಎಂದು ತಾತ್ಪರ್ಯ. ಧೀರತನ, ಸಾಹಸ–ಪೌರುಷ, ಇವು ಗಳೆಲ್ಲಾ ಧೈರ್ಯದ ರೂಪಭೇದಗಳಾಗಿವೆ. ಮನಶ್ಶುದ್ಧಿ, ಬುದ್ಧಿಶುದ್ಧಿ, ಶರೀರಶುದ್ಧಿ ಗಳಿದ್ದು ವ್ಯಕ್ತಿಯು ಸತ್ವಶುದ್ಧಿಯಾದಾಗ ಧೈರ್ಯಗುಣವು ವರ್ಧನೆಯಾಗಲು ಅನುಕೂಲ ವಾಗಿ ತದನುಸಾರವಾಗಿ ಅದು ವೃದ್ಧಿಯಾಗುತ್ತದೆ. ಧೈರ್ಯವೇ ಜೀವಿಯ ಜೀವನದ ಜೀವಾಳವಾಗಿದ್ದು ಅದನ್ನು ಶ್ರೀಮದ್ ಭಗವದ್ಗೀತೆಯಲ್ಲಿ 'ಅಭಯ' ಎಂದು ಕರೆಯ ಲಾಗಿದೆ. ಹಿಂದೂಧರ್ಮದ ಗ್ರಂಥಗಳಾದ ಉಪನಿಷತ್ತು, ಗೀತೆ, ಪುರಾಣಕಥೆಗಳು— ಇವುಗಳೊಳಗೆಲ್ಲಾ ಧೈರ್ಯದ ಪ್ರಭಾವ, ಹಿರಿಮೆ ಮತ್ತು ಅಗತ್ಯಗಳ ಬಗ್ಗೆ ವಿಸ್ತಾರ ವಾಗಿ ವಿವರಣೆಗಳು ವಿಪುಲವಾಗಿ ದೊರೆಯುತ್ತವೆ.

ಶ್ರದ್ಧೆ : ಗುರುಹಿರಿಯರ ವಚನಗಳು, ಶಾಸ್ತ್ರವಚನಗಳು ಇವುಗಳಲ್ಲಿ ನಂಬಿಕೆ, ತನ್ನಲ್ಲಿ ತನಗೆ ವಿಶ್ವಾಸ, ತಾನು ಜೀವನದಲ್ಲಿ ಉತ್ತಮನಾಗುತ್ತೇನೆ ಎಂಬ ಆಶಾಭಾವನೆ ಇವು ಗಳೆಲ್ಲಾ ಸೇರಿ 'ಶ್ರದ್ಧೆ' ಎಂದೆನಿಸಿರುತ್ತದೆ. ಶ್ರದ್ಧೆ ಇಲ್ಲದಿದ್ದರೆ ಸಂಶಯವು ಬಾಳಿನಲ್ಲಿ ತಲೆಹಾಕಿ ಸಂಶಯದಿಂದ ಚಿತ್ತಚಂಚಲತೆ, ಅಸ್ಥಿರತೆಗಳುಂಟಾಗಿ ಜೀವನವು ಅಸುಖವೂ ಅಭದ್ರವೂ ಆಗುವುದು. ಅವನವನ ಶ್ರದ್ಧೆಯಂತೆ ಅವನವನ ಜೀವನ ಸ್ಥಿತಿಗತಿಗಳು ರೂಪುಗೊಳ್ಳುವುವು ಎಂದು ಗೀತೆಯಲ್ಲಿ ಸ್ಪಷ್ಟಪಡಿಸಲಾಗಿದೆ : "ಯೋ ಯಚ್ಛ್ರದ್ಧಃ ಸ ಏವ ಸಃ" (ಗೀತಾ. ೧೭.೩). "ಯಾವನಿಗೆ ಯಾವ ರೀತಿಯ ಶ್ರದ್ಧೆ ಇದೆಯೋ ಅವನು ಅದೇ ರೀತಿ ಆಗುತ್ತಾನೆ." ಹಾಗೆಯೇ ಶ್ರದ್ಧೆಯ ಮಹಿಮೆಯನ್ನು ಹೇಳುತ್ತಾ ಗೀತೆಯಲ್ಲಿ "ಸಂಶಯಾತ್ಮಾ ವಿನಶ್ಯತಿ"—"ಸಂಶಯಾತ್ಮನು ನಾಶಹೊಂದುತ್ತಾನೆ" (ಗೀತಾ. ೪.೪೦), "ಶ್ರದ್ಧಾವಾನ್ ಲಭತೇ ಜ್ಞಾನಂ"—"ಶ್ರದ್ಧೆಯುಳ್ಳವನು ಜ್ಞಾನವನ್ನು ಹೊಂದು ತ್ತಾನೆ" (ಗೀತಾ. ೪-೩೬) ಎಂಬುದಾಗಿ ಹೇಳಲಾಗಿರುತ್ತದೆ. ಕಠೋಪನಿಷತ್ತಿನಲ್ಲಿ ಬರುವ ನಚಿಕೇತನ ವೃತ್ತಾಂತವು ಶ್ರದ್ಧೆಯ ಕುರಿತಾಗಿ ಹೆಚ್ಚಿನ ಬೆಳಕನ್ನು ನೀಡುತ್ತದೆ.

ವಿಧೇಯತೆ : ಗುರುಹಿರಿಯರ ವಚನಗಳಿಗೆ, ಶಾಸ್ತ್ರವಚನಗಳಿಗೆ, ಸಮಾಜದ ನೀತಿ ನಿಯಮಗಳಿಗೆ, ರಾಷ್ಟ್ರದ ನೀತಿ ನ್ಯಾಯವಿಚಾರಗಳಿಗೆ, ಹೀಗೆ ಆಧ್ಯಾತ್ಮಿಕ ಹಾಗೂ ಲೌಕಿಕವಾಗಿ ಯಥೋಚಿತವಾದ ವಿನಯ, ಸೌಜನ್ಯಗಳಿಂದ ಕೂಡಿ ಗೌರವ ತೋರಿಸುತ್ತಾ ಅವುಗಳನ್ನು ಪರಿಪಾಲಿಸುವ ಗುಣವೇ ವಿಧೇಯತೆ. ವಿಧೇಯತೆಯು ವಿನಯದ ಇನ್ನೊಂದು ಸ್ವರೂಪವಾಗಿದೆ. ವಿಧೇಯತೆಯಿಲ್ಲದಿದ್ದರೆ ಅಹಂಕಾರ, ಅಹಂಕಾರದಿಂದ ಅವಿವೇಕ, ಅವಿವೇಕದಿಂದ ಅವ್ಯವಸ್ಥೆಯು ವ್ಯಕ್ತಿಯ ಜೀವನದಲ್ಲಿ ಒಳಗೂಡುತ್ತದೆ. ಜೀವನದಲ್ಲಿ ಯಾವಾಗ ನಡವಳಿಕೆಯ ಅವ್ಯವಸ್ಥೆ ಉಂಟಾಯಿತೋ ಆಗ ಜೀವಿಯ ಬದುಕು ಹಾಳಾಯಿತು ಎನ್ನುವುದನ್ನು ಬೇರೆ ಹೇಳಬೇಕಾಗಿಲ್ಲ.

ತಪಸ್ಸು : ಶರೀರದ ಅಂದರೆ ಕಾಯಿಕ, ವಾಚಿಕ ಮತ್ತು ಮಾನಸಿಕವಾದ ಮೂರು ವಿಧದ ಶಕ್ತಿಯನ್ನು ದುರ್ವ್ಯಯಮಾಡದೆ ಅದನ್ನು ದಿನದಿನವೂ ವೃದ್ಧಿಪಡಿಸುತ್ತಾ ಆತ್ಮಸಾಕ್ಷಾತ್ಕಾರಕ್ಕೆ ಅನುಕೂಲವಾಗುವ ರೀತಿಯಲ್ಲಿ ಜೀವನದಲ್ಲಿ ಅಳವಡಿಸಿಕೊಂಡು ಉಪಯೋಗಿಸುವುದೇ ತಪಸ್ಸು. ಬ್ರಹ್ಮಚರ್ಯಪಾಲನೆ, ಸದ್ಗ್ರಂಥಗಳ ಪಠಣ, ಸದ್ವಿಚಾರ

ಗಳ ಚಿಂತನ, ಸದ್ವಾಚನ, ಮಿತಮಿತವಾದ ಆಹಾರಸೇವನೆ, ವಿಹಾರ ಅನುಭವಿಸುವಿಕೆ—ಇವೆಲ್ಲಾ ತಪಸ್ಸಿನ ಅಂಶಗಳಾಗಿವೆ.

ಅನಾಸಕ್ತಿ : ಪ್ರಪಂಚದಲ್ಲಿರುವ ಸುಖಭೋಗಗಳು, ವಸ್ತುವಿಚಾರಗಳು, ಬಂಧುಬಳಗಗಳು ಇವುಗಳೆಲ್ಲದರ ಕುರಿತಾಗಿ ಆಸಕ್ತಿವ್ಯಾಮೋಹಗಳು ಇಲ್ಲದಿರುವುದನ್ನು ಅನಾಸಕ್ತಿ ಎಂದು ಹೇಳಲಾಗಿದೆ. ಪ್ರಪಂಚದಲ್ಲಿ ಜನ್ಮತಳೆದ ಜೀವಿಯು ಪ್ರಾಪಂಚಿಕವಾದ ವ್ಯಾಮೋಹಗಳಿಗೆ ಒಳಗಾದರೆ ಜೀವನದ ಪರಮಗುರಿಯಾದ ಆತ್ಮಸಾಕ್ಷಾತ್ಕಾರ—ಮೋಕ್ಷವನ್ನು ಪಡೆಯಲು ಸಾಧ್ಯವಿಲ್ಲ. ಯಾರು ಆಸಕ್ತನೋ ಅವನು ಮುಕ್ತನಾಗಲು ಸಾಧ್ಯವಿಲ್ಲ. ವಿಷಯಾಸಕ್ತಿ, ಬಂಧುಪ್ರೇಮ, ಕುಟುಂಬದ ವ್ಯಾಮೋಹ ಇವುಗಳನ್ನು ಸತ್ಯ, ಶಾಶ್ವತ ಎಂದು ನಂಬಿ ಆಸಕ್ತಿ ತಳೆದಂತೆ ಜೀವಿಯು ಬೌದ್ಧಿಕ, ದೈಹಿಕ ಹಾಗೂ ಆಧ್ಯಾತ್ಮಿಕವಾದ ಉನ್ನತಿಗೆ ಧಕ್ಕೆಬರುತ್ತದೆ ಎಂದು ಉಪನಿಷತ್ತು ಹಾಗೂ ಭಗವದ್ಗೀತೆಯಲ್ಲಿ ಬಹಳ ಸ್ಪಷ್ಟವಾಗಿ ವಿವರಿಸಲಾಗಿದೆ. ಇಂದ್ರಿಯವಿಷಯಗಳ ಕುರಿತಾದ ಆಸಕ್ತಿಯು ಸರ್ವ ಕಷ್ಟನಷ್ಟಗಳ ಮೂಲ ಎಂದು ಗೀತೆಯಲ್ಲಿ ನೀಡಿದ ವಿವರಣೆ ಹೀಗಿದೆ :

> ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।
> ಸಂಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಽಭಿಜಾಯತೇ ॥
> ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ ।
> ಸ್ಮೃತಿಭ್ರಂಶಾತ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ॥
>
> —ಗೀತಾ, ಅಧ್ಯಾಯ ೨, ಶ್ಲೋಕ ೬೨, ೬೩

"ವಿಷಯಗಳನ್ನು ಚಿಂತಿಸುತ್ತಿರುವ ಪುರುಷನಿಗೆ ಅವುಗಳಲ್ಲಿ ಆಸಕ್ತಿ ಹುಟ್ಟುತ್ತದೆ ; ಆಸಕ್ತಿಯಿಂದ ಕಾಮವು ಹುಟ್ಟುತ್ತದೆ ; ಕಾಮದಿಂದ ಕ್ರೋಧವು ಹುಟ್ಟುತ್ತದೆ ; ಕ್ರೋಧದಿಂದ ಸಂಮೋಹವು ಉಂಟಾಗುತ್ತದೆ ; ಸಂಮೋಹದಿಂದ ಸ್ಮೃತಿಭ್ರಮೆಯುಂಟಾಗುತ್ತದೆ ; ಸ್ಮೃತಿಭ್ರಮೆಯಿಂದ ಬುದ್ಧಿನಾಶವಾಗುತ್ತದೆ ; ಬುದ್ಧಿನಾಶದಿಂದ ಪುರುಷನು ನಾಶವಾಗುತ್ತಾನೆ."

ಜಗತ್ತಿನಲ್ಲಿರುವ ಸುಖದುಃಖ, ಕಷ್ಟನಷ್ಟಗಳಿಗೆಲ್ಲ ಮೂಲಕಾರಣ ಅವುಗಳ ಬಗೆಗೆ ವ್ಯಕ್ತಿಗೆ ಇರುವ ಆಸಕ್ತಿಯೇ ಆಗಿರುತ್ತದೆ ಎಂದು ಹಿಂದೂಧರ್ಮದ ಗ್ರಂಥಗಳಲ್ಲಿ ಸ್ಪಷ್ಟಪಡಿಸಲಾಗಿದೆ. ಮಾತ್ರವಲ್ಲದೆ ಜಗತ್ತಿನ ಸುಖಸಂತೋಷಗಳು, ವಸ್ತುವಿಚಾರಗಳು ಜೀವಿಯ ಆತ್ಮದ ಪೂರ್ಣವಾದ ವಿಕಾಸಕ್ಕೆ ಸಹಾಯವಾಗುವ ಸಾಧನಗಳು ವಿನಾ ಬಾಳಿನ ಪರಮಗುರಿಗಳಲ್ಲ ಎಂದು ಹಿಂದೂಧರ್ಮದ ನಿಶ್ಚಯದ ನಿಲುವಾಗಿರುತ್ತದೆ. ಅದಕ್ಕಾಗಿಯೇ ಅನಾಸಕ್ತಿಯು ವ್ಯಕ್ತಿಯ ಉದ್ಧಾರಕ್ಕೆ ಅಗತ್ಯವಿರುವ ಒಂದು ಮುಖ್ಯವಾದ ಸದ್ಗುಣವಾಗಿರುತ್ತದೆ.

ಪ್ರಪಂಚದಲ್ಲಿ ಯಾವುದು ಸತ್ಯ, ಯಾವುದು ಶಾಶ್ವತ ಎಂದು ಅರಿತುಕೊಂಡು ಅನಾಸಕ್ತಿಯಿಂದ ಜೀವನದ ಕೆಲಸಕಾರ್ಯಗಳನ್ನು ನಿರ್ವಹಿಸಿ ಭಗವಂತನಲ್ಲಿ ಯುಕ್ತನಾಗಬೇಕು ಎಂಬುದೇ ಅನಾಸಕ್ತಿಯಲ್ಲಿ ಅಡಗಿರುವ ತತ್ತ್ವವಾಗಿದೆ. ಸಾಮಾನ್ಯವಾಗಿ ಅನಾಸಕ್ತಿ ಎಂಬ ಸದ್ಗುಣದಲ್ಲಿ ವಿವೇಕ, ತ್ಯಾಗ, ದಯೆ, ದಾನ, ಮಾರ್ದವ ಎಂಬ ಐದು ಗುಣಗಳು ಸೇರಿರುತ್ತವೆ. ಅವುಗಳನ್ನು ವಿವರವಾಗಿ ಪರಿಶೀಲಿಸೋಣ.

(೧) ವಿವೇಕ : ಪ್ರಪಂಚದಲ್ಲಿ ಒಳ್ಳೆಯದು ಯಾವುದು, ಕೆಟ್ಟದ್ದು ಯಾವುದು ಎಂಬುದರ ಪರಿಶೀಲನೆ-ತಾರತಮ್ಯಶಕ್ತಿಯೇ ವಿವೇಕ.

(೨) ತ್ಯಾಗ ಆತ್ಮೋದ್ಧಾರಕ್ಕೆ ಯಾವುದು ಹಿತವಲ್ಲವೋ ಅದನ್ನು ತ್ಯಜಿಸುವುದು ಹಾಗೂ ತನ್ನಲ್ಲಿರುವುದನ್ನು ಇತರರ ಹಿತಕ್ಕಾಗಿ ನೀಡುವುದು ತ್ಯಾಗ.

(೩) ದಯೆ : ಸ್ವಾರ್ಥದೃಷ್ಟಿ ಇಲ್ಲದೆ ಇತರರ ಕಷ್ಟ, ನೋವುಗಳಿಗಾಗಿ ಅನುಕಂಪ ತೋರಿಸುವಿಕೆಯೇ ದಯೆ. ದಯಾಗುಣವು ಮನಸ್ಸಿನಲ್ಲಿ ಬೆಳೆದಾಗ ಸ್ವಾರ್ಥಬುದ್ಧಿಯು ಇಲ್ಲದಂತಾಗಿ ವ್ಯಕ್ತಿಯ ಹೃದಯ ವಿಶಾಲವಾಗಿ ಆತ್ಮೋನ್ನತಿಗೆ ಅದು ನೆರವಾಗುತ್ತದೆ. ಆಗ ಆತನು ಸಮಾಜದಲ್ಲಿ ಸರ್ವರನ್ನೂ ಪ್ರೀತಿಯಿಂದ ಕಾಣುವವನಾಗುತ್ತಾನೆ. ಸೇವೆ-ಸಹಕಾರಬುದ್ಧಿಗಳಿಂದ ಜೀವನವನ್ನು ಮಾಡುತ್ತಾ ಸರ್ವರ ಅಂತರ್ಯಾಮಿಯಾಗಿರುವ ಭಗವಂತನನ್ನು ಆತನು ಕಾಣುತ್ತಾನೆ. ಸಮಾಜದ ಜೀವನ, ರಾಷ್ಟ್ರದ ಏಳಿಗೆ ಎಲ್ಲವೂ ನಡೆಯಲು ದಯೆಯೇ ಮೂಲವಾದ ಗುಣ. ಪರಸ್ಪರ ವ್ಯಕ್ತಿಗಳಲ್ಲಿ ದಯೆ ವ್ಯವಹರಿಸಲ್ಪಡದಿದ್ದರೆ ಜಗತ್ತಿನಲ್ಲಿ ಜನಜೀವನ ಸುಗಮವಾಗದು. ಮಾನವನ ಜೀವನದಲ್ಲಿ ತನಗೆ ಇತರರಿಂದ ಉಪಕಾರ, ತನ್ನಿಂದ ಇತರರಿಗೆ ಉಪಕಾರ ಎಂಬಂತೆ ವ್ಯವಹಾರ ಮಾಡುತ್ತಾ ಬದುಕು ಸಾಗಬೇಕು. ಆಗ ಆ ಜೀವನ ಧರ್ಮಯುತವಾಗುತ್ತದೆ ಹೀಗೆ ಜೀವನಧರ್ಮದ ಮೂಲವೇ ದಯೆ ಎಂದರೆ ಅತಿಶಯೋಕ್ತಿಯಾಗಲಾರದು.

(೪) ಮಾರ್ದವ : ಸದ್‌ವಿಚಾರ, ಸದ್ವಸ್ತು, ಸದ್‌ವ್ಯಕ್ತಿಗಳ ಒಡನೆ ಸಹಯೋಗವನ್ನು ಇಟ್ಟುಕೊಂಡಿರುವಿಕೆಯೇ ಮಾರ್ದವ. ಅಂದರೆ ಅಸಹ್ಯವಾದ ಲೌಕಿಕ ಜೀವನದ ಧರ್ಮಸಮ್ಮತವಾದ ಸುಖಶಾಂತಿಗಳಿಗೆ ಮತ್ತು ಆತ್ಮೋನ್ನತಿಗೆ ಸಹಕಾರಿಯಾಗಿರದ ವಿಚಾರಗಳಲ್ಲಿ ಆಸಕ್ತಿ ಇಲ್ಲದಿರುವಿಕೆಯೇ ಮಾರ್ದವ ಎಂದು ತಾತ್ಪರ್ಯ.

ಒಟ್ಟಿನಲ್ಲಿ ಜಗತ್ತಿನ ಸುಖಸಂತೋಷಗಳ ಇತಿಮಿತಿಯನ್ನು ತಿಳಿದು ಅವುಗಳಿಗಾಗಿ ಮೋಹವಿಲ್ಲದೆ, ಆಸಕ್ತಿ ತಳೆಯದೆ ಬಾಳನ್ನು ಸಾಗಿಸುತ್ತಾ ಹೋಗುವುದು ಮತ್ತು ಭಗವಂತನ ಸಾಕ್ಷಾತ್ಕಾರಕ್ಕಾಗಿ ಜೀವನವನ್ನು ಸಾಧನೋಪಯೋಗವಾಗಿಸುವುದು— ಇದೇ ಅನಾಸಕ್ತಿಯಲ್ಲಿ ಅಡಗಿರುವ ತತ್ತ್ವವಾಗಿದೆ.

ಸತ್ಯ : ಸತ್ಯ ಎಂಬ ಶಬ್ದವು 'ಸತ್' ಎಂಬ ಮೂಲಧಾತುವಿನಿಂದ ಹುಟ್ಟಿದೆ. ಸತ್ ಎಂದರೆ ಇರುವುದು. ಆಗ ಸತ್ಯ ಎಂದರೆ ಇರುವಿಕೆ ಎಂದು ಅರ್ಥವಾಗುತ್ತದೆ. ಯಾವುದು ಸದಾಕಾಲವೂ ಇರುವುದೋ ಅದೇ ಸತ್ಯ. ಸತ್ಯಕ್ಕೆ ಅಳಿವಿಲ್ಲ. ಅದು ಸನಾತನವಾದುದು. ಸನಾತನವಾದುದು ಬ್ರಹ್ಮವೊಂದೇ. ಆದುದರಿಂದಲೇ 'ಸತ್ಯಂ ಬ್ರಹ್ಮ ಸನಾತನಮ್' (ಸತ್ಯವು ಸನಾತನವಾದ ಬ್ರಹ್ಮ—ಶಾಂತಿಪರ್ವ), 'ಸರ್ವಂ ಸತ್ಯೇ ಪ್ರತಿಷ್ಠಿತಮ್' (ಪ್ರತಿಯೊಂದು ಸತ್ಯದಲ್ಲೇ ಪ್ರತಿಷ್ಠಿತವಾಗಿದೆ—ಶಾಂತಿಪರ್ವ, ೧೬೨-೫) ಎಂದು ಹಿಂದೂ ಧರ್ಮದಲ್ಲಿ ಹೇಳಲಾಗಿದೆ. ಭಗವಂತನು ಸತ್ಯನಾದುದರಿಂದ ಅವನನ್ನು ಸಚ್ಚಿದಾನಂದ, ಸತ್ಯದೇವ ಎಂದು ಕರೆಯಲಾಗಿದೆ. ಸತ್ಯದೇವನನ್ನು, ಸಚ್ಚಿದಾನಂದನನ್ನು ಸೇರುವುದೇ ಜೀವಿಯ ಜೀವನದ ಪರಮಗುರಿಯಾಗಿರುವಂತೆಯೇ ಸತ್ಯವೇ ಸತ್ಯದೇವನನ್ನು ಸೇರಲು ಇರುವ ಹಾದಿಯೂ ಸಾಧನವೂ ಆಗಿರುತ್ತದೆ. ಸತ್ಯವೆಂದರೆ ಬರೇ ಮಾತಿನ ಮೂಲಕ

ಸತ್ಯವೆಂದರ್ಥವಲ್ಲ. ಶರೀರ, ಮನಸ್ಸು ಮತ್ತು ಮಾತುಗಳ ಮೂಲಕ ಸತ್ಯವು ಪ್ರಕಟಗೊಳ್ಳಬೇಕು. ಸತ್ಯಶಕ್ತಿಯು ವ್ಯಕ್ತಿಜೀವನದಲ್ಲಿ ಸರಿಯಾಗಿ ಪ್ರಕಟಗೊಂಡಾಗ ಅದು ಹದಿಮೂರು ವಿಧದಲ್ಲಿ ಪ್ರಕಟಗೊಳ್ಳುತ್ತದೆ ಎಂದು ಹಿಂದೂಧರ್ಮದ ಗ್ರಂಥಗಳಲ್ಲಿ ಹೇಳಲಾಗಿದೆ. ಈ ಹದಿಮೂರು ವಿಧದ ಲಕ್ಷಣಗಳು ಯಾರ ಜೀವನದಲ್ಲಿ ಇವೆಯೋ ಅವನು ಸತ್ಯವಂತ. ಅವನ ಜೀವನ ಸತ್ಯದ ಆರಾಧನೆಯಾದಾಗ ಸತ್ಯಶಕ್ತಿಯು ಬಲದಿಂದ ಅವನಿಗೆ ಸತ್ಯದೇವನ ಸಾಕ್ಷಾತ್ಕಾರವಾಗುತ್ತದೆ.

ಸತ್ಯದ ವಿವಿಧ ಆಕಾರಗಳು ಯಾವುವೆಂದರೆ :

ಸತ್ಯಂ ಚ ಸಮತಾ ಚೈವ ದಮಶ್ಚೈವ ನ ಸಂಶಯಃ ।
ಅಮಾತ್ಸರ್ಯಂ ಕ್ಷಮಾ ಚೈವ ಹ್ರೀಸ್ತಿತಿಕ್ಷಾನಸೂಯತಾ ॥
ತ್ಯಾಗೋ ಧ್ಯಾನಮಥಾರ್ಯತ್ವಂ ಧೃತಿಶ್ಚ ಸತತಂ ಸ್ಥಿರಾ ।
ಅಹಿಂಸಾ ಚೈವ ರಾಜೇಂದ್ರ ಸತ್ಯಾಕಾರಾಸ್ತ್ರಯೋದಶ ॥

—ಮಹಾಭಾರತ-ಶಾಂತಿಪರ್ವ, ೧೬೨, ೮-೯

"ಸತ್ಯ, ಸಮತಾ, ದಮ, ಅಮಾತ್ಸರ್ಯ, ಕ್ಷಮೆ, ನಾಚಿಕೆ, ತಿತಿಕ್ಷೆ, ಅನಸೂಯೆ, ತ್ಯಾಗ, ಇತರರ ಹಿತ ಬಯಸುವಿಕೆ, ಶುಭಹಾರೈಕೆಗಳು, ಸ್ಥಿರವಾದ ಧೃತಿ ಮತ್ತು ಅಹಿಂಸೆ—ಇವು ಹದಿಮೂರು ಸತ್ಯದ ವಿವಿಧ ಆಕಾರಗಳಾಗಿವೆ."

ಹೀಗೆ ಸತ್ಯವು ಜೀವನದಲ್ಲಿ ಪೂರ್ಣವಾಗಿ ಅನುಷ್ಠಾನಕ್ಕೆ ಬಂದಾಗ ಜೀವಿಗೆ (ಪರ) ಸತ್ಯದ ಸಾಕ್ಷಾತ್ಕಾರ ಸುಲಭವಾಗುತ್ತದೆ.

ಸತ್ಯ ಎನ್ನುವುದು ತ್ರಿಕರಣಪೂರ್ವಕವಾಗಿ ಆಚರಿಸಬೇಕಾದ ತತ್ತ್ವವೂ ಹೌದು ; ಅಜೇಯವಾದ ಶಕ್ತಿಯೂ ಹೌದಾಗಿರುತ್ತದೆ. ಎಲ್ಲಿ ಸತ್ಯವಿದೆಯೋ ಅಲ್ಲಿ ಭಯಕ್ಕೆ ಎಡೆ ಇಲ್ಲ. ಎಲ್ಲಿ ಭಯವಿಲ್ಲವೋ ಅಲ್ಲಿ ಜೀವನದ ವ್ಯವಸ್ಥೆ, ಹಿತಗಳು ಇರುತ್ತವೆ. ವ್ಯವಸ್ಥೆ, ಹಿತಗಳಿಂದ ಕೂಡಿದ ಜೀವನ ಮುಕ್ತಿಗೆ ಸೋಪಾನವಾಗುತ್ತದೆ. ಇದನ್ನೇ ಸ್ಪಷ್ಟಪಡಿಸುತ್ತಾ ಉಪನಿಷತ್ತಿನಲ್ಲಿ "ಸತ್ಯಮೇವ ಜಯತೇ ನಾನೃತಂ"—"ಸತ್ಯಕ್ಕೇ ಜಯ, ಸುಳ್ಳಿಗೆ ಎಂದಿಗೂ ಜಯವಿಲ್ಲ" ಎಂದು ಹೇಳಲಾಗಿದೆ.

ಅಹಿಂಸೆ : ಸತ್ಯವು ಜೀವನದಲ್ಲಿ ಮನುಷ್ಯನು ಸಾಧಿಸಬೇಕಾದ ಗುರಿಯಾಗಿದ್ದು ಅಹಿಂಸೆಯು ಸತ್ಯದ ಸಾಕ್ಷಾತ್ಕಾರಕ್ಕೆ ಇರುವ ಸಾಧನವಾಗಿರುತ್ತದೆ. ಸತ್ಯಕ್ಕೂ ಅಹಿಂಸೆಗೂ ನಿಕಟಸಂಬಂಧವಿದೆ. ಸದ್ವಿಚಾರ, ಸದ್ವರ್ತನೆ, ಸತ್ಯನುಡಿ ಇವುಗಳನ್ನು ಹಿಂಸಿಸದೆ, ಉಲ್ಲಂಘಿಸದೇ ಇರುವುದೇ ಅಹಿಂಸೆ. ಮಾನಸಿಕವಾಗಿ, ಕಾಯಿಕವಾಗಿ, ವಾಚಿಕವಾಗಿ ಇತರರಿಗೆ ಹಿಂಸೆಯನ್ನು ಉಂಟುಮಾಡದಿರುವುದು, ಧೈರ್ಯ, ಕ್ಷಮೆ, ಸ್ಥೈರ್ಯ, ಸಂಯಮಾದಿ ಗುಣಗಳನ್ನು ಪರಿಪಾಲಿಸುವುದು ಇವುಗಳು ಅಹಿಂಸೆಗೆ ಒಳಪಟ್ಟ ವಿವಿಧಾಂಶಗಳಾಗಿವೆ. ಅಹಿಂಸೆಯು ಗ... ...ಂದ ಕೂಡಿದ ವ್ಯಕ್ತಿಯ ಜೀವನ ಧರ್ಮದ ಪ್ರಾಯೋಗಿಕವಾದ ನಿದರ್ಶನವಾಗುತ್ತದೆ. "ಅಹಿಂಸೆಯೇ ಪರಮಧರ್ಮ", "ಅಹಿಂಸಾ ಪರಮೋಧರ್ಮಃ" (ಮಹಾಭಾರತ—ಅನುಶಾಸನಪರ್ವ, ಅಧ್ಯಾಯ ೧೧೪) ಎಂದು ಹಿಂದೂಧರ್ಮಗ್ರಂಥಗಳಲ್ಲಿ ಹಲವು ರೀತಿಯಲ್ಲಿ ಹಲವು ಎಡೆಗಳಲ್ಲಿ ಸ್ಪಷ್ಟಪಡಿಸಲಾಗಿರುತ್ತದೆ. ಅಹಿಂಸೆಯಿಂದ ವ್ಯಕ್ತಿಯ ವೈಯಕ್ತಿಕ ವಿಕಾಸವಾಗುವುದು ಮಾತ್ರವಲ್ಲದೆ

ದಯೆ. ಧೈರ್ಯ, ಸ್ಥೈರ್ಯ. ಸತ್ಯ, ಆತ್ಮವಿಶ್ವಾಸ ಇತ್ಯಾದಿ ವಿಶೇಷವಾದ ಗುಣಗಳು ವೃದ್ಧಿಯಾಗಿ ಆತ್ಮೋನ್ನತಿ ಉಂಟಾಗುತ್ತದೆ.

ಅಹಿಂಸಾಗುಣದಿಂದ ಕೂಡಿದ ಮನುಷ್ಯನು ಜಗತ್ತಿನಲ್ಲಿ ಇತರರಿಗೆ ದಯೆ, ಪ್ರೀತಿ, ಧೈರ್ಯಗಳ ಆದರ್ಶವ್ಯಕ್ತಿಯಾದಂತೆ, ಅವನಿಗೆ ಸುಖಶಾಂತಿಗಳು ಲಭಿಸುವವು ಮಾತ್ರ ವಲ್ಲದೆ ಜಗತ್ತಿನಲ್ಲಿ ಅವನಿಂದ ಇತರರಿಗೂ, ಇತರರಿಂದ ಅವನಿಗೂ ಹಿಂಸೆ ಉಂಟಾಗು ವುದಿಲ್ಲ. ಈ ವಿಚಾರವಾಗಿ ಮನುಸ್ಮೃತಿಯಲ್ಲಿನ ಶ್ಲೋಕವೊಂದರಲ್ಲಿ ಸ್ಪಷ್ಟವಾದ ವಿವರಣೆಯಿದ್ದು ಅದು ಹೀಗಿದೆ :

> **ಯಸ್ಮಾದಣ್ವಪಿ ಭೂತಾನಾಂ ದ್ವಿಜಾನ್ನೋತ್ಪದ್ಯತೇ ಭಯಮ್ ।**
> **ತಸ್ಯ ದೇಹಾದ್ವಿಮುಕ್ತಸ್ಯ ಭಯಂ ನಾಸ್ತಿ ಕುತಶ್ಚ ನ ॥**
>
> —ಮ.ಸ್ಮೃ. ೬-೪೦

"ಯಾವನೊಬ್ಬನಿಂದ (ದ್ವಿಜನಿಂದ) ಯಾವ ಜೀವಿಗಳಿಗೂ ಕೂಡ ಭಯ ಪ್ರಾಪ್ತ ವಾಗುವುದಿಲ್ಲವೋ ಅವನು ದೇಹದಿಂದ ಮುಕ್ತನಾದವನಾಗಿದ್ದು (ಅವನಿಗೆ) ಇತರ ರಿಂದಲೂ ಭಯವು (ಪರಸ್ಪರ) ಉಂಟಾಗುವುದಿಲ್ಲ."

ಮನುಷ್ಯನು ಈ ಪಂಚಸದ್ಗುಣಗಳನ್ನು ಜೀವನದಲ್ಲಿ ಎಷ್ಟೆಷ್ಟು ಅಳವಡಿಸಿಕೊಳ್ಳು ತ್ತಾನೋ ಅಷ್ಟಷ್ಟೂ ಬಾಳು ಉತ್ತಮವಾಗುತ್ತದೆ ; ಪರಮಗುರಿಯಾದ ಮೋಕ್ಷದ ಸಾಧನೆಗೆ ಸಹಕಾರಿಯಾಗುತ್ತದೆ. ಸದ್ಗುಣಗಳ ಪಾಲನೆಯಂತೆಯೇ ದುರ್ಗುಣಗಳನ್ನು ಬಾಳಿನಲ್ಲಿ ಸೇರದಂತೆ ನೋಡಿಕೊಳ್ಳಬೇಕಾದುದೂ ಅಷ್ಟೇ ಮುಖ್ಯ ಹಾಗೂ ಅಗತ್ಯ ವಾದ ವಿಚಾರವಾಗಿದೆ. ಉತ್ತಮವಾದ ಪಾತ್ರೆಯಲ್ಲಿ ಪರಿಶುದ್ಧವಾದ ಹಾಲನ್ನು ಹಾಕಿದ ನಂತರ ಪಾತ್ರೆಯನ್ನು ಮುಚ್ಚದೇ ಇದ್ದರೆ ಪಾತ್ರೆಯಲ್ಲಿನ ಹಾಲು ಎಷ್ಟೇ ಶುದ್ಧವಿದ್ದರೂ ಹೇಗೆ ಹಾಳಾಗುತ್ತದೆಯೋ ಹಾಗೆಯೇ ಈ ಸದ್ಗುಣಗಳನ್ನು ಕಾಯ್ದುಕೊಳ್ಳಲು ದುರ್ಗುಣ ಗಳನ್ನು ತ್ಯಜಿಸಲೇಬೇಕಾಗುತ್ತದೆ. ಸದ್ಗುಣಗಳೆಲ್ಲವೂ ಮುಖ್ಯವಾಗಿ ಪಂಚಮಹಾಗುಣ ಗಳೆಂದು ವರ್ಗೀಕರಿಸಲ್ಪಟ್ಟು ಅವುಗಳ ಒಳಗೆ ಅಡಕವಾಗಿರುವಂತೆ ದುರ್ಗುಣಗಳೆಲ್ಲವೂ ಪ್ರಧಾನವಾಗಿ 'ದುರ್ಗುಣತ್ರಯ' ಎಂಬ ಮೂರು ವರ್ಗವಿಭಜನೆಯೊಳಗೆ ಅಡಕವಾಗಿರು ತ್ತವೆ. ಈ ಮೂರು ದುರ್ಗುಣಗಳು ಯಾವುವೆಂದರೆ :

(೧) ಕಾಮ, (೨) ಕ್ರೋಧ, (೩) ಲೋಭ.

ಈ ಮೂರು ದುರ್ಗುಣಗಳು ಮನುಷ್ಯನ ಜೀವನದಲ್ಲಿ ಬೇರೆ ಬೇರೆ ಸ್ವರೂಪಗಳಲ್ಲಿ ವ್ಯಕ್ತಗೊಂಡು ಅವನ್ನು ಒಟ್ಟಾಗಿ 'ಅರಿಷಡ್ವರ್ಗ' ಎನ್ನುತ್ತಾರೆ. ಅರಿಷಡ್ವರ್ಗದಲ್ಲಿ ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಎಂಬ ಆರು ದುರ್ಗುಣಗಳು ಸೇರಿರುತ್ತವೆ. ಮೂಲವಾದ ಮೂರು ದುರ್ಗುಣಗಳಿಂದ ಉಳಿದ ಈ ಮೂರು ದುರ್ಗುಣ ಗಳು ಉತ್ಪತ್ತಿಯಾಗಿ ವ್ಯಕ್ತಗೊಳ್ಳುತ್ತವೆ.

ಸದ್ಗುಣಗಳು ಮನುಷ್ಯನ ಜೀವನವನ್ನು ಸುಖಮಯವೂ ಸುಭದ್ರವೂ ಕೃತಾರ್ಥವೂ ಆಗುವಂತೆ ಮಾಡಿ ಪರಮಗುರಿಯಾದ ಆತ್ಮಸಾಕ್ಷಾತ್ಕಾರ ಅಥವಾ ಮುಕ್ತಿಯನ್ನು ಪಡೆಯಲು ಸಹಾಯಮಾಡುತ್ತವೆ. ಆದರೆ ದುರ್ಗುಣಗಳು ವ್ಯಕ್ತಿಯ ಸರ್ವಾಂಗೀಣ ಅವನತಿಗೆ ಕಾರಣವಾಗಿ ಅಂತಹ ವ್ಯಕ್ತಿಯಿಂದಾಗಿ ಇತರರ ಜೀವನವೂ ಕೂಡ ಈ

ಜಗತ್ತಿನಲ್ಲಿ ಕಷ್ಟದಾಯಕವೆಂಬಂತಾಗುತ್ತದೆ. ದುರ್ಗುಣಿಯಾದ ವ್ಯಕ್ತಿಯು ತನಗೂ, ಲೋಕಕ್ಕೂ ಒಂದು ಶಾಪ, ಅಸಹ್ಯ ಎಂಬಂತಾಗುತ್ತಾನೆ. ಅನ್ಯಾಯ ಅವ್ಯವಸ್ಥೆ ಅಸುಖಗಳ ಪರಿಸ್ಥಿತಿಯನ್ನು ಹಿಂದೂಧರ್ಮದಲ್ಲಿ ನರಕ ಎಂದು ಕರೆಯಲಾಗಿದೆ. ಪಾಪಮಾಡಿದವರು ನರಕವಾಸಕ್ಕೂ, ಪುಣ್ಯಮಾಡಿದವರು ಸ್ವರ್ಗವಾಸಕ್ಕೂ ಸುಖಕ್ಕೂ ಭಾಗಿಗಳಾಗುತ್ತಾರೆ ಎಂದು ಹಿಂದೂಧರ್ಮದಲ್ಲಿ ಅನೇಕವಾದ ಉದಾಹರಣೆ-ಕಥಾನಿರೂಪಣೆಗಳಿಂದ ಸ್ಪಷ್ಟಪಡಿಸಲಾಗಿರುತ್ತದೆ.

ದುರ್ಗುಣಗಳು ಮನುಷ್ಯನ ಸರ್ವನಾಶಕ್ಕೆ ಕಾರಣವಾಗುತ್ತವೆಯಲ್ಲದೆ ನರಕಕ್ಕೆ ಹೆಬ್ಬಾಗಿಲುಗಳಾಗುತ್ತವೆ ಎಂದು ಸ್ಪಷ್ಟಪಡಿಸುತ್ತಾ ಭಗವದ್ಗೀತೆಯಲ್ಲಿ ಹೀಗೆ ಹೇಳಲಾಗಿರುತ್ತದೆ :

**ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।**
**ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ॥**

—ಗೀತಾ, ಅಧ್ಯಾಯ ೬, ಶ್ಲೋಕ ೨೧

“ಕಾಮ, ಕ್ರೋಧ, ಲೋಭ—ಈ ಮೂರು ವಿಧವಾದ ನರಕದ್ವಾರಗಳು ಆತ್ಮನಾಶಕ್ಕೆ ಕಾರಣವಾಗಿರುತ್ತವೆ. ಆದುದರಿಂದ ಮನುಷ್ಯನು ಈ ಮೂರನ್ನೂ ತ್ಯಜಿಸಬೇಕು.”

ಈ ಮೂರು ದುರ್ಗುಣಗಳನ್ನು ತ್ಯಜಿಸಿದವನು ಪರಮಗತಿಯನ್ನು ಅಂದರೆ ಮುಕ್ತಿಯನ್ನು ಹೊಂದುತ್ತಾನೆ ಎಂದು ಸ್ಪಷ್ಟಪಡಿಸುತ್ತಾ ಗೀತೆಯಲ್ಲಿ ಈ ರೀತಿ ಹೇಳಲಾಗಿದೆ :

**ಏತೈರ್ವಿಮುಕ್ತಃ ಕೌಂತೇಯ ತಮೋದ್ವಾರೈಸ್ತ್ರಿಭಿರ್ನರಃ ।**
**ಆಚರತ್ಯಾತ್ಮನಃ ಶ್ರೇಯಸ್ತತೋ ಯಾತಿ ಪರಾಂ ಗತಿಮ್ ॥**

—ಗೀತಾ, ಅಧ್ಯಾಯ ೧೬, ೨೧-೨೨

“ಈ ಮೂರು ತಮೋದ್ವಾರಗಳಿಂದ (ನರಕದ ಬಾಗಿಲುಗಳಿಂದ) ಬಿಡಲ್ಪಟ್ಟ ಮನುಷ್ಯನು ತನ್ನ ಶ್ರೇಯಸ್ಸನ್ನು ಮಾಡಿಕೊಳ್ಳುತ್ತಾನೆ. ಆದರಿಂದ ಪರಗತಿಯನ್ನು (ಮುಕ್ತಿಯನ್ನು) ಹೊಂದುತ್ತಾನೆ.”

ಕಾಮ : ವಸ್ತುಗಳು, ವಿಚಾರಗಳು, ಇವುಗಳ ಸಂಬಂಧದ ಸುಖ ಬೇಕೆಂಬ ಬಯಕೆಯೇ ಕಾಮ ಎಂದು ಸ್ಥೂಲವಾಗಿ ಹೇಳಬಹುದು. ಲೈಂಗಿಕವಾದ ವಿಷಯಾಸಕ್ತಿ, ಲೋಕದ ಇತರ ಸುಖಭೋಗಗಳ ಬಯಕೆ, ಇವೆಲ್ಲಾ ಕಾಮದಲ್ಲಿ ಸೇರುವವುಗಳಾಗಿವೆ. ಕಾಮ ಎಂದರೆ ಆಸೆ ಎಂದು ತಾತ್ಪರ್ಯ. ಆಸೆಯೇ ಜೀವನದ ಸರ್ವದುಃಖಬಂಧನಗಳಿಗೂ ಕಾರಣ ಎಂದು ಹಿಂದೂಧರ್ಮಗ್ರಂಥಗಳಲ್ಲಿ ಅನೇಕ ಕಡೆ, ವಿವಿಧ ಉದಾಹರಣೆ-ವಿವರಣೆಗಳಿಂದ ಸ್ಪಷ್ಟಪಡಿಸಲಾಗಿರುತ್ತದೆ.

ಶ್ರೀಮದ್ ಭಗವದ್ಗೀತೆಯಲ್ಲಿ ಕಾಮದ ಕುರಿತಾಗಿ ಹೇಳುತ್ತಾ ಈ ಲೋಕದಲ್ಲಿ ಅದು ಮನುಷ್ಯನ ಮಹಾವೈರಿ ಎಂದು ಹೇಳಲಾಗಿದೆ :

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥**

—ಗೀತಾ, ಅಧ್ಯಾಯ ೩, ಶ್ಲೋಕ ೩೭

"ಇದು ಕಾಮವು, ಇದು ಕ್ರೋಧವು, ಇದು ರಜೋಗುಣದಿಂದ ಹುಟ್ಟಿದ್ದು, ಇದು ಸರ್ವಗ್ರಾಸಿ, ಮಹಾಪಾಪಿಯೂದುದಾಗಿದೆ. ಈ ಲೋಕದಲ್ಲಿ (ಸಂಸಾರದಲ್ಲಿ) ಇದನ್ನು ಶತ್ರುವೆಂದು ತಿಳಿ."

ಜೀವನು ಕಾಮದಿಂದಾಗಿ ಈ ಸಂಸಾರಬಂಧನಕ್ಕೆ ಸಿಲುಕಿರುತ್ತಾನೆ. ಕಾಮವನ್ನು ತ್ಯಜಿಸಿದಾಗ ಇದರಿಂದ ಮುಕ್ತನಾಗುತ್ತಾನೆ.

ಕ್ರೋಧ : ಯಾವ ಮನೋವಿಕಾರ ಪ್ರಕಟಣೆಯಿಂದ ಇತರರಿಗೆ ಮಾನಸಿಕವಾದ ನೋವು ಉಂಟಾಗುತ್ತದೋ ಮತ್ತು ತನ್ನ ಮೇಲೆ ತನಗೇ ಹತೋಟಿ ಇಲ್ಲದಂತಾಗುವುದೋ ಅದು ಕ್ರೋಧ. ಅದನ್ನೇ ಸಿಟ್ಟು ಎನ್ನುತ್ತಾರೆ. ತನಗೆ ಯಾವುದು ಇಷ್ಟವಿಲ್ಲವೋ ಆ ವಸ್ತುವಿಚಾರಗಳ ಮೇಲಿನ ಅಸಮ್ಮತ ಅಭಿಪ್ರಾಯಗಳು, ತನಗೆ ಬೇಕಾದ ವಸ್ತು ವಿಚಾರಗಳ ಬಗೆಗೆ ಇತರರ ಕಡೆಯಿಂದ ಅಡ್ಡಿ ಆತಂಕಗಳು ಬಂದಾಗ ಉಂಟಾಗುವ ಮನೋವಿಕಾರಗಳು ಸಿಟ್ಟು ಎಂಬುದಾಗಿ ಪ್ರಕಟಗೊಳ್ಳುತ್ತದೆ. ಸಿಟ್ಟಿನಿಂದಾಗಿ ದೈಹಿಕ ಅವ್ಯವಸ್ಥೆಗಳು—ಬುದ್ಧಿಯ ಸ್ವಾಸ್ಥ್ಯ ಇಲ್ಲದಂತಾಗುವುದು, ವಿವೇಕಶಕ್ತಿ ಅಳಿಯುವುದು —ಇತ್ಯಾದಿ ತೊಂದರೆಗಳು ಮನುಷ್ಯನಿಗೆ ಉಂಟಾಗಿ ಅವನ ಜೀವನ ಕಷ್ಟನಷ್ಟಗಳ ಅನುಭವ ಎಂಬಂತಾಗುತ್ತದೆ.

ಲೋಭ : ತನಗೇ ಎಲ್ಲವೂ ಬೇಕು, ತನಗೆ ಅದು ಬೇಕೇ ಬೇಕು, ಅದು ತನ್ನಲ್ಲೇ ಸದಾ ಉಳಿಯಬೇಕು ಎಂಬ ವಸ್ತುವಿಷಯಗಳ ವಿಚಾರದ ಬೇಕು ಎಂಬ ಭಾವನೆಯೇ ಲೋಭ. ಲೋಭದಿಂದ ಸಂಗ್ರಹವೃತ್ತಿ ಹೆಚ್ಚಾಗಿ ಆ ಬಗ್ಗೆ ವ್ಯಕ್ತಿ ಹಲವು ಅನ್ಯಾಯಗಳನ್ನು ಮಾಡುವ ಸ್ಥಿತಿ ಒದಗುತ್ತದೆ. ಮಾತ್ರವಲ್ಲದೆ ಈ ಜಗತ್ತಿನ ಕರ್ಮಬಂಧನಕ್ಕೆ ಮತ್ತೆಮತ್ತೆ ಒಳಗಾಗುತ್ತಾನೆ.

ಮೋಹ : ತನ್ನಲ್ಲಿರುವ ವಸ್ತು, ತನ್ನ ಸಂಸಾರದ ವ್ಯಕ್ತಿ—ಇತ್ಯಾದಿಗಳನ್ನು ಬಿಟ್ಟು ಹೋಗಲು ಸಾಧ್ಯವಿಲ್ಲ ಎಂಬ ಮನೋಭಾವನೆಯೇ ಮೋಹ. ಅತೀವವಾದ ಸ್ವಾರ್ಥಪೂರಿತ ಪ್ರೀತಿಯೇ ಮೋಹ ಎಂದು ತಾತ್ಪರ್ಯ. ಒಂದು ವಸ್ತುವನ್ನು ಇನ್ನೊಂದು ವಸ್ತು ಎಂಬುದಾಗಿ ತಿಳಿದು ಅದು ತನ್ನದು, ತನಗೇ ಬೇಕು ಎಂದು ಹಂಬಲಿಸಿ ಪ್ರವರ್ತಿಸುವ ಮನೋವೃತ್ತಿಯು ಮೋಹವಾಗುತ್ತದೆ. ಜಗತ್ತಿನಲ್ಲಿ ಜನ್ಮತಳೆದ ಜೀವಿಯು ಮೋಹದ ಪ್ರಭಾವಕ್ಕೆ ಒಳಗಾದರೆ ಜಗತ್ತಿನ ವಸ್ತುವಿಚಾರಗಳ ನಶ್ವರತೆಯನ್ನು ಗ್ರಹಿಸದೆ ಅಜ್ಞಾನಿಯಾಗಿ ಪುನಃಪುನಃ ಕರ್ಮಬಂಧನಕ್ಕೆ ಒಳಗಾಗುತ್ತಾನೆ.

ಮದ : ತಾನು-ತನ್ನದು ಎಂಬ ಸ್ವಾರ್ಥ, ಅಹಂಕಾರಭಾವನೆಯಿಂದ ಕೂಡಿ ಜಗದ ಸುಖವನ್ನು ಅನುಭವಿಸುತ್ತಾ ಜಗತ್ತಿನ ಸ್ಥಾನಮಾನಗಳ ಸುಖದ ಅನುಭವವು ತನಗೆ ಅಗತ್ಯ, ತಾನು ಇತರರಿಗೆ ಯಾವುದರಲ್ಲೂ ಕಡಿಮೆ ಇಲ್ಲ, ಮತ್ತೂ ಮತ್ತೂ ಸುಖವನ್ನು ಅನುಭವಿಸುವುದೇ ತನ್ನ ಕರ್ತವ್ಯ, ಹಕ್ಕು ಎಂಬ ಮನೋಭಾವನೆಯನ್ನುಂಟುಮಾಡುವ ದುರ್ಗುಣವೇ ಮದ. ಮದದಿಂದಾಗಿ ನೀತಿಯ ಪತನವಾಗಿ ತನ್ಮೂಲಕ ವ್ಯಕ್ತಿಯ ಜೀವನವು ವಿನಾಶದ ಎಡೆಗೆ ಸಾಗುವಂತಾಗುತ್ತದೆ.

ಮಾತ್ಸರ್ಯ : ಇತರರ ಸುಖ, ಅಭಿವೃದ್ಧಿಗಳ ಬಗೆಗೆ ಅಸಹನೆ, ಅಹಿತ-ಮತ್ಸರ ಭಾವನೆಯನ್ನು ತಳೆದಿರುವುದು (ಕಾರ್ಯದಲ್ಲಿ ಅದನ್ನು ವ್ಯಕ್ತಪಡಿಸುವುದು) ಇದೇ ಮಾತ್ಸರ್ಯ. ಈ ದುರ್ಗುಣದಿಂದ ವ್ಯಕ್ತಿಯು ತನ್ನ ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸದೆ, ಇತರರ ಸ್ನೇಹ-ಸಹಕಾರಗಳನ್ನು ಕಳೆಕೊಳ್ಳುವಂತಾಗುತ್ತಾನೆ. ಮತ್ಸರವು ತನ್ನನ್ನು ಹಾಳುಮಾಡುತ್ತದೆ ಎಂಬುದರ ಅರಿವು ಸಹ ಮನುಷ್ಯನಿಗೆ ಇರದಂತೆ ಮಾಡಿ ಅವನ ದೈಹಿಕ, ಮಾನಸಿಕ ಮತ್ತು ಆಧ್ಯಾತ್ಮಿಕ ಉನ್ನತಿಗೆ ಈ ದುರ್ಗುಣವು ಕಂಟಕ ಪ್ರಾಯವಾಗುತ್ತದೆ.

ಸದ್ಗುಣಗಳನ್ನು ಸತತ ಅಭ್ಯಾಸ, ನಿಶ್ಚಯವಾದ ಜಾಗ್ರತೆಗಳಿಂದ ಬೆಳೆಸಿ ಪೋಷಿಸಿ ದಂತೆ ದುರ್ಗುಣಗಳು ನಿಸ್ತೇಜವಾಗುತ್ತವೆ. ಸದ್ಗುಣಗಳನ್ನು ಜೀವನದಲ್ಲಿ ಸರಿಯಾಗಿ ಆಚರಿಸಿ ಬದುಕನ್ನು ಪವಿತ್ರವೂ ಪರಿಶುದ್ಧವೂ ಆಗಿಸಲು ಹಿಂದೂಧರ್ಮದಲ್ಲಿ ವರ್ಣ ಧರ್ಮ, ಆಶ್ರಮಧರ್ಮ, ಸಂಸ್ಕಾರವಿಧಿಗಳು ಎಂಬ ವ್ಯವಸ್ಥೆಗಳನ್ನು ನಿರೂಪಿಸಲಾಗಿದೆ. ಈ ರೀತಿ ಸಂಸ್ಕಾರವಿಧಿಗಳನ್ನು ಅನುಷ್ಠಾನಮಾಡಿ ಸದ್ಗುಣಗಳನ್ನು ರೂಢಿಸಿಕೊಂಡಾಗ ವ್ಯಕ್ತಿಯಲ್ಲಿ ಆಧ್ಯಾತ್ಮವಾದ ಶಕ್ತಿ ಉತ್ಪನ್ನವಾಗುತ್ತದೆ. ಅದೇ ಧರ್ಮಶಕ್ತಿ ಎಂದು ಕರೆಯಲ್ಪಟ್ಟಿರುವುದಾಗಿದೆ. ಯಾರು ಧರ್ಮವನ್ನು ಅನುಸರಿಸಿ ಧರ್ಮಯುಕ್ತವಾದ ಜೀವನ ನಡೆಸುವರೋ ಅವರು ಧರ್ಮನಿಷ್ಠರು, ಧರ್ಮಾತ್ಮರು. ಅವರು ಧರ್ಮದ ರಕ್ಷಕರೂ ಪೋಷಕರೂ ಆಗುತ್ತಾರೆ. ಅಂತಹವರನ್ನು ಧರ್ಮವು ರಕ್ಷಿಸುತ್ತದೆ ಎಂದೂ, ಧರ್ಮನಿಷ್ಠರಲ್ಲದವರನ್ನು ಅಧರ್ಮವೇ ನಾಶಮಾಡುತ್ತದೆ ಎಂದೂ ಸುಪ್ರಸಿದ್ಧವಾದ ಮನುಧರ್ಮಶಾಸ್ತ್ರದ ನುಡಿಯೊಂದು ಸ್ಪಷ್ಟಪಡಿಸುತ್ತದೆ—"ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ."

ನೀತಿನಿಯಮಗಳನ್ನು ಜೀವನದಲ್ಲಿ ವ್ಯಕ್ತಿಯು ಆಚರಣೆಗೆ ತರುತ್ತಾ "ತನ್ನ ಸ್ವಂತ ಹಿತ ಇತರರ ಜೀವನದ ಕಲ್ಯಾಣ" ಎಂಬ ತತ್ತ್ವದಂತೆ ಜೀವನವನ್ನು ಹೇಗೆ ನಿರ್ವಹಿಸು ವುದು ಎಂಬುದರ ಕುರಿತಾಗಿ ತಿಳಿಸುವುದೇ ವರ್ಣಾಶ್ರಮಧರ್ಮ, ಸಂಸ್ಕಾರವಿಧಿಗಳ ಉದ್ದಿಶ್ಯವಾಗಿದೆ.

ಮನುಷ್ಯನಲ್ಲಿರಬೇಕಾದ ಸದ್ಗುಣಗಳನ್ನು ದೈವೀಸಂಪತ್ತು ಎಂದೂ, ದುರ್ಗುಣ ಗಳನ್ನು ಆಸುರೀಸಂಪತ್ತು ಎಂದೂ ಹಿಂದೂಧರ್ಮದ ಗ್ರಂಥಗಳಲ್ಲಿ ಹೇಳಲಾಗಿದೆ. ಮನುಷ್ಯರಲ್ಲಿ ದೇವ ಮತ್ತು ಅಸುರಗುಣಗಳಿದ್ದು ಅವು ಸತ್ತ್ವ, ರಜ, ತಮ ಎಂಬ ಮೂಲಗುಣಗಳಿಂದ ಉತ್ಪತ್ತಿಯಾಗಿವೆ ಎಂದು ಹೇಳಲಾಗಿದೆ. ಪ್ರತಿಯೊಬ್ಬನೂ ತನ್ನಲ್ಲಿ ಇರುವ ರಾಕ್ಷಸಗುಣಗಳನ್ನು ತ್ಯಜಿಸಿ ದೇವಗುಣಗಳನ್ನು ರೂಢಿಸಿಕೊಂಡು ಬಾಳಬೇಕು ಎಂಬುದೇ ಹಿಂದೂಧರ್ಮದ ನೀತಿತತ್ತ್ವದ ನಿರೂಪಣೆಯ ಸಾರಸರ್ವಸ್ವವಾಗಿರುತ್ತದೆ. ಇದನ್ನು ಬೃಹದಾರಣ್ಯಕ ಉಪನಿಷತ್ತಿನ ಕಥೆಯೊಂದರ ಮೂಲಕ ಬಹಳ ಮನೋಜ್ಞ ವಾಗಿ ವಿವರಿಸಲಾಗಿದೆ :

ಒಮ್ಮೆ ದೇವರ ಹತ್ತಿರ ಮನುಷ್ಯ, ರಾಕ್ಷಸ, ದೇವತೆ ಈ ಮೂವರೂ "ನಮಗೆ ಉಪದೇಶಿಸು" ಎಂದು ಕೇಳಿದರಂತೆ. ಆಗ ಉತ್ತರವಾಗಿ "ದ" ಎಂದು ದೇವರು

ಹೇಳಿದರಂತೆ. (ದಮ, ದಾನ, ದಯೆ ಈ ಮೂರು ಶಬ್ದಗಳ ಪ್ರಥಮ ಅಕ್ಷರ 'ದ' ಎಂದಾಗಿದೆ.) ರಾಕ್ಷಸನು 'ದ'–ಎಂದರೆ ದಯೆ ಎಂದೂ, ಮನುಷ್ಯನು 'ದ'–ಎಂದರೆ ದಾನ ಎಂದೂ, ದೇವತೆಗಳು 'ದ'–ಎಂದರೆ ದಮ ಎಂದೂ ತಿಳಿದುಕೊಂಡರಂತೆ. ಇದರ ಗೂಢಾರ್ಥ ಏನೆಂದರೆ : ಮಾನವಜೀವನ ಯಶೋದಾಯಕವಾಗಲು ದಮ (ಇಂದ್ರಿಯ ನಿಗ್ರಹ), ದಾನ ಮತ್ತು ದಯೆ ಎಂಬ ಮೂರು ಗುಣಗಳು ಅತ್ಯಂತ ಅಗತ್ಯ. ಈ ಮೂರು ಗುಣಗಳಿಂದಲೇ ಉಳಿದ ಸದ್ಗುಣಗಳು ಉತ್ಪತ್ತಿಯಾಗಿ ಜೀವನವು ಸತ್ವಪೂರ್ಣವೂ, ಧರ್ಮಸಮ್ಮತವೂ ಆಗಲು ಕಾರಣವಾಗುತ್ತದೆ.

೭

# ಚತುರ್ವರ್ಣ ಮತ್ತು ವರ್ಣಾಶ್ರಮಧರ್ಮ

ಹಿಂದೂಧರ್ಮದಲ್ಲಿ ಹೇಳಿರುವ ವರ್ಣವರ್ಗ, ಆಶ್ರಮವಿಭಾಗ ಮತ್ತು ಆಶ್ರಮಧರ್ಮ ಇವುಗಳು ಜನ್ಮತಳೆದ ಮಾನವನ ಬದುಕಿನ ವಿವಿಧ ಹಂತಗಳಲ್ಲಿ ದಿವ್ಯಜೀವನದ ಪ್ರಕಟಣೆ ಆಗಿ, ತನ್ಮೂಲಕ ಜೀವನವು ಆತ್ಮಸಾಕ್ಷಾತ್ಕಾರಕ್ಕೆ ಸಾಧನವಾಗಲು ಸಹಕಾರಿಯಾಗುವಂತೆ ವ್ಯವಸ್ಥೆ ಮಾಡಲ್ಪಟ್ಟ ವಿಶೇಷವಾದ ಏರ್ಪಾಡು ಆಗಿರುತ್ತದೆ. ಈ ಅರ್ಥಗರ್ಭಿತವಾದ ವ್ಯವಸ್ಥಾವಿಚಾರದ ಹಿನ್ನೆಲೆಯಲ್ಲಿ ಸಾಮಾಜಿಕ ನೀತಿ, ಸೌಖ್ಯ ಮತ್ತು ಭದ್ರತೆ, ವ್ಯಕ್ತಿಯ ಗುಣ ಮತ್ತು ಕರ್ಮಗಳ ಉದಾತ್ತೀಕರಣಕ್ಕೆ ಅವಕಾಶ, ಜಗತ್ತಿನ ಸಂಸಾರಬಂಧನದಿಂದ ಮುಕ್ತಿಯನ್ನು ಪಡೆಯಲು ಜೀವಿಗೆ ಅನುಕೂಲವಾಗಿ ನೆರವಾಗುವ ಸಾಧನಾವಿಶೇಷ ಗಳು—ಇವುಗಳೆಲ್ಲವೂ ಅಡಕವಾಗಿದ್ದು ವರ್ಣವರ್ಗ ಮತ್ತು ವರ್ಣಾಶ್ರಮಧರ್ಮ ಎಂಬ ಈ ವ್ಯವಸ್ಥೆಯು ವೈಶಿಷ್ಟ್ಯಪೂರ್ಣವಾದುದಾಗಿರುತ್ತದೆ. ಕಾಲವು ಸರಿದಂತೆ ಈ ವರ್ಣವಿಭಾಗ, ಆಶ್ರಮಧರ್ಮಗಳ ಪರಿಪಾಲನೆ ಸರಿಯಾಗಿ ಪಾಲನೆಗೊಳ್ಳದೆ ಮತ್ತು ಈ ವ್ಯವಸ್ಥೆಯ ಕುರಿತಾಗಿ ತತ್ತ್ವಗ್ರಹಿಕೆಯು ಕ್ರಮವಾಗಿ ನೆರವೇರದೆ ಹಿಂದೂ ಸಮಾಜದಲ್ಲಿ ಜಾತಿದ್ವೇಷ, ವರ್ಣದ ಕುರಿತಾದ ತಪ್ಪುಕಲ್ಪನೆ, ನಿರ್ಣಯಗಳೆಲ್ಲ ತಲೆದೋರಿರುತ್ತವೆ.

ಜಗತ್ತಿನಲ್ಲಿ ಜನ್ಮತಳೆದ ಪ್ರತಿಯೊಬ್ಬನೂ ಬಾಳಿನ ಅವಧಿಯಲ್ಲಿ ಒಂದಲ್ಲ ಒಂದು ವಿಧದ ವೃತ್ತಿಯನ್ನು ಕೈಗೊಳ್ಳುತ್ತಾ ಬದುಕನ್ನು ಸಾಗಿಸುತ್ತಾನೆ. ಅವನದೇ ಆದ ಸಮಾಜ, ಉದ್ಯೋಗ ಇವುಗಳಲ್ಲಿ ಜೀವನವನ್ನು ನಿರ್ವಹಿಸುತ್ತಾನೆ. ವ್ಯಕ್ತಿಯ ಸಮಾಜ, ಉದ್ಯೋಗ ಇವುಗಳೆಲ್ಲ ಅವನವನ ಗುಣಕರ್ಮಗಳನ್ನು ಅನುಸರಿಸಿ, ಆಧರಿಸಿಯೇ ರೂಪುಗೊಳ್ಳುತ್ತವೆ. ಸಾಮಾನ್ಯವಾಗಿ ಮನುಷ್ಯರು ಮಾಡುವ ಕೆಲಸಗಳು, ಕೈಗೊಳ್ಳುವ ವೃತ್ತಿಗಳು ಮತ್ತು ಅವುಗಳ ಹಿನ್ನೆಲೆಯಲ್ಲಿ ಇರುವ ತತ್ತ್ವಸಂಗತಿಗಳನ್ನು ಅನುಸರಿಸಿ ಈ ರೀತಿ ನಾಲ್ಕು ವರ್ಗಗಳಾಗಿ ವಿಭಾಗಮಾಡಬಹುದು :

(೧) ಜ್ಞಾನಸಂಗ್ರಹ ಮತ್ತು ದಾನ, ಚಿಂತನೆ ಮತ್ತು ಧ್ಯಾನ
(೨) ಶೂರತನ, ಸಾಹಸದ ಕೆಲಸಗಳು, ಸಮಾಜದ ರಕ್ಷಣೆ.
(೩) ವಸ್ತುಸಂಗ್ರಹ, ವಾಣಿಜ್ಯ ಮತ್ತು ವ್ಯವಹಾರ,
(೪) ಶಾರೀರಿಕ ದುಡಿಮೆ.

ಹಿಂದೂಧರ್ಮದ ಪ್ರಕಾರವಾಗಿ, ಈ ವರ್ಗೀಕರಣದಂತೆ ಕೆಲಸ ನಿರ್ವಹಿಸುವವರನ್ನು ಅವರವರ ಗುಣ ಮತ್ತು ಕರ್ಮಗಳ ಅನುಸಾರವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂದು ನಾಲ್ಕು ವಿಭಾಗಗಳಾಗಿ ವಿಂಗಡಣೆಯನ್ನು ಮಾಡಲಾಗಿದೆ. ಇದನ್ನೇ ಚತುರ್ವರ್ಣ ಅಥವಾ ವರ್ಣವಿಭಾಗ ಎಂದು ಕರೆಯುವುದಾಗಿದೆ. ಈ ವರ್ಗೀಕರಣೆಯನ್ನು ಸ್ಥೂಲವಾಗಿ ಬುದ್ಧಿ, ಪರಾಕ್ರಮ, ಸಂಪತ್ತು ಮತ್ತು ಪರಿಶ್ರಮಗಳ ಆಧಾರದ ಮೇಲೆ ಮಾಡಿದ್ದು ಎಂದು ಹೇಳಬಹುದು.

ಕಾಲವು ಸರಿದಂತೆ ಅನೇಕ ಕಾರಣಗಳಿಂದಾಗಿ ಬಹುಪ್ರಕಾರದ ವೃತ್ತಿಗಳು, ಆಚಾರಗಳು, ಮತಧರ್ಮದ ನಂಬಿಕೆಗಳು ಹಿಂದೂಸಮಾಜದ ಜನಜೀವನದಲ್ಲಿ ಸೇರಿಕೊಂಡವು. ತದನುಸಾರವಾಗಿ ವಿವಿಧ ರೀತಿಯ ಪಂಗಡಗಳು ಹುಟ್ಟಿಕೊಂಡವು. ಅವುಗಳನ್ನೇ ಒಂದೊಂದು ಜಾತಿ ವರ್ಗದವುಗಳು ಎಂದು ಕರೆಯುವಂತಾಯಿತು. ಆ ಮೇರೆಗೆ ಹಿಂದೂ ಸಮಾಜದಲ್ಲಿ ಅನೇಕ ಒಳಪಂಗಡಗಳೂ ಜಾತಿಗಳೂ ಇವೆಯಾಗಿದ್ದು ಮೂಲವಾದ ನಾಲ್ಕು ವರ್ಣಗಳ ಬದಲಿಗೆ ನೂರಾರು ವರ್ಗಗಳು ಹುಟ್ಟಿಕೊಂಡಿರುತ್ತವೆ. ಆದರೆ ಈ ಎಲ್ಲಾ ವರ್ಗದಲ್ಲಿರುವ ಜನರ ಜೀವನವನ್ನು ಅವರವರ ಗುಣಕರ್ಮಗಳ ದೃಷ್ಟಿಯಿಂದ ಪರಿಶೀಲಿಸಿದರೆ ಇಂದಿಗೂ ಕೂಡ ಮೂಲವಾಗಿ ಈ ಹಿಂದೆ ಹೇಳಿದ ನಾಲ್ಕು ವರ್ಗಗಳೇ ಅಷ್ಟಿಷ್ಟು ರೂಪಭೇದದಿಂದ ಇರುವುದಾಗಿದ್ದು ಅವುಗಳ ರೂಪಾಂತರವಾಗಿ ಕಾಣುವ ಅನೇಕ ವರ್ಗಗಳು ಮಾತ್ರ ಹುಟ್ಟಿಕೊಂಡಿವೆ ಎನ್ನುವುದು ಸ್ಪಷ್ಟವಾಗುವುದು. ಯಾವ ವರ್ಗದಲ್ಲೇ ಆಗಲಿ, ಬುದ್ಧಿವಂತರು, ವೀರರು, ವ್ಯಾಪಾರವ್ಯವಹಾರಸ್ಥರು ಮತ್ತು ದೈಹಿಕ ಶ್ರಮಜೀವಿಗಳು ಇಲ್ಲದೇ ಇಲ್ಲ. ಆದುದರಿಂದ ನಾವು ಕಾಣುವ ಇಂದಿನ ಈ ನೂರಾರು ಜಾತಿಗಳನ್ನು ಸಾಮಾಜಿಕವಾದ ವಿವಿಧ ವರ್ಗವಿಂಗಡಣೆ ಎಂದು ಪರಿಗಣಿಸಿ ಮೂಲತಃ ಇರುವ ನಾಲ್ಕು ವರ್ಣಗಳಿಗೆ ಇವುಗಳೆಲ್ಲಾ ತತ್ತ್ವಶಃ ಅನ್ವಯವಾಗಿರುತ್ತವೆ ಎಂಬುದನ್ನು ಗ್ರಹಿಸಿಕೊಳ್ಳಬೇಕು.

ಪ್ರತಿಯೊಂದು ವರ್ಣದವರೂ ಕೂಡ ಸಾಮೂಹಿಕವಾಗಿ ಒಂದೇ ವಿರಾಟ್‌ಪುರುಷನ ಅಂದರೆ ಜಗದ ಕುಟುಂಬದ ವಿವಿಧ ಅಂಗಗಳೇ ಆಗಿದ್ದು ಯಾರು ಯಾರಿಗೆ ಮೇಲಾಗಲೀ ಕೀಳಾಗಲೀ ಆಗಿರುವುದಿಲ್ಲ ಎಂಬುದನ್ನು ಹಿಂದೂಧರ್ಮದಲ್ಲಿ ಸ್ಪಷ್ಟಪಡಿಸಲಾಗಿದೆ. ಮಾತ್ರವಲ್ಲದೆ, ಈ ವರ್ಗವಿಭಾಗಗಳನ್ನು ವ್ಯಕ್ತಿಯ ಗುಣ-ಕರ್ಮಗಳ ಅನುಸಾರವಾಗಿ ಮಾಡಲಾಗಿದೆ ಎಂಬುದನ್ನೂ ಸ್ಪಷ್ಟವಾಗಿ ನಿರೂಪಿಸಲಾಗಿದೆ. ಈ ಕುರಿತಾಗಿ ಶ್ರೀಮದ್ ಭಗವದ್ಗೀತಾ ಗ್ರಂಥದಲ್ಲಿ ಹೇಳಿದ ವಿವರ ಹೀಗಿದೆ :

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ॥**

—ಗೀತಾ, ಅಧ್ಯಾಯ ೪, ಶ್ಲೋಕ ೧೩.

"ಗುಣ (ಸತ್ತ್ವ, ರಜಸ್ಸು, ತಮಸ್ಸು) ಮತ್ತು ಕರ್ಮಗಳ ವಿಭಾಗದ ಮೂಲಕ ನಾಲ್ಕು ವರ್ಣಗಳು ನನ್ನಿಂದ ಸೃಷ್ಟಿಸಲ್ಪಟ್ಟವು."

ವರ್ಣಗಳು ನಾಲ್ಕಾದಮಾತ್ರಕ್ಕೆ ಅವು ಒಂದಕ್ಕೊಂದು ವಿರುದ್ಧವಾಗಲಿ, ಮೇಲು ಕೀಳಾಗಲಿ ಅಲ್ಲ ಎಂಬುದನ್ನು ಮತ್ತು ಆಯಾಯ ವರ್ಣಗಳ ಮುಖ್ಯವಾದ ಗುಣಧರ್ಮ

ಗಳು ಏನೇನು ಎಂಬುದನ್ನೂ ಕುರಿತಾದ ಪ್ರಸ್ತಾಪವು ಋಗ್ವೇದದಲ್ಲಿ ಕಂಡುಬರುತ್ತದೆ. ಈ ವಿಚಾರಗಳನ್ನು ಋಗ್ವೇದದ ಮಂತ್ರಪಾದ ಪುರುಷಸೂಕ್ತದಲ್ಲಿ ಒಂದು ಉದಾಹರಣೆಯ ಮೂಲಕ ಸ್ಪಷ್ಟಪಡಿಸುತ್ತಾ, ನಾಲ್ಕು ವರ್ಣಗಳು ವಿರಾಟ್‌ಪುರುಷನ ಅಂದರೆ ಭಗವಂತನ ಮಹಾಶರೀರದ ನಾಲ್ಕು ಭಾಗಗಳಿಗೆ ಅನ್ವಯಮಾಡಿ ಎಲ್ಲರೂ ಒಂದೇ ವಿರಾಟ್‌ಪುರುಷನ ದೇಹದ ಬೇರೆ ಬೇರೆ ಭಾಗಗಳಿಂದ ಉತ್ಪತ್ತಿಯಾದವರು ಎಂದು ಹೇಳಲಾಗಿದೆ :

ಬ್ರಾಹ್ಮಣೋಽಸ್ಯ ಮುಖಮಾಸೀತ್ ಬಾಹೂ ರಾಜನ್ಯಃ ಕೃತಃ ।
ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ ॥

—ಋಗ್ವೇದ

"ವಿರಾಟ್‌ಪುರುಷನ ಮಹಾಶರೀರದಲ್ಲಿ ಬ್ರಾಹ್ಮಣನು ಮುಖದಿಂದಲೂ ಕ್ಷತ್ರಿಯನು ಬಾಹುಗಳಿಂದಲೂ ವೈಶ್ಯನು ತೊಡೆಗಳಿಂದಲೂ ಶೂದ್ರನು ಪಾದಗಳಿಂದಲೂ ಉತ್ಪತ್ತಿಯಾಗಿರುತ್ತಾರೆ."

ಶರೀರಕ್ಕೆ ತಲೆ, ತೋಳು, ತೊಡೆ, ಕಾಲು ಎಲ್ಲವೂ ಹೇಗೆ ಸಮವೋ, ಆದರೂ ಕೂಡ ಆಯಾಯ ಕೆಲಸಗಳ ದೃಷ್ಟಿಯಿಂದ ತಲೆ ಬೇರೆ–ಕಾಲು ಬೇರೆ–ತಲೆ ಮೇಲ್ಗಡೆ–ಕಾಲು ಕೆಳಗಡೆ ಎಂದು ಇದೆಯೋ ಹಾಗೆಯೇ ವರ್ಣವರ್ಗಗಳ ಕುರಿತಾಗಿ ತಾರತಮ್ಯ ವಿಶೇಷಗಳು ಇವೆ. ತಲೆಯಲ್ಲಿ ಕಾಲು ನಿಲ್ಲಲೂ, ಕಾಲಿನ ಸ್ಥಳದಲ್ಲಿ ತಲೆ ನಿಲ್ಲಲೂ ಸಾಧ್ಯವಿಲ್ಲ. ಕಾಲು ತಲೆಯಿಂದ ಕೆಳಗೆ ಎಂದಾದಮಾತ್ರಕ್ಕೆ ತಲೆಗಿಂತ ಕೀಳೆಂದಾಗಲಿ, ತಲೆಗೆ ಸಂಬಂಧವಿಲ್ಲ ಎಂದಾಗಲಿ ಆಗುವುದಿಲ್ಲ. ಅದಕ್ಕದಕ್ಕೆ ಆಯಾಯಾ ಸ್ಥಾನಮಾನಗಳು, ಕರ್ತವ್ಯಬದ್ಧತೆಗಳು ಇರುವಂತೆ ಎಲ್ಲಾ ಅಂಗಗಳು ಒಂದಕ್ಕೊಂದು ಅತ್ಯಂತ ನಿಕಟವಾದ, ಅವಿಭಾಜ್ಯವಾದ ಸಂಬಂಧದಿಂದ ಕೂಡಿದ್ದು ತತ್ತ್ವಶಃ ಒಂದೊಂದು ಅಂಗವೂ ಇಡೀ ಶರೀರದ ರಕ್ಷಣೆ, ಆಧಾರಗಳಿಗೆ ಆಗತ್ಯವಾಗಿದೆ. ಅದರಂತೆಯೇ ಈ ನಾಲ್ಕು ವರ್ಣಗಳೂ ಕೂಡ ಜೀವನದಲ್ಲಿ ಒಂದಕ್ಕೊಂದು ಸಂಬಂಧ ಇರುವವುಗಳಾಗಿದ್ದು ಆಯಾಯಾ ಸ್ಥಾನ-ಗುಣ–ಶಕ್ತಿವಿಶೇಷಗಳು, ಕರ್ಮಧರ್ಮಗಳು—ಈ ದೃಷ್ಟಿಗಳಿಂದ ಮುಖ್ಯ ಹಾಗೂ ಗಣನೀಯವಾದವುಗಳಾಗಿರುತ್ತವೆ, ಮಾತ್ರವಲ್ಲದೆ ತಾರತಮ್ಯಯುಕ್ತವೂ ಆಗಿರುತ್ತವೆ. ಆದರೆ ಸಂಗ್ರಹವಾಗಿ ಎಲ್ಲರೂ ಒಂದೇ ಪರಮಾತ್ಮನ ಸೃಷ್ಟಿಗೆ ಸೇರಿದವರು, ಏಕೈಕವಾದ ಮಾನವಕುಲಕ್ಕೆ ಒಳಗಾದವರು ಎಂಬುದನ್ನು ಮೇಲೆ ಹೇಳಿದ ಪುರುಷಸೂಕ್ತದ ಮಂತ್ರದಿಂದ ಉದಾಹರಣೆಸಹಿತವಾಗಿ ತಿಳಿಯಬಹುದು.

'ವರ್ಣ' ಎಂದರೆ ಮೈಬಣ್ಣವೆಂಬ ಅರ್ಥ ಮಾತ್ರವಲ್ಲ. ಗುಣ, ಕರ್ಮಗಳೂ ಕೂಡ ವರ್ಣ ಎಂಬ ಅರ್ಥದಲ್ಲಿ ವರ್ಣಶಬ್ದವನ್ನು ಹಿಂದೂಧರ್ಮಗ್ರಂಥಗಳಲ್ಲಿ ಉಪಯೋಗಿಸಲಾಗಿದೆ. ವ್ಯಕ್ತಿಯ ಯೋಗ್ಯತೆ, ಅವನ ವರ್ಣ ಇವುಗಳ ನಿಷ್ಕರ್ಷೆಯು ಹುಟ್ಟಿನಿಂದ ಆಗುವುದಕ್ಕಿಂತ ಹೆಚ್ಚಾಗಿ ಮತ್ತು ಮುಖ್ಯವಾಗಿ ಅವನ ಗುಣ, ಕರ್ಮ ಹಾಗೂ ಆಚಾರಗಳಿಂದ ಮಾಡಲ್ಪಡುತ್ತದೆ ಎಂಬುದು ಹಿಂದೂಧರ್ಮದ ಅನೇಕ ಗ್ರಂಥಗಳಿಂದ, ಸಾಮಾಜಿಕ ನಡವಳಿಕೆ–ಇತಿಹಾಸಗಳ ನಿದರ್ಶನಗಳಿಂದ ತಿಳಿದುಬರುತ್ತದೆ.

ಮನುಷ್ಯನ ವರ್ಣವನ್ನು ನಿಷ್ಕರ್ಷೆಮಾಡಲು ಅವನ ಗುಣಕರ್ಮಗಳು ಅದೆಷ್ಟು ಸಹಕಾರಿಯಾಗುತ್ತವೆ ಮತ್ತು ಪ್ರಮುಖವಾಗಿವೆ ಎಂಬುದರ ಬಗೆಗೆ ಛಾಂದೋಗ್ಯ ಉಪನಿಷತ್ತಿನಲ್ಲಿ ಹೇಳಿರುವ ಕಥೆಯೊಂದರಿಂದ ಹೆಚ್ಚಿನ ವಿವರಣೆ ಹಾಗೂ ಸ್ಪಷ್ಟೀಕರಣೆಯು ದೊರೆಯುತ್ತದೆ.

ಹಿಂದೆ ಹಾರಿದ್ರುಮತನೆಂಬ ಆಚಾರ್ಯನೊಬ್ಬನಿದ್ದನು. ಅವನಿಗೆ ಗೌತಮನೆಂಬ ಮಗನಿದ್ದನು. ಗೌತಮ ಮಹರ್ಷಿಯು ಉತ್ತಮ ಆಚಾರ್ಯನಾಗಿದ್ದನು. ಅವನ ಬಳಿಗೆ ಒಂದು ದಿವಸ ಸತ್ಯಕಾಮ ಜಾಬಾಲನೆಂಬ ವಿದ್ಯಾರ್ಥಿಯು ಬ್ರಹ್ಮಚರ್ಯ ಆಶ್ರಮ ಸ್ವೀಕಾರಮಾಡಿ ಗುರುಕುಲದಲ್ಲಿ ಶಿಕ್ಷಣ ಪಡೆಯಲು ತೆರಳಿ ತನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸಬೇಕೆಂದು ಬೇಡಿಕೊಂಡನು. ಗುರುವಿಗೆ ಶಿಷ್ಯನ ಕುಲಗೋತ್ರಗಳ ವಿವರ ಅಗತ್ಯವಾಗಿ ತಿಳಿಯಬೇಕಾದುದರಿಂದ ಗೌತಮಋಷಿಯು ವಿದ್ಯಾರ್ಥಿಯಾಗಿ ಬಂದ ಸತ್ಯಕಾಮನನ್ನು ಅವನ ಕುಲಗೋತ್ರಗಳ ವಿಚಾರವಾಗಿ ವಿಚಾರಿಸಿದನು. ಸತ್ಯಕಾಮನು ತನಗೆ ತನ್ನ ಕುಲ, ತಂದೆ, ಗೋತ್ರಗಳ ವಿವರ ತಿಳಿದಿಲ್ಲವೆಂದೂ, ತನ್ನ ತಾಯಿ ಪರಿಚಾರಿಣಿಯ ಕೆಲಸ ಮಾಡುತ್ತಾ ಮನೆಮನೆಗಳಲ್ಲಿ ಸಂಚರಿಸುತ್ತಿರುವಾಗ ತನ್ನನ್ನು ಮಗುವಾಗಿ ಪಡೆದಳೆಂದೂ ಹಾಗಾಗಿ ಅವಳಿಗೇ ತನ್ನ (ಸತ್ಯಕಾಮನ) ಕುಲಗೋತ್ರ ತಿಳಿದಿಲ್ಲ ಎಂದೂ ಹೇಳಿದನು. ಅನಂತರ ತಾಯಿಯ ಹೆಸರು ಜಬಾಲಳೆಂದೂ, ತನ್ನ ಹೆಸರು ಸತ್ಯಕಾಮನೆಂದೂ, ಜಬಾಲಳ ಮಗನಾದುದರಿಂದ ತಾನು ಸತ್ಯಕಾಮ ಜಾಬಾಲನೆಂದೂ ಆ ವಿದ್ಯಾರ್ಥಿಯು ಆಚಾರ್ಯ ಗೌತಮನಿಗೆ ತಿಳಿಸಿದನು. ಇದನ್ನು ಕೇಳಿದ ಆಚಾರ್ಯ ಗೌತಮನು "ಬ್ರಾಹ್ಮಣನಲ್ಲದೆ ಬೇರೆ ಯಾರಿಂದಲೂ ಈ ರೀತಿ ಸತ್ಯಸಂಗತಿಯನ್ನು ಸ್ಪಷ್ಟವಾಗಿ ಮುಚ್ಚುಮರೆ ಇಲ್ಲದೆ ಹೇಳಲು ಸಾಧ್ಯವಿಲ್ಲ. ನೀನು ಸತ್ಯದಿಂದ ವಿಮುಖನಾಗಿರುವುದಿಲ್ಲ. ಆದುದರಿಂದ ನಿನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸುತ್ತೇನೆ" ಎಂದು ಹೇಳಿ ಸತ್ಯಕಾಮ ಜಾಬಾಲನನ್ನು ಶಿಷ್ಯನನ್ನಾಗಿ ಸ್ವೀಕರಿಸಿಕೊಂಡನು. ಈ ಕಥೆಯಿಂದ ಗುಣಕರ್ಮಗಳು ವ್ಯಕ್ತಿಯ ಜೀವನದಲ್ಲಿ ಅದೆಷ್ಟು ಮುಖ್ಯವಾದವುಗಳಾಗಿವೆ ಎಂದು ತಿಳಿಯುವುದು ಮಾತ್ರವಲ್ಲದೆ ವರ್ಣದ್ವೇಷಕ್ಕೆ ಜೀವನದಲ್ಲಿ ಸ್ಥಾನವೇ ಇಲ್ಲ ಎಂಬುದೂ ಸ್ಪಷ್ಟವಾಗುತ್ತದೆ. ಮನುಷ್ಯನು ತನ್ನ ಗುಣ, ಕರ್ಮ, ಆಚಾರಗಳಿಂದ ಶೂದ್ರತ್ವವನ್ನು ನೀಗಿ ಬ್ರಾಹ್ಮಣತ್ವದ ಉತ್ತಮ ಪದವಿಯನ್ನೂ ಯೋಗ್ಯತೆಯನ್ನೂ ಪಡೆಯಬಹುದು ಎಂಬುದು ಹಿಂದೂಧರ್ಮದ ನಿಶ್ಚಯದ ನಿಲವು ಆಗಿರುತ್ತದೆ.

ವರ್ಣವಿಭಜನೆಯನ್ನು ಸಮಾಜವ್ಯವಹಾರದಲ್ಲಿ 'ಜಾತಿ' ಎಂದು ಕರೆಯುವುದು ವಾಡಿಕೆಯಾಗಿ ಬಂದಿರುತ್ತದೆ. ಮಾನವಸಮಾಜದಲ್ಲಿ ಒಂದೇ ಅಭಿರುಚಿ, ವೃತ್ತಿ, ಜೀವನದ ಪರಿಸ್ಥಿತಿಗಳಿಗೆ ಸೇರಿದವರ ಒಳಗೆ ಪಂಗಡಗಳು ಏರ್ಪಡುವುದು ಅನಿವಾರ್ಯ. ತದನುಸಾರವಾಗಿ ಅನೇಕ ಪಂಗಡಗಳು ದೇಶದಲ್ಲಿ ಹುಟ್ಟಿಕೊಂಡಿವೆ. ಈ ಪಂಗಡಗಳಿಂದಾಗಿ ಒಂದೇ ವೃತ್ತಿ, ಅಭಿರುಚಿ, ಜೀವನದ ಪರಿಸ್ಥಿತಿಗಳು ಇರುವವರ ಒಳಗೆ ಪರಸ್ಪರ ಪ್ರೀತಿ, ಕರ್ಮಕುಶಲತೆ, ಜೀವನ ಪ್ರಗತಿ, ಸಹಕಾರ, ಇವುಗಳೆಲ್ಲಾ ಮೂಡಲು ಅವಕಾಶವಾಗಿರುತ್ತದೆ. ಈ ಪಂಗಡಗಳೊಂದಕ್ಕೆ ಸೇರಿದವರು ಒಂದೊಂದು ಜಾತಿಯವರು ಎಂಬ

ಭಾವನೆ ಉಂಟಾಗಿ ಕ್ರಮೇಣ ಅದು ಅನೇಕ ದೃಷ್ಟಿಯಿಂದ ಬೇರೆ ಬೇರೆ ತಪ್ಪು ಅರ್ಥ, ಆಗುಹೋಗುಗಳಿಗೆ ಕಾರಣವಾಗಿ ಪಂಗಡಗಳ ಒಳಗೆ ಪರಸ್ಪರ ದ್ವೇಷ, ಜಗಳ, ಹೋರಾಟ ಇತ್ಯಾದಿಗಳಿಗೆ ಕಾರಣವಾಯಿತು. ತತ್ಫಲವಾಗಿ ಸಾಮಾಜಿಕ ಅನೈಕ್ಯ, ಅವ್ಯವಸ್ಥೆ, ಅಶಾಂತಿಗಳು ಜನಜೀವನದಲ್ಲಿ ತಲೆದೋರಲು ಹಾಗೂ ಜೀವಿಗಳ ಅನುಭವಕ್ಕೆ ಬರುವಂತಾಯಿತು. ಜಾತ್ಯಭಿಮಾನ ಅಗತ್ಯವಾದುದಾದರೆ ಜಾತ್ಯಹಂಕಾರ ವ್ಯಕ್ತಿ ಹಾಗೂ ಸಮಾಜ ಜೀವನದ ಪ್ರಗತಿ ಮತ್ತು ಭದ್ರತೆಗೆ ಅಪಾಯಕಾರಿಯಾದುದು ಎನ್ನುವುದು ಅನುಭವಸತ್ಯವಾಗಿದೆ. ಜಾತಿ ಯಾವುದೇ ಇರಲಿ, ಸದಾಚಾರ, ತಪೋಬಲ ಮತ್ತು ಸದ್ವರ್ತನೆಗಳಿಂದ ಜೀವನದಲ್ಲಿ ಉನ್ನತ ಪದವಿ, ಉತ್ತಮವಾದ ವರ್ಣ-ಸ್ಥಾನಮಾನ ಗಳನ್ನು ಪಡೆಯಲು ಸಾಧ್ಯವಿದೆ. ವಿಶ್ವಾಮಿತ್ರ ಮಹರ್ಷಿ, ಶ್ರೀಕೃಷ್ಣದ್ವೈಪಾಯನರು (ಮಹರ್ಷಿ ವೇದವ್ಯಾಸ), ಯೋಗೇಶ್ವರ ಭಗವಾನ್ ಶ್ರೀಕೃಷ್ಣ ಇವರೆಲ್ಲರ ಜೀವನ ಚರಿತ್ರೆಗಳು ಈ ವಿಚಾರವಾಗಿ ವಿಶೇಷವಾದ ನಿದರ್ಶನಾತ್ಮಕ ಬೆಳಕನ್ನು ಬೀರುತ್ತವೆ. ಮನುಷ್ಯನ ಜಾತಿಯು ಅವನ ಹುಟ್ಟಿನಿಂದಲೇ ನಿಷ್ಕರ್ಷಿಸಲ್ಪಡುತ್ತದೆ ಎಂದು ಪೂರ್ತಿ ಯಾಗಿ ಹೇಳಲು ಸಾಧ್ಯವಿಲ್ಲ. ಹಾಗೆಂದು ಜಾತಿನಿಷ್ಕರ್ಷೆಗೆ ಹುಟ್ಟನ್ನು ಅಲ್ಲಗಳೆಯಲೂ ಸಾಧ್ಯವಿಲ್ಲ. ಪ್ರತಿಯೊಬ್ಬರ ಗುಣ-ಕರ್ಮಗಳನ್ನು ಪರಿಶೀಲಿಸಿ ಜಾತಿ ನಿಷ್ಕರ್ಷಿಸಲು ಸಾಧ್ಯವಿಲ್ಲವಾದ್ದರಿಂದ ಅವರವರ ಗುಣ-ಕರ್ಮಗಳಿಗೆ ಅನುಸಾರವಾಗಿ ವರ್ಣಗಳನ್ನು ನಿಶ್ಚಯಿಸಲು ಅವರವರ ಹುಟ್ಟನ್ನೇ ಆಧಾರವಾಗಿ ತೆಗೆದುಕೊಳ್ಳುವುದು ಅನುಕೂಲ ಹಾಗೂ ಸಹಜವೇ ಸರಿ. ಬ್ರಾಹ್ಮಣನ ಮಗನು ಬ್ರಾಹ್ಮಣನೇ ಆಗುತ್ತಾನೆಂಬ ನಿಶ್ಚಯ ವಿಲ್ಲವೆನ್ನುವುದು ಹೌದಾದರೂ ಬ್ರಹ್ಮಜ್ಞಾನಿಯಾದ ಬ್ರಾಹ್ಮಣನಾಗಲು ಅನುಕೂಲದ ಅವಕಾಶಗಳು, ಸಾಧ್ಯತೆಗಳು ಅವನಿಗೆ ತುಂಬಾ ಇವೆ ಎನ್ನುವುದು ಸತ್ಯಾಂಶವೇ ಸರಿ. ಜಾತಿನಿಷ್ಕರ್ಷೆಯ ವಿಚಾರವಾಗಿ ಹುಟ್ಟು ಸಾಕಷ್ಟು ಪ್ರಮುಖವಾದ ಪರಿಶೀಲನಾಂಶ ಹೌದೆಂಬುದನ್ನು ಅಲ್ಲಗಳೆಯುವಂತಿಲ್ಲ ಎನ್ನುವುದು ನಿಜವಾದರೂ ಹುಟ್ಟನ್ನೇ ಜಾತಿ ನಿಷ್ಕರ್ಷೆಯ ಕುರಿತಾಗಿ ಪರಿಪೂರ್ಣವಾದ ಅಂತಿಮವಾದ ಪ್ರಮಾಣ ಎಂದು ಪರಿಗಣಿಸ ಬಾರದೆಂಬುದೇ ಒಟ್ಟಿನ ತಾತ್ಪರ್ಯ.

ಜಾತಿ ಎನ್ನುವುದು ಸಾಮಾಜಿಕವಾದ ವ್ಯವಸ್ಥೆಯೇ ವಿನಾ ಆಧ್ಯಾತ್ಮಿಕವಾದ ವರ್ಗೀಕರಣೆಗಳಲ್ಲ ಎಂಬುದು ಹಿಂದೂಧರ್ಮದ ಸ್ಪಷ್ಟವಾದ ನಿಲವು ಆಗಿರುತ್ತದೆ. ಹಾಗೆಯೇ ವರ್ಣಗಳು ಪರಮಾತ್ಮಶಕ್ತಿಯಿಂದ ಮೂಡಿದವುಗಳಾದರೂ ಕೂಡ ಶೂದ್ರನು ಬ್ರಾಹ್ಮಣನಾಗಬಾರದು, ಕ್ಷತ್ರಿಯ, ವೈಶ್ಯರು ಜೀವನದಲ್ಲಿ ಹಾಗೆಯೇ ಉಳಿಯಬೇಕು ಎಂಬುದು ಹಿಂದೂಧರ್ಮದ ಹೇಳಿಕೆಯಲ್ಲ. ನಾಲ್ಕು ವರ್ಣದವರೂ ಕೂಡ ಅಧ್ಯಾತ್ಮ ಸಾಕ್ಷಾತ್ಕಾರಕ್ಕೆ ಅರ್ಹರು. ಮಾತ್ರವಲ್ಲದೆ ಪ್ರತಿಯೊಬ್ಬರಲ್ಲೂ ಭಗವಂತನ ಅಪಾರವಾದ ದಿವ್ಯ ಆತ್ಮಶಕ್ತಿ ಸಮವಾಗಿ ಅಂತರ್ಗತವಾಗಿದೆ ಎಂಬುದನ್ನು ಹಿಂದೂಧರ್ಮವು ಸಾರುತ್ತದೆ. ಅದೆಷ್ಟೋ ಸಂತರು, ಮಹಾತ್ಮರು, ಯೋಗಿಗಳು, ಭಕ್ತರು ಮತ್ತು ಜ್ಞಾನಿಗಳು ಬೇರೆ ಬೇರೆ ವರ್ಣ, ಜಾತಿ, ಪಂಗಡಗಳಲ್ಲಿ ಜನ್ಮತಳೆದು ತಮ್ಮ ತಮ್ಮ ಆಚಾರ, ತಪಸ್ಸುಗಳ ಬಲದಿಂದ ಬ್ರಹ್ಮಸಾಕ್ಷಾತ್ಕಾರಪಡೆದು ಬ್ರಹ್ಮತೇಜೋವಂತರೂ

ದಿವ್ಯರೂ ಪವಿತ್ರರೂ ಆಗಿ ಎಲ್ಲ ವರ್ಣದವರ ಗೌರವಕ್ಕೆ, ಭಕ್ತಿಗೆ ಪಾತ್ರರಾಗಿ ಬೆಳಗಿರುವ ನಿದರ್ಶನಗಳು ಹಿಂದೂ ಸಮಾಜದ ಧಾರ್ಮಿಕ ಇತಿಹಾಸದಲ್ಲಿ ಸಾಕಷ್ಟು ಇವೆ. ಹಾಗಾಗಿ ವರ್ಣವರ್ಗೀಕರಣ ಜೀವಿಯ ನಿಜವಾದ ಪ್ರಗತಿಗೆ ಎಂದೂ ಅಡ್ಡಿಬಂದಿಲ್ಲ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ನಾಲ್ಕು ವರ್ಣವರ್ಗೀಕರಣೆಯು ಮನುಷ್ಯನ ಗುಣಕರ್ಮಗಳ ಉದಾತ್ತೀಕರಣಕ್ಕೆ ನೆರವಾಗುವ ಸಾಮಾಜಿಕವಾದ ವ್ಯವಸ್ಥೆಯಾಗಿರುವಂತೆ ಆ ಪ್ರತಿಯೊಂದು ವರ್ಗೀಕರಣೆಗೂ ಹಿನ್ನೆಲೆಯಾಗಿ ನೈತಿಕ ಹಾಗೂ ಆಧ್ಯಾತ್ಮಿಕವಾದ ದೃಷ್ಟಿ ಇದ್ದು ಜೀವಿಯ ಸರ್ವಾಂಗೀಣ ಪ್ರಗತಿಯೇ ವರ್ಣವ್ಯವಸ್ಥೆಯ ಗುರಿಯಾಗಿದೆ. ಪ್ರತಿಯೊಂದು ಜೀವಿಯೂ ತಪಸ್ಸನ್ನು ಮೀರಿ ಸತ್ವಗುಣಸಂಪನ್ನನಾಗಿ ಕೊನೆಗೆ ಭವಬಂಧನದಿಂದ ಮುಕ್ತನಾಗಿ ಮೋಕ್ಷಾನಂದವನ್ನು ಪಡೆಯಬೇಕು ಎಂಬುದೇ ಹಿಂದೂಧರ್ಮದ ಪ್ರಕಾರ ಜೀವನದ ಮಹೋನ್ನತ ಆದರ್ಶವಾಗಿದ್ದು ಆ ಆದರ್ಶದ ಸಾಧನೆಗೆ ವರ್ಣವಿಂಗಡಣೆ ಸಹಕಾರಿಯಾದ ವ್ಯವಸ್ಥೆಯಾಗಿರುತ್ತದೆ. ಆದುದರಿಂದ ವರ್ಣವರ್ಗೀಕರಣೆ ಸರ್ವಕಾಲಕ್ಕೂ ಅಗತ್ಯ ಹಾಗೂ ಅರ್ಥಪೂರ್ಣವಾದದ್ದೆಂದು ಬೇರೆ ಹೇಳಬೇಕಾಗಿಲ್ಲ.

ಜಗತ್ತಿನಲ್ಲಿ ಮನುಷ್ಯರೆಲ್ಲರೂ ಒಂದೇ ಮನುಕುಲಕ್ಕೆ ಸೇರಿದವರಾದರೂ ಗುಣಕರ್ಮಗಳಿಗೆ ಅನುಸಾರವಾಗಿ ಬೇರೆ ಬೇರೆ ಪರಿಸ್ಥಿತಿ, ಮನೆ, ಕುಟುಂಬಗಳಿಗೆ ಸೇರಿಕೊಂಡವರಾಗಿದ್ದು ಜೀವನರಂಗದಲ್ಲಿ ಬಾಳುತ್ತಿದ್ದಾರೆ. ಜಗದ ಜನರೆಲ್ಲರೂ ಒಂದೇ ಮನೆಯಲ್ಲಿ, ಒಂದೇ ಪರಿಸ್ಥಿತಿಯಲ್ಲಿ, ಒಂದೇ ಕುಟುಂಬದಲ್ಲಿ ಬಾಳಲು ಸಾಧ್ಯವಿಲ್ಲ. ಬೇರೆ ಬೇರೆ ಮನೆ, ಪರಿಸ್ಥಿತಿಗಳು ಮನುಷ್ಯರಿಗೆ ಅಗತ್ಯವಾಗಿವೆ. ಹಾಗೆಯೇ ವ್ಯಕ್ತಿಗತವಾದ ಬೆಳವಣಿಗೆಗೆ, ಗುಣಧರ್ಮಗಳ ಪ್ರಕಾಶಕ್ಕೆ, ಸಾಮಾಜಿಕ ಪ್ರಗತಿಗೆ, ವರ್ಣವ್ಯವಸ್ಥೆ ಪಂಗಡಗಳು, ಮನುಷ್ಯನಿಗೆ ಜೀವನಕ್ಕೆ ಸ್ವಂತ ಮನೆ, ಪರಿಸರಗಳು ಆವಶ್ಯವಿರುವಂತೆ, ಅಗತ್ಯವೂ ಆಗಿವೆ. ಮನೆಗಳು ಬೇರೆ ಬೇರೆ, ಉಡುಪು ಪೋಷಾಕುಗಳು ಬೇರೆಬೇರೆಯಾದಂತೆ ಮನುಷ್ಯರಲ್ಲಿ ಪರಸ್ಪರ ಪ್ರೀತಿ-ಸಹಕಾರಗಳಿಂದ ಕೂಡಿದ ವ್ಯವಹಾರಕ್ಕೆ, ಒಡನಾಟಕ್ಕೆ ಯಾವ ಅಭ್ಯಂತರವೂ ಹೇಗೆ ಇಲ್ಲವೋ ಹಾಗೆಯೇ ಜಾತಿಪಂಗಡಗಳು ಬೇರೆಬೇರೆಯಾದಂತೆ ಸ್ನೇಹ-ಸಹಕಾರಗಳಿಗೆ ತೊಂದರೆಯೂ ಇಲ್ಲ, ತೊಂದರೆ ಉಂಟಾಗಬಾರದು. ಉಂಟಾದರೆ ಅದು ಅಹಿತವಾಗುವುದು ಮಾತ್ರವಲ್ಲದೆ ಅಪಾಯಕಾರಿಯಾಗಿ ಪರಿಣಾಮಗೊಳ್ಳುತ್ತದೆ ಎಂಬುದು ನಿಸ್ಸಂದೇಹವಾದ ಸಂಗತಿಯಾಗಿದೆ.

ಜಾತಿಯ ಹೆಸರಿನಲ್ಲಿ ಮೇಲು-ಕೀಳೆಂಬ ಭಾವನೆ, ಅಥವಾ ಒಬ್ಬರಿಗೊಬ್ಬರು ದ್ವೇಷ ತೋರಿಸುವಿಕೆ ಇತ್ಯಾದಿಗಳನ್ನು ವ್ಯಕ್ತಪಡಿಸುವುದರಲ್ಲಿ ಅರ್ಥವಿಲ್ಲ. ಆದರಿಂದ ಜೀವನಕ್ಕೆ ಅನುಕೂಲವೂ ಇಲ್ಲ. ಜಾತಿಯಾಗಲಿ, ಜಾತಿಯ ಕುರಿತಾದ ಅಭಿಮಾನವಾಗಲಿ ಎಂದಿಗೂ ಸಮಾಜದಿಂದ ಅಳಿಸಿಹೋಗಲು ಸಾಧ್ಯವಿಲ್ಲ. ಎಲ್ಲಿಯವರೆಗೆ ಮಾನವರಲ್ಲಿ ಗುಣ, ಕರ್ಮ, ಜೀವನ ಪರಿಸ್ಥಿತಿಗಳ ವಿವಿಧತೆ ಇರುತ್ತದೆಯೋ ಅಲ್ಲಿಯತನಕ ಒಂದಲ್ಲ ಒಂದು ರೂಪದಲ್ಲಿ ಜಾತಿ, ಪಂಗಡ, ಜಾತ್ಯಭಿಮಾನಗಳು ಇದ್ದೇ ಇರುತ್ತವೆ. ಅದು ಅನಿವಾರ್ಯ. ಕಾಲಕಾಲಕ್ಕೆ ಸರಿಯಾಗಿ ವೃತ್ತಿ-ಪರಿಸ್ಥಿತಿಗಳ ಅನ್ವಯವಾಗಿ, ಬದಲಾದ ಪರಿಸ್ಥಿತಿಗೆ

ತಕ್ಕಂತೆ ಜಾತಿಪಂಗಡಗಳ ಹೆಸರುಗಳು ಅಷ್ಟಿಷ್ಟು ಬದಲಾಗಬಹುದು. ಅದರಿಂದ ಯಾರಿಗೂ ತೊಂದರೆ ಉಂಟಾಗದು. ಆದರೆ ಜಾತೀಯತೆಯ ಅಹಂಕಾರ, ದ್ವೇಷಭಾವನೆ ಇವುಗಳು ಮಾತ್ರ ಯಾವ ಕಾಲಕ್ಕೂ ಸ್ವಾಗತಾರ್ಹವಲ್ಲ. ಅವುಗಳಿಂದ ಮಾನವನ ಜೀವನ, ದುಃಖದ ಅಪಾಯಗಳ ಅನುಭವದ ಕಥೆಯಾಗುವುದರಲ್ಲಿ ಸಂಶಯವಿಲ್ಲ ಎನ್ನುವುದು ಮತ್ತೆ ಮತ್ತೆ ಜ್ಞಾಪಿಸಿಕೊಳ್ಳಬೇಕಾದ ಸತ್ಯಾಂಶ ಆಗಿರುತ್ತದೆ.

ಸ್ವಾಮಿ ವಿವೇಕಾನಂದರು ವರ್ಣವ್ಯವಸ್ಥೆ ಅರ್ಥಾತ್ ಜಾತಿವಿಚಾರವಾಗಿ ಹೇಳಿರುವ ನುಡಿಗಳು ಈ ವಿಚಾರದಲ್ಲಿ ವಿಶೇಷವಾದ ಬೆಳಕನ್ನು ನೀಡುತ್ತವೆ. ಸ್ವಾಮೀಜಿಯವರ ನುಡಿಗಳ ವಿವರ ಹೀಗಿದೆ:

"ಮತಧರ್ಮದಲ್ಲಿ 'ಜಾತಿ' ಇರುವುದಿಲ್ಲ. ಭಾರತ ದೇಶದಲ್ಲಿ ಉಚ್ಚವರ್ಣದ ಮತ್ತು ನೀಚ ವರ್ಣದ ಜನರು ವರ್ಣಭೇದವಿಲ್ಲದೆ ಸಂನ್ಯಾಸಿಯಾಗಲು ಅರ್ಹರಾಗಿರುತ್ತಾರೆ. ಸಂನ್ಯಾಸಿಯಾದಾಗ ಅವರ ವರ್ಣವೆಲ್ಲಾ ಒಂದೇ ಆಗಿರುತ್ತದೆ. ಎರಡು ವರ್ಣಗಳೂ ಸಮವಾಗುತ್ತವೆ. ವೇದಾಂತ ಧರ್ಮಕ್ಕೆ ಜಾತಿವ್ಯವಸ್ಥೆಯು ಸಮ್ಮತವಾದುದಲ್ಲ.

ಜಾತಿಯು (ಅರ್ಥಾತ್ ವರ್ಣವ್ಯವಸ್ಥೆಯು) ಬಹಳ ಒಳ್ಳೆಯದೇ ಸರಿ. ನಾವು ಅನುಸರಿಸ ಬೇಕಾದ ಯೋಜನೆಯೇ ಜಾತಿವ್ಯವಸ್ಥೆಯಾಗಿದೆ. ಜಾತಿವ್ಯವಸ್ಥೆ ಇಲ್ಲದ ರಾಷ್ಟ್ರವು ಜಗತ್ತಿನಲ್ಲಿ ಒಂದೇ ಒಂದಿಲ್ಲ. ಭಾರತದಲ್ಲಿ ನಾವು ಜಾತಿಯಿಂದ ಜಾತಿ ಇಲ್ಲದ ಹಂತಕ್ಕೆ ತಲುಪುತ್ತೇವೆ. ಆ ತತ್ತ್ವದ ಮೇಲೆಯೇ ಜಾತಿವ್ಯವಸ್ಥೆಯು ಉದ್ದಕ್ಕೂ ಆಧರಿಸುತ್ತದೆ.

ಬ್ರಾಹ್ಮಣನು ಮಾನವತೆಯ ಆದರ್ಶವಾಗಿದ್ದು ಭಾರತದಲ್ಲಿ ಜಾತಿಯ ವ್ಯವಸ್ಥೆಯ ಯೋಜನೆಯು ಪ್ರತಿಯೊಬ್ಬನನ್ನೂ ಬ್ರಾಹ್ಮಣನನ್ನಾಗಿ ಮಾಡುವುದೇ ಆಗಿದೆ. ಬ್ರಾಹ್ಮಣ ಆದರ್ಶವೆಂದರೇನು ? ಪ್ರಾಪಂಚಿಕ ವ್ಯಾಮೋಹಗಳು, ಲೌಕಿಕ ಆಸಕ್ತಿಗಳು ಸಂಪೂರ್ಣವಾಗಿ ಇಲ್ಲದಿರುವ ಮತ್ತು ನಿಜವಾದ ವಿವೇಕ ಜ್ಞಾನ ತಿಳುವಳಿಕೆಗಳು ವಿಪುಲವಾಗಿ ಇರುವ ಸ್ಥಿತಿ ಯಾವುದಿದೆಯೋ ಅದೇ ಬ್ರಾಹ್ಮಣಸ್ಥಿತಿ, ಅದೇ ಹಿಂದೂ ಜನಾಂಗದ ಆದರ್ಶವಾಗಿರುತ್ತದೆ. ಭಾರತೀಯ ವರ್ಣವ್ಯವಸ್ಥೆಯು ಭಗವಂತನು ಮನುಷ್ಯನಿಗೆ ಅನುಗ್ರಹಿಸಿರುವ ಅತ್ಯಂತ ಹಿರಿದಾದ ಸಾಮಾಜಿಕ ಸಂಸ್ಥೆ ವ್ಯವಸ್ಥೆಗಳಲ್ಲಿ ಒಂದಾಗಿದೆ. ಅನೇಕ ಅನಿವಾರ್ಯದ ಲೋಪದೋಷಗಳಿದ್ದರೂ ಈ ಅತ್ಯಂತ ಮಹಿಮೆಯುಳ್ಳ ಭಾರತೀಯ ಸಾಮಾಜಿಕ ಸಂಸ್ಥೆಯು ಭಾರತಭೂಮಿಗಾಗಿ ಅದೆಷ್ಟೋ ಮಹತ್ವಪೂರ್ಣವಾದ ಕೆಲಸಕಾರ್ಯಗಳನ್ನು, ಘಟನಾವಳಿಗಳನ್ನು ನಿರ್ವಹಿಸಿರುತ್ತದೆ. ಈ ಸಂಸ್ಥೆಯು ಭಾರತೀಯ ಮಾನವಸಮಾಜವನ್ನು ಅದರ ಗುರಿಯೆಡೆಗೆ ತಲುಪಿಸಲು ನಿಯಮಿತವಾಗಿರುತ್ತದೆ.

ಜಾತಿವ್ಯವಸ್ಥೆಯು ನಿರ್ನಾಮವಾಗಕೂಡದು. ಆದರೆ ಪ್ರಸಂಗವಶಾತ್ ಅದನ್ನು ಪುನರ್ವ್ಯವಸ್ಥೆಗೊಳಿಸಬೇಕಾಗಿದೆ. ಜಾತಿವ್ಯವಸ್ಥೆಯು ಒಳ್ಳೆಯದೇ ಸರಿ. ಜೀವನವನ್ನು ಬಗೆಹರಿಸುವುದರಲ್ಲಿ ಅದೊಂದೇ ಸಹಜವಾದ ಮಾರ್ಗವಾಗಿರುತ್ತದೆ. ಮನುಷ್ಯರು ಪಂಗಡಗಳಾಗಿ ಅವರೊಳಗೆ ವ್ಯವಸ್ಥೆಗೊಳ್ಳಬೇಕು. ಹಾಗಾಗುವುದನ್ನು ತಪ್ಪಿಸಲು ಸಾಧ್ಯವೇ ಇಲ್ಲ. ನೀವು ಎಲ್ಲಿಗೆ ಹೋದರೂ ಕೂಡ ಅಲ್ಲಿ ಜಾತಿವ್ಯವಸ್ಥೆ ಇದ್ದೇ ಇರುತ್ತದೆ. ಆದರೆ, ಹಾಗೆಂದು ಈ ಸೌಲಭ್ಯಗಳು, ವಿಶೇಷ ರಿಯಾಯಿತಿ ಅವಕಾಶಗಳು ಇರಬೇಕೆಂದು ಅರ್ಥವಲ್ಲ. ಯಾರೊಬ್ಬರಿಗೂ ವಿಶೇಷವಾದ ಸೌಲಭ್ಯ ರಿಯಾಯಿತಿಗಳು ಇಲ್ಲದೆ ಎಲ್ಲರಿಗೂ ಸಮನಾದ ಅವಕಾಶಗಳು—ಅದೇ ನಮಗೆ ಬೇಕಾಗಿರುವುದು. ದಿವ್ಯತೆಯು ಅಂತರ್ಯದಲ್ಲಿ ಇದೆ ಎಂಬುದನ್ನು ಪ್ರತಿಯೊಬ್ಬನಿಗೂ ಕಲಿಸೋಣವಾಗಲಿ, ಆಗ ಪ್ರತಿಯೊಬ್ಬನೂ ಅವನವನ ಮೋಕ್ಷದ ಕುರಿತಾಗಿ ಏನು ಮಾಡಬೇಕೋ ಅದನ್ನು ಮಾಡಿಕೊಳ್ಳುತ್ತಾನೆ.

ನಮ್ಮ ಜಾತಿಪ್ರಶ್ನೆಯ ಕುರಿತಾದ ಪರಿಹಾರವು ಈಗಾಗಲೇ ಮೇಲ್ಮಟ್ಟದಲ್ಲಿ ಇರುವವರನ್ನು ಕೆಳಗೆ ಇಳಿಸುವುದಲ್ಲ ; ಆಹಾರ–ಪಾನೀಯಗಳ ಕುರಿತಾಗಿ ಅತ್ತಿಂದಿತ್ತ ಬೆರೆತು ಓಡಾಡುವುದಲ್ಲ ; ಹೆಚ್ಚು ಸುಖದ ಸಂಪಾದನೆಗಾಗಿ ನಮ್ಮ ಸ್ವಂತ ಮೇರೆಗಳನ್ನು ಮೀರಿ ಹೊರಕ್ಕೆ ಧುಮುಕುವುದೂ ಅಲ್ಲ. ಬದಲು ವೇದಾಂತಧರ್ಮವು ಹೇಳುವಂತೆ ಆಧ್ಯಾತ್ಮಿಕತೆಯನ್ನು ಹೊಂದಿ ಮತ್ತು ಆದರ್ಶವಾದ ಬ್ರಾಹ್ಮಣನಾಗಿ ನಮ್ಮಲ್ಲಿ ಪ್ರತಿಯೊಬ್ಬರೂ ಆಗುವುದರಿಂದ ಜಾತಿಪ್ರಶ್ನೆಯ ಕುರಿತಾದ ಪರಿಹಾರವು ದೊರೆಯುತ್ತದೆ ಆದುದರಿಂದ ಜಾತಿಗಳೊಳಗೆ ಪರಸ್ಪರ ಕಾದಾಡುವುದರಿಂದ ಏನೇನೂ ಉಪಯೋಗವಿಲ್ಲ. ಪರಿಹಾರವು ಮೇಲ್ಮಟ್ಟದವರನ್ನು ಕೆಳಮಟ್ಟಕ್ಕೆ ಇಳಿಸುವುದರಿಂದ ದೊರೆಯದು. ಕೆಳಮಟ್ಟದವರನ್ನು ಮೇಲ್ಮಟ್ಟಕ್ಕೆ ಎತ್ತಿ ನೆಲೆಗೊಳಿಸುವುದರಿಂದ ಪರಿಹಾರ ದೊರೆಯುತ್ತದೆ.''[1]

ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿಯವರು ವರ್ಣವರ್ಗೀಕರಣೆ ವಿಚಾರವಾಗಿ ಮಾತನಾಡುತ್ತಾ ಹೇಳಿದ ನುಡಿಗಳು ಸತ್ಯನೂತನವಾಗಿದ್ದು ವಿಷಯವನ್ನು ತುಂಬಾ ಸ್ಪಷ್ಟವಾಗಿ ವಿವರಿಸಿದಂತಿದೆ :

---

1. "In religion there is no caste. A man from the highest caste and a man from the lowest may become a monk in India and the castes become equal. The caste system is opposed to the religion of the Vedanta.

Caste is a very good thing. Caste is the plan we want to allow...There is no country in the world without caste. In India from caste we reach to the point where there is no caste. Caste is based throughout on that principle. The plan in India is to make everybody Brahmana, the Brahmana being the ideal of humanity. By the Brahmana ideal what do I mean ? I mean the ideal Brahmananess in which worldliness is altogether absent and true wisdom is abundantly present. That is the ideal of the Hindu race.

We believe in Indian caste as one of the greatest social institutions that the Lord gave to man ..We also believe that though unavoidable defects... in many ways the legitimate fructification of this most glorious Indian Institution it has already worked wonders for the land of Bharath and is destined to lead Indian humanity to its goal.

Caste should not go, but should only be readjusted occasionally...Caste is good. That is the only natural way in solving life. Men must form themselves into groups and you cannot get rid of that. Wherever you go there will be caste. But that does not mean that there should be these privileges. And that is what we want. No privileges for anyone—equal chances for all. Let every one be taught that the Divine is within and every one will work out his salvation.

Our solution of the caste question is not degrading those who are already high up, is not running amuck through food and drink, is not pumping out of our own limits in order to have more enjoyment, but it comes by everyone of us fulfilling the dictates of our Vedantic religion, by our attaining spirituality and by our becoming the ideal Brahmana. Therefore it is no use fighting among the castes. The solution is not by bringing down the higher, but by raising the lower upto the level of the higher...

—Swami Vivekananda, *On India and Her Problems*, Chapter VI

"ವರ್ಣಗಳಿವೆ. ಆದರೆ ಒಂದು ವರ್ಣವು ಇನ್ನೊಂದಕ್ಕೆ ಮೇಲಾದುದಾಗಿರುವುದಿಲ್ಲ. ವರ್ಣವು ಮೇಲುಗಾರಿಕೆ ಎಂಬರ್ಥವನ್ನು ಸೂಚಿಸುವುದಿಲ್ಲ. ಅದು ವಿವಿಧ ಕರ್ತವ್ಯಗಳು ಮತ್ತು ವೃತ್ತಿ-ಧರ್ಮಗಳ ಸೂಚಕಾರ್ಥದಿಂದ ಕೂಡಿರುತ್ತದೆ. ಜಾತಿವರ್ಗೀಕರಣೆಯು ಒಬ್ಬರಿಗಿಂತ ಒಬ್ಬರು ಮೇಲು ಎಂಬ ಮೇಲುಗಾರಿಕೆಯ ಭಾವನೆಯನ್ನು ಬೆಳೆಸುವಂತಿದ್ದರೆ- ಭಾವನಾರ್ಥದಿಂದ ಕೂಡಿದ್ದರೆ ಅವುಗಳನ್ನು ಪೂರ್ತಿಯಾಗಿ ತೆಗೆದುಹಾಕಬೇಕು. (ಹಾಗಿದ್ದರೆ) ಅದು ಅಸ್ಪೃಶ್ಯತೆಯ ಒಂದು ಹಂತ ಅಥವಾ ಸ್ವರೂಪವಾಗುತ್ತದೆ. ಆದರೆ ಜಾತಿವರ್ಗೀಕರಣೆಯು ವರ್ಣವೆಂದಾಗಿ ಪ್ರಕೃತಿಯ ನಿಯಮವಾದ ಮಾನವೀಯ ಶಕ್ತಿಯ ಸಂಗ್ರಹಣೆ ಮತ್ತು ನಿಜವಾದ ಅರ್ಥಶಾಸ್ತ್ರ ಎಂಬುದನ್ನು ಕೈಗೂಡಿ ಸಫಲಗೊಳಿಸುತ್ತಿರುವುದಾದರೆ ಅದನ್ನು (ವರ್ಗೀಕರಣೆಯನ್ನು) ಸಾಧುವೆಂದು ಮಾನ್ಯಮಾಡಿ ಅಂಗೀಕರಿಸುವುದು ಮತ್ತು (ಅದರ) ನಿಯಮಕ್ಕೆ ವಿಧೇಯರಾಗಿರುವುದು ಒಳ್ಳೆಯದು."[2]

(ನಾಲ್ಕು ವರ್ಣ ವರ್ಗೀಕರಣೆ, ಇದಕ್ಕೆ ಗುಣಕರ್ಮವೇ ಆಧಾರವೇ ಅಥವಾ ಹುಟ್ಟೇ ಆಧಾರವೇ ಎಂಬ ವಿಚಾರವಾಗಿಯೂ ಮತ್ತು ಆಚಾರದಿಂದ ವರ್ಣ ಬದಲಾಗುವ ವಿಷಯವಾಗಿಯೂ, ವಿವರ ಹಾಗೂ ತೀರ್ಮಾನಗಳ ಕುರಿತಾಗಿ ಸಾಕಷ್ಟು ಮತಭೇದ ಇದೆ. ಪ್ರಸ್ತುತ ಇಲ್ಲಿ ವರ್ಣಗಳು, ವರ್ಣಾಶ್ರಮ ವಿಚಾರ ಇತ್ಯಾದಿಗಳ ಕುರಿತಾಗಿ ವಿವಿಧ ದೃಷ್ಟಿಕೋನಗಳಿಂದ ಪರಿಚಯ, ವಿಷಯದ ಸ್ಪಷ್ಟೀಕರಣೆ ಮಾತ್ರ ಮಾಡಿದ್ದು ವಿಚಾರದ ಕುರಿತಾದ ನಿಶ್ಚಯದ ತೀರ್ಮಾನವನ್ನು ಓದುಗರ ವಿವೇಚನೆಗೆ ಬಿಡಲಾಗಿದೆ.)

ಎಲ್ಲಾ ವರ್ಣದವರೂ ನೀತಿನಿಯಮಗಳ ಪಾಲಕರು ಆಗಲೇಬೇಕಾಗಿದ್ದು ಶೂದ್ರನು ಬ್ರಾಹ್ಮಣ ಸ್ವಭಾವಕ್ಕೆ ಅಂದರೆ ತಾಮಸಗುಣವುಳ್ಳವನು ಸಾತ್ತ್ವಿಕಗುಣದ ಮಟ್ಟಕ್ಕೆ ತಲಪಿ ಜೀವನವನ್ನು ಪಾವನವೂ, ಸುಖಪ್ರದವೂ, ಉಪಯುಕ್ತವೂ ಮಾಡಬೇಕೆಂಬ ದೃಷ್ಟಿಯಿಂದಲೇ ನೀತಿಯ ತತ್ತ್ವಸೂತ್ರ, ವರ್ಣಧರ್ಮಗಳು ಹೇಳಲ್ಪಟ್ಟಿದ್ದು ಎಲ್ಲಾ ವರ್ಣೀಯರಿಗೂ ಅವು ಅನ್ವಯವಾಗುತ್ತವೆ. ಜಾತಿಯ ಈ ವಿಭಾಗಕ್ಕೆ ಗುಣಕರ್ಮಗಳೇ ಆಧಾರವೆಂದಾದರೆ ವರ್ಣಾಶ್ರಮ ವಿಭಾಗಕ್ಕೆ ಜೀವನದ ಮುಖ್ಯವಾದ ನಾಲ್ಕು ಘಟ್ಟಗಳ ಇರುವಿಕೆಯೇ ಆಧಾರವಾಗಿದೆ.

**ವರ್ಣಾಶ್ರಮಧರ್ಮ:** ವರ್ಣ ಎಂದರೆ ಬಣ್ಣ, ಜಾತಿ, ಹೊಳಪು ಎಂದು ಅರ್ಥವಾಗುತ್ತದೆ. ಹಿಂದೆ ಗುಣಭೇದಗಳನ್ನು ಅನುಸರಿಸಿ ಮನುಷ್ಯರನ್ನು ವರ್ಣವರ್ಗವಾಗಿ ವಿಭಾಗಮಾಡುವಾಗ ಗುಣಗಳನ್ನು ವರ್ಣಸಂಕೇತದಿಂದ ವಿಭಾಗಮಾಡಿದ್ದಾಗಿದೆ. ಭಿನ್ನ ಭಿನ್ನವಾಗಿ ಪ್ರೇರೇಪಿಸಲ್ಪಡುವುದು ಎಂಬ ಅರ್ಥವೂ ವರ್ಣ ಶಬ್ದಕ್ಕೆ ಇದೆ. ಸಮಾನವಾದ ಆಕೃತಿಯಿಂದ ಕೂಡಿ ಕಾಣುವ ವಸ್ತುಗಳಿಗೆ, ಗುಣದಿಂದಲೂ ಪ್ರವೃತ್ತಿಯಿಂದಲೂ ಕಲ್ಪಿಸುವ ವಿಭಾಗ ತೀರ್ಮಾನವೇ ವರ್ಣ ಎಂದು ತಾತ್ಪರ್ಯವಾಗಿ ಹೇಳಬಹುದು.

---

2. There are varnas, but none of the varnas superior to the others. Varna does not connote superiority, it connotes different functions and different duties. Caste distinctions in so far as they imply superiority of one over another have to be abolished altogether That is merely a phase or a grade of untouchability. But in so far as caste in the sense of varna fulfills nature's law of conservation of human energy and true economies it is good to recognise and obey the law.

—*Harijan*, Feb. 2, 1934

ಆಶ್ರಮ ಎಬ್ಬುವು ಆಸಮಂತಾತ್ ಶ್ರಾಮ್ಯಂತಿ ತಪಸ್ಯಂತಿ ಅತ್ರ ಎಂಬ ವ್ಯುತ್ಪತ್ತಿಯುಳ್ಳದ್ದಾಗಿದ್ದು 'ಆ' ಎನ್ನುವ ಉಪಸರ್ಗದಿಂದ ಕೂಡಿದ ತಪ್ರೋರ್ಥಕವಾದ ಶ್ರಮ್ ಧಾತುವಿನಿಂದ ಒಂದಿರುತ್ತದೆ. ಜೀವನದ ಯಾವ ಘಟ್ಟದಲ್ಲೇ ಆಗಲಿ ಆಯಾಯಾ ಘಟ್ಟದ ಧರ್ಮಗಳನ್ನು ಸುಸೂತ್ರವಾಗಿ ಅನುಷ್ಠಾನಮಾಡಲು (ಏಕಾಂತವಾದ ಶ್ರದ್ಧೆಯಿಂದ ಕೂಡಿದ) ತಪಸ್ಸುಮಾಡುವುದು ಯಾವುದೋ ಆ ಘಟ್ಟಕ್ಕೆ ಆಶ್ರಮ ಎಂದು ಅರ್ಥ. ಸ್ವಧರ್ಮವನ್ನು ಅನುಷ್ಠಾನಮಾಡಲು ಎಲ್ಲಾ ವಿಧದಿಂದಲೂ ಶ್ರಮಿಸುವುದು ಹಾಗೂ ಶ್ರಮಿಸಲು ಸಹಕಾರಿಯಾದ ಪರಿಸ್ಥಿತಿ ಇವುಗಳು ಆಶ್ರಮ ಎಂದು ತಾತ್ಪರ್ಯ. ವರ್ಣಾಶ್ರಮಧರ್ಮ ಎಂದರೆ ವರ್ಣಗಳ ವಿಭಾಗದ ಅನುಸಾರವಾಗಿ ಜೀವನು ತನ್ನ ಆಶ್ರಮ ಧರ್ಮವನ್ನು ಅನುಷ್ಠಾನಮಾಡುವುದು, ಆ ಬಗೆಗೆ ಇರುವ ವಿಧಿನಿಯಮಗಳು— ಎಂದು ಸಂಗ್ರಹವಾಗಿ ಹೇಳಬಹುದು. ವರ್ಣಾಶ್ರಮಧರ್ಮದ ವ್ಯವಸ್ಥೆಯಲ್ಲಿ ಬದುಕಿನ ಪ್ರತಿಯೊಂದು ಘಟ್ಟಕ್ಕೂ ಕೂಡ ಪ್ರಾಮುಖ್ಯವನ್ನು ನೀಡಿ ಆಯಾಯಾ ಘಟ್ಟಗಳಿಗೆ ಅನುಕೂಲವಾದ ಧರ್ಮಗಳನ್ನು ನಿರ್ದೇಶಿಸಿ ತನ್ಮೂಲಕ ಜೀವಿಯು ಪ್ರತಿಘಟ್ಟದಿಂದ ಅಭಿವೃದ್ಧಿ ಹೊಂದಿ ಮುಂದಿನ ಘಟ್ಟಕ್ಕೆ ಹೋಗಲು ಅನುಕೂಲವಾಗುವಂತೆ ವ್ಯವಸ್ಥೆಯನ್ನು ಹೇಳಿರುತ್ತದೆ. ಅವನವನ ಗುಣಸ್ವಭಾವಗಳನ್ನು ಉದಾತ್ತೀಕರಿಸಿ ಜೀವಿಯು ಪರಿಶುದ್ಧನಾಗಿ ಸಂಸಾರಬಂಧನದಿಂದ ಶಾಶ್ವತವಾಗಿ ಮುಕ್ತಿಯನ್ನು ಪಡೆಯಲು ಹಿಂದೂ ಧರ್ಮದ ವರ್ಣಾಶ್ರಮಧರ್ಮವು ಮಾರ್ಗದರ್ಶನ ಮಾಡುತ್ತದೆ. ಅಲ್ಲದೆ ಜೀವನರಂಗವಾದ ಈ ಪ್ರಪಂಚದಲ್ಲಿ ಜನ್ಮತಳೆದ ಮನುಷ್ಯನು ಕರ್ಮಬಂಧನಗಳಿಂದ, ಸಂಸಾರ ಬಂಧನದಿಂದ ಮುಕ್ತನಾಗಲು ಯಾವ ರೀತಿ ಕಾಲಿಗೆ ಚುಚ್ಚಿದ ಒಂದು ಮುಳ್ಳನ್ನು ತೆಗೆಯಲು ಇನ್ನೊಂದು ಮುಳ್ಳನ್ನೇ ಉಪಯೋಗಿಸಿ ಕೊನೆಗೆ ಎರಡನ್ನೂ ತ್ಯಜಿಸುತ್ತಾನೆಯೋ ಹಾಗೆಯೇ ಸಂಸಾರಬಂಧನದಿಂದ ಮುಕ್ತನಾಗಿ ಮೋಕ್ಷಾನಂದವನ್ನು ಪಡೆಯಲು ಕರ್ಮಬಂಧನದಿಂದ ಕೂಡಿದ ಪ್ರಪಂಚವನ್ನೇ (ಅರ್ಥಾತ್ ಅದರ ಒಳಗಿನ ವರ್ಣಾಶ್ರಮ ವ್ಯವಸ್ಥೆಗಳನ್ನೇ) ಉಪಯೋಗಿಸಿ ತನ್ನ ಬಾಳನ್ನು ಯಶಸ್ವಿಯಾಗಿ ನಿರ್ವಹಿಸಿ ಕೊನೆಗೆ ತನ್ಮೂಲಕ ಆತ್ಮದ ಹಿತ ಮತ್ತು ಲೋಕದ ಕಲ್ಯಾಣಸಾಧನೆಯಾಗುವಂತೆ ಸೂಕ್ತವಾದ ವ್ಯವಸ್ಥೆಯನ್ನು ವರ್ಣಾಶ್ರಮಧರ್ಮದಲ್ಲಿ ನಿರ್ದೇಶಿಸಲಾಗಿದೆ. ಇದೇ ವರ್ಣಾಶ್ರಮ ಧರ್ಮದ ವೈಶಿಷ್ಟ್ಯ ಹಾಗೂ ಹಿರಿಮೆಯಾಗಿದೆ.

ಹುಟ್ಟಿದ ಜೀವಿಯು ತನ್ನ ಗುಣ-ಕರ್ಮಗಳಿಗೆ ಅನುಸಾರವಾಗಿ ಸ್ಥಾನಮಾನಗಳನ್ನು ಪಡೆಯುತ್ತಾ ಜೀವನರಂಗದಲ್ಲಿ ಬಾಳುತ್ತಾನೆ. ಅವನ ಗುಣ ಹಾಗೂ ಕರ್ಮಗಳಿಂದಾಗಿ ಅವನಲ್ಲಿರುವ ಮಲಿನತೆಯನ್ನು ತೊಳೆದು ಪವಿತ್ರನನ್ನಾಗಿ ಮಾಡಲು ಹಿಂದೂಧರ್ಮವು ಜೀವಿಯ ಹುಟ್ಟಿನಿಂದ ದೇಹತ್ಯಾಗದ ತನಕ ಜೀವನಯಾತ್ರೆಯ ವಿವಿಧ ಘಟ್ಟಗಳಲ್ಲಿ ಬೇರೆ ಬೇರೆ ರೀತಿಯ ಸಂಸ್ಕಾರಗಳನು ಹೇಳಿ ಮರಣೋತ್ತರದಲ್ಲಿ ಸದ್ಗತಿಗಾಗಿ ಅನೇಕ ಸಂಸ್ಕಾರಗಳನ್ನೂ ವಿಧಿಸಿರುತ್ತದೆ. ಈ ಸಂಸ್ಕಾರವಿಧಿಗಳು ಆಯಾಯಾ ವರ್ಣ ಮತ್ತು ಆಶ್ರಮಧರ್ಮಗಳಿಗೆ ಅನುಸಾರವಾಗಿ ಬೇರೆ ಬೇರೆ ರೀತಿಯ ಕ್ರಿಯಾಸ್ವರೂಪ ಹಾಗೂ ವಿವರಗಳಿಂದ ಕೂಡಿರುತ್ತವೆ.

ಸಂಸ್ಕಾರ ಎಂದರೆ ಯೋಗ್ಯವಾದ ನಿಶ್ಚಿತವಿಧಿಯಿಂದ ಸುಂದರವಾಗಿ ಮಾಡುವಂತಹ ಕ್ರಿಯಾರೂಪದ ಧರ್ಮಕರ್ಮ ಎಂದು ಅರ್ಥ ; ಎಂದರೆ ಕೆಲವು ನಿಶ್ಚಿತವಾದ ಕ್ರಮದ ಕರ್ಮದಿಂದ ಜೀವಿಯ ಶಾರೀರಿಕ, ಮಾನಸಿಕ ಮತ್ತು ಆಧ್ಯಾತ್ಮಿಕ ಉನ್ನತಿಗೆ ಅನುಕೂಲವಾಗುವಂತೆ ದೇಹವನ್ನು ಪವಿತ್ರಗೊಳಿಸುವ ಕ್ರಿಯೆಯೇ ಸಂಸ್ಕಾರ.

ಸಂಸ್ಕಾರದ ಸ್ವರೂಪಗಳಲ್ಲಿ ಸಾಮಾನ್ಯವಾಗಿ ಮೂರು ವಿಧಗಳಿವೆ :

(೧) ದೋಷಮಾರ್ಜನ, (೨) ಅತಿಶಯದಾನ, (೩) ಊನಾಂಗಪೂರಣ.

ದೋಷಮಾರ್ಜನ : ವಸ್ತುವಿನ, ವ್ಯಕ್ತಿಯ ಹುಟ್ಟಿನ ದೋಷಗಳನ್ನು ಮಾರ್ಜನ ಮಾಡುವ ಅಂದರೆ ತೊಳೆಯುವ ಸಂಸ್ಕಾರ ಎಂದು ಅರ್ಥ.

ಅತಿಶಯದಾನ : ವಸ್ತುವಿನ, ವ್ಯಕ್ತಿಯ, ಸ್ವರೂಪ ಆಕೃತಿಗಳಿಗೆ ಭೂಷಣವಾದ ಉತ್ತಮ ಆಕಾರವು ಬರಲು ಮಾಡುವ ಸಂಸ್ಕಾರವೇ ಅತಿಶಯದಾನ ಸಂಸ್ಕಾರ.

ಊನಾಂಗಪೂರಣ : ಇರುವ ವಸ್ತುಗಳನ್ನು ಪರಸ್ಪರ ಕೂಡಿಸಿ ಅಥವಾ ಬೇರೆ ವಸ್ತುಗಳನ್ನು ಕೂಡಿಸಿ ಅದಕ್ಕೆ ಹೆಚ್ಚಿನ ಹಾಗೂ ಉಪಯುಕ್ತವಾದ ಸೌಂದರ್ಯ–ಬಲಗಳನ್ನು ತರುವ ಸಂಸ್ಕಾರವೇ ಊನಾಂಗಪೂರಣ ಸಂಸ್ಕಾರ. ಸಂಸ್ಕಾರಗಳಲ್ಲಿ ಜೀವಿಯ ಗರ್ಭೋತ್ಪತ್ತಿಯಿಂದ ಮರಣದತನಕದ ಸಂಸ್ಕಾರ ಮತ್ತು ಮರಣೋತ್ತರಸಂಸ್ಕಾರ ಎಂದು ಎರಡು ವರ್ಗಗಳಿದ್ದು ಅವುಗಳನ್ನು ಕ್ರಮವಾಗಿ ಪೂರ್ವಸಂಸ್ಕಾರ ಮತ್ತು ಉತ್ತರ ಸಂಸ್ಕಾರ ಎಂದು ಹೇಳುತ್ತಾರೆ. ಹಾಗೆಯೇ ಶ್ರೌತ, ಸ್ಮಾರ್ತ, ತಂತ್ರ ಎಂಬ ಮೂರು ವರ್ಗಗಳೂ ಇರುತ್ತವೆ. ಶ್ರೌತಸಂಸ್ಕಾರ ಎಂದರೆ ವೇದೋಕ್ತ ಕರ್ಮಗಳಾದ ಯಜ್ಞಯಾಗಾದಿಗಳು ; ಸ್ಮಾರ್ತಸಂಸ್ಕಾರ ಎಂದರೆ ಸ್ಮೃತಿಶಾಸ್ತ್ರದ ಪ್ರಕಾರವಾಗಿ ಮನುಷ್ಯನ ಹುಟ್ಟಿನಿಂದ ಸಾವಿನ ತನಕದ ವಿವಿಧ ಸಂಸ್ಕಾರಗಳಾಗಿರುತ್ತವೆ ; ತಂತ್ರಸಂಸ್ಕಾರ ಎಂದರೆ ವೇದದಲ್ಲಿ ಹೇಳಿದಂತೆಯೇ ಯಜ್ಞಯಾಗಾದಿಗಳನ್ನು ಮಂತ್ರ ಮತ್ತು ತಂತ್ರಗಳಿಂದ ಕೂಡಿ ಮಾಡುವುದಾಗಿರುತ್ತದೆ.

ಹಿಂದೂಧರ್ಮಶಾಸ್ತ್ರಗ್ರಂಥಗಳಲ್ಲಿ ಸಂಸ್ಕಾರಗಳ ಸಂಖ್ಯೆಯು ಹತ್ತರಿಂದ ಐವತ್ತೆರಡರವರೆಗೆ ಹೇಳಲ್ಪಟ್ಟಿದೆ. ಮುಖ್ಯವಾಗಿ ಇರುವ ಸಂಸ್ಕಾರವು ಹದಿನಾರು ಆಗಿದ್ದು ಅವುಗಳನ್ನು ಷೋಡಶ ಸಂಸ್ಕಾರಗಳು ಎಂದು ಹೇಳುತ್ತಾರೆ. ಜೀವಿಯ ಮರಣದ ಅನಂತರ ಮಾಡುವ ಸಂಸ್ಕಾರಗಳ ಸಂಖ್ಯೆಯಲ್ಲಿಯೂ ಮತಭೇದವಿದೆ. ಮರಣೋತ್ತರಸಂಸ್ಕಾರಗಳಲ್ಲಿ ಮುಖ್ಯವಾಗಿ ಹದಿನೈದು ಸಂಸ್ಕಾರಗಳು ಸರ್ವಸಾಮಾನ್ಯವಾಗಿರುತ್ತವೆ. ಸಂಸ್ಕಾರಗಳು ಗಂಡಿಗೆ ಮಾತ್ರ ಅನ್ವಯವಾಗುತ್ತವೆ, ಹೆಣ್ಣಿಗೆ ಅನ್ವಯವಾಗುವುದಿಲ್ಲ ಎಂದಿಲ್ಲ. ಗಂಡು-ಹೆಣ್ಣುಗಳಿಗೆ ಇವು ಸಮವಾಗಿ ಅನ್ವಯವಾಗುತ್ತವೆ. ಆದರೆ ಪ್ರಸ್ತುತದ ಸಾಮಾಜಿಕ ಪರಿಸ್ಥಿತಿಯಲ್ಲಿ ಸ್ತ್ರೀಯರಿಗೆ ಉಕ್ತವಾದ ಎಲ್ಲಾ ಸಂಸ್ಕಾರಗಳೂ ಮಾಡಲ್ಪಡುವುದಿಲ್ಲವೆನ್ನುವುದು ನಿಜವಾದರೂ ಅದು ಸಾಮಾಜಿಕವಾದ ಇಂದಿನ ನಡವಳಿಕೆಯೇ ವಿನಾ ಹಿಂದೂಧರ್ಮದ ಗ್ರಂಥಗಳಲ್ಲಿ ಸ್ತ್ರೀಯರಿಗೆ ಸಂಸ್ಕಾರಕ್ರಿಯೆಗಳನ್ನು ಮಾಡಬಾರದು, ಮಾಡುವ ಅಗತ್ಯವಿಲ್ಲ ಎಂದು ಹೇಳಿರುವುದಿಲ್ಲ. ಬದಲಾದ ಇಂದಿನ ಸಾಮಾಜಿಕ ಪರಿಸ್ಥಿತಿಯಲ್ಲಿ ಅಷ್ಟಿಷ್ಟು ಬದಲಾವಣೆಗಳೊಡನೆ ಇಂದಿಗೂ ಸ್ತ್ರೀಯರಿಗೆ ಸಂಸ್ಕಾರಕ್ರಿಯೆ

ಗಳನ್ನು ಮಾಡುವ ಕ್ರಮ ನಡವಳಿಕೆಗಳು ಸಾಕಷ್ಟು ಎಡೆಗಳಲ್ಲಿ ರೂಢಿಯಲ್ಲಿವೆ. ಹಾಗೆಯೇ ಮನುಸ್ಮೃತಿ ಮೊದಲಾದ ಧರ್ಮಶಾಸ್ತ್ರಗ್ರಂಥಗಳಲ್ಲಿ ಸ್ತ್ರೀಯರಿಗೆ ಸಂಸ್ಕಾರ ಕ್ರಿಯೆಗಳನ್ನು ನಡೆಸುವ ಕುರಿತಾದ ಅನುಕೂಲದ ಹಾಗೂ ಸೂಕ್ಷ್ಮವಾದ ವಿಧಿವಿಧಾನಗಳು ಹೇಳಲ್ಪಟ್ಟಿವೆ.

ಷೋಡಶ ಸಂಸ್ಕಾರಗಳು ಯಾವುವೆಂದರೆ :

(೧) ಗರ್ಭಾಧಾನ, (೨) ಪುಂಸವನ, (೩) ಸೀಮಂತೋನ್ನಯನ, (೪) ಜಾತಕರ್ಮ, (೫) ನಾಮಕರಣ, (೬) ನಿಷ್ಕ್ರಮಣ, (೭) ಅನ್ನಪ್ರಾಶನ, (೮) ಚೂಡಾಕರ್ಮ, (೯) ಕರ್ಣವೇಧ, (೧೦) ವಿದ್ಯಾರಂಭ, (೧೧) ಉಪನಯನ, (೧೨) ವೇದಾರಂಭ, (೧೩) ಕೇಶಾಂತ, (೧೪) ಸಮಾವರ್ತನ, (೧೫) ವಿವಾಹ, (೧೬) ಅಂತ್ಯೇಷ್ಟಿ.

ಪ್ರತಿಯೊಂದು ಸಂಸ್ಕಾರಕ್ರಿಯೆಯೂ ವೈದಿಕಮಂತ್ರ, ಯಜ್ಞ (ಹವನ), ದಾನ ಎಂಬ ಮೂರು ತರಹದ ಧಾರ್ಮಿಕ ವಿಧಿಗಳಿಂದ ಕೂಡಿಯೇ ಆಚರಿಸಲ್ಪಡಬೇಕಾಗಿದೆ. ಧಾರ್ಮಿಕವಾದ ವಿಧಿ ಮತ್ತು ಕರ್ಮ ಆಚರಣೆಗಳು ಸಂಸ್ಕಾರಕ್ರಿಯೆಯಲ್ಲಿ ಸೇರಿರುತ್ತವಾಗಿದ್ದು ಒಂದನ್ನು ಬಿಟ್ಟು ಒಂದು ಇರುವುದಿಲ್ಲ. ಮಾತ್ರವಲ್ಲ, ಅವುಗಳಲ್ಲಿ ಯಾವ ಒಂದು ಅಂಶವು ಇಲ್ಲದಿದ್ದರೂ ಕೂಡ ಸಂಸ್ಕಾರವು ಅಪೂರ್ಣವೂ, ನಿಷ್ಫಲವೂ ಆಗುತ್ತದೆ. ಸಂಸ್ಕಾರಕ್ರಿಯೆಗಳೆಲ್ಲವೂ ಜೀವಿಯ ಸೂಕ್ಷ್ಮ, ಸ್ಥೂಲ ಮತ್ತು ಕಾರಣ ಎಂಬ ಮೂರು ಶರೀರಗಳ ಆಧ್ಯಾತ್ಮಿಕ, ಮಾನಸಿಕ ಮತ್ತು ಶಾರೀರಿಕವಾದ ಪರಿಶುದ್ಧ ಶಕ್ತಿ ಮತ್ತು ಅಭಿವೃದ್ಧಿಗಾಗಿ ಮಾಡಲ್ಪಡುತ್ತವೆ. ಅಲ್ಲದೆ ಈ ಸಂಸ್ಕಾರಗಳಲ್ಲಿ ವ್ಯಕ್ತಿಗತವಾದ ಆತ್ಮೋನ್ನತಿಯ ತತ್ತ್ವ ಅಡಗಿರುವಂತೆ, ಸಾಮಾಜಿಕವಾದ ಜೀವನದ ನೈತಿಕ-ಸಾಂಸ್ಕೃತಿಕ ಅಭಿವೃದ್ಧಿ, ಪರಸ್ಪರ ಸ್ನೇಹಸಹಕಾರಗಳ ವೃದ್ಧಿ ಮತ್ತು ಅವುಗಳ ರಕ್ಷಣೆಯ ತತ್ತ್ವ ಅಡಗಿರುತ್ತದೆ. ಹಾಗೆಯೇ ಸಂಸ್ಕಾರಕ್ರಿಯೆಗಳಲ್ಲಿ ದೇವರನ್ನು ಜೀವಿಯ ರಕ್ಷಣೆಗಾಗಿ ಪ್ರಾರ್ಥಿಸುವಿಕೆ, ಜೀವಿಯ ಸರ್ವಾಂಗೀಣ ಅಭಿವೃದ್ಧಿಗಾಗಿ ಬೇಡುವಿಕೆ, ದುಷ್ಟ ಶಕ್ತಿಗಳ ದಮನಕ್ಕೆ ಇರುವ ಪ್ರತ್ಯಕ್ಷ ಮತ್ತು ಪರೋಕ್ಷವಾದ ವಿಧಿವಿಧಾನಗಳೆಲ್ಲವೂ ಸೇರಿರುತ್ತವೆ.

(೧) ಗರ್ಭಾಧಾನ : ಹಿಂದೂಧರ್ಮದ ಪ್ರಕಾರ ಸಂತಾನೋತ್ಪತ್ತಿ ಎಂದರೆ ಕೇವಲ ಶರೀರಕ್ಕೆ ಸಂಬಂಧಿಸಿದ ಸುಖದ ಸಂಗತಿಯಾಗಲಿ ಅಥವಾ ಅದೊಂದು ಸಹಜವಾದ ಶಾರೀರಿಕವಾದ ಧರ್ಮ ಎಂದಾಗಲಿ ಆಗಿರುವುದಿಲ್ಲ, ತನ್ನ ಕುಲಗೋತ್ರದವರು, ದೇಶದವರು ಇವರೆಲ್ಲರ ಪುರೋಗತಿಗಾಗಿ ಹಿಂದುವು ಸೂಕ್ತವಾದ ವ್ಯವಸ್ಥೆ ಮಾಡಿ ತನ್ಮೂಲಕ ತನ್ನ ಪಾಲಿನ ಕರ್ತವ್ಯ ಋಣಗಳನ್ನು ತೀರಿಸುವ ಮಹತ್ಪೂರ್ಣವಾದ ತತ್ತ್ವವು ಸಂತಾನದ ಉತ್ಪತ್ತಿಯ ಹಿನ್ನೆಲೆಯಲ್ಲಿ ಅಡಗಿರುತ್ತದೆ. ತದನುಸಾರವಾಗಿ ಉತ್ತಮ, ಉಪಯುಕ್ತ, ಸಶಕ್ತ ಮತ್ತು ಸದೃಢವಾದ ಮಗುವನ್ನು ಪಡೆದು ಸರಿಯಾಗಿ ಬೆಳಸಿ ಸಮಾಜಕ್ಕೆ ಅದನ್ನು ನೀಡಿ ತನ್ಮೂಲಕ ತನ್ನ ಬಾಳಿನ ಕರ್ತವ್ಯವನ್ನು ಆ ಮಟ್ಟಿಗೆ ತೀರಿಸಬೇಕಾದುದು ಗೃಹಸ್ಥನಾದ ಪ್ರತಿಯೊಬ್ಬ ಹಿಂದೂವಿನ ಜೀವನದ ಮುಖ್ಯವಾದ ಒಂದು ಕರ್ತವ್ಯವಾಗಿದೆ.

ಸೂಕ್ತವಾದ ಪೂಜೆ, ಹೋಮ, ಪ್ರಾರ್ಥನೆಗಳನಂತರ ಪರಿಶುದ್ಧವಾದ ಭಾವನೆಯಿಂದ ಶಾಸ್ತ್ರೋಕ್ತವಾದ ಮುಹೂರ್ತದಲ್ಲಿ ಪತಿಪತ್ನಿಯರು ಸಮಾಗಮವಾಗಿ 'ಗರ್ಭಾಧಾನ' ಸಂಸ್ಕಾರಕ್ರಿಯೆಯು ನಡೆಯಬೇಕು ಎಂದು ಹಿಂದೂಧರ್ಮದ ಗ್ರಂಥಗಳಲ್ಲಿ ವಿಸ್ತಾರವಾಗಿ ಹೇಳಲಾಗಿದೆ. ಜೀವನು ದೇಹಧಾರಿಯಾಗಿ ಜಗದಲ್ಲಿ ಜನ್ಮತಳೆಯಲು ಇರುವ ಆರಂಭದ ಕ್ರಿಯೆಯು ಗರ್ಭಾಧಾನ ಸಂಸ್ಕಾರ ಆಗಿರುತ್ತದೆ.

(೨) ಪುಂಸವನ : ಸುದೃಢವಾದ, ಸಾರ್ಥಕವಾದ ಯೋಗ್ಯ ಮಗು ಜನಿಸಲಿ ಎಂದು ಸ್ತ್ರೀಯು ಗರ್ಭವತಿ ಆದನಂತರ ಮೂರು ಅಥವಾ ನಾಲ್ಕನೇ ತಿಂಗಳಲ್ಲಿ ಆಚರಿಸುವ ಸಂಸ್ಕಾರವೇ ಪುಂಸವನ. ಸ್ತ್ರೀಯು ಗರ್ಭವತಿಯಾದನಂತರ ಶಾರೀರಿಕ ಹಾಗೂ ಮಾನಸಿಕವಾಗಿ ಅವಳಿಗೆ ಶಾಸ್ತ್ರೋಕ್ತವಾದ ಕೆಲವು ರೀತಿಯ ವೈದ್ಯಕೀಯ ಚಿಕಿತ್ಸೆ, ಮಂತ್ರೋಕ್ತವಾದ ಸಂಸ್ಕಾರಕ್ರಿಯೆಗಳನ್ನು ಮಾಡಿದರೆ ಗರ್ಭದಲ್ಲಿರುವ ಶಿಶುವು ಸುದೃಢವಾಗುವುದು ಮಾತ್ರವಲ್ಲದೆ ಸರ್ವದೃಷ್ಟಿಯಿಂದಲೂ ಯೋಗ್ಯವಾಗಿ ಬೆಳೆಯುತ್ತದೆ ಎಂಬ ನಿಶ್ಚಯದ ತತ್ತ್ವವು ಈ ಸಂಸ್ಕಾರದಲ್ಲಿ ಅಡಗಿರುತ್ತದೆ.

(೩) ಸೀಮಂತೋನ್ನಯನ : ಗರ್ಭವತಿಯಾದ ಸ್ತ್ರೀಯ ತಲೆಕೂದಲುಗಳನ್ನು ವಿಧಿ ಪ್ರಕಾರವಾಗಿ ಬಾಚಿ, ಬೈತಲೆ ಬಿಡಿಸಿ ಹೂಗಳಿಂದ ತಲೆಯನ್ನು ಶೃಂಗರಿಸುವ ವಿಧಿಯೇ ಸೀಮಂತೋನ್ನಯನ ಸಂಸ್ಕಾರ. ಸೀಮಂತದ ಸಂದರ್ಭದಲ್ಲಿ ಗರ್ಭವತಿಗೆ ಬಯಕೆಯಾಗುವ ವಿಶೇಷ ತಿಂಡಿತೀರ್ಥಗಳು, ಉಟೋಪಚಾರಗಳನ್ನು ಒದಗಿಸಲಾಗುತ್ತದೆ.

ಗರ್ಭದಲ್ಲಿ ನೆಲೆನಿಂತಿರುವ ಮಗುವಿನ ಮನಸ್ಸು ಐದನೇ ತಿಂಗಳಲ್ಲಿಯೂ, ಬುದ್ಧಿಯು ಆರನೇ ತಿಂಗಳಲ್ಲಿಯೂ ಪ್ರಬುದ್ಧವಾಗತೊಡಗುತ್ತದೆ, ಅನೇಕ ವಿಧದ ದುಷ್ಟಶಕ್ತಿಗಳು ಗರ್ಭಿಣಿಸ್ತ್ರೀಯರನ್ನು ಪ್ರಭಾವಿಸುತ್ತವೆ. ಮಾತ್ರವಲ್ಲದೆ ಗರ್ಭಿಣಿಯು ಶಾರೀರಿಕ ಮತ್ತು ಮಾನಸಿಕವಾದ ಅನೇಕ ರೀತಿಯ ಬದಲಾವಣೆಗಳು ಗರ್ಭವು ಬೆಳೆದಂತೆ ಕಾಣಿಸಿಕೊಳ್ಳುತ್ತವೆ. ಈ ಸಂದರ್ಭದಲ್ಲಿ ಗರ್ಭಿಣಿಯ ದೈಹಿಕ ಆರೋಗ್ಯ, ಮಾನಸಿಕ ಆರೋಗ್ಯ ಇವುಗಳು ಅತ್ಯಂತ ಪರಿಣಾಮಕಾರಿಯಾದ ರೀತಿಯಲ್ಲಿ ಗರ್ಭದಲ್ಲಿರುವ ಮಗುವಿನ ದೇಹ, ಮನಸ್ಸು, ಬುದ್ಧಿಗಳನ್ನು ಪ್ರಭಾವಿಸುತ್ತವೆ. ಗರ್ಭಿಣಿಯು ಸಂತೋಷಚಿತ್ತಳೂ, ಸುದೃಢ ಆರೋಗ್ಯಯುಕ್ತಳೂ ಆಗಿರಬೇಕಾದುದು ಅಗತ್ಯ. ಅವಳ ಹಾಗೂ ಗರ್ಭದಲ್ಲಿರುವ ಮಗುವಿನ ರಕ್ಷಣೆಗೆ ಪ್ರಾರ್ಥನೆ, ಇತರರ ಆಶೀರ್ವಾದಗಳ ರಕ್ಷೆ ಅಗತ್ಯ. ಹೀಗೆ ಈ ಅಂಶಗಳಿಂದ ಕೂಡಿರುವ ಸಂಸ್ಕಾರವಿಧಿಯೇ ಸೀಮಂತೋನ್ನಯನವಾಗಿದ್ದು ಇದನ್ನು ಸ್ತ್ರೀಯು ಗರ್ಭವತಿಯಾದ ನಾಲ್ಕರಿಂದ ಏಳನೇ ತಿಂಗಳ ಅವಧಿಯಲ್ಲಿ ನಡೆಸುತ್ತಾರೆ.

(೪) ಜಾತಕರ್ಮ : ಮಗುವು ಹುಟ್ಟಿದಾಗ ಅಂದರೆ ನಾಭಿನಾಳಛೇದನಕ್ಕೆ ಮೊದಲೇ ಶಿಶುವಿನ ಜನ್ಮದ ಸಂಬಂಧವಾಗಿ ಮಾಡುವ ಸಂಸ್ಕಾರಕರ್ಮವೇ ಜಾತಕರ್ಮ. ಮಗುವನ್ನು ಕುಟುಂಬಕ್ಕೆ ಸಂಸ್ಕಾರಕ್ಕೆ ತಂದೆಯಾದವನು ಸ್ವಾಗತಿಸಿ ಮಗುವಿನ ದೀರ್ಘಾಯುಷ್ಯ, ಸಮೃದ್ಧಿ, ಸಂಪತ್ತುಗಳಿಗಾಗಿ ಪ್ರಾರ್ಥನೆಯನ್ನು ಸಲ್ಲಿಸುವುದು ಈ ಸಂಸ್ಕಾರದಲ್ಲಿ ಅಡಗಿರುವ ಕ್ರಿಯಾಂಶವಾಗಿದೆ. ಹುಟ್ಟಿದ ಪ್ರತಿಯೊಂದು ಮಗುವೂ ಕುಟುಂಬಕ್ಕೆ, ಸಮಾಜಕ್ಕೆ ಅಂತೂ ಒಟ್ಟಾಗಿ ಜಗತ್ತಿಗೆ ಹಿತ ಹಾಗೂ ಕಲ್ಯಾಣಗಳನ್ನುಂಟುಮಾಡಲು

ಬಂದ ದೇವರ ಅನುಗ್ರಹದ ಪ್ರತೀಕ ಎಂಬ ಭಾವನಾದೃಷ್ಟಿಯು ಹಿಂದೂಧರ್ಮದಲ್ಲಿ ಸ್ಪಷ್ಟವಾಗಿ ವ್ಯಕ್ತಪಡಿಸಲ್ಪಟ್ಟಿದೆ. ಆದುದರಿಂದಲೇ ವಿಶೇಷವಾದ ಹರ್ಷ, ಪ್ರಾರ್ಥನೆ, ಸ್ವಾಗತಗಳಿಂದ ಮಗುವಿನ ಜಾತಕರ್ಮದ ನಿರ್ವಹಣೆಯ ಕ್ರಮವು ಈ ಸಂಸ್ಕಾರದಲ್ಲಿ ಅಡಗಿರುತ್ತದೆ.

(೫) ನಾಮಕರಣ : ಜಗತ್ತಿನಲ್ಲಿ ಜನ್ಮತಳೆದ ಶಿಶುವಿಗೆ ವಿಧಿಪ್ರಕಾರ ಹೆಸರಿಡುವ ಸಂಸ್ಕಾರಕ್ರಿಯೆಯೇ ನಾಮಕರಣ. ಜನ್ಮತಳೆದ ಶಿಶುವು ಗಂಡಾದರೆ ಜನ್ಮತಳೆದನಂತರದ ಹನ್ನೆರಡನೇ ದಿವಸದಲ್ಲೂ, ಹೆಣ್ಣಾದರೆ ಹನ್ನೊಂದನೇ ದಿವಸದಲ್ಲೂ, ವಿಧಿಪ್ರಕಾರ ನಾಮಕರಣ ಸಂಸ್ಕಾರವನ್ನು ನೆರವೇರಿಸುತ್ತಾರೆ. ನಾಮಕರಣದ ದಿವಸಗಳ ಬಗೆಗೆ ಸೂತ್ರಕಾರರಲ್ಲಿ ಮತಭೇದವಿದ್ದು ಆಯಾಯ ಸೂತ್ರಕಾರರ ಸಂಪ್ರದಾಯದವರು ತಮ್ಮ ಸಂಪ್ರದಾಯದಂತೆ ಈ ವಿಚಾರವಾಗಿ ನಡೆದುಕೊಳ್ಳುತ್ತಾರೆ. ಶಿಶುವು ಜಗತ್ತಿನಲ್ಲಿ ಬಾಳುವ ಅವಧಿಯಲ್ಲಿ ಅದನ್ನು ರಕ್ಷಿಸಲು ಮಾರ್ಗದರ್ಶನವಿತ್ತು ಮುನ್ನಡೆಸಲು ಎಲ್ಲ ದೃಷ್ಟಿಯಿಂದಲೂ ಸಹಕಾರಿಯಾಗುವಂತೆ ಸಾಮಾನ್ಯವಾಗಿ ದೇವರ ಹೆಸರನ್ನು ಶಿಶುವಿಗೆ ಇಡುವ ಕ್ರಮವಿದೆ. ತತ್ತ್ವ, ಸಮಾಜ, ಕುಲ, ಇಷ್ಟದೇವತೆ, ಧರ್ಮ, ವರ್ಣ ಇವುಗಳೆಲ್ಲದರ ಪರಿಶೀಲನೆ ಹಾಗೂ ಆಧಾರಗಳು ಹೆಸರಿಡುವ ಸಂಸ್ಕಾರದಲ್ಲಿ ಅಡಕವಾಗಿವೆ. ಮಗುವು ಜನಿಸಿದ ನಕ್ಷತ್ರ, ರಾಶಿ, ಘಳಿಗೆ ಇತ್ಯಾದಿ ಜ್ಯೋತಿಶ್ಶಾಸ್ತ್ರಸಂಬಂಧವಾದ ವಿಚಾರಗಳನ್ನು ಪರಿಶೀಲಿಸಿ ತದನುಸಾರವಾಗಿ ನಾಮಕರಣವನ್ನು ಮಾಡಬೇಕಾಗಿರುವುದು ಈ ಸಂಸ್ಕಾರದಲ್ಲಿ ಅಡಗಿರುವ ಮುಖ್ಯಾಂಶವಾಗಿರುತ್ತದೆ.

(೬) ನಿಷ್ಕ್ರಮಣ : ಮಗುವನ್ನು ಪ್ರಥಮ ಬಾರಿಗೆ ಮನೆಯಿಂದ ಹೊರಗೆ ಕರೆತರುವ ಸಂಸ್ಕಾರವೇ ನಿಷ್ಕ್ರಮಣ. ಜಗತ್ತಿನಲ್ಲಿ ಜನ್ಮತಳೆದ ಶಿಶುವು ಬೆಳೆದಂತೆ ಅದು ಜಗತ್ತಿನ ಸ್ಥಿತಿಗತಿ, ವಾತಾವರಣಗಳಿಗೆ ಹೊಂದಿಕೊಂಡು ತನ್ನ ಶಾರೀರಿಕ, ಮಾನಸಿಕ, ಆಧ್ಯಾತ್ಮಿಕ ಬೆಳವಣಿಗೆಯನ್ನು ಪಡೆಯಬೇಕಾಗುತ್ತದೆ. ಇದಕ್ಕೆ ಅನುಕೂಲವಾಗಲು ಮನೆಯಿಂದ ಹೊರಗೆ ಮಗುವನ್ನು ಆಡಿಸುವುದು, ಬೆಳೆಸುವುದು, ಅಂತೂ ಪ್ರಕೃತಿಯೊಡನೆ ಅದು ಬೆರೆಯುವುದು ಅಗತ್ಯ. ಇನ್ನೂ ಕೂಡ ಬೆಳೆದಿರದ ಮಗುವಿಗೆ ಬಾಹ್ಯಪ್ರಪಂಚದಲ್ಲಿ ಅನೇಕ ರೀತಿಯ ದುಷ್ಟಶಕ್ತಿಗಳ ಪ್ರಭಾವ, ತೊಂದರೆಗಳು ಅನಿವಾರ್ಯವಾಗಿ ಲಭಿಸುತ್ತವೆ. ಅದಕ್ಕಾಗಿ ಸೂಕ್ತವಾದ ಪ್ರಾರ್ಥನೆ, ಮಂತ್ರರಕ್ಷಣೆ, ಇವುಗಳಿಂದ ಕೂಡಿ ಮಗುವನ್ನು ವಿಧಿಯುಕ್ತವಾಗಿ ಮನೆಯಿಂದ ಹೊರತರುತ್ತಾರೆ. ಸಾಮಾನ್ಯವಾಗಿ ದೇವಸ್ಥಾನ ಇಲ್ಲವೇ ಗುರುಮಠಗಳಿಗೆ ಮಗುವನ್ನು ಪ್ರಥಮತಃ ಕರೆದುಕೊಂಡು ತೆರಳಿ ಆಶೀರ್ವಾದ ಪಡೆಯುವ ವಾಡಿಕೆ ಇದೆ. ಮಗುವು ಜನಿಸಿದನಂತರ ನಾಲ್ಕನೇ ತಿಂಗಳಲ್ಲಿ ಈ ನಿಷ್ಕ್ರಮಣಸಂಸ್ಕಾರವನ್ನು ನಡೆಸುವುದಾಗಿದೆ.

(೭) ಅನ್ನಪ್ರಾಶನ : ಮಗುವಿಗೆ ಅನ್ನ ಆದಿಯಾದ ಗಟ್ಟಿ ಆಹಾರವನ್ನು ನೀಡಲು ಪ್ರಾರಂಭಿಸುವ ಸಂಸ್ಕಾರವೇ ಅನ್ನಪ್ರಾಶನ ಸಂಸ್ಕಾರವಾಗಿರುತ್ತದೆ. ಆಹಾರವು ವ್ಯಕ್ತಿಯ ಶಾರೀರಿಕ, ಮಾನಸಿಕ ಮತ್ತು ಆಧ್ಯಾತ್ಮಿಕವಾದ ಆರೋಗ್ಯವನ್ನು ರಕ್ಷಿಸುವ ದಿವ್ಯವಾದ ಚೇತನವಸ್ತುವಾಗಿದೆ. ಹಾಗಾಗಿ ಮಗುವಿಗೆ ಪ್ರಥಮತಃ ಆಹಾರವನ್ನು ಅನ್ನರೂಪದಲ್ಲಿ

ನೀಡಿ ಅದು ಜಗತ್ತಿನಲ್ಲಿ ಅನ್ನಾದಿ ಆಹಾರವನ್ನು ಸ್ವೀಕರಿಸಿ ಬದುಕಬೇಕೆಂಬುದರ ತತ್ತ್ವವನ್ನು ಆಧರಿಸಿ ಸೂಕ್ತವಾದ ಮಂತ್ರ, ಪೂಜೆ, ಪ್ರಾರ್ಥನೆಗಳ ಸಹಿತವಾಗಿ ಈ ಸಂಸ್ಕಾರದ ಮೂಲಕ ಪ್ರಥಮ ಬಾರಿ ಮಗುವಿಗೆ ವಿಧಿಯುಕ್ತವಾಗಿ ಅನ್ನವನ್ನು ನೀಡ ಲಾಗುತ್ತದೆ. ಮಗುವಿಗೆ ಸುಮಾರು ಆರು ತಿಂಗಳು ಆಗುವಾಗ ಈ ಕ್ರಿಯೆಯು ನಡೆದು ಇದರ ಹಿನ್ನೆಲೆಯಲ್ಲಿ ಮಗುವಿನ ದೇಹದ ಬೆಳವಣಿಗೆಯ ಆವಶ್ಯಕತೆಯನ್ನು ಅನುಸರಿಸಿ ಕಾಲಕ್ಕೆ ಸರಿಯಾದ ಆಹಾರ ನೀಡಬೇಕೆಂಬ ಆಯುರ್ವೇದೀಯ (ಆಯುಸ್ಸಿಗೆ ಸಂಬಂಧಿ ಸಿದ ಜ್ಞಾನದ) ತತ್ತ್ವವೂ ಅಡಗಿರುತ್ತದೆ.

(೮) ಚೂಡಾಕರ್ಮ : ಮಗುವಿನ ಕೂದಲುಗಳನ್ನು ಪ್ರಥಮ ಬಾರಿ ಕತ್ತರಿಸುವಾಗ ಮಾಡುವ ಸಂಸ್ಕಾರವೇ ಚೂಡಾಕರ್ಮ, ಕೂದಲು ಮತ್ತು ಉಗುರುಗಳು ಇತ್ಯಾದಿಗಳನ್ನು ಸಕಾಲದಲ್ಲಿ ಕತ್ತರಿಸಿ ಕೊಳೆ ತೊಳೆದು ಶರೀರವನ್ನು ಶುಚಿಯಾಗಿ ಇಟ್ಟುಕೊಳ್ಳುವುದು ಆರೋಗ್ಯದೃಷ್ಟಿಯಿಂದ ಅಗತ್ಯ, (ಹೆಣ್ಣುಮಗುವಾದರೆ ಕೂದಲುಗಳನ್ನು ಸಿಂಗರಿಸಿಟ್ಟು ಕೊಳ್ಳಬೇಕು.) ಉಗುರುಗಳನ್ನು ತೆಗೆಯಬೇಕು. ಶರೀರದ ಶುಚಿಯನ್ನೂ, ಆರೋಗ್ಯ ವನ್ನೂ ರಕ್ಷಿಸಲು ಜಾಗರೂಕವಾಗಿರಬೇಕು ಎಂಬ ತತ್ತ್ವವನ್ನು ಆಧರಿಸಿ ಈ ಸಂಸ್ಕಾರ ಹುಟ್ಟಿದೆ ಎಂದು ಹೇಳಬಹುದು. ತಲೆಕೂದಲುಗಳನ್ನು ತೆಗೆದು ನೆತ್ತಿಯ ಭಾಗದಲ್ಲಿ ಮಾತ್ರ ಶಿಖೆಯನ್ನು ಅಥವಾ ಚೂಡವನ್ನು ಇಡುವುದು ಈ ಸಂಸ್ಕಾರದ ಸ್ವರೂಪವಾಗಿದೆ. ನೆತ್ತಿಯಲ್ಲಿ ಬಹಳ ಸೂಕ್ಷ್ಮವಾದ ಶಿರಸಂಧಿಯೊಂದು ಇದ್ದು ಅದನ್ನು ಕಾಪಾಡುವುದಕ್ಕಾಗಿ ಕೂದಲುಗಳನ್ನು ಇಡಬೇಕು ಎಂಬ ತತ್ತ್ವ ಇದರಲ್ಲಿ ಅಡಗಿದೆ ಎಂಬುದು ಆಯುರ್ವೇದ ಗ್ರಂಥ ಸುಶ್ರುತಸಂಹಿತೆಯಿಂದ ತಿಳಿದುಬರುತ್ತದೆ (ಶರೀರಸ್ಥಾನ, ಅಧ್ಯಾಯ vi, ಪು. ೮೩). ಈ ಸಂಸ್ಕಾರವನ್ನು ಮಗುವಿಗೆ ಒಂದು ವರ್ಷ ತುಂಬಿದಾಗ ಅಥವಾ ಮೂರನೇ ವರ್ಷದ ಮುಕ್ತಾಯದ ಒಳಗೆ ನಡೆಸುತ್ತಾರೆ. ಈ ಸಂಸಾರಕ್ಕೆ ಚೌಲ ಎಂಬ ಇನ್ನೊಂದು ಹೆಸರೂ ರೂಢಿಯಲ್ಲಿದೆ.

(೯) ಕರ್ಣವೇಧ : ಕಿವಿಗಳ ಹೊರಮೈಯ ಕೆಳಭಾಗವನ್ನು, ಎಂದರೆ ಆಭರಣಗಳನ್ನು ಧರಿಸುವ ಭಾಗವನ್ನು, ಪ್ರಥಮ ಬಾರಿಗೆ ತೂತುಮಾಡಿ ಆಭರಣ ತೊಡಿಸುವ ಸಂಸ್ಕಾರ ಕ್ರಿಯೆಯೇ ಕರ್ಣವೇಧ. ಈ ಕ್ರಿಯೆಯಲ್ಲಿ ಆಯುರ್ವೇದಶಾಸ್ತ್ರದ ಪ್ರಕಾರ ಆರೋಗ್ಯ ತತ್ತ್ವ, ಶೃಂಗಾರತತ್ತ್ವ ಮತ್ತು ಪ್ರಕೃತಿಯಲ್ಲಿರುವ ಅನೇಕ ವಿಧದ ದುಷ್ಟಶಕ್ತಿಗಳ ಪ್ರಭಾವದಿಂದ ಪಾರಾಗುವ ರಕ್ಷಣಾತತ್ತ್ವ ಅಡಗಿರುತ್ತದೆ. ಕಿವಿಗಳನ್ನು ಚುಚ್ಚುವುದರಿಂದ ಅಂಡವಾಯು (Hernia) ಇತ್ಯಾದಿ ಕೆಲವು ವಿಧದ ಕಾಹಿಲೆಗಳು ಬರುವುದಿಲ್ಲ ಎಂದು ಸುಶ್ರುತಸಂಹಿತೆಯಲ್ಲಿ ಹೇಳಲಾಗಿದೆ (ಚಿಕಿತ್ಸಾಸ್ಥಾನ, xix, ಪು. ೨೧ ... ಅಂತರ್ ವೃದ್ಧಿನಿವೃತ್ತಯೇ). ವ್ಯಕ್ತಿಯ ಭೂಷಣ, ಅಲಂಕಾರ ಹಾಗೂ ಸೂಕ್ಷ್ಮವಾದ ಕೆಲವು ಪ್ರಕೃತಿಶಕ್ತಿಗಳ ಪ್ರಭಾವಗಳಿಂದ ರಕ್ಷಣೆ ಇವುಗಳಿಗೆ ಕರ್ಣವೇಧಸಂಸ್ಕಾರವು ಸಹಕಾರಿ ಯಾಗುತ್ತದೆ. ಈ ಸಂಸ್ಕಾರವನ್ನು ಮಗುವಿನ ಒಂದನೇ ಮತ್ತು ನಾಲ್ಕನೇ ವಯಸ್ಸಿನ ಅವಧಿಯ ಒಳಗೆ ನೆರವೇರಿಸುತ್ತಾರೆ.

(೧೦) ವಿದ್ಯಾರಂಭ : ಮಗುವಿಗೆ ಅಕ್ಷರಾಭ್ಯಾಸವನ್ನು ಮಾಡಿಸುವ ಸಂಸ್ಕಾರವೇ

ವಿದ್ಯಾರಂಭ ಸಂಸ್ಕಾರ. ಮಗುವಿಗೆ ಜ್ಞಾನಸಿದ್ಧಿಯ ಕುರಿತಾದ ನಿರಿಯಾದ ತಿಳುವಳಿಕೆ ಯಾಗಲು ಅಕ್ಷರಾಭ್ಯಾಸ ಸಮಾರಂಭವು ಸೂಕ್ತವಾದ ರೀತಿಯಲ್ಲಿ ಉತ್ಸಾಹ ಮತ್ತು ಪ್ರೋತ್ಸಾಹವನ್ನು ನೀಡುತ್ತದೆ. ಮಗುವು ವಿದ್ಯಾರ್ಜನೆಯನ್ನು ಮಾಡಿ ಜಗತ್ತಿನಲ್ಲಿ ಸಾಹಸ, ಸಾರ್ಥಕತೆಗಳಿಂದ ಬಾಳಿ ಬೆಳಗಲು ತಯಾರಾಗುವಂತೆ ಈ ಸಂಸ್ಕಾರವು ಜೀವಿಯ ಜೀವನದ ಅಡಿಪಾಯವನ್ನು ನಿರ್ಮಿಸುತ್ತದೆ.

(೧೧) ಉಪನಯನ : ಮಗುವಿಗೆ ಸೂಕ್ತವಾದ ವಿದ್ಯಾಭ್ಯಾಸವನ್ನು ಯೋಗ್ಯವಾದ ಗುರುವಿನಿಂದ ಕೊಡಿಸಲು ವ್ಯವಸ್ಥೆಮಾಡುವ ಸಂಸ್ಕಾರವೇ ಉಪನಯನ ಸಂಸ್ಕಾರ. ಗುರುವಿನ ಹತ್ತಿರ ಮಗುವನ್ನು ಕರೆದು ತರುವುದು ಎಂದು ಉಪನಯನದ ಶಬ್ದದ ಅರ್ಥ ವಾಗುತ್ತದೆ. ಉಪನಯನದಿಂದಾಗಿ ಮಗುವಿಗೆ ಸಾಂಸ್ಕೃತಿಕ ಹಾಗೂ ಆಧ್ಯಾತ್ಮಿಕವಾದ ಜನ್ಮ ದೊರಕಿದಂತೆ ಆಗುತ್ತದೆ. ಎಂದರೆ ಉಪನಯನಸಂಸ್ಕಾರದ ಅನಂತರ ಜೀವಿಯು ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕವಾದ ವಿಚಾರಗಳನ್ನು ತಿಳಿಯಹೊರಡುತ್ತಾನೆ. ಜೀವನಕ್ಕೆ ಬೇಕಾದ ಬೌದ್ಧಿಕ, ಶಾರೀರಿಕ. ಆಧ್ಯಾತ್ಮಿಕ ತಯಾರಿಗಳನ್ನು ಮಾಡಹೊರಡುತ್ತಾನೆ. ಹಾಗಾಗಿ ಅವನು ಹೊಸ ಪ್ರಪಂಚಕ್ಕೆ ಬಂದು ಅದರಲ್ಲಿ ಹುಟ್ಟಿದಂತಾಗುತ್ತದೆ. ಆದ್ದರಿಂದ ಅವನು ದ್ವಿಜ (ಎಂದರೆ ಎರಡನೇ ಬಾರಿ ಹುಟ್ಟಿದವನು) ಆಗುತ್ತಾನೆ. ಉಪನಯನ ಸಂಸ್ಕಾರದನಂತರ ಬಾಲಕನು ವೇದಾಧ್ಯಯನ ಹಾಗೂ ಇತರ ವಿದ್ಯಾಭ್ಯಾಸಕ್ಕೆ ಅರ್ಹ ನಾಗುತ್ತಾನೆ. ಉಪನಯನಸಂಸ್ಕಾರದಲ್ಲಿ ಪವಿತ್ರ ಗಾಯತ್ರೀ ಮಂತ್ರದ ಉಪದೇಶ ಪಡೆಯುವಿಕೆ ಮತ್ತು ಯಜ್ಞೋಪವೀತ ಎಂಬ ಸಾಂಕೇತಿಕವಾದ ಪವಿತ್ರದಾರವನ್ನು ಶರೀರದಲ್ಲಿ ಧರಿಸುವಿಕೆ ಎಂಬ ಈ ಎರಡು ವಿಚಾರಗಳು ಮುಖ್ಯವಾದವುಗಳಾಗಿವೆ. (ಯಜ್ಞೋಪವೀತ, ಗಾಯತ್ರಿ ಇವುಗಳ ಕುರಿತಾಗಿ ವಿವರವಾಗಿ ಈ ಗ್ರಂಥದಲ್ಲಿ ಮುಂದೆ ವಿಚಾರ ಮಾಡಲಾಗುವುದು.) ಉಪನಯನದನಂತರ ವಿದ್ಯಾರ್ಥಿಯು ಗುರುವಿನ ಗೃಹದಲ್ಲಿ ವಾಸಿಸುತ್ತಾ ಬ್ರಹ್ಮಚಾರಿಯಾಗಿ ಬಾಳುತ್ತ ವಿದ್ಯಾಭ್ಯಾಸ ಪಡೆಯುತ್ತಾನೆ. ಮಗುವಿಗೆ ಎಂಟು ವರ್ಷದಿಂದ ಹದಿನಾರು ವರ್ಷದೊಳಗೆ ಉಪನಯನವನ್ನು ಮಾಡು ತ್ತಾರೆ.

(೧೨) ವೇದಾರಂಭ (ವೇದಾಧ್ಯಯನ) : ಮುಖ್ಯವಾಗಿ ತಾನು ಜನ್ಮತಳೆದಿರುವ ಕುಟುಂಬದ ವೇದಶಾಖೆಗಳನ್ನು ಅನುಸರಿಸಿ ಅದಕ್ಕೆ ಸಂಬಂಧಿಸಿದ ವೇದದ ಅಧ್ಯಯನದ ಆರಂಭವೇ ವೇದಾರಂಭಸಂಸ್ಕಾರ. ಈ ಸಂಸ್ಕಾರದಿಂದ ವಿದ್ಯಾರ್ಥಿಯು ಇತರ ಯುಕ್ತ ವಾದ ಜೀವನಾವಶ್ಯಕವಾದ ವಿದ್ಯೆಗಳ ಕಲಿಯುವಿಕೆ ಮಾತ್ರವಲ್ಲದೆ ತನ್ನ ಕುಲಗೋತ್ರ ಗಳಿಗೆ ಅನ್ವಯವಾದ ವೈದಿಕ ಶಾಖೆಯ ವಿದ್ಯೆಯನ್ನೂ ಕಲಿಯುವುದಕ್ಕೆ ಅನುಕೂಲ ವಾಗುತ್ತದೆ. ವೇದವಿದ್ಯೆಯ ಅರಿವು ಜೀವನಕ್ಕೆ ಅತ್ಯಂತ ಅಗತ್ಯ ಎಂಬುದರ ಸೂಚಕ ವಾಗಿಯೇ ಈ ಸಂಸ್ಕಾರವು ನಡೆಸಲ್ಪಡುತ್ತದೆ. ಉಪನಯನದ ಅನಂತರ ಈ ಸಂಸ್ಕಾರ ಮಾಡಲ್ಪಡುತ್ತದೆ.

(೧೩) ಕೇಶಾಂತ : ವಿದ್ಯಾರ್ಥಿಯು ಗುರುವಿನೊಡನೆ ಇದ್ದು ವಿದ್ಯಾಭ್ಯಾಸ ಮುಗಿಸಿ ತನ್ನ ಮನೆಗೆ ಹಿಂತಿರುಗುವ ಕಾಲದಲ್ಲಿ ಮಾಡುವ ಗಡ್ಡ ಕೂದಲುಗಳ ಕ್ಷೌರಸಂಸ್ಕಾರವೇ

ಕೇಶಾಂತಸಂಸ್ಕಾರ. ಇದನ್ನು ಗೋದಾನಸಂಸ್ಕಾರ ಎಂದೂ ಹೇಳುತ್ತದೆ. ವಿದ್ಯಾರ್ಥಿಯು ಯೌವನದ ಅವಸ್ಥೆಗೆ ಕಾಲಿಟ್ಟು ತಾನಿನ್ನು ಗೃಹಸ್ಥನಾಗಲು ಮರಳಿ ತನ್ನ ಮನೆಗೆ ಬರುತ್ತಾನೆ. ಬರುವ ಮುನ್ನ ಈ ಸಂಸ್ಕಾರವು ನೆರವೇರಿಸಲ್ಪಡುತ್ತದೆ. ಕೇಶಾಂತ ಸಂಸ್ಕಾರದ ಅಂತ್ಯದಲ್ಲಿ ಗುರುವಿಗೆ ಗೋವನ್ನು ದಾನವಾಗಿ ಕೊಡಬೇಕಾದ್ದರಿಂದ. ಕೊಡುವ ಕ್ರಮವಿರುವುದರಿಂದ, ಇದನ್ನು ಗೋದಾನಸಂಸ್ಕಾರ ಎಂದೂ ಕರೆಯಲಾಗಿದೆ. ಈ ಸಂಸ್ಕಾರವನ್ನು ಸಾಮಾನ್ಯವಾಗಿ ವಿದ್ಯಾರ್ಥಿಗೆ ಹದಿನಾರು ವರ್ಷವಾದನಂತರ ಮಾಡುವುದಾಗಿದೆ. ಒಟ್ಟಿನಲ್ಲಿ ವಿದ್ಯಾಭ್ಯಾಸ ಮುಕ್ತಾಯದ ವೇಳೆ ಈ ಸಂಸ್ಕಾರವು ನಡೆಸಲ್ಪಡುವುದು.

(೧೪) ಸಮಾವರ್ತನ : ವಿದ್ಯಾರ್ಥಿಯು ಗುರುಕುಲದಲ್ಲಿ ತನ್ನ ವಿದ್ಯಾಭ್ಯಾಸವನ್ನು ಮುಗಿಸಿ ಮರಳಿ ಮನೆಗೆ ಬರುವ ಸಂದರ್ಭದಲ್ಲಿ ಗುರುಕುಲದಲ್ಲಿ ನಡೆಸುವ ಸಂಸ್ಕಾರವೇ ಸಮಾವರ್ತನ ಸಂಸ್ಕಾರ. ವಿದ್ಯಾಪಾರಂಗತನಾದ ಗುರುಕುಲವಾಸಿಯು ವಿದ್ಯಾರ್ಥಿ ದಶೆಯಿಂದ ಗೃಹಸ್ಥಾಶ್ರಮದ ಹಂತಕ್ಕೆ ಏರಲು ಅರ್ಹನಾಗುತ್ತಾನೆ. ವಿದ್ಯೆಯಲ್ಲಿ ಪಾರಂಗತನಾದವನು, ಅವಭೃಥ ಸ್ನಾನಮಾಡಿದವನು, ಸ್ನಾತಕನು. ಸ್ನಾತಕನಾಗಲು ತಾನು ಪಟ್ಟ ಶ್ರಮ, ಆ ಕಾಲದಲ್ಲಿ ಕೈಕೊಂಡ ಬ್ರಹ್ಮಚರ್ಯವ್ರತ ಇವುಗಳು ದೊಡ್ಡ ಒಂದು ಯಜ್ಞದಂತೆಯೇ ಸರಿ. ಯಜ್ಞಾಂತ್ಯದಲ್ಲಿ ಯಜ್ಞಮಾಡಿದವನು ಸ್ನಾನಮಾಡುವ ಕ್ರಮವಿದ್ದು ಅದನ್ನು ಅವಭೃಥಸ್ನಾನ ಎನ್ನುತ್ತಾರೆ. ಹಾಗೆಯೇ ಬ್ರಹ್ಮಚರ್ಯವ್ರತದ ಅಂತ್ಯದಲ್ಲಿ ವಿದ್ಯಾಸ್ನಾತಕನು ಮಾಡುವ ಅವಭೃಥಸ್ನಾನವೇ ಸಮಾವರ್ತನಸಂಸ್ಕಾರ. ಸ್ನಾನ, ಪ್ರಾರ್ಥನೆ, ಗುರುಗಳಿಗೆ ಕೃತಜ್ಞತೆಯಿಂದ ವಂದಿಸುವಿಕೆ, ಇವುಗಳೆಲ್ಲ ಸೇರಿರುವುದು ಮಾತ್ರವಲ್ಲದೆ, ವಿದ್ಯಾಸ್ನಾತಕನು ಊರಿನ ಅಥವಾ ಹತ್ತಿರದ ಪ್ರಸಿದ್ಧವಾದ ಪಂಡಿತರ ಸಭೆಗೆ ತೆರಳಿ ತನ್ನ ಗುರುವಿನಿಂದ ಸಭೆಗೆ ಪರಿಚಯಿಸಿಕೊಳ್ಳುವಿಕೆಯೂ ಈ ಸಂಸ್ಕಾರ ಕ್ರಿಯೆಯಲ್ಲಿ ಅಡಗಿರುವ ಅಂಶವಾಗಿದೆ. ಸಮಾವರ್ತನಸಂಸ್ಕಾರದನಂತರ ವಿದ್ಯಾರ್ಥಿಯು ಯೌವನದ ಹಂತಕ್ಕೆ ಏರಿದವನಾಗಿ ಅವನು ಗೃಹಸ್ಥನಾಗಿ ವಿವಾಹಜೀವನ ನಡೆಸಲು ಅರ್ಹತೆಯನ್ನು ಪಡೆಯುತ್ತಾನೆ. ಗುರುವಿನ ಅನುಮತಿಪಡೆದು ಅವರಿಂದ ಆಶೀರ್ವಾದಹೊಂದಿ ಯುವಕನು ಗೃಹಸ್ಥನಾಗುತ್ತಾನೆ. ಗುರುಕುಲದಿಂದ ಮರಳಿದ ನಂತರ ಗೃಹಸ್ಥನಾಗುವ ಇಚ್ಛೆ ಇಲ್ಲದೆ ನೈಷ್ಠಿಕ ಬ್ರಹ್ಮಚಾರಿಗಳಾಗಿ ಇಳೆಯಲ್ಲಿ ಉಳಿಯ ಬಯಸುವವರು ಹಾಗೂ ಉಳಿಯಬಹುದು.

(೧೫) ವಿವಾಹ : ವಧುವೊಬ್ಬಳನ್ನು ಜೀವನದ ಜೊತೆಗಾರ್ತಿಯಾಗಿ ಅಂದರೆ ಸಹಧರ್ಮಿಣಿಯಾಗಿ ಸ್ವೀಕರಿಸಿ ಬ್ರಹ್ಮಚರ್ಯದ ಹಂತದಿಂದ ಜೀವಿಯು ಗೃಹಸ್ಥನ ನೆಲೆಗೆ ಸೇರಲು ಮಾಡುವ ಸಂಸ್ಕಾರವೇ ವಿವಾಹಸಂಸ್ಕಾರವಾಗಿರುತ್ತದೆ.

ವಿವಾಹದಲ್ಲಿ ಎಂಟು ವಿಧಗಳಿವೆ :

೧. ಬ್ರಾಹ್ಮವಿವಾಹ : ಕುಲಶೀಲಸಂಪನ್ನನಾದ ಯುವಕನಿಗೆ ಚಿನ್ನಾಭರಣಾಲಂಕೃತೆಯಾದ ಸುಯೋಗ್ಯ ಕನ್ಯೆಯನ್ನು ನೀಡಿ ಹೋಮ-ಪ್ರಾರ್ಥನೆಗಳೊಡನೆ ವಿವಾಹ ಮಾಡುವುದು.

೨. ದೈವವಿವಾಹ : ಯಜ್ಞಮಾಡುತ್ತಾ ಋತ್ವಿಜನಿಗೆ ಸಾಲಂಕೃತಳಾದ ಕನ್ಯೆಯನ್ನು ನೀಡುವುದು.

೩. ಆರ್ಷವಿವಾಹ : ವಧುವಿನ ಪಿತೃವು ವರನಿಂದ ಒಂದು ಅಥವಾ ಎರಡು ಗೋವುಗಳನ್ನು ಪಡೆದು ಅನಂತರದಲ್ಲಿ ವರನಿಗೆ ಕನ್ಯೆಯನ್ನು ಕೊಡುವುದು.

೪. ಪ್ರಾಜಾಪತ್ಯವಿವಾಹ : ಧರ್ಮವನ್ನು ಇವಳೊಡನೆ ಕೂಡಿ ಆಚರಿಸು ಎಂದು ಹೇಳಿ ಪ್ರಜಾಧರ್ಮಪಾಲನೆಯನ್ನು ಬಯಸಿ ಕನ್ಯೆಯನ್ನು ವರನಿಗೆ ವಿಧಿಯುಕ್ತವಾಗಿ ನೀಡುವುದು.

೫. ಆಸುರವಿವಾಹ : ಹಣವನ್ನು ಪಡೆದುಕೊಂಡು ಕನ್ಯೆಯನ್ನು ಕೊಡುವುದು.

೬. ಗಾಂಧರ್ವವಿವಾಹ : ವಧೂವರರು ಪರಸ್ಪರ ಪ್ರೀತಿಯಿಂದ ಪ್ರಣಯಿಗಳಾಗಿ ವಿವಾಹಿತರಾಗುವುದು.

೭. ರಾಕ್ಷಸವಿವಾಹ : ಕನ್ಯೆಯನ್ನು ಸಮರದಿಂದ ಇಲ್ಲವೇ ಬಲಾತ್ಕಾರದಿಂದ ಅಪಹರಿಸಿಕೊಂಡು ಹೋಗಿ ಮದುವೆಯಾಗುವುದು.

೮. ಪೈಶಾಚವಿವಾಹ : ಕನ್ಯೆಯು ನಿದ್ದೆಮಾಡುತ್ತಿದ್ದಾಗ ಅಥವಾ ಕಪಟ ಉಪಾಯಗಳಿಂದ ಅವಳನ್ನು ವಶಮಾಡಿಕೊಂಡು ಅವಳೊಡನೆ ಶರೀರಸಂಬಂಧ ಬೆಳೆಸುವುದು.

ಇವುಗಳಲ್ಲಿ ಬ್ರಾಹ್ಮಣ ವಿವಾಹವೇ ಶ್ರೇಷ್ಠವಾದುದೆಂದೂ, ಮೊದಲಿನ ನಾಲ್ಕು ವಿವಾಹಗಳು ಪ್ರಶಸ್ತವಾದುವುಗಳೆಂದೂ, ಕೊನೆಯ ನಾಲ್ಕು ವಿಧದ ವಿವಾಹಗಳು ಅಪ್ರಶಸ್ತವಾದುವುಗಳೆಂದೂ ಓಂದೂಧರ್ಮಗ್ರಂಥಗಳಲ್ಲಿ ಹೇಳಲಾಗಿದೆ.

ವಿವಾಹಸಂಸ್ಕಾರದಲ್ಲಿ ಮುಖ್ಯವಾಗಿ ಹನ್ನೆರಡು ಅಂಶಗಳು ಅಡಗಿವೆ. ಅವುಗಳು ಯಾವುವೆಂದರೆ :

೧. ವಾಗ್ದಾನ : ಮದುವೆಯ ಕುರಿತಾಗಿ ಪ್ರಸ್ತಾಪ ಮತ್ತು ವಧುವನ್ನು ವರನಿಗೆ ನೀಡುತ್ತೇನೆ ಎಂಬ ಮಾತಿನ ದಾನ, ಅರ್ಥಾತ್ ಕನ್ಯಾದಾನ ಕುರಿತಾದ ಭರವಸೆ ನೀಡುವಿಕೆ.

೨. ವರಾವರಣ : ವಿಧಿಯುಕ್ತವಾಗಿ ವರನನ್ನು ಒಪ್ಪಿಕೊಳ್ಳುವುದು.

೩. ಕನ್ಯಾದಾನ : ವರನಿಗೆ ಕನ್ಯೆಯನ್ನು ವಿಧಿಯುಕ್ತವಾಗಿ ಕನ್ಯಾಪಿತೃವು ಅಥವಾ ಪೋಷಕನು ದಾನ ನೀಡುವುದು.

೪. ವಿವಾಹ ಹೋಮ : ವಿವಾಹಸಂಬಂಧದ ಹೋಮ-ಪೂಜೆ-ಪ್ರಾರ್ಥನೆಗಳ ಕ್ರಿಯೆ.

೫. ಪಾಣಿಗ್ರಹಣ : ವಧುವಿನ ಕೈಯನ್ನು ವರನೂ ವರನ ಕೈಯನ್ನು ವಧುವೂ ಪರಸ್ಪರ ಗ್ರಹಣಮಾಡುವುದು ; ವಿವಾಹಬಂಧದಲ್ಲಿ ಒಳಗಾಗುವುದು.

೬. ಹೃದಯಸ್ಪರ್ಶ : ಪರಸ್ಪರ ವಧೂವರರು ಹೃದಯವನ್ನು ಸ್ಪರ್ಶಮಾಡುವುದು.

೭. ಸಪ್ತಪದೀ : ಸಂಪತ್ತು ಅಭಿವೃದ್ಧಿಗಳ ಸಂಕೇತವಾಗಿ, ಆ ಬಗ್ಗೆ ಪ್ರಾರ್ಥನೆಯೊಡನೆ ವಧೂವರರು ಕೂಡಿ ಏಳು ಹೆಜ್ಜೆಗಳನ್ನು ವಿಧಿಪ್ರಕಾರ ಇಟ್ಟು ನಡೆಯುವುದು.

೮. ಅಶ್ಮಾರೋಹಣ : ಸ್ಥಿರತೆ ಮತ್ತು ದೃಢತೆಯ ಸಂಕೇತವಾದ ಕಲ್ಲಿನ ಮೇಲೆ ತಮ್ಮ ವೈವಾಹಿಕಬಂಧದ ಸ್ಥಿರತೆ, ಬಲಗಳ ದ್ಯೋತಕವಾಗಿ ನಿರುವುದು.

೯. ಸೂರ್ಯಾವಲೋಕನ : ವಿವಾಹಸಂಬಂಧದ ಸಾಕ್ಷಿಯಾದ ಸೂರ್ಯದೇವನನ್ನು ನೋಡಿ ವಂದಿಸಿ ಆಶೀರ್ವಾದ ಪಡೆಯುವುದು.

೧೦. ಧ್ರುವದರ್ಶನ : ನಿರಂತರತೆಯ ಮತ್ತು ನಿಷ್ಠೆಯ ದ್ಯೋತಕವಾದ ಧ್ರುವ, ಅರುಂಧತೀ ನಕ್ಷತ್ರಗಳನ್ನು ದರ್ಶಿಸಿ ವಿವಾಹಸಂಸ್ಕಾರಕ್ಕೆ ಒಳಗಾದ ವಧೂವರರು ಹೊಸ ಹುರುಪು, ಚೈತನ್ಯಗಳನ್ನು ಪಡೆಯುವುದು.

೧೧. ತ್ರಿರಾತ್ರ ವ್ರತ : ವಿವಾಹವಾದನಂತರ ಮೂರು ರಾತ್ರಿ ಬ್ರಹ್ಮಚರ್ಯ ವ್ರತ ಪಾಲನೆ ಮಾಡುವುದು.

೧೨. ಚತುರ್ಥೀಕರ್ಮ : ವಿವಾಹಸಂಸ್ಕಾರಕ್ಕೆ ಒಳಗಾದವರು ತ್ರಿರಾತ್ರಿ ವ್ರತವಾದ ಮೇಲೆ ವಿವಾಹದ ನಾಲ್ಕನೇ ದಿವಸ ದಾಂಪತ್ಯಜೀವನವನ್ನು ಆರಂಭಿಸುವುದು.

**(೧೬) ಅಂತ್ಯೇಷ್ಟಿ ಅಥವಾ ಅಪರಸಂಸ್ಕಾರಕ್ರಿಯೆಗಳು (ಮರಣೋತ್ತರಕ್ರಿಯೆಗಳು)**

ಮರಣವೆಂದರೆ ದೇಹಕ್ಕೆ ವಿನಾ ಆತ್ಮಕ್ಕಲ್ಲವಾಗಿದ್ದು ಮರಣದನಂತರ ಜೀವಾತ್ಮನು ಪುನಃ ಜನ್ಮಪಡೆಯುವುದು, ಇಲ್ಲವೇ ಮುಕ್ತಿಯನ್ನು ಪಡೆಯುವುದು ಎಂಬುದೇ ಹಿಂದೂ ಧರ್ಮದ ನಿಲುವು ಆಗಿದೆ. ಮರಣದನಂತರ ಜೀವಾತ್ಮನು ತನ್ನ ಸೂಕ್ಷ್ಮಶರೀರದಿಂದ ಒಡಗೂಡಿರುತ್ತಾನೆ ಎಂಬುದು ಕೂಡ ಹಿಂದೂಧರ್ಮದಲ್ಲಿ ಸಾಕಷ್ಟು ವಿವರವಾಗಿ, ಸ್ಪಷ್ಟವಾಗಿ ಹೇಳಿರುವ ಸಂಗತಿಯಾಗಿದೆ. ಆದುದರಿಂದ ಜೀವಿಯ ಮರಣೋತ್ತರದಲ್ಲಿ ಕೂಡ ಕೆಲವು ಸಂಸ್ಕಾರಗಳು ಮಾಡಬೇಕಾಗಿದ್ದು ಅವುಗಳೆಲ್ಲವೂ ಜೀವಿಯ ಸದ್ಗತಿಯ ಪ್ರಾಪ್ತಿಗೆ ಸಹಾಯಕವಾಗುವ ಸಂಸ್ಕಾರಗಳಾಗಿವೆ.

ಅಂತ್ಯೇಷ್ಟಿಸಂಸ್ಕಾರದಲ್ಲಿ ಮುಖ್ಯವಾಗಿ ಈ ಹದಿನೈದು ಅಂಶಗಳು ಅಡಕವಾಗಿವೆ :

(೧) ಮರಣಸನ್ನಾಹ, (೨) ಮರಣಸಂಧಿಸಂಸ್ಕಾರ, (೩) ಶವ ಹೊರುವ ವಾಹನ ಅಥವಾ ಶಿಬಿಕೆಯ ತಯಾರಿ, (೪) ಶವವನ್ನು ಗೃಹದಿಂದ ಹೊರಕ್ಕೆ ಒಯ್ಯುವಿಕೆ, ಶವದ ಸ್ಥಾನಾಂತರ ಮಾಡುವಿಕೆ, (೫) ಶವಯಾತ್ರೆ-ಸ್ಮಶಾನಯಾತ್ರೆ, (೬) ಅನುಸ್ತರಣೀ—ಗೋವು ಒಂದನ್ನು ಜೊತೆಯಲ್ಲಿ ಸ್ಮಶಾನದ ತನಕ ಕೊಂಡುಹೋಗುವಿಕೆ, (೭) ಶವದಹನ ಮಾಡುವಿಕೆ, (೮) ಉದಕಕರ್ಮ [ನೀರು ಬಿಡುವಿಕೆ], (೯) ದುಃಖ ಶಮನ ಮಾಡುವಿಕೆ, (೧೦) ಆಶೌಚಪಾಲನೆ, (೧೧) ಅಸ್ಥಿಸಂಚಯನ, (೧೨) ಶಾಂತಿ ಕರ್ಮ, (೧೩) ಸ್ಮಾರಕ, (೧೪) ಶ್ರಾದ್ಧ, (೧೫) ಸಂಪಿಡೀಕರಣ.

ಜೀವನರಂಗವನ್ನು ಪ್ರವೇಶಿಸಿದ ಜೀವನು ಸಂಸಾರಬಂಧನದಿಂದ ವಿಮುಕ್ತನಾಗುವ ವರೆಗೆ ಮತ್ತೆ ಮತ್ತೆ ಜನ್ಮಗಳನ್ನು ಎತ್ತಲೇಬೇಕಾಗುತ್ತದೆ. ಜನ್ಮಾಂತರಗಳು ಇರುವಂತೆ, ಭೂಲೋಕ, ಸ್ವರ್ಗಲೋಕ, ಪಿತೃಲೋಕ ಎಂಬಿತ್ಯಾದಿ ವಿವಿಧ ಲೋಕಗಳೂ, ಅಲ್ಲಿ ಜೀವನು ತನ್ನ ಕರ್ಮಕ್ಕೆ ಅನುಸಾರವಾಗಿ ಬಾಳುವೆ ಮಾಡುವುದೂ, ಪುನಃ ಭೂಲೋಕ ದಲ್ಲಿ ಜನ್ಮ ಎತ್ತುವುದೂ—ಇವುಗಳೆಲ್ಲ ಇದ್ದೇ ಇವೆ ಎಂದು ಹಿಂದೂಧರ್ಮದಲ್ಲಿ ಸ್ಪಷ್ಟ ವಾಗಿ ತಿಳಿಯಪಡಿಸಲಾಗಿದೆ. ಅದರಂತೆ ಜೀವನ ಮರಣೋತ್ತರಸಂಸ್ಕಾರಗಳು ಕೂಡ ತುಂಬಾ ಅರ್ಥವತ್ತಾದ ತತ್ತ್ವಗಳಿಂದ ಕೂಡಿದೆ ಎನ್ನುವುದು ಸಂಸ್ಕಾರಗಳ ಹಿಂದೆ

ಅಡಕವಾಗಿರುವ ತತ್ತ್ವ, ವಿಧಿವಿಚಾರಗಳನ್ನು ಪರಿಶೀಲಿಸಿದಾಗ ತಿಳಿಯುವುದು. ಇನ್ನೀಗ ಮರಣೋತ್ತರಸಂಸ್ಕಾರಗಳ ಕುರಿತಾಗಿ ವಿಚಾರಮಾಡೋಣ.

(೧) ಮರಣಸನ್ನಾಹ : ಮರಣವು ಸನ್ನಿಹಿತವಾಯಿತೆಂಬ ಸೂಚನೆಗಳು ಮನುಷ್ಯನಿಗೆ ಮರಣಕಾಲದಲ್ಲಿ ಸಾಮಾನ್ಯವಾಗಿ ದೊರೆತೇ ದೊರೆಯುತ್ತವೆ. ಆಗ ಮಾನಸಿಕವಾಗಿ ಮರಣಕ್ಕೆ ತಯಾರಾಗಿ, ಭಗವಂತನ ಚಿಂತನ (ಆತ್ಮಚಿಂತನ) ಮಾಡತೊಡಗುತ್ತಾ ಮರಣವೆಂದರೆ ದೇಹಕ್ಕೆ ವಿನಾ ಆತ್ಮಕ್ಕೆ ಅಲ್ಲ—ಎಂಬ ಭಾವನೆ ತಳೆಯುತ್ತಾ ಜಗದ ಸಂಸಾರಬಂಧನದ ಸಮಸ್ತ ಚಿಂತೆಗಳನ್ನೂ ತ್ಯಜಿಸುತ್ತಾ ದೇಹದಿಂದ ಪ್ರಾಣವನ್ನು ಬಿಡುವುದಕ್ಕೆ ಸನ್ನದ್ಧವಾಗುವುದೇ ಮರಣಸನ್ನಾಹ. ಮರಣದ ಸಮಯದ ಚಿಂತನೆ ಮುಂದಿನ ಜನ್ಮಕ್ಕೂ ಜನ್ಮದ ಸ್ಥಿತಿಗತಿಗಳಿಗೂ ಕಾರಣವಾಗುತ್ತದೆ. ಆದುದರಿಂದ ಉತ್ತಮವೂ ಉದಾತ್ತವೂ ಆದ ದೇವಚಿಂತನೆಯನ್ನು ಜೀವಿಯು ಮಾಡಬೇಕು. ಪ್ರಾರ್ಥನೆ, ಜಪ, ಧ್ಯಾನಾದಿಗಳನ್ನು ಯಥಾಶಕ್ತಿ ಮಾಡಬೇಕು.

(೨) ಮರಣಸಂಧಿಸಂಸ್ಕಾರ : ಮರಣಸಂಧಿಯ ವೇಳೆ, ಜೀವನು ದೇಹ ಬಿಡುವ ವೇಳೆಯಲ್ಲಿ ಪುಣ್ಯತೀರ್ಥ, ತುಳಸೀದಳ ಇವುಗಳನ್ನು ಜೀವಿಯ ಬಾಯಿಗೆ ಹಾಕಿ ದೇವರ ಹೆಸರನ್ನು ಹೇಳುವ ಸಂಸ್ಕಾರವೇ ಮರಣವಿಧಿ ಸಂಸ್ಕಾರ. ಪುಣ್ಯತೀರ್ಥ ತುಳಸೀದಳ ಗಳಿಂದ ಜೀವನು ದೇಹ ಬಿಡಲು ಅನುಕೂಲವಾಗುತ್ತದೆ. ಮಾತ್ರವಲ್ಲದೆ ದೇವರ ಹೆಸರು ಹೇಳಿ ತೀರ್ಥ ಬಾಯಿಗೆ ಎರೆಯುವುದರಿಂದ ದೇವರ ಸ್ಮರಣೆಯು ಮರಣಕಾಲ ದಲ್ಲಿ ಅವನಿಗೆ ಉಂಟಾಗಿ ಜೀವಿಯ ಮರಣೋತ್ತರಯಾತ್ರೆ ಸುಗಮವಾಗಲು ಸಹಕಾರಿ ಯಾಗುತ್ತದೆ.

(೩) ಶವವಾಹನ ತಯಾರಿ : ಜೀವವು ದೇಹವನ್ನು ತ್ಯಾಗಮಾಡಿದನಂತರ ದೇಹವು ಶವವಾಯಿತು. ಜೀವಕ್ಕೆ ದೇಹದ ಮೇಲಿನ ಮೋಹ ಹೋಗಲು ದೇಹವು ಕಾಣದಂತಾಗ ಬೇಕು. ಮಾತ್ರವಲ್ಲದೆ ಸಮಾಜದ ಆರೋಗ್ಯದೃಷ್ಟಿಯಿಂದಲೂ ಶವವನ್ನು ಸುಡುವುದು ಉಚಿತ ಹಾಗೂ ಅಗತ್ಯ. ಅಲ್ಲದೆ ಪಂಚಭೂತಗಳಿಂದ ನಿರ್ಮಾಣವಾದ ದೇಹವು ಅಗ್ನಿಯ ಮೂಲಕ ಪಂಚಮೂಲಭೂತಗಳನ್ನು ಸೇರುವಂತೆ ಮಾಡುವುದೇ ದಹನಕ್ರಿಯೆಯು ಒಂದೆ ಅಡಗಿರುವ ತತ್ತ್ವ. ಶವವನ್ನು ಸ್ಮಶಾನಕ್ಕೆ ಕೊಂಡುಹೋಗುವ ವಾಹನ ಅಥವಾ ಶಿಬಿಕೆ(ಚಟ್ಟ)ಗಳ ತಯಾರಿಯೂ ಕೂಡ ಒಂದು ಸಂಸ್ಕಾರವಾಗಿದೆ.

(೪) ಶವದ ಸ್ಥಾನಾಂತರಗೊಳಿಸುವಿಕೆ : ದೇಹತ್ಯಾಗಗೊಂಡ ವ್ಯಕ್ತಿಯ ಬಂಧು ಬಳಗದವರು ಯಥಾವಿಧಿಪೂರ್ವಕವಾಗಿ ಶವವನ್ನು ವಾಹನ ಅಥವಾ ಹೆಗಲ ಮೇಲೆ ಇಟ್ಟು ಹೊತ್ತುಕೊಂಡು ಸ್ಮಶಾನದ ಎಡೆಗೆ ಹೊರಡುವುದು.

(೫) ಸ್ಮಶಾನಯಾತ್ರೆ : ಸ್ಮಶಾನ ಸ್ಥಳಕ್ಕೆ ಮೃತನ ಹಿರಿಮಗ, ಅವನಿಲ್ಲದಿದ್ದರೆ ಉತ್ತ ರಾಧಿಕಾರಿಯನ್ನು ಮುಂದಿಟ್ಟುಕೊಂಡು ಬಂಧುಬಾಂಧವರು ಶವವನ್ನು ಸಾಗಿಸಿಕೊಂಡು ಹೋಗುವುದು.

(೬) ಅನುಸ್ತರಣೀ : ಶವದ ಒಡನೆ ಜೀವಂತ ಗೋವು ಒಂದನ್ನು ಕರೆದೊಯ್ಯುವ ಕ್ರಮ ಇದ್ದು ಜೀವಾತ್ಮನು ಮೃತ್ಯುವಿನಿಂದ ಅಮರತ್ವಕ್ಕೆ ಏರಲು ಗೋವು ನೆರವಾಗು

ತ್ತದೆ ಎಂದು ನಂಬಲಾಗಿದೆ. ಗೋವನ್ನು ಸ್ಮಶಾನಯಾತ್ರಾನಂತರ ಯಥಾಯೋಗ್ಯ ವ್ಯಕ್ತಿಗೆ ದಾನವಾಗಿ ಕೊಡಲಾಗುವುದು.

(೭) ಶವದಹನಸಂಸ್ಕಾರ : ಯಥಾವಿಧಿಪೂರ್ವಕವಾಗಿ ಶವವನ್ನು ಸ್ಮಶಾನದಲ್ಲಿ ದಹನ ಗೊಳಿಸುವುದು.

(೮) ಉದಕಕರ್ಮಸಂಸ್ಕಾರ : ವ್ಯಕ್ತಿಯು ಮೃತಪಟ್ಟ ಸ್ಥಳದಲ್ಲಿ ದೇಹತ್ಯಾಗವಾದ ದಿನದಿಂದ ದಶರಾತ್ರಿ ತನಕ ನೀರನ್ನು ಇಟ್ಟು ಜೀವನಿಗೆ ಅರ್ಪಿಸುವುದು. ನೀರನ್ನು ಪಾತ್ರೆ ಯೊಂದರಲ್ಲಿ ಇಟ್ಟು ಹರಿದ್ರಾಖಂಡಸಹಿತವಾಗಿ (ಅರಸಿನದ ತುಂಡು) ನೂಲನ್ನು ಕಟ್ಟಿ ಎತ್ತರದಿಂದ ಇಳಿಬಿಡುವುದು. ನೂಲಿನ ಮೂಲಕ ಮೃತನ ಆತ್ಮ ನೀರನ್ನು ಸ್ವೀಕರಿಸು ತ್ತದೆ ಎಂಬುದೇ ಈ ಸಂಸ್ಕಾರದಲ್ಲಿ ಅಡಗಿರುವ ತತ್ತ್ವಾರ್ಥವಾಗಿದೆ.

(೯) ದುಃಖಶಮನ : ಮರಣಪಟ್ಟವರ ನಿಕಟಬಂಧುಗಳಿಗೆ, ಸಂಸಾರದವರಿಗೆ, ಸಮಾ ಜದ ಬಂಧುಗಳು ಮಿತ್ರರು ಎಲ್ಲರೂ ಸೇರಿ ವ್ಯಕ್ತಿಯ ಮರಣದಿಂದ ದುಃಖವನ್ನು ತಡೆ ಯಲು ಸಮಾಧಾನ-ಶಾಂತಿಗಳನ್ನು, ವಿವೇಕ-ವೈರಾಗ್ಯಯುತವಾದ ನುಡಿಗಳು, ಶಾಸ್ತ್ರಾ ಧಾರದ ಕಥೆ ಉದಾಹರಣೆಗಳ ಮೂಲಕ ನೀಡುವುದು.

(೧೦) ಆಶೌಚ : ಮರಣಪಟ್ಟ ವ್ಯಕ್ತಿಯ ಸಂಸಾರದವರು ಯಥೋಚಿತವಾದ ಮರ ಣೋತ್ತರ ಸಂಸ್ಕಾರವನ್ನು ಪೂರ್ತಿಮಾಡುವ ಅವಧಿಯು ೧೧ ದಿನಗಳಲ್ಲಿ ಮುಗಿಯು ತ್ತದೆ. ಆತನಕ ಸಮಾಜದ ಇತರ ವ್ಯಕ್ತಿಗಳೊಡನೆ ವ್ಯವಹಾರ, ಒಡನಾಟ ಇಟ್ಟುಕೊಳ್ಳ ದಿರುವುದೇ ಆಶೌಚ. ಆಶೌಚದ ಮುಖ್ಯ ನಿಬಂಧನೆಯು ವ್ಯಕ್ತಿಯ ಮರಣದ ಅನಂತರದ ೧೧ ದಿವಸಗಳಲ್ಲಿ ಮುಗಿಯುತ್ತದೆ. ತದನಂತರದ ದಿನಗಳು ಉತ್ತರಕ್ರಿಯಾಸಂಸ್ಕಾರದ ದಿನಗಳಾಗಿವೆ. ಆಶೌಚವನ್ನು ಸೂತಕ ಎಂದೂ ಕರೆಯುತ್ತಾರೆ.

(೧೧) ಅಸ್ಥಿಸಂಚಯನ : ಮರಣಪಟ್ಟ ವ್ಯಕ್ತಿಯ ಶವದಹನದ ಅನಂತರದ ನಾಲ್ಕನೇ ದಿವಸದಲ್ಲಿ ಅಸ್ಥಿಯನ್ನು ಸಂಗ್ರಹಿಸಿ ಭದ್ರವಾಗಿ ಇಡುವುದು. ಆಮೇಲೆ ಶಾಸ್ತ್ರೋಕ್ತ ವಾದ ದಿವಸದಲ್ಲಿ ಪವಿತ್ರವಾದ ತೀರ್ಥ, ನದಿ, ಸಂಗಮಕ್ಷೇತ್ರಗಳಲ್ಲಿ ವಿಧಿಯುಕ್ತವಾಗಿ ಅಸ್ಥಿಯನ್ನು ಅರ್ಪಿಸಿ ಮರಣಹೊಂದಿದ ಜೀವಿಯ ಮುಕ್ತಿಗಾಗಿ ಪ್ರಾರ್ಥಿಸುವುದು.

(೧೨) ಶಾಂತಿಕರ್ಮ : ಮೃತಹೊಂದಿದ ವ್ಯಕ್ತಿಯ ಸದ್ಗತಿಗಾಗಿ ಮಾಡುವ ಶಾಸ್ತ್ರೋ ಕ್ತವಾದ ಹೋಮ, ಪ್ರಾರ್ಥನೆ, ದಾನಾದಿ ಕರ್ಮವನ್ನು ಶಾಂತಿಕರ್ಮ ಎಂದು ಹೇಳುವು ದಾಗಿದೆ. ಈ ಶಾಂತಿಕರ್ಮಗಳೆಲ್ಲವನ್ನೂ ಜೀವಿಯ ಮರಣೋತ್ತರದಲ್ಲಿ ಹನ್ನೊಂದನೇ ದಿನದಿಂದ ಹದಿಮೂರನೇ ದಿನದ ತನಕ ನಿರ್ವಹಿಸುತ್ತಾರೆ.

(೧೩) ಸ್ಮಾರಕ : ಶವದಹನ ಮಾಡಿದಲ್ಲಿ ಸ್ವರ್ಣಸ್ಮಾರಕ, ತುಳಸಿಗಿಡ ಅಥವಾ ಸ್ಮಾರಕ ಮಂದಿರ, ಸಮಾಧಿ ಇವುಗಳನ್ನು ಮರಣಪಟ್ಟ ವ್ಯಕ್ತಿಯ ನೆನಪಿಗಾಗಿ ಅಸ್ಥಿಸಂಚಯನ ಮಾಡಿದ ದಿನ (ಸ್ಮಶಾನದಲ್ಲೇ) ಸಂಸ್ಥಾಪನೆ ಮಾಡುವುದು.

(೧೪) ಶ್ರಾದ್ಧ : ಸತ್ತ ವ್ಯಕ್ತಿಯ ಆತ್ಮಶಾಂತಿಗಾಗಿ, ಶಾಸ್ತ್ರೋಕ್ತವಾದ ರೀತಿಯಲ್ಲಿ ಪಿಂಡ, ತರ್ಪಣ ಇತ್ಯಾದಿ ಕ್ರಿಯೆಗಳನ್ನು ಮಾಡುವಿಕೆ. ಮರಣೋತ್ತರದಲ್ಲಿ ಹನ್ನೊಂದ ರಿಂದ ಹದಿಮೂರನೇ ದಿನದ ತನಕ ಈ ಕ್ರಿಯೆಗಳನ್ನು ಮಾಡುತ್ತಾರೆ.

(೧೫) ಸಪಿಂಡೀಕರಣ : ಪಿತೃಲೋಕದಲ್ಲಿ ಇರುವ ಪಿತೃಗಳು, ಅಂದರೆ ಹಿಂದೆ ಮಡಿದವರು, ಅವರ ಒಡನೆ (ದೇಹತ್ಯಾಗಮಾಡಿದ ಜೀವಿಯು) ಸೇರಿ ಪಿತೃವಾಗುವಂತೆ ಅನುಕೂಲ ಮಾಡುವುದೇ ಸಪಿಂಡೀಕರಣಶ್ರಾದ್ಧಸಂಸ್ಕಾರ. ಸಪಿಂಡೀಕರಣದ ತನಕ ಮರಣಪಟ್ಟ ಜೀವನು ಪ್ರೇತನಾಗಿರುತ್ತಾನೆ. ಸಪಿಂಡೀಕರಣ ಕ್ರಿಯೆಯಿಂದ ಪ್ರೇತತ್ವ ನೀಗಿ ಪಿತೃವಾಗುತ್ತಾನೆ.

ಪ್ರಥಮ ಆಬ್ದಿಕ : ಜೀವಿಯು ದೇಹತ್ಯಾಗ ಮಾಡಿದ ವರ್ಷ ಒಂದಕ್ಕೆ ಕೂಡಿಬರುವ ತಿಥಿಯನ್ನು ಪುಣ್ಯತಿಥಿ ಎಂದು ಕರೆದು, ಪಿತೃಲೋಕದಲ್ಲಿರುವ, ಜೀವಿಗೆ ತೃಪ್ತಿಯಾಗಲೆಂದು ಮಾಡುವ ಕ್ರಿಯೆಯೇ ಪ್ರಥಮ ಆಬ್ದಿಕ ಕ್ರಿಯೆಯಾಗಿದೆ. ಈ ಕ್ರಿಯೆಗೆ ವರ್ಷಾಂತಿಕ ಶ್ರಾದ್ಧ ಎಂದೂ ಹೇಳುತ್ತಾರೆ. ಒಂದು ವರ್ಷದ ಪರ್ಯಂತ ಮಾಸಿಕ ಶ್ರಾದ್ಧಗಳನ್ನು ಮಾಡಿ ಅನಂತರ ಪ್ರತಿವರ್ಷ ಮೃತತಿಥಿಯಂದು ಶ್ರಾದ್ಧಕ್ರಿಯೆಯನ್ನು ಮಾಡಬೇಕಾಗಿದೆ. ಈ ಮರಣೋತ್ತರಕ್ರಿಯೆಗಳಲ್ಲಿ ಹಿರಿಯರಿಗೆ ಕೃತಜ್ಞತೆ ಸಮರ್ಪಣೆ, ಜೀವಾತ್ಮನ ಪರಲೋಕಯಾತ್ರೆಗೆ ಸಹಾಯ, ಮುಕ್ತಿಗಾಗಿ ಪ್ರಾರ್ಥನೆ. ಪಿತೃಲೋಕದಲ್ಲಿರುವ ತಮ್ಮ ಪಿತೃಗಳ ಆಶೀರ್ವಾದಯಾಚನೆ ಇವುಗಳೆಲ್ಲಾ ಒಳಗೊಂಡಿರುತ್ತವೆ.

ಈ ರೀತಿ ಹಿಂದೂಧರ್ಮದಲ್ಲಿ ಮನುಷ್ಯನ ಜೀವನದ ಇಹ ಮತ್ತು ಪರಗಳ ಸುಖ, ಸುಭದ್ರತೆಗಳಿಗಾಗಿಯೂ ಬಾಳಿನ ಪರಮಗುರಿಯಾದ ಮೋಕ್ಷಾನಂದಸಾಧನೆ ಸಾಧ್ಯವಾಗಲು ಸಹಾಯಕವಾಗಿಯೂ ಅನೇಕ ವಿಧದ ಸಂಸ್ಕಾರಗಳು ಹೇಳಲ್ಪಟ್ಟಿವೆ. ಈ ಸಂಸ್ಕಾರಗಳನ್ನು ಅನುಸರಿಸಿಕೊಂಡು ತನ್ನ ತನ್ನ ವರ್ಣಕ್ಕೆ ಅನುಗುಣವಾಗಿ ಜೀವನದ ನಾಲ್ಕು ಆಶ್ರಮಧರ್ಮಗಳನ್ನು ಹಿಂದುವು ಪರಿಪಾಲಿಸಬೇಕು ಎಂದು ಹಿಂದೂಧರ್ಮದಲ್ಲಿ ಸುವಿಸ್ತಾರವಾಗಿ ಹೇಳಲಾಗಿದೆ.

## ನಾಲ್ಕು ಆಶ್ರಮಗಳು ಮತ್ತು ಆಶ್ರಮಧರ್ಮ ವಿಚಾರಗಳು

ಜೀವನು ಸತ್ಯದೇಗುಲಕ್ಕೆ ಅಥವಾ ಮುಕ್ತಿಮಂದಿರಕ್ಕೆ ತೆರಳುವ ಜೀವನ ಎಂಬ ಈ ಪ್ರಯಾಣದಲ್ಲಿ ಜೀವಿಯು ನಾಲ್ಕು ಹಂತಗಳನ್ನು ಹತ್ತಿಹೋಗಬೇಕಾಗುತ್ತದೆ ಹಾಗೆಯೇ ಪ್ರತಿಹಂತವೂ ಮುಂದಿನ ಹಂತಕ್ಕೆ ತಯಾರಿಯಾಗಿದ್ದು ಒಂದಕ್ಕೊಂದು ಪೂರಕವಾಗಿರುತ್ತದೆ. ಅಲ್ಲದೆ ಜೀವನದಲ್ಲಿ ವ್ಯಕ್ತಿಯು ಸಾಧಿಸಬೇಕಾದ ಸಾಧನೆಗಳು ಯಾವುವು ಎಂಬುದರ ಬಗ್ಗೆ ಹಿಂದೂಧರ್ಮದಲ್ಲಿ ವಿಸ್ತಾರವಾದ ವಿವರಗಳು ಇದ್ದು ಸಂಗ್ರಹವಾಗಿ ಅವನ್ನು ನಾಲ್ಕು ಪುರುಷಾರ್ಥಗಳು ಎಂದು ಕರೆಯಲಾಗಿದೆ. ಇದನ್ನೇ ಚತುರ್ವಿಧ ಪುರುಷಾರ್ಥಗಳು ಎಂದೂ ಹೇಳುವುದಾಗಿದೆ.

ಚತುರ್ವಿಧ ಪುರುಷಾರ್ಥಗಳು : ಪುರುಷಾರ್ಥಗಳು ಧರ್ಮ, ಅರ್ಥ, ಕಾಮ, ಮೋಕ್ಷ ಎಂದು ನಾಲ್ಕು ವಿಧ. ವ್ಯಕ್ತಿಯ ಜೀವನದ ಬೇಕುಬೇಡಿಕೆಗಳು ಎಲ್ಲವೂ ಈ ಅಂಶಗಳಲ್ಲಿ ಅಡಕವಾಗಿದ್ದು ಜೀವನದ ಎಲ್ಲಾ ಆಗುಹೋಗುಗಳಿಗೆ ಧರ್ಮವು ಆಧಾರವೂ ಮೂಲವೂ ಆಗಿರುತ್ತದೆ. ಹಾಗೆಯೆ ಮೋಕ್ಷವು ಜೀವನದ ಪರಮೋತ್ಕೃಷ್ಟವಾದ ಗುರಿಯಾಗಿರುತ್ತದೆ. ಧರ್ಮದ ಸಂಪಾದನೆಯಿಂದ ಆರಂಭವಾದ ಬಾಳು, ಅರ್ಥಕಾಮಗಳನ್ನು ಪೂರೈಸಿಕೊಂಡು

ಕೊನೆಗೆ ಮೋಕ್ಷದಲ್ಲಿ ಕೊನೆಗೊಳ್ಳಬೇಕು ಎಂಬ ಈ ತತ್ತ್ವವನ್ನು ಹಿಂದೂಧರ್ಮವು ಹೇಳಿರುತ್ತದೆ. ಅದಕ್ಕೆ ಅನುಗುಣವಾಗಿ ಜೀವಿಯು ಮಾಡಿದು ಸುಭದ್ರ ಹಾಗೂ ಸುದೃಢನಾಗಿ ಬರುವಂತೆ ನಾಲ್ಕು ಆಶ್ರಮದ ಹಂತಗಳನ್ನು ಹೇಳಿ ಆಯಾಯಾ ಆಶ್ರಮಗಳಲ್ಲಿ ಅನುಸರಿಸಬೇಕಾಗಿರುವ ನಿರ್ದಿಷ್ಟವಾದ ಧರ್ಮಗಳನ್ನು ಹಿಂದೂಧರ್ಮದಲ್ಲಿ ವಿವರಿಸಲಾಗಿದೆ. ವರ್ಣಾಶ್ರಮದ ಜೀವನ ಮತ್ತು ಜೀವನದ ನಾಲ್ಕು ಪುರುಷಾರ್ಥಗಳ ಸಂಪಾದನೆ ಇವುಗಳೆಲ್ಲದಕ್ಕೂ ಧರ್ಮವೇ ಆಧಾರವಾಗಿರಬೇಕು ಎಂಬುದು ಹಿಂದೂಧರ್ಮದ ನಿಶ್ಚಯದ ಹೇಳಿಕೆಯಾಗಿರುತ್ತದೆ.

**ಧರ್ಮ**

ಧರ್ಮ ಎಂಬುದು ಧೃ ಎಂಬ ಧಾತುವಿನಿಂದ ಹುಟ್ಟಿದ ಶಬ್ದವಾಗಿದೆ. ಧೃ ಎಂದರೆ ಧರಿಸುವುದು. ಯಾವುದು ಧರಿಸಬಲ್ಲದ್ದು ಆಗಿದೆಯೋ ಅದು ಧರ್ಮ.

"ಧಾರಣಾತ್ ಧರ್ಮ ಇತ್ಯಾಹುಃ" (ಯಾವುದು ಎಲ್ಲವನ್ನೂ ಅದರ ಕಟ್ಟುಪಾಡುಗಳಿಗೆ ತಕ್ಕಂತೆ ರಕ್ಷಿಸಬಲ್ಲದೋ ಅದೇ ಧರ್ಮ) ವ್ಯಕ್ತಿಯ ಹಾಗೂ ಸಮಾಜದ ಅಭಿವೃದ್ಧಿಯನ್ನು ಸಾಧಿಸಿ ಯಾವುದು ಜೀವನವನ್ನು ಧರಿಸಿ ನಿಲ್ಲಿಸುತ್ತದೆಯೋ, ಬೆಂಬಲಿಸುತ್ತದೆಯೋ, ಜೀವನಾಧಾರವಾಗುತ್ತದೋ ಆ ಶಕ್ತಿಯೇ ಧರ್ಮ. ಧರ್ಮ ಎಂದರೆ ಅಂತರ್ಯದ ಬೆಳವಣಿಗೆ ಅಥವಾ ವಿಕಾಸವಾಗಿದ್ದು ವ್ಯಕ್ತಿಯ ಪ್ರಸ್ತುತದ ವಿಕಾಸ ಸ್ಥಿತಿಯಲ್ಲಿ ಅವನ ಅಸ್ತಿತ್ವವನ್ನು ಉಳಿಸಲು ಆಧಾರವಾಗಿದ್ದು ಆಂತರಿಕವಾದ ವಿಕಾಸವಾಗಿ ಜೀವಿಯ ಅಭ್ಯುದಯ ನಿಃಶ್ರೇಯಸಗಳ ಸಾಧನೆಗೆ ಪುರೋಗಮನಕ್ಕೆ ಸಹಾಯವಾಗುವ ದಿವ್ಯಶಕ್ತಿ ಯಾವುದು ಇದೆಯೋ ಅದೇ ಧರ್ಮ. ಧಾರಣ ಎಂದರೆ ಪೋಷಣೆ ಎಂದೂ ಅರ್ಥವಾಗುತ್ತದೆ. ವ್ಯಕ್ತಿಗತವಾಗಿ ಧಾರಣಮಾಡುವ ಶಕ್ತಿ ವ್ಯಕ್ತಿಧರ್ಮ ಆಗುತ್ತದೆ. ಸಾಮೂಹಿಕವಾದಾಗ ಸಮಾಜಧರ್ಮ, ರಾಷ್ಟ್ರೀಯವಾದಾಗ ರಾಷ್ಟ್ರಧರ್ಮ, ವಂಗಡಕ್ಕೆ ಸಂಬಂಧಿಸಿದುದು ಆದಾಗ ಪಂಗಡಧರ್ಮ, ವಸ್ತುಜಾತಿಯ ಸ್ವಭಾವ ಶಕ್ತಿ ಪ್ರಕಟಣೆಯನ್ನು ಅನುಸರಿಸಿ ಹೇಳುವಾಗ ಜಾತಿಧರ್ಮ ಎಂದು ಹೇಳುತ್ತಾರೆ. ಹೀಗೆ ಧರ್ಮದ ಅರ್ಥ ವಿಶಾಲವಾದುದು, ಅದರ ವ್ಯಾಪ್ತಿ ಬಹುಮುಖವಾದುದು.

ಮಹಾಭಾರತ ಗ್ರಂಥದಲ್ಲಿ ಧರ್ಮದ ಕುರಿತಾದ ವಿವರ ನೀಡುವ ಸುಂದರವಾದ ಶ್ಲೋಕವೊಂದು ಇದ್ದು ಅದರ ಪಾಠ ಹೀಗಿದೆ :

> **ಧಾರಣಾದ್ ಧರ್ಮ ಇತ್ಯಾಹುಃ ಧರ್ಮೋ ಧಾರಯತೇ ಪ್ರಜಾಃ ।**
> **ಯಾತ್ ಸ್ಯಾತ್ ಧಾರಣಸಂಯುಕ್ತಂ ಸ ಧರ್ಮ ಇತಿ ನಿಶ್ಚಯಃ ॥**

"ಧಾರಣಮಾಡುವುದೇ ಧರ್ಮ, ಧರ್ಮವೇ ಸಮಸ್ತರನ್ನು ಧರಿಸಿ ನಿಲ್ಲಿಸುತ್ತದೆ. ಧರ್ಮದಿಂದಲೇ ಸರ್ವರೂ ಕಟ್ಟಲ್ಪಟ್ಟಿದ್ದಾರೆ (ಅಂಕಿತದಲ್ಲಿ ಇರಿಸಲ್ಪಟ್ಟಿದ್ದಾರೆ). ಯಾವುದರಿಂದ ಸಕಲ ಪ್ರಾಣಿಸಮೂಹದ ಧಾರಣವಾಗುತ್ತದೋ ಅದೇ ಧರ್ಮ."

> **ಯತೋಽಭ್ಯುದಯನಿಃಶ್ರೇಯಸಸಿದ್ಧಿಃ ಸ ಧರ್ಮಃ ।**

"ಯಾವುದರಿಂದ ಅಭ್ಯುದಯ ಮತ್ತು ನಿಃಶ್ರೇಯಸ್ಸು ಸಿದ್ಧಿಸುವುದೋ ಅದೇ ಧರ್ಮ" ಎಂದು ವೈಶೇಷಿಕ ಸೂತ್ರ ನಿರೂಪಿಸುತ್ತದೆ.

ಒಟ್ಟಿನಲ್ಲಿ ಧರ್ಮ ಎಂದರೆ ಜೀವಿಯ ಜೀವನವು ಉತ್ತಮವಾಗುವಂತೆ ಆತ್ಮದ ಹಿತವೂ, ಲೋಕದ ಕಲ್ಯಾಣವೂ ಆಗುವಂತೆ ಜೀವಿಗೆ ಸಹಕಾರಿಯಾಗುವ ಸತ್ಕಾರ್ಯಗಳು, ನೀತಿನಿಯಮಗಳು ಇವುಗಳೆಲ್ಲದರ ಸಂಗ್ರಹ. ಧರ್ಮವು ವ್ಯಕ್ತಿಯ ಅಂತರ್ಯ ಹಾಗೂ ಬಾಹ್ಯಪ್ರವೃತ್ತಿಗಳನ್ನು ನಿಶ್ಚಯಿಸುವುದಾಗಿದ್ದು ನಿಶ್ಚಿತವಾದ ಸಂದರ್ಭಗಳಲ್ಲಿ ಅದು ವ್ಯಕ್ತಿಯ ಶಾರೀರಿಕ ಮತ್ತು ಮಾನಸಿಕ ಪ್ರತಿಕ್ರಿಯೆಗಳ ಪ್ರಭುತ್ವವನ್ನು ಮಾಡುತ್ತದೆ. ಧರ್ಮವು ಮುಖ್ಯವಾಗಿ ಮೂರು ವಿಧವಾಗಿ ಜೀವನದಲ್ಲಿ ಪ್ರಯೋಗಕ್ಕೆ ಬರುತ್ತದೆ. ಅವು ಯಾವುವೆಂದರೆ :

(೧) ಸಹಜಧರ್ಮ, (೨) ನ್ಯಾಯಧರ್ಮ, (೩) ಪ್ರೀತಿಧರ್ಮ.

(೧) ಸಹಜಧರ್ಮವೆಂದರೆ ವಸ್ತುವಿನ ಅಥವಾ ವ್ಯಕ್ತಿಯ ಸಹಜಲಕ್ಷಣದಿಂದ ಕೂಡಿದ ಧರ್ಮ. ಉದಾಹರಣೆಗೆ, ಬೆಂಕಿಯ ಸಹಜಧರ್ಮವು ಸುಡುವಿಕೆ. ವಯಸ್ಸಾದಂತೆ ಶರೀರ ಮುಪ್ಪಾಗುವುದು ಶರೀರಧರ್ಮ. ವಸಂತಋತುವಿನಲ್ಲಿ ಗಿಡಮರಗಳು ಹೂ ಹಣ್ಣುಗಳನ್ನು ಫಲಬಿಡುವುದು ಋತುಧರ್ಮ. ಹೀಗೆ ಮನುಷ್ಯನಾಗಲಿ, ವಸ್ತುವಾಗಲಿ ಯಾವ ತನ್ನ ಸಹಜವಾದ ಗುಣದಿಂದ ಅಥವಾ ಶಕ್ತಿಯಿಂದ ತನ್ನ ಹಿತ ಹಾಗೂ ಇತರರ ಉಪಕಾರಕ್ಕೆ ಒದಗುವಂತಾಗುವುದೋ ಆ ಗುಣಶಕ್ತಿವಿಶೇಷವೇ ಸಹಜಧರ್ಮವಾಗಿರುತ್ತದೆ.

(೨) ವ್ಯಕ್ತಿಗತವಾಗಿ, ಸಾಮಾಜಿಕವಾಗಿ ವ್ಯಕ್ತಿಯ ಗುಣಧರ್ಮಗಳು ಪರಸ್ಪರ ಜೀವರುಗಳ ವಿಕಾಸಕ್ಕೆ ತೊಂದರೆಯಾಗದಂತೆ ಹತೋಟಿಯಲ್ಲಿರಿಸುವುದೇ, ನ್ಯಾಯವ್ಯವಸ್ಥೆಯೇ ನ್ಯಾಯಧರ್ಮ. ಬರೇ ತಾಮಸಿಕ ಗುಣದ ವ್ಯಕ್ತಿ ಕೊಲೆಗಡುಕನಾಗಿರುತ್ತಾನೆ. ಅವನಿಂದ ಇತರರಿಗೂ, ತನಗೂ ತೊಂದರೆಯಾಗದಂತೆ ಅವನನ್ನು ಕಾನೂನುಶಿಕ್ಷೆಗಳಿಂದ ಹತೋಟಿಯಲ್ಲಿಡುವುದೇ ನ್ಯಾಯಧರ್ಮವಾಗಿರುತ್ತದೆ.

(೩) ಪ್ರೀತಿಧರ್ಮ : ವ್ಯಕ್ತಿಯು ಜೀವನವನ್ನು ಮತ್ತು ಜೀವಿಗಳನ್ನು ಪ್ರೀತಿಸಿ ಆತ್ಮೋದ್ಧಾರಕ್ಕಾಗಿ ವಿಶ್ವಪ್ರೇಮ ಬೆಳೆಸಿಕೊಂಡು ಬಾಳುವುದೇ ಪ್ರೀತಿಧರ್ಮ. ಇದರಲ್ಲಿ ಸಮಾಜದ ಸ್ನೇಹ, ಬಾಂಧವ್ಯ ಇವುಗಳೆಲ್ಲ ಅಡಕವಾಗಿದ್ದು ಒಟ್ಟಿನಲ್ಲಿ ಆತ್ಮದ ಹಿತ, ಲೋಕದ ಕಲ್ಯಾಣ ಎಂಬ ತತ್ತ್ವ ಅಡಗಿರುತ್ತದೆ.

ಧರ್ಮದಲ್ಲಿ ಮುಖ್ಯವಾಗಿ ಏಳು ಬಗೆಗಳಿವೆ. ಇವನ್ನೆಲ್ಲಾ ಅನುಕೂಲಕ್ಕಾಗಿ ಸಪ್ತಧರ್ಮ ಎನ್ನುತ್ತಾರೆ. ಇವುಗಳೆಲ್ಲಾ ಒಂದೇ ಧರ್ಮದ ವಿವಿಧ ರೂಪಭೇದಗಳಾಗಿದ್ದು ವ್ಯಕ್ತಿ, ಸಮಾಜ, ಸನ್ನಿವೇಶಗಳಿಗೆ ಅನುಸಾರವಾಗಿ ಈ ರೀತಿ ಬೇರೆ ಬೇರೆ ರೂಪಗಳನ್ನು ತಳೆದು ಜೀವನದಲ್ಲಿ ಪ್ರಯೋಗಕ್ಕೆ ಬರುವುದಾಗಿದೆ. ವಿದ್ಯುಚ್ಛಕ್ತಿಯು ಎರಡಾಗಿಲ್ಲದೆ ಒಂದೇ ಆಗಿದ್ದು ವಿವಿಧ ರೀತಿಯ ಕೆಲಸಕಾರ್ಯಗಳಿಗೆ ಬೇರೆ ಬೇರೆ ಕ್ರಮಗಳಲ್ಲಿ ಉಪಯೋಗಿಸಲ್ಪಟ್ಟರೂ ಕೂಡ ಮೂಲತಃ ಒಂದೇ ಆಗಿರುವಂತೆಯೇ ಧರ್ಮವೂ ಕೂಡ ಹಲವು ವಿಧಗಳಲ್ಲಿ, ಬಗೆಬಗೆಯ ಕೆಲಸಕಾರ್ಯಗಳಲ್ಲಿ ಪ್ರಕಟಗೊಂಡರೂ ಸಹ ಮೂಲತಃ ಏಕೈಕವಾಗಿರುತ್ತದೆ. ಸಪ್ತಧರ್ಮಗಳು ಯಾವುವೆಂದರೆ :

(೧) ನಿತ್ಯಧರ್ಮ, (೨) ಸ್ವಧರ್ಮ, (೩) ವರ್ಣಧರ್ಮ, (೪) ಆಶ್ರಮಧರ್ಮ, (೫) ನಿಮಿತ್ತಧರ್ಮ, (೬) ಆಪದ್ಧರ್ಮ, (೭) ಯುಗಧರ್ಮ.

ನಿತ್ಯಧರ್ಮ : ಸರ್ವಮಾನವರಿಗೂ ಸಂಬಂಧಿಸಿದ ಧರ್ಮವೇ ನಿತ್ಯಧರ್ಮ. ಅಂದರೆ ನಿತ್ಯಜೀವನದಲ್ಲಿ ವ್ಯಕ್ತಿಗೆ ಜೀವನವನ್ನು ಉತ್ತಮವೂ, ಯಶೋದಾಯಕವೂ ಆಗಲು ಬೇಕಾದ ನೈತಿಕ ಬಲ-ಶಕ್ತಿಗಳನ್ನು ನೀಡುವ ಧರ್ಮವೇ ನಿತ್ಯಧರ್ಮ. ನಿತ್ಯಧರ್ಮದ ಲಕ್ಷಣಗಳೇನು ಎಂಬುದನ್ನು ತಿಳಿಸುತ್ತಾ ಮನುಮಹರ್ಷಿಗಳು ಹೀಗೆ ಹೇಳಿರುತ್ತಾರೆ :

> ಧೃತಿಃ ಕ್ಷಮಾ ದಮೋಽಸ್ತೇಯಂ ಶೌಚಮಿನ್ದ್ರಿಯನಿಗ್ರಹಃ ।
> ಧೀರ್ವಿದ್ಯಾಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಮ್ ॥
>
> —ಮನುಸ್ಮೃತಿ, ೬-೯೨

"ಧೈರ್ಯ ಮತ್ತು ದೃಢತೆ, ಕ್ಷಮೆ, ಮನೋನಿಗ್ರಹ, ಅಸ್ತೇಯ, ಅಂತರ್ಬಾಹ್ಯ ಶುದ್ಧಿ, ಇಂದ್ರಿಯಗಳ ಮೇಲಿನ ಹತೋಟಿ, ಬುದ್ಧಿಯನ್ನು ಬೆಳೆಸುವಿಕೆ, ವಿದ್ಯೆ, ಸತ್ಯ ಶೀಲತೆ ಮತ್ತು ಅಕ್ರೋಧ—ಎಂಬ ಹತ್ತು ಅಂಶಗಳು ಧರ್ಮದ ಲಕ್ಷಣಗಳಾಗಿವೆ."

ಸ್ವಧರ್ಮ : ಮನುಷ್ಯನಲ್ಲಿರುವ ಆಂತರಿಕವಾದ ಶಕ್ತಿವಿಶೇಷಗಳೇ ಸ್ವಧರ್ಮ. ಸಂಗೀತ, ಶಿಲ್ಪ, ಸಾಹಿತ್ಯ, ವೇದಾಂತ ಇತ್ಯಾದಿ ವಿಚಾರಗಳಲ್ಲಿ ಇರುವ ಒಲವೇ ಆಂತರಿಕ ಶಕ್ತಿ. ಈ ಶಕ್ತಿಯ ವಿಕಾಸವನ್ನು ಮಾಡಲು ಶ್ರಮಿಸುವುದೇ ಸ್ವಧರ್ಮ. ಬೆಂಕಿಗೆ ಸುಡುವ ಶಕ್ತಿಯು ಸ್ವಧರ್ಮ, ಸಕ್ಕರೆಯ ಸಿಹಿಯು ಅದರ ಸ್ವಧರ್ಮ. ಅವರವರ ಮತನಂಬಿಕೆ ಗಳು ಅವರವರ ಸ್ವಧರ್ಮಗಳಾಗಿವೆ.

ವರ್ಣಧರ್ಮ : ಮನುಷ್ಯನ ಉದ್ಯೋಗ ಮತ್ತು ಸಮಾಜದಲ್ಲಿ ಅವನ ಸ್ಥಾನಮಾನ ಗಳನ್ನು ಅನುಸರಿಸಿ ಬರುವ ಧರ್ಮವೇ ವರ್ಣಧರ್ಮ. ದೇಶದ ಅರಸನೊಬ್ಬನು ರಾಜ್ಯ ವನ್ನು ಆಳುತ್ತಾನೆ ಹಾಗೂ ಯುದ್ಧವನ್ನು ಮಾಡುತ್ತಾನೆ. ರಾಜ್ಯಪಾಳುವುದು, ಯುದ್ಧ ಮಾಡುವುದು ರಾಜನ ಧರ್ಮ. ಪಾಠ ಬೋಧಿಸುವುದು ಅಧ್ಯಾಪಕನ ಧರ್ಮ. ವ್ಯಾಪಾರ ಮಾಡುವುದು ವೈಶ್ಯನ, ವ್ಯಾಪಾರಿಯ ಧರ್ಮ. ಹೀಗೆ ವರ್ಣಧರ್ಮವು ವ್ಯಕ್ತಿಯ ಉದ್ಯೋಗ-ಸ್ಥಾನಮಾನಗಳನ್ನು ಹೊಂದಿಕೊಂಡಿರುತ್ತದೆ.

ಆಶ್ರಮಧರ್ಮ : ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಿ—ಎಂಬ ಜೀವನದ ನಾಲ್ಕು ಆಶ್ರಮಿಗಳಿಗೆ ಸಂಬಂಧಿಸಿದ ಕರ್ತವ್ಯ, ದೀಕ್ಷಾವ್ರತ, ಸಂಸ್ಕಾರವಿಶೇಷಗಳೇ ಆಶ್ರಮಧರ್ಮಗಳು.

ನಿಮಿತ್ತಧರ್ಮ : ನಿಶ್ಚಿತವಾದ ಉದ್ದೇಶಸಾಧನೆಗಾಗಿ ಸ್ವಲ್ಪಕಾಲ ನಡೆಸುವ ಧರ್ಮವೇ ನಿಮಿತ್ತಧರ್ಮ. ಇದರಲ್ಲಿ ಕಾಮ್ಯಧರ್ಮ ಮತ್ತು ಶುದ್ಧಿಕ್ರಿಯಾಧರ್ಮ ಎಂದು ಎರಡು ಒಳಭೇದಗಳಿವೆ. ಇಷ್ಟಾರ್ಥಸಿದ್ಧಿಗಾಗಿ ಮಾಡುವ ಯಜ್ಞ, ಪೂಜೆ, ವ್ರತಗಳೇ ಕಾಮ್ಯ ಧರ್ಮ. ದೋಷಪ್ರಾಯಶ್ಚಿತ್ತಸಂಬಂಧವಾಗಿ ನಡೆಸುವ ಶಾಸ್ತ್ರೋಕ್ತವಾದ ಕ್ರಿಯಾದಿ ಸಂಸ್ಕಾರಗಳೇ ಶುದ್ಧಿಕ್ರಿಯಾಧರ್ಮ.

ಆಪದ್ಧರ್ಮ : ಜೀವನದಲ್ಲಿ ಕಷ್ಟ ಹಾಗೂ ಸಂದಿಗ್ಧ ಪರಿಸ್ಥಿತಿಗಳಲ್ಲಿ ಧರ್ಮವನ್ನು ಪೂರ್ತಿ ಆಚರಿಸಲು ಆಗದೇಹೋದಾಗ ಧರ್ಮವನ್ನು ಉಳಿಸಲು ಆಚರಿಸುವ ಧರ್ಮವೇ

ಆಪದ್ಧರ್ಮ. ಸ್ನಾನಮಾಡಿ ಸಂಧ್ಯಾವಂದನೆಯನ್ನು ಮಾಡಬೇಕೆಂದು ನಿಯಮವಿದ್ದರೂ ಜ್ವರ ಬಂದಾಗ ಮಂತ್ರಸ್ನಾನದಿಂದಲೇ ಸ್ನಾನಕ್ರಿಯೆ ಪೂರೈಸಿ ಸಂಧ್ಯಾವಂದನವಿಧಿಯನ್ನು ಪೂರ್ತಿಗೊಳಿಸುವುದು, ಸಾಯುತ್ತಿರುವ ರೋಗಿಗೆ 'ನೀನು ಬದುಕುವೆ, ಸಾಯುವುದಿಲ್ಲ' ಎಂದು ಧೈರ್ಯ ಉತ್ಸಾಹಗಳನ್ನು ತುಂಬುವುದು—ಇವುಗಳೆಲ್ಲ ಆಪದ್ಧರ್ಮಗಳಾಗಿರುತ್ತವೆ.

ಯುಗಧರ್ಮ : ಜೀವಿಯು ಜೀವಿಸುತ್ತಿರುವ ಯುಗದ ಕಾಲಘಟ್ಟದಲ್ಲಿ ಪ್ರಭಾವಯುತವಾಗಿ ಪ್ರಚಲಿತವಾಗಿರುವ ಜೀವನ ಪರಿಸ್ಥಿತಿಯನ್ನು ಯುಗಧರ್ಮ ಎಂದು ಹೇಳುವುದಾಗಿದೆ. ಕ್ರಿ.ಪೂ. ಒಂದನೇ ಶತಮಾನದಲ್ಲಿನ ಮನುಷ್ಯನ ಜೀವನ ಕ್ರಮಕ್ಕೂ ಇಂದಿನ ೨೦ನೇ ಶತಮಾನದ ಜೀವನ ಸ್ಥಿತಿಗತಿಗೂ ತುಂಬಾ ವ್ಯತ್ಯಾಸವಿದೆ. ಮನುಷ್ಯನ ಆಧ್ಯಾತ್ಮಿಕ ಸಾಮಾಜಿಕ ಸ್ಥಿತಿಗತಿ, ಜೀವನ ಕ್ರಮಗಳು ಹಿಂದಿನಂತೆ ಈಗ ಇಲ್ಲ. ಕಾಲಕ್ಕೆ ಸರಿಯಾಗಿ ಅವು ಬದಲಾಗುತ್ತವೆ, ಬದಲಾಗಿವೆ. ಹೀಗೆ ಯುಗಧರ್ಮ ಕಾಲದಿಂದ ಕಾಲಕ್ಕೆ ಬದಲಾಗುತ್ತಿದ್ದು ಆಯಾಯಾ ಕಾಲದ ಜನಜೀವನ ಪರಿಸ್ಥಿತಿಯನ್ನು ಯುಗಧರ್ಮ ಎಂದು ಕರೆಯುವುದಾಗಿದೆ.

ಧರ್ಮದ ಕುರಿತಾದ ಆಧಾರ ಹಾಗೂ ಮೂಲಗಳು ಮತ್ತು ಮೂಲವಾದ ಲಕ್ಷಣಗಳ ಬಗೆಗೆ ಮನುಮಹರ್ಷಿಗಳು ಹೇಳಿರುವ ಮಾತುಗಳು ಇಲ್ಲಿ ಉಲ್ಲೇಖಯೋಗ್ಯವೂ ಸ್ಮರಣಾರ್ಹವೂ ಆಗಿರುತ್ತವೆ. ಮಹರ್ಷಿಗಳು ಹೀಗೆ ಹೇಳಿರುತ್ತಾರೆ :

> **ವೇದೋಽಖಿಲೋ ಧರ್ಮಮೂಲಂ ಸ್ಮೃತಿಶೀಲೇ ಚ ತದ್ವಿದಾಮ್ ।**
> **ಆಚಾರಶ್ಚೈವ ಸಾಧೂನಾಂ ಆತ್ಮನಸ್ತುಷ್ಟಿರೇವ ಚ ॥**
>
> —ಮನುಸ್ಮೃತಿ, ಅಧ್ಯಾಯ ೨, ಶ್ಲೋಕ ೬

"ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವವೇದ ಎಂಬ (ನಾಲ್ಕು) ವೇದಗಳು ಧರ್ಮದ ಬಗೆಗೆ ಪ್ರಮಾಣ ಹಾಗೂ ಮೂಲಗಳಾಗಿವೆ. ಅದರಂತೆಯೇ ಅವುಗಳನ್ನರಿತವರ ಸ್ಮೃತಿಶೀಲಗಳೂ ಆಧಾರವಾಗಿವೆ. ಹಾಗೆಯೇ ಸಾಧುಸಂತರ ಆಚಾರವೂ, ಆತ್ಮಸಂತೋಷವೂ ಧರ್ಮದ ಪ್ರಮಾಣ ಹಾಗೂ ಮೂಲವಾಗಿವೆ."

> **ವೇದಃ ಸ್ಮೃತಿಃ ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ ।**
> **ಏತಚ್ಚತುರ್ವಿಧಂ ಪ್ರಾಹುಃ ಸಾಕ್ಷಾದ್ಧರ್ಮಸ್ಯ ಲಕ್ಷಣಮ್ ॥**
>
> —ಮನುಸ್ಮೃತಿ, ಅಧ್ಯಾಯ ೨, ಶ್ಲೋಕ ೧೨

"ವೇದ, ಸ್ಮೃತಿ, ಸದಾಚಾರ ಮತ್ತು ತಮ್ಮ ಆತ್ಮಕ್ಕೆ ಪ್ರಿಯ ಎನಿಸುವುದು ಇವುಗಳು ಧರ್ಮದ ಕುರಿತಾದ ನಾಲ್ಕು ಮೂಲಭೂತವಾದ ಲಕ್ಷಣಗಳಾಗಿವೆ."

## ನಾಲ್ಕು ಪುರುಷಾರ್ಥಗಳ ವರ್ಗೀಕರಣ ಹಾಗೂ ಆಶ್ರಮಧರ್ಮ ಮತ್ತು ಅವುಗಳ ವ್ಯವಸ್ಥೆಗಳ ವೈಶಿಷ್ಟ್ಯ

ಜೀವಿಯ ಜೀವನಕ್ಕೆ ಆಧಾರವೇ ಧರ್ಮ. ಧರ್ಮವನ್ನು ಸಂಪಾದಿಸುವುದು ಪ್ರಥಮ ಪುರುಷಾರ್ಥವೂ ಹೌದು. ಅದು ಜೀವನವಿಡೀ ಬೇಕಾದ ಪುರುಷಾರ್ಥವೂ ಹೌದು. ಜೀವಿಗೆ ಬದುಕಲು ಗಾಳಿ ಹೇಗೋ ಹಾಗೆ ಜೀವನಕ್ಕೆ ಧರ್ಮವು ಬೇಕಾಗಿದ್ದು ಅದು ಬದುಕಿನ

ಉಸಿರಾಗಿರುತ್ತದೆ. ಧರ್ಮದಿಂದ ಅರ್ಥ, ಎಂದರೆ ಸಂಪತ್ತು, ಸಂಪತ್ತಿನಿಂದ ಆಸೆಗಳ, ಕಾಮನೆಗಳ ಪೂರೈಕೆ ಮಾಡುವುದು—ಹೀಗಿರಬೇಕು ಜೀವನ. ಈ ಜೀವನ ಶಾಶ್ವತವಾದು ದೇನಲ್ಲ. ಅಲ್ಲದೆ ಅದರ ಪರಮಗುರಿ ಭೌತಿಕಸುಖವೂ ಅಲ್ಲ. ಹಾಗೆಂದು ಜೀವನವನ್ನು ಅಲಕ್ಷಿಸುವ ಅಗತ್ಯವೂ ಇಲ್ಲ. ಹಾಗೆ ಅಲಕ್ಷಿಸುವುದು ಸರಿಯೂ ಅಲ್ಲ. ಧರ್ಮಕ್ಕೆ ವಿರುದ್ಧವಲ್ಲದ ರೀತಿಯಲ್ಲಿ ಕಾಮವನ್ನು ಭೋಗಿಸಿ ಅನಂತರ ಜೀವನದಲ್ಲಿ ಅವನ್ನೆಲ್ಲಾ ತ್ಯಜಿಸಿ ಮುಕ್ತಿಗಾಗಿ ಮುನ್ನಡೆಯಬೇಕು. ಮುಕ್ತಿ ಲಭಿಸಿದಾಗ ಜೀವಿಯು ಜೀವನಚಕ್ರ ದಿಂದ ಪಾರಾಗುತ್ತಾನೆ. ಹಾಗಾಗಿ ಮೋಕ್ಷವು ಜೀವನದಲ್ಲಿ ಕೊನೆಯದಾದ ಮತ್ತು ಉನ್ನತೋನ್ನತವಾದ ಪುರುಷಾರ್ಥವಾಗಿದೆ. ಮಾನವನ ದೈಹಿಕ, ಮಾನಸಿಕ ಮತ್ತು ಆಧ್ಯಾತ್ಮಿಕವಾದ ಆಸೆ–ಬಯಕೆಗಳನ್ನು ಅನುಸರಿಸಿ ನಾಲ್ಕು ಪುರುಷಾರ್ಥಗಳನ್ನೂ ಬಾಳಿನ ಗತಿಯನ್ನೂ ಹಾಗೂ ಅದರ ವಿಕಾಸದ ಸ್ವರೂಪ ಸ್ಥಿತಿಗಳನ್ನೂ ಅನುಸರಿಸಿ ನಾಲ್ಕು ಆಶ್ರಮಗಳ ಅವಸ್ಥೆಗಳನ್ನು ಹಿಂದೂಧರ್ಮವು ನಿರ್ದೇಶಿಸಿರುತ್ತದೆ.

ಮನುಷ್ಯನು ಆರಂಭದಲ್ಲಿ ಜೀವನದಲ್ಲಿ ಪ್ರವೃತ್ತನಾಗಿ ಪ್ರಪಂಚದ ಸುಖದುಃಖಗಳಲ್ಲಿ ಭಾಗಿಯಾಗಿ, ಅನುಭವ ಗಳಿಸಿ, ತನ್ಮೂಲಕ ಅವುಗಳಿಗೆ ಅಡಿಯಾಳಾಗದೆ ಅನಂತರ ಅವುಗಳಿಂದ ನಿವೃತ್ತನಾಗಿ ಜೀವನದ ಪರಮಗುರಿಯಾದ ಮೋಕ್ಷಾನಂದವನ್ನು ಪಡೆಯ ಬೇಕು ಎಂಬುದೇ ಹಿಂದೂಧರ್ಮದ ನಿಶ್ಚಯದ ನಿಲುವಾಗಿರುತ್ತದೆ. ಅದಕ್ಕಾಗಿ ಪ್ರವೃತ್ತಿ ಮಾರ್ಗ ನಿವೃತ್ತಿಮಾರ್ಗ ಎಂಬ ಎರಡು ವಿಭಜನೆಯನ್ನು ಮಾಡಲಾಗಿದ್ದು ಅದನ್ನು ಅನುಸರಿಸಿಯೇ ಆಶ್ರಮಗಳ ಹಂತಗಳನ್ನೂ ವರ್ಗೀಕರಿಸಲಾಗಿದೆ. ಬ್ರಹ್ಮಚರ್ಯ-ಗೃಹಸ್ಥ ಆಶ್ರಮಗಳು ಜೀವನದಲ್ಲಿ ಪ್ರವೃತ್ತನಾಗಲು ಜೀವಿಯನ್ನು ಸಿದ್ಧಗೊಳಿಸುತ್ತವೆ. ಅನಂತರದ ವಾನಪ್ರಸ್ಥ ಮತ್ತು ಸಂನ್ಯಾಸ ಆಶ್ರಮಗಳು ವ್ಯಕ್ತಿಯನ್ನು ಪ್ರವೃತ್ತಿ ಮಾರ್ಗಕ್ಕೆ ಹೋಗಿ ಮುಕ್ತಿಯನ್ನು ಪಡೆಯಲು ನೆರವಾಗುತ್ತವೆ.

ಆಶ್ರಮಗಳು ಒಟ್ಟು ನಾಲ್ಕು :

(೧) ಬ್ರಹ್ಮಚರ್ಯ, (೨) ಗೃಹಸ್ಥ, (೩) ವಾನಪ್ರಸ್ಥ, (೪) ಸಂನ್ಯಾಸ.

ಬ್ರಹ್ಮಚರ್ಯ : ಬಾಳಿನ ಯಾವ ರಂಗದ ಕೆಲಸವೇ ಆಗಲಿ ಅದರ ಸಮರ್ಪಕ ನಿರ್ವ ಹಣೆಗೆ, ಪೂರ್ಣಫಲಪ್ರಾಪ್ತಿಗೆ ಶಾರೀರಿಕ ಸಾಮರ್ಥ್ಯ, ಮಾನಸಿಕ ಶಕ್ತಿ ಹಾಗೂ ಆಧ್ಯಾತ್ಮಿಕ ಬಲಗಳು ಅತ್ಯಂತ ಆವಶ್ಯಕ. ಬ್ರಹ್ಮಶಕ್ತಿಯು ಅವುಗಳಲ್ಲಿ ಮೂಲವಾದುದರಿಂದ ಅದು ಬಾಳಿನ ಅಡಿಪಾಯದ ಆಶ್ರಮವಾಗಿದೆ. ಈ ಆಶ್ರಮದಲ್ಲಿ ಜೀವಿಯು ಗುರುಕುಲದಲ್ಲಿ ವಾಸವಾಗಿದ್ದು ವಿದ್ಯಾರ್ಥಿಯಾಗಿ ವೇದೋಪನಿಷದಾದಿ ಪರಾ ಮತ್ತು ಅಪರಾ ವಿದ್ಯೆಗಳ ಕುರಿತಾದ ಅಧ್ಯಯನವನ್ನು ನಡೆಸುತ್ತಾನೆ. ತನ್ಮೂಲಕ ಶಾರೀರಿಕ ಮತ್ತು ಆಧ್ಯಾತ್ಮಿಕವಾದ ಶಕ್ತಿಯನ್ನೂ ತೇಜಸ್ಸನ್ನೂ ಗಳಿಸುತ್ತಾ. ಯಮಪಾಲನೆ, ಸರಳಜೀವನ, ಇಂದ್ರಿಯ ನಿಗ್ರಹ ಇವುಗಳನ್ನು ಅಭ್ಯಾಸಮಾಡಿ ಜೀವಿಯು ಬದುಕಿನಲ್ಲಿ ಮುಂದೆ ಬರುವ ಜೀವನದ ಕಷ್ಟನಷ್ಟ, ಸುಖದುಃಖಗಳನ್ನು ಎದುರಿಸಿ ಮುಂದೆ ಸಾಗಿ ತನ್ನ ಬದುಕಿನ ಪರಮಗುರಿಯ ಸಾಧನೆ, ತನ್ಮೂಲಕ ಜಗತ್ತಿನ ಹಿತದ ಸಾಧನೆ ಮಾಡುತ್ತಾ ಬಾಳಲು ಈ ಆಶ್ರಮದಲ್ಲಿ ಮೂಲವಾದ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಾನೆ. ದೇಹ ಮನಸ್ಸು ಬುದ್ಧಿಗಳಲ್ಲಿ

ಪ್ರಬುದ್ಧನಾಗುತ್ತಾನೆ. ಗುರುಹಿರಿಯರಲ್ಲಿ ಭಕ್ತಿಶ್ರದ್ಧೆಗಳನ್ನು ಗಳಿಸಿ, ತನ್ನ ಕುಲ-ದೇಶಗಳ ಗೌರವರಕ್ಷಣೆ ಮತ್ತು ಪ್ರೋತ್ಸಾಹನೆಗಳಿಗೆ ಯಶಸ್ವಿಯಾದ ರೀತಿಯಲ್ಲಿ ದುಡಿಯಲು ಸಿದ್ಧನಾಗಿ, ಬ್ರಹ್ಮಚರ್ಯ ಆಶ್ರಮದಿಂದ ವಿದ್ಯಾರ್ಥಿಯು ಹೊರಬರುತ್ತಾನೆ. ಬ್ರಹ್ಮಚರ್ಯ ಆಶ್ರಮದಿಂದ ಹೊರಬರುವಾಗ ವಿದ್ಯಾರ್ಥಿಗೆ ಗುರುಕುಲದಲ್ಲಿ ನೀಡುವ ಉಪದೇಶವು ಅವನಿಗೆ ತನ್ನ ಬಾಳಿನ ಮುಂದಿನ ಹಂತಗಳಿಗೆ ಮಾರ್ಗದರ್ಶಕವಾಗುತ್ತದೆ. ಉಪನಿಷತ್ತಿನಲ್ಲಿ ಈ ಉಪದೇಶದ ವಿವರವಿದ್ದು ಇವನ್ನು ವಿಶ್ವದ ಮೊತ್ತಮೊದಲಿನ ಘಟಿಕೋತ್ಸವ ಆದೇಶ ಎಂದು ಹೇಳಿದರೆ ತಪ್ಪಾಗಲಾರದು. ತೈತ್ತಿರೀಯ ಉಪನಿಷತ್ತಿನಲ್ಲಿ ವಿಸ್ತಾರವಾಗಿ ಹೇಳಿರುವ ಸ್ನಾತಕನಿಗೆ ನೀಡುವ ಆ ಉಪದೇಶ ಹೀಗಿದೆ :

(೧) **ಸತ್ಯಂ ವದ । ಧರ್ಮಂ ಚರ । ಸ್ವಾಧ್ಯಾಯಾನ್ಮಾ ಪ್ರಮದಃ । ಆಚಾರ್ಯಾಯ ಪ್ರಿಯಂ ಧನಮಾಹೃತ್ಯ ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ । ಸತ್ಯಾನ್ನ ಪ್ರಮದಿತವ್ಯಮ್ । ಧರ್ಮಾನ್ನ ಪ್ರಮದಿತವ್ಯಮ್ । ಕುಶಲಾನ್ನ ಪ್ರಮದಿತವ್ಯಮ್ । ಭೂತ್ಯೈ ನ ಪ್ರಮದಿತವ್ಯಮ್ । ಸ್ವಾಧ್ಯಾಯಪ್ರವಚನಾಭ್ಯಾಂ ನ ಪ್ರಮದಿತವ್ಯಮ್ ॥**

(೨) **ದೇವಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಮ್ । ಮಾತೃದೇವೋ ಭವ । ಪಿತೃದೇವೋ ಭವ । ಆಚಾರ್ಯದೇವೋ ಭವ । ಅತಿಥಿದೇವೋ ಭವ । ಯಾನ್ಯನವದ್ಯಾನಿ ಕರ್ಮಾಣಿ । ತಾನಿ ಸೇವಿತವ್ಯಾನಿ । ನೋ ಇತರಾಣಿ । ಯಾನ್ಯಸ್ಮಾಕಂ ಸುಚರಿತಾನಿ । ತಾನಿ ತ್ವಯೋಪಾಸ್ಯಾನಿ । ನೋ ಇತರಾಣಿ ॥**

(೩) **ಯೇಕೇಚಾಸ್ಮಚ್ಛ್ರೇಯಾಗ್ಂಸೋ ಬ್ರಾಹ್ಮಣಾಃ । ತೇಷಾಂ ತ್ವಯಾಸನೇನ ಪ್ರಶ್ವಸಿತವ್ಯಮ್ । ಶ್ರದ್ಧಯಾ ದೇಯಮ್ । ಅಶ್ರದ್ಧಯಾಽದೇಯಮ್ । ಶ್ರಿಯಾ ದೇಯಮ್ । ಹ್ರಿಯಾ ದೇಯಮ್ । ಭಿಯಾ ದೇಯಮ್ । ಸಂವಿದಾ ದೇಯಮ್ ॥**

(೪) **ಅಥ ಯದಿ ತೇ ಕರ್ಮವಿಚಿಕಿತ್ಸಾ ವಾ ವೃತ್ತವಿಚಿಕಿತ್ಸಾ ವಾ ಸ್ಯಾತ್ । ಯೇ ತತ್ರ ಬ್ರಾಹ್ಮಣಾಃ ಸಂಮರ್ಶಿನಃ । ಯುಕ್ತಾ ಆಯುಕ್ತಾಃ । ಅಲೂಕ್ಷಾ ಧರ್ಮಕಾಮಾಃ ಸ್ಯುಃ । ಯಥಾ ತೇ ತತ್ರ ವರ್ತೇರನ್ । ತಥಾ ತತ್ರ ವರ್ತೇಥಾಃ ॥**

(೫) **ಅಥಾಭ್ಯಾಖ್ಯಾತೇಷು । ಯೇ ತತ್ರ ಬ್ರಾಹ್ಮಣಾಃ ಸಂಮರ್ಶಿನಃ । ಯುಕ್ತಾ ಆಯುಕ್ತಾಃ । ಅಲೂಕ್ಷಾ ಧರ್ಮಕಾಮಾಃ ಸ್ಯುಃ । ಯಥಾ ತೇ ತೇಷು ವರ್ತೇರನ್ । ತಥಾ ತೇಷು ವರ್ತೇಥಾಃ ॥**

(೬) **ಏಷ ಆದೇಶಃ । ಏಷ ಉಪದೇಶಃ । ಏಷಾ ವೇದೋಪನಿಷತ್ । ಏತದನುಶಾಸನಮ್ ॥ ಏವಮುಪಾಸಿತವ್ಯಮ್ । ಏವಮುಚೈತದುಪಾಸ್ಯಮ್ ॥**

—ತೈತ್ತಿರೀಯ ಉಪನಿಷತ್–೧, ೧೧

"ಸತ್ಯವನ್ನು ಹೇಳು ; ಧರ್ಮವನ್ನು ಆಚರಿಸು. ಅಧ್ಯಯನದಲ್ಲಿ ಪ್ರಮಾದ ಮಾಡಬೇಡ. ಆಚಾರ್ಯನಿಗೆ ಇಷ್ಟವಾದ ಧನವನ್ನು ತಂದುಕೊಟ್ಟು ಸಂತತಿಯನ್ನು ವಿಚ್ಛಿನ್ನಗೊಳಿಸದಿರು. ಸತ್ಯದಿಂದ ಕದಲಕೂಡದು ; ಧರ್ಮದಿಂದ ಕದಲಕೂಡದು ; ಕುಶಲದಿಂದ ಕದಲಕೂಡದು ; ಮಂಗಳಯುಕ್ತವಾದ ಕರ್ಮದಿಂದ ಕದಲಕೂಡದು ; ದೇವಪಿತೃಗಳ ಕಾರ್ಯದಿಂದ ಕದಲಕೂಡದು. ತಾಯಿಯೇ ನಿನಗೆ ದೇವರಾಗಿರಲಿ ; ತಂದೆಯೇ ನಿನಗೆ

ದೇವರಾಗಿರಲಿ ; ಅತಿಥಿಯೇ ನಿನಗೆ ದೇವರಾಗಿರಲಿ. ಯಾವ ಕರ್ಮಗಳು ಅನಿಂದಿತವೋ ಅವುಗಳನ್ನು ಸೇವಿಸಬೇಕು, ಉಳಿದವುಗಳನ್ನು ಸೇವಿಸಕೂಡದು. ನಮ್ಮಲ್ಲಿ ಯಾವ ಒಳ್ಳೆಯ ನಡತೆಗಳಿವೆಯೋ ಅವುಗಳನ್ನೇ ಸೇವಿಸಬೇಕು, ಉಳಿದವುಗಳನ್ನು ಸೇವಿಸ ಕೂಡದು. ನಮಗಿಂತ ಉತ್ತಮವಾದ ಯಾವ ಯಾವ ಬ್ರಾಹ್ಮಣರಿರುವರೋ ಅವರನ್ನು ಆಸನಾದಿಪೂರ್ವಕ ನೀನು ಆದರಿಸಬೇಕು. ಶ್ರದ್ಧೆಯಿಂದ ಕೊಡಬೇಕು ; ಅಶ್ರದ್ಧೆಯಿಂದ ಕೊಡಬಾರದು. ತನ್ನ ಐಶ್ವರ್ಯಕ್ಕೆ ತಕ್ಕಂತೆ ಕೊಡಬೇಕು ; ವಿನಯದಿಂದ ಕೊಡಬೇಕು ; ಭಯದಿಂದ ಕೊಡಬೇಕು ; ಮಿತ್ರಭಾವದಿಂದ ಕೊಡಬೇಕು. ಇನ್ನು ನಿನಗೆ ಶ್ರೌತ–ಸ್ಮಾರ್ತಕರ್ಮವಿಷಯದಲ್ಲಾಗಲಿ ಆಚಾರವಿಷಯದಲ್ಲಾಗಲಿ ಸಂಶಯವುಂಟಾದರೆ ಅಲ್ಲಿ ವಿಚಾರಕ್ಷಮರೂ, ಕರ್ಮದಲ್ಲಿ ಸಮರ್ಥರೂ, ಅಕ್ರೂರರೂ, ಅಕಾಮಹತರೂ ಆದ ಬ್ರಾಹ್ಮಣರು ಹೇಗೆ ಅವರಲ್ಲಿ ವರ್ತಿಸುವರೋ ಹಾಗೆಯೇ ನೀನು ಅವರಲ್ಲಿ ವರ್ತಿಸು.

ಇದು ವಿಧಿ, ಇದು ಉಪದೇಶ, ಇದು ವೇದರಹಸ್ಯ, ಇದು ಈಶ್ವರಾಜ್ಞೆ. ಹೀಗೆ ಉಪಾಸಿಸಬೇಕು. ಹೀಗೆ ಇದು ಅನುಷ್ಠೇಯ."

ಗೃಹಸ್ಥಾಶ್ರಮ : ಗೃಹಸ್ಥ ಎಂದರೆ ಪತ್ನಿಯಿಂದ ಒಡಗೂಡಿ ಮನೆ ಮಾಡಿಕೊಂಡು ಇರುವವನು ಎಂದರ್ಥ. ಮನೆಯೆಂದರೆ ಅದರಲ್ಲಿ ಪತ್ನಿ, ಮಕ್ಕಳು, ಬಂಧುಬಳಗ, ಆಳು ಕಾಳುಗಳೆಂಬ ಎಲ್ಲವೂ ಸೇರಿರುತ್ತವೆ. ಇವುಗಳುಳ್ಳವನೇ ಗೃಹಸ್ಥ. ಸಮಾಜದ ಸದಾಚಾರ ಸಂಪನ್ನರು, ಸಾಧುಸಂತರು, ಅರಸರು, ವೈದ್ಯರು, ವೀರಸೈನಿಕರು, ಅಂತೂ ಎಲ್ಲಾ ಆಶ್ರಮದವರೂ ಕೂಡ ಗೃಹಸ್ಥಾಶ್ರಮದಿಂದಲೇ ಉತ್ಪತ್ತಿಯಾಗುತ್ತಾರೆ. ಹಾಗಾಗಿ ಗೃಹಸ್ಥಾಶ್ರಮವು ಸಮಾಜದ ಆಧಾರವಾದ ಆಶ್ರಮವಾಗಿದ್ದು ಸಾಧುಸಂತರು, ರಾಜ–ವೀರಾದಿಗಳು, ವಿದ್ವಾಂಸರು–ವಿಜ್ಞಾನಿಗಳು ಇವರಿಗೆ ಜನ್ಮವಿತ್ತು ಪಾಲನೆಮಾಡುವ ವಿಶೇಷವಾದ ನೆಲೆಯಾಗಿರುತ್ತದೆ. ರಾಷ್ಟ್ರದ ಭದ್ರತೆ, ಹಿತ, ಅಭ್ಯುದಯಗಳ ಸಾಧನೆಗೆ ಗೃಹಸ್ಥಾಶ್ರಮವು ಕೊಡುವ ಸೇವಾಕಾಣಿಕೆ ಮಹತ್ತರವಾದುದಾಗಿದ್ದು ವ್ಯಕ್ತಿಯ ಹಾಗೂ ರಾಷ್ಟ್ರದ ಜೀವನದಲ್ಲಿ ಈ ಆಶ್ರಮಕ್ಕೆ ಅದರದೇ ಆದ ಮಹತ್ವಪೂರ್ಣವಾದ ಸ್ಥಾನ–ಪ್ರಾಧಾನ್ಯಗಳಿರುತ್ತವೆ. ಸಾಧಾರಣವಾಗಿ ಮನುಷ್ಯನು ಅನೇಕ ವಿಧದ ಸದ್ಗುಣ ಮತ್ತು ದುರ್ಗುಣಗಳಿಂದ ಕೂಡಿದವನಾಗಿರುತ್ತಾನೆ. ಅವನು ತನ್ನ ಕುಲ, ಪಿತೃಗಳು, ಸಮಾಜ, ರಾಷ್ಟ್ರ ಇವುಗಳಿಗೆ ಹಲವು ರೀತಿಯಲ್ಲಿ ಋಣಬದ್ಧನಾಗಿರುತ್ತಾನೆ. ತನ್ನಲ್ಲಿರುವ ಗುಣ ಧರ್ಮಗಳನ್ನು ಉದಾತ್ತೀಕರಿಸಿ ತನ್ನಲ್ಲಿ ಅಡಕವಾಗಿರುವ ಸುಖಭೋಗಗಳ ಕಾಮನೆಯನ್ನು ನಿಯಂತ್ರಿಸಿ ತೃಪ್ತಿಪಡಿಸುತ್ತಾ ತನ್ನ ಕುಟುಂಬ, ಸಮಾಜ, ರಾಷ್ಟ್ರ ಹಾಗೂ ಜಗತ್ತಿನ ಏಳಿಗೆಗಾಗಿ ದುಡಿಯಬೇಕಾಗಿರುವುದು ಈ ಆಶ್ರಮದ ಮುಖ್ಯತತ್ತ್ವವಾಗಿರುತ್ತದೆ. ಬ್ರಹ್ಮಚರ್ಯ ಆಶ್ರಮವನ್ನು ನಿರ್ವಹಿಸಿ ಈ ಆಶ್ರಮ ಸ್ವೀಕರಿಸುತ್ತಾ ಜೀವಿಯು ವಿವಾಹವಾಗಿ ಪತ್ನೀಯುಕ್ತನಾಗುತ್ತಾನೆ. ಅರಸ, ಅಧ್ಯಾಪಕ, ಸೈನಿಕ, ವಿಜ್ಞಾನಿ, ವಿದ್ವಾಂಸ, ವಾಣಿಜ್ಯೋದ್ಯಮಿ, ಕೃಷಿಕ ಎಂದು ವಿವಿಧ ರೀತಿಯಲ್ಲಿ ಗೃಹಸ್ಥನು ಉದ್ಯೋಗವನ್ನು ನಿರ್ವಹಿಸುತ್ತಾ ಜಗತ್ತಿನಲ್ಲಿ ಮಾನವಸಮಾಜದ ಆಧಾರಸ್ತಂಭವಾಗುತ್ತಾನೆ.

ವಿವಾಹ ಎಂದರೆ ಹಿಂದೂಧರ್ಮದ ಪ್ರಕಾರವಾಗಿ, ಕೇವಲ ಲೈಂಗಿಕ ಸುಖಕ್ಕಾಗಿರುವ

ಅನುಕೂಲದ ವ್ಯವಸ್ಥೆಯಾಗಿರುವುದಿಲ್ಲ. ಪತಿಪತ್ನಿಯರು ಜೀವನದಲ್ಲಿ ಸಹಭಾಗಿಗಳಾಗಿ, ಕಾರ್ಯಭಾರಗಳಲ್ಲಿ ಸಹಕಾರಿಗಳೂ ಆಗಿ ಆಧ್ಯಾತ್ಮಿಕವಾದ ಉನ್ನತಿಗೆ ಪರಸ್ಪರ ನೆರ ವಾಗುತ್ತಾರೆ. ಪತ್ನಿ ಎಂದರೆ ಗೃಹದ ಒಡತಿ. ಆವಳನ್ನು ಗೃಹಪತ್ನಿ, ಸಧರ್ಮಿಣಿ, ಗೃಹಿಣಿ ಎಂಬ ಹೆಸರುಗಳಿಂದ ಕರೆದು ಜವಾಬ್ದಾರಿಯುತವಾಗಿ ಗೌರವಿಸಲಾಗಿದೆ. ("ಗೃಹಾನ್ ಗಚ್ಛ ಗೃಹಪತ್ನಿ ಯಥಾಸೋ"—ಋ.ವೇ., ೧೦.೮೫.೨೬.೨೭) ಅಧ್ಯಾತ್ಮ ವಾದ ಉನ್ನತಿಗೆ, ಗೃಹಸ್ಥಾಶ್ರಮವನ್ನು ಸ್ವೀಕರಿಸಿದವನು ತನ್ನ ಕುಟುಂಬ, ತನ್ನ ಪತ್ನಿಯ ಕಡೆಯ ಕುಟುಂಬ ಇವೆರಡು ಕಡೆಗೂ ಸಂಬಂಧದವನಾಗುತ್ತಾ ಸಾಮಾಜಿಕವಾದ ಅನೇಕ ವಿಧದ ವ್ರತ ಆಚರಣೆಗಳು, ಹಬ್ಬ ಉತ್ಸವಗಳು, ಸಾಂಸ್ಕೃತಿಕವಾದ ಅನೇಕ ವಿಧದ ಚಟುವಟಿಕೆಗಳ ಕಾರ್ಯಕ್ರಮಗಳನ್ನು ನಡೆಸುತ್ತಾನೆ. ಇತರರ ಜೊತೆಗೂಡಿ ಬೇರೆಡೆ ತಾನು ಪಾಲುಗೊಳ್ಳುತ್ತಾನೆ. ಇದರಿಂದಾಗಿ ಸಮಾಜದಲ್ಲಿ ಪರಸ್ಪರ ಒಗ್ಗಟ್ಟು, ವಿಶ್ವಾಸ, ಒಲವು ಇವುಗಳುಂಟಾಗುತ್ತವೆ. ಮಾತ್ರವಲ್ಲದೆ, ಧರ್ಮ, ಸಂಸ್ಕೃತಿ, ನೀತಿ, ಮತಪರವಾದ ವಿಶ್ವಾಸಗಳು, ಇವುಗಳನ್ನೆಲ್ಲ ಗೃಹಸ್ಥನು ಪ್ರಯೋಗರೂಪದಲ್ಲಿ ಆಚರಿಸಿ ತನ್ಮೂಲಕ ಅವುಗಳನ್ನು ರಕ್ಷಿಸಿದಂತೆಯೂ ಪೋಷಿಸಿದಂತೆಯೂ ಆಗುತ್ತದೆ. ಹೀಗೆ ಹಲವು ವಿಧದಲ್ಲಿ ಗೃಹಸ್ಥಾಶ್ರಮವು ಪ್ರಾಮುಖ್ಯವನ್ನು ಪಡೆದಿರುವ ಪ್ರಧಾನ ಹಾಗೂ ಪ್ರಭಾವ ಪೂರ್ಣವಾದ ಆಶ್ರಮವಾಗಿರುತ್ತದೆ.

ಗೃಹಸ್ಥನಾದವನು ಪ್ರತಿದಿನವೂ ಬ್ರಹ್ಮಯಜ್ಞ, ಪಿತೃಯಜ್ಞ, ದೇವಯಜ್ಞ, ನರ ಯಜ್ಞ ಹಾಗೂ ಭೂತಯಜ್ಞ ಎಂಬ ಪಂಚಮಹಾಯಜ್ಞಗಳನ್ನು ಮಾಡಬೇಕು. ಈ ಐದು ವಿಧದ ಯಜ್ಞದ ಮೂಲಕ ಗೃಹಸ್ಥನು ತನ್ನ ಪಿತೃಗಳಿಗೆ, ಋಷಿಗಳಿಗೆ, ದೇವತೆ ಗಳಿಗೆ, ಸಮಾಜದವರಿಗೆ ಮತ್ತು ಪ್ರಾಣಿವರ್ಗಕ್ಕೆ ಸೇವೆಸಲ್ಲಿಸುತ್ತಾನೆ. ಮಾತ್ರವಲ್ಲದೆ ಜಗತ್ತಿನಲ್ಲಿರುವ ಜೀವಿಗಳ ಒಡನೆ ಮೈತ್ರಿ-ಸಹಬಾಳ್ವೆಯನ್ನು ನಡೆಸುವ ಜೀವನಕಲೆ ಯನ್ನು ದಿನದಿನವೂ ರೂಢಿಸಿಕೊಳ್ಳುತ್ತಾನೆ.

ಪಂಚಮಹಾಯಜ್ಞಗಳು : ಯಜ್ಞ ಎಂಬುದು ದೇವಪೂಜೆ, ಸಂಗತೀಕರಣ, ದಾನ ಎಂಬ ಮೂರು ಅರ್ಥವುಳ್ಳ ಯಜ್ ಧಾತುವಿನಿಂದ ಉತ್ಪತ್ತಿಯಾದ ಶಬ್ದವಾಗಿದೆ. ಯಜ್ಞವೆನ್ನುವುದರಲ್ಲಿ ಪೂಜೆ, ತ್ಯಾಗ, ದಾನ—ಇವು ಮೂರೂ ಸೇರಿರುತ್ತವಾಗಿದ್ದು ಸಂಗ್ರಹವಾಗಿ ಯಜ್ಞ ಎಂದರೆ ಪರಿತ್ಯಾಗ ಎಂದು ಹೇಳಬಹುದು. ಜೀವನದ ಮೂಲ ತತ್ತ್ವವೇ ತ್ಯಾಗ ಮತ್ತು ದಾನ ಎಂದು ಹಿಂದೂಧರ್ಮದಲ್ಲಿ ವಿವರವಾಗಿ ಹೇಳಲ್ಪಟ್ಟಿ ರುವ ಸಂಗತಿಯಾಗಿದೆ. ಇತರರ ಉಪಕಾರಕ್ಕಾಗಿ ತನ್ನಲ್ಲಿ ಇರುವುದನ್ನು ಶ್ರದ್ಧೆಯಿಂದ, ಪ್ರೀತಿಯಿಂದ, ಅರ್ಪಣಬುದ್ಧಿಯಿಂದ ತ್ಯಾಗಮಾಡಿ ದಾನಮಾಡುವುದೇ ಯಜ್ಞದಲ್ಲಿ ಅಡಗಿರುವ ವಿಶೇಷವಾದ ತತ್ತ್ವವಾಗಿದೆ. ಯಜ್ಞಮಾಡುವುದರಿಂದ ವ್ಯಕ್ತಿಯ ಹೃದಯ ಗುಣಸಂಪತ್ತುಗಳು ಬೆಳೆಯುತ್ತವೆ. ಜಗತ್ತು ಮತ್ತು ಜೀವರ ಹುಟ್ಟು, ಬೆಳವಣಿಗೆಗಳ ಹಿನ್ನೆಲೆಯಲ್ಲಿ ಯಜ್ಞದ ಈ ತತ್ತ್ವ ಅಡಗಿದ್ದು ಬಾಳಿನಲ್ಲಿ ಪರಸ್ಪರ ತ್ಯಾಗ, ದಾನ, ತನ್ಮೂಲಕದ ಪೂಜೆ ಇಲ್ಲದೆ ಜಗತ್ತಾಗಲಿ, ಜೀವನವಾಗಲಿ ಯಾವುದೂ ನಡೆಯದು ಎಂದು ಹಿಂದೂಧರ್ಮದಲ್ಲಿ ವಿಸ್ತಾರವಾಗಿ ಹೇಳಲಾಗಿರುತ್ತದೆ (ಗೀತಾ. ಅ. ೩, ಶ್ಲೋ. ೧೬ ನೋಡಿ). ಪಂಚಮಹಾಯಜ್ಞಗಳ ಕುರಿತಾಗಿ ಈಗ ವಿಚಾರಮಾಡೋಣ :

(೧) ಬ್ರಹ್ಮಯಜ್ಞ [ವೇದಯಜ್ಞ], (೨) ದೇವಯಜ್ಞ, (೩) ಪಿತೃಯಜ್ಞ, (೪) ಭೂತಯಜ್ಞ. (೫) ಮನುಷ್ಯಯಜ್ಞ.

ಬ್ರಹ್ಮಯಜ್ಞ : ವೇದಾಧ್ಯಯನ ಮತ್ತು ಅಧ್ಯಾಪನವು ಬ್ರಹ್ಮಯಜ್ಞವಾಗಿದೆ. ವೇದಾದಿ ಶಾಸ್ತ್ರಸದ್ಗ್ರಂಥಗಳ ಅಧ್ಯಯನ ಮತ್ತು ಅವನ್ನು ಇತರರಿಗೆ ತಿಳಿಸುವಿಕೆ ಇವು ಗಳು ವೇದಯಜ್ಞ(ಬ್ರಹ್ಮಯಜ )ವಾಗಿದ್ದು ಪ್ರತಿದಿನವೂ ಇವುಗಳನ್ನು ಮಾಡಲೇಬೇಕು. ಇವುಗಳಿಂದ ತನ್ನ ಜ್ಞಾನವೃದ್ಧಿಯಾಗುವುದಲ್ಲದೆ ತನ್ನ ಇಂದ್ರಿಯಗಳನ್ನು ಹತೋಟಿಯಲ್ಲಿ ಇಡಲು ಉತ್ತಮ ಮನಃಸ್ಥಿತಿ ಹೊಂದಿ, ವಿವೇಕ ಯೋಗ್ಯತೆಗಳಿಂದ ಕೂಡಿ ಬಾಳಲು ಗೃಹಸ್ಥನಿಗೆ ಸಾಧ್ಯವಾಗುತ್ತದೆ. ಮಾತ್ರವಲ್ಲದೆ ಋಷಿಗಳಿಂದ ಪ್ರಣೀತವಾದ ವೇದ ವಿದ್ಯೆಯ ರಕ್ಷಣೆ ಮತ್ತು ಪೋಷಣೆಯನ್ನು ಗೃಹಸ್ಥನು ಮಾಡಿದಂತಾಗುತ್ತದೆ. ಹೀಗೆ ಈ ಯಜ್ಞವನ್ನು ಮಾಡುವುದರ ಮೂಲಕ ಋಷಿಮುನಿಗಳ ಸೇವೆ ಮತ್ತು ಪೂಜೆಗಳನ್ನು ಮಾಡಿದಂತಾಗಿ ಯಜ್ಞಕರ್ತೃವು ಅವರ ಅನುಗ್ರಹಕ್ಕೂ ಕೂಡ ಪಾತ್ರನಾಗುತ್ತಾನೆ.

ದೇವಯಜ್ಞ : ದೇವತೆಗಳ ಪ್ರೀತಿಗಾಗಿ ಈ ಯಜ್ಞವನ್ನು ಮಾಡಲಾಗುತ್ತದೆ. ಇದರ ಅನುಸಾರವಾಗಿ ಹೋಮಕಾರ್ಯ ಮಾಡಿ ಹೋಮಾಗ್ನಿಯ ಮೂಲಕ ದೇವತೆಗಳಿಗೆ ಹವಿಸ್ಸು ಇತ್ಯಾದಿ ಹವನದ್ರವ್ಯಗಳನ್ನು ಅರ್ಪಿಸಲಾಗುತ್ತದೆ. ಮನೆಯಲ್ಲಿ ಈ ಯಜ್ಞ ವನ್ನು ಪ್ರತಿದಿನವೂ ಮಾಡಿ ತುಪ್ಪವನ್ನು ಅಗ್ನಿಯಲ್ಲಿ ಸಮರ್ಪಿಸುವುದರಿಂದ ಆ ಪರಿಮಳ ದಿಂದಾಗಿ ದೇವತೆಗಳು ಪ್ರೀತರಾಗುತ್ತಾರೆ. ಸೂಕ್ಷ್ಮಶರೀರದ ಮೂಲಕ ದೇವತೆಗಳು ಅಗ್ನಿಗೆ ಅರ್ಪಿಸಿದ ಆಹುತಿಗಳನ್ನು ಸ್ವೀಕರಿಸುತ್ತಾರೆ. ಮಾತ್ರವಲ್ಲದೆ ಯಜ್ಞಕರ್ತೃವನ್ನು ಆಶೀರ್ವದಿಸುತ್ತಾರೆ.

ಪಿತೃಯಜ್ಞ : ಮರೀಚಿ ಮತ್ತು ಮನುಮಹರ್ಷಿಯ ಮೂಲಕ ಉತ್ಪನ್ನವಾದ ಮನುಕುಲದವರಾದ ನಮ್ಮ ಹಿರಿಯ ಸಂತಾನ, ಹಿರಿಯ ಪೀಳಿಗೆಯವರ ಮರಣಾನಂತರ ದಲ್ಲಿ ಪಿತೃಲೋಕ ಎಂಬ ಲೋಕದಲ್ಲಿ ವಾಸಮಾಡಿಕೊಂಡಿರುತ್ತಾರೆ ಎಂಬ ತತ್ತ್ವ ಶ್ರದ್ಧೆಯೇ ಈ ಯಜ್ಞದ ಮೂಲತತ್ತ್ವವಾಗಿದೆ. ಏಕೆಂದರೆ ಹಿಂದಿನ ಪೀಳಿಗೆಯವರು ವಿದ್ಯೆ, ಸಂಸ್ಕೃತಿ, ಸಂಪತ್ತು, ಸುಖಗಳನ್ನು ಸಂಗ್ರಹಿಸಿದ್ದು ಈ ಪೀಳಿಗೆಗೆ ಲಭ್ಯವಾಗು ತ್ತವೆ. ಹಾಗಾಗಿ ಇಳೆಯಲ್ಲಿ ಜನ್ಮತಳೆದ ಜೀವಿಯು ತನ್ನ ಕುಟುಂಬದ ಹಿಂದಿನ ಹಿರಿಯ ರಿಗೆ, ಹಿಂದಿನ ಪೀಳಿಗೆಯವರಿಗೆ ಕೃತಜ್ಞನಾಗಿರಬೇಕು, ಅವರನ್ನು ಸದಾ ಸ್ಮರಿಸುತ್ತಿರ ಬೇಕು ಎಂಬ ಉದ್ದೇಶದಿಂದಲೂ, ಪಿತೃಗಳ ಆಶೀರ್ವಾದ, ಅನುಗ್ರಹ ಪಡೆಯು ಲೋಸುಗವಾಗಿಯೂ ಈ ಯಜ್ಞವನ್ನು ಮಾಡಬೇಕು. ಪ್ರಾರ್ಥನಾಪೂರ್ವಕವಾಗಿ, ಶಾಸ್ತ್ರೋಕ್ತವಾಗಿ ಜಲದಿಂದ ಪಿತೃಗಳಿಗೆ ಪ್ರತಿನಿತ್ಯ ತರ್ಪಣ ಬಿಡುವುದು, ಶಾಸ್ತ್ರದಂತೆ ನಿಶ್ಚಿತ ದಿವಸಗಳಲ್ಲಿ ಪಿಂಡಪ್ರದಾನವೆಂಬ ಕ್ರಿಯೆ—ಇವುಗಳಿಂದ ಕೂಡಿ ಈ ಯಜ್ಞಕಾರ್ಯ ವನ್ನು ಮಾಡುವುದಾಗಿದೆ.

ಭೂತಯಜ್ಞ : ಈ ಯಜ್ಞದ ಪ್ರಕಾರವಾಗಿ ಭೂಮಿಯ ಮೇಲೆ ಆಹಾರವನ್ನು ಇರಿಸಿ ಪಶುಪಕ್ಷಿಗಳಿಗೆ ಆಹಾರ ದೊರೆಯುವಂತೆ ವ್ಯವಸ್ಥೆ ಮಾಡುವುದಾಗಿದೆ. ಇದರಿಂದ ಭೂತದಯೆ, ದೀನಾನುಕಂಪಗಳು ವರ್ಧಿಸುತ್ತವೆ. ಜಗತ್ತಿನಲ್ಲಿ ತನಗಿಂತ ಕೀಳಾದವರನ್ನೂ

ಕೂಡ ಲಕ್ಷಿಸದೆ ಅವರಲ್ಲೂ ಕೂಡ ಭಗವಂತನು ಅಂತರ್ಯಾಮಿಯಾಗಿದ್ದಾನೆ ಎಂಬು ದನ್ನು ಸದಾ ಅನುಭವಿಸಲು ಈ ಯಜ್ಞವು ಸಹಕಾರಿಯಾಗಿರುತ್ತದೆ.

ಮನುಷ್ಯಯಜ್ಞ : ಮನುಷ್ಯನು ಇತರರನ್ನು ತನ್ನವರು ಎಂಬ ಪ್ರೀತಿಯಿಂದ ಕಾಣುತ್ತಾ ಅವರೊಡನೆ ಸ್ನೇಹ, ಸಹಕಾರಗಳಿಂದ ಕೂಡಿ ಬಾಳನ್ನು ಸಾಗಿಸಲು ಸಹಕಾರಿ ಯಾಗುವಂತೆ ಆತನ ಮನಸ್ಸನ್ನು ಸಿದ್ಧಗೊಳಿಸುವುದೇ ಈ ಯಜ್ಞದ ಉದ್ದೇಶವಾಗಿದೆ. ಅಲ್ಲದೆ ಭಗವಂತನು ಸರ್ವರೂಪಗಳಲ್ಲೂ ಇದ್ದಾನೆ ಎಂಬ ತತ್ತ್ವವನ್ನು ಕಾರ್ಯತಃ ಅನುಷ್ಠಾನಕ್ಕೆ ತರಲು ಈ ಯಜ್ಞವು ಸಹಕಾರಿಯಾಗಿರುತ್ತದೆ. ಮನೆ ಇಲ್ಲದವರಿಗೆ, ಅತಿಥಿಗಳಿಗೆ, ದೀನರಿಗೆ, ರಿಕ್ತರಿಗೆ ಊಟ ಉಪಚಾರ, ಸತ್ಕಾರ, ಸಹಾಯಗಳನ್ನು ನೀಡು ವುದು ಮನುಷ್ಯಯಜ್ಞವಾಗುತ್ತದೆ. ಮನುಷ್ಯಯಜ್ಞದಲ್ಲಿ ಬರೀ ಆಹಾರವನ್ನು ಕೊಡುವು ದಾಗಲಿ, ಮನೆಗೆ ಬಂದವರನ್ನು ಉಪಚರಿಸುವುದಾಗಲಿ ಅಷ್ಟೇ ವಿಚಾರಗಳು ಸೇರಿರುವು ದಿಲ್ಲ. ಮನುಕುಲದ ಉನ್ನತಿಗಾಗಿ ತಾನು ಜಗದಲ್ಲಿ ಮಾಡಲು ಸಾಧ್ಯವಾಗುವ ಎಲ್ಲಾ ವಿಧದ ಸೇವಾಕಾರ್ಯಗಳೂ ಈ ಯಜ್ಞದಲ್ಲಿ ಅಡಕವಾಗಿರುತ್ತವೆ.

ಹೀಗೆ ಈ ಪಂಚಮಹಾಯಜ್ಞಗಳನ್ನು ಪ್ರತಿದಿನವೂ ಮಾಡುತ್ತಾ ಗೃಹಸ್ಥನು ಪರಿಶುದ್ಧನೂ ಪವಿತ್ರನೂ ಪರೋಪಕಾರಿಯೂ ಆಗಿ ತನ್ನ ಗೃಹಸ್ಥಜೀವನವನ್ನು ಸಾಗಿಸುತ್ತಿರಬೇಕು. ಗೃಹಸ್ಥಾಶ್ರಮವು ಅದೆಷ್ಟು ಮುಖ್ಯ ಹಾಗೂ ಜವಾಬ್ದಾರಿಯುತ ವಾದುದು ಎಂಬುದರ ಬಗೆಗೆ ಮನುಸ್ಮೃತಿಯಲ್ಲಿ ಮಹರ್ಷಿ ಮನುಗಳು ಹೇಳಿರುವ ಮಾತುಗಳು ಹೀಗಿವೆ :

**ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥೋ ಯತಿಸ್ತಥಾ ।**
**ಏತೇ ಗೃಹಸ್ಥಪ್ರಭವಾಃ ಚತ್ವಾರಃ ಪೃಥಗಾಶ್ರಮಾಃ ॥**

—ಮನುಸ್ಮೃತಿ, ಅಧ್ಯಾಯ ೬, ೮೭

"ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸಿ ಈ ನಾಲ್ಕು ಮಂದಿಯೂ ಗೃಹಸ್ಥಾಶ್ರಮದಿಂದಲೇ ಉತ್ಪತ್ತಿಯಾಗಿರುತ್ತಾರೆ."

ಗೃಹಸ್ಥಾಶ್ರಮಿಯು ಪಂಚಮಹಾಯಜ್ಞಗಳನ್ನು ಮಾಡುತ್ತಾ, ಕುಟುಂಬದಲ್ಲಿ ಸಂತುಷ್ಟನಾಗಿ, ಇತರರಿಗೆ ಸುಖ ಸಂತೋಷಗಳನ್ನು ನೀಡುವವನಾಗಿ ಬಾಳುತ್ತಿರಬೇಕು. ಯಾರ ಕುಟುಂಬದಲ್ಲಿ ಸ್ತ್ರೀಯರು ಸಂತೋಷವಾಗಿರುತ್ತಾರೋ ಅವರ ಕುಟುಂಬವು ಸುಖ, ಶಾಂತಿಗಳಿಂದ ಕೂಡಿರುತ್ತದೆ ಎಂದು ಮನುಸ್ಮೃತಿಯಲ್ಲಿ ಹೇಳಲಾಗಿದೆ. ಇಲ್ಲಿ ಸ್ತ್ರೀಯರು ಸುಖವಾಗಿ ಸಂತೋಷದಿಂದ ಇರುವುದೆಂದರೆ, ಅವರು ಧರ್ಮಕ್ಕೆ ನೀತಿಗೆ ಅನುಸಾರವಾಗಿ ನಡೆದುಕೊಳ್ಳುತ್ತಾ, ಸಂಸಾರದಲ್ಲಿರುವಾಗ ಅವರಿಗೆ ಧರ್ಮವಿರುದ್ಧವಾಗಿ ತೊಂದರೆ ನೀಡಿ ಅವರು ವ್ಯಸನದಲ್ಲಿರುವಂತೆ ಮಾಡಬಾರದು ಎಂದು ತಾತ್ಪರ್ಯವೇ ವಿನಾ ಸ್ತ್ರೀಯರು ದುಃಖಪಟ್ಟರೆ, ಅಸಂತುಷ್ಟರಾದರೆ ಆ ಮಾತ್ರಕ್ಕೆ ಆ ಮನೆ ಸುಖ ಶಾಂತಿಗಳಿಂದ ಕೂಡಿರುವುದಿಲ್ಲ ಎಂಬ ಅರ್ಥ ಇಲ್ಲಿ ಕೂಡಿಬರುವುದಿಲ್ಲ.

**ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ ।**
**ಯತ್ರ ತಾಸ್ತು ನ ಪೂಜ್ಯಂತೇ ಸರ್ವಾಸ್ತತ್ರಾಫಲಾಃ ಕ್ರಿಯಾಃ ॥**

—ಮನುಸ್ಮೃತಿ

"ಎಲ್ಲಿ (ಯಾವ ಮನೆಯಲ್ಲಿ) ನಾರಿಯರು ಪೂಜ್ಯತೆ-ಗೌರವಗಳಿಗೆ ಒಳಗಾಗಿರುತ್ತಾರೋ ಅಲ್ಲಿ ದೇವತೆಗಳು ರಮಿಸುತ್ತಾರೆ. ಎಲ್ಲಿ ನಾರಿಯರು ಗೌರವಿಸಲ್ಪಡುವುದಿಲ್ಲವೋ ಅಲ್ಲಿ ಸಕಲ ಕ್ರಿಯೆಗಳೂ (ಯಜ್ಞಯಾಗಾದಿ ಕರ್ಮಗಳೂ ಸಹ) ಅಫಲವಾಗುವುವು."

ಹಾಗೆಯೇ ಗೃಹಸ್ಥನು ಹಿಂದೂ ಜೀವನ ಧರ್ಮದ, ಆರ್ಯಜೀವನದ ಮೂಲ ಕೇಂದ್ರಶಕ್ತಿ-ಹೃದಯವಾಗಿದ್ದಾನೆ. ಇದನ್ನು ಮನುಮಹರ್ಷಿಗಳು ಸ್ಪಷ್ಟಪಡಿಸುತ್ತಾ ಉತ್ತಮ ಉಪಮೆಯೊಂದರ ಮೂಲಕ ಹೀಗೆ ವಿವರಿಸಿರುತ್ತಾರೆ :

**ಯಥಾ ವಾಯುಂ ಸಮಾಶ್ರಿತ್ಯ ಸರ್ವೇ ಜೀವಂತಿ ಜಂತವಃ |**
**ತಥಾ ಗೃಹಸ್ಥಮಾಶ್ರಿತ್ಯ ವರ್ತಂತೇ ಇತರಾಶ್ರಮಾಃ ||** —ಮನುಸ್ಮೃತಿ

"ಯಾವ ರೀತಿ ವಾಯುವನ್ನು ಸಮಾಶ್ರಯಿಸಿ ಎಲ್ಲಾ ಜೀವಿಗಳೂ ಜೀವಿಸುತ್ತಿರುತ್ತವೋ ಹಾಗೆಯೇ ಗೃಹಸ್ಥನನ್ನು ಆಶ್ರಯಿಸಿ ಇತರ ಆಶ್ರಮದವರು ಜೀವಿಸುತ್ತಿರುತ್ತಾರೆ."

ಅತಿಥಿಸತ್ಕಾರ, ಪರಿಶ್ರಮ, ಸತ್ಯ, ಶುಚಿತ್ವ, ಉದಾರತೆ, ದಾನಶೀಲತೆ, ಭೋಜನ ಹಾಗೂ ಜೀವನದ ಪವಿತ್ರತೆ ಇವುಗಳು ಗೃಹಸ್ಥನಲ್ಲಿ ಇರಬೇಕಾದ ವಿಶಿಷ್ಟವಾದ ಗುಣಗಳಾಗಿವೆ.

ವಾನಪ್ರಸ್ಥ ಆಶ್ರಮ : ತನ್ನ ಶರೀರದ ಚರ್ಮ ನೆರಿಗಟ್ಟಿದಾಗ, ವಯಸ್ಸಾಗಿ ಕೂದಲು ಬಿಳಿದಾದಾಗ, ತನಗೆ ಮೊಮ್ಮಗ ಹುಟ್ಟಿದಾಗ, ಗೃಹಸ್ಥನು ಗೃಹಸ್ಥಾಶ್ರಮವನ್ನು ತ್ಯಜಿಸಿ ವಾನಪ್ರಸ್ಥ ಆಶ್ರಮವನ್ನು ಅವಲಂಬಿಸಬೇಕು. ಈ ಹಂತದಲ್ಲಿ ಲೌಕಿಕ ಸುಖಭೋಗಗಳ ಆಕಾಂಕ್ಷೆ, ಆ ಕುರಿತಾಗಿ ಉತ್ಸಾಹಗಳು ಕಡಿಮೆಯಾಗುತ್ತವೆ. ತನಗೆ ಬೇಕಾದ ವೈಯಕ್ತಿಕ ಬೇಕುಬೇಡಿಕೆಗಳು ಅತಿಕಡಿಮೆಯಾಗುತ್ತವೆ. ಜೀವನ ಎಂದರೇನು ? ಲೋಕದ ಕ್ಷಣಿಕ ಸುಖದ ಮರ್ಮವೇನು ? ಇತಿಮಿತಿಗಳೇನೇನು ? ಎಂಬುದರ ಅರಿವು ಗೃಹಸ್ಥನಿಗೆ ಉಂಟಾಗಿ ಅವನು ತನ್ನ ಜೀವನದ ಚತುರ್ವಿಧ ಪುರುಷಾರ್ಥಗಳಲ್ಲಿ ಧರ್ಮ, ಅರ್ಥ, ಕಾಮಗಳನ್ನು ಸಂಪಾದಿಸಿ ಅನುಭವಿಸಿದವನಾಗಿ ಇದೀಗ ಮೋಕ್ಷಾನಂದಕ್ಕಾಗಿ ಹೆಚ್ಚು ಪರಿಶ್ರಮದಿಂದ ದುಡಿಯಲು ಸಿದ್ಧವಾಗುವ ಹಂತವೇ ವಾನಪ್ರಸ್ಥ ಆಶ್ರಮ. ವಾನಪ್ರಸ್ಥ ಎಂದರೆ ವನಕ್ಕೆ ತೆರಳಿ ಅಲ್ಲಿ ವಾಸಮಾಡಿ ಲೋಕದ ಸುಖ-ಆಸೆಗಳಿಂದ ಮನಸ್ಸನ್ನು ಹಿಂತೆಗೆದು ಸರ್ವಸಂಗಪರಿತ್ಯಾಗಕ್ಕೆ ಅದನ್ನು ಸಿದ್ಧಗೊಳಿಸುವ ಆಶ್ರಮದ ಹಂತವಾಗಿರುತ್ತದೆ. ಈ ಆಶ್ರಮದ ಕಾಲಾವಧಿಯಲ್ಲಿ ಶಾಸ್ತ್ರಪಠಣ, ಅಧ್ಯಯನ, ಇಂದ್ರಿಯನಿಗ್ರಹ, ಭಗವಚ್ಚಿಂತನೆ, ಪ್ರಾರ್ಥನೆ, ಧ್ಯಾನಗಳಿಂದ ಮನಸ್ಸನ್ನು ಶುಚಿಗೊಳಿಸಿ, ಸ್ಥಿರಗೊಳಿಸಿ ಬದುಕನ್ನು ಪರಿಶುದ್ಧಮಾಡುವುದೇ ವಾನಪ್ರಸ್ಥನ ಕೆಲಸವಾಗಿರುತ್ತದೆ. ಅಲ್ಲದೆ ಲೌಕಿಕವಾದ ಎಲ್ಲಾ ಸಂಬಂಧಗಳನ್ನೂ ತ್ಯಜಿಸಿ ತನ್ನ ಸಹಧರ್ಮಿಣಿ ಇದ್ದರೆ, ಅವಳಿಗೆ ತನ್ನ ಒಡನೆ (ಕಾಡಿಗೆ) ಬರಲು ಸಾಧ್ಯವಿದ್ದರೆ ಅವಳನ್ನು ಒಡಗೊಂಡು ವಾನಪ್ರಸ್ಥಾಶ್ರಮಕ್ಕೆ ಗೃಹಸ್ಥನು ಕಾಲಿಡುತ್ತಾನೆ. ತದನುಸಾರವಾಗಿ ಅವನು ಪ್ರಪಂಚದ ಲೌಕಿಕ ವ್ಯವಹಾರದಿಂದ ನಿವೃತ್ತನಾಗಿ ವನಕ್ಕೆ ತೆರಳುತ್ತಾನೆ. ತನ್ನ ಪತ್ನಿಯು ತನ್ನೊಡನೆ ಬಾರದೇ ಉಳಿದರೆ ತಾನೊರ್ವನೇ ವನಕ್ಕೆ ತೆರಳಬಹುದು. ಪತ್ನಿಯು ಅವಳ ಮಕ್ಕಳ ಜೊತೆಯಲ್ಲಿ

ಗೃಹದಲ್ಲೇ ಉಳಿಯಬಹುದು. ಪ್ರಾರ್ಥನೆ, ಪಂಚಮಹಾಯಜ್ಞ, ಇಂದ್ರಿಯನಿಗ್ರಹ, ಪವಿತ್ರತೆ ಮತ್ತು ಸರ್ವಜೀವರುಗಳ ಮೇಲಿನ ದಯೆ—ಇವುಗಳು ಈ ಆಶ್ರಮದ ನಿಯಮಾವಳಿಗಳಲ್ಲಿ ಅಡಕವಾಗಿರುವ ಮುಖ್ಯವಾದ ಅಂಶಗಳಾಗಿವೆ. ಗೃಹಸ್ಥನಾಗಿ ಜಗತ್ತಿನ ಸಮಾಜಕ್ಕೆ ಅವನು ಅನೇಕ ರೀತಿಗಳಲ್ಲಿ ಸಹಕಾರಿಯೂ ಪೋಷಕನೂ ಆಗಿದ್ದಂತೆ ವಾನಪ್ರಸ್ಥಾಶ್ರಮದಲ್ಲಿ ಪ್ರಾರ್ಥನೆ, ಸರ್ವಜೀವರುಗಳಿಗೆ ಹಿತವಾಗಲಿ ಎಂಬ ಹಾರೈಕೆ, ಪಂಚಮಹಾಯಜ್ಞದ ಪಾಲನೆ ಇವುಗಳ ಮೂಲಕ ವಾನಪ್ರಸ್ಥಾಶ್ರಮಿಯು ಲೋಕಕ್ಕೆ ಹಿತಕಾರಿಯಾಗುವಂತೆ ಜೀವನ ನಡೆಸುತ್ತಾನೆ.

ವಾನಪ್ರಸ್ಥಾಶ್ರಮಿಯು ಹೇಗೆ ಜೀವನವನ್ನು ನಿರ್ವಹಿಸಬೇಕು ಎಂಬುದರ ಕುರಿತಾಗಿ ಮನುಮಹರ್ಷಿಗಳು ಹೀಗೆ ಹೇಳಿರುತ್ತಾರೆ :

**ಸ್ವಾಧ್ಯಾಯೇ ನಿತ್ಯಯುಕ್ತಃ ಸ್ಯಾತ್ ದಾಂತೋ ಮೈತ್ರಃ ಸಮಾಹಿತಃ ।**
**ದಾತಾ ನಿತ್ಯಮ್-ಅನಾದಾತಃ ಸರ್ವಭೂತಾನುಕಂಪಕಃ ॥** —ಮನುಸ್ಮೃತಿ

"ಸದಾ ಅಧ್ಯಯನಶೀಲನಾಗಿರಬೇಕು. ಎಲ್ಲರೊಡನೆ ಮಿತ್ರತ್ವದಿಂದ ಇರಬೇಕು. ಸಮಾಹಿತರಾಗಿರಬೇಕು. ಸದಾ ದಾನವನ್ನು ಕೊಡುತ್ತಾ ತಾನು ಪ್ರತಿಯಾಗಿ ಏನನ್ನೂ ತೆಗೆದುಕೊಳ್ಳಬಾರದು. ಎಲ್ಲಾ ಜೀವಿಗಳ ಮೇಲೆ ದಯೆ ಉಳ್ಳವನಾಗಿರಬೇಕು."

ಸಂನ್ಯಾಸ : ಸಂನ್ಯಾಸವೆಂದರೆ (ಉದಾತ್ತೀಕರಣ ಮಾಡುವುದು) ತ್ಯಜಿಸುವುದು ಎಂದು ಅರ್ಥವಾಗುತ್ತದೆ. ಸಂನ್ಯಾಸ ಎಂದರೆ ಎಲ್ಲವನ್ನೂ ತ್ಯಜಿಸುವುದು ಎಂದು ಅರ್ಥ. ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಆಶ್ರಮಧರ್ಮಗಳನ್ನು ಕ್ರಮವಾಗಿ ಪಾಲಿಸಿ, ಅನಂತರ ಸಂನ್ಯಾಸ ಸ್ವೀಕಾರ ಮಾಡುವುದಕ್ಕೆ ಕ್ರಮಸಂನ್ಯಾಸ ಎಂದು ಹೆಸರು. ಸಂನ್ಯಾಸವನ್ನು ಬ್ರಹ್ಮಚರ್ಯ ಆಶ್ರಮದಿಂದ ಇಲ್ಲವೇ ಯಾವುದೇ ಇತರ ಆಶ್ರಮದಿಂದ ನೇರವಾಗಿ ಸ್ವೀಕರಿಸಬಹುದು. ಜಾಬಾಲ ಉಪನಿಷತ್ತಿನಲ್ಲಿ "ಯದಹರೇವ ವಿರಜೇತ್ ತದಹರೇವ ಪ್ರವ್ರಜರೇತ್", ಎಂದರೆ ಯಾವಾಗ ಪ್ರಾಪಂಚಿಕ ವಿಚಾರಗಳಲ್ಲಿ ಆಸಕ್ತಿ ಇಲ್ಲದಂತಾಗಿ ಆ ರೀತಿಯ ಮನಸ್ಸುಂಟಾಯಿತೋ ಆಗ ವೈರಾಗ್ಯಯುಕ್ತನಾಗಿ ಮನೆ ಬಿಟ್ಟು ತೆರಳಿ ವಿಧಿಯುಕ್ತವಾಗಿ ಸಂನ್ಯಾಸವನ್ನು ಸ್ವೀಕರಿಸಬಹುದು ಎಂದು ಹೇಳಿದೆ.

ಸಂನ್ಯಾಸವು ಜನ್ಮತಳೆದ ಜೀವಿಯ ಜೀವನದ ವಿಕಾಸದ ಕೊನೆಯ ಹಂತವಾಗಿರುತ್ತದೆ. ಪ್ರಪಂಚದಲ್ಲಿ ಜನ್ಮವೆತ್ತಿದ ಜೀವಿಯು ತನ್ನ ಜೀವನದ ಪರಮಗುರಿಯಾದ ಮೋಕ್ಷಾನಂದ ಹೊಂದುವುದನ್ನು ನೆನಪಿನಲ್ಲಿಟ್ಟುಕೊಂಡು ವಿವೇಕದಿಂದ ಕೂಡಿದವನಾಗಿ ಗುರಿಯ ಸಾಧನೆಗಾಗಿ ದೃಢವ್ರತನಾಗುವ ಆಶ್ರಮಹಂತವೇ ಸಂನ್ಯಾಸ ಆಶ್ರಮ. ಜಗತ್ತಿನಲ್ಲಿ ಜನ್ಮತಳೆಯುವಾಗ ಅಳುತ್ತಾ ಬಂದ ಜೀವಿ ಈ ಆಶ್ರಮದಲ್ಲಿ ಕೊನೆಯ ಉಸಿರು ಎಳೆಯುವಾಗ ನಗುತ್ತಾ ಇಳೆಯಿಂದ ತೆರಳುತ್ತಾನೆ. ಅಂತಹ ಮನಶ್ಶಕ್ತಿ, ವಿವೇಕ, ಜ್ಞಾನಗಳನ್ನು ನೀಡುವ ಆಶ್ರಮವೇ ಸಂನ್ಯಾಸ ಆಶ್ರಮ. ಜೀವನದ ಸುಖದುಃಖಾದಿಗಳೆಂಬ ದ್ವಂದ್ವ ಅನುಭವಗಳಿಗೆ ಸಂನ್ಯಾಸಿಯು ಅತೀತನಾಗಿರುತ್ತಾನೆ. ಜೀವನದ ಪರಮಗುರಿಯಾದ ಮೋಕ್ಷದ ಪ್ರಾಪ್ತಿಗಾಗಿ ಈ ಆಶ್ರಮದಲ್ಲಿ ಜೀವಿಯು ದೃಢವ್ರತನಾಗಿ ಸಾಧನೆಮಾಡುತ್ತಾನೆ. ತನ್ನ ಆದರ್ಶವಾದ ನಿರ್ಮಲಜೀವನದಿಂದ ಜೀವಿಯು ಹೇಗೆ ಜೀವನದಲ್ಲಿ

ವಿಕಾಸವಾಗುತ್ತಾ ಪರಿವರ್ತನೆಯನ್ನು ಪಡೆಯಬಹುದು ಎಂಬುದನ್ನು ಈ ಆಶ್ರಮವು ಸ್ಪಷ್ಟೀಕರಿಸುತ್ತವೆ. ಮಾತ್ರವಲ್ಲದೆ ಇತರ ಆಶ್ರಮದವರಿಗೆ ಸ್ಫೂರ್ತಿ, ಮಾರ್ಗದರ್ಶನ, ಜೀವನದ ನಿಜಗುರಿಯ ಬಗ್ಗೆ ಸ್ಪಷ್ಟ ನೆನಪನ್ನು ಪ್ರಾಯೋಗಿಕವಾದ ಆದರ್ಶಸಹಿತವಾಗಿ ನೀಡುತ್ತದೆ. ಜೀವಿಯ ವೈಯಕ್ತಿಕ ಜೀವನದಲ್ಲಿ ಈ ಆಶ್ರಮವು ಜೀವನದ ನಿಜವಾದ ಗುರಿಯನ್ನು ಮುಟ್ಟಲು ಎಷ್ಟು ಅಗತ್ಯವೋ ಹಾಗೆಯೇ ಜೀವಿಗಳ ಬದುಕಿನಲ್ಲಿ ಈ ಆಶ್ರಮದ ಪವಿತ್ರ ಆದರ್ಶ, ಮಾರ್ಗದರ್ಶನ ಸಾಮೂಹಿಕವಾಗಿಯೂ ಅಷ್ಟೇ ಅಗತ್ಯ. ಸಂನ್ಯಾಸ ಆಶ್ರಮಯುಕ್ತರು, ಸ್ವಯಂ ಆತ್ಮಪ್ರಕಾಶದಿಂದ ಕೂಡಿದವರಾಗಿ ಇತರ ಆಶ್ರಮದವರಿಗೆ ಪವಿತ್ರರೂ, ಮಹಾಪುರುಷರೂ, ಸರ್ವವಿಧದಲ್ಲಿ ಹಿರಿಯರೂ ಆಗಿ, ಬೆಳಕು-ಮಾರ್ಗದರ್ಶನ, ಆಶೀರ್ವಾದಗಳನ್ನು ನೀಡುವವರಾಗಿರುತ್ತಾರೆ.

ಹಿಂದೂಧರ್ಮದಲ್ಲಿ ಸಂನ್ಯಾಸಿಯೆಂದರೆ ಒಂದು ವ್ಯಕ್ತಿ ಎಂದಾಗಿರದೆ ದಿವ್ಯತೆ, ಪವಿತ್ರತೆ, ಆತ್ಮಶಕ್ತಿ ಇವುಗಳು ಪ್ರಕಟಗೊಂಡು ಮೈವೆತ್ತ ಮೂರ್ತಿಸ್ವರೂಪ ಎಂದಾಗಿದ್ದು ಸಂನ್ಯಾಸಿಗಳು ಸರ್ವಾದರಣೀಯವಾಗಿರುತ್ತಾರೆ.

ಸಂನ್ಯಾಸಿಗಳಲ್ಲಿ ಮುಖ್ಯವಾಗಿ ನಾಲ್ಕು ವರ್ಗಗಳಿವೆ :

(೧) ಕುಟೀಚಕ, (೨) ಬಹೂದಕ, (೩) ಹಂಸ, (೪) ಪರಮಹಂಸ.

**ಕುಟೀಚಕ :** ಒಂದೇ ಕಡೆಯಿಂದ ಮಾತ್ರ ಆಹಾರವನ್ನು ಭಿಕ್ಷರೂಪವಾಗಿ ಸ್ವೀಕರಿಸುತ್ತಾ ಒಂದೇ ಕಡೆ ಇದ್ದುಕೊಂಡು ಧ್ಯಾನಾದಿಗಳನ್ನು ಮಾಡುತ್ತಾ ಜೀವಿಸುವ ಸಂನ್ಯಾಸಿಗಳೇ ಕುಟೀಚಕ ವರ್ಗಕ್ಕೆ ಸೇರಿದವರು.

**ಬಹೂದಕ :** ಬಹು ಎಡೆಗಳಲ್ಲಿ ಸಂಚರಿಸುತ್ತಾ ಭಿಕ್ಷವನ್ನು ಬಹುಕಡೆಗಳಿಂದ ಸ್ವೀಕರಿಸುತ್ತಾ ಈ ವರ್ಗದ ಸಂನ್ಯಾಸಿಗಳು ಬಾಳನ್ನು ಸಾಗಿಸುತ್ತಾರೆ. ಕಾವಡಿ, ಕಮಂಡಲು, ಪಾದುಕೆ, ಆಸನ, ಶಿಖೆ, ಯಜ್ಞೋಪವೀತ, ಕೌಪೀನ, ಕಾಷಾಯವಸ್ತ್ರಗಳನ್ನು ಧರಿಸಿ ತೀರ್ಥಕ್ಷೇತ್ರಗಳ ಯಾತ್ರೆಮಾಡುತ್ತಾ ಭಿಕ್ಷಾನ್ನದಿಂದ ಈ ವರ್ಗದ ಸಂನ್ಯಾಸಿಗಳು ಜೀವಿಸುತ್ತಾರೆ.

ಹಂಸರು : ಒಂದು ಊರಿನಲ್ಲಿ ಒಂದು ದಿನಕ್ಕಿಂತ ಹೆಚ್ಚು ನಿಲ್ಲದೆ ಸದಾ ಸಂಚರಿಸುತ್ತಾ ಭಿಕ್ಷಾನ್ನದಿಂದ ಜೀವಿಸುತ್ತಾ ಭಗವಂತನ ಧ್ಯಾನ, ಚಿಂತನೆಗಳಲ್ಲಿ ನಿರತರಾದವರೇ ಹಂಸ ವರ್ಗಕ್ಕೆ ಸೇರಿದ ಸಂನ್ಯಾಸಿಗಳು.

ಪರಮಹಂಸರು : ಸಂನ್ಯಾಸದಲ್ಲಿ ಪರಮಹಂಸ ವರ್ಗವು ಶ್ರೇಷ್ಠವಾದುದು, ಈ ವರ್ಗಕ್ಕೆ ಸೇರಿದ ಸಂನ್ಯಾಸಿಗಳು ಎಲ್ಲಾ ಕರ್ಮಗಳನ್ನೂ ತ್ಯಜಿಸಿ ಆತ್ಮನಿಷ್ಠರಾಗಿಯೇ ಇರುತ್ತಾರೆ.

ಸಂನ್ಯಾಸಿಜೀವನದ ಸ್ವರೂಪ ಹಾಗೂ ಸಂನ್ಯಾಸದ ಲಕ್ಷಣಗಳನ್ನು ಮನುಸ್ಮೃತಿಯಲ್ಲಿ ಹೀಗೆ ವಿವರಿಸಲಾಗಿದೆ :

**ಅನಗ್ನಿರನಿಕೇತಃ ಸ್ಯಾತ್ ಗ್ರಾಮಮನ್ನಾರ್ಥಮಾಶ್ರಯೇತ್ ।**
**ಉಪೇಕ್ಷಕೋಽಸಂಕುಸುಕೋ ಮುನಿರ್ಭಾವಸಮಾಹಿತಃ ॥** —ಮನುಸ್ಮೃತಿ

"ಅಗ್ನಿ ಮತ್ತು ನಿವಾಸಸ್ಥಾನವಿಲ್ಲದೆ ಇರುತ್ತಾನೆ. ಭೋಜನಕ್ಕಾಗಿ ಗ್ರಾಮಕ್ಕೆ ಹೋಗು

ತ್ತಾನೆ. ಎಲ್ಲರೊಡನೆ ಉಪೇಕ್ಷಾಭಾವದಿಂದ, ಉದಾಸೀನಬುದ್ಧಿಯಿಂದ ಇರುತ್ತಾನೆ. ತನ್ನ ನಿಶ್ಚಯದಲ್ಲಿ ದೃಢನಾಗಿದ್ದು ಸಮಾಹಿತಚಿತ್ತದಿಂದ ಕೂಡಿರುತ್ತಾನೆ."

ಶ್ರೀಮದ್ ಭಗವದ್ಗೀತೆಯಲ್ಲಿ ಸಂನ್ಯಾಸದ ಹಿರಿಮೆ ಹಾಗೂ ಸ್ವರೂಪದ ಕುರಿತಾಗಿ ಹೀಗೆ ಹೇಳಲಾಗಿದೆ :

**ಯೋಽಂತಃ ಸುಖೋಽಂತರಾರಾಮಸ್ತಥಾಂತರ್ಜ್ಯೋತಿರೇವ ಯಃ ।**
**ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥**

—ಗೀತಾ, ಅಧ್ಯಾಯ ೫, ಶ್ಲೋಕ ೨೪

"ಯಾವನು ಆತ್ಮನಲ್ಲಿಯೇ ಸುಖವುಳ್ಳವನೋ, ಆತ್ಮನಲ್ಲಿಯೇ ಪ್ರಕಾಶವುಳ್ಳವನೋ, ಆ ಯೋಗಿಯು ಬ್ರಹ್ಮಸ್ವರೂಪವನ್ನು ಹೊಂದಿ ಮುಕ್ತಿಯನ್ನು ಪಡೆಯುತ್ತಾನೆ."

**ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಮ್ ।**
**ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥**

—ಗೀತಾ, ಅಧ್ಯಾಯ ೫, ಶ್ಲೋಕ ೨೬

"ಕಾಮಕ್ರೋಧಗಳಿಂದ ಬಿಡುಗಡೆಯನ್ನು ಹೊಂದಿರುವವರೂ, ಮನಸ್ಸನ್ನು ವಶದಲ್ಲಿ ಇಟ್ಟುಕೊಂಡಿರುವವರೂ, ಆತ್ಮನನ್ನು ಸರಿಯಾಗಿ ತಿಳಿದುಕೊಂಡಿರುವವರೂ ಆದ ಯತಿಗಳಿಗೆ ಸರ್ವತ್ರ ಬ್ರಹ್ಮನಿರ್ವಾಣವು ಇರುತ್ತದೆ."

**ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ಸುಖಮ್ ।**
**ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯ್ಯಮಶ್ನುತೇ ॥**

—ಗೀತಾ, ಅಧ್ಯಾಯ ೫, ಶ್ಲೋಕ ೨೧

"ಶಬ್ದಾದಿ ಬಾಹ್ಯವಿಷಯಗಳಲ್ಲಿ ಆಸಕ್ತಿ ಇಲ್ಲದವನು ಅಂತಃಕರಣದಲ್ಲಿ ಸುಖವನ್ನು ಪಡೆಯುತ್ತಾನೆ. ಬ್ರಹ್ಮಯೋಗದಿಂದ ಕೂಡಿದ ಆತ್ಮವುಳ್ಳ ಆ ಯೋಗಿಯು ಅಕ್ಷಯವಾದ ಸುಖವನ್ನು ಪಡೆಯುತ್ತಾನೆ."

**ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।**
**ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥**

—ಗೀತಾ, ಅಧ್ಯಾಯ ೫, ಶ್ಲೋಕ ೧೭

"ಯಾರು ಬ್ರಹ್ಮದಲ್ಲಿಯೇ ನಿಶ್ಚಯಬುದ್ಧಿಯುಳ್ಳವರಾಗಿರುವರೋ, ಯಾರು ಬ್ರಹ್ಮದಲ್ಲಿಯೇ ಮನಸ್ಸಿಟ್ಟಿರುವರೋ, ಯಾರು ಬ್ರಹ್ಮನಿಷ್ಠರಾಗಿರುವರೋ, ಯಾರು ಬ್ರಹ್ಮವನ್ನೇ ಗತಿಯೆಂದು ನೆನಸಿರುವರೋ, ಯಾರು ಜ್ಞಾನದಿಂದ ಕಲ್ಮಷಗಳನ್ನು ತೊಳೆದುಕೊಂಡಿರುವರೋ ಅವರು ಮೋಕ್ಷವನ್ನು ಹೊಂದುತ್ತಾರೆ."

ಹೀಗೆ ಹಿಂದೂಧರ್ಮದಲ್ಲಿ ಹೇಳಿರುವ ನೀತಿಧರ್ಮಗಳು, ವರ್ಣಾಶ್ರಮಯೋಜನೆಗಳು ಮತ್ತು ವರ್ಣಾಶ್ರಮಧರ್ಮಗಳು ತುಂಬಾ ಅರ್ಥಗರ್ಭಿತ ಹಾಗೂ ಉಪಯುಕ್ತವಾದ ವ್ಯವಸ್ಥೆಗಳಾಗಿದ್ದು ಮಾನವರ ಇಹಜೀವನವನ್ನು ಸುಖಮಯವೂ ಸುಗಮವೂ ಮಾಡಿ ಜೀವನದ ಪರಮಗುರಿಯಾದ ಮೋಕ್ಷವನ್ನು ಸಾಧಿಸಲು ಅನುಕೂಲವಾಗುವಂತೆ ನಿಯೋಜಿಸಲ್ಪಟ್ಟಿರುತ್ತವೆ. ಸಂಸ್ಕಾರವಿಧಿಗಳು, ವರ್ಣಾಶ್ರಮಧರ್ಮದ ಕುರಿತಾದ

ಕರ್ಮಾನುಷ್ಠಾನವಿಚಾರಗಳು ಇವುಗಳೆಲ್ಲ ಆಚರಣೆಯ ವಿಧಾನದ ಮಟ್ಟಿಗೆ ಕಾಲ ದೇಶ ಸಂಪ್ರದಾಯವನ್ನು ಅನುಸರಿಸಿ ವ್ಯತ್ಯಾಸಗಳಿಂದ ಕೂಡಿರುತ್ತವೆ. ಬಾಹ್ಯಾಚರಣೆಯ ವಿಧಿ ವಿಚಾರಗಳಲ್ಲಿ ಈ ವ್ಯತ್ಯಾಸಗಳು ಕಂಡುಬಂದರೂ ಈ ಕರ್ಮಗಳೆಲ್ಲದರ ಮೂಲವಾದ ಉದ್ದೇಶ ಸ್ವರೂಪಶಕ್ತಿಗಳ ಮಟ್ಟಿಗೆ ವ್ಯತ್ಯಾಸವೇನೂ ಇರುವುದಿಲ್ಲ. ಆಶ್ರಮಧರ್ಮಗಳು, ಸಂಸ್ಕಾರವಿಧಿಗಳು ಇವುಗಳ ಅನುಕ್ರಮ ಮತ್ತು ಅನುಷ್ಠಾನದ ಬಗೆಗೆ ಆಧಾರವಾಗಿ ಬೋಧಾಯನ, ಆಪಸ್ತಂಭ, ಆಶ್ವಲಾಯನ ಮೊದಲಾದ ಮಹರ್ಷಿಗಳು ರೂಪಿಸಿರುವ ಸೂತ್ರನಿರ್ದೇಶನಗಳಿವೆ. ಅವುಗಳಲ್ಲಿ ಬೇರೆ ಬೇರೆ ಎಡೆಗಳಲ್ಲಿ ಒಂದೊಂದನ್ನು ಅನುಸರಿಸಿ ಆಚರಿಸಿಕೊಂಡು ಬರುವವರಾಗಿರುವ ಬೇರೆಬೇರೆಯ ಅನೇಕ ಒಳಪಂಗಡಗಳು ಹಿಂದೂ ಸಮಾಜದಲ್ಲಿ ಇಂದಿಗೂ ಇವೆಯಾದರೂ ಈ ಆಚರಣಾವ್ಯತ್ಯಾಸಗಳೆಲ್ಲ ಮೂಲವಾದ ಉದ್ದೇಶಕ್ಕೆ ವ್ಯತಿರಿಕ್ತವಾಗಿರುವುದಿಲ್ಲ. ವೈವಿಧ್ಯದ ಹಿನ್ನೆಲೆಯಲ್ಲಿ ಏಕತೆಯು ಇದ್ದೇ ಇದೆ ಎನ್ನುವುದು ಸ್ಪಷ್ಟವಾದ ವಿಚಾರವಾಗಿರುತ್ತದೆ. (ಈ ಅಧ್ಯಾಯದಲ್ಲಿ ಸಂಸ್ಕಾರಗಳು, ವರ್ಣಧರ್ಮ ಇತ್ಯಾದಿಗಳ ಕುರಿತಾದ ವಿವರ ಯಾವುದೇ ಒಂದು ಸೂತ್ರದವರ ಅಥವಾ ಪಂಗಡದವರ ಆಚರಣಾ ವಿವರಗಳಿಗೆ ಅನುಗುಣವಾಗಿ ಹೇಳಿರದೆ ಸಂಸ್ಕಾರ ವರ್ಣಧರ್ಮ ಆಶ್ರಮಯೋಜನೆ ಇತ್ಯಾದಿಗಳಲ್ಲಿ ಅಡಗಿರುವ ತತ್ತ್ವಾಂಶಗಳು, ಕ್ರಿಯಾವಿಚಾರಗಳ ಸೂಕ್ಷ್ಮ ಪರಿಚಯವನ್ನು ಮಾತ್ರ ಓದುಗರಿಗೆ ನೀಡುವ ಯತ್ನವನ್ನು ಮಾಡಲಾಗಿದೆ.)

೮

# ಹಿಂದೂಧರ್ಮದ ಉಪಾಸನಾ ವಿಚಾರಗಳು

ಉಪಾಸನೆ ಎಂದರೆ ಹತ್ತಿರ ಕುಳಿತುಕೊಳ್ಳುವುದು ಎಂದು ಅರ್ಥ. ಯಾರ ಹತ್ತಿರ ? ಎಂದರೆ ತನ್ನ ಇಷ್ಟದೇವರ ಹತ್ತಿರ ಎಂಬುದು ಇದರ ತಾತ್ಪರ್ಯ. ಜೀವಾತ್ಮನು ಪರಮಾತ್ಮನನ್ನು ಸೇರಲು ಗುರು-ಶಾಸ್ತ್ರಗಳ ವಚನೋಪದೇಶಗಳ ಆಧಾರದಿಂದ, ಪೂಜೆ, ಜಪ, ಧ್ಯಾನಾದಿ ಸಾಧನಾಕರ್ಮಗಳಿಂದ ಕೂಡಿ ಸಾಧನೆಯನ್ನು ಮಾಡುವುದನ್ನೇ ಉಪಾಸನೆ ಎಂದು ಹೇಳುವುದಾಗಿದೆ. ಉಪಾಸನೆಯು ವೇದಗಳ ಕಾಲದಿಂದಲೇ ನಡೆದುಕೊಂಡು ಬಂದಿದೆ. ವೇದಗಳ ಕಾಲದಲ್ಲಿ ಯಜ್ಞಯಾಗಾದಿ ವೈದಿಕಕರ್ಮಗಳು ನಡೆಸಲ್ಪಡುತ್ತಿದ್ದುವು. ವೈದಿಕ ಕರ್ಮಗಳಲ್ಲಿ ಕಾಮ್ಯಕರ್ಮಗಳು, ನಿತ್ಯಕರ್ಮಗಳು, ನೈಮಿತ್ತಿಕ ಕರ್ಮಗಳು ಎಂದು ಮೂರು ತರಹಗಳಿವೆ. ನಿಶ್ಚಿತವಾದ ಫಲದ ಪ್ರಾಪ್ತಿಗಾಗಿ ಉದ್ದೇಶಪೂರ್ವಕವಾಗಿ ಮಾಡುವ ಕರ್ಮಗಳು ಕಾಮ್ಯಕರ್ಮಗಳು. ಯಜ್ಞಯಾಗಾದಿಗಳೆಲ್ಲ ಈ ಕಾಮ್ಯಕರ್ಮಗಳಿಗೇ ಸೇರಿದವುಗಳಾಗಿವೆ. ಸಂಧ್ಯಾವಂದನೆ ಅಥವಾ ಸಂಧ್ಯೋಪಾಸನೆ ಮತ್ತು ಅಗ್ನಿಹೋತ್ರ ಇವು ನಿತ್ಯಕರ್ಮ. ಶ್ರಾದ್ಧಸಂಸ್ಕಾರಕ್ರಿಯೆಗಳೆಲ್ಲ ನೈಮಿತ್ತಿಕ ಕರ್ಮಗಳು. ಯಜ್ಞಯಾಗಾದಿ ಕಾಮ್ಯಕರ್ಮಗಳು ಈಗ ಸಾಮಾನ್ಯವಾಗಿ ಆಚರಣೆಯಲ್ಲಿ ಬಹುಕಡಿಮೆಯಾಗಿವೆ. ಅವುಗಳ ಸ್ಥಾನದಲ್ಲಿ ಪೂಜೆ ಪ್ರಾರ್ಥನೆ ಮಂತ್ರೋಪಾಸನೆಗಳು ಬಳಕೆಯಲ್ಲಿವೆ. ನಿತ್ಯಕರ್ಮವಾದ ಸಂಧ್ಯಾವಂದನೆಯು ಈಗಲೂ ಜೀವನದಲ್ಲಿ ಬಳಕೆಯಲ್ಲಿದೆ. ನೈಮಿತ್ತಿಕ ಕರ್ಮದ ಅಂಗವಾಗಿ ಸಂಸ್ಕಾರಕ್ರಿಯೆಗಳು ಎಂದರೆ ಜಾತಕರ್ಮ ಉಪನಯನ ವಿವಾಹ ಶ್ರಾದ್ಧಕರ್ಮ ಇತ್ಯಾದಿ ಕ್ರಿಯೆಗಳು ಈಗಲೂ ಬಳಕೆಯಲ್ಲಿವೆ. ಈ ಕರ್ಮಗಳಿಗೆಲ್ಲಾ ಮೂಲವಾಗಿ ವೇದಗಳು ಆಧಾರವಾದರೂ ನಂತರದ ಕಾಲದಲ್ಲಿ ಸ್ಮೃತಿ, ಆಗಮಶಾಸ್ತ್ರಗಳು ಸ್ಪಷ್ಟವಾಗಿ ವಿಶೇಷವಾದ ವಿವರಗಳನ್ನು ಒಳಗೊಂಡ ಆಧಾರಗ್ರಂಥಗಳಾದುವು. ಅದಕ್ಕೆ ಅನುಸಾರವಾಗಿ ಕರ್ಮಗಳಲ್ಲಿ ಶ್ರೌತಕರ್ಮ ಎಂದರೆ ವೇದದಲ್ಲಿ ಹೇಳಿದ ಕರ್ಮ, ಸ್ಮಾರ್ತಕರ್ಮ ಎಂದರೆ ಸ್ಮೃತಿಯಲ್ಲಿ ಹೇಳಿದ ಕರ್ಮ, ಆಗಮೋಕ್ತ ಕರ್ಮ ಎಂದರೆ ಆಗಮಗಳಲ್ಲಿ ಹೇಳಿದ ಕರ್ಮ ಎಂದು ವರ್ಗೀಕರಣ ಉಂಟಾಯಿತು.

ಉಪಾಸನೆ ಮಾಡುವವನನ್ನು ಉಪಾಸಕ ಎಂದು ಹೇಳುತ್ತಾರೆ. ಮಾನವದೇಹಧಾರಣೆ ಮಾಡಿದನಂತರ ಜೀವಾತ್ಮನು ಪರಮಾತ್ಮನನ್ನು ತನ್ನ ಜೀವನದ ಎಲ್ಲಾ ರಂಗಗಳಲ್ಲೂ

ಮಂತ್ರಗಳಲ್ಲೂ ಸ್ಮರಿಸುತ್ತಾ ಕೊನೆಗೆ ಮೋಕ್ಷವನ್ನು ಪಡೆಯಬೇಕು ಎಂಬುದೇ ಉಪಾಸನೆಯ ಒಸ್ನೆಲೆಯಲ್ಲಿ ಅಡಕವಾಗಿರುವ ತತ್ತ್ವವಾಗಿದೆ.

ಉಪಾಸನೆಯಿಂದ ಮನಶ್ಶುದ್ಧಿ, ಮನಶ್ಶಕ್ತಿ ಬರುವುದು ಮಾತ್ರವಲ್ಲದೆ ಮನುಷ್ಯನು ದೈವೀಗುಣಸಂಪದ್ಭರಿತನಾಗುತ್ತಾನೆ. ಜೀವನದ ದಿನನಿತ್ಯದ ಕೆಲಸಗಳು, ದುಃಖ–ಕಷ್ಟಗಳು ಇವುಗಳನ್ನೆಲ್ಲಾ ಸರಿಯಾಗಿ ಎದುರಿಸಿ ಬಾಳಿನ ಗುರಿಯ ಸಾಧನೆಯೆಡೆಗೆ ಸುಸೂತ್ರವಾಗಿ ಸಾಗಲು ಜೀವಿಗೆ ಬೇಕಾದ ವಿವೇಕ ವೈರಾಗ್ಯ ಜ್ಞಾನ ದೇಹಮನಗಳ ಶಕ್ತಿ ಇತ್ಯಾದಿಗಳು ಉಪಾಸನೆಯಿಂದ ದೊರಕುತ್ತವೆ. ಉಪಾಸಕನ ಮನಸ್ಸಿನ ಸ್ಥಿರತೆ, ಭಾವನೆಯ ಪವಿತ್ರತೆ ಮತ್ತು ಪ್ರತಿಷ್ಠೆ, ಹಾಗೂ ಆಗಲೇ ಸೂಕ್ಷ್ಮರೂಹದಲ್ಲಿರುವ ಆಧ್ಯಾತ್ಮಶಕ್ತಿಗಳ ವಿಕಾಸಕ್ಕೆ ಉಪಾಸನೆಯಿಂದ ಸರಸ್ಪ–ಪ್ರೋತ್ಸಾಹಗಳು ದೊರಕುತ್ತವೆ. ಲೌಕಿಕ ಪ್ರಗತಿ, ಆಧ್ಯಾತ್ಮಿಕ ಉನ್ನತಿ ಇವುಗಳು ಉಪಾಸನೆಯಿಂದ ದೊರೆಯುವ ಮಹತ್ಪೂರ್ಣವಾದ ಫಲವಾಗಿರುತ್ತವೆ.

ಉಪಾಸನೆಯಲ್ಲಿ ಸಗುಣೋಪಾಸನ, ನಿರ್ಗುಣೋಪಾಸನೆ ಎಂದು ಎರಡು ವಿಧಗಳಿವೆ. ಭಗವಂತನನ್ನು ನಿರ್ಗುಣನು, ನಿರಾಕಾರನು ಎಂದು ನಂಬಿ ಸಚ್ಚಿದಾನಂದನೆಂದೂ, ಪರಬ್ರಹ್ಮವೆಂದೂ ಯಾವ ಆಕಾರ ರೂಪ ಗುಣಗಳ ನೆರವಿಲ್ಲದ ಚಿಂತನ ಧ್ಯಾನಗಳನ್ನು ಮಾಡುವುದೇ ನಿರ್ಗುಣ–ನಿರಾಕಾರದ ಉಪಾಸನೆ. ಅವ್ಯಕ್ತದ ನಿರ್ಗುಣ–ನಿರಾಕಾರದ ಉಪಾಸನೆಯು ದೇಹವಂತರಿಗೆ ತುಂಬಾ ಕ್ಲೇಶದಾಯಕವಾದುದೆಂದು ಗೀತೆಯಲ್ಲಿ (ಅ. ೧೨–೫) ಹೇಳಲಾಗಿದೆ. ಅದರಂತೆ ನಿರ್ಗುಣ ಉಪಾಸಕರು ಬಹುಕಡಿಮೆಯಾಗಿದ್ದು ಸಗುಣ ಉಪಾಸಕರೇ ಬಹುಸಂಖ್ಯಾಕರಾಗಿರುತ್ತಾರೆ.

**ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್ ।**
**ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥**

"ಅವ್ಯಕ್ತದಲ್ಲಿ ಆಸಕ್ತವಾದ ಮನಸ್ಸುಳ್ಳವರಿಗೆ ಕ್ಲೇಶವು ಅಧಿಕತರವಾಗಿರುತ್ತದೆ. ಏಕೆಂದರೆ ದೇಹಧಾರಿಯಾಗಿದ್ದು ದೇಹಬೋಧೆ ಇರುವವರಿಗೆ ಅವ್ಯಕ್ತವೆಂಬ ಗತಿಯು ದುರ್ಲಭವಾಗಿರುತ್ತದೆ."

**ಸಗುಣ ಉಪಾಸನೆ :** ಸಗುಣ ಸಾಕಾರ ಉಪಾಸನೆ ಎಂದರೆ ಸರ್ವಾಂತರ್ಯಾಮಿಯೂ, ಅನಂತನೂ ಆದ ಪರಮಾತ್ಮನಿಗೆ ಆಕಾರವಿದೆಯೆಂದು ನಂಬಿ, ತನಗೆ ಇಷ್ಟವಾದ ಆಕಾರವನ್ನು ಕಲ್ಪಿಸಿ, ಅವನ ಆಕಾರದ ಸಂಕೇತಗಳಾಗಿ ಪ್ರತಿಮೆ, ಪ್ರತೀಕ ಇವುಗಳನ್ನು ಗೌರವಿಸಿ ಪ್ರೀತಿಯಿಂದ ಪೂಜಿಸುವುದು. ತನ್ನ ಕಷ್ಟನಷ್ಟಗಳ ನಿವಾರಣೆಗೆ, ಜೀವನದ ಪ್ರಗತಿಗೆ ಭಗವಂತನು ಸಹಾಯ ನೀಡುತ್ತಾನೆ ಎಂದು ನಂಬಿ ಭಗವಂತನ ಒಡನೆ ಮಾನವೀಯವಾದ ಪಿತೃ-ಪುತ್ರ-ಸಖ-ದಾಸ ಇತ್ಯಾದಿ ಸಂಬಂಧಗಳನ್ನು ಇಟ್ಟುಕೊಂಡು ಆತನ ನಾಮ-ಗುಣ-ಕೀರ್ತನೆ, ಮಂತ್ರಪಠಣ, ಪೂಜೆ ಇವುಗಳ ಮೂಲಕ ದಿನನಿತ್ಯವೂ ಆರಾಧನೆ ಮಾಡುವುದು ಸಗುಣ ಉಪಾಸನೆ.

ಸಗುಣೋಪಾಸನೆಯಲ್ಲಿ ಸಾಮಾನ್ಯವಾಗಿ ಅಡಗಿರುವ ಪ್ರಮುಖವಾದ ವಿಚಾರಗಳ ಎಂಟು ಎನ್ನಬಹುದು. ಅವು ಯಾವುವೆಂದರೆ :

(೧) ದೇವರ ಕುರಿತಾಗಿ ಅವತಾರಲೀಲೆ ಗುಣಗಾನಗಳನ್ನು ಕೇಳುವುದು, ಪುರಾಣ ಹರಿಕಥೆ ಇತ್ಯಾದಿಗಳ ಶ್ರವಣಮಾಡುವುದು.

(೨) ದೇವರ ನಾಮಗಳನ್ನು ಹಾಡುವುದು.

(೩) ಇಷ್ಟದೇವತೆಯನ್ನು ಆರಿಸಿಕೊಂಡು ತನ್ಮೂಲಕ ಭಗವಂತನ ಪೂಜೆಯನ್ನು ಮಾಡುವುದು. ಭಗವಂತನ ಮೂರ್ತಿ ಪ್ರತಿಮೆಗಳಿಗೆ ಹೂ ಗಂಧ ದೀಪ ನೈವೇದ್ಯ ಇತ್ಯಾದಿ ಉಪಚಾರಗಳ ಮೂಲಕ ದಿನನಿತ್ಯವೂ ಪೂಜೆಮಾಡುವುದು. ಸಂಧ್ಯಾಕಾಲಗಳಲ್ಲಿ ಸಂಧ್ಯೋಪಾಸನೆಯನ್ನು ಮಾಡುವುದು.

(೪) ಸದ್ಗ್ರಂಥಗಳ ಪಠಣ, ಪ್ರಸಂಗ, ಅಧ್ಯಯನ, ಪಾರಾಯಣಗಳನ್ನು ಮಾಡುವುದು.

(೫) ಮಂತ್ರಜಪ, ಭಗವಂತನ ಕುರಿತಾದ ಇಷ್ಟಸ್ವರೂಪದ ಮೇಲೆ ಧ್ಯಾನಮಾಡುವುದು.

(೬) ಸಾಧುಸಂತರ ಸೇವೆ, ಸತ್ಸಂಗಮಾಡುವುದು, ತೀರ್ಥಯಾತ್ರೆಮಾಡುವುದು.

(೭) ಸಮಾಜ, ದೇಶ ಹಾಗೂ ಜಗತ್ತಿನ ಹಿತಕ್ಕಾಗಿ ತನ್ನಿಂದಾದ ರೀತಿಯಲ್ಲಿ ಸೇವೆಯನ್ನು ಸಲ್ಲಿಸುತ್ತಾ, ಎಲ್ಲವೂ ಭಗವಂತನ ಕೆಲಸ, ಭಗವಂತನ ಸೇವೆ ಎನ್ನುವ ಸಮರ್ಪಣ ಭಾವದಿಂದ ಜೀವನವನ್ನು ನಿರ್ವಹಿಸುವುದು.

(೮) ಭಗವಂತನೇ ಸರ್ವಸ್ವ, 'ಅನ್ಯಥಾ ಶರಣಂ ನಾಸ್ತಿ'—ಬೇರೆ ಯಾರೂ ಗತಿ ಇಲ್ಲ, ಭಗವಂತನೇ ಆದಿ, ಅವನೇ ಮಧ್ಯ, ಅವನೇ ಅಂತ್ಯದ ಗುರಿ ಎಂಬ ಭಾವನೆಯಿಂದ, ಆತ್ಮಾರ್ಪಣಬುದ್ಧಿಯಿಂದ, ಈಶ್ವರಾರ್ಪಣದೃಷ್ಟಿಯಿಂದ ಜೀವನದಲ್ಲಿ ತನಗೆ ದೊರೆತ ಕೆಲಸಕಾರ್ಯಗಳನ್ನು ನಿರ್ವಹಿಸುತ್ತಾ ಬಾಳನ್ನು ಸಾಗಿಸುವುದು.

ಸಗುಣೋಪಾಸನೆಯಲ್ಲಿರುವ ವಿಶೇಷವಾದ ವಿಚಾರಗಳು ಇಷ್ಟದೇವತೆ ಹಾಗೂ ಇಷ್ಟಮಂತ್ರ, ಮೂರ್ತಿಪೂಜೆ ಮತ್ತು ಸಂಧ್ಯೋಪಾಸನೆ ಎಂದು ನಾಲ್ಕು ಆಗಿರುತ್ತದೆ. ಇವುಗಳ ಬಗೆಗೆ ಸ್ವಲ್ಪ ವಿವರವಾಗಿ ವಿಚಾರಮಾಡೋಣ.

ಇಷ್ಟದೇವತೆ : ಇಷ್ಟದೇವತೆ ಎಂದರೆ ಉಪಾಸಕನಿಗೆ ಇಷ್ಟವಾದ ಭಗವಂತನ ಒಂದು ಸ್ವರೂಪವಾಗಿರುತ್ತದೆ. ಭಗವಂತನು ಉಪಾಸಕನ ಕಲ್ಪನೆಗೆ ಅತೀತನೂ ಹೌದು, ಕಲ್ಪನೆಗೆ ಸೀಮಿತನೂ ಹೌದಾಗಿರುತ್ತಾನೆ ಎಂಬುದು ಇಷ್ಟದೇವತೆಯ ತತ್ತ್ವದ ರಹಸ್ಯವಾಗಿದೆ. ದೇವರು ಸರ್ವಾಂತರ್ಯಾಮಿಯಾಗಿದ್ದರೂ ಅವನಿಗೆ ಒಂದು ಸ್ವರೂಪ ಕಲ್ಪಿಸಿ ತನ್ನ ಮನಸ್ಸಿನ ಭಕ್ತಿ, ಪ್ರೀತಿಗಳನ್ನು ಅದರಲ್ಲಿ ಕೇಂದ್ರೀಕರಿಸಿ ಹಾರ್ದಿಕ ಹಾಗೂ ಮಾನವೀಯ ಸಂಬಂಧವನ್ನು ಕಲ್ಪಿಸಿ ಉಪಾಸನೆಯ ಆಧಾರವಸ್ತುವನ್ನು ಕೇಂದ್ರವಾಗಿಸಲು ಉಪಾಸಕನು ಆರಿಸಿಕೊಳ್ಳುವ ದೇವಸ್ವರೂಪವೇ ಇಷ್ಟದೇವತೆ. ಇಷ್ಟದೇವತೆಯು ಉಪಾಸಕನ ಮನೋಧರ್ಮ, ಒಲುಮೆ, ಕಲ್ಪನೆಗಳಿಗೆ ಅನುಸಾರವಾಗಿ ವಿಷ್ಣು, ಶಿವ, ರಾಮ, ಕೃಷ್ಣ, ರಾಮಕೃಷ್ಣ, ಭವಾನಿ, ದುರ್ಗೆ, ಲಲಿತೆ, ಶಂಕರಿ, ಪಾರ್ವತಿ, ಶಾರದೆ, ಲಕ್ಷ್ಮೀನರಸಿಂಹ—ಹೀಗೆ ಯಾವ ದೇವತಾರೂಪ ಬೇಕಾದರೂ ಆಗಬಹುದು. ತನ್ನ ಏಳಿಗೆಗೆ ಭಗವಂತನ ಈ ರೂಪದ ಆರಾಧನೆಯಿಂದ ಹಿತ-ಮಾರ್ಗದರ್ಶನ ದೊರಕುತ್ತದೆ ಎಂಬ ದೃಢವಾದ

ವಿಶ್ವಾಸ ಉಪಾಸಕನಿಗೆ ಯಾವ ದೇವಸ್ವರೂಪದ ಮೇಲೆ ಉಂಟಾಗುವುದೋ ಆ ಸ್ವರೂಪವು ಉಪಾಸಕನಿಗೆ ಇಷ್ಟಮೂರ್ತಿಯಾಗುತ್ತದೆ. ಆ ಇಷ್ಟದೇವತೆಯ ನಾಮವನ್ನು ಒಳಗೊಂಡ ನಾಮ, ಮಂತ್ರವೇ ಇಷ್ಟಮಂತ್ರವಾಗುತ್ತದೆ. ಇಷ್ಟಮಂತ್ರದ ಮೂಲಕ ಇಷ್ಟದೇವತೆಯ ಪೂಜೆಯನ್ನು ಉಪಾಸಕನು ನಿರ್ವಹಿಸುತ್ತಾನೆ. ಇಷ್ಟದೇವತೆಯ ಪೂಜೆಗಾಗಿ ಉಪಾಸಕನು ಇಷ್ಟದೇವತೆಯ (ಲೋಹದ) ವಿಗ್ರಹ, (ಕಲ್ಲಿನ) ಮೂರ್ತಿ, ಚಿತ್ರ, ಲಿಂಗ ಇವುಗಳಲ್ಲಿ ಯಾವುದಾದರೂ ಒಂದನ್ನು ಉಪಯೋಗಿಸಿಕೊಂಡು ಅದನ್ನು ಸಶಕ್ತ, ಸಾಂಗ, ಸದೃಢ ಎಂದು ನಂಬಿ ಪೂಜಿಸುತ್ತಾನೆ. ಇದೇ ಇಷ್ಟದೇವತಾ ಉಪಾಸನೆ. ಇಷ್ಟದೇವತಾ ಉಪಾಸನೆ ಮೊದಲು ಬಾಹ್ಯವಾಗಿ ಕೊನೆಗೆ ಅದು ಅಂತರ್ಯದಲ್ಲಿ ಹೃದಯ ಮಂದಿರದಲ್ಲಿ ಪ್ರತಿಷ್ಠಿತವಾಗುತ್ತದೆ. ಆಗ ಸಾಧಕನು ಬಾಹ್ಯಪೂಜೆ, ಆಡಂಬರ, ಸಲಕರಣೆಗಳನ್ನು ಆಧರಿಸದೆಯೇ ಅಂತರ್ಯದಲ್ಲಿ ಮಾನಸಿಕವಾಗಿ ಪೂಜೆಮಾಡುತ್ತಾನೆ. ಅದು ಮಾನಸಿಕವಾಗಿ ಇಷ್ಟದೇವತಾ ಆರಾಧನೆಯಾಗುತ್ತದೆ. ಬಾಹ್ಯಪೂಜೆಯು ಉಪಾಸನೆಯ ಆರಂಭದ ಸಾಮಾನ್ಯಮಟ್ಟವಾದರೆ, ಅಂತರ್ಯದ ಮಾನಸಿಕ ಪೂಜೆಯು ಅಂತ್ಯದ ಶ್ರೇಷ್ಠಮಟ್ಟವಾಗಿರುತ್ತದೆ. ಕೊನೆಗೆ ಇಷ್ಟದೇವತೆಯ ದರ್ಶನವಾಗಿ ಇಷ್ಟದೇವತೆ, ಉಪಾಸನೆ ಮಾಡುವ ವ್ಯಕ್ತಿ ಎಂಬ ಈ ಭೇದದ ಹಿನ್ನೆಲೆಯಲ್ಲಿ ಅಭೇದವಾದ ಪರಮಾತ್ಮ ಶಕ್ತಿ ಇದ್ದು ಆ ಶಕ್ತಿಯೇ ಸರ್ವಸ್ವ—ಸರ್ವ ಎಡೆಗಳಲ್ಲೂ ಆವೃತವಾಗಿರುತ್ತದೆ ಎಂಬ ನೆಲೆಯನ್ನು ಉಪಾಸಕನು ತಲುಪಿ ಅವರ್ಣನೀಯವಾದ ದಿವ್ಯಾನಂದವನ್ನು ಪಡೆಯುತ್ತಾನೆ.

ಒಬ್ಬ ಉಪಾಸಕನ ಇಷ್ಟದೇವತೆಗೂ ಇನ್ನೊಬ್ಬ ಉಪಾಸಕನ ಇಷ್ಟದೇವತೆಗೂ ಸ್ವರೂಪದಲ್ಲಿ ವ್ಯತ್ಯಾಸವಿರಬಹುದು. ಆದರೆ ತತ್ತ್ವಶಃ ಅವು ಒಂದೇ ಭಗವಂತನ ರೂಪಭೇದಗಳೇ ವಿನಾ ಭಗವಂತ ಬೇರೆ ಬೇರೆ ಎಂಬ ಅಭಿಪ್ರಾಯಕ್ಕೆ ಇಷ್ಟದೇವತೆಯ ತತ್ತ್ವದಲ್ಲಿ ಸ್ಥಾನವಿಲ್ಲ. ತನ್ನ ಇಷ್ಟದೇವತೆಯಲ್ಲಿ ಭಗವಂತನ ಸರ್ವಸ್ವರೂಪಗಳೂ ಅಡಗಿವೆ ಎಂದು ನಂಬಿರುವ ಉಪಾಸಕ ಇತರ ಸ್ವರೂಪಗಳಲ್ಲಿ ತನ್ನ ಇಷ್ಟದೇವತೆಯನ್ನೇ ಕಾಣುತ್ತಾ "ಅನೇಕದಲ್ಲಿ ಏಕ" ಎಂಬ ತತ್ತ್ವವನ್ನು ಅರಿತಿರುತ್ತಾನೆ, ಅನುಭವಿಸುತ್ತಾನೆ. ಇಷ್ಟದೇವತಾ ತತ್ತ್ವದ ಈ ಮುಖ್ಯಾಂಶವನ್ನು ಸರಿಯಾಗಿ ಅರಿಯದಿದ್ದರೆ, ರೂಢಿಸಿಕೊಳ್ಳದಿದ್ದರೆ ಅದರಿಂದ ಇಷ್ಟದೇವತಾವ್ಯಾಮೋಹ, ಅಹಂಕಾರ, ಮತಭ್ರಾಂತಿಗಳೆಲ್ಲ ಉಂಟಾಗಿ ಉಪಾಸಕನ ಜೀವನ ಕಷ್ಟಮಯವೂ ಕ್ಲಿಷ್ಟಯುಕ್ತವೂ ಆಗುವುದು ಮಾತ್ರವಲ್ಲದೆ ಆತ್ಮೋನ್ನತಿಗೆ ಅದರಿಂದ ಧಕ್ಕೆಬರುತ್ತದೆ.

ತನ್ನ ಇಷ್ಟದೇವತೆಯ ರೂಪಿನಲ್ಲಿ ತನಗೆ ಶಾಂತಿ ಸುಖ ಆತ್ಮೋನ್ನತಿಯನ್ನು ಕೊಡಬಲ್ಲ ಭಗವಂತನು ಸರ್ವಶಕ್ತನಾಗಿರುವಾಗ ಅವನು ಇನ್ನೂ ಇತರ ಇಷ್ಟರೂಪಗಳನ್ನು ಎಷ್ಟು ಬೇಕಾದರೂ ಧರಿಸಬಲ್ಲ ಎಂಬ ಸರಳ ವಿಚಾರದ ಸತ್ಯಸಂಗತಿಯನ್ನು ಉಪಾಸಕನು ಅರಿಯಬೇಕಾದುದು ಇಷ್ಟದೇವತಾತತ್ತ್ವದ ಸಂಬಂಧವಾಗಿರುವ ಮುಖ್ಯ ನಿಬಂಧನೆ ಆಗಿರುತ್ತದೆ.

## ಮೂರ್ತಿಪೂಜೆ ಅಥವಾ ವಿಗ್ರಹಾರಾಧನೆ

ಸರ್ವಶಕ್ತನೂ ಸರ್ವಾಂತರ್ಯಾಮಿಯೂ ಆಗಿರುವ ಭಗವಂತ ಮೂರ್ತಿಯಲ್ಲಿ ಹೇಗೆ ಸೀಮಿತವಾಗಿರಬಲ್ಲ ಎಂಬುದು ಮೂರ್ತಿಪೂಜೆಯ ವಿಚಾರವಾಗಿ ಮೊದಲು ಉದ್ಭವಿಸುವ ಶಂಕೆಯಾಗಿದೆ. ಉಪಾಸಕನು ತನ್ನ ಮನಸ್ಸನ್ನು ಭಗವಂತನ ಮೇಲೆ ಕೇಂದ್ರೀಕರಿಸಲು ಉಪಯೋಗಿಸುವ ಸಾಧನಸಲಕರಣೆಯೇ ಮೂರ್ತಿ ಅಥವಾ ವಿಗ್ರಹ ಆಗಿರುತ್ತದೆ. ಬಾಳೆಯ ಹಣ್ಣು ಎಂದು ನಾವು ಹೇಳುವಾಗ ಹಣ್ಣಿನ ಕಲ್ಪನೆ ನಮ್ಮ ಮನಸ್ಸಿನ ಒಳಗೆ ಬರುತ್ತವೆ, ಅದರ ಆಕಾರದ ಅರಿವು ಆಗಿಯೇ ಆಗುತ್ತದೆ. ಆಕಾರರಹಿತವಾಗಿ ಅದರ ಅರಿವು ಉಂಟಾಗುವಂತೆ ನಾವು ಬಾಳೆಹಣ್ಣನ್ನು ಯೋಚಿಸಲು ಸಾಧ್ಯವೇ ಇಲ್ಲ. ಹೀಗೆ ಮನಸ್ಸಿಗೆ ಯಾವ ಒಂದು ವಸ್ತುವನ್ನೇ ಆಗಲಿ ಯೋಚಿಸಬೇಕಾದರೆ ಅದರ ಮೇಲೆ ಮನಸ್ಸನ್ನು ಕೇಂದ್ರೀಕರಿಸಬೇಕಾದರೆ ಆ ವಸ್ತುವಿನ ರೂಪದ ಕಲ್ಪನೆ ಇಲ್ಲದೆ ಸಾಧ್ಯವಿಲ್ಲ. ಹಾಗಾಗಿ ಯೋಚನೆಯಿಂದ ನಾಮರೂಪಗಳು ಹೊರತಾಗಿರುವುದಿಲ್ಲ. ಇದೇ ತತ್ತ್ವವು ಮೂರ್ತಿಪೂಜೆಯ ವಿಚಾರದಲ್ಲಿ ಸಂಬಂಧವುಳ್ಳದ್ದಾಗಿದ್ದು ಅದರಲ್ಲಿ ಅಂತರ್ಗತವಾಗಿರುತ್ತದೆ. ನಮ್ಮ ತಂದೆ ಅಥವಾ ತಾಯಿಯ ಚಿತ್ರವನ್ನು ನೋಡಿದ ಕೂಡಲೇ ನಮಗೆ ಅವರ ಯೋಚನೆ, ಕಲ್ಪನೆ ಹೇಗೆ ತಕ್ಷಣ ಉಂಟಾಗಿ, ಅವರನ್ನು ಚಿಂತಿಸಲು ಅದು ಹೇಗೆ ಸಹಾಯವಾಗುತ್ತದೋ ಹಾಗೆಯೇ ಮೂರ್ತಿಯನ್ನು ನೋಡಿದ ಕೂಡಲೇ ದೇವರ ಕಲ್ಪನೆ ಉಂಟಾಗುತ್ತದೆ. ಪುಟ್ಟ ಫೋಟೋ ಆದರೂ ಅದರಲ್ಲಿ ತಂದೆಯು ದೊಡ್ಡ ಪ್ರಮಾಣ ಪೂರ್ತಿಯಾಗಿ ಅಡಕವಾಗಿದೆ ಎಂಬ ಕಲ್ಪನೆ ಬಂದರೂ, ಫೋಟೋ ತಂದೆಯಲ್ಲ—ಆದರೆ ತಂದೆಯ ಆಕೃತಿಯ ಪ್ರತಿನಿಧೀಕರಣವಾಗಿದ್ದು ಅದರಲ್ಲಿ ತಂದೆಯ ರೂಪ ತಪ್ಪಿಲ್ಲದೆ ಒಪ್ಪಿಗೆಯಾದ ರೀತಿಯಲ್ಲಿ ಸೇರಿದೆ ಎಂಬ ವಿಚಾರ ಹೇಗೆ . ಮತ್ತು ಎಷ್ಟು ಸತ್ಯವೋ ಹಾಗೆಯೇ ಮೂರ್ತಿಯೂ ಕೂಡ ದೇವರ ಪ್ರತೀಕವಾಗಿದೆ. ಆದರೆ ದೇವರು ಅಷ್ಟಕ್ಕೇ ಸೀಮಿತವಾಗಿ ಇರುವುದಿಲ್ಲ. ದೇವರು ಸರ್ವಶಕ್ತನಾಗಿರುವಾಗ ಅವನು ಮೂರ್ತಿಯಾಗಿ ಉಪಾಸಕನಿಗೆ ನರವಾಗಬಲ್ಲ ಅಥವಾ ಇನ್ನೂ ಏನು ಬೇಕಾದರೂ ಆಗಬಲ್ಲ ಎಂಬುದನ್ನು "ಸರ್ವಶಕ್ತ" ಎಂಬ ಶಬ್ದದ ಅಂತರಾರ್ಥದೊಡನೆ ತಿಳಿದುಕೊಳ್ಳಬೇಕಾದುದು ಮೂರ್ತಿಪೂಜೆಯ ಬಗೆಗೆ ತಿಳಿದಿರಬೇಕಾದ ಒಂದನೇ ಅಂಶವಾಗಿರುತ್ತದೆ. ದೇವರು ಸರ್ವಾಂತರ್ಯಾಮಿಯಾಗಿರುವಾಗ ಮೂರ್ತಿಯಲ್ಲಿ ಅವನು ಸೇರಿರದೇ ಇದ್ದರೆ ಅವನು ಮೂರ್ತಿಯಿಂದ ಹೊರಗಾಗಿ ಅವನ ಸರ್ವಾಂತರ್ಯಾಮಿತನಕ್ಕೇ ಅರ್ಥವಿಲ್ಲದಂತಾಗುತ್ತದೆ ಎಂಬ ಅಂಶವು ನೆನಪಿಡಬೇಕಾದ ಎರಡನೇ ವಿಚಾರವಾಗಿದೆ.

ಮೂರ್ತಿಗಳನ್ನು ತನಗೆ ಉಪಾಸನಾ ಸಾಧನಗಳೆಂದು ಮೊದಲು ಮೂರ್ತಿಪೂಜೆಯಿಂದ ಆರಂಭಿಸುವ ಸಾಧಕನು ಕೊನೆಗೆ ಅದರಲ್ಲೇ ಅಂತ್ಯಮಾಡದೆ ತನ್ಮೂಲಕ ಭಗವಂತನ ಸರ್ವವ್ಯಾಪಕತೆ, ಸರ್ವಾಂತರ್ಯಾಮಿತ್ವ ಇವುಗಳನ್ನು ಸಾಕ್ಷಾತ್ಕರಿಸಿ ಮೂರ್ತಿಯನ್ನು ಅವಲಂಬಿಸದೇ ಉಪಾಸನೆ ಮಾಡಲು ಸಮರ್ಥನಾಗುತ್ತಾನೆ. ಆ ಹಂತವನ್ನು ತಲುಪಿದಾಗ ಅವನಿಗೆ ಮೂರ್ತಿಯೂ ಭಗವಂತನಾಗಿ ಕಾಣುತ್ತದೆ. ಮಾತ್ರವಲ್ಲ, ಅದೇ ಮೂರ್ತಿಯನ್ನು ತನ್ನ ಅಂತರ್ಯದಲ್ಲೂ ಹೊರಗೂ ಎಲ್ಲೆಲ್ಲೂ ಕಾಣುತ್ತಾನೆ. ಆಗ

ಮೂರ್ತಿಯು ಅವನ ಪಾಲಿಗೆ ಉಪಾಸನಾಸಾಧನವಾಗದೆ ಉಪಾಸನಾಗುರಿಯಾದ ದೇವತೆಯೇ ಸಾಕ್ಷಾತ್ ಆಗಿ ಕಾಣುತ್ತದೆ. ಮಾನವನಾಗಿ ಜನ್ಮತಳೆದಮೇಲೆ ಅವನು ದೇವರನ್ನು ತನಗೆ ಇಷ್ಟಬಂದ ರೀತಿಯಲ್ಲಿ ಒಂದಲ್ಲ ಒಂದು ವಿಧದಲ್ಲಿ ರೂಪಕಲ್ಪನೆ ಇಲ್ಲದೆ ಆರಾಧಿಸಲು ಸಾಧ್ಯವೇ ಇಲ್ಲ ಎಂಬ ಸಹಜವಾದ ಸತ್ಯವೇ ಮೂರ್ತಿಪೂಜೆಯ ಹಿನ್ನೆಲೆಯಲ್ಲಿ ಅಡಕವಾಗಿರುವ ತತ್ತ್ವವೂ ಆಗಿರುತ್ತದೆ. ಹಿಂದೂಧರ್ಮದ ಅನೇಕ ಸಾಧುಸಂತರು, ಮಹಾತ್ಮರು ಮೂರ್ತಿಪೂಜೆಯನ್ನು ಮಾಡಿ ತಮ್ಮ ಗುರಿಯನ್ನು ಸೇರಿದ ಪ್ರಾಯೋಗಿಕ ನಿದರ್ಶನಗಳು ಮೂರ್ತಿಪೂಜೆಯ ಹಿಂದೆ ಅಡಕವಾಗಿರುವ ಸತ್ಯತತ್ತ್ವದ ಬಗೆಗೆ ದೃಢೀಕರಣೆಯನ್ನು ಮತ್ತು ಸ್ಪಷ್ಟೀಕರಣೆಯನ್ನು ನೀಡುತ್ತದೆ.

ಇತ್ತೀಚಿನವರಾದ ಶ್ರೀರಾಮಕೃಷ್ಣ ಪರಮಹಂಸರು ದಕ್ಷಿಣೇಶ್ವರದ ಕಾಳೀ ದೇಗುಲದಲ್ಲಿ ಜಗನ್ಮಾತೆ ಶ್ರೀ ಕಾಳಿಕಾಂಬೆಯ ಕಲ್ಲಿನ ವಿಗ್ರಹವನ್ನು ಸಾಕ್ಷಾತ್ ದೇವಿಯ ಸ್ವರೂಪ ಎಂದೇ ಆರಾಧಿಸಿ ಕೊನೆಗೆ ಅದರಲ್ಲಿ ಅವರು ದೇವಿಯ ಸಾಕ್ಷಾತ್ ಸಾನ್ನಿಧ್ಯವನ್ನು ಅನುಭವಿಸಿದ ಐತಿಹಾಸಿಕ ಸತ್ಯವು ಮೂರ್ತಿಪೂಜೆಯ ಬಗ್ಗೆ ಇರುವ ಹಲವು ನಿದರ್ಶನಗಳಲ್ಲಿ ಇತ್ತೀಚಿನ ನಿದರ್ಶನವಾಗಿದ್ದು ಅದರ ಉಪಯುಕ್ತತೆ ಅರ್ಥಪೂರ್ಣತೆಗಳ ಕುರಿತಾಗಿ ಸ್ಪಷ್ಟೀಕರಣವೂ ಆಗಿರುತ್ತದೆ.

ಹೀಗೆ ಮೂರ್ತಿಪೂಜೆಯು ಮೂಢನಂಬಿಕೆಯ ಅಥವಾ ಅಜ್ಞಾನಿಗಳು ಅನುಸರಿಸುವ ಉಪಾಸನಾಮಾರ್ಗವಾಗಿರದೆ ಉದ್ದಿಶ್ಯಪೂರ್ವಕವಾಗಿ ವಿವೇಕಯುಕ್ತವಾಗಿ ಸಾಧಕರು ಅನುಸರಿಸುವ, ಸುಗಮವೂ ಸುಭದ್ರವೂ ಆಗಿರುವ ಉತ್ತಮವಾದ ಒಂದು ಉಪಾಸನಾ ಮಾರ್ಗವಾಗಿರುತ್ತದೆ.

## ಸಂಧ್ಯೋಪಾಸನೆ

ಸೂರ್ಯನು ಉದಯಿಸುವ ವೇಳೆ, ಬಾನಿನ ನಡುನೆತ್ತಿಗೆ ಬರುವ ನಡುಹಗಲಿನ ವೇಳೆ, ಅಸ್ತಮಿಸುವ ವೇಳೆ—ಇವುಗಳನ್ನು ಸಂಧ್ಯಾಕಾಲ ಎಂದು ಹೇಳುತ್ತಾರೆ. ಸಂಧಿ ಎಂದರೆ ಒಂದು ಕಾಲಘಟ್ಟದಿಂದ ಇನ್ನೊಂದು ಕಾಲಘಟ್ಟಕ್ಕೆ ಇರುವ ಸಂಧಿಸಮಯವಾಗಿರುತ್ತದೆ. ಸಂಧ್ಯೆ ಎಂದು ಹೇಳುವ ಶಬ್ದಕ್ಕೆ ಸಂಧ್ಯಾಕಾಲ, ಸಂಧ್ಯಾಕರ್ಮ ಎಂದು ಅರ್ಥವಿರುವಂತೆ ಸಂಧ್ಯಾದೇವತೆ ಅರ್ಥಾತ್ ಪರಮಾತ್ಮ ಎಂಬ ಅರ್ಥವೂ ಇದೆ.

> ಅಹೋರಾತ್ರಸ್ಯ ಯಃ ಸಂಧಿಃ ಸೂರ್ಯನಕ್ಷತ್ರವರ್ಜಿತಃ ।
> ಸಾ ತು ಸಂಧ್ಯಾ ಸಮಾಖ್ಯಾತಾ ಮುನಿಭಿಸ್ತತ್ತ್ವದರ್ಶಿಭಿಃ ॥
>
> —ದಕ್ಷಸ್ಮೃತಿ

"ಸೂರ್ಯ ಮತ್ತು ನಕ್ಷತ್ರಗಳಿಂದ ರಹಿತವಾದ ಅಥವಾ ದಿನರಾತ್ರಿಗಳ ಸಂಧಿಯ ಸಮಯ ಯಾವುದಿದೆಯೋ ಅದನ್ನು ತತ್ತ್ವದರ್ಶಿಗಳಾದ ಮುನಿಗಳು ಸಂಧ್ಯೆ ಎಂದು ಹೇಳುತ್ತಾರೆ."

ಈ ಮೇಲಿನ ಉಕ್ತಿ ಪ್ರಕಾರ ಸಂಧ್ಯೆ ಎಂಬ ಶಬ್ದವು ಕಾಲ ಎಂಬ ದೃಷ್ಟಿಯಿಂದ ಉಪಯೋಗ ಮಾಡಲಾಗಿದೆ ಎಂಬುದು ಸ್ಪಷ್ಟವಾಗುತ್ತದೆ.

**ಅನುಸಂಧ್ಯಮುಪಾಸೀತ ಸಂಧ್ಯಾರೂಪಂ ರವಿಂ ದ್ವಿಜಃ ॥**

—ವ್ಯಾಸಸ್ಮೃತಿ

"ಸಂಧ್ಯಾರೂಪನಾದ ರವಿಯನ್ನು (ಪ್ರತಿ ಸಂಧ್ಯೆಯನ್ನು ಲಕ್ಷ್ಯೀಕರಿಸಿ) ಬ್ರಾಹ್ಮಣನು ಉಪಾಸಿಸಬೇಕು."

ಇಲ್ಲಿ ಕರ್ಮದ ಅರ್ಥದಿಂದ ಸಂಧ್ಯಾಶಬ್ದವನ್ನು ವ್ಯವಹರಿಸಲಾಗಿದೆ.

**ಸಂಧ್ಯೇತಿ ಸೂರ್ಯಗಂ ಬ್ರಹ್ಮ ॥**

—ವ್ಯಾಸಸ್ಮೃತಿ

"ಆದಿತ್ಯಮಂಡಲಗತ ಬ್ರಹ್ಮೈವ ಸಂಧ್ಯಾ"—ಎಂದರೆ ಸೂರ್ಯನೇ ಬ್ರಹ್ಮ. ಇಲ್ಲಿ ಸಂಧ್ಯೆ ಎಂದರೆ ಸೂರ್ಯ, ಬ್ರಹ್ಮ ಅಥವಾ ಪರಮಾತ್ಮ ಎಂದು ತಾತ್ಪರ್ಯ.

ಉದಯಸಂಧ್ಯೆಯನ್ನು ಪ್ರಾತಃಸಂಧ್ಯಾ ಎಂದೂ, ನಡುಸಂಧ್ಯೆಯನ್ನು ಮಧ್ಯಾಹ್ನ ಸಂಧ್ಯಾ ಎಂದೂ, ಅಸ್ತಮಾನದ ಸಂಧ್ಯೆಯನ್ನು ಸಾಯಂಸಂಧ್ಯಾ ಎಂದೂ ಹೇಳುತ್ತಾರೆ. ಯೋಗಿಗಳೂ ಸಂನ್ಯಾಸಿಗಳೂ ಆದ ಸಾಧಕರಿಗೆ ಮಧ್ಯರಾತ್ರಿಯ ಸಂಧಿಕಾಲವು ತುರೀಯಾ ಸಂಧ್ಯಾ ಎಂದು ಪ್ರಸಿದ್ಧವಾಗಿದೆ. ಆದರೆ ಹೆಚ್ಚಿನ ಪ್ರಚಾರದಲ್ಲಿ ಮೂರು ಸಂಧ್ಯೆಗಳೇ ರೂಢಿಯಲ್ಲಿವೆ. ಮಾನವನು ತನ್ನ ದಿನನಿತ್ಯದ ಜೀವನದಲ್ಲಿ ಈ ಸಂಧ್ಯೆಯ ಕಾಲಗಳಲ್ಲಿ ಭಗವಂತನನ್ನು ಉಪಾಸಿಸಬೇಕು ಪೂಜಿಸಬೇಕು ಎಂದು ಹಿಂದೂಧರ್ಮವು ಹೇಳುತ್ತದೆ. ಸಂಧ್ಯೆಯ ಕಾಲದ ಈ ಉಪಾಸನೆಯನ್ನು ಸಂಧ್ಯೋಪಾಸನೆ ಎಂದು ಕರೆಯುತ್ತಾರೆ. ಉಪಾಸನೆಯಲ್ಲಿ ಭಗವಂತನ ಪೂಜೆ-ವಂದನೆಗಳು ಸೇರಿರುವುದರಿಂದ ಸಂಧ್ಯಾವಂದನೆ ಎಂದೂ ಇದನ್ನು ಕರೆಯುವುದಿದೆ. 'ಯಃ ಸಂಧ್ಯಾಮುಪಾಸತೇ ಬ್ರಹ್ಮೈವ ತದುಪಾಸತೇ' ಎಂಬ ಶ್ರುತಿವಾಕ್ಯದಂತೆ ಸಂಧ್ಯೋಪಾಸನೆಯೆಂದರೆ ಬ್ರಹ್ಮದ ಉಪಾಸನೆಯೇ ಆಗಿರುತ್ತದೆ. ಸೂರ್ಯನೇ ಆ ಬ್ರಹ್ಮವಾಗಿದ್ದಾನೆಂದು 'ಅಸಾವಾದಿತ್ಯೋ ಬ್ರಹ್ಮ' ಎಂಬ ಶ್ರುತಿ ವಾಕ್ಯದಿಂದ ಸಿದ್ಧವಾಗಿರುತ್ತದೆ.

ಒಟ್ಟಿನಲ್ಲಿ ಸಂಧ್ಯೆ ಎಂದರೆ ದೇವತೆ, ಪರಬ್ರಹ್ಮ, ಉಪಾಸನಾಕರ್ಮ—ಇವುಗಳೆಲ್ಲ ಸೇರಿ ಅರ್ಥವಾಗುತ್ತದೆಯಾದರೂ ಸಂಧ್ಯಾ ಎಂದರೆ ಪರಬ್ರಹ್ಮದ ಉಪಾಸನೆ ಎಂದು ತಾತ್ಪರ್ಯ.

ಸಂಧ್ಯಾದೇವತೆಯು ಗಾಯತ್ರಿಯಾಗಿದ್ದು ಗಾಯತ್ರೀ ಎಂದರೆ ಸವಿತೃ, ಸೂರ್ಯ ಎಂದೂ ಅರ್ಥವಾಗುತ್ತದೆ. ಇದನ್ನೇ ದೇವೀಭಾಗವತ ಪುರಾಣದಲ್ಲಿ "ಯಾ ಸಂಧ್ಯಾ ಸೈವ ಗಾಯತ್ರೀ ಸಚ್ಚಿದಾನಂದರೂಪಿಣೀ" "ಯಾವಳು ಸಂಧ್ಯೆಯೋ ಅವಳೇ ಗಾಯತ್ರಿಯು. ಗಾಯತ್ರಿ ಎಂದರೆ ಅಥವಾ ಸಂಧ್ಯೆ ಎಂದರೆ ಸೂರ್ಯನು" ಎಂದು ಹೇಳಲಾಗಿದೆ. ಒಟ್ಟಿನಲ್ಲಿ ಸಂಧ್ಯೆ ಎಂದರೆ ಚೈತನ್ಯಮಯವಾದ ವಿಶ್ವಾತ್ಮನೇ ಆಗಿದ್ದು ಆ ವಿಶ್ವಾತ್ಮನ ಉಪಾಸನೆಯೇ ಸಂಧ್ಯೋಪಾಸನೆಯಾಗಿದೆ. ಪ್ರಕೃತಿಯ ಈ ಕಾಲಭೇದಗಳಿಗೆ ಸೂರ್ಯನೇ ಆಧಾರವಾಗಿರುವುದರಿಂದ ಸೂರ್ಯನು ಸವಿತೃ ಎಂಬ ಹೆಸರಿನಿಂದಲೂ, ಗಾಯತ್ರೀ ಎಂಬ ಹೆಸರಿನಿಂದಲೂ ಪೂಜಿಸಲ್ಪಡುತ್ತಾನೆ. ಸಂಧ್ಯೋಪಾಸನೆಯಲ್ಲಿ ಗಾಯತ್ರೀ ಮಂತ್ರವು ಅತ್ಯಂತ ಮುಖ್ಯವಾದ ಮಂತ್ರವಾದ್ದರಿಂದ ಗಾಯತ್ರಿಯು ಮಂತ್ರಾರ್ಥದಲ್ಲಿ

ಬುದ್ಧಿಯ ಪ್ರಚೋದನೆಯನ್ನು ಪ್ರಾರ್ಥಿಸಿಕೊಂಡಂತಿರುವುದರಿಂದ, ಬುದ್ಧಿಯು ಅಜ್ಞಾನದ ಕತ್ತಲಿನ ನಿವಾರಣೆ ಮಾಡುತ್ತದೆಯಾದ್ದರಿಂದ ಅಲ್ಲದೆ ಸೂರ್ಯನು ಕತ್ತಲನ್ನು ನಿವಾರಿಸುವವನಾದ್ದರಿಂದ ಗಾಯತ್ರಿಯ ಮಂತ್ರದೇವತೆ ಸೂರ್ಯ ಎಂದು ತಾತ್ಪರ್ಯದಲ್ಲಿ ಸಂಬೋಧಿಸುವುದಾಗಿದೆ. ಸೂರ್ಯನು ಬಾಹ್ಯ ಕತ್ತಲಿನ ನಿವಾರಕನಾಗಿರುವಂತೆ ಅಂತರಿಕವಾದ ಕತ್ತಲೆಯ ನಿವಾರಣೆಯು ಗಾಯತ್ರೀಮಂತ್ರದಿಂದಾಗಿ ಆಗುತ್ತದೆ. ಈ ತತ್ತ್ವದಿಂದಲೂ ಸೂರ್ಯನು ಗಾಯತ್ರೀ, ಸವಿತೃ ಎಂದು ಕರೆಯಲ್ಪಡುತ್ತಾನಾಗಿದ್ದು ಸಂಧ್ಯೋಪಾಸನೆ ಎಂದರೆ ಸಂಧ್ಯಾದೇವತೆಯ ಉಪಾಸನೆಯಾಗಿರುತ್ತದೆ. ದೇವರನ್ನು ದೇವಿಯೆಂದು ಸಂಬೋಧಿಸುವ ಅನುಸಾರವಾಗಿ ಗಾಯತ್ರಿಯನ್ನು ದೇವಿಯೆಂದೂ, ಸಂಧ್ಯೆಯನ್ನು ಸಂಧ್ಯಾದೇವಿಯೆಂದೂ ಉಪಾಸನೆ ಮಾಡಲಾಗಿ ಗಾಯತ್ರೀ ದೇವಿ, ಸಂಧ್ಯಾದೇವಿ ಎಂಬ ಹೆಸರುಗಳು ಬಳಕೆಯಲ್ಲಿ ಬಂದಿರುತ್ತವೆ. ದೇವರು ತ್ರಿಗುಣಾತೀತ, ರೂಪಾತೀತನಾಗಿರುತ್ತಾನಾಗಿದ್ದು ಅವನನ್ನು ಉಪಾಸಕರು ಭಾವಿಸಿದಂತೆ, ಕಲ್ಪನೆ ಮಾಡಿಕೊಂಡಂತೆ ಉಪಾಸಕರಿಗೆ ಆ ರೀತಿಯೇ ಕಾಣುತ್ತಾನೆ ಎಂಬುದು ಉಪಾಸನಾ ತತ್ತ್ವದಲ್ಲಿ ಅಡಗಿರುವ ಸತ್ಯಾಂಶವಾಗಿರುತ್ತದೆ.

ಸಂಧ್ಯೆಯ ಕಾಲದಲ್ಲಿ ಪ್ರಕೃತಿಯಲ್ಲಿ ವಿಶೇಷವಾದ ಪವಿತ್ರ ಶಕ್ತಿ ಉತ್ಪತ್ತಿಯಾಗಿ ಪಸರಿಸಿಕೊಂಡಿರುತ್ತದೆ. ಸಂಧ್ಯಾಸಮಯದಲ್ಲಿನ ಸ್ವಾಭಾವಿಕವಾದ ಆ ಪ್ರಾಕೃತಿಕ ಬದಲಾವಣೆಯು ಆಧ್ಯಾತ್ಮಸಾಧಕರಿಗೆ ಅಂತರ್ಮುಖತೆ ಮತ್ತು ಧ್ಯಾನಾದಿಗಳಿಗೆ ಅನುಕೂಲವಾಗಿರುತ್ತದೆ. ನಮ್ಮ ಶರೀರವು ಇಡೀ ಬ್ರಹ್ಮಾಂಡದ ಒಂದು ಸಣ್ಣ ಹಾಗಿದ್ದರೂ ಪರಿಪೂರ್ಣವಾದ ಪ್ರತೀಕವಾಗಿದ್ದು ಇದು ಪಿಂಡಾಂಡವಾಗಿರುವುದರಿಂದ ಪ್ರಕೃತಿಗೂ ನಮ್ಮ ಈ ಶರೀರಕ್ಕೂ ನಿಕಟವಾದ ಸಂಬಂಧವಿದೆ. ಪ್ರಕೃತಿಯಲ್ಲಿ ಮಹತ್ತರವಾದ ಬದಲಾವಣೆ ಆದಂತೆ ನಮ್ಮ ಶರೀರದಲ್ಲೂ ಆಂತರಿಕವಾಗಿ ವಿಶೇಷವಾದ ಮಾನಸಿಕ ಸ್ಥಿರತೆ, ಪವಿತ್ರತೆಯನ್ನು ಉಂಟುಮಾಡುವ ಶಕ್ತಿ ಉತ್ಪನ್ನವಾಗುತ್ತದೆ ಎಂಬುದನ್ನು ಆರ್ಯಋಷಿಗಳು ತಮ್ಮ ಸಾಧನಪರಿಶೀಲನೆಗಳ ಅನುಭವದ ಆಧಾರದಿಂದ ಕಂಡುಹಿಡಿದಿರುತ್ತಾರೆ. ತದನುಸಾರವಾಗಿ ಮನುಷ್ಯನು ಈ ಸಂಧ್ಯಾಕಾಲದಲ್ಲಿ ಭಗವಂತನನ್ನು ಪ್ರಾರ್ಥಿಸಿದರೆ, ಉಪಾಸನೆ ಮಾಡಿದರೆ ಚಿತ್ತಶುದ್ಧಿ, ಚಿತ್ತಶಾಂತಿಗಳನ್ನು ಗಳಿಸಲು ಸಾಧ್ಯವಿದೆ. ಮಾತ್ರವಲ್ಲವೆ ತನ್ಮೂಲಕ ಶಾರೀರಿಕ, ಮಾನಸಿಕ ಮತ್ತು ಆಧ್ಯಾತ್ಮಿಕವಾದ ಶಕ್ತಿಯನ್ನು ಪಡೆದು ತನ್ನ ಬದುಕನ್ನು ಸುಗಮವೂ ಸುಭದ್ರವೂ ಆಗುವಂತೆ ಮಾಡಲು ಸಾಧ್ಯವಾಗುತ್ತದೆ ಎಂದು ವೈದಿಕ ಋಷಿಗಳು ಕಂಡುಕೊಂಡರು. ಆ ಮೇರೆಗೆ ತ್ರಿಸಂಧ್ಯೆಗಳಲ್ಲೂ ಸಂಧ್ಯೋಪಾಸನೆಯನ್ನು ಮಾಡಬೇಕೆಂದು ಸ್ಮೃತಿ-ಶಾಸ್ತ್ರಗಳ ಮೂಲಕ ಆರ್ಯಋಷಿಗಳು ನಿರ್ದೇಶನ ನೀಡಿರುತ್ತಾರೆ.

ತ್ರಿಸಂಧ್ಯೆಗಳ ಕಾಲದಲ್ಲಿ ಸರಿಯಾಗಿ ನಾವು ನಮ್ಮನ್ನು ಪರೀಕ್ಷಿಸಿದರೆ ನಮ್ಮ ಉಸಿರಾಟವು ವ್ಯವಸ್ಥಿತವಾದ ರೀತಿಯಲ್ಲಿ ಮೂಗಿನ ಎರಡು ದ್ವಾರಗಳ ಮೂಲಕವೂ ನಡೆಯುತ್ತಿರುವುದೂ, ಚಿತ್ತದ ಸ್ವಾಸ್ಥ್ಯ ಇರುವುದೂ, ಬಹುಸುಲಭವಾಗಿ ಮನಸ್ಸನ್ನು ಕೇಂದ್ರೀಕರಿಸಲು ಸಾಧ್ಯವಾಗುವ ಸ್ಥಿತಿ ಇರುವುದೂ ಅನುಭವಕ್ಕೆ ಬರುತ್ತದೆ. ಹಾಗೆಯೇ ಪ್ರಕೃತಿ

ಯಲ್ಲಿ ಗಿಡಮರಗಳು ಸ್ವಚ್ಛತೆ, ಶಾಂತಮಯವಾದ ವಾತಾವರಣ ಇವುಗಳ ಅರಿವು ಆಗುತ್ತದೆ. ಉಪಾಸನೆಗೆ ಮನಃಶಾಂತಿ, ಮನಸ್ಸಿನ ಸ್ಥಿರತೆಗಳು ಅತ್ಯಂತ ಆವಶ್ಯಕವಾಗಿ ರುವುದರಿಂದ ಸಂಧ್ಯಾಕಾಲವು ಇದಕ್ಕೆ ತುಂಬಾ ಸಹಕಾರಿಯಾಗಿರುವುದರಿಂದ ಸಂಧ್ಯಾ ಕಾಲದಲ್ಲಿ ಸಂಧ್ಯೋಪಾಸನೆಯನ್ನು ಮಾಡಬೇಕಾದುದು ಅಗತ್ಯ ಹಾಗೂ ಮಾಡುವುದು ಅತಿಶ್ರೇಷ್ಠ ಎಂದು ಹಿಂದೂಧರ್ಮವು ಸ್ಪಷ್ಟಪಡಿಸುತ್ತದೆ.

ಸಂಧ್ಯೋಪಾಸನೆಯ ಮಂತ್ರಪಾಠಗಳಲ್ಲಿ, ವಿಧಿವಿಧಾನದ ವಿವರಗಳಲ್ಲಿ ಅನೇಕ ವ್ಯತ್ಯಾಸಗಳು ಇದ್ದು ಶಾಖಾಭೇದದಿಂದ "ಸಂಧ್ಯಾ ಸಹಸ್ರಪಾಠಃ" ಎಂಬ ಮಾತು ಬಳಕೆಯಲ್ಲಿದೆ. (ಸಂಧ್ಯೆಯ ಕುರಿತಾದ ಸಂಧ್ಯಾವಂದನ ಪಾಠಗಳು ಸಹಸ್ರವಿದೆ.) ಬಟ್ಟೆಯ ಧರಿಸುವಿಕೆಯ ಉದ್ದಿಶ್ಯ, ಉಪಯೋಗ ಒಂದೇ ಆಗಿದ್ದರೂ ವಿವಿಧ ಬಣ್ಣದ, ಆಕಾರದ ಪೋಷಾಕುಗಳನ್ನು ಮನುಷ್ಯರು ಧರಿಸುವಂತೆ ಸಂಧ್ಯಾಪಾಠವು ಸಹಸ್ರ ಇದ್ದರೂ ಇವುಗಳ ಮೂಲಭೂತವಾದ ತತ್ತ್ವ–ಫಲಗಳೆಲ್ಲ ಒಂದೇ ಆಗಿವೆ. ಸಂಧ್ಯಾ ಉಪಾಸನೆಯ ಮುಖ್ಯ ವಾದ ವಿಧಿವಿವರಗಳನ್ನು ಹೀಗೆ ವಿಭಾಗಿಸಬಹುದು :

(೧) ಆಚಮನ, (೨) ಪ್ರಾಣಾಯಾಮ, (೩) ಮಾರ್ಜನ, (೪) ಅಘಮರ್ಷಣ, (೫) ಅರ್ಘ್ಯಪ್ರದಾನ, (೬) ಗಾಯತ್ರೀಜಪ, (೭) ಸೂರ್ಯೋಪಸ್ಥಾನ, (೮) ದಿಗುಪ ಸ್ಥಾನ, (೯) ಅಭಿವಾದನ, (೧೦) ಬ್ರಹ್ಮಾರ್ಪಣ.

ಆಚಮನ : ಭಗವಂತನ ಸ್ಮರಣೆ, ನಾಮೋಚ್ಚಾರಣೆ ಮಾಡುತ್ತಾ, ಶುದ್ಧವಾದ ಜಲ ವನ್ನು ಮೂರು ಬಾರಿ ನಿಶ್ಚಿತ ಪ್ರಮಾಣದಲ್ಲಿ ಮಂತ್ರೋಕ್ತವಾಗಿ ಸ್ವೀಕರಿಸುವುದೇ ಆಚಮನ. ಇದರಿಂದ ಶರೀರದ ಶುದ್ಧಿಯು ಸಾಧಿತವಾಗುತ್ತದೆ ಎಂಬುದು ಸಾರಾಂಶ ವಾಗಿರುತ್ತದೆ. ಭಗವಂತನ ಸ್ಮರಣೆ, ನಾಮೋಚ್ಚಾರಣೆಯಿಂದ ಮನಸ್ಸೂ ಪವಿತ್ರವಾಗು ತ್ತದೆ. ಭಗವಂತನ ಉಪಾಸನೆಗೆ ಮನಶ್ಶುದ್ಧಿ ಮತ್ತು ಶರೀರಶುದ್ಧಿಗಳು ಅಗತ್ಯವಾಗಿವೆ. ಈ ತತ್ತ್ವವನ್ನೇ ಅನುಸರಿಸಿ ಆಚಮನ ವಿಧಿಯನ್ನು ಸಂಧ್ಯೋಪಾಸನೆಯ ಪ್ರಥಮ ಹೆಜ್ಜೆಯಾಗಿ ನಿಶ್ಚಯಿಸಲಾಗಿರುತ್ತದೆ.

ಪ್ರಾಣಾಯಾಮ: ಪ್ರಾಣಾಯಾಮ ವಿಧಿಯಿಂದ ಮನಸ್ಸಿನ ಚಂಚಲತೆ ನಿಲ್ಲುತ್ತದೆ. ಪ್ರಾಣವಾಯುವಿನ ನಿಯಂತ್ರಣದಿಂದ ಚಿತ್ತಶುದ್ಧಿ-ಧ್ಯೇಯಶುದ್ಧಿ ಉಂಟಾಗಲು ಸಹಾಯ ವಾಗುತ್ತದೆ. ಸಂಧ್ಯೋಪಾಸನೆಯ ಅಂಗವಾಗಿ ಮಾಡಬೇಕಾದ ಸಂಧ್ಯಾದೇವತಾಧ್ಯಾನ ವನ್ನು ಮಾಡಲು ಪ್ರಾಣಾಯಾಮವು ಅನುಕೂಲಮನೋಭಾವವನ್ನು ಉಂಟುಮಾಡು ವುದರಲ್ಲಿ ಸಹಕಾರಿಯಾಗುತ್ತದೆ.

ಮಾರ್ಜನ : ಮಾರ್ಜನ ಎಂದರೆ ಶುಚಿಗೊಳಿಸುವುದು ಎಂದು ಅರ್ಥ. ಅಂದರೆ ಮಂತ್ರ ಪೂರ್ವಕವಾಗಿ ನೀರನ್ನು ಶರೀರದ ಮೇಲೆ ನಿಶ್ಚಿತಪ್ರಮಾಣದಲ್ಲಿ ಸಿಂಪಡಿಸುವುದಾಗಿದೆ. ಉತ್ತಮ ಹಾಗೂ ಉದಾತ್ತಭಾವನೆಯಿಂದ ನಿಶ್ಚಿತವಾದ ಮಂತ್ರವನ್ನು ಹೇಳುತ್ತಾ ನೀರನ್ನು ಸಿಂಪಡಿಸುವಾಗ ಮೈಯ ರಕ್ತ, ಪ್ರವಾಹ, ಆದರ ಬಿಸಿ ಇವುಗಳು ಸಮಾಧಾನಕ್ಕೆ ಬರುತ್ತವೆ ಆಗ ಮನಸ್ಸು ಸ್ಥಿರ ಹಾಗೂ ಹಗುರ ಎಂಬಂತಾಗುತ್ತದೆ. ಅಲ್ಲದೆ ಮಂತ್ರದ ಮೂಲಕ ಬರುವ ಜಲದ ಅಧಿಷ್ಠಾತೃದೇವತೆಯು ಸಂಧ್ಯೋಪಾಸಕನಿಗೆ ಅವನು ಮಾಡುವ

ಉಪಾಸನೆಗೆ ನೆರವಾಗುವಂತಾಗಲಿ, ಸರ್ವವಿಘ್ನನಿವಾರಣೆ ಆಗಲಿ ಎಂಬ ದೃಷ್ಟಿಯಿಂದ ಈ ಮಾರ್ಜನಾ ವಿಧಿಯನ್ನು ಮಾಡುವುದಾಗಿದೆ.

ಅಘಮರ್ಷಣ : ಉಪಾಸಕನು ಆಕಸ್ಮಿಕವಾಗಿಯೋ ಅಥವಾ ತಿಳಿಯದೆಯೋ ಮಾಡಿದ ಪಾಪಗಳ ನಿವಾರಣೆಗಾಗಿ ಮಾಡುವ ಕ್ರಿಯೆಯೇ ಅಘಮರ್ಷಣ. ಬಲಗೈಯಲ್ಲಿ ನೀರನ್ನು ಮಂತ್ರೋಕ್ತವಿಧಿಪೂರ್ವಕವಾಗಿ ತೆಗೆದುಕೊಂಡು ಮೂಗಿನ ಹತ್ತಿರ ಹಿಡಿದು ಶ್ವಾಸವನ್ನು ತಡೆಹಿಡಿದು ಅಘಮರ್ಷಣಸೂಕ್ತಮಂತ್ರದ ಜಪವನ್ನು ನಿಶ್ಚಿತ ಬಾರಿ ಮಾಡಬೇಕು. ಹಾಗೆಂದರೆ ನೀರು ಶರೀರದ ಒಳಗೆ ಸೇರಿ ತನ್ನ ಶಾರೀರಿಕ, ಮಾನಸಿಕವಾದ ಸರ್ವಪಾಪಗಳ ಕೊಳೆಯನ್ನು ತೊಳೆಯುತ್ತಾ ಬಲನಾಸಿಕ ದ್ವಾರದ ಮೂಲಕ ಹೊರ ತಳ್ಳುತ್ತದೆ ಎಂದು ಭಾವಿಸಬೇಕು. ಅನಂತರ ನೀರನ್ನು ನೋಡದೆ ಬಲಭಾಗದಿಂದ ಭೂಮಿಯ ಮೇಲೆ ಅದನ್ನು ಎರಚಬೇಕು. ಪಾಪಬುದ್ಧಿ ಪಾಪದ ಕೊಳೆಗಳಿಂದ ಕೂಡಿ ಪರಮಾತ್ಮನ ಧ್ಯಾನಮಾಡಲು ಸಾಧ್ಯವಿಲ್ಲ. ಆದುದರಿಂದ ಅಘಮರ್ಷಣ ವಿಧಿಯೂ ಸಂಧ್ಯೋಪಾಸನೆಯ ಮುಖ್ಯವಾದ ಅಂಶಗಳಲ್ಲಿ ಒಂದಾಗಿರುತ್ತದೆ.

ಅರ್ಘ್ಯಪ್ರದಾನ : ಮನುಷ್ಯಪ್ರಪಂಚದ ಈ ಜೀವನಕ್ಕೂ ಸೂರ್ಯದೇವನಿಗೂ ಮಹತ್ತರವಾದ ನಿಕಟಸಂಬಂಧವಿದೆ. ಅದರ ಬಗೆಗೆ ಕೃತಜ್ಞತೆಯ ಸಂಕೇತಾರ್ಥವಾಗಿ ಸೂರ್ಯನಿಗೆ ಜಲದ ಮೂಲಕ ಅರ್ಘ್ಯ ನೀಡುವುದೇ ಅರ್ಘ್ಯಪ್ರದಾನದ ತತ್ತ್ವ. ಎರಡು ಕೈಯ ಬೊಗಸೆಯಲ್ಲಿ ಜಲವನ್ನು ವಿಧಿಯುಕ್ತವಾಗಿ ತೆಗೆದುಕೊಂಡು ಸೂರ್ಯನನ್ನು ನೋಡುತ್ತಾ ಸೂಕ್ತವಾದ ಮಂತ್ರಮುಖೇನ ಸಕ್ರಮವಾಗಿ ಜಲವನ್ನು ಇಳಿಬಿಡುವುದೇ ಅರ್ಘ್ಯಪ್ರದಾನ ಕ್ರಮ. ವಿಧಿಪ್ರಕಾರ ಅರ್ಘ್ಯವನ್ನು ಇಷ್ಟಿಷ್ಟು ಸಂಖ್ಯೆಯಲ್ಲಿ ಬಿಡಬೇಕು ಎಂಬ ನಿಯಮವಿದೆ.

ಗಾಯತ್ರೀ ಜಪ : ಈ ಲೋಕದಲ್ಲಿನ ಮಾನವ ಹಾಗೂ ಚರಾಚರ ಪ್ರಾಣಿವಸ್ತುಗಳ ಜೀವನದ ಆಧಾರವೇ ಸೂರ್ಯನಾಗಿದ್ದು ಅವನು ನಮಗೆ ಪ್ರತ್ಯಕ್ಷ ಕಾಣುವ ಭಗವಂತನಾಗಿರುತ್ತಾನೆ. ಬ್ರಹ್ಮನನ್ನು ಸೂರ್ಯನೆಂದೂ ಸೂರ್ಯನನ್ನು ಸವಿತೃ ಎಂದೂ ಕರೆಯುತ್ತಾರೆ. ಸೂರ್ಯನೇ ಬ್ರಹ್ಮ ಎಂದೂ ತಾತ್ಪರ್ಯವಿದೆ. ಬ್ರಹ್ಮನೇ ಸರ್ವಸ್ವ ಹಾಗೂ ಸರ್ವೋನ್ನತ. ಬ್ರಹ್ಮವನ್ನು ಗಾಯತ್ರೀ ಎಂದು ಕರೆಯುತ್ತಾರೆ. ಹಾಗಾಗಿ ಗಾಯತ್ರೀ ಉಪಾಸನೆಯನ್ನು ಬ್ರಹ್ಮೋಪಾಸನೆ ಎಂದೂ ಗಾಯತ್ರಿಯ ಉಪದೇಶವನ್ನು ಬ್ರಹ್ಮೋಪದೇಶ ಎಂದೂ ಹೇಳುತ್ತಾರೆ. ಒಟ್ಟಿನಲ್ಲಿ ಗಾಯತ್ರೀ ಉಪಾಸನೆ ಎಂದರೆ ಸರ್ವಶಕ್ತನೂ ಸರ್ವೋತ್ಕೃಷ್ಟನೂ ಏಕನೂ ಸನಾತನನೂ ಆದ ಬ್ರಹ್ಮನ ಉಪಾಸನೆ ಎಂದು ಸಂಗ್ರಹವಾಗಿ ಹೇಳಬಹುದು. ಸೂರ್ಯನು ಅರ್ಥಾತ್ ಸವಿತೃ ಹಾಗೂ ಬ್ರಹ್ಮನು ನಮ್ಮ ಬುದ್ಧಿ, ಶರೀರ, ಮನಸ್ಸುಗಳನ್ನು ಶುದ್ಧೀಕರಿಸಿ ಕಾಪಾಡಲಿ ಎಂಬ ತಾತ್ಪರ್ಯಭಾವದಿಂದ ಸರ್ವವಿಧದ ಕಲ್ಯಾಣಕ್ಕಾಗಿ ಪ್ರಾರ್ಥಿಸುವ ಮಂತ್ರವೇ ಗಾಯತ್ರೀ. 'ಗಾಯಂತಂ ತ್ರಾಯತೇ ಇತಿ ಗಾಯತ್ರೀ' ಎಂದು ಇದರ ಶಬ್ದೋತ್ಪತ್ತಿಯ ವಿವರವಾಗಿದೆ. ಅಂದರೆ ಇದನ್ನು ಗಾನಮಾಡುವವರನ್ನು ಇದು ಕಾಪಾಡುತ್ತದೆ. ಆದ್ದರಿಂದ ಗಾಯತ್ರೀ ಎಂಬ ನಾಮಧೇಯವನ್ನು ಹೊಂದಿದೆ ಎಂದು ತಾತ್ಪರ್ಯ.

ಗಾಯಂತಂ ತ್ರಾಯತೇ ಯಸ್ಮಾದ್ಗಾಯತ್ರೀಯಂ ತತಃ ಸ್ಮೃತಾ ।

—ವ್ಯಾಸಸ್ಮೃತಿ

ಗಾಯತ್ರಿಯಲ್ಲಿ ಕರ್ಮ, ಭಕ್ತಿ, ಜ್ಞಾನ, ರಾಜ ಎಂಬ ನಾಲ್ಕು ಯೋಗಗಳೂ ಅಡಕವಾಗಿದ್ದು ಗಾಯತ್ರಿಯು ಯೋಗಮಾರ್ಗಗಳ ಸಾರಸಂಗ್ರಹವಾದ ಮಂತ್ರವಾಗಿದೆ. ಗಾಯತ್ರೀ ಮಂತ್ರದ ಉಪಾಸನೆಯಿಂದ ಸರ್ವಕಲ್ಯಾಣಸಿದ್ಧಿ ಎಂಬುದು ಸರ್ವಸಿದ್ಧವಾದ ಸಿದ್ಧಾಂತವಾಗಿದೆ. ಗಾಯತ್ರಿಯು ವೇದಮಂತ್ರವಾಗಿರುವುದು ಮಾತ್ರವಲ್ಲದೆ ವೇದಸಾರ ಮಂತ್ರವೂ ಆಗಿರುತ್ತದೆ. ಪ್ರತಿದಿನವೂ ಸಂಧ್ಯಾವಂದನೆ ಮಾಡುವಾಗ ಗಾಯತ್ರಿಯನ್ನು ನಿಯಮಿತ ಬಾರಿ ೧೦೮ ರಿಂದ ೧೦೦೮ರ ತನಕ ಯಥಾಶಕ್ತಿ ಭಕ್ತಿಶ್ರದ್ಧೆಗಳಿಂದ ಕೂಡಿ ಜಪಿಸಬೇಕು. ಆಗ ಸರ್ವವಿಧದ ತಾಪತ್ರಯಗಳೂ ನಿವೃತ್ತಿಯಾಗುತ್ತವೆ ಎಂದು ಹೇಳಲಾಗಿದೆ. ಗಾಯತ್ರಿಯು ಹಿಂದೂ ಸಂಸ್ಕೃತಿಯ ಪಂಚ ಆಧಾರಸ್ತಂಭಗಳಾದ ಗೀತೆ, ಗೋವು, ಗೋವಿಂದ, ಗಾಯತ್ರೀ, ಗಂಗೆ ಎಂಬವುಗಳಲ್ಲಿ ಒಂದಾಗಿರುತ್ತದೆ. ಈ ಮಂತ್ರವು ವೇದಗಳಿಗೆ ಸೇರಿದ್ದು ಋಗ್, ಯಜುರ್. ಸಾಮ ಮತ್ತು ಅಥರ್ವ ಎಂಬ ನಾಲ್ಕು ವೇದಗಳಲ್ಲೂ ಇದು ಸ್ಥಾನವನ್ನು ಪಡೆದಿರುತ್ತದೆ.

ಗಾಯತ್ರಿಯನ್ನು ಈಗಾಗಲೇ ಹೇಳಿದಂತೆ ಬ್ರಹ್ಮ, ಸವಿತೃ, ಸಾವಿತ್ರೀ, ದೇವಿ ಎಂದೂ ಹೇಳುತ್ತಾರೆ. ಗಾಯತ್ರೀಮಂತ್ರದ ಕುರಿತಾಗಿ ತುಂಬಾ ವಿಚಾರಪೂರಿತವೂ ತತ್ತ್ವ ವಿಶ್ಲೇಷಣಯುಕ್ತವೂ ಆದ ಸಾಹಿತ್ಯವೇ ಬೆಳೆದಿರುತ್ತದೆ.

ಇಷ್ಟೊಂದು ಮಹಿಮಾನ್ವಿತವೂ, ಪವಿತ್ರವೂ ಆದ ಗಾಯತ್ರೀ ಮಂತ್ರದ ಪಾಠ ಹೀಗಿದೆ :

**ಓಂ ಭೂರ್ಭುವಸ್ಸುವಃ ।**
**ತತ್ಸವಿತುರ್ವರೇಣ್ಯಂ । ಭರ್ಗೋ ದೇವಸ್ಯ ಧೀಮಹಿ ।**
**ಧಿಯೋ ಯೋ ನಃ ಪ್ರಚೋದಯಾತ್ ॥**

ಇದನ್ನು ಬಿಡಿಸಿ ಹೇಳುವಾಗ ಹೀಗೆ ಹೇಳಲು ಸಾಧ್ಯವಾಗುತ್ತದೆ :

**ಓಂ ಭೂರ್ ಭುವಃ ಸ್ವಃ, ತತ್ ಸವಿತುರ್ ವರೇಣ್ಯಂ, ಭರ್ಗೋ ದೇವಸ್ಯ ಧೀಮಹಿ, ಧಿಯೋ ಯೋ ನಃ ಪ್ರಚೋದಯಾತ್ ॥**

ಗಾಯತ್ರೀಮಂತ್ರದ ಸ್ಥೂಲವಾದ ತಾತ್ಪರ್ಯ ಹೀಗಿದೆ :

"ವಿಶ್ವವನ್ನು ಸೃಷ್ಟಿಸಿದವನೂ, ಪೂಜನೀಯನೂ, ಸರ್ವಪಾಪ ಹಾಗೂ ಅಜ್ಞಾನಗಳ ಪರಿಹಾರಕನೂ ಆದ ಸವಿತೃವನ್ನೂ, ಆ ದೇವರ ಜ್ಞಾನತೇಜಸ್ಸನ್ನೂ ಧ್ಯಾನ ಮಾಡುತ್ತೇವೆ. ಆತನು ನಮ್ಮ ಧೀಃಶಕ್ತಿಯನ್ನು (ಬುದ್ಧಿಶಕ್ತಿಯನ್ನು) ಪ್ರಚೋದಿಸಲಿ !"

ಗಾಯತ್ರೀಮಂತ್ರದಲ್ಲಿ ನಾಲ್ಕು ಯೋಗಗಳೂ ಸೇರಿವೆ ಎಂಬುದನ್ನು ಹೀಗೆ ವಿಂಗಡಿಸಿ ತಿಳಿಯಬಹುದು :

(೧) ಜ್ಞಾನಯೋಗ : ಅಜ್ಞಾನದಿಂದ ಆದ ಆಶೋತ್ತರಗಳು ಹೋಗಿ ಜ್ಞಾನ ಉದಯಿಸಲಿ ಎಂಬ ಪ್ರಾರ್ಥನೆ ಗಾಯತ್ರೀಮಂತ್ರದಲ್ಲಿ ಅಡಗಿದೆ. ಹಾಗಾಗಿ ಇದು ಜ್ಞಾನಯೋಗವಾಗುತ್ತದೆ.

(೨) ಕರ್ಮಯೋಗ : ನಮ್ಮ ಬುದ್ಧಿಗೆ ಪ್ರಚೋದನೆ, ಪ್ರಕಾಶ ನೀಡಲಿ ಎಂಬ ಪ್ರಾರ್ಥನೆಯಿಂದ ನಾವು ಮಾಡುವ ಕರ್ಮಗಳಿಗೆ ಭಗವಂತನ ಇಚ್ಛೆಯು ಆಧಾರವಾಗಲಿ ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದರಿಂದ ಗಾಯತ್ರಿಯಲ್ಲಿ ಕರ್ಮಯೋಗವೂ ಸೇರಿರುತ್ತದೆ ಎಂಬುದು ಸ್ಪಷ್ಟ.

(೩) ಭಕ್ತಿಯೋಗ : ಪೂಜನೀಯನೂ ಸರ್ವಪಾಪಗಳ ಪರಿಹಾರಕನೂ ಆದ ಆತನು ನಮ್ಮ ಧೀಃಶಕ್ತಿಯನ್ನು ಪ್ರಚೋದಿಸಲಿ ಎಂಬ ಪ್ರಾರ್ಥನೆಯಿರುವುದರಿಂದ ಇದು ಭಕ್ತಿ ಯೋಗವನ್ನೂ ಕೂಡಿರುತ್ತದೆ.

(೪) ರಾಜಯೋಗ : ಗಾಯತ್ರಿ, ಸವಿತೃ, ಸಂಧ್ಯೆ ಎಂಬಿತ್ಯಾದಿ ಹೆಸರುಗಳಿಂದ ಕೂಡಿ ಗಾಯತ್ರಿಯು ಧ್ಯಾನಕ್ಕೆ ವಸ್ತುವಾಗಿದೆ. ಮಾತ್ರವಲ್ಲದೆ ಗಾಯತ್ರಿಯಲ್ಲಿ ಧ್ಯಾನವನ್ನು ಹೇಳಿದೆ. ಹೀಗಾಗಿ ಇದು ಧ್ಯಾನದಿಂದ ಕೂಡಿರುವ ರಾಜಯೋಗವಾಗುತ್ತದೆ.

ಹೀಗೆ ಗಾಯತ್ರಿಯು ಮನುಷ್ಯನ ತ್ರಿಕರಣಶುದ್ಧಿಗೂ, ಚತುರ್ವಿಧ ಪುರುಷಾರ್ಥ ಸಿದ್ಧಿಗೂ ಸಹಾಯಕ-ಸಾಧನವಾಗುವ ಅತ್ಯಂತ ಪವಿತ್ರವೂ, ಶ್ರೇಷ್ಠವೂ, ಮಹತ್ವಪೂರ್ಣವೂ ಆದ ಮಂತ್ರವಾಗಿರುತ್ತದೆ. ಗಾಯತ್ರಿಯನ್ನು ವೇದಮಾತಾ, ಮಂತ್ರರಾಜ ಎಂದು ಹೇಳಲಾಗಿದ್ದು ಗಾಯತ್ರಿಗೆ ಮಿಗಿಲಾದ ಮಂತ್ರ ಇನ್ನಿಲ್ಲ ಎಂಬುದಾಗಿ ಹಿಂದೂ ಧರ್ಮಗ್ರಂಥಗಳಲ್ಲಿ ಗಾಯತ್ರಿಯ ಮಹಿಮೆ, ಶಕ್ತಿಗಳ ಕುರಿತಾಗಿ ಬಹಳ ವಿಸ್ತಾರವಾದ ವಿವರಗಳು, ಉದಾಹರಣೆಗಳು, ಸ್ಪಷ್ಟೀಕರಣಗಳು ದೊರೆಯುತ್ತವೆ. ಗಾಯತ್ರೀಮಂತ್ರದ ಜಪಧ್ಯಾನಗಳಿಂದ ಮಹಿಮೆ ಪ್ರತಿಯೊಬ್ಬ ಉಪಾಸಕನಿಗೂ ಸ್ಪಷ್ಟವಾಗುವುದು. ಗಾಯತ್ರೀಮಂತ್ರವು ಮೇಲ್ನೋಟಕ್ಕೆ ಬಹಳ ಸರಳ ಹಾಗೂ ಮಹಿಮೆಯಿಲ್ಲದಂತೆ ಕಾಣುತ್ತದೆ. ಆದು ಹೌದಾದರೂ ಗಾಯತ್ರೀಮಂತ್ರೋಪಾಸನೆಯಿಂದ, ಭಗವದನುಗ್ರಹದ ಬಲದಿಂದ ಗಾಯತ್ರಿಯ ಅವರ್ಣನೀಯವಾದ ಮೌಲ್ಯಮಹಿಮೆ ಹಾಗೂ ಪ್ರಭಾವಗಳು ಗಾಯತ್ರೀಮಂತ್ರಸಾಧಕನಿಗೆ ತಿಳಿದುಬರುವುದು. ಹಾಗಾಗಿ ಗಾಯತ್ರಿಯು ಸಾಮಾನ್ಯವಾದ ಮಂತ್ರವಲ್ಲ, ಅದು ಬ್ರಹ್ಮಚೇತನವನ್ನು ಒಳಗೊಂಡ ಪವಿತ್ರವಾದ ಮಂತ್ರವಾಗಿದೆ. ಇದು ಅತಿಪ್ರಾಚೀನ ಕಾಲದಿಂದ ಆಧುನಿಕ ಕಾಲವವರೆಗೆ ಅಸಂಖ್ಯಾತ ಸಾಧಕರ, ಭಕ್ತರ, ಮಹಾತ್ಮರ ಜೀವನಾನುಭವದ ಮೂಲಕ ಪ್ರಕಟಗೊಂಡಿರುವ ನಿತ್ಯನೂತನ ಸತ್ಯವಾಗಿದೆ.

ಸೂರ್ಯೋಪಸ್ಥಾನ : ಉಪಸ್ಥಾನ ಎಂದರೆ ಸಮೀಪದಲ್ಲಿ ಇರುವಿಕೆ ಎಂದು ಅರ್ಥ. ಸೂರ್ಯೋಪಸ್ಥಾನ ಎಂದರೆ ಸೂರ್ಯನ ಸಮೀಪದಲ್ಲಿ ಇರುವಿಕೆಯೆಂದು ಭಾವಾರ್ಥ. ಎಂದರೆ ಸೂರ್ಯ ಅರ್ಥಾತ್ ಸವಿತೃ ಅಥವಾ ಪರಬ್ರಹ್ಮ ಇಲ್ಲವೇ ಸರ್ವಶಕ್ತನಾದ ಭಗವಂತನ ಸಮೀಪದಲ್ಲಿ ತ್ರಿಕರಣಪೂರ್ವಕವಾಗಿ ಇರುವುದು ಎಂದೂ ವಿವರವಾಗಿ ಹೇಳಬಹುದು. ಒಟ್ಟಿನಲ್ಲಿ ಗಾಯತ್ರೀಜಪದನಂತರ ಗಾಯತ್ರಿ, ಸವಿತೃ, ಬ್ರಹ್ಮ, ಸೂರ್ಯ ಎಂದೆಲ್ಲ ವಿವಿಧ ಹೆಸರುಗಳಿಂದ ಕರೆಯಲ್ಪಡುವ ಮತ್ತು ವಿಶೇಷವಾದ ಚೇತನಪ್ರಕಾಶಗಳ ರೂಪಿಯಾಗಿ ಗೋಚರವಾಗುವ ಸೂರ್ಯದೇವನನ್ನು ವಂದಿಸಿ ಧ್ಯಾನಿಸುತ್ತಾ ತಾದಾತ್ಮ್ಯವನ್ನು ಹೊಂದುವುದು ಎಂದು ತಾತ್ಪರ್ಯ. ಉನ್ನತಿಯನ್ನು ಹೊಂದಲಿರುವ,

ಮೇಲೇರಿ ಅಭಿವೃದ್ಧಿಯನ್ನು ಹೊಂದಲಿರುವ ಸ್ಥಿತಿಗತಿಗಳ ಸಂಕೇತವಾದ ದಿಕ್ಕೇ ಪೂರ್ವ ದಿಕ್ಕು. ಪೂರ್ವದಿಕ್ಕಿನಲ್ಲಿ ಸೂರ್ಯನಕ್ಷತ್ರಾದಿ ದಿವ್ಯಜ್ಯೋತಿಗಳು ಉದಯಿಸಿ ಬಾನಿನಲ್ಲಿ ಮೇಲೇರಿ ಪ್ರಕಾಶ ಬೀರುತ್ತವೆ. ಅದರಂತೆ ತನ್ನ ಲೌಕಿಕ ಹಾಗೂ ಪಾರಲೌಕಿಕ ಜೀವನ ದಲ್ಲಿ ತಾನೂ ಅಭಿವೃದ್ಧಿಹೊಂದಬೇಕು, ಅದಕ್ಕೆ ಬೇಕಾದ ಶಕ್ತಿಯು ಪೂರ್ವದಿಕ್ಕಿನಲ್ಲಿ ಉದಿಸುವ ದಿವ್ಯಜ್ಯೋತಿರೂಪನಾದ ಸವಿತೃದೇವನಿಂದ ಬರಬೇಕು ಎಂಬ ಹಾರೈಕೆಯ ತತ್ತ್ವವೇ ಪೂರ್ವದಿಕ್ಕಿನ ಎಡೆಗೆ ಅಭಿಮುಖನಾಗಿ ಸೂರ್ಯೋಪಸ್ಥಾನ ಮಾಡಬೇಕು ಎನ್ನುವುದರ ಹಾಗೂ ಪೂರ್ವದಿಕ್ಕಿನ ಪವಿತ್ರತೆ, ಶ್ರೇಷ್ಠತೆಗಳ ರಹಸ್ಯವಾಗಿದೆ. ಸಾಯಂ ಸಂಧ್ಯಾವಂದನೆ ಸಂದರ್ಭದಲ್ಲಿ ಪಶ್ಚಿಮದಿಕ್ಕಿಗೆ ಮುಖಮಾಡಿ ಸೂರ್ಯೋಪಸ್ಥಾನ ಮಾಡುವುದಾಗಿದೆ.

ದಿಗುಪಸ್ಥಾನ : ದಿಕ್ಕುಗಳ ಉಪಸ್ಥಾನವೇ ದಿಗುಪಸ್ಥಾನ. ಎಂದರೆ ಪಶ್ಚಿಮ ಉತ್ತರ ದಕ್ಷಿಣ ಊರ್ಧ್ವ ಅಧೋ ಅಪಾಂತರ ದಿಕ್ಕುಗಳಲ್ಲಿ ಇರುವ ದಿವ್ಯದೇವತೆಗಳನ್ನು ನಮಸ್ಕರಿಸಿ ಸ್ಮರಿಸುವುದೆಂದು ತಾತ್ಪರ್ಯ. ಜಗತ್ತಿನ ವಿವಿಧ ರೀತಿಗಳಲ್ಲಿ ಭಗವಂತನ ದಿವ್ಯಶಕ್ತಿಯು ಪ್ರಕಟಗೊಂಡಿದ್ದು ಒಂದೊಂದು ದಿಸೆಯಲ್ಲಿ ಅದು ಒಂದೊಂದು ವಿಧ ವಾಗಿ ಕೇಂದ್ರೀಕೃತವಾಗಿರುತ್ತದೆ. ಅವುಗಳೆಲ್ಲದರ ಆಂತರ್ಯದ ರಹಸ್ಯ, ದಿವ್ಯತ್ವದ ಯೋಗ್ಯತೆಗಳನ್ನು ಆರ್ಯ ಋಷಿಗಳು ತಮ್ಮ ಅಧ್ಯಾತ್ಮಸಾಧನೆಯ ಸಾಕ್ಷಾತ್ಕಾರವೆಂಬ ಸತ್ಯದ ಬೆಳಕಿನಲ್ಲಿ ಕಂಡುಕೊಂಡು ಅನುಗುಣವಾಗಿ ದಿಗ್ದೇವತೆಗಳು ಅವುಗಳ ಉಪಾಸನೆ ಗಳನ್ನು ಆಧ್ಯಾತ್ಮತತ್ತ್ವಗಳಿಗೆ ಅನುಸಾರವಾಗಿ ನಿಶ್ಚಯಿಸಿರುತ್ತಾರೆ. ಪ್ರಕೃತಿಯಲ್ಲಿ ದಿನದ ಪ್ರತಿಯೊಂದು ನಿಮಿಷಕ್ಕೂ ಎಂಬಂತೆ ಕಂಡುಬರುವ ಪ್ರಾಕೃತಿಕವಾದ ಬದಲಾವಣೆ, ಪ್ರಾಕೃತಿಕ ಶಕ್ತಿಗಳ ಪ್ರಭಾವ—ಇವುಗಳು ಮನುಷ್ಯನ ದೈಹಿಕ, ಮಾನಸಿಕ ಮತ್ತು ಆಧ್ಯಾತ್ಮಿಕವಾದ ಜೀವನ ಹಾಗೂ ಆರೋಗ್ಯದ ಮೇಲೆ ಪರಿಣಾಮವನ್ನು ಬೀರುತ್ತವೆ. ಆದುದರಿಂದಲೇ ವಿವಿಧ ದಿಕ್ಕುಗಳ ಉಪಸ್ಥಾನವನ್ನು ಮಾಡಿ ದೈನಂದಿನ ಜೀವನಕ್ಕೆ ಬೇಕಾದ ಶಕ್ತಿ, ಭರವಸೆ ಮತ್ತು ಅಭಯಗಳನ್ನು ಸಂಧ್ಯೋಪಾಸಕನು ಪಡೆಯಬೇಕು. ಅದಕ್ಕಾಗಿಯೇ ದಿಗುಪಸ್ಥಾನವನ್ನು ಸಂಧ್ಯೋಪಾಸನೆಯಲ್ಲಿ ಹೇಳಿದೆ ಎಂಬುದು ಈ ದಿಗುಪಸ್ಥಾನದ ತಾತ್ಪರ್ಯ. ದಿಗುಪಸ್ಥಾನದಲ್ಲಿ ದಿಗ್ದೇವತೆಗಳನ್ನು ಸ್ಮರಿಸಿ ವಂದಿಸುವುದು ಮಾತ್ರವಲ್ಲದೆ ಪವಿತ್ರವಾದ ಗಂಗಾ ಯಮುನಾ ನದಿಗಳು, ಅವುಗಳು, ಅವುಗಳ ಮಧ್ಯೆ ವಾಸಿಸುವ ಋಷಿಮುನಿಗಳು, ಇವರನ್ನೆಲ್ಲಾ ಸ್ಮರಿಸುವ ಕಾರ್ಯಾಂಶವೂ ಸೇರಿರುತ್ತದೆ.

ಅಭಿವಾದನ : ಗೋತ್ರ ಹಾಗೂ ಪ್ರವರ ಋಷಿಗಳು ಅಂದರೆ ತನ್ನ ವಂಶಕ್ಕೆ ಸಂಬಂಧಿ ಸಿದ ಮೂಲಋಷಿಗಳು, ವೇದಶಾಖೆ ಮತ್ತು ಸೂತ್ರಗಳ ಹೆಸರಿನೊಡನೆ ತನ್ನ ಹೆಸರನ್ನು ಹೇಳುತ್ತಾ ಸರ್ವಶಕ್ತನಾದ ಪರಮಾತ್ಮನಿಗೆ ವಿಧಿಯುಕ್ತವಾಗಿ ನಮಸ್ಕಾರ ಮಾಡುವು ದನ್ನು ಅಭಿವಾದನ ಎನ್ನುವುದಾಗಿದೆ. ಸಂಧ್ಯೋಪಾಸಕನು ಅಭಿವಾದನವನ್ನು ಮಾಡು ವುದರಿಂದ ತನ್ನ ವಂಶದ ಮೂಲಋಷಿಗಳು, ವೇದಶಾಖೆ, ಸೂತ್ರಗಳನ್ನು ದಿನದಿನವೂ ಸ್ಮರಿಸುವಂತಾಗುತ್ತದೆ. ಆದರಿಂದ ಅವನಲ್ಲಿ ತನ್ನ ಪರಂಪರೆಯ ಕುರಿತಾಗಿ ಒಲವು, ಅಭಿಮಾನಗಳು ವರ್ಧಿಸುತ್ತವೆ. ಅಷ್ಟೇ ಅಲ್ಲದೆ ಎಲ್ಲಕ್ಕಿಂತ ಮಿಗಿಲಾಗಿ ದೈನಂದಿನ

ಜೀವನದ ಪಥದಲ್ಲಿ ಒಳ್ಳೆಯ ಪ್ರಗತಿಯನ್ನು ಸಾಧಿಸಲು ಬೇಕಾದ ದೇವತಾನುಗ್ರಹ, ಶಕ್ತಿ ಉತ್ಸಾಹಗಳು ಅಭಿವಾದನದಿಂದ ಲಭಿಸುತ್ತದೆ.

ಗೋತ್ರ ಎಂದರೆ ಕುಲ, ಸಮೂಹ ಎಂದು ತಾತ್ಪರ್ಯ. ಗೋತ್ರಋಷಿಗಳು ಎಂದರೆ ಆಯಾಯ ವಂಶದ ಮೂಲಪುರುಷರು ಎಂದು ಅರ್ಥ. ಗೋತ್ರಪ್ರವರ್ತಕ ಋಷಿಗಳು ಅನೇಕ ಮಂದಿ ಇದ್ದಾರೆ. ಅವರಲ್ಲಿ ಕಶ್ಯಪ, ವಿಶ್ವಾಮಿತ್ರ, ಅತ್ರಿ, ಭಾರದ್ವಾಜ, ಗೌತಮ, ವಸಿಷ್ಠ, ಜಮದಗ್ನಿ ಎಂಬೀ ಏಳು ಮಂದಿ ಮಹರ್ಷಿಗಳು ಪ್ರಮುಖರಾಗಿರುತ್ತಾರೆ. ಈ ಏಳು ಮಂದಿಯ ಜೊತೆಗೆ ಮಹರ್ಷಿ ಅಗಸ್ತ್ಯರೂ ಸಹ ಸೇರಿರುತ್ತಾರೆ ಎಂಬುದಾಗಿ ಹೇಳುವ ಒಂದು ಸಂಪ್ರದಾಯವೂ ರೂಢಿಯಲ್ಲಿದೆ. ಇನ್ನಿತರ ಋಷಿಗಳು ಈ ಪ್ರಮುಖ ಮಹರ್ಷಿಗಳ ಪೀಳಿಗೆಗೆ ಸೇರಿದವರಾಗಿ ವಿವಿಧ ಗೋತ್ರಋಷಿಗಳ ವರ್ಗದವರೆಂದು ಮಾನ್ಯರಾಗಿರುತ್ತಾರೆ. ಹಿಂದುಗಳಿಗೆ ತಮ್ಮ ವಂಶದ ಮೂಲಪುರುಷರು ತ್ರಿಕಾಲಜ್ಞಾನ ಸಂಪನ್ನರಾದ ಮಹರ್ಷಿಗಳಾಗಿದ್ದು ಅವರ ಗೋತ್ರದವರು ಅಂದರೆ ಸಂತಾನದವರು ತಾವೆಂದು ಹೇಳಿಕೊಳ್ಳುವುದು ಅಭಿಮಾನದ ಹಾಗೂ ಸ್ಫೂರ್ತಿದಾಯಕವಾದ ವಿಚಾರ ವಾಗಿದೆ.

ಪ್ರವರ ಎಂದರೆ ಪ್ರಾರ್ಥನಾಯೋಗ್ಯವಾದ, ಪರಿವಾರ, ಸರ್ವೋತ್ತಮ, ಅಗ್ನಿ ಪ್ರಾರ್ಥನೆ ಎಂದು ಬೇರೆ ಬೇರೆ ಅರ್ಥವಿದೆ. ಪ್ರಾಚೀನಕಾಲದಲ್ಲಿ ಯಜ್ಞಯಾಗಾದಿಗಳನ್ನು ಮಾಡುವ ಸಂದರ್ಭದಲ್ಲಿ ಅಗ್ನಿದೇವನನ್ನು ಪ್ರಾರ್ಥಿಸುವಾಗ ಅವರವರು ತಮ್ಮ ತಮ್ಮ ಗೋತ್ರದ ಋಷಿಗಳ ಹೆಸರಿನ ಜೊತೆಗೆ ಹಿಂದಿನ ಕಾಲದಲ್ಲಿ ಅಗ್ನಿಯನ್ನು ಆವಾಹನೆ ಮಾಡಿ ಆರಾಧಿಸುತ್ತಿದ್ದ ಪ್ರಸಿದ್ಧ ಋಷಿಗಳ ಹೆಸರನ್ನು ಸೇರಿಸಿಕೊಂಡು ಅವರ ಕಡೆ ಯವನು ತಾನು ಎಂದು ಹೇಳುತ್ತಾ ಅಗ್ನಿದೇವನಿಗೆ ವಿಶೇಷವಾಗಿ ಪ್ರಾರ್ಥನೆಯನ್ನು ಸಲ್ಲಿಸುತ್ತಿದ್ದರು. ಪೂರ್ವಕಾಲದಲ್ಲಿ ಅಗ್ನಿಯನ್ನು ಆವಾಹಿಸಿ ಆರಾಧಿಸುತ್ತಿದ್ದ ಪ್ರಸಿದ್ಧ ಋಷಿಗಳನ್ನು ಪ್ರವರಋಷಿಗಳೆಂದು ಕರೆಯುತ್ತಾರೆ. ಹೀಗೆ ಪ್ರಾರ್ಥನೆ, ನಮಸ್ಕಾರ, ಕೃತಜ್ಞತೆಗಳ ಅಭಿವ್ಯಕ್ತಿಯ ಸಂದರ್ಭದಲ್ಲಿ ತನ್ನ ಗೋತ್ರಋಷಿ ಹಾಗೂ ಪ್ರವರ ಋಷಿಗಳನ್ನು ಸ್ಮರಿಸುವ ಸಂಪ್ರದಾಯ ಹಿಂದುಗಳಲ್ಲಿ ರೂಪುಗೊಂಡಿತು.

ಅಭಿವಾದನವನ್ನು ಸಂಧ್ಯೋಪಾಸನೆಯ ಸಂದರ್ಭದಲ್ಲಿ ಮಾತ್ರ ಮಾಡುವುದಲ್ಲದೆ ಗುರುದೇವತಾಸಂಬಂಧವಾದ ಇನ್ನಿತರ ಕಾರ್ಯಗಳ ಸಂದರ್ಭದಲ್ಲೂ ಮಾಡುತ್ತಾರೆ. ಸಂಧ್ಯೋಪಾಸನೆಯಾದನಂತರ ಮಾತಾಪಿತೃಗಳಿಗೂ, ಗುರುಹಿರಿಯರಿಗೂ ಅಭಿವಾದನ ಮಾಡಬೇಕು ಎಂಬುದಾಗಿ ಶಾಸ್ತ್ರನಿಯಮವಿದೆ.

ಬ್ರಹ್ಮಾರ್ಪಣ : ಸಂಧ್ಯೋಪಾಸನೆಯ ಕೊನೆಯ ಅಂಗವೇ ಬ್ರಹ್ಮಾರ್ಪಣ. ತಾನು ತ್ರಿಕರಣಪೂರ್ವಕವಾಗಿ ಮಾಡಿದ ಸಂಧ್ಯೋಪಾಸನೆಯ ಸಕಲ ಕ್ರಿಯೆಗಳು, ಅವುಗಳ ಫಲ ಎಲ್ಲವನ್ನೂ ಸರ್ವೇಶ್ವರನಿಗೆ ಸಮರ್ಪಿಸುವುದನ್ನೇ ಬ್ರಹ್ಮಾರ್ಪಣ ಎಂದು ಹೇಳುವು ದಾಗಿದೆ. ಇದನ್ನು ಈಶ್ವರಾರ್ಪಣ ಎಂದೂ ಕರೆಯುತ್ತಾರೆ. ನಾನು, ನನ್ನದು ಎಂಬ ಅಹಂಕಾರ, ಮಮಕಾರ ಭಾವನೆ ತೊಲಗಿ ಎಲ್ಲವೂ ನೀನು, ನಿನ್ನದು ಎಂಬ ಪವಿತ್ರವಾದ ಪರಮಾತ್ಮಸಂಬಂಧವಾದ ಭಾವನೆ ಬೆಳೆದು ಸರ್ವವೂ ಪರಮಾತ್ಮಮಯ ಎಂಬ ದಿವ್ಯ

ಅನುಭವದ ಅವರ್ಣನೀಯವಾದ ಆನಂದವನ್ನು ಅನುಭವಿಸುವುದೇ ಎಲ್ಲಾ ಆಧ್ಯಾತ್ಮ ಸಾಧನೆಯ ಮಹೋನ್ನತ ಗುರಿಯಾಗಿರುತ್ತದೆ. ಅದೇ ತತ್ತ್ವದ ದಿನದಿನದ ಪಾಲನೆ, ಅನುಷ್ಠಾನದ ಹಿನ್ನೆಲೆಯಾಗಿ ಬ್ರಹ್ಮಾರ್ಪಣವು ಸಂಧ್ಯೋಪಾಸನೆಯಲ್ಲಿ ಸೇರಿರುತ್ತದೆ.

ಈ ಮೇಲೆ ವಿವರಿಸಿದ ಹತ್ತು ಅಂಶಗಳಷ್ಟೇ ಸಂಧ್ಯಾವಂದನೆಯ ಅಂಗವಲ್ಲ. ಅಥವಾ ಇವುಗಳ ವಿವರಗಳು ಇಷ್ಟುಮಾತ್ರಕ್ಕೇ ಸೀಮಿತವೂ ಆಗಿರುವುದಿಲ್ಲ. ಸಂಧ್ಯೋಪಾಸನೆ ತುಂಬಾ ವೈಶಿಷ್ಟ್ಯಪೂರ್ಣವಾದ ಮಂತ್ರ ಮತ್ತು ಅನುಷ್ಠಾನ ವಿಧಿವಿಧಾನಗಳಿಂದ ಕೂಡಿದ್ದು ಅವುಗಳು ಎಲ್ಲವನ್ನೂ ಗುರುಮುಖೇನವೇ .ತಿಳಿದುಕೊಳ್ಳಲು ಸಾಧ್ಯವೂ ತಿಳಿಯಬೇಕಾದುದು ಅಗತ್ಯವೂ ಆಗಿರುತ್ತದೆ. ಹಾಗಾಗಿ ಸಂಧ್ಯೋಪಾಸನೆಯಲ್ಲಿ ಅಡಕವಾಗಿರುವ ಅತಿಮುಖ್ಯವಾದ ವಿಧಿಗಳ ಸೂಕ್ಷ್ಮವಾದ ಪರಿಚಯವನ್ನಷ್ಟು ಮಾತ್ರ ಓದುಗರಿಗೆ ನೀಡಲು ಇಲ್ಲಿ ಯತ್ನಿಸಲಾಗಿದೆ.

ಸಂಧ್ಯಾವಂದನೆಯ ಮಹತ್ತ್ವ : ದಿನನಿತ್ಯದ ಕೆಲಸಕಾರ್ಯಗಳನ್ನು ಸುಗಮವಾಗಿ ನೆರವೇರಿಸುವಂತಾಗಲು ಮತ್ತು ದಿನನಿತ್ಯದ ಕೆಲಸಕಾರ್ಯಗಳಲ್ಲಿ ಬರುವ ಕಷ್ಟ–ಲೋಪ–ಪಾಪಗಳನ್ನು ನಿವಾರಿಸಿಕೊಳ್ಳಲು, ತನ್ನ ಜೀವನದ ಪರಮಗುರಿಯಾದ ಭಗವಂತನನ್ನು ಸೇರಲು, ತಾನು ಜೀವನದ ಪ್ರತಿಕ್ಷಣವೂ ಯತ್ನಿಸಬೇಕು ಎಂಬ ತನ್ನ ಜೀವನದ ಮಹೋನ್ನತ ಉದ್ದೇಶದ ನೆನಪು ಉಳಿಸಿಕೊಳ್ಳಲು ಸಂಧ್ಯೋಪಾಸನೆಯನ್ನು ಪ್ರತಿನಿತ್ಯವೂ ಮಾಡಬೇಕಾಗಿದೆ. ಗಾಯತ್ರೀಮಂತ್ರವನ್ನು ಗುರು ಅಥವಾ ಪಿತೃಮುಖೇನ ಶಾಸ್ತ್ರೋಕ್ತವಾದ ರೀತಿಯಲ್ಲಿ ಉಪದೇಶ ಪಡೆದುಕೊಂಡನಂತರದಲ್ಲಿ ಮಾತ್ರವೇ ಗಾಯತ್ರೀಜಪ ಮಾಡಲು ಉಪಾಸಕನು ಅರ್ಹನಾಗುತ್ತಾನೆ. ಗಾಯತ್ರೀಮಂತ್ರದ ಉಪದೇಶಪಡೆಯದೆ ಮಾಡುವ ಜಪ–ಸಂಧ್ಯಾವಂದನೆಗಳಿಂದ ಫಲವು ದೊರೆಯುವುದಿಲ್ಲ. ಗಾಯತ್ರೀಮಂತ್ರೋಪದೇಶವನ್ನು ಶಾಸ್ತ್ರೋಕ್ತವಾಗಿ ಪಡೆದವರೆಲ್ಲರೂ ಸಂಧ್ಯೋಪಾಸನೆಗೆ ಅರ್ಹರಾಗುತ್ತಾರೆ.

ಹೀಗೆ, ಉಪಾಸನೆಯು ಹಿಂದೂಧರ್ಮದಲ್ಲಿ ಹೇಳಿರುವ ಹಾಗೂ ಹಿಂದುವಿನ ಜೀವನದ ಮುಖ್ಯವಾದ ಒಂದು ಧಾರ್ಮಿಕ ವಿಚಾರವಾಗಿರುತ್ತದೆ. ಉಪಾಸನೆಯನ್ನು ತನ್ನ ಜೀವನದಲ್ಲಿ ಕ್ರಮಬದ್ಧವಾಗಿ ಅಳವಡಿಸಿಕೊಂಡು ಅನುಷ್ಠಾನಮಾಡುತ್ತಾ ಬಾಳುವುದರಿಂದ ಜೀವಿಯು ಇಹಲೋಕದಲ್ಲಿ ಸುಖವಾಗಿ ಬಾಳಿ ದೇಹತ್ಯಾಗದ ಅನಂತರದಲ್ಲಿ ಸದ್ಗತಿಯನ್ನು ಪಡೆಯಲು ಸಾಧ್ಯವಾಗುತ್ತದೆ ಎಂಬುದೇ ಉಪಾಸನಾವಿಚಾರಗಳಲ್ಲಿ ಅಡಗಿರುವ ನಿತ್ಯನೂತನವಾದ ಶಾಶ್ವತಸತ್ಯವಾಗಿರುತ್ತದೆ.

೯

# ಹಿಂದೂಧರ್ಮದ ಪ್ರಮುಖ ಸಿದ್ಧಾಂತಗಳು

ಹಿಂದೂಧರ್ಮದ ಸಿದ್ಧಾಂತಗಳು ಮುಖ್ಯವಾಗಿ ಮೂರು ಎಂದು ಹೇಳಬಹುದು. ಅವು ಯಾವುವೆಂದರೆ :

(೧) ಕರ್ಮಸಿದ್ಧಾಂತ, (೨) ಪುನರ್ಜನ್ಮಸಿದ್ಧಾಂತ, (೩) ಅವತಾರಸಿದ್ಧಾಂತ.

ನಮ್ಮ ಹಿರಿಯರು, ಸುತ್ತಲೂ ಕಾಣುವ ಪ್ರಪಂಚ, ಅದರಲ್ಲಿ ಅಡಕವಾಗಿರುವ ವೈವಿಧ್ಯಮಯವಾದ ರಮಣೀಯತೆಗಳು, ಅವುಗಳ ಹಿನ್ನೆಲೆಯಲ್ಲಿರುವ ಹುಟ್ಟು, ಬೆಳವಣಿಗೆ ಹಾಗೂ ವಿನಾಶಗಳ ನಿಯಮಗಳು, ಇವುಗಳನ್ನು ನೋಡಿ ಅವುಗಳಿಗೆ ಕಾರಣವನ್ನು ಕಂಡುಹಿಡಿಯಲು ಯತ್ನಿಸಿದುದರ ಫಲವಾಗಿಯೇ ಈ ಮೂರು ಸಿದ್ಧಾಂತಗಳು ಹುಟ್ಟಿಕೊಂಡಿವೆ.

ಕರ್ಮಸಿದ್ಧಾಂತ : ಜಗತ್ತಿನಲ್ಲಿ ಕಾಣುವ ಮಾನವಕೋಟಿಗಳ ಒಳಗಿನ ಶಾರೀರಿಕ ಮಾನಸಿಕ ಸಾಮಾಜಿಕವಾದ ವೈವಿಧ್ಯಗಳು, ಸುಖದುಃಖಗಳ ಭೇದಗಳು ನಿಜಕ್ಕೂ ಗಮನಾರ್ಹವಾಗಿವೆ. ಜಗತ್ತಿನ ಸೃಷ್ಟಿಕರ್ತನಾದ ಭಗವಂತನೇ ಈ ರೀತಿಯ ಭೇದಗಳಿಗೆ ಕಾರಣನಾದರೆ ಅವನು ದಯಾಮಯನೂ ತ್ರಿಗುಣಾತೀತನೂ ಆಗಲಾರ. ಎಲ್ಲರನ್ನೂ ಒಂದೇ ರೀತಿ ಸೃಷ್ಟಿಸದೆ, ಈ ರೀತಿಯ ವಿವಿಧತೆಯಿಂದ ಸೃಜಿಸಿ ಅವರೊಳಗೆ ಕೆಲವರಿಗೆ ಸುಖ, ಮತ್ತೆ ಕೆಲವರಿಗೆ ದುಃಖ, ಹಲವರು ಸುರೂಪಿಗಳು ಇನ್ನಿತರರು ಕುರೂಪಿಗಳು, ಆಗಿರುವ ಪರಿಸ್ಥಿತಿಯನ್ನು ದೇವರು ಮಾಡಿದ್ದಾನೆಂದರೆ ಅದು ಅವನ ಸರ್ವಮಾನ್ಯವಾದ ಗುಣಯೋಗ್ಯತೆಗಳಿಗೆ ಹೊಂದದ ಸಂಗತಿಯೇ ಸರಿ. ಮಾತ್ರವಲ್ಲದೆ ಆಗ ದೇವರು ಪರಿಪೂರ್ಣನೂ ದಿವ್ಯಗುಣಯುಕ್ತನೂ ಆಗಲಾರ. ಹಾಗಾದರೆ ಕಾಣುವ ಈ ವಿವಿಧತೆಗಳಿಗೆ, ಭೇದಗಳಿಗೆ ಕಾರಣವಾದರೂ ಏನು ? ಕಾರಣವಿರದೆ ಕಾರ್ಯವಿರಲಾರದಷ್ಟೆ ? ಭಗವಂತನು ಇದಕ್ಕೆ ಜವಾಬ್ದಾರನಲ್ಲದಿದ್ದರೆ ಇನ್ಯಾರು ಜವಾಬ್ದಾರರು ? ಅದಕ್ಕೆ ಉತ್ತರವಾಗಿ ಕರ್ಮವೇ ಕಾರಣ ಎಂದು ಹಿಂದೂಧರ್ಮವು ಸ್ಪಷ್ಟಪಡಿಸುತ್ತದೆ.

ಜೀವಿಗಳಲ್ಲಿರುವ ವಿವಿಧತೆ, ಬಾಳಿನಲ್ಲಿರುವ ಸ್ಥಿತಿಗತಿಗಳ ಒಳಗಿನ ವ್ಯತ್ಯಾಸ ಇವುಗಳಿಗೆಲ್ಲಾ ಕರ್ಮವೇ ಕಾರಣ. ಕರ್ಮ ಎಂದರೆ ಬಹಳ ವ್ಯಾಪಕವಾದ ಅರ್ಥವುಳ್ಳ ಶಬ್ದವಾಗಿದ್ದು ಅದನ್ನು ಸಂದರ್ಭೋಚಿತವಾಗಿ, ಅನೇಕ ದೃಷ್ಟಿಗಳಿಂದ ಮತ್ತು ಅನೇಕ ರೀತಿ

ಯಾಗಿಯೂ ಅರ್ಥಮಾಡಲು ಸಾಧ್ಯವಿದೆ. ಕರ್ಮ ಎಂದರೆ ಕೆಲಸ, ಪರಿಣಾಮ, ವಿಕಾರ, ಆಕಾರ ಎಂದು ಅರ್ಥವಾಗುತ್ತದೆ. ಮನುಷ್ಯನ ಈ ಜನ್ಮದ ಸ್ಥಿತಿಗತಿ, ಸುಖದುಃಖಗಳಿಗೆ ಅವನು ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಗಳೇ ಕಾರಣವಾಗಿರುತ್ತವೆ. ಹೀಗೆ ಹಿಂದಿನ ಜನ್ಮಕ್ಕೆ ಅದರ ಹಿಂದಿನ ಜನ್ಮದ ಕರ್ಮವು ಕಾರಣವಾಗಿ ಅದರ ಫಲವಾಗಿ ಮನುಷ್ಯನು ಈ ಪ್ರಪಂಚದಲ್ಲಿ ಹುಟ್ಟುಸಾವುಗಳ ಕರ್ಮಚಕ್ರಕ್ಕೆ ಸಿಲುಕಿರುತ್ತಾನೆ. ಮೊತ್ತಮೊದಲು ಮನುಷ್ಯನು ಈ ಕರ್ಮಚಕ್ರಕ್ಕೆ ಹೇಗೆ ಸಿಲುಕಿದ ? ಎಂಬ ಪ್ರಶ್ನೆ ಸ್ವಾಭಾವಿಕವಾಗಿ ಬರುತ್ತದೆ. ಮನುಷ್ಯನು ಜೀವನರಂಗದಲ್ಲಿ ಜೀವಿಯಾಗಿ ಜೀವನ ಮಾಡುವುದು ಈ ಸೃಷ್ಟಿಪ್ರಪಂಚಕ್ಕೆ ಸೇರಿದುದಾಗಿದೆ. ಪ್ರಪಂಚವನ್ನು ಸೃಷ್ಟಿಸಿದಾಗಲೇ ಈ ಪ್ರಕೃತಿ ವೈಚಿತ್ರ್ಯ, ವಿವಿಧತೆ ಎಲ್ಲವೂ ಸೃಷ್ಟಿಯಾಗಿದೆ. ಪ್ರಪಂಚಸೃಷ್ಟಿಯೊಡನೆ ಕರ್ಮ ನಿಯಮವೂ ಸೃಷ್ಟಿಯಾಗಿದೆ. ಒಳ್ಳೆಯ ಕೆಲಸಕ್ಕೆ ಒಳ್ಳೆಯ ಫಲ, ಕೆಟ್ಟ ಕೆಲಸಕ್ಕೆ ಕೆಟ್ಟ ಫಲ ದೊರಕುವುದನ್ನೇ ಸ್ಥೂಲವಾಗಿ 'ಕರ್ಮನಿಯಮ' ಎಂದು ಹೇಳುವುದಾಗಿದೆ. ಈ ಕರ್ಮ ನಿಯಮದ ಮೊದಲ ಸೃಷ್ಟಿ ಭಗವಂತನು ಪ್ರಪಂಚವನ್ನು ಸೃಷ್ಟಿಸಿದಾಗಲೇ ಆಯಿತು. ಭಗವಂತನ ಸೃಷ್ಟಿಗೆ ನಾವೆಲ್ಲರೂ ಸೇರಿದವರಾದುದರಿಂದ ದೇವರ ಸೃಷ್ಟಿಯು ಯಾವಾಗ, ಏಕೆ ಆಯಿತು ಎಂಬುದನ್ನು ಆ ಸೃಷ್ಟಿಗೇ ಸೇರಿದವರಾದ ನಾವು ಕಂಡುಹಿಡಿಯಲು ಸಾಧ್ಯವಿಲ್ಲ. ಹಾಗೆಯೇ ಕರ್ಮವೂ ಸೃಷ್ಟಿಗೆ ಸೇರಿದುದಾದುದರಿಂದ ಕರ್ಮನಿಯಮದ ಸೃಷ್ಟಿ, ಪ್ರಥಮ ಕರ್ಮ ಇವುಗಳು ಯಾವಾಗ ಉಂಟಾಯಿತು ಎಂಬುದನ್ನು ಹೇಳಲು ಮತ್ತು ತಿಳಿಯಲು ಸಾಧ್ಯವಿಲ್ಲ. ಬೀಜದಿಂದ ವೃಕ್ಷ, ವೃಕ್ಷದಿಂದ ಬೀಜ ಎಂಬ ಬೀಜ-ವೃಕ್ಷ-ನ್ಯಾಯವು ಹೇಗೆ ಬಿಡಿಸಲಾರದ ಪ್ರಶ್ನೆಯೋ ಹಾಗೆಯೇ ಈ ಕರ್ಮದ ಆದಿಯೂ ತಿಳಿಯಲು ಸಾಧ್ಯವಿಲ್ಲದ ವಿಚಾರವಾಗಿದೆ. ಆದುದರಿಂದ ಕರ್ಮದ ಗತಿ ಬಹಳ ಗಹನ ವಾದುದು. "ಗಹನೋ ಕರ್ಮಣಾ ಗತಿಃ" (ಗೀತಾ) ಎಂದು ಹೇಳಲಾಗಿದೆ. ಹಾಗಾಗಿ ಕರ್ಮವನ್ನು ಅನಾದಿ ಎಂದು ಹೇಳುತ್ತಾರೆ. ಆದರೆ ಕರ್ಮಕ್ಕೆ ಅಂತ್ಯವಿದ್ದೇ ಇದೆ. ಕರ್ಮದ ಈ ನಿಯತಿಯ ಕಟ್ಟಿನಿಂದ ಮನುಷ್ಯನಿಗೆ ಬಿಡುಗಡೆ ಇದ್ದೇ ಇದೆ. ಯಾವುದಕ್ಕೆ ಅಂತ್ಯವಿದೆಯೋ ಅದಕ್ಕೆ ಆದಿ ಇರಲೇಬೇಕು. ಆದರೆ ಇಲ್ಲಿ ಕರ್ಮದ ಆದಿಯನ್ನು ಮಾತ್ರ ನಮಗೆ ತಿಳಿಯಲು ಸಾಧ್ಯವಿಲ್ಲವಾಗಿದ್ದು ಕರ್ಮವು ಅನಾದಿಯಾಗಿದೆ. ಒಂದು ಉದಾಹರಣೆಯ ಮೂಲಕ ಈ ವಿಚಾರವನ್ನು ಇನ್ನೂ ಸ್ಪಷ್ಟವಾಗಿ ತಿಳಿದುಕೊಳ್ಳಬಹುದು.

ರಾತ್ರಿ ನಾವು ಮಲಗಿರುವಾಗ ನಮಗೊಂದು ಸ್ವಪ್ನವಾಗಿ ನಾವು ಅದರಲ್ಲಿ ರಾಜನಾಗಿ ಒಂದು ಮಹಾಯುದ್ಧದಲ್ಲಿ ಭಾಗಿಗಳಾಗುತ್ತೇವೆ. ಯುದ್ಧದಲ್ಲಿ ಅಪಜಯವಾಗಿ ಕೊನೆಗೆ ರಾಜನು ತಿರುಕನಾಗುತ್ತಾನೆ. ಸ್ವಪ್ನದಲ್ಲಿ ರಾಜನು ಏಕೆ ಯುದ್ಧವನ್ನು ಮಾಡಿದ ?— ಅವನನ್ನು ರಾಜನನ್ನಾಗಿ ಯಾರು ಮಾಡಿದರು ? ಎಂದು ಪ್ರಶ್ನೆಯನ್ನು ಸ್ವಪ್ನದಲ್ಲಿ ರಾಜನಾಗಿರುವ ನಾವು ಆ ಕಾಲದಲ್ಲಿ ಯಾರನ್ನೂ ಕೇಳಲು ಸಾಧ್ಯವಿಲ್ಲ. ಮಾತ್ರವಲ್ಲದೆ ತಾನು ಹೇಗೆ ರಾಜನಾದೆ ಎಂದು ಪ್ರಶ್ನೆ ಕೇಳುವ ಪರಿಸ್ಥಿತಿ ಮನಸ್ಸಿನಲ್ಲಿ ಮೂಡುವುದೂ ಇಲ್ಲ. ಹಾಗೆಯೇ ಪ್ರಥಮ ಕರ್ಮ ಏಕಾಯಿತು ? ಎಂಬ ಪ್ರಶ್ನೆಯನ್ನು ಕೇಳಲಾಗಲಿ, ಅದಕ್ಕೆ ಉತ್ತರವನ್ನು ಪಡೆಯಲಾಗಲಿ ಸಾಧ್ಯವಿಲ್ಲ. ಕರ್ಮವು ಹೇಗಾಯಿತು ಎಂಬುದರ

ಬಗೆಗೆ ವಿಶ್ಲೇಷಣೆ ನಡೆಸಿ ಹಿಂದೂಧರ್ಮವು ಒಂದು ತೀರ್ಮಾನಕ್ಕೆ ಬಂದಿರುತ್ತದೆ. ಮನುಷ್ಯನಲ್ಲಿ ಇಚ್ಛೆ, ಜ್ಞಾನ, ಕ್ರಿಯೆ ಎಂಬ ಮೂರು ಶಕ್ತಿಗಳಿವೆ. ನನಗೆ ಭಗವದ್ಗೀತೆ ಪುಸ್ತಕವೊಂದು ಬೇಕು ಎನ್ನುವುದು ಇಚ್ಛೆ. ಅದನ್ನು ಪೇಟೆಯಲ್ಲಿ ಅಂಗಡಿಯಿಂದ ಕ್ರಯಕ್ಕೆ ಪಡೆಯಬಲ್ಲೆ ಎನ್ನುವುದು ಜ್ಞಾನ. ಅದನ್ನು ಖರೀದಿ ಮಾಡುವುದೇ ಕ್ರಿಯೆ. ಹೀಗೆ ಕರ್ಮದಲ್ಲಿ ಮೊದಲು ಇಚ್ಛೆ, ಅನಂತರ ಯೋಚನೆ, ಅನಂತರ ಕ್ರಿಯೆ ಎಂಬ ಮೂರು ಅಂಶಗಳು ಸೇರಿರುತ್ತವೆ. ಹಾಗಾಗಿ ಪ್ರತಿ ಕರ್ಮದ ಹಿಂದೆ ಯೋಚನೆ, ಯೋಚನೆಯ ಹಿಂದೆ ಇಚ್ಛೆ, ಇವು ಸೇರಿರುತ್ತವೆ. ಹೀಗೆ ನಮ್ಮ ನಮ್ಮ ಇಚ್ಛೆಯಿಂದ ನಮ್ಮ ನಮ್ಮ ಯೋಚನೆಗಳು ಉಂಟಾಗಿ ಯೋಚನೆಗಳಿಗೆ ಅನುಸಾರವಾಗಿ ಕೆಲಸಗಳು ರೂಪುಗೊಂಡು ಕೆಲಸಕ್ಕೆ ಸರಿಯಾಗಿ ಫಲ ಉಂಟಾಗುತ್ತದೆ. ಹಾಗಾಗಿ ಮನುಷ್ಯನು ಮತ್ತೆ ಮತ್ತೆ ಹುಟ್ಟು ಸಾವುಗಳ ಕರ್ಮನಿಯಮಕ್ಕೆ ಸಿಲುಕುತ್ತಾನೆ. ಕರ್ಮದ ಆದಿ ತಿಳಿಯಲು ಸಾಧ್ಯವಿಲ್ಲದಿದ್ದರೆ ಅದು ದೇವರ ಸೃಷ್ಟಿಗೆ ಸೇರಿದ್ದೇನೋ ನಿಜ ಎಂಬುದನ್ನು ಆಧರಿಸಿ ಕರ್ಮದ ಫಲ ಈ ವೈವಿಧ್ಯಗಳಿಗೆಲ್ಲಾ ದೇವರೇ ಕಾರಣ ಎಂದು ಹೇಳುವಂತಾಗುವುದು ಸಹಜ. ಆದರೆ ವಾಸ್ತವವಾಗಿ ಇರುವ ವಿಚಾರ ಹಾಗಲ್ಲ. ಬೆಂಕಿಯು ಸುಡುವಿಕೆಯ ಶಕ್ತಿಯು ದೇವರ ಸೃಷ್ಟಿಯಾಗಿದೆ. ಬೆಂಕಿಗೆ ಬೆರಳಿಟ್ಟಾಗ ಸುಟ್ಟರೆ ಅದು ಬೆಂಕಿಯಲ್ಲಿ ಬೆರಳು ಇಟ್ಟುದರ ಪರಿಣಾಮವಾಗಿದ್ದು ಬೆರಳನ್ನು ಬೆಂಕಿಯಲ್ಲಿ ತಾನಿಟ್ಟು, ಅದು ಸುಟ್ಟಾಗ ಅದಕ್ಕೆ ದೇವರು ಕಾರಣ ಎಂದು ಹೇಳಿದರೆ ಸರಿಯಾಗಲಾರದು. ಹಾಗೆಯೇ ಪ್ರಪಂಚದಲ್ಲಿರುವ ಈ ವೈವಿಧ್ಯ ಗಳಿಗೆ, ಕರ್ಮಫಲಗಳಿಗೆ ದೇವರು ಕಾರಣ ಎಂದರೂ ಸಮಂಜಸವಾಗಲಾರದು. ಇದನ್ನು ಇನ್ನೂ ಒಂದು ಉದಾಹರಣೆಯ ಮೂಲಕ ಸ್ಪಷ್ಟವಾಗಿ ತಿಳಿದುಕೊಳ್ಳಬಹುದು.

ಅಪರಾಧ ಮಾಡಿದರೆ ನ್ಯಾಯಾಂಗ ಕಾನೂನು ರೀತಿಯಲ್ಲಿ ಶಿಕ್ಷೆವಿಧಿಸಲಾಗುತ್ತದೆ ಎಂಬುದು ಕಾನೂನು. ಅಪರಾಧ ಮಾಡಿದಾಗ ಅಪರಾಧಿಗೆ ನ್ಯಾಯಾಲಯದಲ್ಲಿ ಕಾನೂನಿ ನಂತ ಶಿಕ್ಷೆವಿಧಿಸಲ್ಪಡುತ್ತದೆ. ಅಪರಾಧಿಯ ಅಪರಾಧಕ್ಕೆ ನ್ಯಾಯಾಧೀಶ ಕಾರಣ ಮತ್ತು ಅಪರಾಧಿಗೆ ಶಿಕ್ಷೆವಿಧಿಸಿದ್ದು ನ್ಯಾಯಾಧೀಶನ ತಪ್ಪು ಎಂದರೆ ಹೇಗೆ ಅಸಮಂಜಸವಾಗು ವುದೋ ಹಾಗೆಯೇ ಕರ್ಮವಾದದ ವಿಚಾರವಾಗಿ ದೇವರನ್ನು ತಪ್ಪಿತಸ್ಥ, ಹೊಣೆಗಾರ ಎಂದು ಆರೋಪಿಸಿದರೂ ಅಸಮಂಜಸವಾಗುತ್ತದೆ.

ಬೆಂಕಿಗೂ ಸುಡುವ ಶಕ್ತಿಗೂ, ಸೃಷ್ಟಿಗೂ ಬೆಂಕಿಗೂ ಸಂಬಂಧವಿದ್ದಂತೆ ಕರ್ಮ ನಿಯಮಕ್ಕೂ ದೇವರಿಗೂ ಸಂಬಂಧವಿದೆ. ಹಾಗಾಗಿ ಕರ್ಮನಿಯಮ ಸೃಷ್ಟಿಗೆ ಹೊರ ಗಾದುದಲ್ಲ.

ಹಾಗಾದರೆ ನಿರ್ದಿಷ್ಟವಾಗಿ ಈ ಕರ್ಮದ ನಿಯಮದ ವಿಚಾರದಲ್ಲಿ ದೇವರ ಸ್ಥಾನ ವಾದರೂ ಏನು ? ಅವನು ಕರ್ಮಾಧ್ಯಕ್ಷನಾಗಿರುತ್ತಾನೆ ಎಂದು ಹಿಂದೂಧರ್ಮದಲ್ಲಿ ಹೇಳಲಾಗಿದೆ. ಸಭಾಧ್ಯಕ್ಷರು ಸಭೆಯ ಕಾರ್ಯಕಲಾಪಗಳು ವ್ಯವಸ್ಥಿತವಾಗಿ ನಡೆಯು ವಂತೆ ನೋಡಿಕೊಳ್ಳುತ್ತಾರೆಯೇ ವಿನಾ ಕಾರ್ಯಕಲಾಪಗಳಿಗೂ ಅವರಿಗೂ ಯಾವ ಕರ್ತೃತ್ವಬಂಧವೂ ಇರುವುದಿಲ್ಲ, ಹಾಗೆಯೇ ದೇವರಿಗೂ, ಜೀವಿಗಳಿಗೂ, ಕರ್ಮ ಮತ್ತು ಫಲಗಳಿಗೂ ಯಾವ ಕರ್ತೃತ್ವಬಂಧವೂ ಇರುವುದಿಲ್ಲ.

ಹಿಂದಿನ ಕರ್ಮವು ಈಗಿನ ಸ್ಥಿತಿಗೆ ಕಾರಣವಾದರೆ ಅದರ ಪರಿಣಾಮವಾದ ಈಗಿನ ಸ್ಥಿತಿಯು ಮುಂದಿನ ಗತಿಗೆ ಕಾರಣವಾಗುತ್ತದೆ. ಹೀಗೆ ಮನುಷ್ಯನು ಕರ್ಮದ ಕಟ್ಟಿಗೆ ಒಳಗಾದರೂ ಅವನಿಗೆ ಕರ್ಮಬಂಧನದಿಂದ ತಪ್ಪಿಸಿಕೊಳ್ಳಲು ಸಾಮರ್ಥ್ಯ, ಕರ್ಮದ ಸ್ಥಿತಿಯನ್ನು, ಹಾಗೂ ಅದರ ಫಲವನ್ನು ತಪ್ಪಿಸಲು ಸ್ವಾತಂತ್ರ್ಯವೂ ಇದೆ ಎಂದು ಹಿಂದೂಧರ್ಮದ ಗ್ರಂಥಗಳಲ್ಲಿ ಸವಿಸ್ತಾರವಾಗಿ ಸ್ಪಷ್ಟಪಡಿಸಲಾಗಿದೆ.

ಕರ್ಮದ ಪ್ರಭಾವಕ್ಕೆ ಒಳಗಾಗಿರುವುದು ಮತ್ತು ಅವುಗಳ ಬಂಧನದಿಂದ ಬಿಡಿಸಿಕೊಳ್ಳುವುದು—ಇದನ್ನು ಈ ಒಂದು ಉದಾಹರಣೆಯ ಮೂಲಕ ವಿವರವಾಗಿ ತಿಳಿದುಕೊಳ್ಳಬಹುದು. ನೂರು ರೂಪಾಯಿಗಳು ನಮ್ಮ ಕೈಗೆ ಬಂದರೆ, ನೂರು ರೂಪಾಯಿಗಳಿಗಿಂತ ಒಂದು ಪೈಸೆಯಷ್ಟು ಕೂಡ ಹೆಚ್ಚು ಖರ್ಚುಮಾಡಲು ಸಾಧ್ಯವಿಲ್ಲ, ಆದರೆ ಆ ನೂರು ರೂಪಾಯಿಗಳನ್ನು ಬುದ್ಧಿವಂತಿಕೆಯಿಂದ ಉಪಯೋಗಿಸಿ ವ್ಯವಹಾರದಲ್ಲಿ ತೊಡಗಿಸಿ ಅದರಿಂದ ಇನ್ನೂರು ಅಥವಾ ಹೆಚ್ಚು ರೂಪಾಯಿಗಳನ್ನು ಸಂಪಾದಿಸಬಹುದು, ಸಂಪಾದಿಸಲು ಸಾಧ್ಯವಿದೆ. ಅದೇ ರೀತಿ ಕರ್ಮದ ಕಟ್ಟಿಗೆ ಒಳಗಾಗಿದ್ದರೂ ಅದರ ಬಂಧನದಿಂದ ಪಾರಾಗಲು ಅದೇ ಕರ್ಮಸಿದ್ಧಾಂತವನ್ನು ಪ್ರಯೋಗಿಸುವುದರ ಮೂಲಕ ಸಾಧ್ಯವಿದೆ. ಉತ್ತಮ ಕರ್ಮಕ್ಕೆ ಉತ್ತಮ ಫಲ ಎನ್ನುವಾಗ ಅದರಂತೆ ಉತ್ತಮ ಕರ್ಮಗಳನ್ನೇ ಎಸಗಿ ಕರ್ಮದ ದುಷ್ಪ್ರಭಾವದಿಂದ ಪಾರಾಗಲೂ ಸಾಧ್ಯವಿದೆ. ಹಾಗಾಗಿ ಎಲ್ಲವೂ ಕರ್ಮದ ಅಧೀನ ಎಂಬ ನಿರಾಶಾಭಾವನೆ, ನಿಸ್ಸಹಾಯಕ ದೃಷ್ಟಿ ಇವುಗಳಿಗೆ ಹಿಂದೂಧರ್ಮದ ಪ್ರಕಾರದ ಕರ್ಮಸಿದ್ಧಾಂತದಲ್ಲಿ ಸ್ಥಾನವಿರುವುದಿಲ್ಲ. ಅದರ ಬದಲು ಮನುಷ್ಯನು ತನ್ನ ಭವಿಷ್ಯವನ್ನು ರೂಪಿಸಿಕೊಂಡು ಕರ್ಮಬಂಧನದಿಂದ ಪಾರಾಗಿ ಮುಕ್ತಿಯನ್ನು ಪಡೆಯಲು ಸಾಧ್ಯವಿದೆ ಎಂಬ ಪುರೋಗಾಮಿ ಹಾಗೂ ಆಶಾದಾಯಕ ತತ್ತ್ವವನ್ನು ಕರ್ಮಸಿದ್ಧಾಂತವು ಒಳಗೊಂಡಿರುತ್ತದೆ ಎನ್ನುವುದು ಈ ಸಿದ್ಧಾಂತದ ಔಚಿತ್ಯ ಹಾಗೂ ವೈಶಿಷ್ಟ್ಯವಾಗಿರುತ್ತದೆ.

ಇದನ್ನು ಮಹಾಭಾರತದ ಶಾಂತಿಪರ್ವದಲ್ಲಿ ಶ್ಲೋಕವೊಂದರ ಮೂಲಕ ಹೀಗೆ ಸ್ಪಷ್ಟಪಡಿಸಲಾಗಿದೆ :

**ಯಥಾ ಯಥಾ ಕರ್ಮಗುಣಂ ಫಲಾರ್ಥೀ ಕರೋತ್ಯಯಂ ಕರ್ಮಫಲೇ ನಿವಿಷ್ಟಃ।**
**ತಥಾ ತಥಾಯಂ ಗುಣಸಂಪ್ರಯುಕ್ತಃ ಶುಭಾಶುಭಂ ಕರ್ಮಫಲಂ ಭುನಕ್ತಿ ॥**

"ಕರ್ಮದಲ್ಲಿ ಪ್ರಸಕ್ತನಾದ ಫಲಾರ್ಥೀ ಪುರುಷನು ಹೇಗೆ ಕರ್ಮಗಳನ್ನು ಮಾಡುತ್ತಾನೋ ಹಾಗೆಯೇ ಶುಭ–ಅಶುಭಫಲಗಳ ಗುಣಸಂಯುಕ್ತನಾಗಿ ಭೋಗಿಸುತ್ತಾನೆ."

ಬೃಹದಾರಣ್ಯಕ ಉಪನಿಷತ್ತಿನಲ್ಲಿ (೪.೪.೫) ಮಂತ್ರವೊಂದರ ಮೂಲಕ ಇದನ್ನೇ ವಿವರವಾಗಿ ಹೀಗೆ ಬಣ್ಣಿಸಲಾಗಿದೆ :

**ಯಥಾಕಾರೀ ಯಥಾಚಾರೀ ತಥಾ ಭವತಿ, ಸಾಧುಕಾರೀ**
**ಸಾಧುರ್ಭವತಿ, ಪಾಪಕಾರೀ ಪಾಪೋ ಭವತಿ, ಪುಣ್ಯಃ**
**ಪುಣ್ಯೇನ ಕರ್ಮಣಾ ಭವತಿ, ಪಾಪಃ ಪಾಪೇನ ।**
**ಅಥೋ ಖಲ್ವಾಹುಃ ಕಾಮಮಯ ಏವಾಯಂ ಪುರುಷ ಇತಿ**

ಸ ಯಥಾ ಕಾಮೋ ಭವತಿ ತತ್ಕ್ರತುರ್ಭವತಿ,
ಯತ್ಕ್ರತುರ್ಭವತಿ ತತ್ಕರ್ಮ ಕುರುತೇ,
ಯತ್ಕರ್ಮ ಕುರುತೇ ತದಭಿಸಂಪದ್ಯತೇ ॥

"ಇವನು ಹೇಗೆ ಮಾಡುವನೋ ಹೇಗೆ ಆಚರಿಸುವನೋ ಹಾಗೆ ಆಗುವನು. ಸಾಧು ಕಾರಿಯಾದವನು ಸಾಧುವಾಗುತ್ತಾನೆ, ಪಾಪಕಾರಿಯಾದವನು ಪಾಪಿಯಾಗುತ್ತಾನೆ. ಪುಣ್ಯಕರ್ಮದಿಂದ ಪುಣ್ಯವಂತನಾಗುವನು, ಪಾಪಕರ್ಮದಿಂದ ಪಾಪಿಯಾಗುವನು. ಏನೇ ಆಗಲಿ, ಇನ್ನು ಕೆಲವರು ಹೀಗೆ ಹೇಳುತ್ತಾರೆ : ಈ ಪುರುಷನು ಕಾಮಮಯನೇ : ಅವನು ಎಂಥ ಕಾಮದವನೋ ಅಂಥ ಕೃತಸಂಕಲ್ಪನಾಗುವನು, ಎಂಥ ಕೃತಸಂಕಲ್ಪನೋ ಅಂಥ ಕರ್ಮವನ್ನು ಮಾಡುವನು, ಎಂಥ ಕರ್ಮವನ್ನು ಮಾಡುವನೋ ಅದನ್ನೇ ಪಡೆಯುತ್ತಾನೆ."

ಕರ್ಮವು ಜೀವಿಯ ಬಂಧನಕ್ಕೆ ಕಾರಣವೇನೋ ಹೌದು. ಆದರೆ ಅದೇ ಕರ್ಮದಿಂದ ಜೀವಿಯು ಬಂಧಮುಕ್ತನಾಗಲೂ ಸಾಧ್ಯವಿದೆ. ಕರ್ಮವನ್ನು ನಿರ್ವಹಿಸುವುದರಿಂದ ಏನೇನು ಸಾಧ್ಯ ಎಂಬ ವಿಚಾರವಾಗಿ ದೇವೀಭಾಗವತದಲ್ಲಿ ಹೀಗೆ ವಿವರಿಸಲಾಗಿದೆ :

ಕರ್ಮಣೇಂದ್ರೋ ಭವೇಜ್ಜೀವೋ ಬ್ರಹ್ಮಪುತ್ರಃ ಸ್ವಕರ್ಮಣಾ ।
ಸ್ವಕರ್ಮಣಾ ಹರೇ ದಾಸೋ ಜನ್ಮಾದಿರಹಿತೋ ಭವೇತ್ ।
ಸ್ವಕರ್ಮಣಾ ಸರ್ವಸಿದ್ಧಿಮಮರತ್ವಂ ಲಭೇದ್ ಧ್ರುವಮ್ ।
ಲಭೇತ್ ಸ್ವಕರ್ಮಣಾ ವಿಷ್ಣೋಃ ಸಾಲೋಕ್ಯಾದಿಚತುಷ್ಟಯಮ್ ।
ಸುರತ್ವಂ ಚ ಮನುತ್ವಂ ಚ ರಾಜೇಂದ್ರತ್ವಂ ಲಭೇನ್ನರಃ ।
ಕರ್ಮಣಾ ಚ ಶಿವತ್ವಂ ಚ ಗಣೇಶತ್ವಂ ತಥೈವ ಚ ॥

—ದೇವೀಭಾಗವತ, ಅಧ್ಯಾಯ ೯

"ಜೀವನು ತನ್ನ ಕರ್ಮದಿಂದ ಇಂದ್ರನಾಗಿ ಮಾರ್ಪಡಲು ಸಾಧ್ಯವಿದೆ. ತನ್ನ ಕರ್ಮದಿಂದ ಹರಿಯ ದಾಸನಾಗಲು ಸಾಧ್ಯ. ಜನ್ಮಮರಣದ ಚಕ್ರದಿಂದ ಮುಕ್ತನಾಗಲು ಸಾಧ್ಯ. ತನ್ನ ಕರ್ಮದಿಂದ ಎಲ್ಲಾ ವಿಧದ ಸಿದ್ಧಿ ಮತ್ತು ಅಮರತ್ವವನ್ನು ಪಡೆಯಲು ಸಾಧ್ಯ. ಹೀಗೆಯೇ ಸಾಲೋಕ್ಯಾದಿ ಮುಕ್ತಿಯನ್ನು ಪಡೆಯಲೂ ಸಾಧ್ಯವಿದೆ. ಈ ರೀತಿ ಮನುಷ್ಯನು ತನ್ನ ಕರ್ಮದಿಂದ ದೇವತಾ, ಮನುಷ್ಯ, ರಾಜ, ಶಿವ, ಗಣೇಶ ಇವರಲ್ಲಿ ಯಾರಾಗಲು ಇಷ್ಟಪಡುತ್ತಾನೋ ಅವರಾಗಿ ಮಾರ್ಪಡಲು ಸಾಧ್ಯ."

ಕರ್ಮವು ಕ್ರಿಯೆ, ಪರಿಣಾಮ ಎಂಬ ಎರಡು ಅರ್ಥಗಳಿಂದ ಕೂಡಿರುತ್ತದೆ. ಮನುಷ್ಯನ ಮರಣೋತ್ತರದಲ್ಲಿಯೂ ಕರ್ಮವು ಅವನ ಸೂಕ್ಷ್ಮಶರೀರದೊಡನೆ ಸೇರಿರುತ್ತದೆ. ಇದೇ ಕರ್ಮವು ಜನ್ಮಾಂತರದಲ್ಲಿ ಜೀವಿಯ ಜೀವನ ಗತಿಯನ್ನು ನಿರ್ಧರಿಸುತ್ತದೆ. ಹೀಗೆ ಕರ್ಮವು ಜನ್ಮಾಂತರದಲ್ಲಿ ಜೀವಿಯ ಜೀವನಕ್ಕೆ ಕಾರಣವಾದುದಾದರೆ, ಜೀವಿಯು ಜೀವನದಲ್ಲಿ ಎಸಗುವ ಕರ್ಮವು ಅವನ ಜೀವನದ ಅವಧಿಯಲ್ಲಿ ಪ್ರಭಾವ-ಪರಿಣಾಮವನ್ನು ಉಂಟುಮಾಡುತ್ತದೆ ಮಾತ್ರವಲ್ಲದೆ ಮುಂದಿನ ಜನ್ಮಕ್ಕೂ ಅದು ಪ್ರಭಾವ-ಪರಿಣಾಮಗಳನ್ನು ಬೀರುವಂತಾಗುತ್ತದೆ.

ಕರ್ಮವನ್ನು ಮೂಲತಃ ಸಂಚಿತ, ಪ್ರಾರಬ್ಧ ಮತ್ತು ಆಗಾಮಿ (ಕ್ರಿಯಮಾಣ) ಎಂದು ಮೂರು ವರ್ಗಗಳಾಗಿ ವಿಭಾಗಮಾಡಲಾಗಿದೆ. ಪೂರ್ವದಲ್ಲಿ ಅನೇಕ ಜನ್ಮಗಳಲ್ಲಿ ಯಾವ ಕರ್ಮವು ಮಾಡಲ್ಪಟ್ಟಿರುವುದೋ ಅವುಗಳೆಲ್ಲದರ ಸಂಚಯವು ಸಂಚಿತಕರ್ಮ ಎಂದು ಹೇಳಲ್ಪಡುತ್ತದೆ. ಮನುಷ್ಯನ ನಡವಳಿಕೆ, ಸಾಮರ್ಥ್ಯ, ಪ್ರವೃತ್ತಿಗಳು, ಒಲವುಗಳು ಇವುಗಳಲ್ಲಿ ಸಂಚಿತಕರ್ಮದ ಕೆಲವಂಶದ ಫಲ-ಪ್ರಬಂಧಗಳು ಕಾಣುತ್ತವೆ. ಮನುಷ್ಯನ ಗುಣಧರ್ಮಗಳು, ಆಶೋತ್ತರಗಳು ಈ ಸಂಚಿತ ಕರ್ಮದ ಫಲವಾಗಿಯೇ ಬರುತ್ತವೆ.

**ಅನೇಕಜನ್ಮಸಂಜಾತಂ ಪ್ರಾಕ್ತನಂ ಸಂಚಿತಂ ಸ್ಮೃತಮ್ ।**

—ದೇವೀಭಾಗವತ, ಅಧ್ಯಾಯ ೬

"ಅನೇಕ ಜನ್ಮಗಳಲ್ಲಿ ಹುಟ್ಟಿದುದೂ ಪ್ರಾಕ್ತನವಾದುದೂ ಯಾವುದೋ ಅದು ಸಂಚಿತ (ಕರ್ಮ)."

ಪ್ರಾರಬ್ಧಕರ್ಮ : ಫಲ ಕೊಡಲು ಪ್ರಾರಂಭವಾದ ಕರ್ಮವೇ ಪ್ರಾರಬ್ಧಕರ್ಮ. ಎಂದರೆ ಪ್ರಸ್ತುತ ಶರೀರದ ಧಾರಣೆಗೆ ಹಾಗೂ ಶರೀರಕ್ಕೆ ಸಂಚಿತಕರ್ಮದ ಯಾವ ಅಂಶವು ಕಾರಣವಾಗಿದೆಯೋ ಅದನ್ನು ಪ್ರಾರಬ್ಧಕರ್ಮ ಎಂದು ಹೇಳುತ್ತಾರೆ. ದೇಹದ ಸ್ಥಿತಿಗತಿ, ಸ್ವರೂಪ ಇವುಗಳು ಪ್ರಾರಬ್ಧಕರ್ಮದ ಫಲವಾಗಿದೆ. ಪ್ರಾರಬ್ಧಕರ್ಮವನ್ನು ಬದಲಾಯಿಸಲು ಸಾಧ್ಯವಿಲ್ಲ. ಅದನ್ನು ಅನುಭವಿಸಿಯೇ ತೀರಬೇಕು. ಉದಾಹರಣೆಗೆ ; ಕುಲ, ತಂದೆತಾಯಿಯರು, ಶರೀರದ ರಚನೆ, ಸ್ವರೂಪ ಇವುಗಳೆಲ್ಲ ಪ್ರಾರಬ್ಧಕರ್ಮದ ಫಲಗಳು. ಒಮ್ಮೆ ಫಲ ಬಿಟ್ಟ ಹಣ್ಣಿನಂತಿರುವುದೇ ಪ್ರಾರಬ್ಧಕರ್ಮ. ಹುಳಿಯಾಗಲಿ, ಸಿಹಿಯಾಗಲಿ, ಹಣ್ಣನ್ನು ಹೇಗೆ ಬದಲಿಸಲು ಸಾಧ್ಯವಿಲ್ಲವೋ ಹಾಗೆ ಪ್ರಾರಬ್ಧಕರ್ಮವನ್ನು ಬದಲಿಸಲು ಸಾಧ್ಯವಿಲ್ಲ. (ಆದರೆ ಜೀವನ್ಮುಕ್ತಾವಸ್ಥೆಯಲ್ಲಿ ಜೀವನ್ಮುಕ್ತನು ಪ್ರಾರಬ್ಧಕರ್ಮದ ಪ್ರಭಾವಕ್ಕೆ ಒಳಗಾಗುವುದಿಲ್ಲ.)

**ಸಂಚಿತಾನಾಂ ಪುನರ್ಮಧ್ಯಾತ್ ಸಮಾಹೃತ್ಯ ಕಿಯತ್ಕಿಲ ।**
**ದೇಹಾರಂಭೇ ಚ ಸಮಯೇ ಕಾಲಃ ಪ್ರೇರಯತೀವ ತತ್ ।**
**ಪ್ರಾರಬ್ಧಂ ಕರ್ಮ ವಿಜ್ಞೇಯಮ್ ॥**

—ದೇವೀಭಾಗವತ, ಅಧ್ಯಾಯ ೬

"ಸಂಚಿತದಿಂದ ಒಂದಂಶವು ಆರಿಸಲ್ಪಟ್ಟಂತಾಗಿ ದೇಹಾರಂಭದ ಸಮಯದಲ್ಲಿ ಕಾಲವು ಅದನ್ನು ಪ್ರೇರಿಸಿ ಅದು ಪ್ರಾರಬ್ಧಕರ್ಮವೆಂದಾಗುತ್ತದೆ."

ಕ್ರಿಯಮಾಣ (ಆಗಾಮಿ ಕರ್ಮ) : ಈ ಜನ್ಮದಲ್ಲಿ ಮಾಡುವ ಕರ್ಮವೇ ಕ್ರಿಯಮಾಣ ಕರ್ಮವಾಗಿರುತ್ತದೆ. ಈ ಕ್ರಿಯಮಾಣ ಕರ್ಮದ ಸ್ವರೂಪದಿಂದ, ಫಲದಿಂದ ಅದರ ಅನುಸಾರವಾಗಿ ಮುಂದಿನ ಜನ್ಮಸ್ಥಿತಿಗತಿಗಳು ದೊರೆಯುವುವು. ಆದುದರಿಂದ ಈ ಕರ್ಮವನ್ನು ಆಗಾಮಿ ಎಂದರೆ ಮುಂದೆ ಬರಲಿರುವ, ಹೊಸ ಸ್ಥಿತಿಗೆ ಕಾರಣವಾಗಿರುವ ಕರ್ಮ ಎಂದು ಹೇಳುತ್ತಾರೆ.

**ಕ್ರಿಯಮಾಣಂ ಚ ಯತ್ಕರ್ಮ ವರ್ತಮಾನಂ ತದುಚ್ಯತೇ ॥**

—ದೇವೀಭಾಗವತ, ಅಧ್ಯಾಯ ೬

"ವರ್ತಮಾನದಲ್ಲಿ ಮಾಡುವ ಕರ್ಮವೇ ಕ್ರಿಯಮಾಣ ಕರ್ಮವಾಗಿದೆ."

ಸಂಚಿತಕರ್ಮವನ್ನು, ಅದಕ್ಕೆ ಪುನಃ ಕರ್ಮವನ್ನು ಸೇರಿಸುವುದರಿಂದ, ಸೇರಿಸಿದ ಕ್ರಿಯಮಾಣಕರ್ಮವನ್ನು ಕೂಡ ವಿವೇಕದಿಂದ ಸತ್ಕರ್ಮರೂಪವಾಗಿ ಎಸಗಿ ಅದರಿಂದಾಗಿ ತನ್ಮೂಲಕ ದುಷ್ಪರಿಣಾಮಗಳು ಉಂಟಾಗದಂತೆ ಮಾಡಲು ಸಾಧ್ಯವಿದೆ. ಆದರೆ ಈಗಲೇ ಹೇಳಿದಂತೆ ಪ್ರಾರಬ್ಧಕರ್ಮವನ್ನು ಮಾತ್ರ ಆತ್ಮಜ್ಞಾನ ಪಡೆಯುವವರೆಗೆ ಇಲ್ಲದಂತೆ ಮಾಡಲು ಸಾಧ್ಯವಿಲ್ಲ. ಅದನ್ನು ಅನುಭವಿಸಿಯೇ ತೀರಬೇಕು. ಉದಾಹರಣೆಗೆ: ಕುರುಡುತನ, ಕುಂಟುತನ, ಮೈಬಣ್ಣ, ಕುಟುಂಬನಿರ್ಣಯ ಇತ್ಯಾದಿಗಳು. ಈ ವಿಚಾರ ವನ್ನು ಮತ್ತೊಂದು ಉದಾಹರಣೆಯ ಮೂಲಕ ಸ್ಪಷ್ಟವಾಗಿ ತಿಳಿದುಕೊಳ್ಳಬಹುದು:

ಓರ್ವ ಬೇಟೆಗಾರನು ತನ್ನ ಬತ್ತಳಿಕೆಯಲ್ಲಿ ಬಾಣಗಳನ್ನು ಇಟ್ಟುಕೊಂಡಿರುತ್ತಾನೆ. ಬತ್ತಳಿಕೆಯಲ್ಲಿರುವ ಬಾಣಗಳು ಸಂಚಿತಕರ್ಮ. ಅವುಗಳನ್ನು (ಬಾಣಗಳನ್ನು) ಅವನು ಇಚ್ಛಿಸಿದರೆ ಹೊಡೆಯಬಹುದು ಅಥವಾ ಬಿಡಬಹುದು. ಒಂದು ಬಾಣವನ್ನು ಗುರಿ ಯೆಡೆಗೆ ಹೊಡೆಯುತ್ತಾನೆ. ಇದೇ ಪ್ರಾರಬ್ಧಕರ್ಮ. ಅದನ್ನು ಏನು ಮಾಡಿದರೂ ತಡೆಯಲಾಗಲಿ, ಬದಲಿಸಲಾಗಲಿ ಸಾಧ್ಯವಿಲ್ಲ. ಇನ್ನೊಂದು ಬಾಣವನ್ನು ಬಿಲ್ಲಿನ ಹೆದೆಗೆ ಏರಿಸಿ ಹೊಡೆಯಬೇಕೆಂದು ಉದ್ದೇಶವಿಟ್ಟಿರುತ್ತಾನೆ. ಇದೇ ವರ್ತಮಾನ, ಕ್ರಿಯಮಾಣ ಅಥವಾ ಆಗಾಮಿಕರ್ಮ. ಗುರಿಯನ್ನು ಬೇಕಾದಂತೆ ಬದಲಿಸಬಹುದು. ಹೊಡೆಯಲೂ ಬಹುದು, ಹೊಡೆಯುವುದನ್ನು ನಿಲ್ಲಿಸಲೂಬಹುದು. ಹೀಗೆ ಮನುಷ್ಯನಿಗೆ ಸಂಚಿತ ಮತ್ತು ಆಗಾಮಿಕರ್ಮಗಳ ಮೇಲೆ ಹತೋಟಿ ಇದ್ದು ಪ್ರಾರಬ್ಧಕರ್ಮದ ಮೇಲೆ ಮಾತ್ರ ಹತೋಟಿ ಇರುವುದಿಲ್ಲ. ಆತ್ಮಜ್ಞಾನವಾದಾಗ ಎಲ್ಲಾ ಕರ್ಮಗಳೂ ನಿಷ್ಕ್ರಿಯ ಹಾಗೂ ನಿಸ್ತೇಜವಾಗುತ್ತವೆ.

**ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ ಕುರುತೇಽರ್ಜುನ ।**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ ॥**

—ಗೀತಾ, ಅಧ್ಯಾಯ ೪, ಶ್ಲೋಕ ೩೭

"ಎಲೈ ಅರ್ಜುನಾ, ಚೆನ್ನಾಗಿ ಪ್ರಜ್ವಲಿಸುತ್ತಿರುವ ಅಗ್ನಿಯು ಕಟ್ಟಿಗೆಗಳನ್ನು ಹೇಗೆ ಸುಟ್ಟು ಬೂದಿ ಮಾಡುತ್ತದೆಯೋ ಹಾಗೆಯೇ ಜ್ಞಾನವೆಂಬ ಅಗ್ನಿಯು ಕರ್ಮಗಳನ್ನೆಲ್ಲಾ ಭಸ್ಮಮಾಡಿಬಿಡುವುದು."

ಕ್ರಿಯಮಾಣ ಅಥವಾ ವರ್ತಮಾನ ಕರ್ಮಗಳಲ್ಲಿ ಹಲವು ಒಳಭೇದಗಳಿವೆ. ಅವು ಗಳನ್ನು ಮುಖ್ಯವಾಗಿ ಪ್ರಾಕೃತ, ಸ್ವಕೃತ ಎಂದು ಎರಡು ವಿಭಾಗ ಮಾಡಬಹುದು.

ಪ್ರಾಕೃತ ಎಂದರೆ ಪ್ರಯತ್ನವಿಲ್ಲದೆ ಪ್ರಕೃತಿಸಹಜವಾಗಿ ನಡೆಯುವ ಕರ್ಮವ್ಯಾಪಾರ ಗಳು. ಉದಾಹರಣೆಗೆ ಹೇಳುವುದಾದರೆ ಉಸಿರಾಟ, ನಿದ್ದೆ ಇತ್ಯಾದಿಗಳು.

ಸ್ವಕೃತ ಎಂದರೆ ತಾನು ಸ್ವತಃ ಮಾಡುವ ಕರ್ಮಗಳಾಗಿವೆ. ಉದಾಹರಣೆ: ಧರ್ಮ ಕರ್ಮ (ಪುಣ್ಯ) ಮತ್ತು ಅಧರ್ಮಕರ್ಮ (ಪಾಪ). ಜೀವಿಯ ಉನ್ನತಿಗೆ ಸಹಾಯ ವಾಗುವ ಕರ್ಮಗಳೆಲ್ಲವೂ ಸತ್ಕರ್ಮ, ಅದೇ ಪುಣ್ಯಕರ್ಮ. ಜೀವಿಯ ಅಧಃಪತನಕ್ಕೆ ಕಾರಣವಾಗುವ ಕರ್ಮಗಳೆಲ್ಲವೂ ದುಷ್ಕರ್ಮ, ಅದೇ ಪಾಪಕರ್ಮ.

ಪುಣ್ಯಕರ್ಮ ಅಥವಾ ಸತ್ಕರ್ಮವನ್ನು ಮುಖ್ಯವಾಗಿ ಮೂರು ವಿಧವಾಗಿ ವಿಂಗಡಿಸ ಬಹುದು :

(೧) ಲೌಕಿಕ, (೨) ವೈದಿಕ, (೩) ಪಾರಮಾರ್ಥಿಕ.

(೧) ಲೌಕಿಕ ಕರ್ಮ : ನೀತಿ ವಿದ್ಯೆ ಸ್ನೇಹ—ಮೈತ್ರಿಸಂಪಾದನೆಗೆ ಬೇಕಾಗುವಂತೆ ಮಾಡುವ ಕೆಲಸಗಳು. ಪ್ರಾಣಿದಯೆ, ರಾಷ್ಟ್ರಭಕ್ತಿ, ದೀನಾನುಕಂಪ—ಲೌಕಿಕ ಕರ್ಮಗಳು.

(೨) ವೈದಿಕ ಕರ್ಮ : ಜೀವಿಯ ಶುದ್ಧಿಗಾಗಿ, ಉನ್ನತಿಗಾಗಿ ಮಾಡುವ ಜಾತಕರ್ಮಾದಿ ಸಂಸ್ಕಾರಕರ್ಮಗಳು ಮತ್ತು ಇಹಪರದ ಸದ್ಗತಿಗಾಗಿಯೂ, ದುರಿತಕ್ಷಯಗಳಿಗಾಗಿಯೂ ಮಾಡುವ ಯಜ್ಞ, ದಾನ, ತಪಸ್ಸು ಎಂಬ ಸಾಧನೆಗೆ ಸಂಬಂಧಿಸಿದ ಕರ್ಮಗಳು. ಸಾಧನಾಕರ್ಮಗಳಲ್ಲಿ ನಿತ್ಯಕರ್ಮ, ಕಾಮ್ಯಕರ್ಮ, ನಿಷಿದ್ಧಕರ್ಮ ಎಂದು ಮೂರು ಒಳ ಭೇದಗಳಿವೆ.

(೩) ಪಾರಮಾರ್ಥಿಕ ಕರ್ಮ : ನಿಃಸ್ವಾರ್ಥಬುದ್ಧಿಯಿಂದ, ಪಾರಮಾರ್ಥಿಕವಾದ ದೃಷ್ಟಿಯಿಂದ, ಲೋಕಕಲ್ಯಾಣಾರ್ಥವಾಗಿ ಮಾಡುವ ಸೇವಾರೂಪದ ಕರ್ಮಗಳೇ ಪಾರಮಾರ್ಥಿಕ ಕರ್ಮ. ಪಾರಮಾರ್ಥಿಕ ಕರ್ಮವು ಸ್ಥಿತಪ್ರಜ್ಞನೂ ತ್ರಿಗುಣಾತೀತನೂ ಆದವನಿಂದ ಮಾತ್ರ ಸಾಧ್ಯ. ಆದುದರಿಂದ ಪಾರಮಾರ್ಥಿಕ ಕರ್ಮ ಮಾಡುವವನ ದೃಷ್ಟಿಯಿಂದ ಹೇಳುವುದಾದರೆ ಅವನು ಕರ್ಮ ಮಾಡುವುದರಲ್ಲಿ ಕರ್ತೃಭಾವನೆವುಳ್ಳವ ನಾಗಿರುವುದಿಲ್ಲ. ಆದರೆ ಆ ಮಟ್ಟವನ್ನೇರದ ಜೀವಿಗಳ ಲೌಕಿಕ ದೃಷ್ಟಿಯಿಂದ ಪಾರ ಮಾರ್ಥಿಕ ಕರ್ಮಗಳು ಕರ್ಮಗಳಾಗಿಯೇ ಕಾಣುತ್ತವೆ. ಪಾರಮಾರ್ಥಿಕ ಕರ್ಮ ಎಂದರೆ ನಿಃಸ್ವಾರ್ಥಕರ್ಮ ಎಂದು ತಾತ್ಪರ್ಯ.

ಲೌಕಿಕ ಕರ್ಮಗಳಿಂದ ಜೀವಿಯು ಲೋಕದಲ್ಲಿ ಉತ್ತಮ ಸಮಾಜಜೀವಿಯಾಗಲು, ಲೋಕದ ಪ್ರಜೆಯಾಗಲು ಲೌಕಿಕ ದೃಷ್ಟಿಯಿಂದ ಅರ್ಹತೆಯನ್ನು ಪಡೆಯುವುದಕ್ಕೆ ಸಾಧ್ಯವಾಗುತ್ತದೆ. ವೈದಿಕ ಕರ್ಮವಾದ ಸಂಸ್ಕಾರಗಳಿಂದ ಜೀವಿಯು ಪರಿಶುದ್ಧನಾಗು ತ್ತಾನೆ. ಸಾಧನಕರ್ಮಗಳಾದ ಯಜ್ಞ, ದಾನ, ತಪಸ್ಸು ಇವುಗಳು ಜೀವಿಯನ್ನು ತ್ರಿಕರಣ ಪೂರ್ವಕವಾಗಿ ಪರಿಶುದ್ಧವೂ ಸುಖಪ್ರದವೂ ಮಾಡುವುದರಲ್ಲಿ ನೆರವಾಗುತ್ತವೆ. ಪಾರ ಮಾರ್ಥಿಕ ಕರ್ಮದಿಂದ ಆತ್ಮಜ್ಞಾನ ಪಡೆಯದ ಜೀವಿಗಳಿಗೆ ಹಿರಿದಾದ ಆದರ್ಶ ದೊರಕು ವಂತಾಗುತ್ತದೆ. ಅದರಿಂದ ಅವರು ತಮ್ಮ ಜೀವನಕ್ಕೆ ಬೆಳಕು, ಮಾರ್ಗದರ್ಶನಗಳನ್ನು ಪಡೆಯುತ್ತಾರೆ. ಪಾರಮಾರ್ಥಿಕ ಕರ್ಮದಿಂದ ಲೋಕಕಲ್ಯಾಣ ಸಾಧಿಸಲ್ಪಡುತ್ತದೆ. ಯಜ್ಞ ದಾನ ತಪಸ್ಸುಗಳ ಕುರಿತಾಗಿ ಈಗ ಸ್ವಲ್ಪ ವಿಚಾರಮಾಡೋಣ :

ಯಜ್ಞ : ಯಜ್ಞ ಎಂದರೆ ಇತರರ ಕಲ್ಯಾಣಕ್ಕಾಗಿ, ಸಂತೋಷಕ್ಕಾಗಿ, ಸುಖಕ್ಕಾಗಿ ನಾವು ಮಾಡುವ ಕೆಲಸವಾಗಿರುತ್ತದೆ. ಇದರಲ್ಲಿ ಪೂಜೆ, ಗೌರವ ಪ್ರಕಟಣೆ, ತನ್ನ ವಸ್ತುವನ್ನು ತ್ಯಾಗಮಾಡುವುದು ಎಂಬ ಅಂಶಗಳು ಸೇರಿರುತ್ತವೆ (ದೇವತೋದ್ದೇಶೇನ ದ್ರವ್ಯತ್ಯಾಗೋ ಯಜ್ಞಃ). ಒಟ್ಟಿನಲ್ಲಿ ಯಜ್ಞ ಎಂದರೆ ಇತರರ ಹಿತಕ್ಕಾಗಿ ಶುದ್ಧವಾದ ಭಾವನೆಯಿಂದ ಮಾಡುವ ತ್ಯಾಗ, ಎಸಗುವ ಕೆಲಸವಾಗಿರುತ್ತದೆ. ಗೃಹಸ್ಥನು ಮಾಡುವ ಪಂಚಮಹಾಯಜ್ಞವು ಈ ತತ್ತ್ವವನ್ನು ಸ್ಪಷ್ಟಪಡಿಸಿ ಲೋಕದಲ್ಲಿ ಯಜ್ಞದ ಮಹತ್ವ

ವನ್ನು ಸಾರುತ್ತದೆ. ಈ ಲೋಕದ ಸೃಷ್ಟಿಯ ಮೂಲ ಗುಟ್ಟೇ ಯಜ್ಞ. ಇದು ನಡೆಯ ಬೇಕಾದರೆ ಬೇಕಾದ ಶಕ್ತಿಯೂ ಯಜ್ಞವೇ. ದೇವರು ಈ ಜಗತ್ತನ್ನು ಯಜ್ಞಗಳೊಂದಿಗೆ ಸೃಷ್ಟಿಸಿ ಯಜ್ಞವೇ ಪ್ರಜೆಗಳ ಪಾಲಿಗೆ ಕಾಮಧೇನು ಆಗಲಿ ಎಂದನು ಎಂಬ ವಿವರ ಭಗವದ್ಗೀತೆಯಲ್ಲಿ ಹೀಗೆ ಹೇಳಲ್ಪಟ್ಟಿದೆ :

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟಕಾಮಧುಕ್ ॥**

—ಗೀತಾ, ಅಧ್ಯಾಯ ೩, ಶ್ಲೋಕ ೧೦

"ಹಿಂದೆ ಪ್ರಜಾಪತಿಯು ಯಜ್ಞಗಳೊಂದಿಗೆ ಪ್ರಜೆಗಳನ್ನು ಸೃಷ್ಟಿಸಿ ಈ ರೀತಿಯಾಗಿ ಹೇಳಿದನು : 'ಇದರಿಂದ ನೀವು ವೃದ್ಧಿ ಹೊಂದಿರಿ. ಇದು ನಿಮಗೆ ಇಷ್ಟವನ್ನು ಪೂರೈಸುವ ಕಾಮಧೇನುವಾಗಲಿ.'"

ತನ್ನಲ್ಲಿ ಇರುವುದನ್ನು ಇತರರಿಗೆ ಕೊಡುವುದು, ಬಲಿದಾನ ಮಾಡುವುದು, ಕಾಣಿಕೆ ಕೊಡುವುದು, ಪೂಜಾಭಾವನೆಯಿಂದ ತ್ಯಜಿಸುವುದು ಇವೆಲ್ಲ ಯಜ್ಞವಾಗುತ್ತದೆ. ಯಜ್ಞ ಕಾರ್ಯವನ್ನು ಜೀವಿಯು ಮಾಡುತ್ತಲೇ ಇರಬೇಕು. ದ್ರವ್ಯಯಜ್ಞ, ಜ್ಞಾನಯಜ್ಞ, ತಪೋಯಜ್ಞ ಇತ್ಯಾದಿ ಅನೇಕ ಯಜ್ಞಗಳಿವೆ. ಲೌಕಿಕ ಪ್ರಗತಿ, ಸಮಾಜದ ಭದ್ರತೆ, ಜೀವನದ ಸುಖಮೈತ್ರಿಗಳು ಇವು ಯಜ್ಞವನ್ನು ಆಧರಿಸಿವೆ. ಯಜ್ಞ ಮಾಡದವನಿಗೆ ಈ ಲೋಕವೇ ಇಲ್ಲದಂತಾಗುವುದು. ಇನ್ನು ಪರಲೋಕವಾದರೂ ಎಲ್ಲಿ ? ಎಂಬುದಾಗಿ ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮನ ವಚನ ಹೀಗಿದೆ :

**ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥**

—ಗೀತಾ, ಅಧ್ಯಾಯ ೪, ಶ್ಲೋಕ ೩೧

"ಎಲೈ ಕುರುಶ್ರೇಷ್ಠನೇ, ಯಜ್ಞವನ್ನು ಮಾಡದವನಿಗೆ ಈ ಲೋಕವೇ ಇಲ್ಲದಿರು ವಾಗ ಪರಲೋಕವು ಎಲ್ಲಿ ಬರುವುದು ?"

ಯಜ್ಞಕ್ರಿಯೆಗಳು ಕರ್ಮಬಂಧನಗಳಾಗದೆ ಕರ್ಮಮುಕ್ತಿಗೆ ಸಹಾಯಮಾಡುವಂತಾಗ ಬೇಕು. ಹಾಗೆ ಆಗಬೇಕಾದರೆ ಕರ್ಮಫಲತ್ಯಾಗದ ಬುದ್ಧಿಯಿಂದ ಜೀವಿಯು ಕೆಲಸ ವನ್ನು ನಿರ್ವಹಿಸಬೇಕು. ಇದನ್ನು ಸ್ಪಷ್ಟಪಡಿಸುತ್ತಾ, ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮ ಹೇಳಿರುವ ದಿವ್ಯವಚನದ ವಿವರ ಹೀಗಿದೆ :

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ ಕುರುಷ್ವ ಮದರ್ಪಣಮ್ ॥**

**ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ ।**
**ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ॥**

—ಗೀತಾ, ಅಧ್ಯಾಯ ೯, ಶ್ಲೋಕ ೨೮

"ಯಾವುದನ್ನು ಮಾಡುತ್ತೀಯೋ, ಯಾವುದನ್ನು ಭುಜಿಸುತ್ತೀಯೋ, ಯಾವುದನ್ನು ಹೋಮ ಮಾಡುತ್ತೀಯೋ, ಯಾವುದನ್ನು ದಾನಮಾಡುತ್ತೀಯೋ, ಯಾವ ತಪಸ್ಸನ್ನು ಮಾಡುತ್ತೀಯೋ ಅವೆಲ್ಲವನ್ನೂ ನನಗೆ (ಭಗವಂತನಿಗೆ) ಅರ್ಪಿಸು. ಹೀಗೆ ಶುಭಾಶುಭ

ಫಲಗಳುಳ್ಳ ಕರ್ಮಗಳ ಬಂಧನದಿಂದ ಬಿಡುಗಡೆಯನ್ನು ಹೊಂದುವಿ. ಸಂನ್ಯಾಸ ಮತ್ತು ಯೋಗ ಇವುಗಳಿಂದ ಕೂಡಿದ ಅಂತಃಕರಣವುಳ್ಳವನಾಗಿ ಮುಕ್ತನಾಗಿ ನನ್ನನ್ನು ಸೇರುವೆ."

ದಾನ: ತನ್ನಲ್ಲಿ ಇರುವುದನ್ನು ಇತರರಿಗೆ ಉಪಕಾರಕ್ಕಾಗಿ ನಿಃಸ್ವಾರ್ಥಬುದ್ಧಿಯಿಂದ ನೀಡಿ 'ನನ್ನದಲ್ಲ' ಎನ್ನುವುದೇ ದಾನ. ತನಗೆ ಬಂದುದನ್ನು ಇತರರ ಹಿತಕ್ಕಾಗಿ ತ್ಯಾಗದಿಂದ ನೀಡುವಿಕೆಯು ಸ್ವಾರ್ಥಬುದ್ಧಿಯಿಂದ ಪರಾರ್ಥಬುದ್ಧಿಗೆ ಜೀವಿಯನ್ನು ಏರಿಸುತ್ತದೆ. ತಾನು, ತನ್ನದು ಎಂಬ ಸ್ವಾರ್ಥಬುದ್ಧಿಯ ಕರ್ಮಬಂಧನದಿಂದ ಜೀವಿಯು ಬಿಡುಗಡೆಯಾಗಲು ದಾನವೆಂಬ ಕರ್ಮವು ಸಹಾಯ ನೀಡುತ್ತವೆ, ಅಷ್ಟುಮಾತ್ರವಲ್ಲದೆ, ದಾನದಿಂದ ಸಮಾಜಕ್ಕೆ ಹಲವು ವಿಧಗಳಲ್ಲಿ ಉಪಕಾರ ಉಂಟಾಗಿ ತನ್ಮೂಲಕ ದಾನಮಾಡಿದ ವ್ಯಕ್ತಿಯ ಆತ್ಮದ ಉದ್ಧಾರವೂ ಆಗುತ್ತದೆ, ಎಂದರೆ ಪುಣ್ಯಪ್ರಾಪ್ತಿಯಾಗುತ್ತದೆ. ಆದರೆ ಪುಣ್ಯಪ್ರಾಪ್ತಿಯ ದೃಷ್ಟಿಯು ದಾನಿಯಾದವನಲ್ಲಿ ಇರದೆ ನಿಃಸ್ವಾರ್ಥಬುದ್ಧಿ ಇರಬೇಕಾದುದು ಅತ್ಯಂತ ಅಗತ್ಯ. ದಾನದಲ್ಲಿ ಹಲವು ವಿಧಗಳಿವೆ. ಅವುಗಳಲ್ಲಿ ಮುಖ್ಯವಾಗಿ ಹತ್ತು ತರಹಗಳನ್ನು ಹೇಳಬಹುದು: (೧) ಅನ್ನದಾನ, (೨) ವಿದ್ಯಾದಾನ, (೩) ಸಂಪತ್‌ದಾನ, (೪) ಭೂದಾನ, (೫) ಶ್ರಮದಾನ, (೬) ಆಶ್ರಯದಾನ, (೭) ಕನ್ಯಾದಾನ, (೮) ಗೋದಾನ, (೯) ಅಭಯದಾನ, (೧೦) ಆತ್ಮಬಲಿದಾನ. ಯಥಾ ಸಾಧ್ಯವಾದಂತೆ ಈ ದಶದಾನಗಳಲ್ಲಿ ಮೊದಲಿನ ಒಂಬತ್ತು ತರಹದ ದಾನಗಳನ್ನು ಜೀವನದಲ್ಲಿ ಆಚರಿಸುತ್ತಾ ಮಾನವನು ಕೊನೆಗೆ ತನ್ನನ್ನು ಭಗವಂತನಿಗೆ ಅರ್ಪಿಸಿಕೊಳ್ಳುತ್ತಾನೆ. ತನ್ನತನ ಅಹಂಕಾರವೆಲ್ಲವನ್ನೂ ತ್ಯಜಿಸಿ ಸಂಪೂರ್ಣವಾಗಿ ಪರಮಾತ್ಮನಲ್ಲಿ ಸಮರ್ಪಣಬುದ್ಧಿಯಿಂದ ಶರಣಾಗುತ್ತಾನೆ. ಅದೇ ಆತ್ಮಬಲಿದಾನ ಎಂದೆನಿಸಿರುತ್ತದೆ.

ತಪಸ್ಸು: ಆಹಾರವಿಹಾರಾದಿಗಳಲ್ಲಿ ನಿಯಮಪಾಲನೆ, ಜಪಧ್ಯಾನಾದಿಗಳಿಂದ ಇಂದ್ರಿಯಗಳನ್ನು ಸ್ವಾಧೀನಪಡಿಸಿಕೊಳ್ಳುವಿಕೆ, ಉತ್ತಮ ಹಾಗೂ ಉದಾತ್ತವಾದ ವಿಚಾರಗಳನ್ನು ಚಿಂತಿಸುತ್ತಾ ಅದರ ಸಾಧನೆಗಾಗಿ ಸತತ ಪರಿಶ್ರಮಪಡುವುದು—ಇದೇ ತಪಸ್ಸು. ತಪಸ್ಸಿನಲ್ಲಿ ಮೂರು ವಿಧವಿದ್ದು ಅದು ತ್ರಿಕರಣಪೂರ್ವಕವಾದಾಗಲೇ ಪರಿಪೂರ್ಣವಾಗುತ್ತದೆ.

ತ್ರಿವಿಧ ತಪಸ್ಸು: (೧) ಕಾಯಿಕ, (೨) ಮಾನಸಿಕ, (೩) ವಾಙ್ಮಯ (ಮಾತಿನ)—ಇವುಗಳನ್ನು ವಿವರಿಸುತ್ತಾ ಭಗವದ್ಗೀತೆಯಲ್ಲಿ ಹೀಗೆ ಹೇಳಲಾಗಿದೆ:

**ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥**

"ದೇವತೆಗಳು (ದೇವರು), ಬ್ರಾಹ್ಮಣ, ಗುರು, ಜ್ಞಾನಿ ಇವರ ಪೂಜೆಯೂ ಶೌಚವೂ ಆರ್ಜವವೂ ಬ್ರಹ್ಮಚರ್ಯ ಮತ್ತು ಅಹಿಂಸಾವ್ರತ ಇವುಗಳು ಶರೀರಕ್ಕೆ ಸಂಬಂಧಪಟ್ಟ ತಪಸ್ಸು ಎಂದು ಹೇಳಲ್ಪಡುತ್ತವೆ."

**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥**

"ಉದ್ವೇಗಕರವಲ್ಲದ, ಸತ್ಯವೂ ಪ್ರಿಯವೂ ಹಿತವೂ ಆದ ವಾಕ್ಯವೂ ಮತ್ತು ಸ್ವಶಾಖೆಯ ಅಧ್ಯಯನವೂ ವಾಚಿಕ ತಪಸ್ಸು ಎಂದು ಹೇಳಲ್ಪಡುತ್ತದೆ."

ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।
ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥

—ಗೀತಾ, ಅಧ್ಯಾಯ ೧೭, ಶ್ಲೋಕ ೧೪-೧೬

"ಮನಸ್ಸಿನ ಪ್ರಸನ್ನತೆ, ಸೌಮ್ಯಭಾವ, ಮೌನ, ಮನೋನಿರೋಧ, ಭಾವಸಂಶುದ್ಧಿ —ಇವು ಮಾನಸಿಕ ತಪಸ್ಸು ಎಂದು ಹೇಳಲ್ಪಟ್ಟಿವೆ."

ಜನ್ಮ ಎತ್ತಿದ ಮಾನವನು ಸುಖಪ್ರದವಾಗಿ ಈ ಜಗತ್ತಿನಲ್ಲಿ ಬಾಳಿ ಸುಗಮವಾಗಿ ಜೀವನವನ್ನು ನಿರ್ವಹಿಸಿಕೊಂಡು ಹೋಗಬೇಕಾದರೆ ತಪಶ್ಶಕ್ತಿಯುಳ್ಳವನಾಗಿರಬೇಕು. ತಪಃಕರ್ಮಾನುಷ್ಠಾನದಿಂದ ಕರ್ಮಬಂಧನವು ಕ್ಷೀಣವಾಗುತ್ತಾ ಕೊನೆಗೆ ಕರ್ಮಕ್ಷಯ ವಾಗುತ್ತದೆ.

ಪಾರಮಾರ್ಥಿಕ ಕರ್ಮ : ಲೌಕಿಕ ಮತ್ತು ವೈದಿಕ ಕರ್ಮಗಳ ಮೂಲಕ ಜೀವಿಯು ಪರಿಶುದ್ಧನಾಗಿ ಕರ್ಮಬಂಧನದಿಂದ ಮುಕ್ತನಾಗುತ್ತಾನೆ. ದೇಹಧಾರಿಯಾಗಿಯೇ ಇಳೆಯಲ್ಲಿ ಆತ ಉಳಿದಿರುವ ದಿನಗಳಲ್ಲಿ ಆತನು ಕರ್ಮ ಮಾಡದೆ ಕುಳಿತಿರದೆ ಕರ್ಮ ಮಾಡುತ್ತಲೇ ಇರುತ್ತಾನೆ. ಆತನು ಮಾಡುವ ಕರ್ಮಗಳೆಲ್ಲವೂ ಫಲಾಪೇಕ್ಷೆ ಇಲ್ಲದೆ, ಆತ್ಮೈಕದೃಷ್ಟಿಯಿಂದ, ಲೋಕಸಂಗ್ರಹಬುದ್ಧಿಯಿಂದ ಮಾಡುವ ಕರ್ಮ ಆಗಿರುತ್ತದೆ. ಸ್ಥಿತಪ್ರಜ್ಞನಾಗಿ, ನಿಸ್ತ್ರೈಗುಣ್ಯನಾಗಿ (ಗುಣಗಳಿಗೆ ಅತೀತನಾಗಿ), ರಭಸದಿಂದ ಸುತ್ತು ತ್ತಿರುವ ಚಕ್ರವು ಸುತ್ತದೆ ನಿಂತಿದೆಯೋ ಎಂದು ಕಾಣುವ ತೆರದಲ್ಲಿ ಕೆಲಸಮಾಡಿಯೂ ಮಾಡದಂತೆ, ಚಂದ್ರನು ಸಹಜವಾಗಿ ತಂಪನ್ನು ನೀಡುವಂತೆ, ಚಂದನವು ಸುಗಂಧವನ್ನು ಬೀರುವಂತೆ, ಪಾರಮಾರ್ಥಿಕ ಕರ್ಮವನ್ನು ಜೀವನ್ಮುಕ್ತನು ಮಾಡುತ್ತಾನೆ. ಅವನಿಂದಾ ಗಲಿ, ಅವನ ಕರ್ಮಗಳಿಂದಾಗಲಿ, ಲೋಕಕ್ಕೆ ಯಾವ ವಿಧದಲ್ಲೂ ತೊಂದರೆಯುಂಟಾಗು ವುದಿಲ್ಲ. ಪಾರಮಾರ್ಥಿಕ ಕರ್ಮ ಎಂದರೆ ಜ್ಞಾನಪೂರ್ವಕವಾದ ನಿಷ್ಕಾಮಕರ್ಮ ಎಂದು ತಾತ್ಪರ್ಯ.

ಹೀಗೆ ಕರ್ಮದ ಸಿದ್ಧಾಂತದಲ್ಲಿ ಅಡಕವಾಗಿರುವ ಕರ್ಮತತ್ತ್ವವನ್ನು ತಿಳಿದು ಈ ಜೀವನರಂಗದಲ್ಲಿ ಸತ್ಕರ್ಮನಿರತನಾಗಿ ಜೀವನವನ್ನು ಯಾರು ಮಾಡುತ್ತಾರೋ ಅವರು ಭವಬಂಧನದಿಂದ ಮುಕ್ತರಾಗಿ ಶಾಶ್ವತವಾದ ಮೋಕ್ಷಾನಂದವನ್ನು ಪಡೆಯುತ್ತಾರೆ.

ಪುನರ್ಜನ್ಮ ಸಿದ್ಧಾಂತ : ಪುನರ್ಜನ್ಮ ಸಿದ್ಧಾಂತವು ಹಿಂದೂಧರ್ಮದ ಇನ್ನೊಂದು ಮುಖ್ಯವಾದ ಸಿದ್ಧಾಂತವಾಗಿದೆ. ಜೀವಿಯು ಪುನಃ ಜನ್ಮತಳೆಯುವುದನ್ನು ಪುನರ್ಜನ್ಮ ಎಂದು ಹೇಳುತ್ತಾರೆ. ಪುನಃ ಜನ್ಮತಳೆಯುವುದೆಂದರೆ ಒಂದು ಬಾರಿ ಸತ್ತನಂತರ ಪುನಃ ದೇಹಧಾರಿಯಾಗಿ ಹುಟ್ಟಿಬರುವುದೇ ಆಗಿರುತ್ತದೆ. ಸಾಯುವಾಗ ದೇಹಕ್ಕೆ ಮಾತ್ರ ಸಾವು—ಎಂದರೆ ಸ್ಥೂಲದೇಹಕ್ಕೆ ಮಾತ್ರ ಸಾವು, ಅವಿನಾಶಿಯಾದ ಆತ್ಮ ಅಳಿವಿಲ್ಲದ್ದು ಎಂದು ಸಾರಿರುವ ಹಿಂದೂಧರ್ಮವು, ಸಾವು ಎಂದರೆ ಹಳೆಯದಾದ ಬಟ್ಟೆಗಳನ್ನು

ಹೊರಗೆಸೆದು ಹೊಸ ಬಟ್ಟೆಗಳನ್ನು ಧರಿಸುವಂತೆ ಜೀವಾತ್ಮನು ಹಳೆಯ ಜರ್ಜರಿತವಾದ ದೇಹವನ್ನು ತ್ಯಜಿಸಿ ನೂತನ ಶರೀರವನ್ನು ಧರಿಸುವುದು ಎಂದು ಹೇಳುತ್ತದೆ.

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ**
**ನವಾನಿ ಗೃಹ್ಣಾತಿ ನರೋಽಪರಾಣಿ ।**
**ತಥಾ ಶರೀರಾಣಿ ವಿಹಾಯ ಜೀರ್ಣಾ-**
**ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥**

—ಗೀತಾ, ಅಧ್ಯಾಯ ೨, ಶ್ಲೋಕ ೨೨

"ಮನುಷ್ಯನು ಹಳೆಯ ಬಟ್ಟೆಗಳನ್ನು ಬಿಟ್ಟು ಹೇಗೆ ಬೇರೆ ಹೊಸ ವಸ್ತ್ರಗಳನ್ನು ತೆಗೆದುಕೊಳ್ಳುತ್ತಾನೋ ಹಾಗೆಯೇ ದೇಹವನ್ನು ಹೊಂದಿರುವ ಆತ್ಮನು ಜೀರ್ಣವಾದ ಶರೀರವನ್ನು ಬಿಟ್ಟು ಹೊಸ ಶರೀರಗಳನ್ನು ಹೊಂದುತ್ತಾನೆ."

**ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ ।**
**ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥**

—ಗೀತಾ, ಅಧ್ಯಾಯ ೨, ಶ್ಲೋಕ ೧೩

"ದೇಹವುಳ್ಳ ಆತ್ಮನಿಗೆ ಈ ದೇಹದಲ್ಲಿ ಬಾಲ್ಯ, ಯೌವನ, ಜರಾವಸ್ಥೆಗಳು ಹೇಗೆ ಉಂಟಾಗುವುವೋ ಹಾಗೆಯೇ ಬೇರೆ ದೇಹದ ಪ್ರಾಪ್ತಿಯೂ ಉಂಟಾಗುತ್ತದೆ. ಆ ವಿಷಯದಲ್ಲಿ ಜ್ಞಾನಿಯು ಮರುಳಾಗುವುದಿಲ್ಲ."

ಆತ್ಮಕ್ಕೆ ಸಾವಿಲ್ಲ. ದೇಹವಳಿದರೂ ಅದು ಅಮರ ಎಂದು ಗೀತೆಯು ಸಾರಿರುತ್ತದೆ :

**ನ ಜಾಯತೇ ಮ್ರಿಯತೇ ವಾ ಕದಾಚಿತ್**
**ನಾಯಂ ಭೂತ್ವಾ ಭವಿತಾ ವಾ ನ ಭೂಯಃ ।**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ**
**ನ ಹನ್ಯತೇ ಹನ್ಯಮಾನೇ ಶರೀರೇ ॥**

—ಗೀತಾ, ಅಧ್ಯಾಯ ೨, ಶ್ಲೋಕ ೨೦

"ಈತನು (ಆತ್ಮನು) ಯಾವಾಗಲೂ ಹುಟ್ಟುವುದೂ ಇಲ್ಲ, ಸಾಯುವುದೂ ಇಲ್ಲ. ಈತನು ಹಿಂದೆ ಉತ್ಪನ್ನವಾಗಿ ಪುನಃ ಇಲ್ಲದಿರುವುದೂ ಇಲ್ಲ. ಈತನು ಜನ್ಮರಹಿತನು, ನಿತ್ಯನು ಶಾಶ್ವತನು ಪುರಾಣನು. ಶರೀರವು ನಾಶವಾಗುತ್ತಿದ್ದರೂ ಆತ್ಮನು ನಾಶವಾಗುವುದಿಲ್ಲ."

ಜೀವವು ಹೀಗೆ ಪುನಃಪುನಃ ಜನ್ಮತಳೆಯಲು ಕಾರಣವೇನು ಎಂಬುದಕ್ಕೆ ಉತ್ತರವಾಗಿ ಜೀವಿಯ ಕರ್ಮಕಾಮನೆಗಳೇ ಆಗಿವೆ ಎಂದು ಹಿಂದೂಧರ್ಮವು ಹೇಳುತ್ತದೆ.

ಜೀವಿಗಳ ಬಂಧಮೋಕ್ಷದ ಕುರಿತಾಗಿ ಹೇಳುವುದಾದರೆ ಮನುಷ್ಯನ ಆಸೆಯೇ ಹುಟ್ಟಿಗೆ ಕಾರಣ ಎಂದೂ ಆಸೆಗಳು ಇಲ್ಲದಂತಾದಾಗ ಮೋಕ್ಷಸಿದ್ಧಿ ಎಂದೂ ಹಿಂದೂ ಧರ್ಮ ಗ್ರಂಥಗಳಲ್ಲಿ ಸ್ಪಷ್ಟವಾದ ವಿವರಣೆಗಳಿವೆ. ಮುಂಡಕೋಪನಿಷತ್ತಿನಲ್ಲಿ (೩.೨.೨) ಆ ಬಗ್ಗೆ ಶ್ಲೋಕವೊಂದು ಹೀಗಿದೆ :

**ಕಾಮಾನ್ಯಃ ಕಾಮಯತೇ ಮನ್ಯಮಾನಃ ಸ ಕಾಮಭಿರ್ಜಾಯತೇ ತತ್ರ ತತ್ರ ।**
**ಪರ್ಯಾಪ್ತಕಾಮಸ್ಯ ಕೃತಾತ್ಮನಸ್ತು ಇಹೈವ ಸರ್ವೇ ಪ್ರವಿಲೀಯಂತಿ ಕಾಮಾಃ ॥**

"ಯಾವನು ಕಾಮಗಳನ್ನು ಯೋಚಿಸುತ್ತಾ ಕಾಮಿಸುವನೊ ಅವನು ಕಾಮಗಳೊಂದಿಗೆ ಅಲ್ಲಲ್ಲಿ ಹುಟ್ಟುತ್ತಾನೆ. ಪೂರ್ಣಕಾಮನಾದ ಕೃತಾತ್ಮನಿಗೆ ಎಲ್ಲ ಕಾಮಗಳೂ ಇಲ್ಲಿಯೇ ನಾಶವಾಗುವುವು."

ಪರಮಾತ್ಮನಿಂದ ಜೀವಾತ್ಮನು ಬೇರೆ ಎಂದು ಭಾವಿಸುವುದರಿಂದ ಜನ್ಮ ಎಂದೂ, ಪರಮಾತ್ಮನೊಡನೆ ಒಂದೆಂಬ ಅರಿವು ಬಂದಾಗ ಮೋಕ್ಷ ಎಂದೂ ಶ್ವೇತಾಶ್ವತರೋಪನಿಷತ್ತಿನ (೧.೬) ಶ್ಲೋಕ ಒಂದರಲ್ಲಿ ವಿವರಣೆ ಇದೆ :

**ಸರ್ವಾಜೀವೇ ಸರ್ವಸಂಸ್ಥೇ ಬೃಹಂತೇ**
**ಅಸ್ಮಿನ್ ಹಂಸೋ ಭ್ರಾಮ್ಯತೇ ಬ್ರಹ್ಮಚಕ್ರೇ ।**
**ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ**
**ಜುಷ್ಟಸ್ತತಸ್ತೇನಾಮೃತತ್ವಮೇತಿ ॥**

"ಎಲ್ಲಾ ಜೀವಿಗಳ ಉಗಮಸ್ಥಾನ ತಥಾ ಆಧಾರಸ್ಥಾನವಾದ ಆ ಮಹಾನ್ ಬ್ರಹ್ಮಚಕ್ರದಲ್ಲಿ ಹಂಸವು (ಜೀವವು) ಆ ಪ್ರೇರಕ ಪರಮಾತ್ಮನಿಂದ ಬೇರೆ ಎಂದು ಭ್ರಮಿಸುವುದರ ಮೂಲಕ ಸಂಸಾರಚಕ್ರಕ್ಕೆ ಸಿಲುಕುತ್ತಾ ತಿರುಗುತ್ತಿರುತ್ತದೆ. ಆ ಪರಮಾತ್ಮನ ಒಡನೆ ಸೇರುವುದರಿಂದ ಅಮೃತತ್ವವನ್ನು (ಮೋಕ್ಷವನ್ನು) ಹೊಂದುತ್ತದೆ."

ಹುಟ್ಟಿದವನಿಗೆ ಸಾವು ತಪ್ಪಿದ್ದಲ್ಲ ಎನ್ನುವುದನ್ನು ಗೀತೆಯಲ್ಲಿ ಹೀಗೆ ಹೇಳಲಾಗಿದೆ :

**ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।**
**ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥**

—ಗೀತಾ, ಅಧ್ಯಾಯ ೩, ಶ್ಲೋಕ ೨೭

"ಹುಟ್ಟಿದವನಿಗೆ ಮರಣವು ನಿಶ್ಚಯವು. ಸತ್ತವನಿಗೆ ಜನ್ಮವು ನಿಶ್ಚಯವು. ಆದುದರಿಂದ ಪರಿಹರಿಸಲಾಗದ ವಿಷಯದಲ್ಲಿ ನೀನು ಶೋಕಿಸಬಾರದು."

ಮುಕ್ತಿ ದೊರಕುವವರೆಗೆ ಜೀವಿಗೆ ಮತ್ತೆ ಮತ್ತೆ ಜನ್ಮಗಳು ಉಂಟಾಗುತ್ತವೆ. ಕಾಮನೆಗಳೆಲ್ಲ ತೀರುವ ತನಕ ಮುಕ್ತಿ ದೊರೆಯುವುದಿಲ್ಲ. ಹಾಗಾಗಿ ಜೀವಿಯು ಪುನಃಪುನಃ ಹುಟ್ಟುತ್ತಾನೆ. ಇದನ್ನು ಬೃಹದಾರಣ್ಯಕ ಉಪನಿಷತ್ತಿನಲ್ಲಿ (೪.೪.೬) ಈ ರೀತಿ ಹೇಳಲಾಗಿದೆ :

**ತದೇವ ಸಕ್ತಃ ಸಹಕರ್ಮಣೈತಿ ಲಿಂಗಂ ಮನೋ ಯತ್ರ ನಿಷಕ್ತಮಸ್ಯ ।**
**ಪ್ರಾಪ್ಯಾಂತಂ ಕರ್ಮಣಸ್ತಸ್ಯ ಯತ್ಕಿಂಚೇಹ ಕರೋತ್ಯಯಮ್ ॥**
**ತಸ್ಮಾಲ್ಲೋಕಾತ್ಪುನರೈತ್ಯಸ್ಮೈ ಲೋಕಾಯ ಕರ್ಮಣೇ ॥**
**ಇತಿ ಕಾಮಯಮಾನೋಽಥಾಕಾಮಯಮಾನೋ ಯೋಽಕಾಮೋ**
**ನಿಷ್ಕಾಮ ಆಪ್ತಕಾಮೋ ನ ತಸ್ಯ ಪ್ರಾಣಾ ಉತ್ಕ್ರಾಮಂತಿ, ಬ್ರಹ್ಮೈವ**
**ಸನ್ ಬ್ರಹ್ಮಾಪ್ಯೇತಿ ॥**

"(ಸಂಸರಿಸುತ್ತಿರುವ ಆತ್ಮನು) ಆಸಕ್ತನಾಗಿ ಎಲ್ಲಿ ಇವನ ಲಿಂಗಶರೀರವು ಅಥವಾ ಮನಸ್ಸು ಆಸಕ್ತವಾಗಿದೆಯೋ ಅದನ್ನೇ ಕರ್ಮದೊಂದಿಗೆ ಸೇರುತ್ತಾನೆ. ಇಹಲೋಕದಲ್ಲಿ ಯಾವ ಯಾವ ಕರ್ಮವನ್ನು ಮಾಡುವನೋ ಅದರ ಅಂತ್ಯವನ್ನು (ಪರಲೋಕದಲ್ಲಿ)

ಅನುಭವಿಸಿಕೊಂಡು ಅಲ್ಲಿಂದ ಪುನಃ ಈ ಲೋಕಕ್ಕೆ (ಹೊಸ) ಕರ್ಮಕ್ಕಾಗಿ ಹಿಂತಿರುಗು ತ್ತಾನೆ. ಹೀಗೆ ಫಲಕಾಮಿಯು (ಸಂಸರಿಸುತ್ತಾನೆ). ಈಗ ಅಕಾಮಿಯಾದವನು ಯಾವನು ಅಕಾಮನೋ ನಿಷ್ಕಾಮನೋ ಆಪ್ತಕಾಮನೋ ಆತ್ಮಕಾಮನೋ ಅವನ ಇಂದ್ರಿಯಗಳು ಉತ್ಕ್ರಮಿಸುವುದಿಲ್ಲ. ಬ್ರಹ್ಮವೇ ಆಗಿ ಬ್ರಹ್ಮದಲ್ಲಿ ಲೀನವಾಗುತ್ತಾನೆ."

ಹೀಗೆ ಪುನರ್ಜನ್ಮವು ಜೀವಿಗೆ ಇದೆ ಎಂಬುದನ್ನು ಹಿಂದೂಧರ್ಮದ ಗ್ರಂಥಗಳಲ್ಲಿ ಬಹಳ ನಿಶ್ಚಯವಾಗಿಯೂ, ಸ್ಪಷ್ಟವಾಗಿಯೂ ಹೇಳಿ ಅದಕ್ಕೆ ಕಾರಣವನ್ನೂ ಹೇಳಿರು ವುದನ್ನು ನಾವು ಕಾಣುತ್ತೇವೆ.

ಪುನರ್ಜನ್ಮದ ಕುರಿತಾಗಿ ನಾವು ಅನೇಕ ವಿಧದ ನ್ಯಾಯ ಯುಕ್ತಿಗಳಿಂದ ಸಾಕಷ್ಟು ವಿವರಗಳನ್ನು ಪಡೆಯಲು ಸಾಧ್ಯವಿದೆ.

ಜಗತ್ತಿನಲ್ಲಿ ಮಾನವರೊಳಗೆ ಇರುವ ಶರೀರಭೇದ ಇವುಗಳಿಗೆಲ್ಲಾ ಕಾರಣವೇನು? ಐದು ವರ್ಷ ವಯಸ್ಸಿನ ಮಗುವು ಭಗವದ್ಗೀತೆಯನ್ನು ಕಂಠಪಾಠ ಮಾಡಿ ಹೇಳುವಿಕೆ, ಅತಿಕಡಿಮೆಯಾದ ಜೀವಿತದ ಅವಧಿಯಲ್ಲಿ ಅತಿಮಹತ್ವಪೂರ್ಣವಾದ ಕೆಲಸಕಾರ್ಯ ಗಳನ್ನು ಸಾಧಿಸುವಿಕೆ, ಹಿಂದಿನ ಜನ್ಮದ ಸ್ಮರಣೆಯು ಈ ಜನ್ಮದಲ್ಲಿ ಬರುವಿಕೆ, ಆಕಸ್ಮಿಕ ವಾದ ಆಪತ್ತುಗಳಾದ ಬಾಲವೈಧವ್ಯ, ಅಸಾಧ್ಯ ರೋಗ, ದಾರಿದ್ರ್ಯ, ಅಪಮೃತ್ಯು, ಅಕಾಲಮೃತ್ಯು ಇವುಗಳಿಗೆಲ್ಲಾ ಕಾರಣವೇನು? ಕೆಲವರನ್ನು ನಮಗೆ ಹೊಸದಾಗಿ ನೋಡಿದ ಕೂಡಲೇ ಪ್ರೀತಿ ಉಂಟಾಗುತ್ತದೆ. ಹಾಗೆಯೇ ಕೆಲವರನ್ನು ನಮಗೆ ಪ್ರಥಮತಃ ನೋಡಿದ ಕೂಡಲೇ ಬೇಸರ-ಅಸಮಾಧಾನಗಳು ಉಂಟಾಗುತ್ತವೆ. ಹಲವರನ್ನು ಒಗ್ಗು ವುದು, ಇತರ ಕೆಲವರನ್ನು ಇಷ್ಟವಾಗದೆ ಇರುವುದೂ ಆಗುತ್ತದೆ. ಹುಟ್ಟಿದ ಮಗು ಶಿಕ್ಷಣವಿಲ್ಲದೆಯೇ ತಾಯಿಯ ಮೊಲೆಯನ್ನು ಉಣ್ಣುವಿಕೆ, ಸಿಹಿಕಹಿಗಳ ಭೇದ ತಿಳಿಯು ವಿಕೆ, ದಯೆ, ಸಂತೋಷಗಳನ್ನು ಪಡುವಿಕೆ, ಇವುಗಳಿಗೆಲ್ಲಾ ಕಾರಣವಾದರೂ ಏನು? ಕುಂಟುತನ ಕಿವುಡು ಕುರುಡು ಇತ್ಯಾದಿ ಅಂಗವೈಕಲ್ಯಗಳು, ಉತ್ತಮರೂ ಯೋಗ್ಯರೂ ಆದ ಮಕ್ಕಳು ಜನಿಸುವುದು—ಇವಕ್ಕೆಲ್ಲಾ ಕಾರಣವೇನು?

ಹೀಗೆ ಜಗತ್ತಿನಲ್ಲಿ ಮಾನವಬಳಗದಲ್ಲಿ ಕಾಣುವ ಈ ವೈವಿಧ್ಯ ವೈಚಿತ್ರ್ಯಗಳಿಗೆಲ್ಲಾ ಈ ಒಂದು ಜನ್ಮದಲ್ಲಿ ಮಾನವನು ಹುಟ್ಟಿ ಅವಕ್ಕೆ ಕಾರಣನಾಗುತ್ತಾನೆ ಎಂದು ಹೇಳಲು ಸಾಧ್ಯವಿಲ್ಲ. ಅವಕ್ಕೆ ಹಿಂದಿನ ಜನ್ಮದ ಫಲವಿಶೇಷ, ಕರ್ಮವಿಪಾಕಗಳು ಕಾರಣವಾಗಿವೆ. ಜೀವಿಯು ಒಂದೇ ಜನ್ಮದಲ್ಲಿ ಮೋಕ್ಷವನ್ನು ಸಾಧಿಸಲು ಸಾಧ್ಯವಾದಾಗ ಜನ್ಮಜನ್ಮ ಗಳನ್ನು ಎತ್ತುತ್ತಾ ಕೊನೆಗೆ ಜನ್ಮಾಂತರಗಳ ಅನಂತರ ಕರ್ಮಫಲದಿಂದ ಮುಕ್ತನಾಗು ತ್ತಾನೆ. ಕರ್ಮಫಲವು ಒಂದೇ ಜನ್ಮದಲ್ಲಿ ಮುಗಿಯುವಂತಿಲ್ಲವಾಗಿದ್ದು ಹಿಂದಿನ ಜನ್ಮ ಗಳಿಂದ ವ್ಯಯವಾಗುತ್ತಾ ಬಂದಿದ್ದರೆ ಅದು ವರ್ತಮಾನದ ಜನ್ಮದಲ್ಲಿ ಮುಗಿಯ ಬಹುದು. ಹಾಗಾಗಿ ಎತ್ತಿದ ಪ್ರತಿಜನ್ಮವೂ ಕೂಡ ಜೀವನಿಗೆ ಮುಕ್ತಿಸಾಧನೆಗೆ ಇರುವ ಸದವಕಾಶವಾಗಿರುತ್ತದೆ. ಸಂಚಿತವಾದ ಕರ್ಮವು ಮುಗಿದು ಜೀವಿಯು ಮುಕ್ತನಾಗಲು ಅನೇಕ ಜನ್ಮಗಳನ್ನು ಎತ್ತಬೇಕಾಗುವುದು ಅನಿವಾರ್ಯವಾಗುತ್ತದೆ. ಹೀಗೆ ಒಂದು ಜನ್ಮ ದಿಂದ ಇನ್ನೊಂದು ಜನ್ಮಕ್ಕೆ ಸಾಗುತ್ತಾ ಜೀವಿಯು ಪ್ರತಿಜನ್ಮದ ಕರ್ಮಫಲವನ್ನು

ಅನುಭವಿಸುತ್ತಾ, ಅನುಭವಿಸುವುದರ ಒಡನೆ ವರ್ತಮಾನಜನ್ಮದ ಬದುಕನ್ನು ಬಾಳುತ್ತಾ ಕೊನೆಗೆ ತನ್ನ ಕರ್ಮಕ್ಕೆ ಅನುಸಾರವಾಗಿ ಮುಕ್ತಿಯನ್ನು ಪಡೆಯುತ್ತಾನೆ. ಸಂಚಿತಕರ್ಮವನ್ನು ಒಂದೇ ಜನ್ಮದಲ್ಲಿ ಮುಗಿಸಲು ಸಾಧ್ಯವಿಲ್ಲ. ಆದರೆ ಕರ್ಮಗಳನ್ನೆಲ್ಲಾ ಒಂದೇ ಜನ್ಮದಲ್ಲಿ ಆತ್ಮಜ್ಞಾನವೆಂಬ ಅಗ್ನಿಯಿಂದ ದಹಿಸಿ ಬಂಧಮುಕ್ತನಾಗಬಹುದು. ಈ ಕುರಿತಾಗಿ ಭಗವಾನ್ ಶ್ರೀಕೃಷ್ಣನು ಗೀತೆಯಲ್ಲಿ ನೀಡಿದ ಆಶ್ವಾಸನೆ ಹೀಗಿದೆ :

**ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ ಕುರುತೇಽರ್ಜುನ ।**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ ॥**

—ಗೀತಾ, ಅಧ್ಯಾಯ ೪, ಶ್ಲೋಕ ೩೭

"ಚೆನ್ನಾಗಿ ಪ್ರಜ್ವಲಿಸುವ ಅಗ್ನಿಯು ಕಟ್ಟಿಗೆಗಳನ್ನು ಹೇಗೆ ಸುಟ್ಟು ಬೂದಿಮಾಡುತ್ತದೆಯೋ ಹಾಗೆಯೇ ಜ್ಞಾನವೆಂಬ ಅಗ್ನಿಯು ಕರ್ಮಗಳನ್ನೆಲ್ಲಾ ಭಸ್ಮಮಾಡಿ ಬಿಡುವುದು."

ಹೀಗೆ ಜನ್ಮ ಎತ್ತಲು ಕರ್ಮವು ಕಾರಣವಾಗಿ ಪುನರ್ಜನ್ಮ ಅನಿವಾರ್ಯವಾದರೂ ಎತ್ತಿದ ಜನ್ಮದನಂತರ ಪುನಃ ಜನ್ಮ ಎತ್ತಲೇಬೇಕೆಂದೂ, ಈ ಜನ್ಮಮೃತ್ಯುಪರಂಪರೆಗಳಿಗೆ ಅಂತ್ಯವೇ ಇಲ್ಲ ಎಂದೂ ತಿಳಿಯಬಾರದು. ಪ್ರತಿಜನ್ಮವೂ ಜನ್ಮಚಕ್ರದ ಬಂಧನದಿಂದ ಪಾರಾಗಲು ಜೀವಿಗೆ ದೊರೆತಿರುವ ಸದವಕಾಶವಾಗಿರುತ್ತದೆ.

ಒಂದು ಜನ್ಮದಲ್ಲಿ ಜೀವಿಯು ಗಳಿಸಿದ ಕರ್ಮಸಂಸ್ಕಾರಗಳ ಫಲವು ದೇಹತ್ಯಾಗದ ಸಮಯದಲ್ಲಿ ಸೂಕ್ಷ್ಮರೂಪದಲ್ಲಿ ಸೂಕ್ಷ್ಮಶರೀರದೊಡನೆ ಕೂಡಿಕೊಂಡು ಪುನಃ ಇನ್ನೊಂದು ಜನ್ಮಕ್ಕೆ ಅದು ಮುಂದುವರಿಯುತ್ತದೆ. ಈ ಜನ್ಮದಲ್ಲಿ ಏನೇನು ಸಾಧನೆಗಳನ್ನು ಮಾಡಿ ಸಂಗೀತ, ಗಣಿತ ಇತ್ಯಾದಿ ವಿಚಾರಗಳಲ್ಲಿ ಮಗ್ನನಾಗಿದ್ದು ಸಿದ್ಧಿ ಲಭಿಸದಿದ್ದರೆ ಮರಣಕಾಲಕ್ಕೆ ವ್ಯಕ್ತಿಗೆ ಅದೇ ಆಸೆ ಪ್ರಬಲವಾಗಿ ಉಳಿದಿರುತ್ತದೆ. ಆ ಆಸೆಯೇ ಮುಂದಿನ ಜನ್ಮದ ಸ್ವರೂಪಕ್ಕೆ ಕಾರಣವಾಗುತ್ತದೆ. ಉಪನಿಷತ್ ಗ್ರಂಥಗಳಲ್ಲಿ ಈ ಕುರಿತಾಗಿ ನೀಡಿರುವ ವಿವರಣೆ ಈ ರೀತಿ ಇದೆ :

**ಯಚ್ಚಿತ್ತಸ್ತೇನೈಷ ಪ್ರಾಣಮಾಯಾತಿ ಪ್ರಾಣಸ್ತೇಜಸಾ ಯುಕ್ತಃ ।**
**ಸಹಾತ್ಮನಾ ಯಥಾ ಸಂಕಲ್ಪಿತಂ ಲೋಕಂ ನಯತಿ ॥**

—ಪ್ರಶ್ನೋಪನಿಷತ್, ಪ್ರಶ್ನೆ ೩.೧೦

"ಈ ಜೀವನು ಯಾವ ಚಿತ್ತದಿಂದ ಕೂಡಿರುವನೋ ಅದರಿಂದ ಪ್ರಾಣವನ್ನು ಹೊಂದುತ್ತಾನೆ. ಪ್ರಾಣನು ತೇಜಸ್ಸಿನಿಂದ ಕೂಡಿ ಆತ್ಮನೊಂದಿಗೆ (ಅವನ) ಸಂಕಲ್ಪಕ್ಕೆ ಅನುಸಾರವಾದ ಲೋಕಕ್ಕೆ ಒಯ್ಯುತ್ತಾನೆ."

**ಸ್ಥೂಲಾನಿ ಸೂಕ್ಷ್ಮಾಣಿ ಬಹೂನಿ ಚೈವ ರೂಪಾಣಿ ದೇಹೀ ಸ್ವಗುಣೈರ್ವೃಣೋತಿ ।**
**ಕ್ರಿಯಾಗುಣೈರಾತ್ಮಗುಣೈಶ್ಚ ತೇಷಾಂ ಸಂಯೋಗಹೇತುರಪರೋಽಪಿ ದೃಷ್ಟಃ ॥**

—ಶ್ವೇತಾಶ್ವತರೋಪನಿಷತ್, ಅಧ್ಯಾಯ ೫.೧೨

"ಜೀವಾತ್ಮನು ಸ್ಥೂಲವೂ ಸೂಕ್ಷ್ಮವೂ ಆದ ಬಹುರೂಪಗಳನ್ನು ತನ್ನ ಗುಣಗಳಿಂದಲೂ ಅವುಗಳ ಸಂಯೋಗಕ್ಕೆ ಕಾರಣನಾಗಿ ಮತ್ತೊಬ್ಬನಂತೆ ಕಂಡುಬರುತ್ತಾನೆ."

ಸಾಯುವ ಕಾಲದ ಹಾಗೂ ಹಿಂದಿನ ಜನ್ಮದ ಆಸೆ, ಇವುಗಳ ಅರ್ಧಪೂರೈಕೆ ಇವುಗಳ ಪರಿಣಾಮವಾಗಿ ಜೀವಿಯು ಪುನಃ ಜನ್ಮತಳೆಯುವಾಗ ತನ್ನ ಆಶೋತ್ತರಗಳ ಬೆಳವಣಿಗೆ ಹಾಗೂ ನೆರವೇರಿಕೆಗಳಿಗೆ ಅನುಕೂಲವಾದ ಸನ್ನಿವೇಶದಲ್ಲಿ ಹುಟ್ಟುತ್ತಾನೆ. ತಾನು ಹಿಂದಿನ ಜನ್ಮದಲ್ಲಿ ಎಲ್ಲಿ ನಿಲ್ಲಿಸಿದ್ದನೋ ಅಲ್ಲಿಂದಲೇ ಈ ಜನ್ಮದಲ್ಲಿ ತನ್ನ ಆಶೋತ್ತರಗಳ ಪೂರೈಕೆ ಬಗ್ಗೆ ಕಾರ್ಯಕ್ರಮಗಳನ್ನು ಮುಂದುವರಿಸುತ್ತಾನೆ. ಅದಕ್ಕಾಗಿಯೇ ಎಳೆಪ್ರಾಯದ ಮಕ್ಕಳಲ್ಲಿ ಅತಿಮೇಧಾವಿಗಳೂ, ಮಹಾತ್ಮರೂ ಇತ್ಯಾದಿ ವಿಶೇಷವಾದ ಬೆಳವಣಿಗೆ ಪ್ರಕಾಶಗಳನ್ನು ನಾವು ಕಾಣುತ್ತೇವೆ. ಒಂದೇ ದಿನ, ಒಂದೇ ಘಳಿಗೆಯಲ್ಲಿ, ಒಂದೇ ವಾತಾವರಣದಲ್ಲಿ ಹುಟ್ಟಿದ ಎರಡು ಮಕ್ಕಳ ಪೈಕಿ ಬೆಳೆದು ದೊಡ್ಡವರಾಗುತ್ತಾ ಒಬ್ಬನು ಮಹಾಮೇಧಾವಿಯೂ, ಇನ್ನೊಬ್ಬನು ಮಂದಬುದ್ಧಿಯವನೂ ಆಗಿ ಬೆಳೆಯುತ್ತಾನೆ. ಹೀಗಾಗಲು ಅವನವನ ಹಿಂದಿನ ಜನ್ಮದ ಯೋಗ್ಯತೆ, ಕರ್ಮಫಲಗಳೇ ಕಾರಣ ವಿನಾ ಬೇರೇನೂ ಅಲ್ಲ.

ಹಿಂದಿನ ಜನ್ಮ ಇದ್ದಿದ್ದರೆ ನಮಗೆ ಅದರ ನೆನಪು ಈ ಜನ್ಮದಲ್ಲಿ ಏಕೆ ಇಲ್ಲ ? ನೆನಪು ಇಲ್ಲದ್ದರಿಂದ ಹಿಂದಿನ ಜನ್ಮ ಇಲ್ಲ ಎಂಬುದು ಸಾಮಾನ್ಯವಾದ ಸಂಶಯ ಹಾಗೂ ತೀರ್ಮಾನವಾಗಿರುತ್ತದೆ.

ನಮ್ಮ ಈ ಜನ್ಮದಲ್ಲೇ ನಾವು ಬಾಲ್ಯದಲ್ಲಿ ಪುಟ್ಟ ಮಗುವಾಗಿ ಇದ್ದೆವು ಎಂಬುದರ ಅರಿವು ನಮಗೆ ಸ್ವತಃ ಇರುವುದಿಲ್ಲ. ನಾವು ಬಾಲ್ಯದಲ್ಲಿ ಏನೇನು ಮಾಡಿರುತ್ತೇವೆ ಎಂಬ ನೆನಪು ನಮಗೆ ಇರುವುದಿಲ್ಲ. ಬೆಳೆಯುತ್ತಾ ಬಂದಂತೆ ಬುದ್ಧಿ ವಿಕಾಸವಾದಂತೆ ನಾವು ಎಷ್ಟೋ ಕೆಲಸಗಳನ್ನು ಮಾಡುತ್ತೇವೆ. ಎಷ್ಟೋ ಜನರ ಜೊತೆಯಲ್ಲಿ ಮಾತನಾಡುತ್ತೇವೆ. ಇವುಗಳೆಲ್ಲದರ ನೆನಪು ನಮಗೆ ಉಳಿಯುವುದಿಲ್ಲ. ಒಂದು ವಾರ ಹೆಚ್ಚೇಕೆ ಒಂದು ದಿನ ದಲ್ಲಿಯೇ ನಾವು ಮಾಡಿದ, ಆಡಿದ, ಯೋಚಿಸಿದ ವಿಚಾರಗಳೆಲ್ಲದರ ನೆನಪು ನಮಗೆ ಉಳಿಯುವುದಿಲ್ಲ. ಹಾಗೆಂದು ನಾವು ಪುಟ್ಟ ಮಗು ಆಗಿರಲಿಲ್ಲ, ನೆನಪು ಉಳಿಯದ ಈ ಕೆಲಸಕಾರ್ಯಗಳನ್ನೆಲ್ಲ ಮಾಡಿರುವುದಿಲ್ಲ ಎಂದು ಹೇಳಲು ಸಾಧ್ಯವಿಲ್ಲ. ಅದೇ ರೀತಿ ನಮಗೆ ನೆನಪು ಇಲ್ಲ ಎಂದಮಾತ್ರಕ್ಕೆ ಪೂರ್ವಜನ್ಮವಿಲ್ಲ ಎಂದು ಹೇಳುವುದೂ ಸರಿ ಯಾಗಲಾರದು. ನಮ್ಮ ಅಂತಃಕರಣದಲ್ಲಿ ಪೂರ್ವಜನ್ಮಗಳ ಸ್ಮರಣೆ ಹುದುಗಿರುತ್ತದೆ. ಅದನ್ನು ಚಿತ್ತವೃತ್ತಿನಿರೋಧಾಭ್ಯಾಸದ ಯೋಗ ಮೂಲಕ ನಾವು ತಿಳಿಯಲು ಸಾಧ್ಯ ವಿದೆ ಎಂದು ಪಾತಂಜಲಯೋಗಸೂತ್ರದ ಮೂಲಕ ನಮಗೆ ಸ್ಪಷ್ಟವಾಗಿ ಗೊತ್ತಾಗು ತ್ತದೆ. ಕೆಲವು ಸಂದರ್ಭಗಳಲ್ಲಿ ಯೋಗಾಭ್ಯಾಸದ ನೆರವಿಲ್ಲದೆಯೇ ಈ ಪುನರ್ಜನ್ಮ ಇದೆ ಎಂಬ ವಿಷಯವನ್ನು ತಿಳಿಯಪಡಿಸಲೋ ಎಂಬಂತೆ ಕೆಲವರಿಗೆ ಎಳೆತನದಲ್ಲೇ ಹಿಂದಿನ ಜನ್ಮದ ಸ್ಮರಣೆಗಳು ಬರುತ್ತವೆ. ತಾವು ಹಿಂದಿನ ಜನ್ಮದಲ್ಲಿ ಏನಾಗಿದ್ದೆವು ಎಂದು ಹೇಳಿ ಆ ಜನ್ಮದಲ್ಲಿ ಬದುಕಿದ ಮನೆ ಸಂಸಾರದವರು ಇವರನ್ನೆಲ್ಲ ಗುರುತಿಸಿರುವ ನಿದರ್ಶನಗಳು ಜಗದುದ್ದಕ್ಕೂ ಆಗಿಂದಾಗ್ಗೆ ತುಂಬಾ ದೊರೆತಿವೆ.

ಪ್ರತಿಯೊಬ್ಬರಿಗೂ ಹಿಂದಿನ ಜನ್ಮದ ಸ್ಮರಣೆ ಇದ್ದಿದ್ದರೆ ಅದರಿಂದ ಮನುಷ್ಯನ ವ್ಯಕ್ತಿಗತ ಹಾಗೂ ಸಾಮಾಜಿಕವಾದ ಜೀವನದ ಸುಖ ಅಭ್ಯುದಯಗಳಿಗೆ ಅನೇಕ ವಿಧದ

ಆತಂಕವು ಉಂಟಾಗುತ್ತಿತ್ತು. ಮಾತ್ರವಲ್ಲದೆ ಜಗತ್ತಿನ ಜೀವನ, ಗೋಳು ಜಗಳಗಳ ಕಥೆಯೋ ಎಂಬಂತಾಗುತ್ತಿತ್ತು.

ಹೇಗೆಂದರೆ : (೧) ಹಿಂದಿನ ಜನ್ಮದ ಶತ್ರು-ಮಿತ್ರರು ಈ ಜನ್ಮದಲ್ಲೂ ಮುಂದುವರಿದು ಅದೇ ವೈರಭಾವನೆ ಅನೇಕ ತರಹದ ದುಷ್ಪರಿಣಾಮಗಳಿಗೆ ಕಾರಣವಾಗುತ್ತಿತ್ತು. (೨) ಹಿಂದಿನ ಜನ್ಮದ ನಿರಾಶೆ, ದುಃಖಗಳು ಈ ಜನ್ಮದಲ್ಲೂ ಮುಂದುವರಿದು ಜೀವಿಗೆ ಅವರಿಂದ ಅನೇಕ ರೀತಿಯ ತೊಂದರೆ ಕಷ್ಟಗಳು ಉಂಟಾಗುತ್ತಿದ್ದವು. (೩) ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಗಳ ಫಲದಂತೆ ಈ ಹೊಸ ಜನ್ಮ ಉಂಟಾಗುವುದರಿಂದ ಹಿಂದಿನ ಜನ್ಮದಲ್ಲಿ ಶ್ರೀಮಂತನಾಗಿರುವವನು ಒಂದು ವೇಳೆ ಬಡವನೂ, ಬಡವನು ಬಲ್ಲಿದನೂ ಆಗುತ್ತಾನೆ. ಈ ಜನ್ಮದಲ್ಲಿ ಬಡವನಾದವನು ಹಿಂದಿನ ಜನ್ಮದ ತನ್ನ ಶ್ರೀಮಂತಿಕೆಯ ಮನೆಯನ್ನು ಗುರುತಿಸಿ ಅದು ತನಗೇ ಸೇರಬೇಕೆಂದು ಹೇಳುವುದು, ಅನಂತರ ಆ ಬಗೆಗೆ ಜೀವನದಲ್ಲಿ ಹೋರಾಡುವುದು, ಹಿಂದಿನ ಜನ್ಮದ ಬಂಧು ಬಳಗದವರು ಈ ಜನ್ಮದಲ್ಲಿ ಬೇರೆ ಬೇರೆ ಸಂಬಂಧದವರಾಗಿ ಬಂದಾಗ ಅಥವಾ ಬೇರೆಡೆಗಳಲ್ಲಿ ಜನಿಸಿ ಹೊಸ ಸಂಬಂಧಕ್ಕೆ ಒಳಗಾದಾಗ ಹಿಂದಿನ ಜನ್ಮದ ನೆನಪಿನಿಂದಾಗಿ ದುಃಖ, ವಿರೋಧ, ಅಸಮಾಧಾನ ಉಂಟಾಗುವುದು—ಹೀಗೆ ಪಲವು ವಿಧದ ವ್ಯಕ್ತಿಗತ, ಸಾಮೂಹಿಕ ಹಾಗೂ ಸಾಂಸ್ಕೃತಿಕವಾದ ಘರ್ಷಣೆ ತೊಂದರೆಗಳಿಗೆ ಕಾರಣವಾಗುತ್ತಿತ್ತು. ಹಾಗಾಗಿ ಪುನರ್ಜನ್ಮದ ಸ್ಮರಣೆ ಎಲ್ಲರಿಗೂ ಇರುವುದಿಲ್ಲ ; ಇರುವುದು ಹಿತಕರವೂ ಅಲ್ಲ ; ತದನುಸಾರವಾಗಿ ಇರುವ ಅಗತ್ಯವೂ ಇಲ್ಲ.

ಹಿಂದಿನಜನ್ಮದ ಸ್ಮರಣೆ ಈ ಜನ್ಮದಲ್ಲಿ ತಿಳಿಯುವುದಿಲ್ಲ. ಹಾಗೆಯೇ ಮುಂದಿನ ಜನ್ಮದಲ್ಲಿ ಅದನ್ನು ತಾನೇ ಅನುಭವಿಸುತ್ತೇನೆ ಎಂಬ ಸ್ಮರಣೆ ಎಂತೂ ಇರುವುದಿಲ್ಲ. ಆದುದರಿಂದ ಈ ಜನ್ಮದಲ್ಲಿ ತಾನು ಏನು ಬೇಕಾದರೂ ಮಾಡಬಹುದು ಎಂಬ ದೃಷ್ಟಿಯನ್ನು, ನಿಲವನ್ನು ತಳೆಯುವುದೂ ಸರಿಯಲ್ಲ. ಏಕೆಂದರೆ ಹಿಂದೆ ವಿವರಿಸಿದಂತೆ ಜನ್ಮಾಂತರಗಳ ಸ್ಮರಣೆ ಇರಲಿ ಇಲ್ಲದಿರಲಿ, ಕಷ್ಟನೋವುಗಳು ತಪ್ಪಿದ್ದಲ್ಲ. ಮತ್ತು ಅದೇ ಜೀವ ಹೊಸ ಜನ್ಮಗಳ ಕರ್ಮಫಲವನ್ನು ಅನುಭವಿಸಬೇಕಾಗಿರುವುದರಿಂದ ಜೀವಿಯು ವರ್ತಮಾನ ಜನ್ಮದಲ್ಲಿ ಬಹಳ ಜಾಗರೂಕತೆಯಿಂದ ಧರ್ಮಸಮ್ಮತವಾದ ರೀತಿಯಲ್ಲಿ ಬಾಳಬೇಕು. ಅಲ್ಲದೆ ಜನ್ಮಗಳು ಸಹಸ್ರ ಕಳೆದು ಜೀವಿಯು ವರ್ತಮಾನ ಜನ್ಮಕ್ಕೆ ಸಾಗಿಬಂದಿರಬಹುದು. ಆದರೆ ಈ ಜನ್ಮವೇ ಜೀವಿಗೆ ಅಂತ್ಯವಾಗಬಾರದೆಂದೇನಿಲ್ಲ. ಜೀವಿಯು ಸತ್ಕರ್ಮ ಸತ್ವಪೂರ್ಣವಾದ ಸಾಧನೆಯಿಂದ ಈ ಜನ್ಮದಲ್ಲೇ ಮುಕ್ತಿಯನ್ನು ಪಡೆಯಬಹುದು. ಹಾಗಾಗಿ ಜೀವಿಯು ಪ್ರತಿಜನ್ಮದಲ್ಲೂ ಉತ್ತಮ ಕೆಲಸವನ್ನೇ ಮಾಡಬೇಕಾದುದು ಅಗತ್ಯವಾಗಿರುತ್ತದೆ.

ಪುನರ್ಜನ್ಮವೂ ವಿಕಾಸವಾದವೂ : ಪುನರ್ಜನ್ಮಸಿದ್ಧಾಂತ ಎಂದರೆ "ವಿಕಾಸವಾದ" ಎಂಬ ಅಭಿಪ್ರಾಯ ಸರಿಯಲ್ಲ. ವಿಕಾಸವಾದವು ದೇಹಕ್ಕೆ ಸಂಬಂಧಪಟ್ಟದ್ದು ದೇಹದ ವಿಕಾಸವನ್ನು ಹೇಳುತ್ತದೆಯೇ ವಿನಾ ಆತ್ಮದ ಉನ್ನತಿ, ಆತ್ಮಸಾಕ್ಷಾತ್ಕಾರದ ಭಾವನೆಯನ್ನು ಒಳಗೊಂಡಿರುವುದಿಲ್ಲ. ಮಾನವನು ವಾನರನಿಂದ ವಿಕಾಸವಾಗಿ ಬಂದವನು

ಎನ್ನುವ ವಾದವೇ ವಿಕಾಸವಾದ. ಮಾನವರ ಒಳಗಿನ ಬುದ್ಧಿಭೇದ, ಗುಣಭೇದ, ಸ್ಥಿತಿಗತಿಗಳ ಭೇದ ಇವುಗಳಿಗೆಲ್ಲ ಈ ವಿಕಾಸವಾದವು ಸಮಂಜಸವಾದ ಉತ್ತರವನ್ನು ನೀಡುವಂತಿಲ್ಲ. ಏಕಕಾಲದಲ್ಲಿ ಅಲೌಕಿಕ ಪ್ರಜ್ಞೆಯ ಮನುಷ್ಯ, ಅತಿಮಂದಬುದ್ಧಿಯ ಮನುಷ್ಯ, ಕುಂಟ, ಕುರುಡ, ದುಷ್ಟ, ಶಿಷ್ಟ ಆಗಿರುವ ಮನುಷ್ಯರು ಜಗತ್ತಿನಲ್ಲಿ ಬಾಳುತ್ತಿರುವುದು, ಇವುಗಳಿಗೆಲ್ಲ ವಿಕಾಸವಾದ ಸಮರ್ಪಕವಾದ ಉತ್ತರವನ್ನು ನೀಡಲು ಸಮರ್ಥವಾಗಿರುವುದಿಲ್ಲ. ಇವುಗಳೆಲ್ಲದಕ್ಕೂ ಉತ್ತರವು ಪುನರ್ಜನ್ಮಸಿದ್ಧಾಂತದಲ್ಲಿ ಇದ್ದು ಈ ಸಿದ್ಧಾಂತವು ಜೀವಿಯ ಸತ್ವಸಂಶುದ್ಧಿ ಸತ್ಯಸಾಕ್ಷಾತ್ಕಾರಕ್ಕೆ ಸಹಾಯ ಮಾಡುವುದಾಗಿದ್ದು ವಿಕಾಸವಾದಕ್ಕಿಂತ ಭಿನ್ನವಾಗಿರುತ್ತದೆ.

ವಿಕಾಸವಾದವು ದೇಹದ ಪರಿಪೂರ್ಣತೆಯನ್ನು ಗುರಿಯಾಗಿ ಇಟ್ಟಿದ್ದು ವಾನರನ ಸ್ಥಿತಿಯಿಂದ ಮಾನವನ ಸ್ಥಿತಿಗೆ ಮನುಷ್ಯನು ವಿಕಾಸವಾಗಿ ಸೇರಿದಾಗ ಅವನು ಅಲ್ಲಿಗೆ ಪರಿಪೂರ್ಣನಾಗುತ್ತಾನೆ ಎನ್ನುತ್ತದೆ. ಆದರೆ ಒಂದೇ ರೂಪದ, ಆಕಾರದ, ಪರಿಪೂರ್ಣತೆಯ ಮಾನವರೊಳಗೆ ಗುಣಭೇದ, ಬುದ್ಧಿಭೇದ ಇವುಗಳು ಇರುತ್ತವೆ. ಇದಕ್ಕೆ ಕಾರಣ ಆತ್ಮೋನ್ನತಿ ಆಗದಿರುವುದೇ ಆಗಿದೆ. ಪುನರ್ಜನ್ಮವಾದವು ವಿಕಾಸವಾದಕ್ಕಿಂತ ಮುಂದೆ ಹೋಗಿದ್ದು, ಆತ್ಮಸಾಕ್ಷಾತ್ಕಾರವೇ ಜೀವನದ ಪರಮ ಗುರಿ, ಅದು ಲಭ್ಯವಾದಾಗ ಮಾತ್ರ ಜೀವನ ಪರಿಪೂರ್ಣವಾಯಿತು ಎನ್ನುತ್ತದೆ.

ಪುನರ್ಜನ್ಮವೂ ಅನುವಂಶೀಯತೆಯೂ : ಪ್ರಪಂಚದಲ್ಲಿ (ಮಾನವರೊಳಗೆ) ಕಾಣುವ ಈ ಭೇದಗಳಿಗೆ, ವಿವಿಧತೆಗಳಿಗೆಲ್ಲ ಅನುವಂಶೀಯತೆಯೇ ಕಾರಣ ಎಂದು ಹೇಳುತ್ತಾ ಪುನರ್ಜನ್ಮದಲ್ಲಿ ಅನುವಂಶೀಯತೆಯದೇ ಮಹತ್ವಪೂರ್ಣವಾದ ಪಾತ್ರ ಎಂಬ ಅಭಿಪ್ರಾಯ ಬಂದಿದೆ. ಅದೂ ಕೂಡ ಸಮರ್ಪಕವಾದುದಲ್ಲ. ಅನುವಂಶೀಯತೆಯ ಪ್ರಕಾರ ಜೀವಿಯು ತನ್ನ ಸ್ಥಿತಿಗತಿಗಳಿಗೆ ಬೇಕಾದ ಶಕ್ತಿಯೋಗ್ಯತೆಗಳನ್ನು ತನ್ನ ಹಿರಿಯರಿಂದ ಜನ್ಮತಃ ಪಡೆಯುತ್ತಾನೆ. ಕೆಲವನ್ನು ತನ್ನ ಒಳಗೆ ಅಂತರ್ಗತವಾಗಿ ಅಂತರ್ಯದ ಒಲವು ಎಂಬುದಾಗಿ ಪಡೆಯುತ್ತಾನೆ. ಈ ಅಂತರ್ಯದ ಒಲವಿನಿಂದಾಗಿ, ಹಿರಿಯರ ಗುಣಯೋಗ್ಯತೆಗಳಿಂದಾಗಿ ಈ ಜನ್ಮದ ಸ್ಥಿತಿಗತಿಗಳು ನೆರವೇರುತ್ತವೆ ಎಂಬುದೇ ಅನುವಂಶೀಯತೆ ವಾದದ ತಾತ್ಪರ್ಯ. ಆದರೆ ಒಂದೇ ತಾಯಿಗೆ ವಿವಿಧ ಬುದ್ಧಿಯ, ವಿವಿಧ ರೂಪದ, ವಿವಿಧ ಸ್ಥಿತಿಗತಿಯ ಮಕ್ಕಳು ಏಕೆ ಹುಟ್ಟುತ್ತಾರೆ ? ಹುಟ್ಟಿದ ಒಂದು ಮಗು ಬಹುಮೇಧಾವಿಯಾಗಿ ಬೆಳೆದರೆ ಇನ್ನೊಂದು ಮಂದಬುದ್ಧಿಯಾಗಿ ಏಕೆ ಬೆಳೆಯುತ್ತದೆ ? ಕುಂಟರೂ ಕುರುಡರೂ ಅಲ್ಲದ ತಂದೆತಾಯಿಯರಿಗೆ ಅಂತಹ ಮಕ್ಕಳು ಏಕೆ ಹುಟ್ಟುತ್ತಾರೆ ? ಎಂಬ ವಿಚಾರಗಳಿಗೆ ಅನುವಂಶೀಯತೆ ವಾದದಲ್ಲಿ ಸಮರ್ಪಕವಾದ ಉತ್ತರವು ದೊರೆಯುವುದಿಲ್ಲ. ಅಲ್ಲದೆ ಜೀವಿಯ ಅಂತರ್ಗತವಾದ ಒಲವು ಎನ್ನುವುದು ಇರುವುದಕ್ಕೆ ಮೂಲಕಾರಣವೇನು ಎಂಬುವದಕ್ಕೂ ಅನುವಂಶೀಯತೆ ವಾದದಲ್ಲಿ ಸರಿಯಾದ ಉತ್ತರ ಸಿಗುವುದಿಲ್ಲ. ಪುನರ್ಜನ್ಮವಾದವು ಈ ಅಂತರ್ಯದ ಒಲವೇ ಕರ್ಮಕೂಟವಾಗಿದ್ದು ಅದರಿಂದಾಗಿ ಜೀವಿಯು ಜನ್ಮವನ್ನು ಧಾರಣೆಮಾಡುವಂತಾಗುತ್ತದೆ. ತನ್ನ ಕರ್ಮಕ್ಕೆ

ಅನುಸಾರವಾಗಿ ಸಕಲ ಪರಿಸರ, ಪರಿಸ್ಥಿತಿಗಳನ್ನು ಪಡೆಯುವುದಾಗಿದೆ ಎಂದು ಸ್ಪಷ್ಟವಾಗಿ ತಿಳಿಸುತ್ತದೆ.

ಜೀವಿಯು ಪ್ರಥಮತಃ ಯಾವಾಗ ಹುಟ್ಟಿದನು ? ಅವನು ಪ್ರಥಮವಾಗಿ ಕರ್ಮವನ್ನು ಯಾವಾಗ ಏಕೆ ಮಾಡಿದನು ?—ಎಂಬುದಕ್ಕೆ ಉತ್ತರ ದೊರಕುವಂತಿಲ್ಲವಾಗಿ ಅವು ಅನಾದಿ ಎಂದು ಹೇಳಿಯಾಗಿದೆ. ಆದರೆ ಜೀವಿಗೆ ಸದ್ಗತಿ ಇದೆ, ಬಂಧಮುಕ್ತಿ ಇದೆ ಎಂಬುದು ಸ್ಪಷ್ಟವಾದ ಅಂಶವಾಗಿದೆ. ಜೀವಿಗೆ ಸದ್ಗತಿ ದೊರೆಯುವ ತನಕ, ಅಂದರೆ ಮೋಕ್ಷ ದೊರಕುವ ತನಕ ಈ ಲೋಕ, ಇತರ ಲೋಕ ಎಲ್ಲವೂ ಇದ್ದು ಅವುಗಳೆಲ್ಲದರ ಅನುಭವ ಆಯಾಯಾ ಜನ್ಮದ ಕರ್ಮಫಲಕ್ಕೆ ಅನುಸಾರವಾಗಿ ಜೀವಿಗೆ ಆಗಿಯೇ ಆಗುತ್ತದೆ. ಹಾಗೆಯೇ ಕೆಲವು ಜೀವಿಗಳು ಮಹಾತ್ಮರಾಗಿ, ಸಂತರಾಗಿ, ಋಷಿಗಳಾಗಿ ಇತರ ಜೀವಿಗಳ ಉದ್ಧಾರಕ್ಕೆ ನೆರವಾಗುತ್ತವೆ. ಜೀವಿಗಳು ವಾಸಿಸುವ ಲೋಕ—ಈ ಭೂಲೋಕ ಮಾತ್ರವಲ್ಲ. ಬೇರೆಯಾಗಿ ಸ್ವರ್ಗ, ದೇವಲೋಕ ಇತ್ಯಾದಿ ಅನೇಕ ಲೋಕಗಳು ಇವೆ. ಜೀವಾತ್ಮನು ಜನ್ಮಮೃತ್ಯುಗಳ ಚಕ್ರಕ್ಕೆ ಸಿಲುಕಿ ಈ ಭೂಲೋಕದಲ್ಲಿ ಜೀವಿಸುವಂತೆ ದೇಹತ್ಯಾಗದನಂತರ ಇತರ ಲೋಕಗಳಿಗೂ ತೆರಳುತ್ತಾನೆ. ಈ ಬ್ರಹ್ಮಾಂಡದಲ್ಲಿ ಒಟ್ಟು ಹದಿನಾಲ್ಕು ಲೋಕಗಳಿವೆ. ಅವುಗಳಲ್ಲಿ ಏಳು ಮೇಲು ಲೋಕಗಳೂ, ಏಳು ತಲ (ಕೆಳಗೆ) ಲೋಕಗಳೂ ಆಗಿವೆ. ಅವುಗಳು ಯಾವುವೆಂದರೆ :

ಮೇಲು ಲೋಕಗಳು : (೧) ಭೂಲೋಕ, (೨) ಭುವರ್ಲೋಕ, (೩) ಸ್ವರ್ಲೋಕ, (೪) ಮಹರ್ಲೋಕ, (೫) ಜನೋಲೋಕ, (೬) ತಪೋಲೋಕ, (೭) ಸತ್ಯಲೋಕ.

ಏಳು ತಲಲೋಕಗಳು : (೧) ಪಾತಾಳಲೋಕ, (೨) ಮಹಾತಲಲೋಕ, (೩) ರಸಾತಲಲೋಕ, (೪) ತಲಾತಲಲೋಕ, (೫) ಸುತಲಲೋಕ, (೬) ವಿತಲಲೋಕ, (೭) ಅತಲಲೋಕ.

—ದೇವೀಭಾಗವತ, ಅಧ್ಯಾಯ ೯

ಜೀವಾತ್ಮನ ಜನ್ಮಾಂತರ ಸಾಗಣೆಯ ಸೂಕ್ಷ್ಮ ವಿವರಣೆ : ಸಾವು ಎಂದರೆ ದೇಹತ್ಯಾಗ ಎಂಬುದನ್ನು ಈಗಾಗಲೇ ಹೇಳಿಯಾಗಿದೆ. ಸಾವಿನ ಕುರಿತಾಗಿ ನೆನಪಿಡಬೇಕಾದ ಅಂಶಗಳು ಹತ್ತು :

(೧) ಜೀವನು ಮೂಲತಃ ಪರಿಪೂರ್ಣನು. ಅದೇ ಆತ್ಮ. ಅವಿದ್ಯೆಯಿಂದಾಗಿ, ಕಾಮನೆಯಿಂದಾಗಿ ಸಂಸಾರಚಕ್ರಕ್ಕೆ ಸಿಲುಕುತ್ತಾನೆ.

(೨) ಜೀವನು ಅವಿನಾಶಿಯಾಗಿದ್ದಾನೆ.

(೩) ಜೀವಿಯ ಕಾಣುವ ಸ್ಥೂಲಶರೀರವು ನಾಶವಾಗುವಂತಹುದು.

(೪) ಸಾವು ಜೀವಾತ್ಮನ ಸ್ಥೂಲಶರೀರಕ್ಕೆ ವಿನಾ ಆತ್ಮನಿಗೆ ಅಲ್ಲ.

(೫) ಸಾವು ಎಂದರೆ ಜೀವಿಯ ಸ್ಥೂಲದೇಹ ಬದಲಾವಣೆಯೇ ವಿನಾ ಜೀವನ ಸ್ವರೂಪ ಬದಲಾವಣೆಯೇನಲ್ಲ.

(೬) ಜೀವಾತ್ಮನಿಗೆ ಹೊಸ ದೇಹ ದೊರಕುವಂತೆ ಸಾವು ಅನುಕೂಲಮಾಡುತ್ತದೆ.

(೭) ಹುಟ್ಟುವುದೆಂದರೆ ಜೀವಾತ್ಮನು ಹೊಸದಾಗಿ ಶರೀರವನ್ನು ಧರಿಸುವುದಾಗಿರುತ್ತದೆ.

(೮) ಜೀವಿಯು ಒಮ್ಮೆ ಹೊಸ ಶರೀರವನ್ನು ಧರಿಸಿ ಅದನ್ನು ತ್ಯಜಿಸುವವರೆಗಿನ ಅವಧಿಯೇ ಜೀವಿಯ ಒಂದು ಜನ್ಮ. ಹೊಸ ಶರೀರಧಾರಣೆಯನ್ನು ಹುಟ್ಟು ಎಂದೂ ದೇಹತ್ಯಾಗವನ್ನು ಸಾವು ಎಂದೂ ಹೇಳುವುದಾಗಿದೆ.

(೯) ಹುಟ್ಟಿಗೆ ತಂದೆ ತಾಯಿ ಕುಟುಂಬ ಇತ್ಯಾದಿ ಪರಿಸರಗಳು ಅಗತ್ಯ.

(೧೦) ಹುಟ್ಟಿಗೂ ಸಾವಿಗೂ ಅಂತರವಿರುವಂತೆ ಸತ್ತನಂತರ ಅದೇ ಜೀವಿ ಪುನಃ ಹುಟ್ಟಲು ಸಮಯಾಂತರವಿರುತ್ತದೆ. ಆದರೆ ಆ ಅವಧಿಯಲ್ಲಿ ತನ್ನತನವನ್ನು ಕಳೆದುಕೊಳ್ಳದೇ ಜೀವನು ಸೂಕ್ಷ್ಮಶರೀರಯುಕ್ತನಾಗಿ ಉಳಿದಿರುತ್ತಾನೆ. ಮುಕ್ತಿ ಲಭಿಸಿದಾಗ ಮಾತ್ರ ಜನ್ಮಮರಣಗಳ ಚಕ್ರದ ಪ್ರಭಾವದಿಂದ ಜೀವಿಯು ಶಾಶ್ವತವಾಗಿ ಬಿಡುಗಡೆ ಹೊಂದಿ ಮೋಕ್ಷಾನಂದವನ್ನು ಪಡೆಯುತ್ತಾನೆ.

ಮರಣ ಸಂಭವಿಸುವ ಕಾಲ ಸಮೀಪಿಸಿದಾಗ ಶರೀರವನ್ನು ಆಳುವ ವಿವಿಧ ಮರ್ಮಶಕ್ತಿಗಳು (Vital forces) ಒಂದೆಡೆ ಕೇಂದ್ರೀಕೃತವಾಗುತ್ತವೆ. ಎಂದರೆ ಜೀವನದ ಸೂಕ್ಷ್ಮಶರೀರದಲ್ಲಿ ಸಮಾವೇಶಗೊಳ್ಳುತ್ತವೆ. ಆಗ ಮರಣಹೊಂದುವ ವ್ಯಕ್ತಿಯ ದೃಷ್ಟಿ ಮಾಂದ್ಯವಾಗುತ್ತದೆ ; ಕಿವಿ ಕೇಳದಿರುವಿಕೆ, ಬಾಹ್ಯವ್ಯಾಪಾರಗಳು ನಿಲ್ಲುವಿಕೆ—ಇವುಗಳು ಆಗುತ್ತವೆ. ಹೀಗೆ ತನ್ನ ಕರ್ಮಸಂಸ್ಕಾರಗಳನ್ನು ಒಳಗೊಂಡು ಸೂಕ್ಷ್ಮಶರೀರ ಯುಕ್ತನಾಗಿ ದೇವಯಾನ ಅಥವಾ ಪಿತೃಯಾನ ಎಂಬ ಮಾರ್ಗಗಳ ಮೂಲಕ ದೇವ ಲೋಕಕ್ಕೇ ಆಗಲಿ, ಪಿತೃಲೋಕಕ್ಕೇ ಆಗಲಿ ತನ್ನ ಕರ್ಮಗಳಿಗೆ ಅನುಸಾರವಾಗಿ ತೆರಳುತ್ತಾನೆ. ಸತ್ಕರ್ಮ ಸದಾಚಾರಗಳಿಂದ ಬಾಳಿದ್ದರೆ ಅದಕ್ಕೆ ಅನುಗುಣವಾದ ಪದವಿಯ ಲೋಕವನ್ನೂ ದುಷ್ಕರ್ಮ ದುರಾಚಾರಗಳಿಂದ ಬಾಳಿದ್ದರೆ ಅದಕ್ಕೆ ಅನುಸಾರವಾದ ಪದವಿಯನ್ನೂ ಪಡೆಯುತ್ತಾನೆ. ಈ ಎಲ್ಲಾ ಲೋಕಗಳಿಂದಲೂ ತನ್ನ ಕರ್ಮಫಲ ಮುಗಿದ ಅನಂತರ ಜೀವಿಯು ಮರಳಿ ಭೂಲೋಕದಲ್ಲಿ ಜನ್ಮತಳೆಯಲೇಬೇಕು. ಆದರೆ ಭಗವಂತನ ಸಾಕ್ಷಾತ್ಕಾರವಾದನಂತರ ಜೀವಿಯು ಶಾಶ್ವತವಾಗಿ ಜನ್ಮಮರಣಗಳಿಂದ ಮುಕ್ತನಾಗುತ್ತಾನೆ.

ಇದನ್ನು ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮನು ಹೀಗೆ ಹೇಳಿ ಆಶ್ವಾಸನೆ ನೀಡಿರುತ್ತಾನೆ :

**ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।**
**ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥**

**—ಗೀತಾ, ಅಧ್ಯಾಯ ೮, ಶ್ಲೋಕ ೧೬**

"ಜೀವಿಗಳು ಭೂಲೋಕದಿಂದ ಬ್ರಹ್ಮಲೋಕದವರೆಗಿನ ಎಲ್ಲಾ ಲೋಕಗಳಿಗೂ ತೆರಳಿದರೂ ಅಲ್ಲಿಂದ ಪುನಃ ಬರತಕ್ಕವುಗಳಾಗಿರುತ್ತವೆ. ಆದರೆ ನನ್ನನ್ನು ಹೊಂದಿದರೆ ಪುನರ್ಜನ್ಮವಿರುವುದಿಲ್ಲ."

ತನ್ನ ಕರ್ಮಫಲ ಭೋಗಿಸಿದನಂತರ ಜೀವಿಯು ಸದ್ಗತಿಯುಕ್ತನಾಗಿರಲೂಬಹುದು. ಇಲ್ಲವೇ ಭೂತ, ಪ್ರೇತಗಳ ಸ್ವರೂಪನಾಗಿ ಕೆಳಗಿಳಿಯಲೂಬಹುದು. ಭೂತ, ಪ್ರೇತಗಳ ಸ್ವರೂಪ ಹೋಗಿ ಜೀವಿಗೆ ಮುಕ್ತಿ, ಸದ್ಗತಿ ದೊರೆಯಲಿ ಎಂದು ಜೀವಿಯು ಗತಿಸಿದ ಜನ್ಮದಲ್ಲಿನ ಕುಟುಂಬದವರು ಮಾಡಬೇಕಾದ ಶ್ರಾದ್ಧ, ತರ್ಪಣಾದಿ ಮರಣೋತ್ತರ

(ಅಪರ) ಸಂಸ್ಕಾರವಿಧಿಗಳನ್ನು ವಿಧಿಪೂರ್ವಕವಾಗಿ ಮಾಡಿದಾಗ ಜೀವಿಗೆ ಸದ್ಗತಿಯು ದೊರೆಯುತ್ತದೆ. ಆದರೂ ಕೂಡ ಮೇಲೆ ಗೀತಾ ಶ್ಲೋಕದಲ್ಲಿ ವಿವರಿಸಿದಂತೆ ಜೀವಿಯು ಭಗವಂತನ ಸಾಕ್ಷಾತ್ಕಾರಪಡೆಯುವತನಕ ಪುನಃಪುನಃ ದೇಹಧಾರಿಯಾಗಿ ಹುಟ್ಟಲೇ ಬೇಕಾಗುತ್ತದೆ.

ತನ್ನ ಕರ್ಮಫಲ ಭೋಗಿಸಿದನಂತರ ಪುನಃ ಜೀವಿಯು ತನ್ನ ಆಸೆ–ಇಷ್ಟಗಳ ಅನುಸಾರವಾಗಿ ಈ ಲೋಕದಲ್ಲಿ ಜನ್ಮತಳೆಯುತ್ತಾನೆ. ದೇವೀಭಾಗವತದಲ್ಲಿ ಈ ವಿಚಾರವಾಗಿ ಹೀಗೆ ಹೇಳಲಾಗಿದೆ :

**ಪೂರ್ವದೇಹಂ ಪರಿತ್ಯಜ್ಯ ಜೀವಃ ಕರ್ಮವಶಾನುಗಃ ।**
**ಸ್ವರ್ಗಂ ವಾ ನರಕಂ ವಾಽಪಿ ಪ್ರಾಪ್ನೋತಿ ಸ್ವಕೃತೇನ ವೈ ॥**
**ದಿವ್ಯಂ ದೇಹಂ ಚ ಸಂಪ್ರಾಪ್ಯ ಯಾತನಾದೇಹಮಥವಾಜವಟ್ ।**
**ಭುನಕ್ತಿ ವಿವಿಧಾನ್ ಭೋಗಾನ್ ಸ್ವರ್ಗೇ ವಾ ನರಕೇಽಥ ವಾ ॥**
**ಭೋಗಾಂತೇ ಚ ಯದೋತ್ಪತ್ತೇಃ ಸಮಯಸ್ತಸ್ಯ ಜಾಯತೇ ।**
**ತದೈವ ಸಂಚಿತೇಭ್ಯಶ್ಚ ಕರ್ಮಭ್ಯಃ ಕರ್ಮಭಿಃ ಪುನಃ ॥**
**ಯೋಜಯತ್ಯೇವ ತಂ ಕಾಲಃ...॥**

—ದೇವೀಭಾಗವತ, ಅಧ್ಯಾಯ ೪

"ಹಿಂದಿನ ಶರೀರವನ್ನು ತ್ಯಜಿಸಿ ಕರ್ಮದ ನಿಯಮಕ್ಕೆ ಅನುಸಾರವಾಗಿ ಜೀವನು ತನ್ನ ಕರ್ಮಗಳ ಫಲದಂತೆ ಸ್ವರ್ಗ ಅಥವಾ ನರಕವನ್ನು ಹೊಂದುತ್ತಾನೆ. ದಿವ್ಯವಾದ ಶರೀರ ವನ್ನು ಅಥವಾ ವಿಷಯವಸ್ತುಗಳ ಆಸೆಯಿಂದಾಗಿ ಹುಟ್ಟಿಕೊಂಡು ನರಳುವ ಶರೀರ ವನ್ನು (ಕರ್ಮಫಲಕ್ಕೆ ಅನುಗುಣವಾಗಿ) ಪಡೆದುಕೊಂಡು ಸ್ವರ್ಗ ಅಥವಾ ನರಕದಲ್ಲಿ ವಿವಿಧ ರೀತಿಯ ಅನುಭವಗಳನ್ನು ಅನುಭವಿಸುತ್ತಾನೆ. ಕರ್ಮಫಲವು ಅನುಭವಿಸಿ ಮುಗಿದು ಪುನಃ ಜನ್ಮತಳೆಯುವ ಸಮಯ ಬಂದಾಗ ಅವನ ಸಂಚಿತ ಕರ್ಮಗಳಿಗೆ ಅನುಸಾರವಾಗಿ ಕಾಲವು ಅವನನ್ನು ಕರ್ಮದ ಕಟ್ಟಿಗೆ ಯೋಜಿಸುತ್ತದೆ. (ಅವನು ತನ್ನ ಕರ್ಮಫಲವನ್ನು ಭೂಲೋಕದಲ್ಲಿ ಅನುಭವಿಸಲು ಪುನಃ ದೇಹಧಾರಿಯಾಗಿ ಹುಟ್ಟುತ್ತಾನೆ.)"

ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಕ್ಕೆ, ಪಟ್ಟ ಆಶೋತ್ತರಗಳಿಗೆ ಅನುಸಾರವಾಗಿ ಪುನಃ ಹೊಸ ಜನ್ಮವನ್ನು ಜೀವಿಯು ಪಡೆಯುತ್ತಾನೆ, ಅದಕ್ಕೆ ಬೇಕಾದ ಅನುಕೂಲದ ಸನ್ನಿವೇಶಗಳಲ್ಲಿ ಜನ್ಮತಳೆಯುತ್ತಾನೆ. ಛಾಂದೋಗ್ಯ ಉಪನಿಷತ್ತು, ಭಗವದ್ಗೀತೆ ಇವು ಗಳಲ್ಲಿ ಈ ವಿಚಾರವಾಗಿ ವಿಸ್ತಾರವಾದ ವಿವರಗಳು ದೊರೆಯುತ್ತದೆ.

**ತದ್ಯ ಇಹ ರಮಣೀಯಚರಣಾ ಅಭ್ಯಾಶೋ ಹ ಯತ್ತೇ ರಮಣೀಯಾಂ**
**ಯೋನಿಮಾಪದ್ಯೇರನ್ ಬ್ರಾಹ್ಮಣಯೋನಿಂ ವಾ ಕ್ಷತ್ರಿಯಯೋನಿಂ**
**ವಾ ವೈಶ್ಯಯೋನಿಂ ವಾಽಥ ಯ ಇಹ ಕಪೂಯಚರಣಾ ಅಭ್ಯಾಶೋ**
**ಹ ಯತ್ತೇ ಕಪೂಯಾಂ ಯೋನಿಮಾಪದ್ಯೇರಂ ಶ್ವಯೋನಿಂ ವಾ**
**ಸೂಕರಯೋನಿಂ ವಾ ಚಂಡಾಲಯೋನಿಂ ವಾ ॥**

—ಛಾಂದೋಗ್ಯ ಉಪನಿಷತ್, ಅಧ್ಯಾಯ ೫, ೧೦.೭

"ಅವರಲ್ಲಿ ಯಾರು ಇಲ್ಲಿ ರಮಣೀಯ ಚರಣರೋ ಅವರು ರಮಣೀಯ ಯೋನಿ ಯನ್ನು—ಬ್ರಾಹ್ಮಣ ಜನ್ಮವನ್ನಾಗಲಿ, ಕ್ಷತ್ರಿಯ ಜನ್ಮವನ್ನಾಗಲಿ ಅಥವಾ ವೈಶ್ಯ ಜನ್ಮ

ವನ್ನಾಗಲಿ—ಶೀಘ್ರವಾಗಿ ಪಡೆಯುತ್ತಾರೆ. ಆದರೆ ಯಾರು ಇಲ್ಲಿ ಕಪೂಯಚರಣರೋ (ದುಷ್ಟಶೀಲ-ನಡತೆಯವರೋ) ಅವರು ಕೆಟ್ಟ ಯೋನಿಯನ್ನು—ನಾಯಿಯ ಜನ್ಮವನ್ನಾಗಲಿ ಸೂಕರ ಜನ್ಮವನ್ನಾಗಲಿ ಅಥವಾ ಚಂಡಾಲ ಜನ್ಮವನ್ನಾಗಲಿ ಶೀಘ್ರವಾಗಿ ಪಡೆಯುತ್ತಾರೆ.”

**ಜೀವನು ಪುನಃ ದೇಹಧಾರಿಯಾಗುವುದು ಹೇಗೆ ?**

ಪುನಃ ಜನ್ಮತಾಳುವಾಗ ಜೀವಾತ್ಮನು ಆಕಾಶವಾಗಿ, ಗಾಳಿಯಾಗಿ, ಧೂಮವಾಗಿ, ಮಂಜು ಆಗಿ, ಮೋಡವಾಗಿ ಕೊನೆಗೆ ಮಳೆಯಾಗಿ ಭೂಮಿಯನ್ನು ತಲಪುತ್ತಾನೆ. ಅದು ಭೂಲೋಕದಲ್ಲಿ ಇರುವ ಮನುಷ್ಯವರ್ಗದ ಆಹಾರದಲ್ಲಿಯಾಗಲಿ, ಶರೀರದಲ್ಲಿಯಾಗಲಿ, ಒಂದಲ್ಲ ಒಂದು ವಿಧದಲ್ಲಿ ಸೇರಿ ಗರ್ಭಪಿಂಡವಾಗಿ ಬೆಳೆದು ಶಿಶುರೂಪ ತಾಳಿ ಜನ್ಮ ತಳೆಯುತ್ತದೆ. ಕರ್ಮಫಲ ವಿಶೇಷಕ್ಕೆ ಅನುಗುಣವಾಗಿ ಜೀವಾತ್ಮನು ಜರಾಯುಜ (ಗರ್ಭಕೋಶದಿಂದ ಹುಟ್ಟುವುದು), ಉದ್ಭಿಜ್ಜ (ಬೀಜದಿಂದ ಹುಟ್ಟುವುದು), ಸ್ವೇದಜ (ಬೆವರಿನಿಂದ ಹುಟ್ಟುವುದು), ಅಂಡಜ (ಮೊಟ್ಟೆಯಿಂದ ಹುಟ್ಟುವುದು) ಎಂದಾಗಿ ಹುಟ್ಟಿ ಅನಂತರ ದೇಹಧಾರಿಯಾಗುತ್ತಾನೆ.

ಪುನರ್ಜನ್ಮ ಸಿದ್ಧಾಂತದಿಂದಾಗಿ ಜೀವಿಗಳಿಗೆ ದೊರಕುವ ಉಪಕಾರವನ್ನು ಹೀಗೆ ಸಂಗ್ರಹವಾಗಿ ಹೇಳಬಹುದು :

(೧) ಜನ್ಮ ಎತ್ತಿದ ಜೀವನದ ಅವಧಿಯಲ್ಲಿ ಮುಕ್ತಿಪಡೆಯಲು ಸಾಧ್ಯವಿದೆ ಎಂಬ ಭರವಸೆ ಜೀವಿಗೆ ದೊರಕುತ್ತದೆ. ಈ ಜನ್ಮದಲ್ಲಿ ಮಾಡಿದ ಸತ್ಕರ್ಮಗಳ ಫಲವಾಗಲಿ, ಮುಕ್ತಿಗಾಗಿ ಮಾಡಿದ ಯತ್ನಗಳಾಗಲಿ ನಿಷ್ಫಲವೆಂದಾಗುವುದಿಲ್ಲ. ಅದು ಜೀವಿಯ ಜನ್ಮದೊಡನೆ ನಿಲ್ಲಿಸಿದಲ್ಲಿಂದಲೇ ಮುಂದುವರಿಯುತ್ತದೆ.

(೨) ಜೀವನದಲ್ಲಿ ತಾನು ಎಸಗುವ ಕರ್ಮಗಳು, ತನ್ನ ಜನ್ಮಜನ್ಮಾಂತರಗಳಿಗೆ ಫಲವನ್ನು ನೀಡುವಂತಾಗುತ್ತವೆ ಎಂಬ ಸತ್ಯಸಿದ್ಧಾಂತವು ಪ್ರಸ್ತುತದ ಜನ್ಮದಲ್ಲಿ ಕ್ರಮಬದ್ಧವಾಗಿಯೂ ಜೀವನ ಮಾಡಲು ಪ್ರೇರಕವಾಗುತ್ತದೆ.

(೩) ಜೀವನದ ಅನೇಕ ದುಃಖವಿಪತ್ತುಗಳ ಸಂದರ್ಭಗಳಲ್ಲಿ ಪುನರ್ಜನ್ಮಸಿದ್ಧಾಂತವು ಭರವಸೆ, ಸಮಾಧಾನಗಳನ್ನು ನೀಡುತ್ತದೆ. ಎಂದರೆ, ತನ್ನ ದುಃಖಗಳಿಗೆ, ಕಷ್ಟಗಳಿಗೆ ಕಾರಣ ತನ್ನ ಜನ್ಮದ (ಹಿಂದಿನ) ಕರ್ಮಫಲ ಎಂದು ಜೀವಿಯು ಸಮಾಧಾನವನ್ನು ತನಗೆ ತಾನೇ ಪಟ್ಟುಕೊಳ್ಳುತ್ತಾನೆ. ಅನಂತರ ಸತ್ಕರ್ಮ, ಸದ್ವರ್ತನೆಗಳಿಂದ ತನ್ನ ಪ್ರಸ್ತುತದ ಜೀವನ ಹಾಗೂ ಭವಿಷ್ಯವನ್ನು ಉತ್ತಮಪಡಿಸಲು ಉತ್ಸಾಹಪೂರ್ಣನಾಗಿ ಯತ್ನಿಸುವುದರಲ್ಲಿ ಕಾರ್ಯತತ್ಪರನಾಗುತ್ತಾನೆ.

**ಅವತಾರವಾದ :** ಅವತಾರ ಎಂದರೆ ಅವತರಿಸುವುದು ಎಂದರ್ಥ. ಅವತರಿಸುವುದು ಎಂದರೆ ಇಳಿದುಬರುವುದು. ಎಂದರೆ ಅವ್ಯಕ್ತದಿಂದ ವ್ಯಕ್ತಕ್ಕೆ ಅಥವಾ ಪರಮಾತ್ಮನೆಲೆಯಿಂದ ಭೂಲೋಕಕ್ಕೆ ಇಳಿದುಬರುವುದೇ ಅವತಾರ ಎಂದು ತಾತ್ಪರ್ಯ. ಇಳಿದುಬರುವುದು ಯಾರು ? ದೇವರು ಎಂದು ಹಿಂದೂಧರ್ಮದ ಸಿದ್ಧಾಂತವಾಗಿರುತ್ತದೆ. ದೇವರು ಏಕೆ ಬರುತ್ತಾನೆ ? ಎಂಬುದಕ್ಕೆ ಉತ್ತರವಾಗಿ ಜಗದಲ್ಲಿರುವ ದುಷ್ಟರ ಸಂಹಾರ

ಕ್ಕಾಗಿಯೂ, ಶಿಷ್ಟರ ಪರಿಪಾಲನೆಗಾಗಿಯೂ ಧರ್ಮಕ್ಕೆ ಗ್ಲಾನಿ ಒದಗಿದಾಗಲೆಲ್ಲ ಧರ್ಮ ಸಂಸ್ಥಾಪನೆಗಾಗಿ ಲೋಕಕಲ್ಯಾಣಕ್ಕಾಗಿ ಅವತರಿಸುತ್ತೇನೆ ಎಂದು ಶ್ರೀಕೃಷ್ಣಪರಮಾತ್ಮನು ಗೀತೆಯಲ್ಲಿ ಘೋಷಿಸಿರುತ್ತಾನೆ :

> **ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
> **ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥**
> **ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।**
> **ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥**
>
> —ಗೀತಾ, ಅಧ್ಯಾಯ ೪, ಶ್ಲೋಕ ೭-೮

"ಯಾವಾಗ ಧರ್ಮದ ಅವನತಿಯಾಗುವುದೋ, ಅಧರ್ಮದ ಉನ್ನತಿಯಾಗುವುದೋ ಆಗ ನಾನು ಅವತಾರಮಾಡುತ್ತೇನೆ. ಸಾಧುಗಳ ರಕ್ಷಣೆಗಾಗಿಯೂ, ದುಷ್ಟರ ವಿನಾಶಕ್ಕಾಗಿಯೂ ಮತ್ತು ಧರ್ಮದ ಸಂಸ್ಥಾಪನೆಗಾಗಿಯೂ ಪ್ರತಿ ಯುಗದಲ್ಲಿಯೂ (ಕೃತ, ತ್ರೇತ ಮುಂತಾದ ಯುಗಗಳ ನಿಯಮವಿಲ್ಲದೆ ಕಾಲಕಾಲಕ್ಕೆ ಸರಿಯಾಗಿ) ಅವತರಿಸುತ್ತೇನೆ."

ಅವತಾರ ಎತ್ತುವವರು ದೇವರು. ದೇವರ ಅಂಶದಿಂದ ಉತ್ಪತ್ತಿಯಾದವರೇ ಸಾಧುಸಂತರು, ಮಹಾತ್ಮರು ಆಗಿರುತ್ತಾರೆ. ಜಗತ್ತಿನ ಜೀವಕೋಟಿಗೆ ಸದ್ಧರ್ಮ, ಸದ್ವರ್ತನ ಇವುಗಳ ಬಗ್ಗೆ ಸ್ಫೂರ್ತಿ, ಮಾರ್ಗದರ್ಶನ, ಅಭಯ, ರಕ್ಷಣೆಗಳನ್ನು ನೀಡಲು ದೇವರು ಅವತರಿಸುತ್ತಾನೆ.

ಅವತಾರಗಳಲ್ಲಿ ನಾಲ್ಕು ವಿಧಗಳಿವೆ : (೧) ಪೂರ್ಣಾವತಾರ, (೨) ಅಂಶಾವತಾರ, (೩) ಆವೇಶಾವತಾರ, (೪) ಯೋಗಾವತಾರ.

(೧) ಪೂರ್ಣಾವತಾರ : ಪೂರ್ಣಾವತಾರವು ಭಗವಂತನೇ ಸ್ವತಃ ದೇಹಧಾರಿಯಾಗಿ ಇಳೆಯಲ್ಲಿ ಅವತರಿಸಿ ಜೀವಿಗಳ ಉದ್ಧಾರಕ್ಕಾಗಿಯೂ, ಧರ್ಮಸಂಸ್ಥಾಪನೆಗಾಗಿಯೂ ಕೆಲಸಮಾಡುವುದಾಗಿದೆ.

(೨) ಅಂಶಾವತಾರ : ದೇವರ ಅಂಶದಿಂದ ಉತ್ಪತ್ತಿಯಾದ ಭಗವಂತನ ಅವತಾರ ಸ್ವರೂಪವಾಗಿದ್ದು ದೇವರು ದೇಹಧಾರಿಯಾಗಿ ತನ್ನ ಅಂಶರೂಪದಿಂದ ಈ ಇಳೆಯಲ್ಲಿ ಅವತಾರಲೀಲೆಗಳನ್ನು ನಡೆಸುತ್ತಾನೆ.

(೩) ಆವೇಶಾವತಾರ : ಯಾವುದೋ ಒಂದು ನಿಶ್ಚಿತ ಉದ್ದಿಶ್ಯಕ್ಕಾಗಿ ತಾತ್ಕಾಲಿಕವಾಗಿ ಅವತಾರಸ್ವರೂಪವನ್ನು ತಳೆದು ಆವೇಶ ಬಂದಂತೆ ಬಂದು ಕಾರ್ಯ ಮುಗಿದ ನಂತರ ವ್ಯಕ್ತಿಸ್ವರೂಪದಲ್ಲಿದ್ದರೂ ಅವತಾರಸ್ವರೂಪವಿರದೆ ಬಾಳುವಿಕೆ.

(೪) ಯೋಗಾವತಾರ : ಯೋಗಶಕ್ತಿಯಿಂದ ಅವತರಿಸಿ ಯೋಗಪ್ರಭಾವವನ್ನು ಬೀರಿ ಜಗದ ಜೀವಿಗಳ ಉದ್ಧಾರಮಾಡುವುದು ಯೋಗಾವತಾರ.

ಕಾಲಕಾಲಕ್ಕೆ ಸರಿಯಾಗಿ ಅವತಾರಗಳು ಅನೇಕ ಬರುತ್ತವೆ, ಬಂದಿರುತ್ತವೆ. ಅವತಾರಗಳು ಇಷ್ಟೇ ಇರಬೇಕು ಎಂಬ ಮಾನವ ನಿಯಮವಿಲ್ಲ. ಏಕೆಂದರೆ ಅವತಾರ ಭಗವಂತನ ನಿಯಮ, ತೀರ್ಮಾನಕ್ಕೆ ಸೇರಿದುದಾಗಿದೆ. ಪೌರಾಣಿಕವಾಗಿ ಹಿಂದೂಧರ್ಮದ ಪ್ರಕಾರವಾಗಿ ಮುಖ್ಯವಾಗಿ ಹತ್ತು ಅವತಾರಗಳು ಪ್ರಸಿದ್ಧವಾಗಿವೆ. ಆದರೆ ಗೀತೆಯಲ್ಲಿ ಹೇಳಿ

ದಂತೆ ಅವತಾರಗಳು ಕಾಲಕಾಲಕ್ಕೆ ಸರಿಯಾಗಿ ಧರ್ಮೋದ್ಧಾರಕ್ಕೆ ಹುಟ್ಟಿಬಂದಿದ್ದು ತಪ್ಪುಗಳಿಲ್ಲದರ ಸಂಖ್ಯೆ ಹತ್ತನ್ನು ಮೀರಿರುತ್ತದೆ. ಪ್ರಸಿದ್ಧವಾದ ಹತ್ತು ಅವತಾರಗಳು ಯಾವುವೆಂದರೆ : (೧) ಮತ್ಸ್ಯಾವತಾರ, (೨) ಕೂರ್ಮಾವತಾರ, (೩) ವರಾಹಾವತಾರ, (೪) ನರಸಿಂಹಾವತಾರ, (೫) ವಾಮನಾವತಾರ, (೬) ಪರಶುರಾಮಾವತಾರ, (೭) ಶ್ರೀರಾಮಾವತಾರ, (೮) ಶ್ರೀಕೃಷ್ಣಾವತಾರ, (೯) ಶ್ರೀಬುದ್ಧಾವತಾರ, (೧೦) ಕಲ್ಕಿ ಅವತಾರ.

ಈ ಅವತಾರಗಳಲ್ಲಿ ಮೊದಲಿನ ಒಂಬತ್ತು ಅವತಾರಗಳು ಕಳೆದುಹೋಗಿದ್ದು ಹತ್ತನೇ ಅವತಾರವಾದ ಕಲ್ಕಿಯು ಈ ಕಲಿಯುಗದ ಕೊನೆಗೆ ಬರಲಿದೆ ಎಂದು ಹಿಂದೂ ಪುರಾಣಗಳು ಹೇಳುತ್ತವೆ.

ಅವತಾರದ ತತ್ತ್ವ ಹಾಗೂ ಉದ್ದೇಶಗಳನ್ನು ಅನುಸರಿಸಿ ಜಗತ್ತಿನಲ್ಲಿ ಆಗಿರುವ ಧರ್ಮಸ್ಥಾಪನೆ ಕೆಲಸಗಳನ್ನು ಪರಿಶೀಲಿಸಿದರೆ ಭಾರತಭೂಮಿಯಲ್ಲಿ ಇನ್ನೂ ಹೆಚ್ಚು ಅವತಾರಗಳು ಆಗಿಹೋಗಿರುವುದು ಕಂಡುಬರುತ್ತವೆ. ಉದಾ : ಶ್ರೀಶಂಕರಾಚಾರ್ಯ, ಶ್ರೀಕೃಷ್ಣಚೈತನ್ಯ, ಶ್ರೀರಾಮಕೃಷ್ಣಪರಮಹಂಸರು ಇತ್ಯಾದಿ ಇತ್ಯಾದಿ.

ಅವತಾರತತ್ತ್ವದ ಹಿನ್ನೆಲೆಯಲ್ಲಿ ಅಡಕವಾಗಿರುವ ತತ್ತ್ವ ಎಂದರೆ ಜಗತ್ತಿನ ಮಾನವ ಕೋಟಿಗೆ ಮುಕ್ತಿಯನ್ನು ಗಳಿಸಲು ಸಾಧ್ಯವಿದೆ ಎಂಬ ಬಗ್ಗೆ ಸೂಕ್ತವಾದ ಮಾರ್ಗದರ್ಶನ, ಸ್ಫೂರ್ತಿ ನೀಡಲು ಭಗವಂತನು ಮಾಡುವ ವ್ಯವಸ್ಥೆಯೇ ಆಗಿದೆ. ಜಗತ್ತಿನಲ್ಲಿ ಜೀವನದ ಸ್ಥಿತಿಗತಿಯ ಸಮತೋಲವನ್ನು ಸಂರಕ್ಷಿಸಲು ಅವತಾರವು ಅಗತ್ಯವಾಗಿರುತ್ತದೆ. ಇಲಿಗಳ ಹಾವಳಿಯನ್ನು ತಪ್ಪಿಸಲು ಬೆಕ್ಕು, ಹಾವಿನ ಹಾವಳಿ ತಪ್ಪಿಸಲು ಮುಂಗುಸಿಗಳು, ಜ್ವರದ ಹಾವಳಿಯನ್ನು ತಪ್ಪಿಸಲು ವನಸ್ಪತಿ ಔಷಧಿ—ಹೀಗೆ ಪ್ರಕೃತಿಯಲ್ಲಿ ಒಂದಲ್ಲ ಒಂದು ವಿಧದ ರಕ್ಷಣಾವ್ಯವಸ್ಥೆಗಳಿವೆ. ಹಾಗೆಯೇ ಮನುಷ್ಯಜೀವನದ ವಿವಿಧ ರಂಗಗಳ ಸ್ಥಿತಿ ಗತಿಗಳ ಅಭಿವೃದ್ಧಿ ರಕ್ಷಣೆಗಳ ಅಗತ್ಯವನ್ನು ಅನುಸರಿಸಿ ಅವತಾರತತ್ತ್ವವು ಕಾರ್ಯ ರೂಪಕ್ಕೆ ಬರುತ್ತದೆ. ಅನುಸಾರವಾಗಿ ಮಹಾಪುರುಷರು ಅವತರಿಸಿ ಜೀವರುಗಳ ಉದ್ಧಾರವನ್ನು ಮಾಡುತ್ತಾರೆ. ಹಾಗಾಗಿ ಅವತಾರ ಎಂದರೆ ಜಗತ್ತಿನ, ಜೀವರುಗಳ ವಿಕಾಸಕ್ಕಾಗಿ ಉದ್ಧಾರಕ್ಕಾಗಿ ಇರುವ ಭಗವಂತನ ವಿಶೇಷವಾದ ವ್ಯವಸ್ಥೆ ಎನ್ನಬಹುದು. ಮಾನವನು ಆತ್ಮಪೂರ್ವಕವಾಗಿ ಸ್ವಭಾವತಃ ಪರಿಶುದ್ಧನೂ ದಿವ್ಯನೂ ಆಗಿದ್ದು ಪಶು ಮಟ್ಟದಿಂದ ದೇವಮಟ್ಟಕ್ಕೇರಿ ಅಮರನಾಗಬಹುದು ಎಂಬುದನ್ನು ಸಾರುವ ಹಿಂದೂ ಧರ್ಮವು ತನ್ನ ಅವತಾರತತ್ತ್ವದ ಮೂಲಕ ಅದರ ನೈಜತೆಯನ್ನು ಸ್ಪಷ್ಟೀಕರಿಸಿರುತ್ತದೆ.

ಅವತಾರ ವ್ಯಕ್ತಿಗಳು ಪರಿಶುದ್ಧರೂ, ಪರಿಪೂರ್ಣರೂ, ನಿತ್ಯಮುಕ್ತರೂ, ನಿತ್ಯ ಸಿದ್ಧರೂ ಆಗಿದ್ದು ಅವರು ಜಗದಲ್ಲಿ ಸಾಧಿಸಬೇಕಾದುದು ಏನೂ ಇರುವುದಿಲ್ಲ. ಅವರು ಹೊರಗಣ್ಣಿಗೆ ಮಾನವರಂತೆ ಬಾಳುತ್ತಾರೆಂದು ಕಂಡರೂ ಆ ಬಾಳು ಕೇವಲ ಲೋಕ ಶಿಕ್ಷಣಕ್ಕಾಗಿ ಆಗಿರುತ್ತದೆ ಅಷ್ಟೇ. ಅವತಾರಶಕ್ತಿಯು ಭಗವಂತನ ಶಕ್ತಿಯಾಗಿದ್ದು ಅವತಾರಲೀಲೆಯು ಪೂರ್ಣವಾಗಿ, ದೇಹತ್ಯಾಗದನಂತರವೂ ಅವತರಿಸಿದ ವ್ಯಕ್ತಿರೂಪದ ಶಕ್ತಿಯ ಭಕ್ತರ ಪ್ರಾರ್ಥನೆ, ಪೂಜೆಗಳಿಗೆ ಉತ್ತರ ನೀಡುತ್ತದೆ. ಅಭಯ-ಆಶ್ರಯಗಳನ್ನು

ನೀಡುತ್ತದೆ. ಅವತಾರಪುರುಷರನ್ನು ವ್ಯಕ್ತಿಗಳೆನ್ನದೆ ಭಗವಂತನ ಮಾನವಸ್ವರೂಪದ ಪ್ರಕಟಣೆ ಎಂದು ಹೇಳುವುದಾಗಿದೆ. ಅವತಾರಸ್ವರೂಪಿ ಭಗವಂತನ ಪೂಜೆಯಿಂದ, ಆರಾಧನೆಯಿಂದ, ಜೀವಿಯು ಜೀವನದ ಕಷ್ಟನೋವುಗಳಿಂದ ಪಾರಾಗಿ ಕೊನೆಗೆ ಭವ ಬಂಧನದಿಂದ ಮುಕ್ತನಾಗಬಲ್ಲವನಾಗಿರುತ್ತಾನೆ.

ಹೀಗೆ ಹಿಂದೂಧರ್ಮದಲ್ಲಿ ಕರ್ಮವಾದ, ಪುನರ್ಜನ್ಮ, ಅವತಾರವಾದ ಈ ಮೂರು ಸಿದ್ಧಾಂತಗಳು ಜೀವಿಯ ಹುಟ್ಟು, ಬೆಳವಣಿಗೆಯ ಸ್ಥಿತಿಗತಿ, ಮುಕ್ತಿ ಪ್ರಾಪ್ತಿಯ ಬಗ್ಗೆ ಆಶ್ವಾಸನೆ ಇವುಗಳನ್ನು ನೀಡಿ ಜೀವಿಯು ಅಸತ್ಯದಿಂದ ಸತ್ಯದ ಎಡೆಗೆ, ಕತ್ತಲಿನಿಂದ ಬೆಳಕಿಗೆ, ಮೃತ್ಯುವಿನಿಂದ ಅಮೃತತ್ವದ ಕಡೆಗೆ ಹೋಗಲು ಸ್ಫೂರ್ತಿ, ಮಾರ್ಗದರ್ಶನ ಗಳನ್ನು ನೀಡುವ ಸಿದ್ಧಾಂತಗಳಾಗಿರುತ್ತವೆ.

## ೧೦

# ಹಿಂದೂಧರ್ಮದ ಪುರಾಣ ಸಂಕೇತ ಮತ್ತು ಮಂತ್ರಶಕ್ತಿ ವಿಚಾರಗಳು

**ಸಂಕೇತ ಮತ್ತು ಮಂತ್ರಶಕ್ತಿ ವಿಚಾರಗಳು :** ಹಿಂದೂಧರ್ಮದಲ್ಲಿ ಪುರಾಣಕಥೆ ಸಂಕೇತ ಸಂಗತಿಗಳು ಮತ್ತು ಮಂತ್ರಶಕ್ತಿ ವಿಚಾರಗಳಿಗೆ ವಿಶೇಷವಾದ ಸ್ಥಾನವಿದೆ. ಹಿಂದೂ ಧರ್ಮದ ಆಧಾರಗ್ರಂಥಗಳಲ್ಲಿ ಪುರಾಣಗ್ರಂಥಗಳು ಅನೇಕವಿದ್ದು ಅವುಗಳಲ್ಲಿ ದೇವರು ದೇಹಧಾರಿಯಾಗಿ ಜನ್ಮವೆತ್ತಿ ದುಷ್ಟರಾಕ್ಷಸರೊಡನೆ ಯುದ್ಧಮಾಡುವಿಕೆ, ಶಿಷ್ಟರನ್ನು ರಕ್ಷಿಸುವಿಕೆ, ಭೂಲೋಕ ಸ್ವರ್ಗಲೋಕಗಳಲ್ಲಿ ವಾಸ ಇತ್ಯಾದಿ ಅನೇಕ ವಿಶೇಷವಾದ ವಿಚಾರಗಳು ನಿರೂಪಿಸಲ್ಪಟ್ಟಿವೆ. ಸುಂದರವಾದ ಹಾಗೂ ವಿಚಾರಪೂರಿತವಾದ ಕಥೆಗಳು ಪುರಾಣಗಳ ವಿಷಯಾಂಶವಾದರೆ ಉತ್ತಮ ನೀತಿಬೋಧನೆ, ಉದಾತ್ತ ವಿಚಾರಗಳ ಸ್ಪಷ್ಟೀಕರಣೆ, ಧರ್ಮದ ಕುರಿತಾದ ವಿವರಣೆ—ಇವುಗಳು ಆ ಕಥೆಗಳಲ್ಲಿ ಅಡಕವಾಗಿರುವ ಸಂಗತಿಗಳಾಗಿವೆ.

ಪುರಾಣದ ಕಥೆಗಳಲ್ಲಿ ಹೆಚ್ಚಾಗಿ ಕಂಡುಬರುವ ಶಿವ ವಿಷ್ಣು ಬ್ರಹ್ಮ ಗಣಪತಿ ಸುಬ್ರಹ್ಮಣ್ಯ ಭಗವತಿ ಇಂದ್ರ ಯಮ ಇತ್ಯಾದಿ ದೇವದೇವತೆಗಳು ದಿವ್ಯಸತ್ಯದ ಸ್ಪಷ್ಟೀಕರಣಕ್ಕೆ ಉಪಯೋಗಿಸಲ್ಪಟ್ಟಂತಹ ದೇವತೆಗಳಾಗಿದ್ದು ಪ್ರತಿಯೊಂದು ದೇವತೆ ಹಾಗೂ ದೇವರೂಪಗಳ ಕಲ್ಪನೆಯ ಹಿನ್ನೆಲೆಯಲ್ಲಿ ಸರಿಯಾದ ತತ್ತ್ವ ಮತ್ತು ವಿಚಾರಗಳು ಅಡಗಿರುತ್ತವೆ. ವಿನಾಯಕನಿಗೆ ಆನೆಯ ಮುಖ, ಶಿವನಿಗೆ ಮೂರು ಕಣ್ಣು, ವಿಷ್ಣುವಿಗೆ ನಾಲ್ಕು ಕೈ, ಬ್ರಹ್ಮನಿಗೆ ಚತುರ್ಮುಖ, ವೀಣೆಯನ್ನು ಕೈಯಲ್ಲಿ ಹಿಡಿದು ಬಂಡೆಯ ಮೇಲೆ ಕುಳಿತಿರುವ ಶಾರದೆ, ಇತ್ಯಾದಿ ಅನೇಕ ರೀತಿಯ ಸ್ವರೂಪಕಲ್ಪನೆಯನ್ನು ದೇವರಿಗೆ ನೀಡಿರುವುದನ್ನು ಪುರಾಣಗಳಲ್ಲಿ ಕಾಣಬಹುದು. ವಿಚಿತ್ರ ರೀತಿಯ ಕಥೆಗಳು ಹಾಗೂ ಅತಿಮಾನುಷವಾದ ನಡವಳಿಕೆಗಳು ಮತ್ತು ಆಗುಹೋಗುಗಳು ಪುರಾಣದಲ್ಲಿ ವಿಪುಲವಾಗಿ ಕಾಣುತ್ತವೆ. ಇವುಗಳೆಲ್ಲದರ ಹಿಂದೆ ಇರುವ ಸತ್ಯವೊಂದೇ ಆಗಿದ್ದು ಅದನ್ನು ಸ್ಪಷ್ಟಪಡಿಸಲು ಈ ಪುರಾಣಕಥೆಗಳು ಮನಮುಟ್ಟುವ ತೆರದಲ್ಲಿ ವಿವಿಧ ರೀತಿಯಲ್ಲಿ ಹೇಳಲ್ಪಟ್ಟಿರುತ್ತವೆ. ಭೂಪಟದಲ್ಲಿ ದೇಶವು ಇಲ್ಲದಿದ್ದರೂ ದೇಶದ ಬಗೆಗೆ ನಮಗೆ

ಸಾಕಷ್ಟು ಪೂರ್ವಭಾವಿ ತಿಳಿವಳಿಕೆಯು ಭೂಪಟವನ್ನು ನೋಡಿದಾಗ ಹೇಗೆ ಬರುವುದೋ ಹಾಗೆಯೇ ಪುರಾಣಕಥೆಗಳ ಮೂಲಕ ನಮಗೆ ಪರಮಾತ್ಮನು ಮತ್ತು ಅವನ ಸೃಷ್ಟಿ ಲೀಲೆಗಳ ಬಗೆಗೆ ಸಾಕಷ್ಟು ವಿವರಗಳು ದೊರೆಕುತ್ತವೆ.

ವೇದೋಪನಿಷತ್ತುಗಳಲ್ಲಿ ಹೇಳಿರುವ ಜೀವನಧರ್ಮಸೂತ್ರ, ಸಾಧನತತ್ತ್ವವಿಚಾರ ಇವುಗಳನ್ನು ಪ್ರಾಯೋಗಿಕವಾಗಿ ಹೇಗೆ ಆಚರಿಸಬೇಕು ? ಅವುಗಳನ್ನು ಆಚರಿಸುವಾಗ ಏನೇನು ತೊಂದರೆಗಳು ಬರುತ್ತವೆ ? ಆ ತೊಂದರೆಗಳನ್ನು ಹೇಗೆ ನಿವಾರಿಸಬೇಕು ? ಎಂಬುದರ ಬಗೆಗೆ ಪುರಾಣಗಳಲ್ಲಿ ಬೇಕಷ್ಟು ಕಥಾನಿರೂಪಣೆ, ಉದಾಹರಣೆಗಳು, ಪಾತ್ರ ಚಿತ್ರಣಗಳು ಸಿಗುತ್ತವೆ. ಪ್ರಹ್ಲಾದನ ಭಕ್ತಿ, ಧ್ರುವನ ತಪಸ್ಸು, ಹಿರಣ್ಯಕಶಿಪುವಿನ ಕಥೆ, ಹರಿಶ್ಚಂದ್ರನ ಸತ್ಯನಿಷ್ಠೆ, ಗಜೇಂದ್ರಮೋಕ್ಷ—ಇತ್ಯಾದಿ ಇತ್ಯಾದಿ ಸಹಸ್ರಾರು ಪಾತ್ರ ಚಿತ್ರಣಗಳ ಮೂಲಕ ನಮಗೆ ವೇದವೇದಾಂತದ ದಿವ್ಯತತ್ತ್ವಗಳ ತಿಳಿವಳಿಕೆ ಮತ್ತು ಸಾರ್ಥಕ ಜೀವನಕ್ಕೆ ಮಾರ್ಗದರ್ಶನಗಳು ದೊರೆಯುತ್ತವೆ. ಕಷ್ಟನಷ್ಟಗಳ ಸಂದಿಗ್ಧ ವೇಳೆಗಳಲ್ಲಿ ಪುರಾಣಪ್ರಸಿದ್ಧ ವ್ಯಕ್ತಿಗಳ ಜೀವನದ ಅನೇಕ ಘಟನೆಗಳು ನಮಗೆ ಬೆಳಕು ಧೈರ್ಯ ಹಾಗೂ ಉತ್ಸಾಹಗಳನ್ನು ತುಂಬುವುದರಲ್ಲಿ ಸಂದೇಹವಿಲ್ಲ.

ಪುರಾಣದ ಕಥೆಗಳ ಹಿನ್ನೆಲೆಯಲ್ಲಿ ಅಡಕವಾಗಿರುವ ಕೆಲವು ತತ್ತ್ವಗಳೂ, ಅವುಗಳ ಸಂಬಂಧದ ಕಥೆಗಳೂ ಹೀಗಿವೆ : (ಒಂದೆರಡು ಉದಾಹರಣೆಗಳನ್ನು ಮಾತ್ರ ಇಲ್ಲಿ ನೀಡಲಾಗಿದೆ.)

(೧) ಸತ್ಯಕ್ಕೇ ಜಯ. ಅಧರ್ಮ ಅಸತ್ಯಕ್ಕೆ ಎಂದಿಗೂ ಜಯವಿಲ್ಲ. ಜೀವನದಲ್ಲಿ ಎಂತಹ ಕಷ್ಟ ಬಂದರೂ ಸತ್ಯವನ್ನು ಬಿಡಬಾರದು.

ಉದಾಹರಣೆ :

೧. ಸತ್ಯಹರಿಶ್ಚಂದ್ರನ ಕಥೆ

೨. ಪ್ರಹ್ಲಾದ-ಹಿರಣ್ಯಕಶಿಪುವಿನ ಕಥೆ

೩. ಮಹಿಷಾಸುರನ ಸಂಹಾರದ ಕಥೆ, ಇತ್ಯಾದಿ ಇತ್ಯಾದಿ.

(೨) ಭಗವಂತನಿದ್ದಾನೆ, ಅವನು ಎಲ್ಲೆಲ್ಲೂ ಇದ್ದಾನೆ. ಅವನು ದುಷ್ಟರನ್ನು ಸಂಹರಿಸಿ ಭಕ್ತರನ್ನು ಶಿಷ್ಟರನ್ನು ರಕ್ಷಣೆಮಾಡುತ್ತಾನೆ. ಅವನನ್ನು ಕಾಣಲು, ಅವನೊಡನೆ ಮಾತನಾಡಲು ಸಾಧ್ಯವಿದೆ. ಅದಕ್ಕೆ ಬೇಕಾದುದು ಭಕ್ತಿ, ತಪಸ್ಸು ಮತ್ತು ಶರಣಾಗತಿ ಮಾತ್ರ.

ಉದಾಹರಣೆ :

೧. ಪ್ರಹ್ಲಾದನ ಕಥೆ

೨. ಧ್ರುವನ ಕಥೆ

೩. ಗೋಪಿಯರ ಕಥೆ

೪. ಕಂಸವಧೆ

೫. ಪಾಂಡವರ ಕಥೆ

ಪ್ರಾಚೀನ ಋಷಿಮುನಿಗಳು ಹಾಗೂ ಮಹಾತ್ಮರು ತಮ್ಮ ದಿವ್ಯದೃಷ್ಟಿಯಿಂದ ಕಂಡು ಕೊಂಡದ್ದಾಗಿದ್ದು ಪರಂಪರಾಗತವಾಗಿ ತಿಳಿದುಬಂದಂತೆ ಪುರಾಣದ ಕಥಾನಾಯಕರೂ,

ದೇವದೇವತೆಗಳೂ, ಇವರ ಸ್ವರೂಪದ ಚಿತ್ರಣದ ಹಿಂದೆ ಗಹನವಾದ ಮತ್ತು ಅರ್ಥಪೂರ್ಣವಾದ ಆಧ್ಯಾತ್ಮಿಕ ತತ್ತ್ವಗಳು ಅಡಗಿವೆ. ಅವುಗಳಲ್ಲಿ ಕೆಲವನ್ನು ಕುರಿತು ಈಗ ಸಂಕ್ಷೇಪವಾಗಿ ವಿಚಾರಮಾಡೋಣ.

## ಶ್ರೀ ಮಹಾಗಣಪತಿ

ಶ್ರೀ ಮಹಾಗಣಪತಿ ಗಜವದನ. ಅವನಿಗೆ ನಾಲ್ಕು ಭುಜಗಳಿವೆ. ಡೊಳ್ಳಾದ ಹೊಟ್ಟೆ ಇದೆ. ಅದಕ್ಕೆ ಸರ್ಪವನ್ನು ಸುತ್ತಿಕೊಂಡಿದ್ದಾನೆ. ಗಣೇಶನ ವಾಹನ ಇಲಿ. ಗಣಪತಿಯ ಮೇಲಿನ ಕೈಯಲ್ಲಿ ಪಾಶ, ಎಡಗೈಯಲ್ಲಿ ಅಂಕುಶ, ಕೆಳಗಿನ ಬಲಗೈಯಲ್ಲಿ ಭಗ್ನದಂತ, ಎಡಗೈಯಲ್ಲಿ ಮೋದಕ ಇದೆ.

ನಮಗೆ ಆನೆಯನ್ನು ನೋಡಿದಷ್ಟು ಸಂತೋಷ. ಅದರಿಂದ ಬೇಸರ ಬರುವುದಿಲ್ಲ. ಆನೆ ಎದೆಗಾರಿಕೆ, ಕಷ್ಟಸಹಿಷ್ಣುತೆ ಇವುಗಳ ಸಂಕೇತ. ಹಿಂದಿನ ಕಾಲದಲ್ಲಿ ಯುದ್ಧರಂಗದಲ್ಲಿ ಆನೆಯನ್ನು ಸಮರಕ್ಕಾಗಿ ಬಳಸುತ್ತಿದ್ದರು. ಇಂದಿಗೂ ಕಷ್ಟದ, ಭಾರದ ಕೆಲಸಗಳಿಗೆ ಆನೆಯನ್ನು ಉಪಯೋಗಿಸುತ್ತಾರೆ. ಜೀವನ ಸಮರದಲ್ಲಿ ನಾವು ಜಯಶೀಲರಾಗಲು ನಮ್ಮಲ್ಲಿ ಆನೆಯಂತಹ ಸಾಮರ್ಥ್ಯ, ಎದೆಗಾರಿಕೆ, ಕಷ್ಟಸಹಿಷ್ಣುತೆ ಇರಬೇಕು. ಹಾಗೆ ಆನೆಯ ಆದರ್ಶದಂತೆ ಬಾಳಿನ ಸಮರಾಂಗಣದಲ್ಲಿ ಕಾದಾಡಹೊರಟಾಗ (ಗಜವದನ) ಭಗವಂತನ ಕೃಪೆ ನಮಗೆ ದಾರಿದೀಪ ಆಗುತ್ತದೆ, ರಕ್ಷೆ ಆಗುತ್ತದೆ ಎಂದು ಸಾಂಕೇತಿಕವಾಗಿ ವಿಘ್ನಾಧಿಪತಿ ಗಣೇಶನ ಗಜವದನ ಸ್ವರೂಪ ಸೂಚಿಸುತ್ತದೆ. ಗಣೇಶನ ಒಂದು ಕೈಯಲ್ಲಿ ಇರುವ ಪಾಶವು ಶರಣಾಗತ ಜೀವರುಗಳನ್ನು ಭಗವಂತನು ಸರಿಯಾದ ಹಾದಿಯಲ್ಲಿ ಕರೆದೊಯ್ಯುತ್ತಾನೆ ಎಂದೂ ಅಂಕುಶವು ವಿವೇಕವನ್ನಿತ್ತು ಮುಂದಕ್ಕೆ ದೂಡುತ್ತಾನೆ ಎಂದೂ ಸಾಂಕೇತಿಕವಾಗಿ ಸೂಚಿಸುತ್ತದೆ.

ಗಣಪತಿಯು ಏಕದಂತ. ಗಜವದನ ಗಣಪತಿಗೆ ಎರಡು ದಂತಗಳು ಇದ್ದಿದ್ದರೆ ತುಂಬ ಸುಂದರವಾಗಿ ಶೋಭಿಸುತ್ತಿತ್ತು. ದಂತವು ಸುಖ-ಸೌಂದರ್ಯ, ಶಕ್ತಿಗಳ ಸಂಕೇತ. ಗಣೇಶನು ತನ್ನ ಒಂದು ದಂತವನ್ನು ಮುರಿದು ಮಹರ್ಷಿ ವೇದವ್ಯಾಸರ ಬಯಕೆಯಂತೆ ಮಹಾಭಾರತ ಗ್ರಂಥವನ್ನು ಬರೆಯಲು ಬಳಸಿದನು. ಹಾಗೆಯೇ ಮಾನವರೂ ಕೂಡ ತಮ್ಮ ಸುಖ-ಸೌಕರ್ಯಗಳನ್ನು ತಾವು ಸ್ವಲ್ಪ ಇಟ್ಟುಕೊಂಡು ಉಳಿದುದನ್ನು ಪರೋಪಕಾರಕ್ಕೆ ಬಳಸಬೇಕು ಎಂಬುದು ಅದರ ಸಾಂಕೇತಿಕ ಅರ್ಥ. ವಿನಾಯಕನ ನಾಲ್ಕು ಕೈಗಳು ನಾಲ್ಕು ಪುರುಷಾರ್ಥಗಳನ್ನು ಧರ್ಮಸಮ್ಮತವಾಗಿ ಸಂಗ್ರಹಿಸಬೇಕು. ಭಗವಂತನ ಹಸ್ತ ನಾಲ್ಕು ದಿಕ್ಕುಗಳಲ್ಲೂ ವ್ಯಾಪಕವಾಗಿ ಇದೆ. ಪುರುಷಾರ್ಥಸಾಧನೆಗಾಗಿ ಯತ್ನಿಸುವವರಿಗೆ ಅದ ನಾಲ್ಕು ಎಡೆಗಳಲ್ಲೂ ರಕ್ಷಣೆ ನೀಡುತ್ತದೆ ಎಂದು ತಾತ್ಪರ್ಯ. ಗಜಾನನ ಐದನೆಯ ಕೈಯೇ ಸೊಂಡಿಲು. ಅದು ತುಂಬ ಚಿಕ್ಕದಾದ ಹಾಗೂ ದೊಡ್ಡದಾದ ವಸ್ತುವನ್ನು ಎತ್ತಬಲ್ಲುದು. ಹಾಗೆಯೇ ನಮ್ಮ ಪ್ರಯತ್ನಕ್ಕೆ, ದೇಹ ಮನ ಹಣ ಅಧಿಕಾರ ಎಂಬ ನಾಲ್ಕು ರೀತಿಯ ಪ್ರಯತ್ನಕ್ಕೆ ಭಗವಂತ ಎಂಬ ಐದನೆಯ ಕೈಯ ಸಹಾಯ ಬೇಕು. ಗಣಪತಿಯ ದೇಹದಲ್ಲಿ ಸೊಂಡಿಲು ಅತ್ಯಂತ ಮುಖ್ಯವಾದ ಶಕ್ತಿಪ್ರದವಾದ ಕೈ.

ಹಾಗೆಯೇ ನಮಗೆ ಬದುಕಿನಲ್ಲಿ ಭಗವತ್ಕೃಪೆ ತುಂಬ ಮುಖ್ಯವಾದ ರಕ್ಷಣಾ ಕೈ ಎಂಬು ದನ್ನು ಈ ಸೊಂಡಿಲು ಸಾಂಕೇತಿಕವಾಗಿ ಸೂಚಿಸುತ್ತದೆ.

ಗಣಪತಿಯ ಉಬ್ಬಿದ ಉದರವು ದೇವರಲ್ಲಿ ಈ ಪಿಂಡಾಂಡ, ಬ್ರಹ್ಮಾಂಡಗಳು ಸೇರಿವೆ ಎಂದು ಸೂಚಿಸುತ್ತದೆ. ಈ ಬ್ರಹ್ಮಾಂಡ-ಪಿಂಡಾಂಡಗಳು ಯೋಗಶಕ್ತಿಮೂಲದಿಂದ ಹಿಡಿದು ಬಂಧಿಸಲ್ಪಟ್ಟಿವೆ ಎಂಬುದು ಗಣೇಶನ ಉದರವನ್ನು ಸುತ್ತಿರುವ ನಾಗವು ಸಾಂಕೇತಿಕವಾಗಿ ಸೂಚಿಸುತ್ತದೆ.

ಗಣೇಶನ ವಾಹನ ಇಲಿ. ಅದು ಚಂಚಲತೆಯ ಪ್ರತೀಕ. ಸೂಕ್ಷ್ಮಶಕ್ತಿಯ ದ್ಯೋತಕ. ದೇವರನ್ನು ನಂಬಿ ಅವನಲ್ಲಿ ಶರಣಾದರೆ ಅವನು ನಮ್ಮ ಜೀವನದ ರಥವನ್ನು ಹತ್ತಿ ಕುಳಿತುಕೊಳ್ಳುವಂತೆ ಪ್ರಾರ್ಥಿಸಿದರೆ, ಇಲಿಯು ಹೇಗೆ ಗಣಪತಿಯ ವಾಹನವಾಗಿದ್ದು ಶಾಂತಿಸುಖಗಳಿಂದ ಬಾಳುವುದೋ ಹಾಗೆಯೇ ನಮ್ಮ ಬದುಕು ಕೂಡ ಚಂಚಲತೆ, ಅಸ್ಥಿರತೆ ಗಳಿಂದ ರಕ್ಷಿತವಾಗಿ ಸೂಕ್ಷ್ಮಶಕ್ತಿಯಿಂದ ಕೂಡಿ ಅರಳಿ ಬೆಳಗುವುದು ಎಂದು ತಾತ್ಪರ್ಯ.

ಗಣಪತಿಯ ಸಮಗ್ರಕಲ್ಪನೆ ಓಂಕಾರದ ಸ್ವರೂಪದಿಂದ ರೂಪುಗೊಂಡು ಬೆಳೆದಿದೆ ಎಂಬುದಾಗಿ ಹಿಂದೂಧರ್ಮದ ನಂಬಿಕೆ ಆಗಿದೆ. ಎಲ್ಲ ಮಂತ್ರತಂತ್ರಗಳಿಗೆ, ಆರಾಧನೆಗಳಿಗೆ ಮೊದಲು ಓಂಕಾರವನ್ನು ಜಪಿಸಬೇಕು. ಓಂಕಾರವೇ ಸರ್ವಮೂಲಮಂತ್ರ. ಹಾಗೆಯೇ ಗಣಪತಿಯೂ ಕೂಡ ಮೊದಲ ಆರಾಧನೆಯ ಮಹಾದೇವ. ಅವನು ಓಂಕಾರದ ದಿವ್ಯ ಪ್ರತೀಕ ಎಂದು ಕೊಂಡಾಡುತ್ತಾರೆ. ಶ್ರೀಮಹಾಗಣಪತಿಯ ಸ್ವರೂಪ–ಕಲ್ಪನೆ–ಸಂಕೇತಾರ್ಥಗಳಿಗೆ ಸರಿಯಾಗಿ ಕೋಟಿ ಕೋಟಿ ಭಕ್ತರ ಹೃನ್ಮಂದಿರಗಳಲ್ಲಿ ತಲತಲಾಂತರಗಳಿಂದ ಶ್ರೀಮಹಾಗಣಪತಿ ವಿರಾಜಮಾನವಾಗಿ ಬದುಕಿಗೆ ಶಾಂತಿ-ಪುಷ್ಟಿ-ತುಷ್ಟಿಗಳನ್ನು ಅನುಗ್ರಹಿಸುತ್ತಲೇ ಬಂದಿದ್ದಾನೆ. ಗಣಪತಿ ಪಂಥದವರು ಗಣೇಶನನ್ನು ಪರಬ್ರಹ್ಮರೂಪ ಎಂದೂ ಹಾಡಿ ಕೊಂಡಾಡಿದ್ದಾರೆ. ಗಣೇಶನಿಗೆ ಒಂದಲ್ಲ ಹತ್ತಾರು ಸ್ವರೂಪಗಳಿದ್ದು ಅವುಗಳಲ್ಲಿ ಶ್ರೀಮಹಾಗಣಪತಿ, ಸಿದ್ಧಿಗಣಪತಿ, ನೃತ್ಯಗಣಪತಿ, ಶಕ್ತಿಗಣಪತಿ, ಊರ್ಧ್ವಗಣಪತಿ, ಹೇರಂಬಗಣಪತಿ, ವಿಘ್ನರಾಜಗಣಪತಿ, ವೀರಗಣಪತಿ, ಧ್ವಜಗಣಪತಿ ಇವುಗಳು ಪ್ರಖ್ಯಾತ ಸ್ವರೂಪಗಳಾಗಿವೆ.

## ಶ್ರೀ ಬ್ರಹ್ಮದೇವ

ಬ್ರಹ್ಮನಿಗೆ ನಾಲ್ಕು ಮುಖಗಳಿವೆ. ಅವನ ವಾಹನ ಹಂಸ. ದೇವತೆ ಶ್ರೀಸರಸ್ವತಿ. ಶ್ರೀಸರಸ್ವತಿಯು ಬ್ರಹ್ಮದೇವನ ಪತ್ನಿ.

ಬ್ರಹ್ಮನು ಸೃಷ್ಟಿಕರ್ತೃವಾಗಿರುತ್ತಾನೆ. ಈ ಚರಾಚರ ಸೃಷ್ಟಿ ಎಲ್ಲವೂ ಬ್ರಹ್ಮನಿಂದಲೇ ಸೃಷ್ಟಿಸಲ್ಪಟ್ಟಿದೆ. ವೇದವು ನಾಲ್ಕು ಇದ್ದು ಸಕಲ ಪುರುಷಾರ್ಥಗಳ ಸಾಧನೆಯ ಮೂಲವು ಅದಾಗಿದ್ದು ವೇದದ ನಾಲ್ಕು ಭಾಗಗಳ ಪ್ರತೀಕವಾಗಿ ಬ್ರಹ್ಮದೇವನಿಗೆ ಚತುರ್ಮುಖಗಳು ಕಲ್ಪಿತವಾಗಿವೆ. ಹಂಸವು ಹಾಲು-ನೀರುಗಳಲ್ಲಿ ಹಾಲನ್ನು ಮಾತ್ರ ಸ್ವೀಕರಿಸಿ ನೀರನ್ನು ಬಿಡುವ ಸಾಮರ್ಥ್ಯವುಳ್ಳದ್ದು. ಸತ್ಯಾಸತ್ಯ ವಸ್ತುವಿವೇಕ ಇವುಗಳು ಅಗತ್ಯವಾಗಿದ್ದು ಅವುಗಳು ಇದ್ದರೆ ವೇದದ ಅರ್ಥ ಜೀವನಿಗೆ ಹೊಳೆದು ಜೀವನವು ನೀರಿನ ಮೇಲೆ ಹಂಸವು ಸುಖವಾಗಿ ತೇಲಿಕೊಂಡು ಹೋದಂತೆ ಸಾಗುವಂತಾಗಿ ಸಂಸಾರಸಾಗರ

ದಿಂದ ಜೀವಿಯು ಹಾದು ದಡವನ್ನು ಸುಖವಾಗಿ ಸೇರುತ್ತಾನೆ ಎಂಬುದನ್ನು ಸೂಚಿಸುತ್ತದೆ.

### ಶ್ರೀ ಸರಸ್ವತೀದೇವಿ

ವಿದ್ಯಾಧಿದೇವತೆಯಾದ ಸರಸ್ವತಿಯು ಇಚ್ಛೆ ಜ್ಞಾನ ಕ್ರಿಯಾಶಕ್ತಿ ಸ್ವರೂಪಿಣಿಯಾಗಿದ್ದಾಳೆ. ತನ್ನ ಕೈಗಳಲ್ಲಿ ಜಪಮಾಲೆ, ಅಂಕುಶ, ಪಾಶ, ಪುಸ್ತಕಗಳಲ್ಲದೆ ಪ್ರಮುಖವಾಗಿ ವೀಣೆಯನ್ನು ಹಿಡಿದಿದ್ದಾಳೆ. ತಂತಿಗಳು ವೀಣೆಯಲ್ಲಿ ಇದ್ದ ಮಾತ್ರಕ್ಕೆ ಸ್ವರ ಹೊರಡದು. ಹಾಗೆಯೇ ಸ್ವರವಿಸ್ತಾರವು ಕ್ರಮಬದ್ಧವಾಗಿ ಆಗಬೇಕಾದರೆ ಸ್ವರ-ಇಚ್ಛೆ, ಸ್ವರಜ್ಞಾನ ಮತ್ತು ಸ್ವರಕ್ರಿಯೆ ಎಂಬ ಮೂರು ವಿಚಾರವಾಗಿಯೂ ಅವು ಕೂಡಿಬರಬೇಕು. ಹಾಗೆಯೇ ಜೀವನದಲ್ಲಿ ಇಚ್ಛಾಜ್ಞಾನ ಕ್ರಿಯಾಶಕ್ತಿಗಳು ವೀಣೆಯ ನಿಯಂತ್ರಿತವಾದ ಉತ್ತಮ ಸ್ವರದಂತೆ ಮಾಧುರ್ಯಯುಕ್ತವಾದ ಧ್ವನಿಯಂತೆ ಕೂಡಿಬರಬೇಕು ಎಂಬುದೇ ಸಾರಾರ್ಥವಾಗಿರುತ್ತದೆ. ವೀಣೆಯ ಸ್ವರ ಹೊಮ್ಮಲು ಅದನ್ನು ಬಾರಿಸುವವನೊಬ್ಬನು ಬೇಕಾದಂತೆ ಜೀವಿಯ ಜೀವನವೆಂಬ ವೀಣೆಯ ಸ್ವರವಿಸ್ತಾರಕ್ಕೆ ಬಾರಿಸುವ ಭಗವಂತ ಬೇಕು ಅಂದರೆ ಭಗವಂತನ ಕೃಪೆ ಬೇಕು ಎಂಬುದು ದೇವಿ ಶಾರದೆಯ ಕೈಯಲ್ಲಿರುವ ವೀಣೆಯ ಸಂಕೇತಾರ್ಥವಾಗಿದೆ.

### ಶ್ರೀ ವಿಷ್ಣುದೇವ

ವಿಷ್ಣುವಿನ ಕೈಯಲ್ಲಿ ನಾಲ್ಕು ಆಯುಧಗಳಿವೆ : ಶಂಖ, ಚಕ್ರ, ಗದಾ ಮತ್ತು ಪದ್ಮ. ಶಂಖವು ಶಬ್ದದಿಂದ ಈ ಜಗತ್ತು ಮೂಲತಃ ಪ್ರಕಟವಾಯಿತು ಎಂಬ ತತ್ತ್ವದ ಸಂಕೇತವಾಗಿದೆ. ಸರ್ವಶಾಸ್ತ್ರಶಬ್ದಸಂಕೇತವಾದ ಪ್ರಣವ ಎಂದಿರುವ 'ಓಂ' ಎಂಬುದು ನಾದದ ಬಾಹ್ಯಸಂಕೇತ. ಶಂಖಧಾರಿಯು ಶ್ರೀವಿಷ್ಣುವಾಗಿದ್ದು ನಾದಕ್ಕೆ ಒಡೆಯನು ಎಂದೂ ಅವನೇ ಜಗತ್ತಿನ ಕಾರಣಕರ್ತನು ಎಂದೂ ಅರ್ಥವಾಗುತ್ತದೆ.

ಚಕ್ರವು ತುಂಡುಮಾಡುವುದು, ಚಲಿಸುವುದು ಎಂಬ ಎರಡು ವಿಚಾರಗಳ ಸಂಕೇತವಾಗಿದೆ. ಸಂಸಾರಚಕ್ರವು ಚಲಿಸುತ್ತಲೇ ಇರುತ್ತದೆ. ಹಾಗೆಂದು ದೇವರ ದಯೆಯಿಂದ ತುಂಡು ಆಗಲೂ ಸಾಧ್ಯವಿದೆ. ಈ ಚಕ್ರಕ್ಕೆ ಸಿಲುಕಿದ ಜೀವಿಯು ಜನ್ಮಮರಣಗಳ ಅನುಭವ ಪಡೆಯುತ್ತಲೇ ಇರುತ್ತಾನೆ. ಆದರೆ ಭಗವಂತನ ದಯೆಯಿಂದ ಈ ಜನ್ಮಮರಣಗಳ ಚಕ್ರದಿಂದ ಪಾರಾಗಲೂ ಸಾಧ್ಯವಿದೆ ಎಂಬುದನ್ನು ಚಕ್ರವು ಸೂಚಿಸುತ್ತದೆ. ಅಲ್ಲದೆ ಚಕ್ರವು ಅನ್ಯಾಯವನ್ನು ತುಂಡುಮಾಡುವಿಕೆ ಅಥವಾ ನಿರ್ನಾಮಮಾಡುವಿಕೆಯ ಸಂಕೇತವೂ ಆಗಿರುತ್ತದೆ. ವಿಷ್ಣುವು ಚಕ್ರದಿಂದ ದುಷ್ಟರನೇಕರನ್ನು ಸಂಹರಿಸಿದ್ದು ಹಾಗೆಯೇ ಅನೇಕ ಶಿಷ್ಟರನ್ನು ಪಾರುಮಾಡಿದುದರ ಕುರಿತಾದ ಕಥೆಗಳು ಪುರಾಣದಲ್ಲಿ ವಿಪುಲಸಂಖ್ಯೆಯಲ್ಲಿವೆ.

ಗದೆಯು ಪಾಪಕ್ಕೆ ತಕ್ಕ ಶಿಕ್ಷೆ ಇದೆ ಎಂಬುದರ ಸಂಕೇತವಾಗಿಯೂ, ಕರ್ಮಫಲದ ದ್ಯೋತಕವಾಗಿಯೂ ಇದೆ, ಪದ್ಮವು ಮುಕ್ತಿ-ಶಾಂತಿಗಳ ಸಂಕೇತವಾಗಿದೆ. ಹಾಗೆಯೇ

ಭಕ್ತರಿಗೆ ಅಭಯ ಶಾಂತಿ ಆಶ್ರಯಗಳನ್ನು ದೇವರು ನೀಡುವುದರ ಗುರುತೂ ಕೂಡ ಆಗಿರುತ್ತವೆ.

### ಶ್ರೀ ಶಿವದೇವ

ತ್ರಿಶೂಲಧಾರಿ, ವೃಷಭವಾಹನ, ನಾಗಭೂಷಣ, ಭಸ್ಮಧಾರಿ ಎಂಬುದಾಗಿ ಶಿವನನ್ನು ಚಿತ್ರಿಸಲಾಗಿದೆ. ಶಿವನು ಚಂದ್ರಶೇಖರ, ವ್ಯಾಘ್ರಚರ್ಮಾಂಬರಧರ, ಡಮರುಗಧಾರಿ, ಗಂಗಾಧರ ಎಂದು ವಿಖ್ಯಾತನಾಗಿರುತ್ತಾನೆ.

ತ್ರಿಶೂಲವು ಆಧ್ಯಾತ್ಮಿಕ ಆಧಿದೈವಿಕ ಆಧಿಭೌತಿಕ ಎಂಬ ತಾಪತ್ರಯಗಳನ್ನು ನಿವಾರಿಸುವುದರ ಸಂಕೇತವಾಗಿದೆ. ವೃಷಭವು ಶಕ್ತಿಯ ಸಂಕೇತವಾಗಿದೆ. ವೃಷಭ ಎಂದರೆ ಧರ್ಮ ಸತ್ಯ ಎಂಬ ಅರ್ಥವೂ ಇದೆ. ಸತ್ಯಧರ್ಮಗಳು ಎಲ್ಲಿದೆಯೋ ಅಲ್ಲಿ ಭಗವಂತ ಇದ್ದಾನೆ ಎಂಬುದರ ಸಂಕೇತವೇ ವೃಷಭ. ತದನುಸಾರವಾಗಿ ಶಿವನ ವಾಹನವು ವೃಷಭವೆಂದಾಗಿ ಪರಿಗಣಿಸಲಾಗಿರುತ್ತದೆ.

ನಾಗನನ್ನು ಭೂಷಣವನ್ನಾಗಿಟ್ಟುಕೊಂಡವನು ನಾಗಭೂಷಣ. ನಾಗವೆಂದರೆ ಹಾವೆಂದು ತಾತ್ಪರ್ಯ. ಭಯ, ವಿಷ, ಮೃತ್ಯು ಇವುಗಳನ್ನೆಲ್ಲ ಹಾವು ನೆನಪಿಗೆ ತರುತ್ತದೆ—ಹಾಗೆಯೇ ಇತರರಿಗೆ ಉಂಟುಮಾಡಲು ಸಮರ್ಥವೂ ಆಗಿದೆ. ವಿಷವೆಂದರೆ ಕೆಟ್ಟದ್ದು, ಹಿತಕಾರಿಯಲ್ಲದ್ದು ಎಂಬ ತಾತ್ಪರ್ಯವನ್ನೂ ಒಳಗೊಂಡಿದೆ. ಜೀವನವು ಪಾವನವಾಗಿ ಜೀವಿಗೆ ಮೋಕ್ಷಾನಂದ ದೊರೆಯಬೇಕಾದರೆ ಬದುಕಿನಲ್ಲಿ ಭಯ, ಕೆಟ್ಟ ವಿಚಾರಗಳು, ಮೃತ್ಯುತುಲ್ಯವಾದ ಸಂಗತಿಗಳು ಇವುಗಳಿಗೆ ಜೀವಿಯು ಅಧೀನನಾಗಿರಬಾರದು ಅವುಗಳು ಜೀವಿಯು ಜೀವನದಿಂದ ಹೊರತಾಗಿರಲು ಸಾಧ್ಯವಿಲ್ಲ. ಆದರೆ ಹತೋಟಿ ಅಡಗಿದ್ದು ಅಪಾಯರಹಿತವಾಗಿರುವಂತೆ ಮಾಡಲು ಸಾಧ್ಯ. ಅದಕ್ಕೆ ಬೇಕಾದುದು ಸದಾಚಾರ, ಸದ್ಧರ್ಮಗಳು. ಅವುಗಳಿಗೆ ಭಯ, ವಿಷ, ಮೃತ್ಯು ಇವುಗಳೆಲ್ಲವೂ ಅಧೀನವಾಗಿ ನಿಸ್ತೇಜವಾಗುತ್ತವೆ. ಭಗವಂತನು ಧರ್ಮಮೂರ್ತಿ. ಇದರ ಸಂಕೇತವಾಗಿಯೇ ಭಗವಂತನಾದ ಪರಮೇಶ್ವರನು ನಾಗವನ್ನು ಭೂಷಣವಾಗಿ ತೊಟ್ಟುಕೊಂಡು ನಾಗಭೂಷಣನಾಗಿರುತ್ತಾನೆ.

ಶಿವನ ಮೂರನೇ ಕಣ್ಣು ಜ್ಞಾನದ ಕಣ್ಣಾಗಿದ್ದು ಆ ಕಣ್ಣು ತೆರೆದಾಗ ಭೂತ ವರ್ತಮಾನ ಭವಿಷ್ಯತ್ ಕಾಲಗಳು ತಿಳಿಯುವಂತಾಗಿ ಸತ್ಯ ಅಹಿಂಸೆ ನಿತ್ಯಾನಿತ್ಯ ವಸ್ತುವಿವೇಕ ಇವುಗಳೆಲ್ಲ ಉಂಟಾಗಿ ಜೀವಿಯು ಮುಕ್ತಿಯನ್ನು ಪಡೆಯುತ್ತಾನೆ. ಇದರ ಸಂಕೇತವೇ ಶಿವನ ಮೂರನೇ ಕಣ್ಣು. ಭಸ್ಮವು ತ್ಯಾಗದ ಹಾಗೂ ವೈರಾಗ್ಯದ ಪ್ರತೀಕವಾಗಿದೆ. ಜಗತ್ತಿನಲ್ಲಿ ಕಾಣುವ ರೂಪಭೇದಗಳು ಬೆಂಕಿಯಲ್ಲಿ ಭಸ್ಮವಾದಾಗ ಭಸ್ಮವಾಗಿಯೇ ಉಳಿಯುತ್ತವೆ. ಮಾನವನು ಜೀವನದ ಕೊನೆಯಲ್ಲಿ ಮೃತನಾದಾಗ ದೇಹಸಂಸ್ಕಾರಕ್ಕೆ ಅನುಸಾರವಾಗಿ ಅವನ ದೇಹವು ಭಸ್ಮವಾಗುತ್ತದೆ. ಹೀಗೆ ವೈರಾಗ್ಯತ್ಯಾಗಗಳು ಇದ್ದರೆ ಜೀವಿಯು ಮುಕ್ತಿಯನ್ನು ಪಡೆಯಲು ಸಾಧ್ಯ ಎಂಬುದನ್ನು ಭಸ್ಮವು ಸೂಚಿಸುತ್ತದೆ.

ಚಂದ್ರನು ಬದಲಾವಣೆಯನ್ನು ಸೂಚಿಸುವಂತಿದ್ದು ಸಾಂಕೇತಿಕವಾಗಿ ಕಾಲವನ್ನು ವ್ಯಕ್ತಪಡಿಸುತ್ತಾನೆ. ಚಂದ್ರನು ಬೆಳೆಯುವುದು ಮತ್ತು ಕ್ಷಯಹೊಂದುವುದನ್ನು ಕಾಲ

ದಿಂದ ತಿಳಿಯಲು ಸಾಧ್ಯ. ಕಾಲವು ಮಾನವನ ದೃಷ್ಟಿಯಿಂದ ಗಣನೆಗೆ ಸೀಮಿತವಾಗಿದೆ. ಭಗವಂತ ಕಾಲಾತೀತ. ಇದನ್ನೇ ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿ ಚಂದ್ರಶೇಖರನಾಗಿರುವ ಶಿವನ ಕಲ್ಪನೆಯು ಸಾಂಕೇತಿಕವಾಗಿ ಸೂಚಿಸುತ್ತದೆ. ಹುಲಿಯ ಚರ್ಮವನ್ನು ಧರಿಸಿರುವ ಶಿವದೇವನು ಬ್ರಹ್ಮಾಂಡದಲ್ಲಿ ಅಡಗಿರುವ ಬ್ರಹ್ಮಚೈತನ್ಯವನ್ನು ಹೊಂದಿರುತ್ತಾನೆ. ಅಂದರೆ ಜಗತ್ತಿನಲ್ಲಿ ಕಾಣುವ, ಅನುಭವಕ್ಕೆ ಬರುವ ವಿಶಿಷ್ಟ ಶಕ್ತಿಗಳೆಲ್ಲ ಭಗವಂತನವು ಎಂಬುದರ ಸಂಕೇತವಾಗಿ ಶಕ್ತಿಶಾಲಿಯಾದ ವ್ಯಾಘ್ರದ ಚರ್ಮವನ್ನು ಭಗವಂತನಾದ ಶಿವದೇವನು ಧರಿಸಿರುತ್ತಾನೆ ಎಂದು ತಾತ್ಪರ್ಯ.

ಡಮರು ಶಬ್ದವನ್ನು ಉತ್ಪತ್ತಿಮಾಡುತ್ತದೆ. ಬ್ರಹ್ಮಾಂಡದಲ್ಲಿ ವ್ಯಾಪಕವಾಗಿರುವ ಶಬ್ದಚೈತನ್ಯದ ಪ್ರತೀಕವೇ ಡಮರು. ಬ್ರಹ್ಮಾಂಡವು ಪರಮಾತ್ಮನ ಅಧೀನ. ಶಬ್ದಬ್ರಹ್ಮನಾದ ಅವನ ಹೊರತಾಗಿ ಶಬ್ದವಿಲ್ಲ ಎಂಬುದನ್ನು ಡಮರುಧಾರಿಯಾಗಿರುವ ಶಿವನ ಕಲ್ಪನೆಯು ಸಾಂಕೇತಿಕವಾಗಿ ವ್ಯಕ್ತಪಡಿಸುತ್ತದೆ. ಗಂಗಾವಾರಿಯಿಂದ ಪಾಪದ ಕೊಳೆ ತೊಳೆದುಹೋಗುವಂತೆ ಗಂಗೆ ಹರಿದ ಬಯಲು ಪಾವನವೂ ಫಲಪೂರ್ಣವೂ ಆಗುತ್ತದೆ. ಗಂಗಾನದಿಯ ನೀರಿನಿಂದ ಸಹಸ್ರಾರು ಜೀವಿಗಳು ಬಾಳುತ್ತವೆ. ಅವಿಚ್ಛಿನ್ನವಾಗಿ ನದೀರೂಪಳಾಗಿ ಹರಿಯುತ್ತಿರುವ ಗಂಗೆಯು ಅದೆಷ್ಟೋ ಕೋಟಿ ಜೀವಿಗಳಿಗೆ ಮುಕ್ತಿಯನ್ನು ದೊರಕಿಸಿಕೊಟ್ಟಿದ್ದಾಳೆ. ಗಂಗೆಯ ಪವಿತ್ರಜಲ ಸೋಂಕಿದಾಗ ಸಾಧಕನಿಗೆ ಶ್ರದ್ಧಾಭಕ್ತಿಗಳು ದೊರೆಯುತ್ತವೆ. ಪರಮಾತ್ಮನಲ್ಲಿ ಕರುಣೆ, ಜ್ಞಾನ, ಪವಿತ್ರತೆಗಳ ಮಹಾಗಂಗೆಯ ಮೂಲವಿದ್ದು ಭಕ್ತರಿಗೆ-ಭವಜೀವಿಗಳಿಗೆ ಅವನಿಂದಲೇ ಅವು ದೊರೆಯುತ್ತವೆ ಎಂಬುದನ್ನು ಸಾಂಕೇತಿಕವಾಗಿ ಗಂಗೆಯನ್ನು ಶಿರದಲ್ಲಿ ಧರಿಸಿರುವ ಗಂಗಾಧರನ ಕಲ್ಪನೆಯು ವ್ಯಕ್ತಪಡಿಸುತ್ತದೆ.

ಹೀಗೆ ಪುರಾಣಗಳ ಪಾತ್ರಚಿತ್ರಣ-ಕಥಾನಿರೂಪಣೆಗಳಲ್ಲಿ ವಿವರವಾದ ಮತ್ತು ವಿಶೇಷವಾದ ಅಂತರಾರ್ಥವಿದೆ. ಈ ಅರ್ಥಗಳನ್ನು ತರ್ಕದಿಂದ ಪಾಂಡಿತ್ಯದ ಬಲದಿಂದ ಕಂಡು ಹಿಡಿಯುವುದು ಕಷ್ಟವೇ ಸರಿ. ಆದರೆ ಅಂತರ್ಯದ ಸಾಧನೆಯಿಂದ, ಅಧ್ಯಾತ್ಮಭಾವನೆಯಿಂದ, ಪರಿಶುದ್ಧವಾದ ಮನೋಧರ್ಮದಿಂದ ತನ್ನ ಅಂತರ್ಯದಲ್ಲಿ ಅನುಭೂತಿಯ ಮೂಲಕ ಮಥಿತಾರ್ಥವನ್ನು ಕಾಣುವುದು ಸುಲಭಸಾಧ್ಯವಾಗಿದೆ ಎಂಬುದಾಗಿ ಅನೇಕ ಸಾಧಕರು ಸಾಧುಸಂತ ಮಹಾತ್ಮರು ತಮ್ಮ ಅನುಭವದಿಂದ ದೃಢೀಕರಿಸಿರುತ್ತಾರೆ.

ಹಿಂದೂಧರ್ಮದ ಪುರಾಣಕಥೆಗಳು ಜೀವನದಲ್ಲಿ ವ್ಯಕ್ತಿಯು ಧರ್ಮಾನುಷ್ಠಾನಯುಕ್ತನಾಗಿ ಬಾಳಲು ಸಹಾಯಮಾಡಿದರೆ ವಸ್ತುಸಂಕೇತಗಳು ಧರ್ಮಜೀವನದ ಅನುಸರಣೆ, ರಕ್ಷಣೆಗಳಿಗೆ ಸಹಾಯಮಾಡುತ್ತವೆ.

ಭಗವಂತನನ್ನು ನಿರ್ದಿಷ್ಟವಾಗಿ ಹೀಗೆಯೇ ಇದ್ದಾನೆ ಎಂದು ದೇಹಧಾರಿಯಾದ ಮಾನವನಿಗೆ ಹೇಳಲು ಸಾಧ್ಯವಿಲ್ಲವಾಗಿ 'ಇದಮಿತ್ಥಂ' ಎಂಬ ಒಂದು ನಿಶ್ಚಯದ ತೀರ್ಮಾನಕ್ಕೆ ಬರಲು ಸಾಧ್ಯವಾಗದಿರುವುದೇ ಆತನನ್ನು ಸಾಂಕೇತಿಕವಾಗಿ ಕಲ್ಪಿಸಿಕೊಳ್ಳಲು ಕಾರಣವಾಗಿರುತ್ತದೆ. ಭಗವಂತನ ಸ್ವರೂಪ ಆಕಾರ ಗುಣಧರ್ಮಗಳನ್ನು ಹೇಳಿ ಅವನ ಬಗ್ಗೆ ಮೂರ್ತಿವಿಗ್ರಹ ಇತ್ಯಾದಿ. ಸಂಕೇತಗಳನ್ನು ಮಾಡಿ ಪೂಜಿಸುವ

ಹಾಗೂ ದಿವ್ಯಜೀವನಕ್ಕೆ ಸ್ಫೂರ್ತಿಚೇತನಗಳನ್ನು ತುಂಬಿಕೊಳ್ಳುವ ಮನೋಭಾವ ಮೂಡಿದುದು ಸಂಕೇತದ ಉತ್ಪತ್ತಿಯ ಹಿನ್ನೆಲೆಯ ತತ್ತ್ವವಾಗಿದೆ. ಕಣ್ಣಿಗೆ ಕಾಣದೇ ಇದ್ದುದನ್ನು ಕಣ್ಣಿಗೆ ಕಾಣಿಸುವ ವಸ್ತುಸಾಧನಗಳ ಮೂಲಕ ವ್ಯಕ್ತಪಡಿಸುವುದೇ ಸಂಕೇತಗಳ ಮೂಲ ಉದ್ದೇಶ ಮತ್ತು ಅದರಲ್ಲಿ ಅಂತರ್ಗತವಾದ ತತ್ತ್ವವಾಗಿದೆ.

ಸಂಕೇತಗಳಲ್ಲಿ ಮುಖ್ಯವಾಗಿ ಯಂತ್ರ, ಮಾನಸರೂಪಸಂಬಂಧವಾದ ಮೂರ್ತಿ ಎಂಬ ಎರಡು ವಿಧಗಳಿವೆ. ಯಂತ್ರಗಳೆಂದರೆ ರೇಖಾಚಿತ್ರಗಳಿಂದ ಕೂಡಿದ ಸಂಕೇತವಸ್ತು. ಇದನ್ನು ಲೋಹದಿಂದ ತಯಾರಿಸುತ್ತಾರಾಗಿದ್ದು ಅದರಲ್ಲಿ ರೇಖೆಗಳನ್ನು ವಿಧಿಯುಕ್ತವಾಗಿ ಎಳೆದು ಮಂತ್ರಾಕ್ಷರಗಳನ್ನು ಬರೆದು ಬಿಡಿಸುತ್ತಾರೆ. ಉದಾಹರಣೆ : ಶ್ರೀಚಕ್ರ ಯಂತ್ರ, ಶ್ರೀಗಣಪತಿ ಯಂತ್ರ, ಶ್ರೀಸುದರ್ಶನ ಯಂತ್ರ ಇತ್ಯಾದಿ.

ಮಾನವರೂಪ ಸಂಬಂಧದ ಸಂಕೇತವೆಂದರೆ ದೇವರ ಮೂರ್ತಿ, ಪಟ, ವಿಗ್ರಹ ಹಾಗೂ ದೇವರ ಒಡನೆ ಭಕ್ತನು ಇಟ್ಟುಕೊಂಡ ಸಂಬಂಧವಾಗಿರುತ್ತದೆ. ಉದಾ : ತಾಯಿ, ತಂದೆ, ಬಂಧು, ಒಡೆಯ ಇತ್ಯಾದಿ.

ಈ ಎರಡು ಸಂಕೇತ ಅಂಶಗಳಿಗೆ ಪೋಷಕವಾಗಿರುವ ಅಥವಾ ಪೂರಕವಾಗಿರುವ ಸಂಕೇತಗಳು ಬೇರೆ ಇನ್ನು ಎರಡು ಇದ್ದು ಅವು ವಸ್ತು ಮತ್ತು ಆಕಾರಗಳಾಗಿರುತ್ತವೆ.

ಆಚಾರ ನಿಯಮಾವಳಿಗಳ ಸಂಕೇತವೆಂದರೆ ಶರೀರದ ಮೇಲೆ ಧರಿಸುವ ವೇಷ ಭೂಷಣಗಳು, ಆಹಾರ ಸ್ವೀಕಾರದ ವಿಧಿವಿಚಾರಗಳು ಇತ್ಯಾದಿ. ಉದಾ : ತಿಲಕನಾಮಗಳ ಧಾರಣ, ಭೋಜನ ನಿಯಮಾವಳಿಗಳು ಇತ್ಯಾದಿ.

ಹೀಗೆ ಅನೇಕ ವಿಧದ ಸಂಕೇತಗಳನ್ನು ಒಳಗೊಂಡಿರುವ ಹಿಂದೂಧರ್ಮವು ಜೀವನವನ್ನು ಎಲ್ಲಾ ದೃಷ್ಟಿಯಿಂದಲೂ ಪರಿಶೀಲಿಸಿ ಅದು ಪರಿಪೂರ್ಣತೆಯ ಎಡೆಗೆ ಸಾಗಲು ಇರುವ ಸಾಧನ ಎಂಬುದಾಗಿ ಸಾರಿರುತ್ತದೆ ಎಂಬುದು ಸಂಕೇತಗಳ ಹಿಂದೆ ಅಡಕವಾಗಿರುವ ತತ್ತ್ವದಿಂದ ತಿಳಿದುಬರುತ್ತದೆ. ಸಂಕೇತಗಳು ಕೆಲವು ಸಂದರ್ಭಗಳಲ್ಲಿ ವ್ಯಕ್ತಿಯ ಆಧ್ಯಾತ್ಮಿಕ ಉನ್ನತಿಗೆ ನೆರವಾಗುವಂತೆ, ಲೌಕಿಕ ಜೀವನದ ವಿಘ್ನವಿಡ್ಡೂರಗಳು, ಆಧ್ಯಾತ್ಮಿಕ ಜೀವನದ ತೊಂದರೆಗಳು ಇವುಗಳನ್ನು (ಕೆಲಮಟ್ಟಿಗೆ) ನಿವಾರಿಸಲು ನೆರವಾಗುತ್ತವೆ. ಈ ಸಂಕೇತಗಳ ಹಿಂದೆ ಅಡಕವಾಗಿರುವ ಉದಾತ್ತತತ್ತ್ವಗಳ ಕುರಿತಾಗಿ ಅರಿವು ಹಾಗೂ ಗಮನ ಕಡಿಮೆಯಾದಾಗ ವ್ಯಕ್ತಿಯಲ್ಲಿ ಅಹಂಕಾರ, ಪರಸ್ಪರ ದ್ವೇಷ, ಸ್ವಾರ್ಥ ಭಾವನೆ ಹುಟ್ಟುವಂತಾಗಿ ಅದರಿಂದ ವೈಯುಕ್ತಿಕ ಹಾಗೂ ಸಾಮಾಜಿಕ ಜೀವನವು ಅಧಃಪತನವಾಗಲು ಕಾರಣವಾಗುತ್ತದೆ.

ಹಿಂದೂಧರ್ಮದ ಸಂಬಂಧದ ಸಂಕೇತಗಳು, ಪ್ರತೀಕಗಳು ಹಲವು ಇವೆ. ಅವುಗಳಲ್ಲಿ ಹೆಚ್ಚು ಪ್ರಸಿದ್ಧವಾದವು ಯಾವುವೆಂದರೆ :

(೧) ಓಂ, (೨) ಸ್ವಸ್ತಿಕ, (೩) ಕಮಲ, (೪) ಪೂರ್ಣಕುಂಭ, (೫) ಧ್ವಜ, (೬) ಗಜ, (೭) ಹಸು, (೮) ನಂದಿ, (೯) ಧರ್ಮಚಕ್ರ, (೧೦) ಬಿಲ್ವಪತ್ರೆ, (೧೧) ತುಲಸಿ, (೧೨) ಅಶ್ವತ್ಥವೃಕ್ಷ, (೧೩) ಚಂದ್ರ, (೧೪) ಸೂರ್ಯ, (೧೫) ತಿಲಕ, ಮುದ್ರೆ, ನಾಮಗಳು, (೧೬) ತಲೆಯಲ್ಲಿ ಶಿಖೆ ಇಡುವುದು, (೧೭) ಯಜ್ಞೋಪವೀತ, (೧೮) ಘಂಟಾಮಣಿ,

(೧೯) ಧೂಪ, ದೀಪ ಸಲಕರಣೆಗಳಿಂದ ಕೂಡಿದ ಪೂಜೋಪಚಾರ, (೨೦) ಪ್ರಸಾದ, (೨೧) ಭೋಜನ ವಿಧಿಯಲ್ಲಿ ಅಡಗಿರುವ ಸಾಂಕೇತಿಕವಾದ ನಿಯಮಾವಳಿಗಳು, (೨೨) ಜಪಮಾಲೆ, (೨೩) ಕಾವಿಬಟ್ಟೆ, (೨೪) ಮುತ್ತೈದೆ ಶೃಂಗಾರ.

ಇವುಗಳ ಕುರಿತಾಗಿ ಇನ್ನೀಗ ಸಂಕ್ಷೇಪವಾಗಿ ವಿಚಾರಮಾಡೋಣ.

ಓಂ : ಓಂ ಅಕ್ಷರದಲ್ಲಿ ಸರ್ವ ಸ್ವರ, ವ್ಯಂಜನ, ವಾಙ್ಮಯ ಹಾಗೂ ವೇದಗಳು ಅಡಗಿವೆ. ಓಂ ಎಂಬುದು ಬ್ರಹ್ಮನ ಅಥವಾ ಪರಮಾತ್ಮನ ವಾಙ್ಮಯಮೂರ್ತಿಯಾಗಿದೆ. ಓಂ ಶಬ್ದದ ಜಪಧ್ಯಾನಾದಿಗಳಿಂದ ಅದರ ಸೀಮಾತೀತವಾದ ದಿವ್ಯಮಹಿಮೆಯ ಅರಿವು ಆಗುವುದು. ಹಿಂದೂಧರ್ಮದ ಗ್ರಂಥಗಳಲ್ಲೆಲ್ಲಾ ಓಂ ಶಬ್ದದ ವಿಚಾರವಾಗಿ ವಿಶೇಷ ವಿವರಗಳು ಸಿಗುತ್ತವೆ. ಪಾತಂಜಲ ಯೋಗಸೂತ್ರಗಳು, ಉಪನಿಷತ್ತು, ಭಗವದ್ಗೀತೆ ಇವುಗಳಲ್ಲೆಲ್ಲಾ ಓಂಕಾರದ ವಿವರ, ಧ್ಯಾನ, ಅದರ ಫಲಗಳ ವಿಚಾರವಾಗಿ ಪ್ರಾಯೋಗಿಕ ವಾದ ವಿವರಣೆಗಳು ನೀಡಲ್ಪಟ್ಟಿವೆ. ಓಂ ಚಿಹ್ನೆಯು ಹಿಂದೂಧರ್ಮದ ಸಂಕೇತಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠ, ಪವಿತ್ರ ಹಾಗೂ ಮಹತ್ವಪೂರ್ಣವಾದುದಾಗಿದೆ. ಯಾವ ಮಂತ್ರ–ಸ್ತುತಿಗಳೇ ಆಗಲಿ, ಯಾವ ಧಾರ್ಮಿಕ ಕೆಲಸಗಳೇ ಆಗಲಿ, ಅವುಗಳೆಲ್ಲಾ ಓಂ ಶಬ್ದದ ಉಚ್ಚಾರಣೆ-ಲೇಖನಗಳಿಂದಲೇ ಆರಂಭ ಮಾಡಲ್ಪಡುತ್ತವೆ.

ಸ್ವಸ್ತಿಕ : ಸ್ವಸ್ತಿಕ ಚಿಹ್ನೆಯು ಮಂಗಳಸೂಚಕ ಹಾಗೂ ಕಲ್ಯಾಣಪ್ರದವಾದ ಸಂಕೇತ ವಾಗಿದೆ. ಪೂಜಾಮಂದಿರ, ದೇವಸ್ಥಾನ, ಮನೆಗಳ ತಲೆಬಾಗಿಲು, ಇಲ್ಲೆಲ್ಲಾ ಸ್ವಸ್ತಿಕ ಚಿಹ್ನೆಯನ್ನು ಹಿಂದುಗಳು ಬರಹ ಅಥವಾ ಕೆತ್ತನೆಗಳ ಮೂಲಕ ರೂಪಿಸಿರುತ್ತಾರೆ, ಸ್ವಸ್ತಿಕ ಚಿಹ್ನೆಯು ಮಂಗಳಸೂಚಕವಾದುದೆಂಬುದನ್ನು ಪ್ರತಿಪಾದಿಸುವ ಅನೇಕ ವಿವರಗಳು ಹಿಂದೂಧರ್ಮದ ಗ್ರಂಥಗಳಲ್ಲಿ ದೊರೆಯುತ್ತವೆ. ಎಲ್ಲರೂ ಸುಖವಾಗಿರಲಿ, ಸರ್ವರಿಗೂ ಶುಭವಾಗಲಿ ಎಂಬುದೇ ಸ್ವಸ್ತಿಕ ಚಿಹ್ನೆಯ ಭಾವವಾಗಿರುತ್ತದೆ.

ಕಮಲ : ಹಿಂದೂಧರ್ಮದಲ್ಲಿ ಕಮಲದ ಸ್ಥಾನ ವಿಶೇಷವಾದುದು. ಹಿಂದೂಧರ್ಮದ ಗ್ರಂಥಗಳಲ್ಲಿ ಕಮಲದ ವಿಚಾರವಾಗಿ ಪ್ರಸ್ತಾಪ-ವಿವರಣೆಗಳಿದ್ದು ಅವುಗಳ ಮಹತ್ವಗಳೆಲ್ಲವೂ ವಿಶೇಷವಾಗಿ ವರ್ಣಿತವಾಗಿರುತ್ತವೆ. ಜೀವನದ ಅನೇಕ ವಿಚಾರಗಳಿಗೆ ಧಾರ್ಮಿಕ ವಾದ ಮಾರ್ಗದರ್ಶನವನ್ನು ಕಮಲದ ಉದಾಹರಣೆಯ ಮೂಲಕ ನೀಡಿರುವುದನ್ನು ನಾವು ಕಾಣುತ್ತೇವೆ. ಭಗವಂತನನ್ನು ಕಮಲವದನ, ಕಮಲನಯನ ಎಂದು ಕರೆದರೆ, ಭಗವಂತನು ಭಕ್ತರ ಹೃದಯಕಮಲದಲ್ಲಿ ವಾಸಿಸುತ್ತಾನೆ ಎಂದೂ ಹೇಳಲಾಗಿದೆ. ಲಕ್ಷ್ಮೀ ದೇವಿಯನ್ನು ಪದ್ಮಪ್ರಿಯೆ, ಪದ್ಮಾಲಯೆ, ಪದ್ಮದಳಾಯತಾಕ್ಷಿ ಎಂದು ಮುಂತಾಗಿ ಸ್ತುತಿಸಲಾಗಿದೆ. ಕರ್ಮಯೋಗಿಯು ನೀರಿನಲ್ಲಿರುವ ತಾವರೆಯೆಲೆಯಂತೆ ನಿರ್ಲಿಪ್ತನಾಗಿ ಬಾಳಬೇಕು ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮನು ಉಪದೇಶವನ್ನು ನೀಡಿ ರುತ್ತಾನೆ. ಹೀಗೆ ಕಮಲವು ಜೀವನ, ಧರ್ಮ, ಸೌಂದರ್ಯ ಎಲ್ಲಾ ದೃಷ್ಟಿಗಳಿಂದಲೂ ಹಿಂದೂಧರ್ಮದಲ್ಲಿ ವಿಶಿಷ್ಟವಾದ ಸ್ಥಾನವನ್ನು ಪಡೆದಿರುತ್ತದೆ. ಕಮಲವು ಸೌಂದರ್ಯದ ಪ್ರತೀಕವಾಗಿರುತ್ತದೆ. ಹಾಗೆಯೇ ಅಲಿಪ್ತತೆಯು ಅದರಲ್ಲಿ ಅಡಗಿರುವ ವೈಶಿಷ್ಟ್ಯವಾಗಿ ರುತ್ತದೆ. ಕಮಲವು ಕೆಸರಿನಲ್ಲಿ ಹುಟ್ಟಿದರೂ ಕೆಸರಿನಂತೆ ಕೊಳಕಾಗುವುದಿಲ್ಲ. ಜೀವನದಲ್ಲಿ

ಮನುಷ್ಯ ಕೆಸರೆಂಬ ಕಷ್ಟನಷ್ಟಕೊಳಕುಗಳ ಮಧ್ಯೆ ಬಾಳುವಂತಾದರೂ ಅಲಿಪ್ತನಾಗಿ, ಸೌಂದರ್ಯಯುಕ್ತನಾಗಿ ಬಾಳಬೇಕು, ಬಾಳಬಲ್ಲ ಎನ್ನುವುದನ್ನು ಕಮಲವು ಸೂಚಿಸು ತ್ತದೆ. ಕಮಲದ ಪರಿಮಳ ಸುಗಂಧಯುಕ್ತವಾದುದು. ಅದರ ವರ್ಣ ಮನೋಹರ ವಾದುದು. ಅದು ಬೆಳಕಿನೊಡನೆ ಅರಳಿ ಬೆಳಕಿಲ್ಲದಾಗ ಮುಚ್ಚಿಹೋಗುತ್ತದೆ. ಅದಕ್ಕೆ ದಳಗಳು ಹಲವು ಇವೆ. ದಳಗಳು ಬೇರೆಬೇರೆ ಇದ್ದರೂ ಅವುಗಳೆಲ್ಲಾ ಒಂದೇ ಕಮಲಕ್ಕೆ ಸೇರಿದವುಗಳಾಗಿದ್ದು ಅನೇಕದಲ್ಲಿ ಏಕತೆಯನ್ನು ಸೂಚಿಸುತ್ತವೆ. ಸೂರ್ಯನ ಬೆಳಕು ಕಮಲದ ಜೀವನದ ಉಸಿರು ಆಗಿದೆ. ಸೂರ್ಯನು ಭಗವಂತ. ಅವನೇ ನಮ್ಮ ಬಾಳಿನ ಉಸಿರು-ಚೇತನ ಎಂಬುದನ್ನು ಕಮಲವು ಸೂಚಿಸುತ್ತದೆ. ಸೂರ್ಯನ ಬೆಳಕಿಲ್ಲದಾಗ ಕಮಲವು ಅರಳದು ಮತ್ತು ಬೆಳಗದು ಎಂಬುದನ್ನು ಕಮಲವು ಸ್ಪಷ್ಟಪಡಿಸುತ್ತದೆ. ಕಮಲದ ಸೌಂದರ್ಯದಂತೆ ನಮ್ಮ ಬಾಳು ಸುಂದರವಾಗಬೇಕು. ಅದರ ಸುಗಂಧದಂತೆ ಜೀವನವು ಪವಿತ್ರತೆ ಮತ್ತು ಪರಿಶುದ್ಧತೆ ಎಂಬ ಸುಗಂಧದಿಂದ ಕೂಡಿರಬೇಕು ಎಂಬು ದನ್ನು ಕಮಲವು ಸೂಚಿಸುತ್ತದೆ. ಹೀಗೆ ಅಲಿಪ್ತತೆ, ಅನಾಸಕ್ತಿ, ಬೆಳಕು ಎಂದರೆ ಜ್ಯೋತಿರ್ಮಯನಾದ ಪರಮಾತ್ಮನ ಆರಾಧನೆ, ಕೊಳಕು-ಅಮಂಗಲಗಳಲ್ಲಿ ಶುಭ್ರತೆ-ಸೌಂದರ್ಯಗಳನ್ನು ಕಾಣುವಿಕೆ, ಸೌಂದರ್ಯ ಪವಿತ್ರತೆ —ಇವುಗಳನ್ನೆಲ್ಲಾ ಕಮಲ ಅಥವಾ ತಾವರೆಯು ಸಾಂಕೇತಿಕವಾಗಿ ಸೂಚಿಸುತ್ತದೆ.

ಪೂರ್ಣಕುಂಭ : ಪೂರ್ಣಕುಂಭವನ್ನು ಅಮೃತಕುಂಭ ಎಂದು ಕರೆಯುತ್ತಾರೆ. ಕುಂಭ ದಲ್ಲಿ ಶಾಸ್ತ್ರಮಂತ್ರೋಕ್ತವಿಧಿಯುಕ್ತವಾಗಿ ತುಂಬಿಸುವ ಪವಿತ್ರವಾದ ನೀರು ಅಮೃತ ಸಮಾನವಾದುದೇ ಸರಿ. ಕುಂಭವು ಒಡೆದರೂ ಅಮೃತ ಮೃತವಾಗದು ; ಅದು ಅಮರ ವಾದುದು. ಹಾಗೆಯೇ ದೇಹವಳಿದರೂ ಆತ್ಮ ಅಳಿಯದು ; ಅದು ಅಮರ. ಅರ್ಧ ತುಂಬಿದ ಕುಂಭದಲ್ಲಿ ತುಳುಕಾಟವಿದೆ ; ಪೂರ್ಣಕುಂಭದಲ್ಲಿ ತುಳುಕುವಿಕೆ ಇಲ್ಲ. ಅದರಂತೆ ಅಪರಿಪೂರ್ಣ ಜೀವನದಲ್ಲಿ ಸುಖಶಾಂತಿಗಳಿಲ್ಲ. ಹಾಗೆಯೇ ಜೀವನವು ಸದ್ಧರ್ಮ, ಸದಾ ಚಾರ, ಸದ್ವರ್ತನೆ, ಸತ್ಕರ್ಮಗಳಿಂದ ಪೂರ್ಣವಾಗಬೇಕು. ಆಗ ಜೀವನದ ಮೂಲಕ ಮಾನವನು ಪೂರ್ಣವಾದ ಪರಮಾತ್ಮನ ಸಾಕ್ಷಾತ್ಕಾರವನ್ನು ಮಾಡಿಕೊಳ್ಳಬಲ್ಲ. ಹೀಗೆ ಪೂರ್ಣಕುಂಭವು ಮಂಗಳ, ಭದ್ರತೆ ಮತ್ತು ಅಮರತೆಗಳನ್ನು ಸೂಚಿಸುವ ಸಂಕೇತ ವಾಗಿದೆ.

ಧ್ವಜ : ಧ್ವಜವು ಎತ್ತರದಲ್ಲಿ ಧ್ವಜಸ್ತಂಭವನ್ನು ಆಧರಿಸಿ ಗಾಳಿಯ ಹೊಡೆತವನ್ನು ಸಹಿಸಿಕೊಂಡು ಹಾರುತ್ತಿರುತ್ತದೆ. ಮಾನವನು ಜೀವನರಂಗದಲ್ಲಿ ಭಗವಂತನೆಂಬ ಧ್ವಜ ಸ್ತಂಭವನ್ನು ಆಧಾರವಾಗಿಟ್ಟುಕೊಂಡು ಸುಖದುಃಖಗಳೆಂಬ ಗಾಳಿಯ ಹೊಡೆತಗಳನ್ನು ಸಹಿಸುತ್ತಾ ಎದುರಿಸುತ್ತಾ ಬಾಳಬೇಕು ಎಂಬುದೇ ಧ್ವಜವು ನೀಡುವ ಸಾಂಕೇತಿಕವಾದ ಸಂದೇಶ. ಧ್ವಜವು ಎತ್ತರದಲ್ಲಿ ಹಾರುತಿರುವಂತೆ ಜೀವನವು ಉತ್ತಮಮಟ್ಟದ ಯೋಗ್ಯತೆ ಯಿಂದ ಕೂಡಿರಬೇಕು. ಧ್ವಜವು ಇತರರಿಗೆ ಸ್ಫೂರ್ತಿ-ಅಭಿಮಾನಗಳನ್ನು ನೀಡಿದಂತೆ ನಮ್ಮ ಜೀವನವೂ ಪರಿಣಾಮಗೊಳ್ಳಬೇಕು, ಫಲಕಾರಿ ಆಗಬೇಕು ಎಂಬುದು ಧ್ವಜದ ಹಿನ್ನೆಲೆಯಲ್ಲಿ ಅಡಗಿರುವ ತತ್ತ್ವಗಳಲ್ಲಿ ಒಂದಾಗಿದೆ. ಧ್ವಜವು ಅಭಿಮಾನ ಶ್ರೇಷ್ಠತೆ ನಿರ್ಧಾರ ನಿಷ್ಠೆಗಳೆಲ್ಲದರ ಸಂಕೇತವಾಗಿದೆ.

ಗಜ : ಗಜವು ದೃಢತೆ, ಬಲ ಮತ್ತು ಸಾಮರ್ಥ್ಯಗಳ ಸಂಕೇತವಾಗಿದೆ. ಜೀವನದಲ್ಲಿ ಸುಖಸಂಪತ್ತುಗಳ ಸಂಪಾದನೆ ಮತ್ತು ಅವುಗಳ ಭದ್ರತೆ ಹಾಗೂ ಪೋಷಣೆಗಳ ವಿಚಾರದಲ್ಲಿ ಗಜದಂತಹ ದೃಢತೆ, ಬಲ ಮತ್ತು ಸಾಮರ್ಥ್ಯಗಳು ಅಗತ್ಯ ಎಂಬುದನ್ನು ಗಜವು ಸಾಂಕೇತಿಕವಾಗಿ ಸೂಚಿಸುತ್ತದೆ.

ಹಸು ಮತ್ತು ನಂದಿ : ಗೋವು ಹಾಲನ್ನು ನೀಡಿ ಮನುಷ್ಯನ ಪೋಷಣೆ-ಪುಷ್ಟಿಗಳನ್ನು ತುಂಬುತ್ತದೆ. ಗೋವಿನ ಗೊಬ್ಬರದಿಂದ ಜಮೀನು ಫಲವತ್ತಾಗುತ್ತದೆ. ಗಿಡಗಳು ಸಮೃದ್ಧಿಯಾಗುತ್ತವೆ. ಎತ್ತುಗಳನ್ನು ಉಪಯೋಗಿಸಿ ಗದ್ದೆಗಳನ್ನು ಉತ್ತು ಬೇಸಾಯಮಾಡಲು ಸಾಧ್ಯವಾಗುತ್ತದೆ. ಬಂಡಿಗಳನ್ನು ಎಳೆಯಲು ಹಾಗೂ ಇನ್ನಿತರ ಹಲವಾರು ರೀತಿಯ ದೈಹಿಕ ಶ್ರಮದ ಕೆಲಸಕ್ಕೆ ಎತ್ತುಗಳನ್ನು ಉಪಯೋಗ ಮಾಡಲಾಗುತ್ತದೆ. ಗೋವಿನ ಮಲಮೂತ್ರಗಳು ಜಮೀನನ್ನು ಫಲವತ್ತಾಗಿ ಮಾಡಲು ನೆರವಾದಂತೆ ಮನುಷ್ಯರ ದೇಹ ಮತ್ತು ಮನೆಗಳನ್ನು ಪರಿಶುದ್ಧ ಮಾಡುವುದರಲ್ಲಿಯೂ ಉಪಯೋಗಕ್ಕೆ ಬರುತ್ತದೆ. ಹೀಗೆ ಗೋವು ಹಲವು ರೀತಿಯಲ್ಲಿ ಮಾನವನ ಜೀವನದಲ್ಲಿ ವಿಶೇಷವಾದ ರೀತಿಯಲ್ಲಿ ಉಪಯೋಗಕ್ಕೆ ಬರುವ ಉಪಯುಕ್ತವಾದ, ಪವಿತ್ರವಾದ ಪ್ರಾಣಿಯಾಗಿರುತ್ತದೆ. ಗೋವಿನ ಜೀವನವು ಹೇಗೆ ಪರೋಪಕಾರಕ್ಕೆ ಹಲವು ರೀತಿಯಲ್ಲಿ ವಿನಿಯೋಗವಾಗುತ್ತದೋ ಹಾಗೆಯೇ ಇಳೆಯಲ್ಲಿ ಮಾನವನ ಜೀವನವು ಪರರಿಗೆ ಉಪಕಾರವಾಗುವ ರೀತಿಯಲ್ಲಿ ನಿರ್ವಹಿಸಲ್ಪಡುವಂತಾಗಬೇಕು ಎಂಬುದನ್ನು ಹಸು ಮತ್ತು ನಂದಿ (ಗೋವು) ಸಾಂಕೇತಿಕವಾಗಿ ಸೂಚಿಸುತ್ತವೆ.

ಧರ್ಮಚಕ್ರ : ರಥವು ಸಾಗಬೇಕಾದರೆ ಅದಕ್ಕೆ ಚಕ್ರಗಳು ಹೇಗೆ ಅಗತ್ಯವೋ ಹಾಗೆಯೇ ಜೀವನವೆಂಬ ರಥವು ಸಾಗಬೇಕಾದರೆ ಅದಕ್ಕೆ ಧರ್ಮದ ಚಕ್ರಗಳು ಅಗತ್ಯ. ಚಕ್ರವಿಲ್ಲದೆ ರಥವು ಹೇಗೆ ಸಾಗಲಾರದೋ ಹಾಗೆಯೇ ಧರ್ಮವಿಲ್ಲದೆ ಬದುಕು ಬಾಳದು, ಬೆಳಗದು ಎಂಬುದನ್ನು ಧರ್ಮಚಕ್ರವು ಸಾಂಕೇತಿಕವಾಗಿ ಸೂಚಿಸುತ್ತದೆ.

ಬಿಲ್ವಪತ್ರೆ : ಮೂರು ಭಾಗಗಳಿಂದ ಕೂಡಿರುವ ಬಿಲ್ವಪತ್ರೆಯು ದೇವತಾರ್ಚನೆಯಲ್ಲಿ ಉಪಯುಕ್ತವಾದುದಾಗಿದೆ. ಸತ್ಯ, ಧರ್ಮ, ಶಾಂತಿಗಳಿಂದ ಕೂಡಿ ಜೀವನವು ಭಗವಂತನ ಪಾದಕ್ಕೆ ಅರ್ಪಿತವಾಗಲು ಯೋಗ್ಯವಾದ ಬಿಲ್ವಪತ್ರೆಯಂತೆ ಬೆಳೆದು ಬೆಳಗಿ ಅರ್ಪಿತಗೊಳ್ಳಬೇಕು ಎಂಬುದನ್ನು ಬಿಲ್ವಪತ್ರೆಯ ಮೂರು ಭಾಗಗಳು ಹಾಗೂ ಒಟ್ಟಿನಲ್ಲಿ ಬಿಲ್ವಪತ್ರೆಯೂ ಸಾಂಕೇತಿಕವಾಗಿ ಸೂಚಿಸುತ್ತದೆ.

ತುಳಸಿ : ಔಷಧೀಯ ಸತ್ವಗಳಿಂದಲೂ, ಆಹ್ಲಾದಕರವಾದ ಸುವಾಸನೆಯಿಂದಲೂ ಕೂಡಿರುವ ತುಳಸಿ ಗಿಡವು ಪವಿತ್ರತೆ, ಪರಿಶುದ್ಧತೆಗಳ ಪ್ರತೀಕವಾಗಿದೆ. ದೇವರಾರ್ಚನೆಗೆ ತುಳಸಿಪತ್ರಗಳು ಉಪಯೋಗಿಸಲ್ಪಡುತ್ತವೆ. ತುಳಸಿಪತ್ರಗಳು ಸರಳಸುಂದರತೆಯಿಂದ ಕೂಡಿದ್ದು ದೇವರಿಗೆ ತುಳಸಿ ಎಂದರೆ ಪ್ರೀತಿಯ ಸಂಕೇತವೇ ಸರಿ. ದೇವರ ಕೃಪೆಗೆ ಪಾತ್ರನಾಗಲು ಮನುಷ್ಯನು ಪವಿತ್ರನೂ ಸರಳನೂ ಮತ್ತು ಪರಿಶುದ್ಧನೂ ಆಗಿರಬೇಕು ಎಂಬುದನ್ನು ತುಳಸಿಪತ್ರವು ಸಾಂಕೇತಿಕವಾಗಿ ಸೂಚಿಸುತ್ತದೆ.

ಅಶ್ವತ್ಥವೃಕ್ಷ : ಅಶ್ವತ್ಥ ಎಂದರೆ ಇಂದಿರುವಂತೆ ನಾಳೆ ಇರಲಾರದ್ದು ಎಂದು ಅರ್ಥ. ಕ್ಷಣಕ್ಷಣಕ್ಕೂ ಬದಲಾವಣೆಹೊಂದುವಂತಹದು ಎಂದು ತಾತ್ಪರ್ಯ. ಸಂಸಾರಜೀವನವೂ ಕೂಡ ಹಾಗೆಯೇ. ಅದರಲ್ಲಿನ ಸುಖದುಃಖಗಳೂ ಕೂಡ ಹಾಗೆಯೇ ಬದಲಾವಣೆ ಹೊಂದುತ್ತಿರುತ್ತವೆ. ಹಾಗಿದ್ದರೂ ಜೀವನವನ್ನು ಅಲಕ್ಷಿಸಬಾರದು. ಅಶ್ವತ್ಥವೃಕ್ಷವು ದೀರ್ಘಾಯುಸ್ಸು, ಬಹುವಿಸ್ತೃತತ್ವ, ಬಹುಶಾಖೆಗಳಿಂದ ಕೂಡಿ ಗ್ರಂಥಿಗಳಿಂದಲೂ ಎಲೆಗಳಿಂದಲೂ ಕೂಡಿರುತ್ತದೆ. ಹಾಗೆಯೇ ಅಶ್ವತ್ಥವೃಕ್ಷವು ವಿಶಾಲವಾಗಿ ತನ್ನ ಕೊಂಬೆಗಳನ್ನು ಹರಡಿ ಸಹಸ್ರಾರು ಎಲೆಗಳಿಂದ ಕೂಡಿ ಅದೆಷ್ಟೋ ಬಗೆಯ ಕ್ರಿಮಿಕೀಟಗಳಿಗೂ, ಪಕ್ಷಿಗಳಿಗೂ ಆಶ್ರಯವನ್ನು ನೀಡುತ್ತದೆ. ಅಲ್ಲದೆ ಅದು ಅನೇಕ ವಿಧದ ವನಸ್ಪತಿ ಔಷಧಗಳ ಸತ್ವದಿಂದ ಕೂಡಿದ್ದು ಅದರ ನೆರಳು, ಗಾಳಿ ಎಲ್ಲವೂ ಜೀವಿಗಳಿಗೆ ಪವಿತ್ರ ಹಾಗೂ ಉಪಯುಕ್ತವಾಗಿವೆ. ಆದ್ದರಿಂದಲೇ ಅಶ್ವತ್ಥವು ವೃಕ್ಷಗಳ ರಾಜನೆಂದು ಕರೆಯಲ್ಪಡುತ್ತದೆ. ಮನುಷ್ಯನ ಜೀವನವೂ ಕೂಡ ಅಶ್ವತ್ಥವೃಕ್ಷದಂತೆ ಉಪಯುಕ್ತವೂ ಬಲಯುಕ್ತವೂ ಆಗಿ ದೀರ್ಘಾಯುಷ್ಯನಿಂದ ಕೂಡಿ ಬೆಳೆದು ಬೆಳಗಬೇಕು ಎಂಬುದನ್ನು ಸಾಂಕೇತಿಕವಾಗಿ ಅಶ್ವತ್ಥವು ಸೂಚಿಸುತ್ತದೆ.

ಚಂದ್ರ : ಅಮಾವಾಸ್ಯೆಯ ದಿನ ಕಾಣದ ಚಂದ್ರ ಪೂರ್ಣಿಮೆಯ ದಿನ ಕಾಣಿಸುತ್ತಾನೆ. ಅಮಾವಾಸ್ಯೆಯನಂತರ ವೃದ್ಧಿಯಾದ ಚಂದ್ರ ಪೂರ್ಣಿಮೆಯನಂತರ ಕ್ಷೀಣನಾಗುತ್ತಾನೆ. ವೃದ್ಧಿಕ್ಷಯಗಳು ಜೀವನದಲ್ಲಿ ಅನಿವಾರ್ಯ. ಚಂದ್ರನ ಬೆಳಕು ಶಾಂತ ಹಾಗೂ ಸುಖಕರವಾಗಿರುತ್ತದೆ. ಜೀವನವೂ ಕೂಡ ಶಾಂತಿ-ಸುಖಗಳಿಂದ ಕೂಡಿ ತನ್ನ ಹಾಗೂ ಇತರರ ಕಲ್ಯಾಣಕ್ಕೆ ಅದು ಹಿತಕಾರಿಯಾಗಿ ಪರಿಣಮಿಸಬೇಕು. ಕಷ್ಟಸುಖಗಳನ್ನು ಸಮಾಧಾನ ಚಿತ್ತದಿಂದ ಎದುರಿಸಬೇಕು ಎಂಬುದನ್ನು ಚಂದ್ರಸಂಕೇತವು ಸೂಚಿಸುತ್ತದೆ.

ಸೂರ್ಯ . ಜೀವಿಗಳೆಲ್ಲರ ಜೀವನದ ಆಧಾರವೇ ಸೂರ್ಯ. ಸೂರ್ಯನು ಸ್ವಯಂ ಪ್ರಕಾಶನೂ ಅನಂತಶಕ್ತಿಪ್ರಭಾಪೂರ್ಣನೂ ಆಗಿರುತ್ತಾನೆ. ಸೂರ್ಯೋದಯವಾದಾಗ ಜಗದ ಜೀವನ ಚೇತನಗೊಳ್ಳುತ್ತದೆ. ಜೀವಿಗಳೆಲ್ಲರೂ ಸಂತಸದಿಂದ ತಮ್ಮ ತಮ್ಮ ಬದುಕನ್ನು ಬಾಳುತ್ತಾರೆ. ಸೂರ್ಯನಿಲ್ಲದಿದ್ದರೆ ಜೀವಿಗಳ ಬದುಕು ನಿಸ್ತೇಜವೂ ನಿರ್ವೀರ್ಯವೂ ದುರ್ಬಲವೂ ಆಗಿ ನಿರ್ನಾಮಗೊಳ್ಳುವುದರಲ್ಲಿ ಸಂದೇಹವಿಲ್ಲ. ಹಾಗೆಯೇ ನಮ್ಮೆಲ್ಲರ ಜೀವನಕ್ಕೆ ಪರಮಾತ್ಮನೆಂಬ ದಿವ್ಯಶಕ್ತಿ-ಬೆಳಕಿನ ಸಹಾಯವಿಲ್ಲವೆಂದಾದರೆ ನಮ್ಮ ಬಾಳು ಬೆಳೆಯದು, ಬೆಳಗದು. ಪರಮಾತ್ಮನು ಅನಂತಶಕ್ತಿ-ಪ್ರಭಾಪೂರ್ಣನೂ ಆಗಿರುತ್ತಾನೆ ಎಂಬುದನ್ನು ಸಾಂಕೇತಿಕವಾಗಿ ಸೂರ್ಯಚಿಹ್ನೆಯು ಸೂಚಿಸುತ್ತದೆ.

ತಿಲಕ ಮುದ್ರೆ, ನಾಮಗಳು : ತಿಲಕವನ್ನು ಎರಡು ಹುಬ್ಬುಗಳ ನಡುವಿನ ಹಣೆಯ ಭಾಗಕ್ಕೆ ಹಚ್ಚುತ್ತಾರೆ. ಶಿವಭಕ್ತರು ಭಸ್ಮವನ್ನೂ ಕುಂಕುಮವನ್ನೂ. ವಿಷ್ಣುಭಕ್ತರು ಗಂಧ ಚಂದನ, ಅಂಗಾರಕ ನಾಮಗಳನ್ನೂ ಧರಿಸುತ್ತಾರೆ. ಭ್ರೂಮಧ್ಯೆಯ ಸ್ಥಳವು ಆಜ್ಞಾ ಚಕ್ರದ ಸ್ಥಾನವಾಗಿದ್ದು ಅಲ್ಲಿ ಜಾಗೃತಿಯುಂಟಾದರೆ, ಜ್ಞಾನದ ಕಣ್ಣು ತೆರೆಯಿತೆಂದರೆ ಜೀವವು ಮುಕ್ತನಾಗುತ್ತಾನೆ. ಈ ಅಂಶವನ್ನು ಸದಾ ನೆನಪಿಡಲು ಮತ್ತು ಆಜ್ಞಾಚಕ್ರದ ಭಾಗದ ನಾಡಿ ಸದಾ ತಂಪಾಗಿರಲು ಗಂಧ, ಚಂದನ, ಕುಂಕುಮ, ಭಸ್ಮಗಳು ಸಹಾಯ

ಮಾಡುತ್ತವೆ. ಅಷ್ಟೇ ಅಲ್ಲದೆ ತನ್ನ ಇಷ್ಟದೇವತೆಯ ಸ್ಮರಣೆಯನ್ನು ಉಳಿಸಿಕೊಳ್ಳಲು ಸಹಾಯವನ್ನೂ ಇವುಗಳು ಉಂಟುಮಾಡುತ್ತವೆ.

ಮುದ್ರೆಗಳಲ್ಲಿ ಎರಡು ವಿಧಗಳಿವೆ :

(೧) ಭಾವನೆಯನ್ನು ಅನುಸರಿಸಿ ಕೆಲವು ನಿರ್ದಿಷ್ಟವಾದ ರೀತಿಯ ಕೈ ಹಾಗೂ ಬೆರಳುಗಳ ಜೋಡಣೆಯನ್ನು ಮಾಡುತ್ತಾ ಆಕಾರವನ್ನು ಉಂಟುಮಾಡುವುದು.

(೨) ದೇವರ ಕೈಗಳಲ್ಲಿ ಕಂಗೊಳಿಸುವ ಶಂಖಚಕ್ರಾದಿಗಳ ಆಕಾರವನ್ನು ತಮ್ಮ ಮೈ ಮೇಲೆ ನಿರ್ದಿಷ್ಟವಾದ ಭಾಗಗಳಲ್ಲಿ ಅರೆದ ಗಂಧದ ಮೂಲಕ ಮುದ್ರೆಯೊತ್ತಿ ಗುರುತು ಮಾಡಿಕೊಳ್ಳುವುದು, ವಿಧಿಪ್ರಕಾರವಾಗಿ ಲೋಹದ ಮುದ್ರೆಗಳನ್ನು ಅಗ್ನಿಯ ನೆರವಿನಿಂದ ಕಾಯಿಸಿ ಶರೀರದ ಮೇಲೆ ಒತ್ತಿ ಗುರುತುಮಾಡಿಕೊಳ್ಳುವುದು.

ಆಧ್ಯಾತ್ಮಿಕ ಭಾವನೆಗಳನ್ನು ನಿರ್ದಿಷ್ಟವಾದ ರೀತಿಯಲ್ಲಿ ಕೈ ಮತ್ತು ಬೆರಳುಗಳ ಜೋಡಣೆಯಿಂದ ಹಸ್ತಭಾವ ಪ್ರಕಟಣೆ ಮಾಡುವುದೇ ಭಾವಮುದ್ರೆ. ಇದು ಪೂಜಾ ವೇಳೆ ಮನಸ್ಸಿನ ಏಕಾಗ್ರತೆಗೆ ನೆರವಾಗುತ್ತದೆ. ಎರಡನೇ ವಿಧದ ಮುದ್ರೆಯು ಸಾಧಕನಿಗೆ ತನ್ನ ಇಷ್ಟದೇವತೆಯ ನೆನಪನ್ನು ಉಂಟುಮಾಡುವುದು. ಅಲ್ಲದೆ ಅದನ್ನು ಗಂಧದಿಂದ ಅಂಕಿತ ಮಾಡುವುದರಿಂದ ಶರೀರದ ನರಕೇಂದ್ರಗಳು ಚೇತನಗೊಳ್ಳಲು ನೆರವು ದೊರೆತಂತಾಗುತ್ತದೆ.

ನಾಮ ಎಂದರೆ ಗಂಧವನ್ನಾಗಲಿ ಭಸ್ಮವನ್ನಾಗಲಿ ಹಣೆಯ ಮೇಲೆ ಮತ್ತು ನಿರ್ದಿಷ್ಟವಾದ ರೀತಿ ಶರೀರದ ಅಂಗಗಳ ಮೇಲೆ ಹಚ್ಚುವುದಾಗಿದೆ. ಭಸ್ಮವು ವೈರಾಗ್ಯ ಮತ್ತು ತ್ಯಾಗದ ಚಿಹ್ನೆಯಾಗಿದೆ. ಈ ಜೀವನದಲ್ಲಿ ಕೊನೆಗೆ ದೇಹವು ಸುಡಲ್ಪಟ್ಟು ಭಸ್ಮವಾಗುತ್ತದೆ. ವಸ್ತುವಿನ ರೂಪ-ಆಕಾರಗಳು ಎಲ್ಲವೂ ಸುಟ್ಟಾಗ ಭಸ್ಮವಾಗುತ್ತದೆ. ಭಸ್ಮವು ವಸ್ತುವಿನ ದಹನದನಂತರ ಉಳಿಯುವ ರೂಪ ಎಂಬಿತ್ಯಾದಿ ಭಾವನೆಗಳಿಂದ ಭಸ್ಮವು ವೈರಾಗ್ಯ ಹಾಗೂ ತ್ಯಾಗಗಳನ್ನು ನೆನಪಿಸುತ್ತದೆ. ಹಾಗೆಯೇ ಸೂಕ್ತವಾದ ವನಸ್ಪತಿ ಮತ್ತು ಬೆರಣಿಗಳ ಸುಡುವಿಕೆಯಿಂದ ತಯಾರಿಸಿದ ಭಸ್ಮದಲ್ಲಿ ಶರೀರದ ಶೀತರಕ್ತದ ಒತ್ತಡ ಮಿದುಳಿನ ಬೇಗೆ ಇವುಗಳನ್ನು ಹತೋಟಿಗೆ ತರುವ ಶಕ್ತಿ ಇದೆ. ಜೊತೆಗೆ ಹಲವು ರೀತಿಯ ಕ್ರಿಮಿನಾಶಕ ಶಕ್ತಿಯೂ ಭಸ್ಮಕ್ಕಿದೆ ಎನ್ನುವುದು ಅನುಭವಸತ್ಯವಾಗಿದೆ.

ಹಾಗೆಯೇ ಗಂಧವೂ ಕೂಡ. ಗಂಧವು ಪರಿಮಳಯುಕ್ತವಾಗಿ ಕೊರಡಾಗಿ ಇದ್ದಾಗ, ಮರವಾಗಿದ್ದಾಗ ಪರಿಮಳ ಇದ್ದಂತೆ, ಅದು ಸವೆದರೂ ಪರಿಮಳದಿಂದಲೇ ಕೂಡಿ ಇರುತ್ತದೆ. ಹಾಗೆಯೇ ಚರಾಚರ ವಸ್ತುಗಳೂ ಭಗವಂತನಿಂದ ಕೂಡಿದ್ದು ಭಗವಂತನು ಅವುಗಳ ಅಂತರ್ಯಾಮಿಯಾಗಿರುತ್ತಾನೆ. ಹಾಗೂ ಪರಿಮಳವು ವಸ್ತುವಿನಲ್ಲಿ ಎಲ್ಲೆಲ್ಲೂ ಆವೃತವಾಗಿರುವಂತೆ ಭಗವಂತನು ಜಗತ್ತನ್ನು ಆವರಿಸುತ್ತಾನೆ ಎಂಬ ತತ್ತ್ವವನ್ನು ಸಾಂಕೇತಿಕವಾಗಿ ಗಂಧವು ಸಾರುತ್ತದೆ. ಗಂಧದ ಪರಿಮಳದಂತೆ ಅದರಲ್ಲಿ ಔಷಧೀಯ ಸತ್ವವೂ ಸೇರಿರುತ್ತದೆ. ಅದರ ಪರಿಮಳ ಮನಸ್ಸಿಗೆ ಆಹ್ಲಾದವನ್ನುಂಟುಮಾಡಿದರೆ ಅದರ ಔಷಧೀಯ ಸತ್ವ ಶರೀರವನ್ನು ರಕ್ಷಿಸುತ್ತದೆ ಎಂಬ ತತ್ತ್ವವನ್ನು ಗಂಧವು ಒಳಗೊಂಡಿದೆ. ಗಂಧವನ್ನು ಎಷ್ಟು ಸವೆದರೂ ಅದು ತನ್ನ ಪರಿಮಳವನ್ನು ಬಿಡುವುದಿಲ್ಲ. ಹಾಗೆಯೇ ಗಂಧ

ವನ್ನು ತಳೆದಷ್ಟೂ ಪರಿಮಳ ಅಲ್ಲದೆ ಬೇರೇನನ್ನೂ ಅದು ಕೊಡುವುದಿಲ್ಲ, ಹೊರಗೆಡಹುವುದಿಲ್ಲ. ಅದರಂತೆಯೇ ಜೀವಿಯು ಎಷ್ಟೇ ತಪ್ಪು ಬಂದರೂ ತನ್ನ ಒಳಿತನ್ನು, ಸದ್ಗುಣವನ್ನು ಬಿಡದೆ, ಯಾರನ್ನೂ ದ್ವೇಷಿಸಕೂಡದು. ಹರ್ಷಚಿತ್ತನೂ ಭಕ್ತಿಶ್ರದ್ಧೆಗಳೆಂಬ ಪರಿಮಳಯುಕ್ತನೂ ಆಗಿರಬೇಕೆಂದು ಗಂಧವು ಸಾಂಕೇತಿಕವಾಗಿ ಸೂಚಿಸುತ್ತದೆ.

ಯಜ್ಞೋಪವೀತ : ಯಜ್ಞೋಪವೀತ ಎಂದರೆ ಪರಮಾತ್ಮಪ್ರಾಪ್ತಿಗೆ ನೆರವಾಗುವ ಸೂತ್ರ, ವೇದಾಧ್ಯಯನ ಹಾಗೂ ವೇದೋಕ್ತ ಕರ್ಮಾಚರಣೆಗಳ ಅಧಿಕಾರಪ್ರಾಪ್ತಿಯ ಸಂಕೇತ, ಯಜ್ಞದಿಂದ ಸಂಸ್ಕಾರಗೊಂಡ ಸೂತ್ರ ಎಂಬುದಾಗಿ ಹಿಂದೂಧರ್ಮಶಾಸ್ತ್ರ ಗ್ರಂಥಗಳಲ್ಲಿ ವಿವರಣೆ ಇದೆ. ಜನಿವಾರ ಎನ್ನುವುದು ಯಜ್ಞೋಪವೀತದ ತದ್ಭವವಾಗಿದೆ. ಜನಿವಾರವು ಸೂಕ್ಷ್ಮವಾದ ಮೂರು ಎಳೆಗಳುಳ್ಳ ಸೂತ್ರದ ಮೂರು ಸುತ್ತನ್ನು ಒಳಗೊಂಡಿದ್ದು ಅವುಗಳನ್ನು ಒಟ್ಟಾಗಿ ಬಿಗಿದ ಒಂದು ವಿಶಿಷ್ಟವಾದ ಗಂಟಿನಿಂದ ಕೂಡಿರುತ್ತದೆ. ಆ ಗಂಟನ್ನು ಬ್ರಹ್ಮಗ್ರಂಥಿ-ಬ್ರಹ್ಮಗಂಟು ಎಂದು ಕರೆಯಲಾಗಿದೆ. ಯಜ್ಞೋಪವೀತದ ಧಾರಣೆಯು ಶಾಸ್ತ್ರೋಕ್ತವಾದ ಉಪನಯನ ಸಂಸ್ಕಾರದ ಮೂಲಕವೇ ನೆರವೇರುವುದಾಗಿದೆ. ಉಪನಯನದ ಸಂದರ್ಭದಲ್ಲಿ ಯಜ್ಞೋಪವೀತದ ಧಾರಣೆಯನಂತರ ಪರಮಪವಿತ್ರವಾದ ವೇದೋಕ್ತ ಗಾಯತ್ರಿಮಹಾಮಂತ್ರದ ಉಪದೇಶವನ್ನು ನೀಡಲಾಗುತ್ತದೆ.

ನಮ್ಮ ಕೈಯ ಹೆಬ್ಬೆರಳು ಹೊರತಾಗಿ ಉಳಿದ ನಾಲ್ಕು ಬೆರಳುಗಳನ್ನು ಸಾಲಾಗಿ ಜೋಡಿಸಿ ಇಟ್ಟುಕೊಂಡು ಅವಕ್ಕೆ ದಾರವನ್ನು ತೊಂಬತ್ತಾರು ಸುತ್ತು ಸುತ್ತಿದರೆ ಉಂಟಾಗುವ ಉದ್ದಳತೆಯೇ ಯಜ್ಞೋಪವೀತದ ನಿಶ್ಚಿತವಾದ ಅಳತೆ ಎಂಬುದಾಗಿ ಶಾಸ್ತ್ರನಿಯಮವಿದೆ. ಈ ತೊಂಬತ್ತಾರು ಸುತ್ತುಗಳೇ ಏಕಿರಬೇಕು ಎಂಬುದಕ್ಕೆ ಇರುವ ಹಿನ್ನೆಲೆ ತುಂಬ ಮಹತ್ವವೂ ಮನನೀಯವೂ ಆಗಿದೆ. ಸಾಮವೇದದ ಛಾಂದೋಗ್ಯ ಪರಿಶಿಷ್ಟದಲ್ಲಿ ಈ ಬ್ರಹ್ಮಾಂಡದಲ್ಲಿ ಅಡಗಿರುವ ಸಂಗತಿಗಳನ್ನು ಹೇಳುತ್ತಾ ಅವುಗಳು ಒಟ್ಟು ತೊಂಬತ್ತಾರು ಎಂದು ಎನ್ನಲಾಗಿದೆ. ಯಾವುವೆಂದರೆ : ಇಪ್ಪತ್ತೈದು ತತ್ತ್ವ, ಸತ್ತ್ವ, ರಜ, ತಮ ಎಂಬ ತ್ರಿಗುಣಗಳು, ಹದಿನೈದು ತಿಥಿಗಳು, ಸಪ್ತ ವಾರಗಳು, ಇಪ್ಪತ್ತೇಳು ನಕ್ಷತ್ರಗಳು, ನಾಲ್ಕು ವೇದಗಳು, ತ್ರಿಕಾಲಗಳು, ದ್ವಾದಶ ಮಾಸಗಳು. ಇವುಗಳ ಒಟ್ಟು ಸಂಖ್ಯೆ ತೊಂಬತ್ತಾರು ಆಗಿರುವುದರಿಂದ ಪರಮಾತ್ಮಪ್ರಾಪ್ತಿಯ ಸಾಧನವಾದ ಯಜ್ಞೋಪವೀತದ ಉದ್ದಳತೆಗೆ ತೊಂಬತ್ತಾರು ಸುತ್ತು ದಾರ ಬೇಕೆಂದು ಪ್ರಮಾಣವನ್ನು ನಿರ್ಣಯಿಸಲಾಗಿದೆ. ಈ ಬ್ರಹ್ಮಾಂಡದ ತೊಂಬತ್ತಾರು ತತ್ತ್ವವಿಚಾರಗಳಿಗೆ ಪರಬ್ರಹ್ಮ-ಪರಮಾತ್ಮನೇ ಆಧಾರವಾಗಿದ್ದು ಅವನು ಬ್ರಹ್ಮ, ವಿಷ್ಣು, ಮಹೇಶ್ವರ ಎಂಬ ಮೂರು ಸ್ವರೂಪ ತಾಳಿ ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣನಾಗಿದ್ದು ಅವನನ್ನು ಅವಲಂಬಿಸಿಯೇ ಜಗತ್ತು-ಚರಾಚರ ಸೃಷ್ಟಿಗಳೆಲ್ಲವೂ ಇರುವುದಾಗಿದೆ. ಪರಮಾತ್ಮನ ಸಾಕ್ಷಾತ್ಕಾರಹೊಂದಲು ಕರ್ಮ, ಉಪಾಸನಾ ಮತ್ತು ಜ್ಞಾನವೆಂಬ ಮೂರು ಪ್ರಮುಖವಾದ ಸಾಧನಾವಿಧಾನಗಳಿವೆ. ಹೀಗೆ ಇವೆಲ್ಲವುಗಳ ಸಂಕೇತವಾಗಿ ಜನಿವಾರದಲ್ಲಿ ಮೂರು ಎಳೆಗಳು ಇದ್ದು ಅವನ್ನು ವೃತ್ತಾಕಾರವಾಗಿ ಜೋಡಿಸ

ಲ್ಪಟ್ಟು ತುದಿಯಲ್ಲಿ ಗಂಟಿನಿಂದ ಬಿಗಿದು ಆ ಗಂಟನ್ನು ಬ್ರಹ್ಮಗ್ರಂಥಿ (ಬ್ರಹ್ಮಗಂಟು) ಎಂದು ಕರೆಯಲಾಗಿದೆ.

ಹೃದಯವು ಜೀವಿಯ ಪ್ರಾಣಶಕ್ತಿಯ ಕೇಂದ್ರವೂ ಜೀವಿಗಳಲ್ಲಿ ಭಗವಂತನ ಆವಾಸ ಸ್ಥಾನವೂ ಆದುದರಿಂದ ಯಜ್ಞೋಪವೀತವನ್ನು ದೇಹದ ಎಡತೋಳಿನ ಮೇಲೆ ಧರಿಸಿ ಹೃದಯಭಾಗಕ್ಕಾಗಿ ಹಾದುಹೋಗುವಂತೆ ಬಲಭಾಗಕ್ಕೆ ಇಳಿಬಿಡುವುದಾಗಿದೆ. ಯಜ್ಞೋಪವೀತವನ್ನು ಹತ್ತಿಯಿಂದಲೇ ಮಾಡಬೇಕೆಂದಿದ್ದು ಅದರ ತಯಾರಿ ಬಗೆಗೆ ಶಾಸ್ತ್ರೋಕ್ತವಾದ ನಿಶ್ಚಯದ ವಿಧಾನವಿದೆ. ಜನಿವಾರವನ್ನು ಶಾಸ್ತ್ರವಿಧಿಪ್ರಕಾರವಾಗಿ ಸಿದ್ಧಗೊಳಿಸಿದನಂತರವೇ ಅದನ್ನು ಧಾರಣೆ ಮಾಡುವುದಾಗಿದೆ. ಹೀಗೆ ವೇದೋಕ್ತ ಮಂತ್ರ ಸಂಸ್ಕಾರದಿಂದಾಗಿ ಪವಿತ್ರದೇವತಾಸಾನ್ನಿಧ್ಯದಿಂದ ಕೂಡಿರುವ ಯಜ್ಞೋಪವೀತವನ್ನು ಶಾಸ್ತ್ರಾಚಾರ ಅರ್ಹತೆಗೆ ಅನುಗುಣವಾಗಿ ಯಾರು ಧರಿಸಿ ಗಾಯತ್ರಿ ಮಹಾಮಂತ್ರದ ಜಪಾನುಷ್ಠಾನಯುಕ್ತರಾಗಿ ಜೀವಿಸುವರೋ ಅವರಿಗೆ ವಿಶೇಷವಾಗಿ ದೇವತಾನುಗ್ರಹವು ಕೂಡಿಬಂದು ಬ್ರಹ್ಮತೇಜಸ್ಸು, ಜ್ಞಾನಶಕ್ತಿ, ಆಯುರಾರೋಗ್ಯ ಐಶ್ವರ್ಯಗಳ ಅಭಿವೃದ್ಧಿ ಉಂಟಾಗುತ್ತದೆ.

ಶಿಖೆ ಇಡುವಿಕೆ : ಈ ಜಗತ್ತು-ಜೀವರಾಶಿಗಳು ಎಲ್ಲವೂ, ತಲೆಯಿಂದ ತಲೆಗೂದಲು ಹುಟ್ಟಿದಂತೆ ಭಗವಂತನಿಂದ ಹುಟ್ಟಿರುತ್ತವೆ ಎಂದು ಶ್ರುತಿಯು ಹೇಳುತ್ತದೆ. ತಲೆಯು ಜೀವಿಗಳ ಜ್ಞಾನ ನಡವಳಿಕೆ ಚಲನೆ-ಚಾಲನೆಗಳ ಕೇಂದ್ರ ಹಾಗೂ ಹತೋಟಿಯ ಸ್ಥಾನ. ಹಾಗೆಯೇ ಭಗವಂತನು ಜಗತ್ತಿನ ಜೀವಿಗಳನ್ನು ಹತೋಟಿಯಲ್ಲಿಡುವವನೂ ಮತ್ತು ಅವುಗಳ ಒಡೆಯನೂ ಆಗಿದ್ದಾನೆ ಎಂಬ ತತ್ತ್ವವು ತಲೆಯಲ್ಲಿ ಶಿಖೆಯನ್ನು ಇಡುವುದರ ಹಿಂದೆ ಅಡಗಿರುವ ಸಂಕೇತಾರ್ಥಗಳಲ್ಲಿ ಒಂದಾಗಿದೆ. ಇನ್ನೊಂದು ತತ್ತ್ವ ಯಾವುದೆಂದರೆ ತಲೆಯಲ್ಲಿ ಬ್ರಹ್ಮರಂಧ್ರ ಎಂಬ ಬಹಳ ಸೂಕ್ಷ್ಮವಾದ ಶಿರಸಂಧಿ ಇದ್ದು ಅದನ್ನು ಬಿಸಿಲು, ಶೀತ ಇತ್ಯಾದಿ ತಾಪಗಳಿಂದ ರಕ್ಷಿಸಲು ಶಿಖೆ ಬೇಕಾಗಿದೆ ಎನ್ನುವುದಾಗಿದೆ.

ಘಂಟೆ : ಘಂಟೆಯು ಬ್ರಹ್ಮಾಂಡದ ಮೂಲಶಬ್ದವಾದ ನಾದಬ್ರಹ್ಮದ ಪ್ರತೀಕವಾಗಿದೆ. ಬ್ರಹ್ಮನನ್ನು ನಾದದ ಮೂಲಕ ಎಂದರೆ ಮಂತ್ರ-ನಾಮಗಳಿಂದ ಪೂಜಿಸುವಾಗ ಘಂಟಾಶಬ್ದಮಾಡಿ ನಾದ ಉತ್ಪತ್ತಿಮಾಡುವುದೇ ಘಂಟೆಯ ಉದ್ದೇಶವಾಗಿದೆ. ಸಾಧಕನ ಮನಸ್ಸಿನ ಚಾಂಚಲ್ಯ ನಿಂತು ಘಂಟಾರವ ಕೇಳಿದಾಗ ದಿವ್ಯ ಓಂಕಾರ ನಾದದ ನೆನಪಾಗುತ್ತದೆ. ಓಂಕಾರ ನಾದದ ಉತ್ಪತ್ತಿಯಿಂದಾಗಿ ಭಗವಂತನ ಮೇಲಿನ ಭಕ್ತಿ, ಮನಸ್ಸಿನ ಏಕಾಗ್ರತೆ ವರ್ಧಿಸಲು ನೆರವಾಗುತ್ತದೆ—ಎಂಬ ಸಾಂಕೇತಿಕ ತತ್ತ್ವ ಈ ಘಂಟಾನಾದ ಉತ್ಪತ್ತಿಮಾಡುವುದರಲ್ಲಿ ಸೇರಿರುತ್ತದೆ.

ಅದೊಂದೇ ಅಲ್ಲದೆ ಬ್ರಹ್ಮಾಂಡದಲ್ಲಿ ಅಡಗಿರುವ ಅನೇಕ ದುಷ್ಟಶಕ್ತಿಗಳು ಭೂತ-ಪ್ರೇತಾದಿಗಳು ನಾದಬ್ರಹ್ಮದ ರವದಿಂದ ದೂರ ಸರಿದುಹೋಗಲಿ, ಸಾಧಕನಿಗೆ ತೊಂದರೆ ಕೊಡದಿರಲಿ ಎಂಬುದರ ಸಂಕೇತವಾಗಿಯೂ ಘಂಟೆಯನ್ನು ಬಾರಿಸಲಾಗುವುದು. ದೇವರು ಘಂಟಾರವ ಆದ ಒಡನೆ ತನ್ನ ಭಕ್ತನ ಪೂಜಾಸ್ಥಾನಕ್ಕೆ ಬರುತ್ತಾನೆ—ಬರಬೇಕು ಎಂಬ ಆಹ್ವಾನದ ತತ್ತ್ವವೂ ಈ ಘಂಟಾಶಬ್ದ ಮಾಡುವಿಕೆಯ ಹಿಂದೆ ಅಡಗಿರುತ್ತದೆ.

**ದೀಪ ಧೂಪ ಪುಷ್ಪಗಳ ಉಪಚಾರಗಳು**

ದೀಪವು ಜ್ಯೋತಿಯನ್ನು ನೀಡುತ್ತದೆ. ಜ್ಯೋತಿ ಕತ್ತಲನ್ನು ನಿವಾರಿಸುತ್ತದೆ. ಕತ್ತಲು ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ಎಂಬ ಯಾವುದೇ ಸಂಬಂಧದ್ದು ಆಗಿರಬಹುದು. ಈ ಎಲ್ಲಾ ವಿಧದ ಕತ್ತಲಿನ ನಿವಾರಕನು ಜ್ಯೋತಿಸ್ವರೂಪನಾದ ಭಗವಂತನೇ ಸರಿ. ಆದುದರಿಂದಲೇ ಉಪನಿಷತ್ತಿನಲ್ಲಿ 'ಕತ್ತಲಿನಿಂದ ನಮ್ಮನ್ನು ಬೆಳಕಿಗೆ ಕರೆದೊಯ್ಯು ದೇವಾ'—'ತಮಸೋ ಮಾ ಜ್ಯೋತಿರ್ಗಮಯ' ಎಂದು ಪ್ರಾರ್ಥನೆಯನ್ನು ಮಾಡಲಾಗಿದೆ. ಈ ತತ್ತ್ವದ ಸಂಕೇತವಾಗಿ ಜ್ಯೋತಿಯನ್ನು ಮನೆಗಳಲ್ಲಿ, ದೇವಮಂದಿರಗಳಲ್ಲಿ, ಪೂಜಾಸ್ಥಳಗಳಲ್ಲಿ ತ್ರಿಸಂಧ್ಯೆಯ ವೇಳೆಗಳಲ್ಲಿ ಹಚ್ಚಿ ಬೆಳಗಿಸುತ್ತಾರೆ. ಶುಭಸಂತೋಷಗಳ ಸಂದರ್ಭಗಳಲ್ಲಿ ಮಂಗಳಸೂಚಕವಾಗಿ ಜ್ಯೋತಿಯನ್ನು ಹಚ್ಚಿ ಬೆಳಗಿಸುತ್ತಾರೆ. ಧೂಪವು ಪರಿಮಳವಾದ ಧೂಮದಿಂದ ಕೂಡಿದ್ದು ಎಲ್ಲೆಲ್ಲೂ ವ್ಯಾಪಕವಾಗುವ ಶಕ್ತಿಯಿಂದ ಕೂಡಿದೆ. ಭಗವಂತನೂ ಕೂಡ ಹೀಗೆ ವ್ಯಾಪಕಶಕ್ತಿ ಉಳ್ಳವನಾಗಿದ್ದು ಧೂಪವು ಅದನ್ನು ಸಂಕೇತವಾಗಿ ತಿಳಿಸುತ್ತದೆ. ಔಷಧೀಯ ದೃಷ್ಟಿಯಿಂದ ಧೂಪವು ಕ್ರಿಮಿಕೀಟಗಳನ್ನು ನಾಶಮಾಡುತ್ತದೆ. ತನ್ನಲ್ಲಿರುವ ದುಷ್ಟಗುಣಗಳೆಂಬ ಕ್ರಿಮಿಕೀಟಗಳನ್ನು ಸರ್ವವ್ಯಾಪಕನಾದ ಭಗವಂತನು ನಾಶಮಾಡುತ್ತಾನೆ ಎಂಬ ನಂಬಿಕೆಯ ತತ್ತ್ವವು ಇದರ ಹಿನ್ನೆಲೆಯಲ್ಲಿ ಅಡಕವಾಗಿದೆ. ಹಾಗೆಯೇ ಪುಷ್ಪಗಳನ್ನು ಭಗವಂತನಿಗೆ ಸೌಂದರ್ಯ ಸದ್ಗುಣ ಸದಾಚಾರಗಳ ಸಂಕೇತವಾಗಿ ಸಮರ್ಪಿಸುವುದಾಗಿರುತ್ತದೆ.

**ಪ್ರಸಾದ :** ಭಗವಂತನಿಗೆ ಅರ್ಪಿಸಿದ್ದು ಪವಿತ್ರವಾಗಿ ಅದು ಪ್ರಸಾದವಾಗುತ್ತದೆ. ಏಕೆಂದರೆ ಭಗವಂತನು ಸರ್ವಶಕ್ತನೂ ಸರ್ವಜ್ಞನೂ ಸರ್ವರ ಅಂತರ್ಯಾಮಿಯೂ ಆಗಿದ್ದು ಅವನಿಗೆಂದು ಅರ್ಪಿತವಾದದ್ದು ಅವನ ಕೃಪೆಯಿಂದ ಪವಿತ್ರ ಪ್ರಸಾದವಾಗುತ್ತದೆ. ಪ್ರಸಾದಸ್ವೀಕಾರದಿಂದ ಸರ್ವದುಃಖನಿವಾರಣೆಯಾಗುತ್ತದೆ. ಪ್ರಸಾದವೆಂದರೆ ಭಗವಂತನ ಪೂಜೆಯ ವೇಳೆ ಅರ್ಪಿಸುವ ಹಾಲು ಅನ್ನ ಹಣ್ಣು ಇತ್ಯಾದಿಗಳಾಗಿವೆ. ಅಭಿಷೇಕಮಾಡುವ ಪಂಚಾಮೃತ ಜಲ ಇವುಗಳೂ ಪ್ರಸಾದವಾಗುತ್ತವೆ. ಅಭಿಷೇಕದ ಪ್ರಸಾದಕ್ಕೆ ಚರಣಾಮೃತ ಎಂದೂ, ಆಹಾರ ಪ್ರಸಾದಕ್ಕೆ ನೈವೇದ್ಯ ಎಂದೂ ವ್ಯವಹಾರದಲ್ಲಿ ಹೇಳುತ್ತಾರೆ. ಭಗವಂತನಿಗೆ ಭಕ್ತಿಯಿಂದ ಯಾವುದನ್ನು ಅರ್ಪಿಸಿದರೂ ಕೂಡ ಭಗವಂತ ಅದನ್ನು ಸ್ವೀಕರಿಸುತ್ತಾನೆ. ಗೀತೆಯಲ್ಲಿ ಶ್ರೀಕೃಷ್ಣ ಈ ಬಗ್ಗೆ ನೀಡಿದ ಭರವಸೆ ಹೀಗಿದೆ :

> **ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
> **ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥**

—ಗೀತಾ, ಅಧ್ಯಾಯ ೯, ಶ್ಲೋಕ ೨೬

"ಯಾವನು ನನಗೆ ಎಲೆಯನ್ನಾಗಲಿ ಹೂವನ್ನಾಗಲಿ ಹಣ್ಣನ್ನಾಗಲಿ ನೀರನ್ನಾಗಲಿ ಭಕ್ತಿಯಿಂದ ಕೊಡುವನೋ ಅಂತಹ ಶುದ್ಧಚಿತ್ತವುಳ್ಳವನು ಭಕ್ತಿಯಿಂದ ಸಮರ್ಪಿಸಿದ ಅದನ್ನು ನಾನು ಸ್ವೀಕರಿಸುತ್ತೇನೆ."

ಭಗವಂತನಿಗೆ ಅರ್ಪಿಸಿದ ಫಲ ಜಲ ಆಹಾರಾದಿಗಳನ್ನು ಭಗವಂತನು ಸೂಕ್ಷ್ಮರೂಪದಲ್ಲಿ ಸ್ವೀಕರಿಸುತ್ತಾನೆ. ಇದಕ್ಕೆ ಹಿಂದೂ ಪುರಾಣಗಳಲ್ಲಿ ಇತಿಹಾಸಗಳಲ್ಲಿ ಭಕ್ತರ ಹಾಗೂ

ಸಾಧುಸಂತರ ಜೀವನವೃತ್ತಾಂತಗಳಲ್ಲಿ ವಿಪುಲವಾಗಿ ಪ್ರಧಾನ ಮತ್ತು ಉದಾಹರಣೆಗಳು ಸಿಗುತ್ತವೆ. ಪ್ರಸಾದದ ಸ್ವೀಕಾರದಿಂದ ತ್ರಿಕರಣಶುದ್ಧಿ, ತಾಪತ್ರಯಗಳ ನಿವಾರಣೆಗಳಾಗಿ ಭಕ್ತನಿಗೆ ಭಗವದನುಗ್ರಹ ದೊರಕುತ್ತದೆ. ಅನೇಕ ವಿಧದ ರೋಗಗಳು ಭಗವತ್ಪ್ರಸಾದ ಸ್ವೀಕಾರದಿಂದ ಗುಣವಾದ ನಿದರ್ಶನಗಳು ಸಹಸ್ರಗಟ್ಟಲೆಯಲ್ಲಿ ಇವೆ.

ಪ್ರಸಾದವು ಭಗವಂತನ ಅನುಗ್ರಹದ ಸಂಕೇತಸ್ವರೂಪ ಎಂಬುದೇ ಪ್ರಸಾದದ ಹಿನ್ನೆಲೆಯಲ್ಲಿ ಅಡಗಿರುವ ತತ್ತ್ವ.

ಭೋಜನ ನಿಯಮಾವಳಿಗಳು

ಭೋಜನ ಎಂದರೆ ಆಹಾರಸ್ವೀಕಾರ ಮಾಡುವಿಕೆ. ಹಿಂದೂಧರ್ಮದ ಪ್ರಕಾರವಾಗಿ ಆಹಾರಸ್ವೀಕಾರ ಎಂದರೆ ಅದೊಂದು ಪವಿತ್ರ ಕಾರ್ಯ ಅರ್ಥಾತ್ ಯಜ್ಞವಾಗಿದೆ. ಭಗವಂತನು ಆಹಾರವನ್ನು ಪಚನಮಾಡುವವನು ತಾನೆಂದು ಹೇಳಿರುತ್ತಾನಾಗಿ ಆ ಕುರಿತಾದ ವಿವರ ಗೀತೆಯಲ್ಲಿ ಹೀಗಿರುತ್ತದೆ :

ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।
ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥
—ಗೀತಾ, ಅಧ್ಯಾಯ ೧೫, ಶ್ಲೋಕ ೧೪

"ನಾನು ಜಠರಾಗ್ನಿರೂಪದಿಂದ ಎಲ್ಲಾ ಪ್ರಾಣಿಗಳ ಶರೀರವನ್ನು ಆಶ್ರಯಿಸಿ ಪ್ರಾಣ ಅಪಾನಗಳಿಂದ ಕೂಡಿದವನಾಗಿ ನಾಲ್ಕು ವಿಧವಾದ ಭೋಜ್ಯ (ಉಣ್ಣತಕ್ಕದ್ದು) ಭಕ್ಷ್ಯ (ತಿನ್ನತಕ್ಕದ್ದು) ಚೋಷ್ಯ (ಹೀರಿಕೊಳ್ಳತಕ್ಕದ್ದು) ಲೇಹ್ಯ (ನೆಕ್ಕತಕ್ಕದ್ದು) ಅನ್ನವನ್ನು ಜೀರ್ಣವಾಗುವಂತೆ ಮಾಡುತ್ತೇನೆ."

ಆಹಾರವು ಜೀವನದ ಆಧಾರಶಕ್ತಿಯಾಗಿದೆ. ಅದನ್ನು ಸ್ವೀಕರಿಸುವವನು ಪರಮಾತ್ಮ, ಅವನಿಂದಲೇ ಶಕ್ತಿಯು ಮರಳಿ ಬರುವುದು—ಎಂಬ ತತ್ತ್ವವನ್ನು ಅನುಸರಿಸಿ ಆಹಾರವನ್ನು ಸ್ವೀಕರಿಸುವುದನ್ನು ಒಂದು ಪವಿತ್ರ ಯಜ್ಞ ಎಂದು ಪರಿಗಣಿಸಲಾಗಿದೆ.

ಭೋಜನಕ್ಕೆ ಶುದ್ಧವಾದ ಸ್ಥಳದಲ್ಲಿ ಕುಳಿತುಕೊಳ್ಳಬೇಕು. ಆಹಾರವನ್ನು ಎಲೆಯಲ್ಲಿ ಬಡಿಸಿದ ಕೂಡಲೇ ಭಗವಂತನ ಸ್ಮರಣೆಮಾಡಿ ವಿಧಿಯುಕ್ತವಾದ ಮಂತ್ರದಿಂದ ಜಲ ಪ್ರೋಕ್ಷಣೆ ಮಾಡಬೇಕು. ಇದು ಆಹಾರದ ಶುದ್ಧೀಕರಣವಿಧಿ. ಆಹಾರದಲ್ಲಿ ಅಡಗಿರುವ ಸೂಕ್ಷ್ಮದೋಷಗಳು ಅದರಿಂದ ನಿವೃತ್ತಿ ಆಗುತ್ತವೆ. ಅನಂತರ ಎಲೆಯ ಸುತ್ತಲೂ ಮಂತ್ರೋಕ್ತವಾಗಿ ನೀರನ್ನು ಸುತ್ತುಗಟ್ಟಬೇಕು. ಇದು ಆಹಾರಸ್ವೀಕಾರ ಮುಗಿಯುವ ತನಕ ಅಗೋಚರವಾದ ದುಷ್ಟಶಕ್ತಿಗಳಿಂದಾಗಲಿ, ಕ್ರಿಮಿಕೀಟಗಳಿಂದಾಗಲಿ, ಆಹಾರ ಸ್ವೀಕರಣರೂಪವಾದ ಯಜ್ಞಕ್ಕೆ ಯಾವುದೇ ರೀತಿಯ ತೊಂದರೆಗಳು ಉಂಟಾಗದಿರಲಿ ಎಂಬುದರ ಉದ್ದೇಶಿತವಾದ ಕ್ರಿಯೆ. ಅನಂತರ ನಿಶ್ಚಿತ ಪ್ರಮಾಣದಲ್ಲಿ ಕೆಲವು ನಿರ್ದಿಷ್ಟ ದೇವತೆಗಳಿಗೆ ಆಹಾರವನ್ನು ಬಲಿಯಾಗಿ ಸಮರ್ಪಿಸಬೇಕು. ಇದು ಆಹಾರಸ್ವೀಕರಣೆಯ ವೇಳೆ ಯಾವ ವಿಧದ ತೊಂದರೆಯೂ ಆಗದಿರಲಿ, ಹಾಗೂ ಯಮಾದಿ ದೇವತೆಗಳಿಗೆ ಪ್ರೀತಿಯಾಗಲಿ ಎಂಬ ದೃಷ್ಟಿಯಿಂದ ಮಂತ್ರೋಕ್ತವಾಗಿ ಮಾಡುವ ಕ್ರಿಯೆಯಾಗಿದೆ. ಅದರಂತೆ ಸ್ವಲ್ಪ ಅನ್ನದ ಅಗುಳುಗಳನ್ನು ತನಗೆ ಉಣಬಡಿಸಿದ ಎಲೆ ಅಥವಾ ತಟ್ಟೆಯ

ಬಲಬದಿಯಲ್ಲಿ ಜಲದಿಂದ ಭೂಶುದ್ಧಿಮಾಡಿ ವಿಧಿಪ್ರಕಾರವಾಗಿ ಇಡಬೇಕು. ಆಮೇಲೆ ಕೈನೀರನ್ನು ಸ್ವೀಕರಿಸಿ ಭೋಜನಕ್ಕೆ ಆರಂಭಮಾಡುತ್ತಾ ಅನ್ನದ ಸ್ವಲ್ಪ ಅಗುಳುಗಳನ್ನು ತನ್ನ ದೇಹದಲ್ಲಿನ ಪಂಚಪ್ರಾಣಗಳಿಗೆ ಅರ್ಪಿತ ಎಂದು ಐದು ಬಾರಿ ನಿಶ್ಚಿತ ಮಂತ್ರ ಯುಕ್ತವಾಗಿ ಸ್ವೀಕರಿಸಬೇಕು. ಹಾಗೆಯೇ ಪರಬ್ರಹ್ಮನಿಗೆ ಅರ್ಪಿತ ಎಂದು ಮಂತ್ರ ಯುಕ್ತವಾಗಿ ಆರನೇ ಬಾರಿ ಸ್ವಲ್ಪ ಅನ್ನದ ಅಗುಳನ್ನು ಸ್ವೀಕರಿಸಬೇಕು. ಅನಂತರ ಭಗವಂತನ ಸ್ಮರಣೆಯೊಡನೆ ಆಹಾರವನ್ನು ಸ್ವೀಕರಿಸುತ್ತಾ ಅದನ್ನು ಬ್ರಹ್ಮಯಜ್ಞ ಎಂಬ ಭಾವನೆಯಿಂದ ನಿರ್ವಹಿಸಬೇಕು. ಭೋಜನ ಮುಕ್ತಾಯದಲ್ಲಿ ಮಂತ್ರಯುಕ್ತ ವಾಗಿ ಜಲವನ್ನು ಸ್ವೀಕರಿಸಬೇಕು. ಆಹಾರಶುದ್ಧೌ ಸತ್ವಶುದ್ಧಿಃ—ಅಂದರೆ ಆಹಾರ ಶುದ್ಧಿಯಿಂದ ಸತ್ವಶುದ್ಧಿ ಉಂಟಾಗುತ್ತದೆ ಎಂಬುದಾಗಿ ಛಾಂದೋಗ್ಯ ಉಪನಿಷತ್ತಿನಲ್ಲಿ ಹೇಳಲಾಗಿದೆ. ಹೀಗಾಗಿ ಆಹಾರಸ್ವೀಕರಣೆಯ ವಿಚಾರದಲ್ಲಿ ವಿಶೇಷವಾದ ವಿಧಿನಿಯಮ ಗಳೂ, ಶುದ್ಧ-ಆಚಾರಗಳೂ ಹಿಂದೂ ಶಾಸ್ತ್ರಗ್ರಂಥಗಳಲ್ಲಿ ಹೇಳಲ್ಪಟ್ಟಿವೆ. ಆದುದ ರಿಂದಲೇ ಆಹಾರಸ್ವೀಕರಣಕಾರ್ಯವು ಬ್ರಹ್ಮನಿಂದ ಉತ್ಪತ್ತಿಯಾದುದನ್ನು ಬ್ರಹ್ಮ ನಿಗೇ ಅರ್ಪಿಸುವ ಬ್ರಹ್ಮಯಜ್ಞವೆಂದು ಪರಿಗಣಿಸಲಾಗಿರುತ್ತದೆ.

ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮ ಹೀಗೆ ಸ್ಪಷ್ಟಪಡಿಸಿರುತ್ತಾನೆ :

> ಬ್ರಹ್ಮಾರ್ಪಣಂ ಬ್ರಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾಹುತಮ್ ।
> ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥
>
> —ಗೀತಾ, ಅಧ್ಯಾಯ ೪, ಶ್ಲೋಕ ೨೪

"ಅರ್ಪಣವು ಬ್ರಹ್ಮ, ಹವಿಸ್ಸು ಬ್ರಹ್ಮ, ಬ್ರಹ್ಮರೂಪವಾದ ಅಗ್ನಿಯಲ್ಲಿ ಬ್ರಹ್ಮ ನಿಂದಲೇ ಹೋಮಮಾಡಲ್ಪಟ್ಟಿತು. ಬ್ರಹ್ಮರೂಪವಾದ ಕರ್ಮದಲ್ಲಿ ಸಮಾಧಿಸ್ಥನಾದ ಪುರುಷನಿಂದ ಹೊಂದಬೇಕಾದ್ದೂ ಬ್ರಹ್ಮವೇ."

**ಜಪಮಾಲಾ :** ಜಪಮಾಲೆಯು ತುಳಸಿ ರುದ್ರಾಕ್ಷಿ ಇತ್ಯಾದಿ ಮಣಿಗಳಿಂದ ತಯಾರಿಸಿ ದುದಾಗಿರುತ್ತದೆ. ಜಪಮಾಲೆಯಲ್ಲಿ ನೂರ ಎಂಟು ಮತ್ತು ಒಂದು ಹೀಗೆ ಒಟ್ಟು ನೂರೊಂಬತ್ತು ಮಣಿಗಳು ಇರುತ್ತವೆ. ಇವುಗಳಲ್ಲಿ ಒಂದು ಮಣಿಯು ಮಣಿಗಳ ಸಾಲಿ ನಿಂದ ಹೊರಗಿದ್ದು ಅದನ್ನು ಗುರುಮಣಿ ಅಥವಾ ದೇವಮಣಿ ಎಂದು ಕರೆಯುತ್ತಾರೆ. ಜಪಮಾಡುವಾಗ ಈ ಮಣಿಯ ತುದಿಯಿಂದ ಆರಂಭಿಸಿ ಕೊನೆಗೆ ಈ ಮಣಿಯನ್ನು ಮುಟ್ಟುವಾಗ ಒಂದು ಸುತ್ತು ಅಂದರೆ ನೂರೆಂಟು ಬಾರಿ ಆಯಿತು ಎಂದು ಲೆಕ್ಕವಿಡ ಬೇಕು. ನಾವು ದಿವಸ ಒಂದಕ್ಕೆ ಇಪ್ಪತ್ತೊಂದು ಸಾವಿರದ ಆರು ನೂರು ಬಾರಿ ಉಸಿರಾ ಡುತ್ತೇವೆ. ಈ ಉಸಿರು ಭಗವಂತನ ಶಕ್ತಿ ಹಾಗೂ ನಮ್ಮ ಜೀವನದ ಆಧಾರಶಕ್ತಿಯೂ ಆಗಿರುತ್ತದೆ. ಈ ಉಸಿರಾಟದ ಕ್ರಿಯೆಯ ಪ್ರತಿಸರ್ತಿಯಲ್ಲೂ ನಾವು ಭಗವಂತನನ್ನು ಸ್ಮರಿಸಬೇಕಾಗಿದೆ. ಹಾಗೆ ಮಾಡಲು ನಮ್ಮ ದಿನನಿತ್ಯದ ಜೀವನ ಕೆಲಸಗಳ ಮಧ್ಯೆ ಸಾಧ್ಯ ವಾಗದೇ ಇರುವುದರಿಂದ ಅಂದರೆ ಪೂರ್ತಿ ಇಪ್ಪತ್ತುನಾಲ್ಕು ಘಂಟೆಗಳ ಅವಧಿಯಲ್ಲಿ ಸದಾ ಎಚ್ಚರವಿರುವುದಿಲ್ಲವಾದ್ದರಿಂದ ಸಾಂಕೇತಿಕವಾಗಿ ಇಪ್ಪತ್ತೊಂದು ಸಾವಿರದ ಆರು ನೂರರಲ್ಲಿ ಇನ್ನೂರ ಹದಿನಾರು ನೂರರ ಪರವಾಗಿ ಪ್ರತಿ ನೂರಕ್ಕೆ ಒಂದೊಂದರಂತೆ

೨೧೬ ಬಾರಿಯಾದರೂ ಜಪಮಾಡಬೇಕು. ಈ ೨೧೬೦ರಲ್ಲಿ ದಿನದ ಇಪ್ಪತ್ತುನಾಲ್ಕು ಘಂಟೆಗಳನ್ನು ಹಗಲು-ರಾತ್ರಿ ಎಂದು ವಿಭಾಗಿಸಿದರೆ ಹಗಲಿನ ಹನ್ನೆರಡು ಘಂಟೆಗೆ ೧೦೮೦ ಬಾರಿ ಅಂದರೆ ಆ ಅವಧಿಯಲ್ಲಿ ಉಸಿರಾಡುವ ಹತ್ತುಸಾವಿರದ ಎಂಟುನೂರ ಬಾರಿಯ ಬಾಬ್ತು ೧೦೮ ಬರುವುದರಿಂದ ಕೊನೇ ಪಕ್ಷ ನೂರೆಂಟು ಬಾರಿಯಾದರೂ ಜಪಮಾಡಬೇಕು ಎಂಬುದು ನೂರೆಂಟು ಮಣಿಯ ಲೆಕ್ಕನಿಷ್ಕರ್ಷೆಯ ಅರ್ಥವಾಗಿದೆ. ನೂರ ಒಂಬತ್ತನೇ ಮಣಿ ಗುರುಮಣಿ. ಗುರು ಎಂದರೆ ನಮಗೆ ಆಧ್ಯಾತ್ಮವಿಚಾರದಲ್ಲಿ ಮಾರ್ಗದರ್ಶನ ನೀಡುವ ಭಗವಂತನೇ ತಳೆದ ಇನ್ನೊಂದು ರೂಪವಾಗಿದೆ. ಎಲ್ಲಾ ಸಾಧನೆಗಳಿಗೂ ಗುರುವೇ ಆಧಾರ ಎಂಬುದನ್ನು ಸಂಕೇತವಾಗಿ ಗುರುಮಣಿಯು ಸೂಚಿಸುತ್ತದೆ. ಹೇಗೆ ಎಂದರೆ ಜಪಸಂಖ್ಯೆಯ ನಿಷ್ಕರ್ಷೆಗೆ ಜಪಸರದಲ್ಲಿರುವ ಗುರುಮಣಿಯೇ ಆಧಾರವಾಗಿರುತ್ತದೆ. ಗುರುಮಣಿ ಇಲ್ಲದೇ ಇದ್ದರೆ ಜಪಸಂಖ್ಯೆಯನ್ನು ನಿಷ್ಕರ್ಷಿಸುತ್ತಾ ವ್ಯವಸ್ಥಾಬದ್ಧವಾಗಿ ಜಪಮಾಡಲು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಜೀವನದಲ್ಲಿ ಗುರುವಿಲ್ಲದೆ ಆಧ್ಯಾತ್ಮಸಾಧನೆಯಾಗಲಿ ಮತ್ತೇನನ್ನಾಗಲಿ ಸಾಧಿಸಲು ಸಾಧ್ಯವಿಲ್ಲ ಎಂಬುದನ್ನು ಗುರುಮಣಿಯು ಪರ್ಯಾಯವಾಗಿ ಸೂಚಿಸುತ್ತದೆ. ಗುರುಮಣಿಯಿಂದ ಹೊರಟ ಮಣಿಗಳು ಕೊನೆಗೆ ಗುರುಮಣಿಯನ್ನೇ ಮಾಲೆಯಲ್ಲಿ ಸೇರುತ್ತವೆ. ಹಾಗೆಯೇ ದೇವರಿಂದ ಹೊರಟ ಜೀವಿಗಳು ಜೀವನಚಕ್ರದಲ್ಲಿ ಸಾಗಿ ಕೊನೆಗೆ ದೇವರನ್ನೇ ಸೇರುತ್ತವೆ ಎಂಬ ತತ್ತ್ವವನ್ನು ಜಪಮಾಲೆಯ ರಚನೆಯೂ ಜಪದ ಎಣಿಕೆಯ ಕ್ರಿಯಾರಚನೆಯೂ ಚಲನೆಯೂ ಸಾಂಕೇತಿಕವಾಗಿ ತಿಳಿಸುತ್ತವೆ.

ಮುತ್ತೈದೆಯರ ಶೃಂಗಾರ : ಧರ್ಮಸಮ್ಮತವಾಗಿ ಪತಿ ಇರುವವಳೇ ಮುತ್ತೈದೆ. ಸ್ತ್ರೀಯು ಶಕ್ತಿಸ್ವರೂಪಿಣಿಯಾಗಿದ್ದಾಳೆ ಎಂದು ಹಿಂದೂಧರ್ಮಗ್ರಂಥಗಳಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಸೌಂದರ್ಯ, ತೇಜಸ್ಸು, ಸಂಪತ್ತುಗಳ ನಿಧಿಯೇ ಶಕ್ತಿದೇವತೆಯಾಗಿರುತ್ತಾಳೆ. ಶಿವ-ಶಕ್ತಿಯರು ಸಮ್ಮಿಳಿತವಾಗಿದ್ದು ಬೆಂಕಿ ಹಾಗೂ ಸುಡುವ ಶಕ್ತಿ ಇದ್ದಂತೆ ಮುತ್ತೈದೆ ಹೆಂಗಸು ಪತಿಯ ಪತ್ನಿಯೆಂದಾಗಿ ಪತಿಯೊಡನೆ ಕೂಡಿರುತ್ತಾಳೆ. ಮುತ್ತೈದೆಯ ಸರ್ವಾಂಗಶೃಂಗಾರವೆಂದರೆ ಶಕ್ತಿಯ ಆರಾಧನೆಯ ಸಂಕೇತ. ಗೃಹಸ್ಥಧರ್ಮ ಪಾಲನೆಯಾಗಬೇಕಾದರೆ, ಜಗದ ಜೀವಕೋಟಿಗಳು ಜನ್ಮಪಡೆಯಬೇಕಾದರೆ ಸ್ತ್ರೀಯು ಮಾತೆಯಾಗಿ ಕಾರ್ಯಭಾರವನ್ನು ನಿರ್ವಹಿಸಬೇಕು. ಜಗನ್ಮಾತೆಯಾಗಿ ಶಕ್ತಿದೇವಿಯು ಇರುವಂತೆ ಜಗತ್ತಿನಲ್ಲಿ ಲೌಕಿಕ ದೃಷ್ಟಿಯಿಂದ ಶಕ್ತಿದೇವಿಯಾಗಿದ್ದು ಮಾತೆಯಾಗಿರುವವಳು ಮತ್ತು ಸಂಸಾರಜೀವನದ ಆಧಾರಶಕ್ತಿಯೆಂಬಂತೆ ಇರುವವಳು ಮುತ್ತೈದೆ ಆಗಿರುತ್ತಾಳೆ. ಹಾಗಾಗಿ ಶೃಂಗಾರಯುತವಾಗಿ ಅವಳಿಗೆ ಅರ್ಪಿಸುವ, ಮನ್ನಣೆ ನೀಡುವ ಅಲಂಕಾರ-ಆಭರಣ-ವಸ್ತ್ರಭೂಷಣಾದಿಗಳು ಇವುಗಳೆಲ್ಲ ಸಾಂಕೇತಿಕವಾಗಿ ಶ್ರೀದೇವಿ ಜಗನ್ಮಾತೆ ಅರ್ಥಾತ್ ಶಕ್ತಿಮಾತೆಗೆ ನೀಡಿದಂತೆಯೇ ಸರಿ ಎಂಬುದೇ ಈ ಮುತ್ತೈದೆ ಶೃಂಗಾರ ಮತ್ತು ಗೌರವಗಳ ಹಿನ್ನೆಲೆಯಲ್ಲಿ ಅಡಕವಾಗಿರುವ ತತ್ತ್ವವಾಗಿದೆ.

ಕಾವಿಬಟ್ಟೆ : ಕಾವಿಯ ಬಣ್ಣವು ಬೆಂಕಿಯ ಬಣ್ಣವಾಗಿದೆ. ಬೆಂಕಿಯು ಸುಡುವ ಶಕ್ತಿಯುಳ್ಳದ್ದಾಗಿದೆ. ಕಾಮಕ್ರೋಧಾದಿ ಅರಿಷಡ್ವೈರಿಗಳನ್ನು, ಜಗದ ವ್ಯಾಮೋಹ-ಬಂಧ-

ಸಂಬಂಧಗಳನ್ನು ತ್ಯಾಗವೈರಾಗ್ಯಗಳೆಂಬ ಅಗ್ನಿಯಲ್ಲಿ ದಹಿಸಿ ಸರ್ವಸಂಗಪರಿತ್ಯಾಗಿಯಾಗ ಬೇಕು ಎಂಬುದರ ಸಂಕೇತವೇ ಕಾವಿಬಟ್ಟೆ. ಕಾವಿ ಧರಿಸಿದವರಿಗೆ ತಮ್ಮ ವ್ರತ, ನಿರ್ಧಾರ ಗಳನ್ನು ಸದಾ ನೆನಪು ಮಾಡಿಕೊಂಡು ತಮ್ಮ ಪಥದಿಂದ ವಿಚಲಿತರಾಗದೆ ಸದಾ ಎಚ್ಚರಿ ಸುವಂತಹ ಬಾಹ್ಯ ಸಾಂಕೇತಿಕ ಸಾಧನವೇ ಕಾವಿಬಟ್ಟೆ. ಅಗ್ನಿಗೆ ಕಾಲ, ದೇಶ, ಸನ್ನಿವೇಶ ಗಳ ಭೇದ ಇಲ್ಲದೆ ಹೇಗೆ ಅದು ಸುಡುವ ಶಕ್ತಿಯಿಂದ ಕೂಡಿದೆಯೋ ಹಾಗೆಯೇ ಕಾವಿ ಧಾರಿಗಳಾದ ಸಂನ್ಯಾಸಿಗಳಿಗೂ ತಮ್ಮ ಅನುಗ್ರಹವನ್ನು ಬೀರುತ್ತಾ ಲೋಕಕಲ್ಯಾಣ ಕಾರ್ಯ ಎಸಗಲು ಕಾಲ, ದೇಶ, ಸನ್ನಿವೇಶಗಳ ಭೇದವಿಲ್ಲ ಎಂಬುದನ್ನು ಕಾವಿಬಟ್ಟೆಯು ಸಾಂಕೇತಿಕವಾಗಿ ಸೂಚಿಸುತ್ತದೆ.

### ಮಂತ್ರಶಕ್ತಿ ವಿಚಾರಗಳು

ಮಂತ್ರ ಎಂದರೆ ಮನನವನ್ನು ಮಾಡುವುದರ ಮೂಲಕ (ಮಂತ್ರೋಪಾಸಕನಿಗೆ) ಮುಕ್ತಿಯನ್ನು ಗಳಿಸಿಕೊಡುವ ಅಕ್ಷರಯುಕ್ತವಾದ ಶಬ್ದಸಾಧನವಾಗಿರುತ್ತದೆ. ದೇವರ ನಿಶ್ಚಿತವಾದ ರಾಮ, ಕೃಷ್ಣ, ಕಾಳಿ, ಲಕ್ಷ್ಮಿ, ಶಾರದೆ ಇತ್ಯಾದಿ ಹೆಸರುಗಳು, ಗೂಢವಾದ ಅರ್ಥವುಳ್ಳ ಓಂ ಹ್ರೀಂ ದುಂ ಕ್ಲೀಂ ಇತ್ಯಾದಿ ಬೀಜಾಕ್ಷರಗಳು, ದೇವ-ದೇವತೆಯರ ಕುರಿತಾದ ಕೆಲವು ಸ್ತುತಿಗಳು, ಇವುಗಳೆಲ್ಲ ಮಂತ್ರಗಳಾಗಿರುತ್ತವೆ. ನಾವು ಮಾತನಾಡುವ ಮಾತು ಆದರಿಂದ ಉತ್ಪತ್ತಿಯಾಗುವ ಶಬ್ದ ಅಥವಾ ಸ್ವರ ಇವುಗಳಿಂದ ಉಂಟಾಗುವ ನಾದದ ಅಲೆಗಳು ಮತ್ತು ಅವುಗಳಿಂದಾಗಿ ನಮ್ಮ ಹಾಗೂ ಇತರರ ಶರೀರದ ಮೇಲೆ ಉಂಟಾಗುವ ಪರಿಣಾಮ ಇವುಗಳನ್ನು ಸರಿಯಾಗಿ ಪರಿಶೀಲಿಸಿ ಒಂದಕ್ಕೊಂದು ಸಂಬಂಧ ವಿದೆ ಎಂಬ ತತ್ತ್ವವು ಮಂತ್ರಶಾಸ್ತ್ರದಲ್ಲಿ ಅಡಗಿದೆ. ನಾವು ಉಚ್ಚರಿಸುವ ಪ್ರತಿಯೊಂದು ಶಬ್ದವೂ ಕೂಡ ನಮ್ಮ ಶರೀರದ ಒಳಗೆ ಸಂಬಂಧಿಸಿದ ನರನಾಡಿಗಳ ಮೇಲೆ ಹಾಗೂ ಅಂಗಾಂಗಗಳ ಮೇಲೆ ಸೂಕ್ಷ್ಮವಾದ ಪರಿಣಾಮವನ್ನು ಬೀರುತ್ತದೆ. ಮಾತ್ರವಲ್ಲದೆ ನಾವು ಉಚ್ಚರಿಸುವ ಪ್ರತಿಶಬ್ದವೂ ಕೂಡ ತನ್ನ ನಾದದ ಅಲೆಗಳಿಂದಾಗಿ ನಮ್ಮ ಹಾಗೂ ಇತರರ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡುತ್ತದೆ. ಈ ನಾದದ ಅಲೆಗಳನ್ನು ಉಪಯೋಗಿಸಿ ತನ್ಮೂಲಕ ದೇಹದ ಆರೋಗ್ಯ, ಗಿಡಮರಗಳ ಬೆಳವಣಿಗೆ, ಮನುಷ್ಯನ ಮನಸ್ಸಿನ ಆರೋಗ್ಯದ ವೃದ್ಧಿ ಇವುಗಳನ್ನು ಸಾಧಿಸಲು ಸಾಧ್ಯವಿದೆ. ಅಲ್ಲದೆ ನಾದಶಕ್ತಿ ಯಿಂದಾಗಿ ಇತರರ ಮನಸ್ಸು ಹಾಗೂ ಜೀವನದ ಸ್ಥಿತಿಗತಿ ದೇಹಗಳ ಮೇಲೆ ಬಯಸಿದ ರೀತಿಯಲ್ಲಿ ಪ್ರಭಾವವನ್ನು ಬೀರಲೂ ಸಾಧ್ಯವಿದೆ ಎಂಬ ತತ್ತ್ವವು ಮಂತ್ರಶಾಸ್ತ್ರದಲ್ಲಿ ಸೇರಿರುತ್ತದೆ. ಆಯಾ ಅಕ್ಷರಗಳ ಸಂಯೋಜನೆಯಿಂದ ಆದ ಆಯಾ ಶಬ್ದಗಳನ್ನು ಉಚ್ಚರಿಸಿದಾಗ ಮತ್ತು ಅದನ್ನು ಬಾರಿಬಾರಿ ಆವರ್ತಿಸಿ ಉಚ್ಚರಿಸಿದಾಗ ಅದರಿಂದ ತನ್ನ ಹಾಗೂ ಇತರರ ಮೇಲೆ ಎಂತಹ ಪರಿಣಾಮ ಹೇಗೆ ಉಂಟಾಗುತ್ತದೆ ಎಂಬುದನ್ನು ನಮ್ಮ ಹಿಂದಿನ ಋಷಿಗಳು ಸ್ವಂತವಾದ ಪ್ರಯೋಗ-ಪರಿಶೀಲನೆಗಳಿಂದ ಕಂಡುಹಿಡಿದಿರು ತ್ತಾರೆ. ಅದಕ್ಕೆ ಅನುಸಾರವಾಗಿ ಕೆಲವು ಮುಖ್ಯವಾದ ಮಂತ್ರಗಳು ಮೂಲಮಂತ್ರಗಳು ಬೀಜಾಕ್ಷರಗಳು ಇತ್ಯಾದಿಗಳು ಮಂತ್ರಶಾಸ್ತ್ರದಲ್ಲಿ ಅಡಕವಾಗಿರುತ್ತವೆ. ಈ ಮಂತ್ರ ಗಳನ್ನು ಎಷ್ಟೆಷ್ಟು ಬಾರಿ ಉಚ್ಚರಿಸಬೇಕು, ಹೇಗೆ ಉಚ್ಚರಿಸಬೇಕು ಎಂಬ ನಿಯಮಗಳು,

ವಿಧಿವಿಶೇಷಗಳು ಇದ್ದು ಅದರಂತೆ ಅನುಸರಿಸಿ ಮಂತ್ರ ಉಚ್ಚಾರಣೆ ಉಪಾಸನೆಯನ್ನು ಮಾಡಿದರೆ ಶಬ್ದದ ಶಕ್ತಿ ಉತ್ಪತ್ತಿಯಾಗಿ ಅದು ಮನುಷ್ಯನ ಸ್ಥೂಲ, ಸೂಕ್ಷ್ಮಶರೀರಗಳ ಮೇಲೆ ಅನುರೂಪವಾದ ಪರಿಣಾಮವನ್ನು ಬೀರುತ್ತದೆ. ಪ್ರಪಂಚದಲ್ಲಿ ಇರುವ ಸರ್ವ ಚರಾಚರವಸ್ತುಗಳ ಹಿನ್ನೆಲೆಯಲ್ಲಿ ಇರುವುದು ಬೇರೆ ಏನೂ ಇಲ್ಲದೆ ಶಕ್ತಿಯೇ ಆಗಿದ್ದು ಅದು ಶಬ್ದರೂಪವಾಗಿ, ಅಲೆಯ ರೂಪವಾಗಿ ಪರಿಣಾಮವನ್ನು ಬೀರುತ್ತದೆ ಎಂದು ಮಂತ್ರಶಾಸ್ತ್ರದಲ್ಲಿ ಇರುವ ವಿವರವಾದ ವಿವರಣೆಗಳಿಂದ ತಿಳಿದುಬರುತ್ತದೆ. ಈ ತತ್ತ್ವವನ್ನು ಆಧರಿಸಿ ರಚಿತವಾದ ಅನೇಕ ಸ್ತೋತ್ರಗಳೂ ಮಂತ್ರಗಳೂ ಹಿಂದೂ ಧರ್ಮಗ್ರಂಥಗಳಲ್ಲಿ ವಿಪುಲಸಂಖ್ಯೆಯಲ್ಲಿ ದೊರೆಯುತ್ತವೆ. ಮಂತ್ರಗಳನ್ನು ಸರಿಯಾದ ನಿಯಮಿತ ರೀತಿಯಲ್ಲಿ ಉಚ್ಚರಿಸಿದಾಗ ಅವುಗಳಿಂದ ಅನುಗುಣವಾದ ಫಲ ಬರುವಂತೆ ತಪ್ಪಾಗಿ ಉಚ್ಚರಿಸಿದಾಗ ಅವುಗಳಿಂದ ವ್ಯತಿರಿಕ್ತವಾದ ಫಲವೂ ಬಂದೇ ಬರುತ್ತದೆ. ಮಂತ್ರಗಳ ಸರಿಯಾದ ಉಚ್ಚಾರಣೆಯಿಂದ ಮತ್ತು ಉಪಾಸನೆಯಿಂದ ದೇಹಮನಸ್ಸುಗಳ ಆರೋಗ್ಯ ವೃದ್ಧಿಹೊಂದಿ ಲೌಕಿಕ ಮತ್ತು ಆಧ್ಯಾತ್ಮಿಕವಾದ ಉನ್ನತಿಯಾದೀತಾದರೆ ಮಂತ್ರಗಳ ತಪ್ಪಾದ ಉಚ್ಚಾರಣೆಯಿಂದ ದೇಹಮನಸ್ಸುಗಳ ಆರೋಗ್ಯವು ಕೆಟ್ಟೀತು. ಲೌಕಿಕ ಆಧ್ಯಾತ್ಮಿಕ ಉನ್ನತಿ, ಆರೋಗ್ಯಗಳು ಅವನತಿಯನ್ನು ತಳೆದೀತು. ಮಂತ್ರಶಬ್ದಗಳ ಉಚ್ಚಾರಣೆಯಿಂದ ಶಬ್ದದ ಅಲೆಗಳು ಉತ್ಪತ್ತಿಯಾಗಿ ಮಂತ್ರಶಕ್ತಿಯು ತನ್ಮೂಲಕ ಹುಟ್ಟುತ್ತದೆ. ಆ ಶಕ್ತಿಯು ಸ್ಥೂಲ-ಸೂಕ್ಷ್ಮರೂಪಗಳಲ್ಲಿ ಮತ್ತು ಮನೋಮಂಡಲಗಳಲ್ಲಿ ಪ್ರಕಟಗೊಂಡು ಪ್ರಭಾವವನ್ನು ಬೀರುತ್ತದೆ. ಶ್ರದ್ಧೆಭಕ್ತಿಗಳಿಂದ ಕೂಡಿ ಮಂತ್ರವನ್ನು ಉಚ್ಚರಿಸುವುದರಿಂದ ನಿಶ್ಚಿತವಾದ ಫಲವು ಬಂದೇ ಬರುತ್ತದೆ. ವೇದೋಕ್ತವಾದ ಸೂಕ್ತಗಳು, ಇತರ ಮಂತ್ರಗಳು, ಲಲಿತಾಸಹಸ್ರನಾಮ, ವಿಷ್ಣುಸಹಸ್ರನಾಮ, ಶಿವಸಹಸ್ರನಾಮ, ಗಣೇಶಸಹಸ್ರನಾಮ ಇತ್ಯಾದಿ ಸಹಸ್ರನಾಮಗಳ ವಿಧಿಪ್ರಕಾರವಾದ ಪಾರಾಯಣ, ಪ್ರಣವ (ಓಂ) ಗಾಯತ್ರಿ ಅಷ್ಟಾಕ್ಷರಿ ಪಂಚಾಕ್ಷರಿ ಪಂಚದಶಿ ಇತ್ಯಾದಿ ಮಂತ್ರಗಳ ಉಚ್ಚಾರಣೆ, ಜಪ ಉಪಾಸನೆಗಳು ಮಂತ್ರಶಕ್ತಿಯನ್ನು ಉತ್ಪತ್ತಿಮಾಡುವವುಗಳಾಗಿದ್ದು ಇವುಗಳಿಂದ ಮನುಷ್ಯನು ಲೌಕಿಕ ಹಾಗೂ ಪಾರಲೌಕಿಕ ಸುಖಶಾಂತಿಗಳನ್ನು ಪಡೆಯಲು ಸಾಧ್ಯವಿದೆ. ಶಬ್ದಶಕ್ತಿಯು ಮಂತ್ರಪೂರ್ವಕವಾಗಿ ಹೊರಹೊಮ್ಮುತ್ತದೆ. ಸಂಗೀತದ ಮೂಲಕ ನಾದಬ್ರಹ್ಮದ ಉಪಾಸನೆ ಮಾಡಿ ಮುಕ್ತಿಯನ್ನು ಪಡೆಯಲು ಸಾಧ್ಯವಿದೆ. ಹಾಗೆಯೇ ಇಹಲೋಕದ ಬಾಳಿನ ಅವಧಿಯಲ್ಲಿ ಆರೋಗ್ಯ, ಸಂಪದಭಿವೃದ್ಧಿಗಳನ್ನು ಪಡೆಯಲೂ ಸಾಧ್ಯವಿದೆ. ಈ ಮಂತ್ರಶಕ್ತಿ, ಸಂಗೀತಶಕ್ತಿ ಇವುಗಳ ವಿಚಾರವಾಗಿ ಭಾರತದಲ್ಲಿ ಬಾಳಿ ಬೆಳಗಿದ ಅದೆಷ್ಟೋ ಸಂತರು, ಮಹಾತ್ಮರು, ಸಂಗೀತಶಾಸ್ತ್ರಪಾರಂಗತರು ಸಾಕ್ಷಿ ಹಾಗೂ ಆದರ್ಶರಾಗಿದ್ದಾರೆ. ಇವರುಗಳ ಜೀವನವನ್ನು ಪರಿಶೀಲಿಸಿದರೆ ಮಂತ್ರಶಕ್ತಿಯಿಂದಾಗಿ ಅವರು ನಡೆಸಿದ ಅನೇಕ ವಿಧದ ಮಹತ್ಕಾರ್ಯಗಳು ನಮಗೆ ತಿಳಿದುಬರುತ್ತವೆ.

ಮಂತ್ರಗಳ ದಿನನಿತ್ಯದ ಪಠನ ಪಾರಾಯಣ ಜಪಧ್ಯಾನಾದಿಗಳು ಇವುಗಳು ಹಿಂದೂ ಧರ್ಮದಲ್ಲಿ ವಿಶೇಷವಾದ ಪ್ರಾಮುಖ್ಯ ಉಳ್ಳವುಗಳಾಗಿವೆ. ಮಂತ್ರಗಳೆಲ್ಲೆಲ್ಲಾ ಪ್ರಣವ ಮಂತ್ರ ಎಂದರೆ 'ಓಂ' ಎಂಬ ಮಂತ್ರವು ಶ್ರೇಷ್ಠವಾಗಿದ್ದು ಅದು ಸರ್ವಸ್ವರಶಬ್ದಗಳ ಮೂಲವಾಗಿರುವುದಾಗಿದೆ.

ಮಾತ್ರವಲ್ಲದೆ 'ಓಂ' ಎನ್ನುವುದು ಪರಚೈತನ್ಯದ ಶಬ್ದ ಹಾಗೂ ವರ್ಣಪ್ರತೀಕ ವಾಗಿದ್ದು ಅನಾಹತ ಎಂದರೆ ಉಚ್ಚಾರಣೆ ಮಾಡದೇ ಸ್ವಯಂ ಶಬ್ದಪೂರ್ಣವಾದ ದಿವ್ಯ ಧ್ವನಿಯಾಗಿದೆ ಎಂದು ಹಿಂದೂಧರ್ಮದ ಗ್ರಂಥಗಳಲ್ಲಿ ಸ್ಪಷ್ಟವಾದ ಉಲ್ಲೇಖಗಳಿವೆ.

ಮಂತ್ರಗಳನ್ನು ಸರಿಯಾಗಿ ಉಚ್ಚರಿಸಿ ಉಪಾಸನೆಮಾಡಿ ಮಂತ್ರಶಕ್ತಿಯನ್ನು ಕೂಡಿಸಿ ಕೊಂಡವರು ಕೊನೆಗೆ ಮಂತ್ರಸಿದ್ಧಿಯನ್ನು ಪಡೆಯುತ್ತಾರೆ. ಅವರೇ ಮಂತ್ರಸಿದ್ಧರು. ಅವರು ಮಂತ್ರವನ್ನು ಇತರರಿಗೆ ಉಪದೇಶವಾಗಿ ದೀಕ್ಷೆಯ ಮೂಲಕ ನೀಡಿದಾಗ ದೀಕ್ಷೆ ಪಡಕೊಂಡವನಿಗೆ ಮಂತ್ರೋಪದೇಶಕರಿಂದ ಸ್ವಲ್ಪಾಂಶ ಮಂತ್ರದ ಚೇತನವು ಹರಿದು ಬರುತ್ತದೆ. ಆಗ ಮಂತ್ರದೀಕ್ಷೆಪಡೆದವನು ದೇಹಮನಗಳಲ್ಲಿ ಪರಿಶುದ್ಧನಾಗಿ ದೀಕ್ಷಾ ರೂಪವಾಗಿ ಪಡೆದ ಮಂತ್ರಗಳನ್ನು ಉಚ್ಚರಿಸಲು ಮತ್ತು ಉಪಾಸನೆ ಮಾಡಲು ಅರ್ಹನಾಗುತ್ತಾನೆ. ಹೀಗೆ ದೀಕ್ಷೆಯ ಮೂಲಕ ಮಂತ್ರ ಉಪಾಸಕನಾಗಲು ಹೊರಟ ವನಿಗೆ ಮಂತ್ರಸಿದ್ಧಿಯಾಗಲು ಗುರುವಿನಿಂದ ಅಗತ್ಯದ ಚೇತನ ಆಶೀರ್ವಾದಗಳು ಕೂಡ ದೊರೆಯುತ್ತವೆ.

ಮಾತ್ರವಲ್ಲದೆ ಯಾವ ಯಾವ ಮಂತ್ರಗಳ ಬೀಜಾಕ್ಷರಗಳನ್ನು ಯಾವ ಯಾವ ವ್ಯಕ್ತಿಗಳ ಮೂಲಕ ಉಚ್ಚಾರಮಾಡಲ್ಪಟ್ಟಾಗ ಎಂತೆಂತಹ ಫಲ ಬರುವುದು, ಯಾವ ವ್ಯಕ್ತಿಯ ದೈಹಿಕ ಮತ್ತು ಮಾನಸಿಕ ಸ್ಥಿತಿಗತಿಗಳಿಗೆ ಅನುಸಾರವಾಗಿ ಎಂತೆಂತಹ ಬೀಜಾಕ್ಷ ರಗಳ ಉಚ್ಚಾರಣೆ ಫಲದಾಯಕವಾಗಬಲ್ಲುದು ಎಂಬ ವಿವರಗಳು ಮಂತ್ರಸಿದ್ಧಿಯಾದ ಗುರುವಿಗೆ ಅರ್ಥಾತ್ ಮಂತ್ರಸಿದ್ಧ ಮಹಾನುಭವ ವ್ಯಕ್ತಿಗೆ ತಿಳಿದಿರುತ್ತದೆ. ಆದ್ದರಿಂದ ಮಂತ್ರೋಪಾಸನೆಯ ಸಂಬಂಧದಲ್ಲಿ ಮಂತ್ರೋಪದೇಶ ಪಡೆಯುವಿಕೆಯು ಬಹಳ ಮುಖ್ಯವಾದ ಮತ್ತು ಅಗತ್ಯವಾದ ಅಂಶವಾಗಿದೆ. ಹಾಗಾಗಿ ಮಂತ್ರಗಳು ಯಾವುದೇ ಇರಲಿ, ಅವನ್ನು ಮಂತ್ರಸಿದ್ಧ ಗುರುಗಳ ಕೈಯಿಂದ ಉಪದೇಶರೂಪದಲ್ಲಿ ಪಡೆಯದೆ ಇದ್ದರೆ ಮಂತ್ರ ಉಪಾಸನೆಯಿಂದ ಹಿತವಾದ ಫಲ ದೊರೆಯಲಾರದು ಎನ್ನುವುದರಲ್ಲಿ ಸಂದೇಹವಿಲ್ಲ.

ಮಂತ್ರಕ್ಕೂ ಮಂತ್ರದ ದೇವತೆಗೂ ಯಾವ ವ್ಯತ್ಯಾಸವೂ ಇರುವುದಿಲ್ಲ. ದೈವೀ ಶಕ್ತಿಯು ಮಂತ್ರಗಳಲ್ಲಿ ನಿಹಿತವಾಗಿದೆ. ಮಂತ್ರಗಳ ಉಚ್ಚಾರಣೆ ಜಪಪುನಶ್ಚರಣೆಗಳಿಂದ ಉತ್ಪತ್ತಿಯಾದ ಮಂತ್ರಶಕ್ತಿಯನ್ನು ಉಪಯೋಗಿಸಿ ಜೀವನದಲ್ಲಿ ಸಾಧಿಸಲು ಸಾಧ್ಯ ವಾಗದ್ದು ಯಾವುದೂ ಇಲ್ಲ. ಕಾಹಿಲೆಗಳ ಗುಣಪಡಿಸುವಿಕೆ, ಭೂತಪ್ರೇತಾದಿಗಳ ಉಚ್ಚಾಟನೆ, ಗ್ರಹಚಾರದೋಷಗಳ ನಿವಾರಣೆ, ಕಳ್ಳನು ವಸ್ತುಗಳನ್ನು ತಾನೇ ತಂದು ಕೊಡುವಿಕೆ, ಸುಖಸಂಪತ್ತುಗಳ ಸಂಪಾದನೆ, ಯುದ್ಧಹೋರಾಟಗಳಲ್ಲಿ ಜಯಗಳಿಸುವಿಕೆ, ವಿದ್ಯೆವಿವೇಕಗಳ ವರ್ಧನ, ಎಲ್ಲಕ್ಕಿಂತ ಮಿಗಿಲಾಗಿ ಆತ್ಮಸಾಕ್ಷಾತ್ಕಾರ—ಹೀಗೆ ಹಲವು ರೀತಿಯ ಸಾಧನೆಗಳನ್ನು ಮಂತ್ರದಿಂದ ಸಾಧಿಸಲು ಸಾಧ್ಯವಿದೆ. ಮಂತ್ರದಿಂದ ಹೇಯವಾದ ಕೃತ್ಯಗಳನ್ನು ಸಾಧಿಸಲೂ ಸಾಧ್ಯವಿದೆ. ಆದರೆ ಅಂತಹ ಕೃತ್ಯಗಳ ಪ್ರಭಾವ–ಪರಿಣಾಮ ಗಳನ್ನು ತಡೆದು ಅವುಗಳನ್ನು ನಿಸ್ತೇಜಗೊಳಿಸಲೂ ಮಂತ್ರೋಪಾಸನೆಯಿಂದ ಸಾಧ್ಯವಿದೆ. ಮಂತ್ರಗಳ ಬಲಾಬಲಗಳನ್ನು ಗ್ರಹಿಸಿ ಜೀವನದಲ್ಲಿ ಅವನ್ನು ಉಪಯೋಗಿಸುವವರಿಗೆ

ಮಾಂತ್ರಿಕರು, ಮಂತ್ರವಾದಿಗಳು, ಮಂತ್ರಸಿದ್ಧರು, ಮಂತ್ರಜ್ಞರು ಎಂಬಿತ್ಯಾದಿ ಹೆಸರುಗಳಿವೆ.

ಮಂತ್ರಗಳನ್ನು ಒಂದೆರಡು ಬಾರಿಯಾಗಲಿ, ಹತ್ತಾರು ಬಾರಿಯಾಗಲಿ ಉಚ್ಚರಿಸಿದರೆ ಅಥವಾ ಜಪ ಮಾಡಿದರೆ ಫಲ ತರುತ್ತದೆಂದಾಗಲಿ, ಮಂತ್ರಸಿದ್ಧಿ ಆಗುತ್ತದೆ ಎಂದಾಗಲಿ ಹೇಳುವಂತಿಲ್ಲ. ಆಯಾಯ ಮಂತ್ರಗಳನ್ನು ಎಷ್ಟೆಷ್ಟು ಬಾರಿ ಜಪಿಸಬೇಕು, ಅವನ್ನು ಹೇಗೆ ಹೇಗೆ ಜಪಿಸಬೇಕು ಎಂಬ ವಿಧಿನಿಯಮಗಳು ಇವೆ. ಅದರಂತೆ ಅನುಸರಿಸಿ ಜಪಿಸಿದಾಗ ಮಂತ್ರಸಿದ್ಧಿಯಾಗುತ್ತದೆ. (ಈ ವಿವರಗಳೆಲ್ಲವನ್ನೂ ಗುರುಮುಖೇನವೇ ತಿಳಿದುಕೊಳ್ಳಬೇಕು.)

ಹೀಗೆ ಹಿಂದೂಧರ್ಮದ ಪುರಾಣಸಂಗತಿಗಳು, ಸಂಕೇತಸಂಗತಿಗಳು. ಮಂತ್ರಶಕ್ತಿ ವಿಚಾರಗಳು ಇವುಗಳಲ್ಲಿ ಗಹನವಾದ ತತ್ತ್ವ-ಸತ್ಯವಿಚಾರಗಳು ಅಡಕವಾಗಿರುತ್ತವೆ. ಇವುಗಳೆಲ್ಲಾ ತರ್ಕ ಮತ್ತು ವಾದಗಳಿಗಿಂತ ಅನುಷ್ಠಾನ ಮತ್ತು ಅನುಸಂಧಾನಗಳಿಂದ ಹೊಳೆಯುವವುಗಳಾಗಿವೆ. ಹಾಗಾಗಿ ಸೂಕ್ತವಾದ ರೀತಿಯಲ್ಲಿ ಅನುಷ್ಠಾನ ಮಾಡದೆ ಪರಿಶೀಲಿಸಹೊರಡುವುದು ಅಥವಾ ಅಲಕ್ಷ್ಯ-ಅಸಡ್ಡೆಗಳ ನಿಲುವು ತಳೆಯುವುದು ಅಸಮಂಜಸ ಹಾಗೂ ಅವಿವೇಕ ಎಂಬುದರಲ್ಲಿ ಸಂದೇಹವಿಲ್ಲ.

## ೧೧

# ಹಿಂದೂಧರ್ಮದ ಒಳಭೇದದ ವಿವಿಧ ಪಂಥಗಳು

ಹಿಂದೂಧರ್ಮ ಎಂದರೆ ಹಲವು ಮತಗಳಿಂದ ಕೂಡಿರುವ ವಿವಿಧ ಪಂಥಗಳ ಒಕ್ಕೂಟ ಎಂದರೆ ತಪ್ಪಾಗಲಾರದು. ಒಂದೇ ಸತ್ಯವನ್ನು ಸೇರಲು ಹಲವು ಪಥಗಳಿದ್ದು, ಅವೆಲ್ಲವನ್ನೂ ಹಿಂದೂಧರ್ಮವು ತನ್ನ ವಿಶಾಲಗರ್ಭದಲ್ಲಿ ಅಡಗಿಸಿಕೊಂಡಿದೆ. ಇರುವ ಸತ್ಯ ಒಂದೇ ಆದರೂ ಕೂಡ ಕಾಲಕಾಲಕ್ಕೆ ಸರಿಯಾಗಿ ಸಮಾಜ, ಸನ್ನಿವೇಶ, ಪರಿಸ್ಥಿತಿ (ಪರಂಪರೆ)ಗಳನ್ನು ಅನುಸರಿಸಿ ಸತ್ಯಸಾಕ್ಷಾತ್ಕಾರದ ಬಗೆಗೆ ವಿವಿಧ ಅಭಿಪ್ರಾಯಗಳು ಮೂಡಿಬಂದವು. ಒಂದೇ ಊರನ್ನು ಸೇರಲು ವಿವಿಧ ಹಾದಿಗಳು ಇರುವಂತೆ, ಆ ವಿವಿಧ ಹಾದಿಗಳ ಮೂಲಕ ಬೇರೆಬೇರೆ ವಾಹನಗಳು ಸಾಗಿ ಊರನ್ನು ತಲಪುವಂತೆ, ಒಂದೇ ಸತ್ಯವನ್ನು ಸೇರಲು ವಿವಿಧ ಮತಪಥಗಳೂ, ಅವುಗಳನ್ನು ಅನುಸರಿಸುವವರದೇ ಆದ ಪಂಥಗಳೂ ಹುಟ್ಟಿಕೊಂಡವು. ಮಾನವರಲ್ಲಿ ಎಲ್ಲರೂ ಒಂದೇ ಬುದ್ಧಿ, ದೃಷ್ಟಿ ಹಾಗೂ ಸಮಾನವಾದ ಸ್ವಭಾವಗಳಿಂದ ಕೂಡಿರದಿರುವ ವೈವಿಧ್ಯವನ್ನು ನಾವು ಪ್ರಕೃತಿಯಲ್ಲಿ ಕಾಣುತ್ತೇವೆ. ಹಾಗೆಯೇ ಮತಗಳ ವಿಚಾರವಾಗಿಯೂ ವಿವಿಧ ರೀತಿಯ ಅಭಿಪ್ರಾಯಗಳು ಮೂಡಿಬಂದಿರುವುದು ಅನಿವಾರ್ಯವೇ ಸರಿ. ಎಲ್ಲಾ ಪಂಥಗಳ ಮತ ಹಾಗೂ ನಿಲುವನ್ನು ನೋಡಿದರೆ ಮೂಲವಾದ ಅಂಶಗಳಲ್ಲಿ ಏಕಭಾವವೇ ಕಂಡುಬರುತ್ತಿದ್ದು ಕೆಲವು ಅಂಶಗಳಲ್ಲಿ ಮಾತ್ರ ಅಲ್ಪಸ್ವಲ್ಪ ವ್ಯತ್ಯಾಸಗಳು ಕಂಡುಬರುತ್ತವೆ. ಮೂಲಭೂತವಾದ ಅಂಶಗಳ ವಿಚಾರದಲ್ಲಿ ಏಕೀಭಾವ ಇರುವುದನ್ನು ಗಮನಿಸಿದಾಗ ಆ ದೃಷ್ಟಿಯಿಂದ ಈ ಅಲ್ಪಸ್ವಲ್ಪ ವ್ಯತ್ಯಾಸಗಳು ಕೇವಲ ಗೌಣವಾಗಿ ತೋರುತ್ತವೆ. ವಿವಿಧ ಮತಗಳಲ್ಲಿ ಪರಸ್ಪರ ಕಾಣುವ ವ್ಯತ್ಯಾಸಗಳು ನಿಜವಾದರೂ ಅವುಗಳ ಹಿನ್ನೆಲೆಯಲ್ಲಿ ಮೂಲಭೂತವಾದ ವಿಚಾರಗಳ ಸಾಮರಸ್ಯ-ಏಕತೆಗಳು ಇವೆ ಎಂಬುದನ್ನು ಗಮನಿಸಬೇಕು.

ಒಂದೇ ತಾಯಿತಂದೆಯರ ಮಕ್ಕಳಲ್ಲಿ ವೈವಿಧ್ಯಪೂರ್ಣವಾದ ಬುದ್ಧಿ, ವಿಚಾರದೃಷ್ಟಿ ಇರುವುದು ಸಹಜ ಹಾಗೂ ಅನಿವಾರ್ಯ. ಅವರ ಜೀವನಕ್ರಮವೂ ವ್ಯತ್ಯಾಸದಿಂದ ಕೂಡಿರಬಹುದು. ಆದರೆ ಅವರು ಮೂಲಭೂತವಾಗಿ ಒಂದೇ ತಾಯಿತಂದೆಯರ ಮಕ್ಕಳಾಗಿದ್ದು ಪರಸ್ಪರ ಒಡಹುಟ್ಟಿನ ಸಂಬಂಧವಿರುವವರು ಮತ್ತು ಒಂದೇ ಕುಲಕ್ಕೆ

ಸೇರಿದವರು ಎಂದಾಗಿರುವಂತೆ ಹಿಂದೂಧರ್ಮದ ಒಳಪಂಥದವರೂ ಕೂಡ ಹಿಂದೂ ಧರ್ಮದ ವಿಶಾಲವಾದ ಒಂದೇ ಕುಟುಂಬಕ್ಕೆ ಸೇರಿದವರೇ ಆಗಿರುತ್ತಾರೆ.

ಹಿಂದೂಧರ್ಮದ ಒಳಭೇದದ ಈ ಪಂಥಗಳೆಲ್ಲದರ ಸಾಮಾನ್ಯ ಸಂಗತಿಯನ್ನು ಸಂಗ್ರಹ ವಾಗಿ ಹೀಗೆ ವಿಂಗಡಿಸಿ ಹೇಳಬಹುದು :

(೧) ಎಲ್ಲರೂ ದೇವರಿದ್ದಾನೆ ಎಂದು ನಂಬುತ್ತಾರೆ. ದೇವರು ಒಬ್ಬನು, ಅವನಿಗೆ ನಾಮಗಳು ಹಲವು. ಅವನು ವರ್ಣನಾತೀತವಾದ ಪರಿಪೂರ್ಣತೆಯುಳ್ಳವನು. ಅವನು ಸರ್ವತಂತ್ರಸ್ವತಂತ್ರನೂ, ಸರ್ವಶಕ್ತನೂ, ಸರ್ವಾಂತರ್ಯಾಮಿಯೂ, ಸರ್ವಜ್ಞನೂ ಆಗಿರುತ್ತಾನೆ.

(೨) ದೇವರ ಕುರಿತಾಗಿ ವೇದೋಪನಿಷದಾದಿ ಪ್ರಸ್ಥಾನತ್ರಯ ಗ್ರಂಥಗಳಲ್ಲಿ ಹೇಳಿರುವ ವಿಚಾರಗಳು ಆಧಾರವಾಗಿವೆ. ಅವು ವ್ಯಕ್ತಿಗತವಾದ ಅನುಭವದೊಂದಿಗೆ ತಾಳೆಯಾದಾಗ ವ್ಯಕ್ತಿಗತ ಅನುಭವವೂ ಆಧಾರವಾಗುತ್ತದೆ.

(೩) ಜಗತ್ತಿನಲ್ಲಿ ಜೀವಿಗಳ ಜನ್ಮಕ್ಕೆ ಅವರವರ ಕರ್ಮವೇ ಕಾರಣ ಎನ್ನುತ್ತಾ ಕರ್ಮ ಸಿದ್ಧಾಂತ, ಪುನರ್ಜನ್ಮ, ಅವತಾರವಾದ ಇವು ಮೂರು ಎಲ್ಲಾ ಪಂಥದವರಿಗೂ ಮಾನ್ಯ ವಾದುದೇ ಆಗಿರುತ್ತದೆ.

(೪) ಮುಕ್ತಿಯನ್ನು ಪಡೆಯಲು ಕರ್ಮ, ಭಕ್ತಿ, ರಾಜ ಮತ್ತು ಜ್ಞಾನ ಎಂಬ ನಾಲ್ಕು ವಿಧದ ಯೋಗಮಾರ್ಗಗಳಿವೆ ಎಂಬುದು ಎಲ್ಲರಿಗೂ ಸಮ್ಮತವಾಗಿರುವ ಅಂಶ ವಾಗಿದೆ.

(೫) ಭಗವಂತನ ಸಾಕ್ಷಾತ್ಕಾರಕ್ಕೆ ನೀತಿಯ ಸಂಪತ್ತು, ಧರ್ಮದ ಬಲಗಳ ಅಗತ್ಯ ವಿದ್ದು ಅವುಗಳ ಅಂಗಗಳಾದ ಪರಿಶುದ್ಧತೆ, ಇಂದ್ರಿಯಸಂಯಮ, ಸತ್ಯ, ಅಹಿಂಸೆ, ವಿವೇಕ, ವೈರಾಗ್ಯ ಎಂಬಿತ್ಯಾದಿ ಸದ್ಗುಣಸಂಪತ್ತುಗಳನ್ನು ಜೀವಿಯು ರೂಢಿಸಿಕೊಳ್ಳಬೇಕು ಮತ್ತು ಸಾಧನೆಮಾಡಬೇಕು ಎಂಬುದು ಎಲ್ಲಾ ಮತದವರ ನಿಲುವು ಆಗಿದೆ.

(೬) ತನ್ನ ತನ್ನ ಅಧಿಕಾರದಂತೆ, ಸ್ವಧರ್ಮಸ್ವಭಾವದಂತೆ ಇಷ್ಟದೇವತೆಯನ್ನು ಉಪಾಸನೆಮಾಡುತ್ತಾ, ಭಗವಂತನ ಕೃಪೆಗೆ ಪಾತ್ರನಾಗಲು ಅನುಕೂಲವಾಗುವಂತೆ ಜೀವನವನ್ನು ಬಾಳಿ ಕೃತಕಾರ್ಯನಾಗಬೇಕು ಎಂಬುದು ಎಲ್ಲಾ ಮತದವರೂ ಒಪ್ಪಿ ಕೊಂಡಿರುವ ವಿಚಾರವಾಗಿದೆ.

(೭) ಜನ್ಮಮೃತ್ಯುಗಳಿಂದ ಕೂಡಿದ ಈ ಸಂಸಾರಚಕ್ರದಿಂದ ಬಿಡುಗಡೆಯಾದಾಗಲೇ ಮುಕ್ತಿ ಎನ್ನುವುದನ್ನು ಹಿಂದೂಧರ್ಮದ ಎಲ್ಲಾ ಒಳಪಂಥದವರೂ ಒಪ್ಪಿರುತ್ತಾರೆ.

(೮) ಗುರುವಿನ ಉಪದೇಶವಿಲ್ಲದೆ ಅಧ್ಯಾತ್ಮವಿದ್ಯೆ ಮತ್ತು ಆಧ್ಯಾತ್ಮಿಕ ಸಾಧನೆ ಫಲ ಕಾರಿಯಾಗಲಾರದು ಎಂದು ಹಿಂದೂಧರ್ಮದ ಎಲ್ಲಾ ಒಳಪಂಥವರೂ ತಳೆದಿರುವ ನಿಶ್ಚಯದ ನಿಲುವಾಗಿದೆ.

(೯) ಜಗದ ಸಂಸಾರದಲ್ಲಿ ಇರುವ ಸುಖ ನಿಜವಾದ ಸುಖವಲ್ಲ. ಮಾತ್ರವಲ್ಲ, ಅದು ಶಾಶ್ವತವಾದ ಸುಖವೂ ಅಲ್ಲ. ಮೋಕ್ಷಾನಂದವೇ ಶಾಶ್ವತವಾದ ಸುಖ. ಜೀವಿಗೆ ಶಾಶ್ವತ

ವಾದ ಸುಖ ದೊರೆಯಲು ಸಾಧ್ಯವಿದೆ. ಶಾಶ್ವತ ಸುಖದ ಸಿದ್ಧಿಯೇ ಮತಧರ್ಮಗಳ ಗುರಿಯಾಗಿದೆ ಎಂದು ಎಲ್ಲಾ ಪಂಥದವರೂ ಒಪ್ಪಿರುತ್ತಾರೆ.

(೧೦) ಜೀವನವೆಂದರೆ ಹೆದರಿ ಓಡಿಹೋಗಬೇಕಾದ ರಂಗಸ್ಥಳವಲ್ಲ. ಅಭಯ-ಆತ್ಮ ವಿಶ್ವಾಸದಿಂದ ಕೂಡಿ ಧರ್ಮಯುಕ್ತವಾಗಿ ಜೀವನದ ಕರ್ತವ್ಯಗಳನ್ನು ನಿರ್ವಹಿಸುತ್ತಾ, ಬಾಳ ಬದುಕಿನ ಪರಮಗುರಿಯಾದ ಭಗವತ್ಸಾಕ್ಷಾತ್ಕಾರವನ್ನು ಪಡೆಯಬೇಕು ಎನ್ನು ವುದು ಹಿಂದೂಧರ್ಮದ ಎಲ್ಲಾ ಪಂಥದವರೂ ಒಪ್ಪಿರುವ ಸಂಗತಿಯಾಗಿದೆ.

ಹಿಂದೂಧರ್ಮದ ಒಳಪಂಥಗಳಲ್ಲಿ ಒಂದೊಂದು ಪಂಥದವರು ಒಂದೊಂದು ಹೆಸರಿ ನಿಂದ ಭಗವಂತನನ್ನು ಕರೆದು ಅವನನ್ನೇ ಪರಮಾತ್ಮ ಎಂದು ಹೇಳಿ ತಮ್ಮ ತಮ್ಮ ಸಾಧನೆ-ಅನುಷ್ಠಾನಗಳನ್ನು ಮಾಡುತ್ತಾರೆ. ತದನುಸಾರವಾಗಿ ವೈವಿಧ್ಯಮಯವಾದ ತತ್ತ್ವ-ಕ್ರಿಯಾಭಾಗಗಳೆಲ್ಲ ಬೇರೆ ಬೇರೆ ಪಂಥಗಳಲ್ಲಿ ಸೇರಿರುತ್ತವೆ. ಸಾಮಾನ್ಯವಾಗಿ ಪ್ರಚಾರದಲ್ಲಿರುವ ಪಂಥಗಳು ಆರಾಗಿದ್ದು ಅವುಗಳು ಯಾವುವೆಂದರೆ :

(೧) ಗಣಪತಿಪಂಥ, (೨) ಸೂರ್ಯಪಂಥ, (೩) ಶಿವಪಂಥ, (೪) ವಿಷ್ಣುಪಂಥ, (೫) ಅಂಬಿಕೆ ಅಥವಾ ಶಾಕ್ತಪಂಥ, (೬) ಸುಬ್ರಹ್ಮಣ್ಯ ಅಥವಾ ಸ್ಕಂದಪಂಥ.

ಇವುಗಳಲ್ಲಿ ಇಂದಿಗೆ ಮೂರು ಪಂಥಗಳು ಹೆಚ್ಚು ಪ್ರಸಿದ್ಧವಾಗಿ ದೇಶದಲ್ಲಿ ಪ್ರಚಾರ ದಲ್ಲಿವೆ. ಅವು ಯಾವುವೆಂದರೆ : ಶೈವ, ವೈಷ್ಣವ ಮತ್ತು ಶಾಕ್ತಮತಗಳು. ನಾಲ್ಕು ವರ್ಣದವರೂ ಕೂಡ ಈ ವಿವಿಧ ಪಂಥಗಳಲ್ಲಿ ಸೇರಿದ್ದು ಅವರವರ ಸ್ಥಾನ-ಸ್ಥಿತಿಗಳನ್ನು ಅನುಸರಿಸಿ ತಮ್ಮ ತಮ್ಮ ಪಂಥಗಳಿಗೆ ಸಂಬಂಧಿಸಿದ ದೇವತೆಗಳನ್ನು ಆರಾಧಿಸುತ್ತಾರೆ.

ಗಣಪತಿಪಂಥ : ಗಣಪತಿಯನ್ನೇ ಪರಾಶಕ್ತಿ, ಅರ್ಥಾತ್ ಪರಬ್ರಹ್ಮ ಎಂದು ನಂಬಿ ಆರಾಧಿಸುವವರೇ ಗಣಪತಿಪಂಥದವರು. ಗಣಪತಿಯು ಗಜವದನ ದೇವನಾಗಿ ಹಿಂದೂ ಜೀವನದಲ್ಲಿ ವಿಶಿಷ್ಟವಾದ ಹಾಗೂ ಪೂಜ್ಯವಾದ ಸ್ಥಾನಪಡೆದಿರುತ್ತಾನೆ. ಸರ್ವವಿಘ್ನ ನಿವಾರಕನೂ ಕಾಮಿತಾರ್ಥವರಪ್ರದಾಯಕನೂ ಆದ ಶ್ರೀ ವಿನಾಯಕ ಸ್ವಾಮಿಯು ಹೆಚ್ಚುಕಡಿಮೆ ಇತರ ಎಲ್ಲಾ ಪಂಥೀಯರಿಂದಲೂ ಗೌರವ-ಪೂಜೆಗಳನ್ನು ಪಡೆಯುತ್ತಾನೆ. ವೇದಕಾಲದಲ್ಲೇ ಗಣಪತಿ ದೇವರ ಕಲ್ಪನೆ-ಆರಾಧನೆಗಳು ಇದ್ದುವು ಎಂದು ಒಂದು ಹೇಳಿಕೆಯಾದರೆ ಇನ್ನೊಂದು ಹೇಳಿಕೆಯ ಪ್ರಕಾರ ಗಣಪತಿಯು ಪುರಾಣದೇವತೆಯಾಗಿ ದ್ದಾನೆ. ಪೌರಾಣಿಕ ಆಧಾರದಂತೆ ಶಿವಗಣಗಳಿಗೆ ಪತಿಯಾದ (ಒಡೆಯ) ಗಣಪತಿಯು ಶಿವಕುಮಾರನಾಗಿದ್ದು ಏಕದಂತನೂ ವಕ್ರತುಂಡನೂ ಆಗಿ ಲಂಬೋದರನಾಗಿರುತ್ತಾನೆ. ಬಾಲಕರಿಂದ ಹಿಡಿದು ವೃದ್ಧರವರೆಗೆ ಹಿಂದೂಗಳು ಬಹುಸಂಖ್ಯೆಯಲ್ಲಿ ಗಣೇಶನನ್ನು ಪೂಜಿಸುತ್ತಾರೆ. ಹಿಂದೂ ದೇವಾಲಯಗಳಲ್ಲಿ ಗಣಪತಿಯ ಪೂಜೆ ಪ್ರತಿನಿತ್ಯವೂ ಪ್ರಥಮ ವಾಗಿ ನಡೆಯುತ್ತದೆ. ಯಾವ ಕಾರ್ಯ ಮಾಡಬೇಕಾದರೂ ಗಣಪತಿಯ ಪೂಜೆಯನ್ನು ಪ್ರಥಮತಃ ಮಾಡಿಯೇ ಮುಂದಡಿ ಇಡುವುದು ಹಿಂದೂಗಳಲ್ಲಿರುವ ಕ್ರಮವಾಗಿದೆ. ಹೀಗೆ ಗಣಪತಿಯು ಹಿಂದೂಧರ್ಮದಲ್ಲಿ ವಿಶಿಷ್ಟವಾದ ಸ್ಥಾನಮಾನಗಳನ್ನು ಪಡೆದಿರುವ ಪ್ರಸಿದ್ಧ ದೇವಸ್ವರೂಪನಾಗಿರುತ್ತಾನೆ. ಗಣಪತಿಯ ಕುರಿತಾಗಿ ವಿಪುಲವಾದ ತಂತ್ರ

ಪುರಾಣ ತತ್ತ್ವಶಾಸ್ತ್ರಗಳು ಇದ್ದು ಅವುಗಳೆಲ್ಲ ಗಣಪತಿಯ ಮಹಿಮೆಯನ್ನು ವಿವರವಾಗಿ ತಿಳಿಸುತ್ತವೆ.

ಸೂರ್ಯಪಂಥ : ಸೂರ್ಯನನ್ನೇ ಪರಮಾತ್ಮ ಅಥವಾ ಪರಮೋತ್ಕೃಷ್ಟಶಕ್ತಿ ಎಂದು ಪರಿಗಣಿಸಿ ಆರಾಧಿಸುವವರೇ ಸೂರ್ಯಪಂಥಿಗಳು. ಸೂರ್ಯನು ಜಗತ್ತಿನಲ್ಲಿ ಜೀವಿಗಳ ಜೀವನಾಧಾರವಾದ ದಿವ್ಯಚೇತನವೇ ಮೈವೆತ್ತುಬಂದಿರುವ ದೇವರಾಗಿದ್ದಾನೆ. ಜೀವನಕ್ಕೆ ಬೆಳಕು-ಬೆಳವಣಿಗೆಗಳನ್ನು ನೀಡುವವನೇ ಸೂರ್ಯದೇವ. ಸೂರ್ಯನನ್ನು ಸವಿತೃ, ಗಾಯತ್ರೀ ಎಂದು ಅನೇಕ ಹೆಸರುಗಳಿಂದ ಕರೆಯಲಾಗಿದೆ. ಸೂರ್ಯಪಂಥದವರು ಮಾತ್ರವಲ್ಲದೆ ಇತರ ಪಂಥದವರೂ ಕೂಡ ಸೂರ್ಯದೇವನನ್ನು ಸೂರ್ಯನಮಸ್ಕಾರ, ಸೂರ್ಯಮಂತ್ರಪಾರಾಯಣ, ಗಾಯತ್ರೀ ಜಪ-ಅನುಷ್ಠಾನಗಳ ಮೂಲಕ ಪೂಜಿಸುತ್ತಾರೆ. ಸೂರ್ಯನು ಕಣ್ಣಿಗೆ ಕಾಣುವ ಭಗವಂತ ಎಂದು ಸರ್ವ ಎಡೆಗಳಿಂದಲೂ ಪೂಜ್ಯತೆ ಪಡೆದಿರುವ ದೇವರಾಗಿದ್ದಾನೆ. ಸೂರ್ಯನ ಕುರಿತಾಗಿ ವೇದಗಳಲ್ಲಿ ಅನೇಕ ಮಂತ್ರಗಳೂ ವಿವರಗಳೂ ದೊರೆಯುತ್ತವೆ.

ಶಿವಪಂಥ : ಶಿವನನ್ನೇ ಸರ್ವೋತ್ತಮನೆಂದು ಪೂಜಿಸುವವರೇ ಶೈವರು. ಶೈವರಲ್ಲಿ ಕಾಶ್ಮೀರ ಶೈವರು, ತಮಿಳುನಾಡಿನ ಶೈವರು, (ಕರ್ಣಾಟಕದ) ವೀರಶೈವರು ಎಂಬ ಮುಖ್ಯವಾದ ಮೂರು ವರ್ಗಗಳಿವೆ. ಶಿವಪೂಜೆ-ಆರಾಧನೆಗಳು ವೇದಕಾಲದಲ್ಲಿಯೇ ಆರಂಭವಾಗಿ ಶಿವನು ವೈದಿಕ ದೇವತೆ ಎಂದು ಗೌರವ ಮತ್ತು ಪೂಜನೆಗಳಿಗೆ ಪಾತ್ರನಾಗಿರುತ್ತಾನೆ.

ವೈಷ್ಣವಪಂಥ : ವಿಷ್ಣುವೇ ಸರ್ವೋತ್ತಮನೆಂದು ನಂಬಿ ಅವನನ್ನೇ ಆರಾಧಿಸುವ ಪಂಥದವರೇ ವೈಷ್ಣವರು. ವಿಷ್ಣುಪೂಜೆಯು ಕೂಡ ವೇದೋಕ್ತವಾದುದೇ ಆಗಿರುತ್ತದೆ ಎಂಬುದಕ್ಕೆ ವೇದದಲ್ಲಿ ಆಧಾರಗಳಿವೆ. ವೈಷ್ಣವರಲ್ಲಿ ಶ್ರೀರಾಮಾನುಜ ಸಂಪ್ರದಾಯದವರು ಶ್ರೀವೈಷ್ಣವರೆಂದೂ ಮತ್ತು ಶ್ರೀಮಧ್ವಾಚಾರ್ಯರ ಸಂಪ್ರದಾಯದವರು ಸದ್‌ವೈಷ್ಣವರೆಂದೂ ಎರಡು ಮುಖ್ಯ ಭೇದಗಳಿವೆ. ಕಾಲಕಾಲಕ್ಕೆ ಈ ಎರಡು ಮುಖ್ಯ ವಿಭಾಗಗಳಿಂದ ಮತ್ತೂ ಅನೇಕ ಭಾಗಗಳು ಹುಟ್ಟಿಕೊಂಡವು. ಪರಿಣಾಮವಾಗಿ ವೈಷ್ಣವರಲ್ಲಿ ಮುಖ್ಯವಾಗಿ ಆರು ಪಂಗಡಗಳಿವೆ.

ಅವು ಯಾವುವೆಂದರೆ :

(೧) ಶ್ರೀರಾಮಾನುಜ ಸಂಪ್ರದಾಯದ ಶ್ರೀವೈಷ್ಣವರು.

(೨) ಶ್ರೀಮಧ್ವಾಚಾರ್ಯರ ಸಂಪ್ರದಾಯದ ಸದ್‌ವೈಷ್ಣವರು [ಬ್ರಹ್ಮತಂತ್ರ ವೈಷ್ಣವರು, ಹರಿವೈಷ್ಣವರು, ಮಾಧ್ವ ವೈಷ್ಣವರು].

(೩) ಶ್ರೀಚೈತನ್ಯಸ್ವಾಮಿ ಸಂಪ್ರದಾಯದ ಶ್ರೀ ಚೈತನ್ಯ ವೈಷ್ಣವರು.

(೪) ಶ್ರೀರಾಮಾನಂದ ಸಂಪ್ರದಾಯದ ಶ್ರೀರಾಮಾನಂದಿ ವೈಷ್ಣವರು

(೫) ಶ್ರೀನಿಂಬಾರ್ಕ ಸಂಪ್ರದಾಯದ ನಿಂಬಾರ್ಕ ವೈಷ್ಣವರು.

(೬) ಶ್ರೀವಲ್ಲಭಾಚಾರ್ಯ ಸಂಪ್ರದಾಯದ ರಾಧಾವಲ್ಲಭ ವೈಷ್ಣವರು.

(೭) ಶ್ರೀಸಾರಸ್ವತ ಸಂಪ್ರದಾಯದ ಗೌಡಸಾರಸ್ವತ ವೈಷ್ಣವರು.

ಶ್ರೀರಾಮಾನುಜ ಸಂಪ್ರದಾಯದ ಶ್ರೀವೈಷ್ಣವರಲ್ಲಿ ವಡಗಲೈ ಮತ್ತು ತೆಂಗಲೈ ಎಂಬ ಎರಡು ಒಳಭೇದಗಳಿವೆ.

ವಡಗಲೈ : ವಡಗಲೈ ಎಂದರೆ ಉತ್ತರ ಪಂಥದವರು ಎಂದು ಅರ್ಥ. ಭಗವಂತನ ಸಾಕ್ಷಾತ್ಕಾರಕ್ಕೆ ಪ್ರಪತ್ತಿಯು ಅನೇಕ ದಾರಿಗಳಲ್ಲಿ ಒಂದು ಆಗಿರುತ್ತದೆ. ಪರಮಾತ್ಮನಿಗೆ ಶರಣಾದರೂ ಭಕ್ತನು ಭಗವಂತನ ಕೃಪೆ ದೊರೆಯಬೇಕಾದರೆ ಕರ್ಮಾನುಷ್ಠಾನ ಮಾಡಬೇಕು ಎಂಬುದು ಈ ಪಂಥದವರ ನಿಲುವು ಆಗಿದೆ. ಈ ಪಂಥದ ಪ್ರವರ್ತಕರು ಶ್ರೀ ವೇದಾಂತದೇಶಿಕರು. ಅದು ಏಕಮೇವಾದ್ವಿತೀಯವಾದ ಹಾದಿ ಅಲ್ಲ ಎಂದು ಈ ಪಂಥದವರ ನಿಲುವು, ಹಾಗೆಯೇ ಲಕ್ಷ್ಮೀದೇವಿಯನ್ನು ಜಗದೀಶ್ವರಿ ಎಂದೂ ದಿವ್ಯಳೆಂದೂ ಗೌರವಿಸಿ ಪೂಜಿಸುತ್ತಾರೆ. ಸಂಸ್ಕೃತ ವೇದಗ್ರಂಥಗಳು, ಹಾಗೂ ತಮಿಳುವೇದವೆಂದು ಪ್ರಸಿದ್ಧವಾದ ನಾಲಾಯಿರಪ್ರಬಂಧಂ ಇವರಿಗೆ ಆಧಾರ ಹಾಗೂ ಮಾನ್ಯವಾದ ಗ್ರಂಥಗಳಾಗಿರುತ್ತವೆ.

ತೆಂಗಲೈ : ತೆಂಗಲೈ ಎಂದರೆ ದಕ್ಷಿಣ ಭಾಗದವರು ಅರ್ಥಾತ್ ದಕ್ಷಿಣ ಪಂಥದವರು ಎಂದು ಅರ್ಥ. ಇವರಿಗೆ ನಾಲಾಯಿರಪ್ರಬಂಧಂ ಮತ್ತು ವೈಷ್ಣವಸಂತರಾದ ಆಳ್ವಾರರ ಜೀವನ-ಸಂದೇಶಗಳು ತಮ್ಮ ಪಂಥಕ್ಕೆ ಆಧಾರ ಹಾಗೂ ಮಾನ್ಯವಾಗಿವೆ. ಭಗವಂತನ ಸಾಕ್ಷಾತ್ಕಾರಕ್ಕೆ ಪ್ರಪತ್ತಿಯು ಏಕಮೇವಾದ್ವಿತೀಯವಾದ ಮಾರ್ಗವಾಗಿದೆ. ಲಕ್ಷ್ಮೀದೇವಿಯು ಭಗವಂತನ ಸೃಷ್ಟಿಗೆ ಒಳಗಾದ ದಿವ್ಯದೇವಿಯಾಗಿರುತ್ತಾಳೆ. ಆದರೆ ಭಗವಂತನಂತೆ ಮೋಕ್ಷದಾಯಿನಿ ಆಗಿರುವುದಿಲ್ಲ ಎಂಬುದು ಈ ಮತದವರ ನಿಲುವು ಆಗಿರುತ್ತದೆ. ಈ ಪಂಥದ ಸ್ಥಾಪಕರು ಶ್ರೀಲೋಕಾಚಾರ್ಯರು.

ಶಾಕ್ತಪಂಥ : ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಶಕ್ತಿಯೇ ಕಾರಣವೆಂದು ಹೇಳಿ ಅದನ್ನು ಜಗನ್ಮಾತೆ ಎಂದು ಕರೆದು ಜಗದಂಬೆಯೇ ಸರ್ವಸ್ವ ಎಂದು ನಂಬಿ ಆರಾಧಿಸುವವರೇ ಶಾಕ್ತಪಂಥದವರು.

ಸ್ಕಂದಪಂಥದವರು : ಸುಬ್ರಹ್ಮಣ್ಯಸ್ವಾಮಿಯೇ ಸರ್ವಸ್ವ ಎಂದು ಹೇಳಿ ಸುಬ್ರಹ್ಮಣ್ಯದೇವರನ್ನೇ ಇಷ್ಟದೇವತೆಯಾಗಿ ಸ್ವೀಕರಿಸಿ ಪೂಜಿಸುವ ಪಂಥದವರೇ ಸ್ಕಂದಪಂಥದವರು.

ಶೈವಪಂಥದವರು : ಶೈವಸಿದ್ಧಾಂತ, ಶಿವಾದ್ವೈತ ಸಂಪ್ರದಾಯಕ್ಕೆ ಸೇರಿರುತ್ತಾರೆ.

ಜಗದ್ಗುರು ಶ್ರೀ ಆದಿಶಂಕರಾಚಾರ್ಯರಿಂದ ಪ್ರಚಾರಮಾಡಲ್ಪಟ್ಟ ಅದ್ವೈತಮತವನ್ನು ಅನುಸರಿಸುವವರು ಅದ್ವೈತಸಂಪ್ರದಾಯದವರು. ಇವರನ್ನು ಅದ್ವೈತಿಗಳು, ಅದ್ವೈತಪಂಥೀಯರು, ಸ್ಮಾರ್ತರು ಎಂದೂ ಕರೆಯುವ ರೂಢಿ ಇದೆ. ಅದ್ವೈತಸಂಪ್ರದಾಯದಲ್ಲಿ ಆದಿತ್ಯ, ಅಂಬಿಕೆ, ವಿಷ್ಣು, ಗಣನಾಥ, ಮಹೇಶ್ವರ ಎಂಬ ಐದು ದೇವತಾಸ್ವರೂಪಗಳ ಆರಾಧನೆಯು ಮಾನ್ಯವಾಗಿರುತ್ತದೆ. ಈ ಪಂಚದೇವತಾಸ್ವರೂಪಗಳು ಏಕಮೇವಾದ್ವಿತೀಯನಾದ ಪರಬ್ರಹ್ಮನ ವಿವಿಧ ರೂಪಗಳು ಎಂದು ಅದ್ವೈತಪಂಥದವರು ಆರಾಧಿಸುತ್ತಾರೆ.

ಶೈವ, ವೈಷ್ಣವ ಮತ್ತು ಶಾಕ್ತಪಂಥದವರ ಮುಖ್ಯವಾದ ಕೆಲವು ಬಾಹ್ಯ ಆಚಾರ ಸಂಕೇತಗಳ ವಿವರ ಹೀಗಿದೆ :

ಶೈವರು : (೧) ಭಸ್ಮಾಧಾರಣ—ಭಸ್ಮ. ಅಲ್ಲದೆ ಗಂಧ, ಕುಂಕುಮಗಳ ನಾಮವನ್ನು ಧರಿಸುವಿಕೆ, ಇಡುವಿಕೆ. (೨) ಶರೀರದಲ್ಲಿ ಶಿವಲಿಂಗಧಾರಣ [ಶಿವದಾರದಲ್ಲಿ ಲಿಂಗವನ್ನು ಧರಿಸುವುದು. ಇದು ವೀರಶೈವರಿಗೆ ಮಾತ್ರ ಅನ್ವಯಿಸುತ್ತದೆ]. (೩) ಲಿಂಗಪೂಜೆ. (೪) ಬಿಲ್ವಪತ್ರೆ, ತುಂಬೆ ಹೂಗಳನ್ನು ಶಿವಲಿಂಗದ ಅರ್ಚನೆಯಲ್ಲಿ ಉಪಯೋಗಿಸುವಿಕೆ. (೫) ರುದ್ರಾಕ್ಷಿಮಾಲಾಧಾರಣ : ರುದ್ರಾಕ್ಷಿಜಪಸರವನ್ನು ಆಧ್ಯಾತ್ಮಿಕಸಾಧನೆಗೆ ಉಪಯೋಗಿಸುವಿಕೆ. (೬) ಶಿವಪಂಚಾಕ್ಷರೀ ಮಂತ್ರದ ಜಪ ಮಾಡುವಿಕೆ. (೭) ಶಿವಪಂಚಾಯತನ ಪೂಜೆ [ನಂದಿ, ಗಣೇಶ, ಸುಬ್ರಹ್ಮಣ್ಯ, ಪಾರ್ವತಿ, ಶಿವ]. (೮) ಗುರು, ಜಂಗಮ ಮತ್ತು ಶರಣರು ಎಂಬ ವಿವಿಧ ಗುರುಸ್ವಾಮಿಗಳ ಆರಾಧನೆ. ವೀರಶೈವರಿಗೆ ಮಾತ್ರ ಇದು ಅನ್ವಯಿಸುತ್ತದೆ. ವೀರಶೈವೇತರರು ಗುರುವನ್ನು ಮಾತ್ರ ಆರಾಧಿಸುತ್ತಾರೆ. (೯) ಶಿವರಾತ್ರಿ, ನಿತ್ಯ ಸೋಮವಾರ ಹಾಗೂ ಕಾರ್ತೀಕ ಮಾಸದ ಸೋಮವಾರಗಳಲ್ಲಿ ಉಪವಾಸ-ಪೂಜಾದಿಗಳಿಂದ ಕೂಡಿದ ವ್ರತದ ಪಾಲನೆ.

ಶಿವಪಂಥೀಯರಿಗೆ ಪವಿತ್ರವಾದ ಯಾತ್ರಾಸ್ಥಳಗಳು : (೧) ಶ್ರೀ ಕಾಶೀ ವಿಶ್ವನಾಥ ಕ್ಷೇತ್ರ [ವಾರಾಣಾಸೀ-ಉತ್ತರಪ್ರದೇಶ], (೨) ಶ್ರೀ ಸೋಮನಾಥ ಕ್ಷೇತ್ರ (ಪ್ರಭಾಸ-ಗುಜರಾತ್), (೩) ಶ್ರೀ ಮಹಾಕಾಲೇಶ್ವರ ಕ್ಷೇತ್ರ [ಉಜ್ಜೈನಿ—ಮಧ್ಯಪ್ರದೇಶ], (೪) ಶ್ರೀ ಓಂಕಾರೇಶ್ವರ ಕ್ಷೇತ್ರ [ಓಂಕಾರೇಶ್ವರ-ಮಧ್ಯಪ್ರದೇಶ], (೫) ಶ್ರೀ ಕೇದಾರನಾಥ ಕ್ಷೇತ್ರ [ಕೇದಾರನಾಥ-ಹಿಮಾಲಯ], (೬) ಶ್ರೀ ಭೀಮಾಶಂಕರ ಕ್ಷೇತ್ರ [ಭೀಮಾಶಂಕರ-ಮಹಾರಾಷ್ಟ್ರ], (೭) ಶ್ರೀ ತ್ರ್ಯಂಬಕೇಶ್ವರ ಕ್ಷೇತ್ರ [ತ್ರ್ಯಂಬಕೇಶ್ವರ-ಮಹಾರಾಷ್ಟ್ರ], (೮) ಶ್ರೀವೈದ್ಯನಾಥ ಕ್ಷೇತ್ರ [ಪರಲಿ—ಮಹಾರಾಷ್ಟ್ರ], (೯) ಶ್ರೀ ನಾಗೇಶ್ವರ ಕ್ಷೇತ್ರ [ದಾರುಕಾವನ-ಗುಜರಾತ್], (೧೦) ಶ್ರೀ ಮಲ್ಲಿಕಾರ್ಜುನ ಕ್ಷೇತ್ರ [ಶ್ರೀಶೈಲ—ಆಂಧ್ರ ಪ್ರದೇಶ], (೧೧) ಶ್ರೀರಾಮೇಶ್ವರ ಕ್ಷೇತ್ರ (ಶ್ರೀರಾಮೇಶ್ವರ—ತಮಿಳುನಾಡು), (೧೨) ಶ್ರೀ ಘುಶ್ಮೇಶ್ವರ ಕ್ಷೇತ್ರ [ದೌಲತಾಬಾದ್ ಸಮೀಪ—ಆಂಧ್ರಪ್ರಾಂತ್ಯ].

ಪವಿತ್ರವಾದ ಪುರಾಣಗ್ರಂಥ : (೧) ಶಿವರಹಸ್ಯ. (೨) ಶಿವಪುರಾಣ, (೩) ಶಿವಗೀತೆ.

ಮತಕ್ಕೆ ಆಧಾರಗ್ರಂಥಗಳು : (೧) ಪ್ರಸ್ಥಾನತ್ರಯ, (೨) ಶೈವಸಂತರಾದ, ೬೩ ಮಂದಿ ಪುರಾತನರು ಎಂದು ಪ್ರಸಿದ್ಧರಾದ ಅಪ್ಪರ್, ಮೇಕಂಡೆಯರ್ ತಿರುಜ್ಞಾನ ಸಂಬಂಧರ್, ಸುಂದರ ನಂಬಿ ಮೊದಲಾದ ನಾಯನಾರರ ವಚನಗಳನ್ನು ಒಳಗೊಂಡ ಗ್ರಂಥಗಳು. (೩) ೨೮ ಶೈವಾಗಮಗಳು. (೪) ಅಲ್ಲಮಪ್ರಭು, ಬಸವಣ್ಣ, ಅಕ್ಕಮಹಾದೇವಿ ಮೊದಲಾದ ವೀರಶೈವ ಸಂತರು, ಶರಣರ ವಚನಗಳು. (೫) ಶಿವರಹಸ್ಯ-ಶಿವ ಪುರಾಣಾದಿ ಗ್ರಂಥಗಳು.

ಗುರುಪರಂಪರೆ ಮತ್ತು ಮೂಲ ಮಠಗಳು : (೧) ೬೩ ಪುರಾತನ ಶೈವಸಂತರ ಪರಂಪರೆ, ಕೋವಿಲೂರು ಮತ್ತು ಧರ್ಮಾಪುರ ಅಧೀನಮ್ ಮಠ. (೨) ಶ್ರೀಸಾರಸ್ವತ ಸಮಾಜದ ಶೈವರಿಗೆ : ಶ್ರೀ ಗೌಡಪಾದಾಚಾರ್ಯ ಸಂಸ್ಥಾನ. ಕೈವಲ್ಯಮಠ.

ವೀರಶೈವರಿಗೆ : ಶ್ರೀ ರೇಣುಕಾಚಾರ್ಯ, ಶ್ರೀ ಬಸವೇಶ್ವರ ಆದಿ ವೀರಶೈವ ಗುರು ಹಾಗೂ ಶರಣರ ಪರಂಪರೆ. ಬಾಳೆಹೊನ್ನೂರು, ಶ್ರೀಶೈಲ ಇತ್ಯಾದಿ ದೇಶದ ಐದು

ಭಾಗಗಳಲ್ಲಿ ಇರುವ ಪ್ರಮುಖವಾದ ಮಠಗಳು: (೧) ರಂಭಾಪುರಿಯ ವೀರಮಠ. (೨) ಉಜ್ಜಯಿನಿಯ ಧರ್ಮಸಿಂಹಾಸನಮಠ, (೩) ಹಿಮವತ್ಕೇದಾರದ ವೈರಾಗ್ಯಪೀಠ, (೪) ಶ್ರೀಶೈಲದ ಸೂರ್ಯಸಿಂಹಾಸನಪೀಠ, (೫) ಶ್ರೀ ಕಾಶಿಯ ಜ್ಞಾನಸಿಂಹಾಸನಪೀಠ.

ಅದ್ವೈತಪಂಥದವರಿಗೆ : ಜಗದ್ಗುರು ಶ್ರೀ ಶಂಕರಭಗವತ್ಪಾದಾಚಾರ್ಯರು ಸ್ಥಾಪಿಸಿದ ಶೃಂಗೇರಿ, ದ್ವಾರಕ ಮೊದಲಾದವೂ ಜಗದ್ಗುರು ಶ್ರೀ ಶಂಕರಾಚಾರ್ಯ ಪರಂಪರೆಯ ಪೀಠಗಳು.

ವೈಷ್ಣವರ ಸಂಕೇತಗಳು : (೧) ತುಳಸೀ ಮಣಿ, ಗಂಧದ ಮಣಿಗಳ ಜಪಮಾಲೆ, (೨) ಗಂಧ ಚಂದನ ಅಂಗಾರಕಗಳ ನಾಮ, ಗೋಪೀಚಂದನವನ್ನುಪಯೋಗಿಸಿಕೊಂಡು ಹಾಕಿಕೊಳ್ಳುವ ಮುದ್ರೆಗಳು, (೩) ವಿಷ್ಣುಶಾಲಗ್ರಾಮ ಹಾಗೂ ಪ್ರತಿಮೆಯ ಪೂಜೆ, (೪) ತುಳಸಿ, ಮಲ್ಲಿಗೆಹೂಗಳನ್ನು ಅರ್ಚನೆಯಲ್ಲಿ ಉಪಯೋಗಿಸುವಿಕೆ. (೫) ಗೋಕುಲಾಷ್ಟಮಿ, ಶ್ರಾವಣ ಶನಿವಾರ, ಅನಂತನ ವ್ರತ, ಏಕಾದಶೀ ವ್ರತದ ಪಾಲನೆ. (೬) ಅಷ್ಟಾಕ್ಷರೀಮಂತ್ರ ಜಪಮಾಡುವಿಕೆ. (೭) ಗುರು, ಭಕ್ತ ಮತ್ತು ಭಾಗವತರ ಆರಾಧನೆ.

ವೈಷ್ಣವಪಂಥೀಯರಿಗೆ ಪವಿತ್ರವಾದ ಮುಖ್ಯ ಯಾತ್ರಾಸ್ಥಳಗಳು ಹಾಗೂ ಪುಣ್ಯಕ್ಷೇತ್ರಗಳು: (೧) ಶ್ರೀರಂಗ [ತಮಿಳುನಾಡು], (೨) ಉಡುಪಿ [ಕರ್ನಾಟಕ ಪ್ರಾಂತ್ಯ], (೩) ತಿರುಪತಿ [ಆಂಧ್ರ ಪ್ರಾಂತ್ಯ], (೪) ಪಂಢರಾಪುರ [ಮಹಾರಾಷ್ಟ್ರ ಪ್ರಾಂತ್ಯ], (೫) ಗಯಾಕ್ಷೇತ್ರ [ಉತ್ತರಪ್ರದೇಶ ಪ್ರಾಂತ್ಯ], (೬) ಮಥುರಾ-ಬೃಂದಾವನ [ಉತ್ತರಪ್ರದೇಶ ಪ್ರಾಂತ್ಯ], (೭) ಶ್ರೀಬದರಿನಾರಾಯಣ [ಹಿಮಾಲಯ ಕ್ಷೇತ್ರ], (೮) ಶ್ರೀ ಜಗನ್ನಾಥಪುರೀ [ಒರಿಸ್ಸಾ ಪ್ರಾಂತ್ಯ], (೯) ದ್ವಾರಕಾನಾಥಕ್ಷೇತ್ರ [ದ್ವಾರಕಾ-ಗುಜರಾತ್ ಪ್ರಾಂತ್ಯ], (೧೦) ಮೇಲುಕೋಟೆ [ಕರ್ನಾಟಕ ರಾಜ್ಯ].

ಪವಿತ್ರವಾದ ಪುರಾಣಗ್ರಂಥಗಳು: (೧) ಶ್ರೀಮದ್ ಭಾಗವತ ಮಹಾಪುರಾಣ, (೨) ವಿಷ್ಣುಪುರಾಣ, (೩) ಹರಿವಂಶ.

ವೈಷ್ಣವಮತಕ್ಕೆ ಆಧಾರಗ್ರಂಥಗಳು: (೧) ಪ್ರಸ್ಥಾನತ್ರಯಗಳು, (೨) ವೈಷ್ಣವ ಭಕ್ತರುಗಳಾದ ಆಳ್ವಾರರ ವಚನ ಹಾಗೂ ಬೋಧನೆಗಳು, (೩) ವೈಷ್ಣವಮತಾಚಾರ್ಯರಾದ ಶ್ರೀಮದ್ ರಾಮಾನುಜ, ಶ್ರೀಮಧ್ವ ಇತ್ಯಾದಿ ಆಚಾರ್ಯರುಗಳ ಜೀವನ-ಸಂದೇಶಗಳು.

ಗುರುಪರಂಪರೆ ಮತ್ತು ಪ್ರಮುಖ ಮಠಗಳು : ಶ್ರೀವೈಷ್ಣವರಿಗೆ ಶ್ರೀರಾಮಾನುಜ ಸಂಪ್ರದಾಯದ ಮೂರು ಮಠಗಳು: (೧) ಅಹೋಬಿಲ ಮಠ, (೨) ಶ್ರೀ ಬ್ರಹ್ಮತಂತ್ರ ಪರಕಾಲ ಮಠ, (೩) ಶ್ರೀರಂಗಂ ಆಂಡವನ್ ಸ್ವಾಮಿ ಮಠ.

ಸದ್ವೈಷ್ಣವರಿಗೆ (ಶ್ರೀ ಮಾಧ್ವ ಸಂಪ್ರದಾಯದವರಿಗೆ) : ಶ್ರೀಮದುಡುಪಿ ಅಷ್ಟಮಠಗಳು. ಶ್ರೀ ಸಾರಸ್ವತ ಸಂಪ್ರದಾಯದ ವೈಷ್ಣವರಿಗೆ : ಶ್ರೀಕಾಶಿ ಮಠ ಸಂಸ್ಥಾನ ವಾರಾಣಾಸಿ, ಹಾಗೂ ಶ್ರೀ ಗೋಕರ್ಣ ಜೀವೋತ್ತಮ ಪರ್ತಗಾಳಿ ಮಠ.

ಶಾಕ್ತಪಂಥದ ಸಂಕೇತ : (೧) ರುದ್ರಾಕ್ಷಿಮಣಿ, ರುದ್ರಾಕ್ಷಿ ಸರಗಳ ಉಪಯೋಗ. (೨) ಕುಂಕುಮ ನಾಮ ಮತ್ತು ತಿಲಕ. (೩) ಶ್ರೀಚಕ್ರ, ಶ್ರೀದುರ್ಗಾಯಂತ್ರ, ಮೊದಲಾದ

ಶಕ್ತಿಯಂತ್ರಪೂಜೆ ಹಾಗೂ ಮೂರ್ತಿಪೂಜೆ. (೪) ಕೆಂಪು ದಾಸವಾಳ, ಬಿಲ್ವಪತ್ರೆ ಇವು ಗಳನ್ನು ಪೂಜೆಗೆ ಉಪಯೋಗಿಸುವಿಕೆ, (೫) ಅಷ್ಟಮಿ ಉಪವಾಸ, ಶುಕ್ರವಾರ ಪೂಜಾ, ನವರಾತ್ರಿ ವ್ರತ, ಅಮಾವಾಸ್ಯೆ ಪೂರ್ಣಿಮೆ ದಿನಗಳಂದು ಉಪವಾಸಾದಿ ವ್ರತಾಚರಣೆ. (೬) ಶಕ್ತಿಬೀಜಮಂತ್ರಸಹಿತವಾದ ಪಂಚದಶೀಮಂತ್ರದ ಜಪ ಹಾಗೂ ಉಪಾಸನೆ. (೭) ಶ್ರೀ ದುರ್ಗಾಸಪ್ತಶತಿ ಅಥವಾ ಶ್ರೀಲಲಿತಾಸಹಸ್ರನಾಮ ಸ್ತೋತ್ರ ಪಾರಾಯಣ. (೮) ಗುರು, ಸುಮಂಗಲೆಯರು ಹಾಗೂ ಬಾಲಕಿಯರನ್ನು ಪೂಜಿಸುವಿಕೆ, ಸ್ತ್ರೀಯರನ್ನು ಜಗನ್ಮಾತೆ ಎಂದು ಗೌರವಿಸುವಿಕೆ.

ಶಾಕ್ತಪಂಥದವರಿಗೆ ಪವಿತ್ರವಾದ ದೇವೀಕ್ಷೇತ್ರಗಳು ಹಾಗೂ ಯಾತ್ರಾಸ್ಥಳಗಳು : (೧) ಶ್ರೀ ಕಾಮಾಕ್ಷಿ ಕ್ಷೇತ್ರ [ಕಾಂಚಿಪುರಂ—ತಮಿಳುನಾಡು], (೨) ಶ್ರೀ ಶಾರದಾಂಬಾ ಕ್ಷೇತ್ರ [ಶೃಂಗೇರಿ–ಕರ್ನಾಟಕ ರಾಜ್ಯ], (೩) ಶ್ರೀ ಭ್ರಮರಾಂಬಾ ಕ್ಷೇತ್ರ [ಶ್ರೀಶೈಲ—ಆಂಧ್ರಪ್ರದೇಶ], (೪) ಶ್ರೀ ಮಹಾಲಕ್ಷ್ಮೀ ಕ್ಷೇತ್ರ [ಕೊಲ್ಹಾಪುರ—ಮಹರಾಷ್ಟ್ರ ಪ್ರದೇಶ], (೫) ಶ್ರೀ ಅಂಬಾ ಕ್ಷೇತ್ರ [ಅನರ್ತ—ಗುಜರಾತ್ ಪ್ರಾಂತ್ಯ], (೬) ಶ್ರೀ ಕಾಲಿಕಾ ಕ್ಷೇತ್ರ [ಉಜ್ಜೈನಿ—ಮಧ್ಯಪ್ರದೇಶ], (೭) ಶ್ರೀ ಲಲಿತಾ ಕ್ಷೇತ್ರ [ಪ್ರಯಾಗ—ಉತ್ತರಪ್ರದೇಶ], (೮) ಶ್ರೀ ವಿಂಧ್ಯನಿವಾಸಿನೀ ಕ್ಷೇತ್ರ [ಶ್ರೀ ವಿಂಧ್ಯಪರ್ವತ—ಮಧ್ಯ ಪ್ರದೇಶ], (೯) ಶ್ರೀ ವಿಶಾಲಾಕ್ಷೀ ಕ್ಷೇತ್ರ [ವಾರಾಣಾಸಿ—ಉತ್ತರಪ್ರದೇಶ], (೧೦) ಶ್ರೀ ಮಂಗಲಾವತೀ ಕ್ಷೇತ್ರ [ಗಯಾ—ಉತ್ತರ ಪ್ರದೇಶ], (೧೧) ಶ್ರೀ ಮಹಾಮಾಯಾ ಪೀಠ [ಅಮರಾನಾಥ—ಕಾಶ್ಮೀರ ಪ್ರಾಂತ್ಯ], (೧೨) ಶ್ರೀಕಾಮಾಖ್ಯಾ ಕ್ಷೇತ್ರ [ಗೌಹತಿ–ಅಸ್ಸಾಂ ಪ್ರಾಂತ್ಯ], (೧೩) ಶ್ರೀಮೂಕಾಂಬಿಕಾ ಕ್ಷೇತ್ರ [ಕೊಲ್ಲೂರು—ಕರ್ನಾಟಕ ಪ್ರಾಂತ್ಯ], (೧೪) ಶ್ರೀ ಮೀನಾಕ್ಷೀ ಕ್ಷೇತ್ರ [ಮಧುರೆ—ತಮಿಳುನಾಡು], (೧೫) ಶ್ರೀ ಕನ್ಯಾಕುಮಾರೀ ಕ್ಷೇತ್ರ [ಕನ್ಯಾಕುಮಾರಿ—ತಮಿಳುನಾಡು], (೧೬) ಶ್ರೀ ತಲಕಾವೇರೀ ಕ್ಷೇತ್ರ [ಭಾಗಮಂಡಲ—ಕರ್ನಾಟಕ ಪ್ರಾಂತ್ಯ[, (೧೭) ಶ್ರೀ ಕಾಳೀ ಕ್ಷೇತ್ರ [ಕಲ್ಕತ್ತ—ಪಶ್ಚಿಮ ಬಂಗಾಳ], (೧೮) ದಕ್ಷಿಣೇಶ್ವರ ಶ್ರೀ ಭವತಾರಿಣಿ ಕ್ಷೇತ್ರ [ಕಲ್ಕತ್ತ—ಪ. ಬಂಗಾಳ ಪ್ರಾಂತ್ಯ], (೧೯) ಶ್ರೀ ಜಯರಾಮವಟಿ—[ಪ. ಬಂಗಾಳ ಪ್ರಾಂತ್ಯ].

ಪವಿತ್ರವಾದ ಪುರಾಣಗ್ರಂಥ : ದೇವೀಭಾಗವತ.

ಶಾಕ್ತಪಂಥದ ಆಧಾರಗ್ರಂಥಗಳು : (೧) ಅರವತ್ತುನಾಲ್ಕು ಶಾಕ್ತತಂತ್ರ ಆಗಮಗಳು, (೨) ಶಾಕ್ತಪಂಥದ ಭಕ್ತಮಹಾತ್ಮರುಗಳ ಜೀವನಸಂದೇಶಗಳು.

ಶಾಕ್ತಪಂಥದವರ ಗುರುಪೀಠಗಳು : (೧) ಶ್ರೀ ಶಾರದಾಂಬಾ ಪೀಠ—ಶೃಂಗೇರಿ, (೨) ಶ್ರೀ ಕಾಮೇಶ್ವರೀ ಪೀಠ—ಕಾಂಚೀಪುರಂ.

# ೧೨

# ಹಿಂದೂಧರ್ಮದ ವ್ರತ, ಪರ್ವ, ಹಬ್ಬಗಳು, ದೇವಸ್ಥಾನಗಳು ಮತ್ತು ಯಾತ್ರಾಸ್ಥಳಗಳು

ಈಗಾಗಲೇ ವಿವರಿಸಿದಂತೆ ಹಿಂದೂಧರ್ಮವು ಇಹಲೋಕದ ಬಾಳುವೆಯನ್ನು ಅಲ್ಲಗಳೆಯುವ ಅಥವಾ ಗೌಣವೆಂದು ಪರಿಗಣಿಸುವ ಬೋಧನೆಯನ್ನು ಮಾಡುವ ಧರ್ಮವಾಗಿರುವುದಿಲ್ಲ. ಈ ಲೋಕದ ಜೀವನವು ಬಾಳಿನ ಮಹೋನ್ನತಗುರಿಯಾದ ಆತ್ಮಸಾಕ್ಷಾತ್ಕಾರಕ್ಕಾಗಿ ವ್ಯಕ್ತಿಗೆ ಸಹಾಯವಾಗಬೇಕು. ಅಷ್ಟೇ ಅಲ್ಲದೆ, ವ್ಯಕ್ತಿಯು ಬದುಕು ತನ್ನ ಆತ್ಮೋದ್ಧಾರಕ್ಕೆ ನೆರವಾಗುವಂತೆ ಜಗದ ಹಿತವನ್ನು ಸಾಧಿಸಲು ಸಹಾಯಕ ಸಾಧನವಾಗಬೇಕು ಎಂಬುದೇ ಹಿಂದೂಧರ್ಮದ ನಿಲುವು ಆಗಿರುತ್ತದೆ. ಈ ದೃಷ್ಟಿಯಿಂದ ವ್ಯಕ್ತಿ ಹಾಗೂ ಸಾಮಾಜಿಕ ಜೀವನದಲ್ಲಿ ಹಿಂದೂಧರ್ಮದ ವ್ರತ, ಪರ್ವ, ಹಬ್ಬಗಳು, ದೇವಸ್ಥಾನಗಳು, ಯಾತ್ರಾಕ್ಷೇತ್ರಗಳು ಇವುಗಳೆಲ್ಲ ವಿಶಿಷ್ಟವಾದ ಸ್ಥಾನವನ್ನು ಪಡೆದಿರುತ್ತವೆ. ಇವುಗಳಿಗೆ ಸಂಬಂಧಿಸಿದ ಆಚಾರ–ವ್ಯವಹಾರಗಳನ್ನು ಅನುಷ್ಠಾನದಲ್ಲಿ ಅಳವಡಿಸುವುದರಿಂದ ವ್ಯಕ್ತಿಯ ಜೀವನ ಪರಿಶುದ್ಧ ಹಾಗೂ ಪವಿತ್ರವಾಗುವುದು ಮಾತ್ರವಲ್ಲದೆ ಸಮಾಜದ ಜೀವನ ಸುಖಮಯವೂ ಸುಭದ್ರವೂ ಆಗುವುದು ಎಂಬುದೇ ಈ ಎಲ್ಲಾ ಆಚರಣೆ ಹಾಗೂ ಆಚರಣಾವಿಚಾರಗಳ ಹಿನ್ನೆಲೆಯಲ್ಲಿ ಅಡಕವಾಗಿರುವ ತತ್ತ್ವವಾಗಿದೆ. ಈ ತತ್ತ್ವವನ್ನು ಸ್ಥೂಲವಾಗಿ ಹೀಗೆ ವಿಂಗಡಿಸಬಹುದು :

(೧) ಆಧ್ಯಾತ್ಮಿಕ, (೨) ಆರೋಗ್ಯಾತ್ಮಕ, (೩) ಸಾಮಾಜಿಕ ಸೌಖ್ಯ ಮತ್ತು ಭದ್ರತೆ, (೪) ಸಾಂಸ್ಕೃತಿಕ, (೫) ಧಾರ್ಮಿಕ.

ಆಧ್ಯಾತ್ಮಿಕ ತತ್ತ್ವ : ವ್ರತ ಪರ್ವ ಹಬ್ಬ ಮೊದಲಾದವುಗಳನ್ನು ಆಚರಿಸುವುದರ ಗುರಿಯು ದೇವರ ಕೃಪೆಗೆ ಪಾತ್ರರಾಗಿ ಲೌಕಿಕ ಸುಖಭದ್ರತೆ ಮತ್ತು ಆಧ್ಯಾತ್ಮಿಕವಾಗಿ ಮೋಕ್ಷ ಇವನ್ನು ಪಡೆಯುವುದೇ ಆಗಿದೆ. ವ್ರತದ ಸಂದರ್ಭಗಳಲ್ಲಿ ಪಾಲಿಸುವ ಆಹಾರ ವಿಹಾರಗಳ ನಿಯಮ ಹಾಗೂ ಸಂಯಮ, ದೇವರಲ್ಲಿ ಶರಣಾಗತನಾಗುವಿಕೆ ಇವುಗಳಿಂದೆಲ್ಲ ಮನಸ್ಸಿನ ಶುದ್ಧಿ ಉಂಟಾಗುತ್ತದೆ. ಈ ಸಂದರ್ಭಗಳಲ್ಲಿ ಕೈಕೊಳ್ಳುವ ದಿವ್ಯಗ್ರಂಥಗಳ ಪಠನ ಪಾರಾಯಣ ಮಂತ್ರಜಪ ಧ್ಯಾನ—ಇವುಗಳಿಂದೆಲ್ಲ ಮನಸ್ಸಿನ ಶುದ್ಧಿಯಾಗಿ

ಆಧ್ಯಾತ್ಮಿಕವಾದ ಪ್ರಗತಿಯಾಗುತ್ತದೆ. ಪರಿಣಾಮದಲ್ಲಿ ಪ್ರಪಂಚ ಜೀವನದ ಕುರಿತಾದ ಮೋಹ ರಾಗ ದ್ವೇಷಗಳು ಕಡಿಮೆಯಾಗುತ್ತವೆ. ಜೀವನದ ನಿರ್ವಹಣೆಗೆ ಬೇಕಾದ ಮಾನಸಿಕ ಶುದ್ಧಿಬಲಗಳು ವೃದ್ಧಿಯಾಗುತ್ತವೆ. ಅದರ ಪರಿಣಾಮವಾಗಿ ವ್ಯಕ್ತಿಜೀವನ ಪರಿಶುದ್ಧವಾಗಿ ಅದು ಪರಲೋಕಸುಖದ ಪ್ರಾಪ್ತಿ ಅಥವಾ ಮುಕ್ತಿಸಾಧನೆಗೆ ಸಹಾಯ ವಾಗುತ್ತದೆ.

ಆರೋಗ್ಯಾತ್ಮಕ ತತ್ತ್ವ : ವ್ರತ ಪರ್ವ ಹಬ್ಬ ತೀರ್ಥಯಾತ್ರೆ ಇತ್ಯಾದಿಗಳ ಸಂದರ್ಭ ದಲ್ಲಿ ಅನುಸರಿಸುವ ದೇಹ ಮನಸ್ಸು ಉಡಿಗೆತೊಡಿಗೆಗಳ ವಿಶೇಷವಾದ ಶುದ್ಧೀಕರಣ ಕಾರ್ಯಕ್ರಮಗಳು, ಆಹಾರಸೇವನೆ ವಿಹಾರಭೋಗಗಳ ಕುರಿತಾಗಿ ಅನುಸರಿಸುವ, ಸಂಯಮ, ವಿಶೇಷವಾದ ಶುಚಿರುಚಿಯ ಮತ್ತು ಭಗವದರ್ಪಣವಾದ ಪ್ರಸಾದರೂಪದ ತಿಂಡಿತೀರ್ಥಗಳ ಸೇವನೆ—ಇವುಗಳು ದೇಹ ಮತ್ತು ಮನಸ್ಸುಗಳ ಆರೋಗ್ಯದ ರಕ್ಷಣೆಗೆ ಹಾಗೂ ಪೋಷಣೆಗೆ ಗಮನಾರ್ಹವಾದ ಪ್ರಮಾಣದಲ್ಲಿ ಸಹಾಯಮಾಡುತ್ತವೆ.

ಸಾಮಾಜಿಕ ತತ್ತ್ವ : ವ್ರತ ಪರ್ವ ಹಬ್ಬ ತೀರ್ಥಯಾತ್ರೆ ಇತ್ಯಾದಿಗಳ ಸಂದರ್ಭದಲ್ಲಿ ಸಮಾಜದ ಹಿರಿಯರು, ಬಂಧುಮಿತ್ರರು ಇವರೊಡನೆ ದೇವರ ಹೆಸರಿನಲ್ಲಿ ದಿವ್ಯಜೀವನದ ಹೆಸರಿನಲ್ಲಿ ಒಟ್ಟಾಗಿ ಕೂಡಿ ಸತ್ಸಂಗ ಸಹವಾಸದಲ್ಲಿ ಕಲೆತು ಒಡನಾಡುವ ಅವಕಾಶ ದೊರೆಯುತ್ತದೆ. ಇದರಿಂದಾಗಿ ಲೌಕಿಕವಾದ ಸ್ನೇಹ–ಸಹಕಾರಗಳು ಜನರಲ್ಲಿ ಪರಸ್ಪರ ಉಂಟಾಗಲು ಅವಕಾಶವಾಗುತ್ತದೆ. ಜಾತ್ರೆ ಉತ್ಸವ ಇತ್ಯಾದಿ ವಿಶೇಷ ಸಂದರ್ಭಗಳಲ್ಲಿ ಸಾವಿರಾರು ಜನರು ಒಂದೆಡೆ ಸೇರುವಂತಾಗುವುದರಿಂದ ವ್ಯಾಪಾರ, ವಿಚಾರವಿನಿಮಯ, ರಾಷ್ಟ್ರೀಯವಾದ ಐಕ್ಯಭಾವನೆ, ಹೊಸ ಹೊಸ ವ್ಯಕ್ತಿಗಳ ಸಂಗತಿಗಳ ಪರಿಚಯ ಇವು ಗಳೆಲ್ಲ ಕಾರ್ಯರೂಪಗೊಳ್ಳಲು ಸಾಧ್ಯವಾಗುತ್ತದೆ. ಹಾಗಾಗುವುದರಿಂದ ವ್ಯಕ್ತಿ ಹಾಗೂ ಸಾಮಾಜಿಕ ಜೀವನವು ಸುಖಮಯವೂ ಭದ್ರವೂ ಆಗಲು ಬಹುವಿಧದಲ್ಲಿ ಸಹಾಯ ದೊರೆತಂತಾಗುತ್ತದೆ.

ಸಾಂಸ್ಕೃತಿಕ ತತ್ತ್ವ : ಹಿರಿಯರು ಹಬ್ಬ ವ್ರತಾದಿ ಆಚರಣೆಗಳನ್ನು ಕಾರ್ಯತಃ ಅನುಷ್ಠಾನಮಾಡುವುದರಿಂದ ಕಿರಿಯರಿಗೆ ಹಿಂದೂ ಸಂಸ್ಕೃತಿಯ ಪ್ರಾಯೋಗಿಕವಾದ ಪಾಠವನ್ನು ನೀಡಿದಂತೆ ಆಗುವುದು. ಅಷ್ಟೇ ಅಲ್ಲದೆ, ಧರ್ಮ ಹಾಗೂ ಸಂಸ್ಕೃತಿಯನ್ನು ರಕ್ಷಿಸಿದಂತೆಯೂ ಪೋಷಿಸಿದಂತೆಯೂ ಆಗುತ್ತದೆ. ಹಬ್ಬವ್ರತಾದಿಗಳ ಆಚರಣೆಯ ಕಾಲದಲ್ಲಿ ಸಂಸ್ಕೃತಿಯ ಕುರಿತಾಗಿ ತಿಳಿವಳಿಕೆ ಉಳ್ಳವರು, ಇಲ್ಲದವರಿಗೆ ಮಾರ್ಗದರ್ಶನ ನೀಡಲು, ಉತ್ಸಾಹ ತುಂಬಲು ಸಾಧ್ಯವಾಗುತ್ತದೆ. ಧರ್ಮಸಮ್ಮೇಳನಗಳು, ಹರಿಕಥಾ ಕಾರ್ಯಕ್ರಮಗಳು, ಸಂಗೀತಕಛೇರಿಗಳು, ಉಪನ್ಯಾಸ ಕಾರ್ಯಕ್ರಮಗಳು ಇತ್ಯಾದಿ ವಿವಿಧ ರೀತಿಯ ಸಾಂಸ್ಕೃತಿಕವಾದ ಚಟುವಟಿಕೆಗಳನ್ನು ಹಬ್ಬ ಪರ್ವ ಮೊದಲಾದ ಅನೇಕ ಸಂದರ್ಭಗಳಲ್ಲಿ ನಡೆಸುತ್ತಾರೆ. ಇದರಿಂದ ಧರ್ಮಸಂಸ್ಕೃತಿಗಳಿಗೆ ಸಂಬಂಧಿಸಿದ ವಿಶೇಷ ವಿಚಾರಗಳನ್ನು ಜನರು ತಿಳಿದುಕೊಂಡು ಧನ್ಯರಾಗಲು ಸಾಧ್ಯವಾಗುತ್ತದೆ.

ಧಾರ್ಮಿಕ ತತ್ತ್ವ : ತಮ್ಮ ತಮ್ಮ ಜೀವನದ ಆಶ್ರಮಧರ್ಮದ ಪಾಲನೆ, ಮತಧರ್ಮ ಮತ್ತು ಪಂಥಗಳ ತತ್ತ್ವಗಳ ಅನುಷ್ಠಾನಗಳಿಗೆ, ವ್ರತ ಹಬ್ಬ ಇತ್ಯಾದಿ ಆಚರಣೆಗಳೆಲ್ಲ

ಅನುಕೂಲವಾದ ಅವಕಾಶವಾಗಿ ಪರಿಣಮಿಸುತ್ತವೆ. ವ್ಯಕ್ತಿಜೀವನದಲ್ಲಿ ಮತ್ತು ಸಮಾಜದ ಬದುಕಿನಲ್ಲಿ ಧಾರ್ಮಿಕ ದೃಷ್ಟಿ, ಧಾರ್ಮಿಕ ಚೇತನ ಹಾಗೂ ಧಾರ್ಮಿಕ ಪ್ರಜ್ಞೆ ನೆಲೆಗೊಳ್ಳಲು ಪರ್ವದಲ್ಲಿ ಆಗಿಂದಾಗ್ಗೆ ಆಚರಿಸಲ್ಪಡುವ ಈ ಸಮಾರಂಭಗಳು ತುಂಬಾ ಪರಿಣಾಮಕಾರಿಯಾದ ರೀತಿಯಲ್ಲಿ ಸಹಕಾರಿಯಾಗಿರುತ್ತವೆ. ಹಬ್ಬ ವ್ರತ ಉತ್ಸವ ಇತ್ಯಾದಿಗಳ ಹೆಸರಿನಲ್ಲಿ ನಡೆಸುವ ಪೂಜೆ ಉಪವಾಸ ಮೊದಲಾದ ಧಾರ್ಮಿಕಪರವಾದ ಕೆಲಸಕಾರ್ಯಗಳು ಧಾರ್ಮಿಕತತ್ತ್ವವನ್ನು ಬೆಳೆಸಿ ಪೋಷಿಸುವ ಚಟುವಟಿಕೆಗಳಾಗಿವೆ. ಹಿಂದೂವಿನ ಜೀವನದಲ್ಲಿ ಬರುವ ಈ ಹಬ್ಬ ವ್ರತ ಇತ್ಯಾದಿ ಆಚರಣೆಗಳಲ್ಲಿ ಕೆಲವು ಅವರವರ ಮತಕ್ಕೆ ಸಂಬಂಧಿಸಿದ ಗುರು, ಇಷ್ಟದೇವತೆ, ಆಚಾರ್ಯಪುರುಷರು ಇವರಿಗೆ ಅನ್ವಯವಾದವುಗಳಾಗಿರುತ್ತವೆ. ಇನ್ನು ಕೆಲವು ಎಲ್ಲಾ ಒಳಪಂಥದವರಿಗೂ ಸಮಾನ ಮಾನ್ಯವಾದ ಆಚರಣಾಂಶಗಳಾಗಿರುತ್ತವೆ. ಈ ಆಚರಣೆಗಳೆಲ್ಲಾ ಮುಖ್ಯವಾಗಿ ಮೂರು ವರ್ಗಗಳಾಗಿ ವಿಭಾಗ ಮಾಡಬಹುದು. ಅವು ಯಾವುವೆಂದರೆ :

(೧) ವ್ರತ, (೨) ಪರ್ವ, (೩) ಹಬ್ಬ.

ವ್ರತ : ವ್ರತ ಎಂದರೆ ನಿಶ್ಚಿತವಾದ ಧಾರ್ಮಿಕ ನಿಯಮಾಚರಣೆಗಳಿಂದ ಕೂಡಿದ್ದು ಶಾರೀರಕ ಹಾಗೂ ಮಾನಸಿಕವಾದ ನಿಗ್ರಹಗಳ ಆಚರಣೆಯ ವಿಧಿಗಳಿಂದ ಯುಕ್ತವಾಗಿರುವ ಧಾರ್ಮಿಕ-ಕರ್ಮಗಳಾಗಿರುತ್ತವೆ. ವ್ರತದಲ್ಲಿ ಪ್ರಾರ್ಥನೆ ಮತ್ತು ಉಪವಾಸ ಎಂಬ ಎರಡು ಮುಖ್ಯವಾದ ಆಚರಣಾ ವಿವರಗಳು ಸೇರಿರುತ್ತವೆ. ಕೆಲವು ವ್ರತಗಳಲ್ಲಿ ಜಾಗರಣೆ ಅಂದರೆ ಇಡೀ ರಾತ್ರಿ ಎಚ್ಚರವಿದ್ದು ಸತ್ಸಂಗ-ಸದ್ವಿಚಾರ-ಚಿಂತನೆಗಳಲ್ಲಿ ಕಳೆಯಬೇಕಾದ ನಿಯಮವೂ ಸೇರಿರುತ್ತದೆ. ವ್ರತವನ್ನು ನಿಶ್ಚಿತವಾದ ಫಲದ ದೃಷ್ಟಿಯಿಂದಲೂ, ಫಲಾಪೇಕ್ಷೆಯಿಲ್ಲದೆ ಭಗವಂತನ ಪ್ರೀತ್ಯರ್ಥವಾದುದು ಎಂಬ ದೃಷ್ಟಿಯಿಂದಲೂ ಆಚರಿಸುತ್ತಾರೆ. ಆ ಮೇರೆ ವ್ರತವನ್ನು ನಿತ್ಯವ್ರತ, ನೈಮಿತ್ತಿಕವ್ರತ ಮತ್ತು ಕಾಮ್ಯವ್ರತ ಎಂದು ವರ್ಗೀಕರಿಸಬಹುದು.

(೧) ನಿತ್ಯವ್ರತ : ಏಕಾದಶೀ, ಪ್ರದೋಷ ಇತ್ಯಾದಿಗಳು. (೨) ನೈಮಿತ್ತಿಕವ್ರತ : ಚಾಂದ್ರಾಯಣಾದಿ ವ್ರತಗಳು. ಇವುಗಳು ಪಾಪಕ್ಷಯಾರ್ಥವಾಗಿ ಕೈಕೊಳ್ಳುವ ವ್ರತಗಳು. (೩) ಕಾಮ್ಯವ್ರತ : ಸತ್ಯನಾರಾಯಣವ್ರತ, ವರಮಹಾಲಕ್ಷ್ಮೀವ್ರತ, ಅನಂತನ ವ್ರತ, ನವರಾತ್ರಿವ್ರತ, ಶಿವರಾತ್ರಿವ್ರತ ಇತ್ಯಾದಿಗಳು. ಇವು ನಿಶ್ಚಿತವಾದ ಸುಖಭೋಗ ಹಾಗೂ ಯೋಗಸಂಪತ್ತುಗಳ ಪ್ರಾಪ್ತಿಗಾಗಿ ಆಚರಿಸುವ ವ್ರತಗಳು.

ವ್ರತಗಳನ್ನು ಪೂಜಾವ್ರತ ಮತ್ತು ಉಪವಾಸವ್ರತ ಎಂಬ ಇನ್ನೊಂದು ರೀತಿಯ ವರ್ಗೀಕರಣ ಮಾಡುವುದೂ ಇದೆ. ಪೂಜಾವ್ರತದಲ್ಲಿ ಉಪವಾಸ ಸೇರಿದೆಯಾದರೂ ಪೂಜೆ ಆದನಂತರ ಒಂದು ಹೊತ್ತು ಭೋಜನ ಸ್ವೀಕಾರ ಮಾಡುವುದಿದೆ. ಉಪವಾಸ ವ್ರತದಲ್ಲಿ ಸಂಬಂಧಿಸಿದ ಪೂರ್ತಿ ಅವಧಿಯಲ್ಲಿ ಭೋಜನ ಮಾಡುವ ಕ್ರಮ ಇರುವುದಿಲ್ಲ. ಉಪವಾಸ ವ್ರತ ಮುಗಿಸಿ ಆಮೇಲೆ ಆಹಾರ ಸ್ವೀಕರಿಸುತ್ತಾರೆ. ಇದನ್ನು ಪಾರಣೆ ಎಂದು ಹೇಳುತ್ತಾರೆ.

ಹೀಗೆ ವ್ರತಗಳಲ್ಲಿ ವಿವಿಧ ತರಹಗಳಿದ್ದು ಅವುಗಳೆಲ್ಲವೂ ಮಾನವ ಜೀವನದ ಉದ್ಧಾರಕ್ಕಾಗಿರುವ ಒಂದು ಸುಗಮವಾದ ಮಾರ್ಗವಾಗಿರುತ್ತದೆ.

ಪರ್ವ : ವ್ರತವನ್ನು ವ್ಯಕ್ತಿಯು ಸ್ವತಃ ಅಥವಾ ಅನೇಕ ಜನರ ಒಡನೆ ಸೇರಿಕೊಂಡು ನಡೆಸುತ್ತಾನೆ. ಅಂತೂ ವ್ರತ ಎಂಬುದು ವ್ಯಕ್ತಿಪ್ರಧಾನವಾದುದು. 'ಪರ್ವ' ಎಂದರೆ ಪ್ರಕೃತಿಯಲ್ಲಿ ಒದಗಿಬರುವ ವಿಶೇಷಗಳಾದ ಸಂಕ್ರಾಂತಿ ಗ್ರಹಣ ಸಂವತ್ಸರದ ಆರಂಭ ಕಾರ್ತಿಕವೈಶಾಖಾದಿ ವಿಶೇಷ ಮಾಸಗಳು ಎಂಬ ಈ ನಿಶ್ಚಿತವಾದ ಕಾಲಮಾನವನ್ನು ಅನುಸರಿಸಿ ಮಾಡುವ ವೈಯಕ್ತಿಕ ಹಾಗೂ ಸಾಮಾಜಿಕ ಹಬ್ಬ, ಉತ್ಸವಗಳಾಗಿರುತ್ತವೆ.

ಈ ಪರ್ವಗಳ ಸಂದರ್ಭಗಳಲ್ಲಿ ಪುಣ್ಯಕ್ಷೇತ್ರ ಅಥವಾ ನದೀತೀರಗಳಲ್ಲಿ ಬಹುಸಂಖ್ಯೆಯಲ್ಲಿ ಜನರು ಸೇರಿ ಸ್ನಾನ ದಾನ ಪೂಜೆ ಪಾರಾಯಣ ದೇವರ ದರ್ಶನ ಹವನ ಬ್ರಾಹ್ಮಣಸಂತರ್ಪಣೆ ಇತ್ಯಾದಿ ಅನೇಕ ರೀತಿಯ ಪುಣ್ಯಕಾರ್ಯಗಳನ್ನು ಮಾಡುವುದೇ ಪರ್ವದ ಆಚರಣೆಯಾಗಿರುತ್ತದೆ. ಈ ರೀತಿ ಪರ್ವಕಾಲದಲ್ಲಿ ಜನರು ಸೇರಿ ಸಾಮೂಹಿಕ ರಂಗದಲ್ಲಿ ದೇವತಾ ಆರಾಧನೆ, ದಾನಸೇವಾದಿಗಳನ್ನು ಆಚರಿಸುವ ಅವಕಾಶವನ್ನು ಪರ್ವೋತ್ಸವ ಎಂದು ಹೇಳುತ್ತಾರೆ. ವ್ರತವು ಸೂಕ್ಷ್ಮಪ್ರಕಾರದ ದೇವತಾರಾಧನೆಯಾದರೆ ಪರ್ವವು ದೀರ್ಘಪ್ರಕಾರದ ದೊಡ್ಡ ಪ್ರಮಾಣದಲ್ಲಿ ಮಾಡುವ ದೇವತಾರಾಧನೆಯಾಗಿರುತ್ತದೆ. ಒಂದು ಕಡೆಯಿಂದ ಇನ್ನೊಂದು ಕಡೆಗೆ ಸ್ನಾನ–ದೇವತಾರಾಧನೆಗಳಿಗಾಗಿ ಯಾತ್ರೆಹೋಗುವ ಹಾಗೂ ಒಂದೆಡೆ ಒಟ್ಟಾಗಿ ಕೂಡುವ ಅವಕಾಶವು ಪರ್ವದಿಂದಾಗಿ ಜನರಿಗೆ ದೊರೆಯುತ್ತದೆ. ಇದರಿಂದಾಗಿ ಜನರಲ್ಲಿ ಬಾಂಧವ್ಯ ಮೈತ್ರಿ ಸಂಸ್ಕೃತಿಯ ವಿಕಾಸವಾಗಲು ಸಾಧ್ಯವಾಗುತ್ತದೆ. ರಾಷ್ಟ್ರೀಯವಾದ ಐಕ್ಯವು ಈ ಪರ್ವಗಳಿಂದಾಗಿ ಉಂಟಾಗಿರುವುದು ಮಾತ್ರವಲ್ಲದೆ ಸಹಸ್ರಾರು ವರ್ಷಗಳಿಂದ ಇಡೀ ಭರತಖಂಡವು ಒಂದು ಎಂಬ ಉದಾತ್ತವಾದ ಐಕ್ಯಭಾವನೆಯನ್ನು ಜನರಲ್ಲಿ ಮೂಡಿಸಲು ಇವು ಸಹಾಯವಾಗಿರುತ್ತವೆ. ಹಾಗಾಗಿ ಪರ್ವ ಉತ್ಸವಗಳಿಂದಾಗಿ ಭಾರತ ದೇಶದಲ್ಲಿ ಸಾಂಸ್ಕೃತಿಕವಾದ, ರಾಷ್ಟ್ರೀಯವಾದ ಐಕ್ಯ ಮೂಡಿ ಭದ್ರವಾಗಿ ನೆಲೆಗೊಂಡಿರಲು ಸಾಧ್ಯವಾಗಿರುವುದರ ಜೊತೆಗೆ ಅವುಗಳ ಸೂಕ್ತವಾದ ರಕ್ಷಣೆ–ಪೋಷಣೆಗಳೂ ಆಗಿರುತ್ತವೆ.

ಹಬ್ಬಗಳು

ಹಬ್ಬ ಎಂದರೆ ವ್ರತ, ನಿಯಮ, ದೇವತೆಗಳ ಪ್ರೀತ್ಯರ್ಥವಾಗಿ ಕೊಡುವ ಬಲಿ (ಹವ್ಯ), ಉಪವಾಸ, ದಾನ–ಧರ್ಮ ಮೊದಲಾದ ಆಚರಣೆಗಳಿಂದ ಕೂಡಿದ ಒಂದು ನಿಶ್ಚಿತವಾದ ಧಾರ್ಮಿಕ ಚಟುವಟಿಕೆಯಾಗಿದೆ. ದೇವತೆಗಳು, ಪಿತೃಗಳು, ಗುರುಗಳು, ಮಹಾತ್ಮರು ಇವರೆಲ್ಲರ ಪ್ರೀತ್ಯರ್ಥವಾಗಿ ಅನೇಕ ವಿಧದ ಪೂಜೆ–ಆರಾಧನೆಗಳು ನಡೆಯುವ ಕ್ರಮಾಚರಣೆಗಳು ಇದ್ದು ಅವುಗಳೆಲ್ಲ ಈ ಹಬ್ಬದ ಕಾರ್ಯಾಂಶದ ಒಳಗೆ ಅಡಕವಾಗಿರುತ್ತವೆ. ಅವತಾರಪುರುಷರ ಮತ್ತು ಮಹಾತ್ಮರ ಜನ್ಮತಿಥಿಗಳು ಹಾಗೂ ಪುಣ್ಯತಿಥಿಗಳ ಆಚರಣೆ, ಪುರಾಣೋಕ್ತ ದೇವತೆಗಳ ಸಂಬಂಧವಾಗಿ ಪೂಜೆಗಳು ಇತ್ಯಾದಿಗಳೆಲ್ಲ ಹಬ್ಬದ ಆಚರಣೆಗೆ ಒಳಪಟ್ಟ ಸಂಗತಿಗಳಾಗಿವೆ. ಹಬ್ಬದ ಆಚರಣೆಯು ವ್ಯಕ್ತಿಗತ

ವಾಗಿ ನಡೆಯುತ್ತವೆ. ಅದರಂತೆ ಸಾಮೂಹಿಕವಾಗಿಯೂ ನಡೆಯುತ್ತವೆ. ಸಾಮೂಹಿಕ ವಾಗಿ ಆಚರಿಸಲ್ಪಡುವಾಗ ರಥೋತ್ಸವ, ಜಾತ್ರೆಗಳು ಎಂಬ ರೂಪದಲ್ಲಿ ನಡೆಸಲ್ಪಡುತ್ತವೆ.

ಉದಾಹರಣೆ : ಗಣೇಶನ ಹಬ್ಬ, ದಸರಾ ಹಬ್ಬ ಇತ್ಯಾದಿ.

ವ್ರತ ಪರ್ವ ಹಬ್ಬ ಇವುಗಳೆಲ್ಲವೂ ಬೇರೆ ಬೇರೆ ಎಂದು ನಿರ್ದಿಷ್ಟವಾಗಿ ಬೇರ್ಪಡಿಸಲು ಸಾಧ್ಯವಿಲ್ಲ. ಇವು ಒಂದಕ್ಕೊಂದು ಸಂಬಂಧಿಸಿದ್ದು ಹಿಂದೆ ಹೇಳಿದಂತೆ ಮನುಷ್ಯನ ಲೌಕಿಕ ಪ್ರಗತಿ ಮತ್ತು ಆಧ್ಯಾತ್ಮಿಕವಾದ ಉನ್ನತಿಗೆ ನೆರವಾಗುವ ವಿಶೇಷವಾದ ಸಾಧನಾ ಮಾರ್ಗಗಳಾಗಿವೆ. ಹಬ್ಬ–ವ್ರತ–ಪರ್ವಗಳನ್ನೆಲ್ಲ ಆಚರಿಸುವ ಬಗೆಗೆ ನಿಶ್ಚಿತವಾದ ನಿಯಮ, ಅರ್ಥಪೂರ್ಣವಾದ ಹಿನ್ನೆಲೆಯ ಕಥೆ, ಕ್ರಮ ವಿವರಗಳು ಇದ್ದು ಅವುಗಳಿಗೆ ವೇದದ ಕರ್ಮಕಾಂಡ, ಪುರಾಣಕಥೆಗಳು, ಧರ್ಮಶಾಸ್ತ್ರಗಳು, ಸೂತ್ರಗಳು, ಸಾಧು ಸಂತರ ಜೀವನ ಮತ್ತು ಸಂದೇಶಗಳು ಆಧಾರವಾಗಿರುತ್ತವೆ.

ಹಿಂದೂವಿನ ಜೀವನದಲ್ಲಿ ವರ್ಷದ ಎಲ್ಲಾ ತಿಂಗಳೂ ಹಬ್ಬ–ವ್ರತಾದಿಗಳಿಗೆ ಅವಕಾಶ ವಿದೆ. ಇದರಿಂದಾಗಿ ಹಿಂದೂವಿಗೆ ಆಗಿಂದಾಗ್ಗೆ ತನ್ನ ವೈಯಕ್ತಿಕ ಹಾಗೂ ಸಾಮಾಜಿಕ ಜೀವನಕ್ಕೆ ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕ ಶಕ್ತಿಯನ್ನು ತುಂಬಿಕೊಳ್ಳುವ ಮತ್ತು ಆ ದಿಸೆಯಲ್ಲಿ ಹೆಚ್ಚು ಪ್ರಗತಿಯನ್ನು ಪಡೆಯುವ ಅವಕಾಶವು ದೊರಕಿದಂತಾಗುತ್ತದೆ. ಅಷ್ಟುಮಾತ್ರವಲ್ಲದೆ ಬದುಕಿನ ಮಹೋನ್ನತ ಗುರಿಯ ಸಾಧನೆಗೆ ತಾನು ಪ್ರಯತ್ನಿಸ ಬೇಕೆಂಬ ನೆನಪು ಸಹ ಉಂಟಾಗುತ್ತದೆ. ಈ ಹಬ್ಬ ವ್ರತಗಳ ಹಿನ್ನೆಲೆಯಲ್ಲಿ ದುಷ್ಟ ಶಕ್ತಿಯ ದಮನ ಹಾಗೂ ಶಿಷ್ಟಶಕ್ತಿಯ ವಿಜಯದ ತತ್ತ್ವವು ಅಡಗಿದ್ದು ಬಹುಮಟ್ಟಿಗೆ ಹಬ್ಬ ಉತ್ಸವಗಳೆಲ್ಲದರ ಸಂಬಂಧವಾಗಿರುವ ಕಥೆಗಳು ಈ ತತ್ತ್ವವನ್ನೇ ಪ್ರತಿಪಾದಿಸು ತ್ತವೆ. ಅಷ್ಟೇ ಅಲ್ಲದೆ ಈ ವ್ರತ–ಹಬ್ಬ ಇತ್ಯಾದಿಗಳ ಸರಿಯಾದ ಆಚರಣೆಯಿಂದ ಒದಗುವ ಫಲವೂ ಕೂಡ ಅದೇ ಆಗಿದ್ದು ಸಾಂಕೇತಿಕವಾಗಿ ಹಬ್ಬ–ಸಡಗರಗಳೆಲ್ಲವೂ ದುಷ್ಟಶಕ್ತಿಯ ದಮನ ಮತ್ತು ಶಿಷ್ಟಶಕ್ತಿಯ ವಿಜಯವನ್ನೇ ಸೂಚಿಸುತ್ತವೆ.

ಒಂದು ವರ್ಷದಲ್ಲಿ ಮುಖ್ಯವಾಗಿ ಬರುವ ಹಿಂದೂ ಹಬ್ಬ–ವ್ರತಾದಿಗಳ ವಿವರ ಸಂಗ್ರಹವಾಗಿ ಹೀಗಿದೆ :

ಚೈತ್ರಮಾಸ (ಮಾರ್ಚ್–ಏಪ್ರಿಲ್) :

೧. ಯುಗಾದಿ—ನೂತನ ವರ್ಷದ ಆರಂಭ. ಚೈತ್ರ ಶುದ್ಧ ಪಾಡ್ಯ.
೨. ಶ್ರೀರಾಮನವಮಿ—ಚೈತ್ರ ಶುಕ್ಲ ನವಮಿ.
೩. ಶ್ರೀಮಹಾವೀರ ಜಯಂತಿ—ಚೈತ್ರ ಶುಕ್ಲ ತ್ರಯೋದಶಿ.
೪. ವನಪೂರ್ಣಿಮ (ವನದೇವತಾ ಪೂಜೆ)—ಚೈತ್ರ ಶುಕ್ಲ ಹುಣ್ಣಿಮೆ.
೫. ಹನುಮಜ್ಜಯಂತಿ—ಚೈತ್ರ ಶುಕ್ಲ ಹುಣ್ಣಿಮೆ.
೬. ಅಕ್ಕನ ಹುಣ್ಣಿಮೆ (ಶಿವಶರಣೆ ಮಹಾದೇವಿಯಕ್ಕನ ಜಯಂತಿ)—ಚೈತ್ರ ಶುಕ್ಲ ಹುಣ್ಣಿಮೆ.
೭. ಮುತ್ತೈದೆ ಹುಣ್ಣಿಮೆ—ಚೈತ್ರ ಶುಕ್ಲ ಹುಣ್ಣಿಮೆ.

ವೈಶಾಖಮಾಸ—ಮೇ

೧. ಅಕ್ಷಯತೃತೀಯಾ—ವೈಶಾಖ ಶುಕ್ಲ ತೃತೀಯಾ.
೨. ಶ್ರೀ ಬಸವೇಶ್ವರ ಜಯಂತಿ—ವೈಶಾಖ ಶುಕ್ಲ ತೃತೀಯಾ.
೩. ಶ್ರೀ ಪರಶುರಾಮ ಜಯಂತಿ—ವೈಶಾಖ ಶುಕ್ಲ ತೃತೀಯಾ.
೪. ಶ್ರೀ ಶಂಕರ ಜಯಂತಿ—ವೈಶಾಖ ಶುಕ್ಲ ಪಂಚಮಿ.
೫. ಶ್ರೀ ರಾಮಾನುಜ ಜಯಂತಿ—ವೈಶಾಖ ಶುಕ್ಲ ಷಷ್ಠೀ.
೬. ಶ್ರೀ ನೃಸಿಂಹ ಜಯಂತಿ—ವೈಶಾಖ ಶುಕ್ಲ ಚತುರ್ದಶಿ.
೭. ಶ್ರೀ ಬುದ್ಧ ಜಯಂತಿ—ವೈಶಾಖ ಪೂರ್ಣಿಮಾ.

ಜ್ಯೇಷ್ಠಮಾಸ :

೧. ಗಂಗೋತ್ಸವ—ಜ್ಯೇಷ್ಠ ಶುಕ್ಲ ಪಾಡ್ಯದಿಂದ ದಶಮಿ ತನಕ.
೨. ಗಂಗಾವತಾರ—ಜ್ಯೇಷ್ಠ ಶುಕ್ಲ ದಶಮಿ.
೩. ವಟಸಾವಿತ್ರೀವ್ರತ—ಜ್ಯೇಷ್ಠ ಶುಕ್ಲ ಪೂರ್ಣಿಮಾ.

ಆಷಾಢಮಾಸ (ಜೂನ್-ಜುಲೈ) :

೧. ಶಯನೀ ಏಕಾದಶೀ (ಚಾತುರ್ಮಾಸ್ಯಾರಂಭ)—ಆಷಾಢ ಶುಕ್ಲ ಏಕಾದಶಿ.
೨. ವ್ಯಾಸಪೂರ್ಣಿಮಾ ಅರ್ಥಾತ್ ಗುರುಪೂರ್ಣಿಮಾ—ಆಷಾಢ ಪೂರ್ಣಿಮಾ.

ಶ್ರಾವಣಮಾಸ (ಜುಲೈ-ಆಗಸ್ಟ್) :

೧. ಸುವರ್ಣಗೌರೀವ್ರತ—ಶ್ರಾವಣ ಶುಕ್ಲ ತೃತೀಯಾ.
೨. ನಾಗರಪಂಚಮಿ—ಶ್ರಾವಣ ಶುಕ್ಲ ಪಂಚಮಿ.
೩. ವರಮಹಾಲಕ್ಷ್ಮೀವ್ರತ—ಶ್ರಾವಣ ಶುಕ್ಲ ತ್ರಯೋದಶಿ. ಶ್ರಾವಣ ಮಾಸದ ಎರಡನೇ ಶುಕ್ರವಾರ.
೪. ನೂಲು ಹುಣ್ಣಿಮೆ—ಶ್ರಾವಣ ಪೂರ್ಣಿಮಾ.
೫. ಹಯಗ್ರೀವ ಜಯಂತಿ—ಶ್ರಾವಣ ಪೂರ್ಣಿಮಾ.
೬. ಶ್ರೀಕೃಷ್ಣಜನ್ಮಾಷ್ಟಮೀ (ಶ್ರೀಕೃಷ್ಣಜಯಂತಿ)—ಶ್ರಾವಣ ಕೃಷ್ಣ ಅಷ್ಟಮೀ.
೭. ಶ್ರಾವಣ ಸೋಮವಾರ ವ್ರತ—ಈ ಮಾಸದ ನಾಲ್ಕು ಸೋಮವಾರಗಳು.
ಶ್ರಾವಣ ಮಂಗಳವಾರ ವ್ರತ—ಈ ಮಾಸದ ನಾಲ್ಕು ಮಂಗಳವಾರಗಳು.
ಶ್ರಾವಣ ಶುಕ್ರವಾರ ವ್ರತ—ಈ ಮಾಸದ ನಾಲ್ಕು ಶುಕ್ರವಾರಗಳು.
ಶ್ರಾವಣ ಶನಿವಾರ—ಈ ಮಾಸದ ನಾಲ್ಕು ಶನಿವಾರಗಳು.
೮. ಮಂಗಳಗೌರೀ ವ್ರತ—ಶ್ರಾವಣಮಾಸದ ಪ್ರತಿ ಮಂಗಳವಾರ.
೯. ಶ್ರೀ ರಾಘವೇಂದ್ರ ಸ್ವಾಮಿಗಳವರ ಆರಾಧನೆ—ಶ್ರಾವಣ ಕೃಷ್ಣ ಬಿದಿಗೆ.
೧೦. ಶ್ರೀ ರಾಮಕೃಷ್ಣ ಪರಮಹಂಸರ ಪುಣ್ಯತಿಥಿ—ಶ್ರಾವಣ ಕೃಷ್ಣ ಪಾಡ್ಯ.

ಭಾದ್ರಪದಮಾಸ (ಸೆಪ್ಟೆಂಬರ್-ಅಕ್ಟೋಬರ್) :

೧. ಸೌಭಾಗ್ಯತೃತೀಯಾ—ಭಾದ್ರಪದ ಶುದ್ಧ ತೃತೀಯಾ.

೨. ಗೌರೀ ತದಿಗೆ (ಗೌರೀ ಹಬ್ಬ)—ಭಾದ್ರಪದ ಶುಕ್ಲ ತದಿಗೆ.
೩. ಗಣೇಶಚತುರ್ಥೀ (ಚೌತಿ)—ಭಾದ್ರಪದ ಶುಕ್ಲ ಚತುರ್ಥೀ.
೪. ಋಷಿಪಂಚಮೀ—ಭಾದ್ರಪದ ಶುಕ್ಲ ಪಂಚಮೀ.
೫. ಅನಂತನ ವ್ರತ (ಅನಂತಚತುರ್ದಶೀ)—ಭಾದ್ರಪದ ಶುಕ್ಲ ಚತುರ್ದಶೀ.
೬. ಸರ್ವಪಿತೃ ಅಮಾವಾಸ್ಯೆ (ಮಹಾಲಯ ಅಮಾವಾಸ್ಯೆ)—ಭಾದ್ರಪದ ಅಮಾವಾಸ್ಯೆ.

ಆಶ್ವಯುಜ ಮಾಸ (ಅಕ್ಟೋಬರ್–ನವೆಂಬರ್) :

೧. ನವರಾತ್ರಿ ಆರಂಭ (ದಸರಾ)—ಆಶ್ವಯುಜ ಶುಕ್ಲ ಪಾಡ್ಯ.
೨. ಲಲಿತಾಪಂಚಮೀ—ಆಶ್ವಯುಜ ಶುಕ್ಲ ಪಂಚಮೀ.
೩. ದುರ್ಗಾಷ್ಟಮೀ—ಆಶ್ವಯುಜ ಶುಕ್ಲ ಅಷ್ಟಮೀ.
೪. ಮಹಾನವಮೀ (ಆಯುಧಪೂಜಾ) —ಆಶ್ವಯುಜ ಶುಕ್ಲ ನವಮೀ
೫. ವಿಜಯದಶಮೀ—ಆಶ್ವಯುಜ ಶುಕ್ಲ ದಶಮೀ.
೬. ಶ್ರೀಮಧ್ವಾಚಾರ್ಯರ ಜಯಂತಿ—ಆಶ್ವಯುಜ ಶುಕ್ಲ ದಶಮೀ.
೭. ಶ್ರೀ ಕೋಜಾಗರೀ ವ್ರತ (ಶ್ರೀ ಲಕ್ಷ್ಮೀಪೂಜಾ)—ಆಶ್ವಯುಜ ಹುಣ್ಣಿಮೆ.
೮. ನರಕಚತುರ್ದಶಿ—ಆಶ್ವಯುಜ ಕೃಷ್ಣ ಚತುರ್ದಶೀ.
೯. ದೀಪಾವಳಿ ಅಮಾವಾಸ್ಯೆ—ಆಶ್ವಯುಜ ಅಮಾವಾಸ್ಯೆ.

ಕಾರ್ತೀಕ ಮಾಸ (ನವೆಂಬರ್-ದಶಂಬರ) :

೧. ದೀಪಾವಳೀ ಹಬ್ಬ (ಗೋಪೂಜೆ, ಬಲಿಪೂಜೆ, ಅಂಗಡಿಪೂಜೆ)—ಕಾರ್ತೀಕ ಶುಕ್ಲ ಪಾಡ್ಯ.
೨. ಯಮದ್ವಿತೀಯಾ—ಕಾರ್ತೀಕ ಶುಕ್ಲ ಬಿದಿಗೆ.
೩. ಉತ್ಥಾನ ಏಕಾದಶೀ (ಪ್ರಬೋಧಿನೀ ಏಕಾದಶೀ, ಚಾತುರ್ಮಾಸ್ಯ ವ್ರತ ಸಮಾಪ್ತಿ)—ಕಾರ್ತೀಕ ಶುಕ್ಲ ಏಕಾದಶೀ.
೪. ಉತ್ಥಾನದ್ವಾದಶೀ (ತುಲಸೀಪೂಜೆ)—ಕಾರ್ತೀಕ ಶುಕ್ಲ ದ್ವಾದಶೀ.
೫. ವೈಕುಂಠಚತುರ್ದಶೀ—ಕಾರ್ತೀಕ ಶುಕ್ಲ ಚತುರ್ದಶೀ.
೬. ಕಾರ್ತೀಕ ಸೋಮವಾರ ವ್ರತ—ಈ ಮಾಸದ ನಾಲ್ಕು ಸೋಮವಾರಗಳು.

ಮಾರ್ಗಶಿರ ಮಾಸ (ದಶಂಬರ-ಜನವರಿ) :

೧. ಚಂಪಾಷಷ್ಠೀ—ಮಾರ್ಗಶಿರ ಶುಕ್ಲ ಷಷ್ಠೀ.
೨. ಸುಬ್ರಹ್ಮಣ್ಯಷಷ್ಠೀ—ಮಾರ್ಗಶಿರ ಶುಕ್ಲ ಷಷ್ಠೀ.
೩. ಗೀತಾ ಜಯಂತಿ—ಮಾರ್ಗಶಿರ ಶುಕ್ಲ ಏಕಾದಶೀ.
೪. ದತ್ತಾತ್ರೇಯ ಜಯಂತಿ—ಮಾರ್ಗಶಿರ ಹುಣ್ಣಿಮೆ.
೫. ಶ್ರೀಮಾತೆ ಶಾರದಾಮಣಿ ದೇವಿಯವರ ಜಯಂತಿ—ಮಾರ್ಗಶಿರ ಕೃಷ್ಣ ಸಪ್ತಮೀ.
(೬) ಎಳ್ಳಮಾವಾಸ್ಯೆ—ಮಾರ್ಗಶಿರ ಅಮಾವಾಸ್ಯೆ.

ಪೌಷಮಾಸ (ಪುಷ್ಯಮಾಸ) ಜನವರಿ-ಫೆಬ್ರುವರಿ :

೧. ಮಕರಸಂಕ್ರಾಂತಿ, ಉತ್ತರಾಯಣ ಪುಣ್ಯಕಾಲ—ಪುಷ್ಯ ಮಾಸದ ಮೂವತ್ತನೇ ದಿನ.

೨. ಸ್ವಾಮಿ ವಿವೇಕಾನಂದರ ಜಯಂತಿ—ಪುಷ್ಯ ಕೃಷ್ಣ ಸಪ್ತಮಿ.

ಮಾಘಮಾಸ ಫೆಬ್ರುವರಿ—ಮಾರ್ಚ್ :

೧. ಶ್ರೀ ಪಂಚಮಿ—ಮಾಘ ಶುಕ್ಲ ಪಂಚಮಿ.

೨, ರಥಸಪ್ತಮಿ (ಸೂರ್ಯಪೂಜೆ)—ಮಾಘ ಶುಕ್ಲ ಸಪ್ತಮಿ.

೩. ಭೀಷ್ಮಾಷ್ಟಮಿ—ಮಾಘ ಶುಕ್ಲ ಅಷ್ಟಮಿ.

೪. ಶ್ರೀಮಧ್ವನವಮಿ (ಆರಾಧನೆ)—ಮಾಘ ಶುಕ್ಲ ನವಮಿ.

೫. ಮಹಾಶಿವರಾತ್ರಿ—ಮಾಘ ಕೃಷ್ಣ ತ್ರಯೋದಶೀ.

ಫಾಲ್ಗುಣ ಮಾಸ (ಮಾರ್ಚ್)

೧. ಶ್ರೀರಾಮಕೃಷ್ಣ ಪರಮಹಂಸರ ಜಯಂತಿ—ಫಾಲ್ಗುಣ ಶುಕ್ಲ ಬಿದಿಗೆ.

೨. ಹೋಳಿಹುಣ್ಣಿಮೆ—ಫಾಲ್ಗುಣ ಹುಣ್ಣಿಮೆ.

೩. ಶ್ರೀಚೈತನ್ಯಜಯಂತಿ—ಫಾಲ್ಗುಣ ಹುಣ್ಣಿಮೆ.

೪. ವಸಂತಪೂರ್ಣಿಮೆ—ಫಾಲ್ಗುಣ ಹುಣ್ಣಿಮೆ.

೫. ಯುಗಾದಿ ಅಮಾವಾಸ್ಯೆ (ವರ್ಷಾಂತ್ಯ)—ಫಾಲ್ಗುಣ ಕೃಷ್ಣ ಅಮಾವಾಸ್ಯೆ.

ಹಿಂದೂಧರ್ಮದ ನಂಬಿಕೆಯ ಪ್ರಕಾರವಾಗಿ ನೆರವೇರುವ ವಿಶೇಷವಾದ ಪರ್ವಗಳು ಹಾಗೂ ಪರ್ವಾಚರಣೆಗಳು :

೧. ಹರಿದ್ವಾರ ಮತ್ತು ಪ್ರಯಾಗ (ಅಲಹಾಬಾದ್) ಸ್ಥಳಗಳಲ್ಲಿ ಬೇರೆಬೇರೆ ಕಾಲಗಳಲ್ಲಿ ೧೨ ವರ್ಷಕ್ಕೊಮ್ಮೆ ನಡೆಯುವ ಮಹಾಕುಂಭಮೇಳ ಮತ್ತು ಆ ಪರ್ವಕಾಲದಲ್ಲಿ ಮಾಡುವ ಗಂಗಾಸ್ನಾನ.

೨. ಮೀರತ್ ಜಿಲ್ಲೆಯ ಗುರುಮುಕ್ತೇಶ್ವರನದಲ್ಲಿ ಕಾರ್ತೀಕ ಪೂರ್ಣಿಮೆಯಂದು ನಡೆಯುವ ಗುರುಮುಕ್ತೇಶ್ವರ ಮೇಳ.

೩. ಸಾಮಾನ್ಯವಾಗಿ ೧೨ ವರ್ಷಗಳಿಗೊಮ್ಮೆ ನಡೆಯುವ ತಲಕಾಡಿನ ಪಂಚಲಿಂಗೇಶ್ವರ ಜಾತ್ರೆ.

೪. ಕುಂಭಕೋಣಂನ ಪವಿತ್ರ ಸರೋವರ 'ಅಮೃತವಾಪಿ'ಯಲ್ಲಿ ೧೨ ವರ್ಷಕ್ಕೊಮ್ಮೆ ನಡೆಯುವ ಮಹಾಮುಖ ಸ್ನಾನಮೇಳ.

ಈಗಾಗಲೇ ಹೇಳಿದಂತೆ ಹಿಂದೂಗಳ ಪವಿತ್ರವಾದ ಹಬ್ಬ ಹಾಗೂ ವ್ರತಗಳು ಹಲವು ಇವೆ. ಅವುಗಳಲ್ಲಿ ಪ್ರತಿಯೊಂದಕ್ಕೂ ಕೂಡ ನಿಶ್ಚಿತವಾದ ವಿಧಿನಿಯಮಗಳೂ, ಆಚರಣಾವಿಧಾನಗಳೂ, ಪುರಾಣದ ಕಥೆಗಳ ಆಧಾರಗಳೂ, ಧಾರ್ಮಿಕವಾದ ವೈಶಿಷ್ಟ್ಯಗಳೂ ಮತ್ತು ಆಧ್ಯಾತ್ಮಿಕವಾದ ಮಹತ್ವ ಹಿನ್ನೆಲೆಗಳೂ ಇವೆ. ವರ್ಷದಲ್ಲಿ ಬರುವ ಎಲ್ಲಾ ಹಬ್ಬಗಳ ವಿವರಗಳನ್ನು ಈ ಗ್ರಂಥದಲ್ಲಿ ನೀಡಲು ಪ್ರಸ್ತುತ ಗ್ರಂಥವಿಸ್ತಾರದ ಭಯದಿಂದಾಗಿ ಸಾಧ್ಯವಿಲ್ಲ. ಆದರೂ ಕೂಡ ಶ್ರೀ ಗಣೇಶಚೌತಿ, ನವರಾತ್ರಿ ಮತ್ತು

ದೀಪಾವಳಿ ಹಬ್ಬಗಳ ಕುರಿತಾದ ವಿವರಗಳು ವೈಶಿಷ್ಟ್ಯಗಳು ಇತ್ಯಾದಿಗಳನ್ನು ಇಲ್ಲಿ ಸೂಕ್ಷ್ಮವಾಗಿ ನೀಡಲಾಗಿದೆ.

**ಶ್ರೀ ಗಣೇಶಚೌತಿ**

ಭಾದ್ರಪದ ಮಾಸದ ಶುಕ್ಲಪಕ್ಷದ ಚೌತಿಯಂದು ಬರುವ ಶ್ರೀ ಗಣೇಶನ ಹಬ್ಬ ಹಿಂದೂಗಳ ಹಬ್ಬಗಳಲ್ಲೆಲ್ಲಾ ವೈಶಿಷ್ಟ್ಯಪೂರ್ಣವಾದ ಆಚರಣೆ, ಆಕರ್ಷಣೆಗಳಿಂದ ಕೂಡಿದ ಹಬ್ಬವಾಗಿದೆ. ಹಿಂದೂಧರ್ಮದ ಎಲ್ಲ ಪಂಥದವರೂ ಪ್ರೀತಿಯಿಂದ ಉತ್ಸಾಹ ದಿಂದ ಕೂಡಿ ಆಚರಿಸುವ ಏಕೈಕ ಹಬ್ಬವೇ ಗಣೇಶನ ಹಬ್ಬ. ಇದನ್ನು ಚೌತಿ ಹಬ್ಬ, ವಿನಾಯಕನ ವ್ರತ ಎಂದೂ ಕರೆಯುತ್ತಾರೆ.

ಗಣೇಶಚೌತಿಗೆ ಹಿಂದಿನ ದಿವಸ ಗೌರಿಹಬ್ಬ ಕೂಡಿಬರುತ್ತದೆ. ಗೌರಿ ಹಬ್ಬದಂದು ಮಂಗಳಗೌರಿಯ ವಿಗ್ರಹವನ್ನು ಮನೆಯ ಹಾಗೂ ಪರಿವಾರದ ಹೆಣ್ಣುಮಕ್ಕಳು ಹಿರಿಯರು ಕಿರಿಯರು ಎಲ್ಲರೂ ಸೇರಿ ಮನೆಯಲ್ಲಿ ವಿಧಿಯುಕ್ತವಾಗಿ ಪ್ರತಿಷ್ಠೆಮಾಡಿ ಪೂಜಿಸುತ್ತಾರೆ. ದಾಂಪತ್ಯಸೌಖ್ಯ, ಮುತ್ತೈದೆಭಾಗ್ಯ, ಸಂಪತ್ತಿನ ಅಭಿವೃದ್ಧಿ ಇವುಗಳು ಮಂಗಳರೂಪಿ ಮಹಾಗೌರಿಯ ಪೂಜೆಯಿಂದ ಲಭಿಸುತ್ತದೆ ಎಂಬುದು ಈ ವ್ರತದ ಹಿಂದಿನ ನಂಬಿಕೆಯ ತತ್ತ್ವವಾಗಿದೆ. ಈ ಹಬ್ಬವನ್ನು ಗೌರಿಹಬ್ಬ ಎನ್ನುತಾರೆ. ಗೌರಿಹಬ್ಬದ ಮಾರನೆಯ ದಿವಸವೇ ಗಣೇಶನ ಹಬ್ಬ. ಹೀಗಾಗಿ ಈ ಎರಡು ಹಬ್ಬಗಳನ್ನು ಒಟ್ಟಿಗೇ ಗೌರೀಗಣೇಶನ ಹಬ್ಬ ಎಂದೂ ಕರೆಯುತ್ತಾರೆ.

ಗಣೇಶನ ಹಬ್ಬದಲ್ಲಿ ಗಣಪತಿಯ ವಿಗ್ರಹದ ಪ್ರತಿಷ್ಠೆ, ಗಣಪತಿ ಹೋಮ, ಗಣಪತಿ ವಿಗ್ರಹದ ವಿಸರ್ಜನೆ, ಇವುಗಳು ಮುಖ್ಯವಾದ ಅಂಶಗಳಾಗಿವೆ. ಚೌತಿಯ ದಿವಸದಂದು ವಿಧಿಯುಕ್ತವಾಗಿ ಮನೆಗಳಲ್ಲಿ, ಸಾರ್ವಜನಿಕ ಸಂಸ್ಥೆಗಳ ಆಶ್ರಯದಲ್ಲಿ ಗಣೇಶನ ವಿಗ್ರಹ ವನ್ನು ಪ್ರತಿಷ್ಠೆಮಾಡುತ್ತಾರೆ. ಆ ದಿವಸ ಅನೇಕ ಮಂದಿಯು ಮನೆಗಳಲ್ಲಿ, ಗಣಪತಿಯ ದೇಗುಲಗಳಲ್ಲಿ—ಆರಾಧನಾ ಸ್ಥಳಗಳಲ್ಲಿ ಶ್ರೀ ಮಹಾಗಣಪತಿ ಹೋಮವನ್ನು ಮಾಡು ತ್ತಾರೆ. ಒಂದು ತೆಂಗಿನಕಾಯಿಯಿಂದ ಸಹಸ್ರ ತೆಂಗಿನಕಾಯಿಯ ತನಕ ಹೋಮ ಕುಂಡಕ್ಕೆ ವಿಶೇಷ ಆಹುತಿ ಅರ್ಪಿಸಿ ಶ್ರೀ ಗಣೇಶನ ಆರಾಧನೆ ನಡೆಸುತ್ತಾರೆ. ಹೋಮಕ್ಕೆ ಅರಳು, ಕಬ್ಬು, ಬೆಲ್ಲ, ಅವಲಕ್ಕಿ, ಜೇನುತುಪ್ಪ, ಎಳ್ಳು, ತೆಂಗಿನಕಾಯಿ ಎಂಬ ಎಂಟು ವಿಧದ ದ್ರವ್ಯಗಳಿಂದ ಕೂಡಿದ ಅಷ್ಟದ್ರವ್ಯ ಎಂಬ ಖಾದ್ಯವನ್ನು ಅರ್ಪಿಸುತ್ತಾರೆ. ಪಂಚಕಜ್ಜಾಯ, ಅಪ್ಪಕಜ್ಜಾಯ, ಕಡುಬು, ಮೋದಕ, ಬಾಳೆಹಣ್ಣು ರಸಾಯನ ಇವು ಗಳು ಗಣಪತಿ ದೇವರಿಗೆ ತುಂಬ ಪ್ರಿಯವಾದ ತಿಂಡಿನೈವೇದ್ಯಗಳು.

ಶ್ರೀ ಗಣಪತಿ ಪ್ರತಿಷ್ಠೆ ಮಾಡಿ ಅವನನ್ನು ನಟನ, ಗಾಯನ, ನೃತ್ಯ, ಹರಿಕಥೆ, ಪ್ರವಚನ ಎಂಬ ಐದು ವಿಧದ ಸೇವೆಗಳಿಂದ ಮುಖ್ಯವಾಗಿ ಆರಾಧಿಸುತ್ತಾರೆ.

ಶ್ರೀ ಗಣೇಶನ ಉತ್ಸವಕ್ಕೆ ಊರಿನ ಮಂದಿಯೆಲ್ಲ ಉತ್ಸಾಹದಿಂದ ಒಂದಾಗುತ್ತಾರೆ. ಗಣೇಶನ ಉತ್ಸವವು ಒಂದರಿಂದ ೪೮ ದಿವಸಗಳ ತನಕ ನಡೆಯುತ್ತದೆ. ಸಾಮಾನ್ಯವಾಗಿ ಒಂದೇ ದಿವಸಕ್ಕೆ ಮುಗಿಸುವವರ ಸಂಖ್ಯೆ ಹೆಚ್ಚು. ಹಾಗಿಲ್ಲದಿದ್ದರೆ ಚೌತಿಯಿಂದ ೧೧ನೇ ದಿನವಾದ ಅನಂತನ ಚತುರ್ದಶಿ ದಿವಸದಂದು ಗಣಪತಿ ವಿಗ್ರಹದ ವಿಸರ್ಜನೆ ಮಾಡು

ತ್ತಾರೆ. ಅಂದಿಗೆ ಉತ್ಸವ ಮುಕ್ತಾಯಗೊಳ್ಳುತ್ತದೆ. ಉತ್ಸವ ಮುಕ್ತಾಯದ ದಿವಸ ಗ್ರಾಮದ, ಊರಿನ ಬೀದಿಗಳಲ್ಲಿ ಶ್ರೀ ಗಣೇಶನನ್ನು ವೈಭವಯುತವಾದ ಅಲಂಕೃತ ತೇರಿನಲ್ಲಿ ಕುಳ್ಳಿರಿಸಿ ಮೆರವಣಿಗೆಯಲ್ಲಿ ಕೊಂಡೊಯ್ಯುತ್ತಾರೆ. ಅನುಕೂಲ ಹಾಗೂ ಸಾಮರ್ಥ್ಯಕ್ಕೆ ತಕ್ಕಂತೆ ವಿವಿಧ ರೀತಿಯ ವಾದ್ಯ, ನೃತ್ಯ, ಮನೋರಂಜನೆ ಕಾರ್ಯಕ್ರಮಗಳಿಂದ ಈ ವಿಸರ್ಜನ ಉತ್ಸವವನ್ನು ಆಚರಿಸುತ್ತಾರೆ.

ಗಣಪತಿಯ ವಿಗ್ರಹವನ್ನು ಮಣ್ಣಿನಿಂದ ಮಾಡುತ್ತಾರೆ. ದೇಗುಲಗಳಲ್ಲಿ ಪ್ರತಿಷ್ಠೆಗೆ ಶಿಲೆಯ ವಿಗ್ರಹ. ಪಂಚಲೋಹದ ವಿಗ್ರಹಗಳನ್ನು ಬಳಸುತ್ತಾರೆ. ಹಬ್ಬಕ್ಕಾಗಿ ಪ್ರತಿಷ್ಠೆ ಮಾಡಿದ ವಿಗ್ರಹವನ್ನು ಕೊನೆಗೆ ಬಾವಿ, ನದಿ, ಸರೋವರ, ಸಮುದ್ರದಲ್ಲಿ ವಿಸರ್ಜಿಸುತ್ತಾರೆ. ಮಣ್ಣಿನಿಂದ ಬಂದ ಈ ನಮ್ಮ ಪಂಚಭೂತಗಳಿಂದ ನಿರ್ಮಿತವಾದ ದೇಹ ಕೊನೆಗೆ ಪಂಚಭೂತಗಳನ್ನೇ ಸೇರುತ್ತದೆ. ಮಾನವನ ಜೀವಿತದಲ್ಲಿ ಎಲ್ಲ ಪ್ರತಿಷ್ಠೆ, ಪ್ರಶಸ್ತಿ. ಏನೇ ಇರಲಿ, ಸುಖಸಂತೋಷಗಳು ಎಷ್ಟೇ ಇರಲಿ, ಅದೆಲ್ಲ ಕೊನೆಗೆ ಮೂಲ ಭೂತವಾದ ಪಂಚಭೂತ ತತ್ತ್ವಗಳಲ್ಲಿ ಲೀನವಾಗಬೇಕೆಂಬುದನ್ನು ಆಧ್ಯಾತ್ಮಿಕವಾಗಿ ಈ ಗಣೇಶ ಉತ್ಸವ ಸೂಚಿಸುತ್ತದೆ. ಉತ್ಸವದ ಮೂಲಕೇಂದ್ರ ಗಣಪತಿ. ಹಾಗೆಯೇ ನಮ್ಮ ಜೀವನದ ಮೂಲ ಆಧಾರ, ಕೇಂದ್ರ ದೇವರಾಗಬೇಕು. ಆಗ ನಮ್ಮ ಬದುಕೂ ಕೂಡ ಒಂದು ಮಹೋತ್ಸವ ಆಗುತ್ತದೆ. ಆ ಉತ್ಸವದಲ್ಲಿ ನಾವು ಎಸಗುವ ಚಟುವಟಿಕೆಗಳೆಲ್ಲ ಭಗವಂತನಿಗೆ ಅರ್ಪಿತವಾಗುತ್ತವೆ—ಎಂಬ ಸಾಂಕೇತಿಕ ಅರ್ಥ ಈ ಗಣೇಶನ ಹಬ್ಬದ ಆಚರಣೆಯಲ್ಲಿ ಅಡಗಿದೆ.

ಆಧುನಿಕ ಕಾಲದಲ್ಲಿ ಶ್ರೀ ಗಣೇಶನ ಉತ್ಸವವನ್ನು ರಾಷ್ಟ್ರಮಟ್ಟದಲ್ಲಿ ವ್ಯವಸ್ಥಿತವಾಗಿ ನಡೆಸುತ್ತಾ ರಾಷ್ಟ್ರೀಯ ಭಾವೈಕ್ಯಕ್ಕೆ, ಸಮಾಜದ ಒಗ್ಗಟ್ಟಿಗೆ, ಕಾರಣವಾಗುವಂತೆ ಒಳ್ಳೆಯ ವ್ಯವಸ್ಥೆ ಮಾಡಿದವರು ಲೋಕಮಾನ್ಯ ಶ್ರೀ ಬಾಲ ಗಂಗಾಧರ ತಿಲಕರು.

ಗಣೇಶನ ಭಕ್ತಿ, ಆರಾಧನೆಗಳು ಭಾರತದಲ್ಲಿ ಮಾತ್ರವಲ್ಲದೆ ಪರದೇಶಗಳಲ್ಲೂ ಪ್ರಚಾರದಲ್ಲಿದೆ. ಗಣಪತಿಯ ಪೂಜೆ-ಆರಾದನೆ-ಕಲ್ಪನೆ, ಉತ್ಸವಗಳ ಬಗ್ಗೆ ವಿಪುಲವಾದ ಸಾಹಿತ್ಯ ಬೆಳೆದುಬಂದಿರುತ್ತದೆ.

## ನವರಾತ್ರಿ ಹಬ್ಬ

ನವರಾತ್ರಿ ಹಬ್ಬವನ್ನು ಪ್ರತಿವರ್ಷವೂ ಆಶ್ವಯುಜ ಮಾಸದಲ್ಲಿ ಹಿಂದೂಗಳು ವೈಭವದಿಂದ ಆಚರಿಸುತ್ತಾರೆ. ನವರಾತ್ರಿಯು ಆಶ್ವಯುಜ ಶುಕ್ಲ ಪ್ರತಿಪದ್ (ಪಾಡ್ಯಮಿ)ಯಿಂದ ದಶಮಿಯ ತನಕ ಆಚರಿಸಲ್ಪಡುವ ಪವಿತ್ರವೂ ಮಹಿಮೆಯಿಂದ ಕೂಡಿದುದೂ ಆದ ಹಬ್ಬವಾಗಿದೆ. ಒಂಬತ್ತು ರಾತ್ರಿಗಳ ಪರ್ಯಂತ ಆಚರಿಸಲ್ಪಡುವ ಹಬ್ಬವಾಗಿರುವುದರಿಂದ ಇದಕ್ಕೆ 'ನವರಾತ್ರಿ' ಎಂಬ ಹೆಸರು ಬಂದಿರುತ್ತದೆ. ನವರಾತ್ರಿ ಹಬ್ಬಕ್ಕೆ ದಶಹರ ಅಥವಾ ದಸರಾ ಎಂಬ ಇನ್ನೊಂದು ಹೆಸರೂ ಇದೆ. ದಶ ಎಂದರೆ ಹತ್ತು, ಅಹರ ಎಂದರೆ ಹಗಲು. ಹತ್ತು ಹಗಲುಗಳಲ್ಲೂ ಸಹ ಆಚರಿಸಲ್ಪಡುವ ಹಬ್ಬವೇ ದಶಹರ ಅಥವಾ ದಸರಾ ಹಬ್ಬ. ಆಶ್ವಯುಜ ಶುಕ್ಲ ಪಾಡ್ಯದಂದು ಆರಂಭವಾದ

ನವರಾತ್ರಿ ಹಬ್ಬದ ಸಂಬಂಧದ ಒಂಬತ್ತು ರಾತ್ರಿಗಳು ಕಳೆದನಂತರ ಬರುವ ಹತ್ತನೇ ದಿನವೇ 'ದಶಮಿ'. ಇದನ್ನು ವಿಜಯದಶಮೀ ಎನ್ನುತ್ತಾರೆ. ವಿಜಯದಶಮಿಯ ದಿವಸ ವೈಭವದ ಮೆರವಣಿಗೆ, ಸಂತೋಷದ ಸಾಂಸ್ಕೃತಿಕ ಹಾಗೂ ಧಾರ್ಮಿಕವಾದ ಅನೇಕ ಚಟುವಟಿಕೆಗಳು ನಡೆಯುತ್ತವೆ. ನವರಾತ್ರಿ ಹಬ್ಬದ ಒಂಬತ್ತು ದಿನಗಳಲ್ಲಿಯೂ ಶಕ್ತಿ ದೇವಿ ಜಗನ್ಮಾತೆಯನ್ನು ಆರಾಧಿಸುತ್ತಾರೆ. ಜಗದೀಶ್ವರಿಯನ್ನು ಭಕ್ತಿಶ್ರದ್ಧೆಗಳಿಂದ ಕೂಡಿ ಆರಾಧಿಸುವ ಹಬ್ಬವೇ 'ನವರಾತ್ರಿ' ಹಬ್ಬವಾಗಿರುತ್ತದೆ. ದೇವಿಯನ್ನು ದುರ್ಗಾ, ಚಾಮುಂಡಾ, ಲಲಿತಾ, ಭುವನೇಶ್ವರೀ, ಭಗವತೀ ಎಂದು ವಿವಿಧ ಹೆಸರುಗಳಿಂದ ಕರೆಯುತ್ತಾರೆ. ಇರುವ ಏಕಮೇವಾದ್ವಿತೀಯವಾದ ಪರಮಾತ್ಮಶಕ್ತಿಯು ವಿವಿಧ ರೂಪ ಗಳಲ್ಲಿ ಪ್ರಕಟಗೊಂಡಿದ್ದು ನವರಾತ್ರಿ ವೇಳೆಯಲ್ಲಿ ವಿಶೇಷವಾದ ರೀತಿಯಲ್ಲಿ ದೇವಿ ಯೆಂದು ಪೂಜಿಸಲ್ಪಡುತ್ತದೆ. ನವರಾತ್ರಿ ವೇಳೆ ಮಾಡುವ ಪೂಜೆ ಉತ್ಸವ ಉಪವಾಸ ಪಾರಾಯಣಾದಿ ವಿಚಾರಗಳಿಗೆ ಶಾಸ್ತ್ರೋಕ್ತವಾದ ವಿಧಿನಿಯಮಗಳು ಇದ್ದು ಎಲ್ಲವನ್ನೂ ಕ್ರಮಪ್ರಕಾರವಾಗಿಯೇ ನಡೆಸಬೇಕಾಗುವುದು ನವರಾತ್ರಿ ಹಬ್ಬದ ಆಚರಣೆಯ ವಿಚಾರವಾಗಿ ತಿಳಿದಿರಬೇಕಾದ ಮುಖ್ಯಾಂಶವಾಗಿರುತ್ತದೆ. ಒಂಬತ್ತು ದಿವಸಗಳೂ ಕೂಡ ದೇವಿಯ ಪೂಜೆ, ದೇವೀಭಾಗವತ, ಮಾರ್ಕಂಡೇಯಪುರಾಣಾಂತರ್ಗತವಾಗಿರುವ ಶ್ರೀದುರ್ಗಾಸಪ್ತಶತೀ (ದೇವೀಮಹಾತ್ಮೆ) ಬ್ರಹ್ಮಾಂಡಪುರಾಣೋಕ್ತ ಶ್ರೀ ಲಲಿತಾ ಸಹಸ್ರನಾಮ ಎಂಬ ಈ ಪವಿತ್ರ ಸ್ತೋತ್ರಮಂತ್ರಗಳ ಪಠಣ ಹಾಗೂ ಪಾರಾಯಣ ಮತ್ತು ಹೋಮ, ಜಪ, ಧ್ಯಾನ, ಉಪವಾಸಾದಿ ವ್ರತನಿಯಮಗಳು ವಿಧಿಯುಕ್ತವಾಗಿ ಆಚರಿಸಲ್ಪಡುತ್ತವೆ. ಒಂಬತ್ತು ದಿನಗಳ ಪರ್ಯಂತ ದಿವ್ಯವಾದ ಭಗವತ್ ಚಿಂತನ ಧ್ಯಾನ ಹಾಗೂ ಧಾರ್ಮಿಕವಾದ ಆಚರಣೆಗಳಲ್ಲಿ ಪಾಲುಗೊಳ್ಳುವ ಭಕ್ತರು ಹಾಗೂ ಸಾಧಕರು ತ್ರಿಕರಣಪೂರ್ವಕವಾದ ಶುದ್ಧಿಯನ್ನು ಪಡೆದು ಜಗನ್ಮಾತೆಯ ಕೃಪೆಗೆ ಪಾತ್ರ ರಾಗುತ್ತಾರೆ—ಎಂಬುದಾಗಿ ಪುರಾಣವಚನಗಳಿವೆ.

ನವರಾತ್ರಿ ಹಬ್ಬದ ಸಂಬಂಧದ ಆಚರಣೆಗಳಲ್ಲಿ ಗಂಡಸರು ಹೆಂಗಸರು ಮಕ್ಕಳು, ಎಲ್ಲರೂ ಒಂದಲ್ಲ ಒಂದು ವಿಧದಲ್ಲಿ ಭಾಗಿಗಳಾಗುತ್ತಾರೆ. ಈ ಹಬ್ಬದ ವೇಳೆ ಬೊಂಬೆ ಕೂರಿಸುವುದು ಎಂಬ ವೈಶಿಷ್ಟ್ಯಪೂರ್ಣವಾದ ಕಾರ್ಯಕ್ರಮವನ್ನು ನಡೆಸುತ್ತಾರೆ. ಶ್ರೀದೇವಿಯ ವಿಗ್ರಹ ಹಾಗೂ ಇತರ ದೇವತೆಗಳ ಮೂರ್ತಿಗಳನ್ನು ಅಲಂಕರಿಸಿ ದಿನವೂ ಆರಾಧನೆ ಮಾಡುತ್ತಾರೆ. ಇದನ್ನು ನೋಡಲು ಮನೆಯಿಂದ ಮನೆಗೆ ಸ್ತ್ರೀಪುರುಷರು, ಬಾಲಕರು, ವೃದ್ಧರು, ಎಲ್ಲರೂ ಹೋಗುತ್ತಾರೆ. ನವರಾತ್ರಿಯ ವೇಳೆ ಶಕ್ತಿಸ್ವರೂಪಿಣಿ ಶ್ರೀದುರ್ಗಾಪರಮೇಶ್ವರಿಯನ್ನು ಆರಾಧಿಸುವುದರಿಂದ ಈ ಹಬ್ಬಕ್ಕೆ ಶ್ರೀದುರ್ಗಾ ಪೂಜೋತ್ಸವ ಎಂಬ ಹೆಸರೂ ಇದೆ. ಶ್ರೀದುರ್ಗಾದೇವಿಯ ಭವ್ಯವಾದ ವಿಗ್ರಹವನ್ನು ಶಾಸ್ತ್ರೋಕ್ತವಾಗಿ ಮನೆಗಳಲ್ಲಿ, ಸಾರ್ವಜನಿಕ ಸಂಸ್ಥೆಗಳ ಆಶ್ರಯದ ಪೂಜಾಸ್ಥಳಗಳಲ್ಲಿ, ಪೂಜಾವೇದಿಕೆಯಲ್ಲಿ ಪ್ರತಿಷ್ಠಾಪಿಸಿ ನವರಾತ್ರಿಯ ಕಾಲದಲ್ಲಿ ಪೂಜೆಯನ್ನು ಸಲ್ಲಿಸು ತ್ತಾರೆ. ನವರಾತ್ರಿ ಕಳೆದನಂತರ ವಿಧಿಯುಕ್ತವಾಗಿ ಶ್ರೀ ದುರ್ಗಾ ಪ್ರತಿಮೆಯನ್ನು ನೀರಿನಲ್ಲಿ ವಿಸರ್ಜನೆಮಾಡುತ್ತಾರೆ.

ನವರಾತ್ರಿ ಹಬ್ಬವನ್ನು ಭಾರತದ ವಿವಿಧ ಭಾಗಗಳಲ್ಲಿ ವಿಶೇಷವಾದ ರೀತಿಯಲ್ಲಿ ವೈವಿಧ್ಯಮಯವಾಗಿ ಆಚರಿಸುತ್ತಾರೆ. ಕರ್ನಾಟಕ ಮತ್ತು ಬಂಗಾಳ ಪ್ರಾಂತ್ಯಗಳಲ್ಲಿ ನವರಾತ್ರಿ ಹಬ್ಬವು ಅತ್ಯಂತ ವೈಭವದಿಂದ ಆಚರಿಸಲ್ಪಡುತ್ತದೆ. ಉತ್ತರ ಭಾರತದಲ್ಲಿ ಹಲವೆಡೆ ನವರಾತ್ರಿ ಹಬ್ಬವನ್ನು ಶ್ರೀರಾಮನವರಾತ್ರಿ ಎಂದು ಪರಿಗಣಿಸಿ ಆಚರಿಸುತ್ತಾರೆ. ಶ್ರೀರಾಮನು ರಾವಣಾಸುರನನ್ನು ಸಂಹಾರಮಾಡಿ ದುಷ್ಟಶಕ್ತಿಯ ಮೇಲೆ ವಿಜಯವನ್ನು ಸಾಧಿಸಿದುದರ ಸಂಕೇತವಾಗಿ ಉತ್ತರ ಭಾರತದಲ್ಲಿ ರಾಮನವರಾತ್ರಿ ಆಚರಣೆಯು ಆರಂಭವಾಗುತ್ತದೆ. ಶ್ರೀರಾಮನ ಆರಾಧನೆ, ಶ್ರೀಮದ್ ರಾಮಾಯಣದ ಕಥಾನಾಟಕಗಳು ಆ ಕಾಲದಲ್ಲಿ ವೈಭವದಿಂದ ನೆರವೇರಿಸಲ್ಪಡುತ್ತದೆ.

ಮಾರ್ಕಂಡೇಯ ಪುರಾಣದಲ್ಲಿ ಉಕ್ತವಾಗಿರುವ ಲೋಕಕಂಟಕ ದುರುಳರಾಕ್ಷಸನಾದ ಮಹಿಷಾಸುರನ ಸಂಹಾರದ ಪ್ರಸಂಗವೇ ನವರಾತ್ರಿ ಹಬ್ಬದ ಕುರಿತಾಗಿ ಇರುವ ಪ್ರಚಲಿತ ಹಾಗೂ ಪ್ರಸಿದ್ಧವಾದ ಕಥೆಯಾಗಿದೆ. ದುಷ್ಟನಾದ ಮಹಿಷಾಸುರ ಹಾಗೂ ಅವನ ಕಡೆಯವರಾದ ಚಂಡ ಮುಂಡ ರಕ್ತಬೀಜಾದಿ ದುರುಳರಾಕ್ಷಸರನ್ನೆಲ್ಲಾ ಜಗನ್ಮಾತೆಯು ಅಗತ್ಯಕ್ಕೆ ಅನುಸಾರವಾಗಿ ಮಹಾಕಾಳಿ, ದುರ್ಗಾದೇವಿ, ಚಾಮುಂಡೇಶ್ವರಿ ಎಂಬಿತ್ಯಾದಿ ರೂಪಗಳನ್ನು ತಳೆದು ಸಂಹಾರಮಾಡಿದ ವಿವರಗಳುಳ್ಳ ಪವಿತ್ರವಾದ ವೃತ್ತಾಂತವು ಮಾರ್ಕಂಡೇಯಪುರಾಣದಲ್ಲಿ ವಿಸ್ತಾರವಾಗಿ ಚಿತ್ರಿತವಾಗಿದೆ. ಪುರಾಣದ ಈ ಕಥಾಭಾಗವನ್ನು 'ಸಪ್ತಶತೀ' ಎಂದು ಕರೆಯುತ್ತಾರೆ. 'ಸಪ್ತಶತೀ' ಎಂದರೆ ಏಳು ನೂರು ಶ್ಲೋಕಗಳಿಂದ ಕೂಡಿರುವುದು ಎಂದು ಅರ್ಥ. ಸಪ್ತಶತಿಯು ಶ್ರೀದೇವಿ ದುರ್ಗೆಯ ಮಾಹಾತ್ಮ್ಯೆಯನ್ನು ಒಳಗೊಂಡಿರುವುದರಿಂದ ಇದನ್ನು ಶ್ರೀದುರ್ಗಾಸಪ್ತಶತಿ, ಚಂಡೀಪಾಠ, ಚಂಡೀಮಾಹಾತ್ಮ್ಯ, ಶ್ರೀದೇವೀಮಾಹಾತ್ಮ್ಯ ಎಂದೂ ಕರೆಯುತ್ತಾರೆ. 'ಶ್ರೀದೇವಿಮಾಹಾತ್ಮ್ಯ'ಯ ಪಾರಾಯಣದಿಂದ ಶ್ರೀಜಗನ್ಮಾತೆಯ ವಿಶೇಷ ಅನುಗ್ರಹವು ಲಭಿಸುತ್ತದೆ ಎಂಬುದು ಹಿಂದೂಗಳ ಪರಂಪರಾಗತ ನಂಬಿಕೆ ಹಾಗೂ ಭಕ್ತರ ಅನುಭವವಾಗಿದೆ. ಶ್ರೀದೇವಿಯ ಮಹಿಮೆ, ಅವತಾರಲೀಲೆಗಳ ವೃತ್ತಾಂತ, ದೇವಿಯ ಆರಾಧನೆ ಇತ್ಯಾದಿ ವಿಚಾರಗಳೆಲ್ಲವೂ ದೇವೀಭಾಗವತ ಎಂಬ ಪುರಾಣಗ್ರಂಥದಲ್ಲಿ ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆ.

ಈ ಜಗತ್ತಿನಲ್ಲಿ ಹಾಗೂ ಮಾನವ ಮತ್ತು ಅವನ ಜೀವನದಲ್ಲಿ ದುಷ್ಟವಾದ ಶಕ್ತಿಗಳು ಇದ್ದೇ ಇವೆ. ದುಷ್ಟಶಕ್ತಿಯು ಶಿಷ್ಟಶಕ್ತಿಯನ್ನು ತುಳಿದು ನಿಸ್ತೇಜವಾಗಿ ಮಾಡಲು ಸದಾ ಯತ್ನಿಸುತ್ತದೆ. ಆದರೆ ಶಿಷ್ಟತನಕ್ಕೇ ಜಯ ಹೊರತು ದುಷ್ಟತನಕ್ಕಲ್ಲ ಎಂಬುದು ಮಹಿಷಾಸುರನ ವಧೆಯ ಕಥೆಯ ಮೂಲಕ ತಿಳಿದುಬರುತ್ತದೆ. ಜೀವನದಲ್ಲಿ ಪ್ರತಿಯೊಬ್ಬರೂ ದುಷ್ಟಶಕ್ತಿಯನ್ನು ದಿವ್ಯಶಕ್ತಿಯ ಸಹಾಯದಿಂದ ಎದುರಿಸಿ ಸಂಹರಿಸಿ ಸತ್ಯಶೀಲರೂ, ಸತ್ಸಮರ್ಥರೂ, ಶಿಷ್ಟರೂ ಆಗಬೇಕು. ಹಾಗೆ ಆಗಲು ಸಾಧ್ಯವಿದೆ. ಆದರೆ ಅದಕ್ಕೆ ಸಾಧನೆ ಬೇಕು, ಸಾಹಸ ಬೇಕು, ಹೋರಾಟ ನಡೆಸಬೇಕು. ಧೈರ್ಯಸ್ಥೈರ್ಯಗಳಿಂದ ಕೂಡಿ ಜೀವನರಂಗದಲ್ಲಿ ಹೋರಾಡಿ ಜಯವನ್ನು ಗಳಿಸಬೇಕು, ಇಂಥ ಜಯವನ್ನು ಗಳಿಸಬಹುದು ಎಂಬುದೇ ನವರಾತ್ರಿ ಹಬ್ಬದ ಅಮರಸಂದೇಶವಾಗಿದೆ. ಮನುಷ್ಯರಲ್ಲಿ ಅಂತರ್ಗತವಾಗಿರುವ ಕಾಮಕ್ರೋಧಾದಿ ಷಡ್ವೈರಿಗಳೇ ಮಹಿಷಾಸುರ

ರಕ್ತಬೀಜಾದಿ ಭಯಂಕರವಾದ ರಾಕ್ಷಸರುಗಳು. ಮಾನವರಲ್ಲಿ ಸುಪ್ತವಾಗಿ ಅಡಗಿರುವ ದಿವ್ಯವಾದ ಆತ್ಮಶಕ್ತಿಯೇ ಶ್ರೀದೇವಿ. ಸುಪ್ತವಾಗಿ ಅಡಗಿರುವ ಆತ್ಮಶಕ್ತಿಯನ್ನು ಕ್ರಮಬದ್ಧವಾದ ಆಧ್ಯಾತ್ಮಿಕ ಸಾಧನೆಯಿಂದ ಜಾಗ್ರತಗೊಳಿಸಿ ಅದನ್ನು ಕಾಮಕ್ರೋಧಾದಿ ಷಡ್ವೈರಿಗಳನ್ನು ಎದುರಿಸಲು ಉಪಯೋಗ ಮಾಡಿದಾಗ ವಿಜಯವು ದೊರೆತು ಮಾನವನು ಭವಬಂಧನದಿಂದ ಮುಕ್ತನಾಗಿ ಮೋಕ್ಷಾನಂದವನ್ನು ಹೊಂದಬಹುದು ಎಂಬುದು ನವರಾತ್ರಿಯ ಸಂದೇಶವಾಗಿದೆ.

ಆಶ್ವಯುಜ ಶುಕ್ಲ ಪಾಡ್ಯದಂದು ಆರಂಭವಾಗುವ ನವರಾತ್ರಿ ಹಬ್ಬದಲ್ಲಿ ಸಪ್ತಮಿ, ಅಷ್ಟಮಿ ಮತ್ತು ನವಮಿಯ ತಿಥಿಗಳಂದು ವಿಶೇಷವಾದ ರೀತಿಯ ಪೂಜೆ, ಹೋಮ, ಆರಾಧನೆಗಳು ನಡೆಸಲ್ಪಡುತ್ತವೆ. ನವರಾತ್ರಿಕಾಲದಲ್ಲಿ ಐದನೇ ದಿನವಾದ ಪಂಚಮಿಯಂದು ದೇವಿಯನ್ನು ಲಲಿತಾ ಎಂದು ಗೌರವಿಸಿ ಪೂಜಿಸುತ್ತಾರೆ. ಆ ದಿನವನ್ನು ಲಲಿತಾಪಂಚಮಿ ಎಂದೂ ಕರೆಯುತ್ತಾರೆ. ದುರ್ಗಾಸಪ್ತಮಿ, ದುರ್ಗಾಷ್ಟಮಿ ಮತ್ತು ಮಹಾನವಮಿಗಳೆಂಬ ಮೂರು ದಿನ ನವರಾತ್ರಿ ಉತ್ಸವದ ವೈಭವವು ಉನ್ನತನೆಲೆಯನ್ನು ತಲುಪುತ್ತದೆ. ಮಹಾನವಮಿಯ ದಿನದಂದು ಆಯುಧಗಳ ಪೂಜೆಯನ್ನು ಮಾಡುತ್ತಾರೆ. ದೇವಿ ಜಗನ್ಮಾತೆಯು ದುರುಳರಾದ ರಾಕ್ಷಸರನ್ನು ತನ್ನ ದಿವ್ಯವಾದ ಆಯುಧಗಳಿಂದ ಸಂಹಾರ ಮಾಡಿದುದರ ಕಾರಣದಿಂದ ಆಯುಧಗಳಿಗೆ ಆ ದಿನ ಹೆಚ್ಚಿನ ಪ್ರಾಶಸ್ತ್ಯ ಹಾಗೂ ಪವಿತ್ರತೆಗಳಿವೆ. ಹಾಗಾಗಿ ಜೀವನೋಪಯುಕ್ತವಾದ ಎಲ್ಲಾ ವಿಧದ ಯಂತ್ರಸಲಕರಣೆ, ಆಯುಧಗಳಿಗೆಲ್ಲಾ ಮಹಾನವಮಿಯ ದಿವಸ ಪೂಜೆಯನ್ನು ಸಲ್ಲಿಸಿ ದೇವಿಯ ದಿವ್ಯವಾದ ಅನುಗ್ರಹಕ್ಕಾಗಿ ಪ್ರಾರ್ಥಿಸುತ್ತಾರೆ. ನವರಾತ್ರಿ ವೇಳೆ ವಿದ್ಯಾದೇವಿಯಾದ ಶ್ರೀ ಸರಸ್ವತಿಯ ಪೂಜೆಯನ್ನು ಮಾಡುತ್ತಾರೆ. ಅದನ್ನು ಪುಸ್ತಕಪೂಜೆ ಎಂದೂ ಕರೆಯುತ್ತಾರೆ. ದೇವಿಯು ಇಚ್ಛಾ–ಜ್ಞಾನ–ಕ್ರಿಯಾಶಕ್ತಿಸ್ವರೂಪಿಣಿಯಾಗಿರುತ್ತಾಳೆ. ತದನುಸಾರವಾಗಿ ದೇವಿಯನ್ನು ಶಾರದೆ, ದುರ್ಗೆ, ಮಹಾಲಕ್ಷ್ಮಿ ಎಂಬಿತ್ಯಾದಿ ಹೆಸರುಗಳಿಂದ ಗೌರವಿಸಿ ನವರಾತ್ರಿ ವೇಳೆಯಲ್ಲಿ ವಿಶೇಷವಾಗಿ ಪೂಜಿಸುತ್ತಾರೆ.

ವಿಜಯದಶಮಿಯು ದುಷ್ಟಶಕ್ತಿಯ ಸಂಹಾರ ಅರ್ಥಾತ್ ಶಿಷ್ಟಶಕ್ತಿಯ ವಿಜಯದ ಕುರಿತಾದ ಸಂಕೇತಾತ್ಮಕವಾದ ಹಾಗೂ ಸಂತೋಷಾತ್ಮಕವಾದ ಸಡಗರದ ಆಚರಣೆಗಳಿಂದ ಕೂಡಿರುವ ಹಬ್ಬವಾಗಿರುತ್ತದೆ. ಒಂಬತ್ತು ರಾತ್ರಿಗಳನ್ನು ಕಳೆದು, ದುಷ್ಟಶಕ್ತಿಗಳ ವಿರುದ್ಧ ಹೋರಾಡಿ ಜಯಗಳಿಸಿದುದರ ಸ್ಮರಣಾರ್ಥವಾಗಿ ವಿಜಯದಶಮಿಯಂದು ವೈಭವದ ಮೆರವಣಿಗೆ ನಡೆಸಿ ವಿಜಯೋತ್ಸವವನ್ನು ಆಚರಿಸುತ್ತಾರೆ. ವಿಜಯದಶಮಿಯ ದಿನದಂದು ವೈಭವ ವಿಜಯದ ಮೆರವಣಿಗೆಯೊಡನೆ ನವರಾತ್ರಿ ಹಬ್ಬವು ಮುಕ್ತಾಯಗೊಳ್ಳುತ್ತದೆ. ವಿಜಯದಶಮಿ ದಿನವು ದುಷ್ಟಶಕ್ತಿಗಳ ವಿರುದ್ಧ ಹೋರಾಡಿ ವಿಜಯವನ್ನು ಗಳಿಸಿದುದರ ಕುರಿತಾದ ಸಂತಸದ ದಿನವಾದುದರಿಂದ ಆ ದಿನ ಪ್ರಾರಂಭ ಮಾಡುವ ಕೆಲಸಗಳಲ್ಲೆಲ್ಲಾ ಮುಂದೆ ಜಯ ದೊರೆಯುತ್ತದೆ ಎಂಬ ನಂಬಿಕೆಯಿಂದ ವಿಜಯದಶಮಿ ದಿವಸ ವಿದ್ಯಾರಂಭ, ವಿಶೇಷವಾದ ಉದ್ಯಮಗಳು ಇತ್ಯಾದಿ ಅನೇಕ ವಿಧವಾದ ನೂತನ ಕೆಲಸಕಾರ್ಯಗಳನ್ನು ಜನರು ಪ್ರಾರಂಭಮಾಡುತ್ತಾರೆ.

ವಿಜಯದಶಮಿ ದಿವಸ ಶಮೀವೃಕ್ಷಕ್ಕೆ (ಬನ್ನಿಮರಕ್ಕೆ) ಪೂಜೆಯನ್ನು ಮಾಡುತ್ತಾರೆ. ಆ ದಿವಸ ಶಮೀವೃಕ್ಷಕ್ಕೆ ಪೂಜೆಮಾಡಿ ಅದರ ಪತ್ರವನ್ನು ಪ್ರಸಾದವಾಗಿ ಸ್ವೀಕರಿಸಿದರೆ ಪಾಪಪರಿಹಾರ, ಕಾರ್ಯಸಿದ್ಧಿ, ಕಲ್ಯಾಣಪ್ರಾಪ್ತಿ ಮುಂತಾದ ಮಹತ್ವಪೂರ್ಣವಾದ ಫಲವು ದೊರೆಯುವುದು ಎಂದು ಪುರಾಣವಚನಗಳಿವೆ. ಶ್ರೀರಾಮಚಂದ್ರನು ರಾವಣಾಸುರನ ವಧೆಯ ಅನಂತರ ಶಮೀವೃಕ್ಷಕ್ಕೆ ಪೂಜೆಮಾಡಿ ಆಮೇಲೆ ಅಯೋಧ್ಯೆ ಕಡೆಗೆ ಪ್ರಯಾಣ ಬೆಳೆಸಿದುದೂ, ಪಾಂಡವರು ಅಜ್ಞಾತವಾಸದ ವೇಳೆ ತಮ್ಮ ಆಯುಧಗಳನ್ನು ಶಮೀವೃಕ್ಷದಲ್ಲಿ ಅಡಗಿಸಿಟ್ಟಿದ್ದು ಅವುಗಳನ್ನು ಹೊರತೆಗೆದು ತಮ್ಮ ನಿಜ ಸ್ವರೂಪವನ್ನು ಪ್ರಕಟಮಾಡಿದ್ದು ಎಲ್ಲವೂ ವಿಜಯದಶಮಿಯ ದಿವಸವೇ ಆಗಿವೆ. ರಾಜಮಹಾರಾಜರುಗಳು ವಿಜಯದಶಮಿಯ ದಿವಸ ಶಮೀವೃಕ್ಷವನ್ನು ಪೂಜಿಸಿ ತಮ್ಮ ಸಕಲ ಕಾರ್ಯಗಳಲ್ಲಿ ಜಯವನ್ನು ಕೋರಿ ಪ್ರಾರ್ಥಿಸುತ್ತಾರೆ. ಆ ದಿವಸ ವೈಭವಯುಕ್ತವಾದ ರೀತಿಯಲ್ಲಿ ರಾಜಮಹಾರಾಜರುಗಳು ಮೆರವಣಿಗೆ ಹೋಗುತ್ತಾರೆ. ವಿಜಯದಶಮಿಯಂದು ಶಮೀವೃಕ್ಷಕ್ಕೆ ಮಾಡುವ ಪೂಜೆಗೆ ಹೆಚ್ಚಿನ ಮಹತ್ವ ಇರುವಂತೆ ಶಮೀವೃಕ್ಷದ ಎಲೆಗಳಿಗೂ ಪವಿತ್ರತೆ ಇದೆ. ಅದರ ಎಲೆಗಳು ಬಂಗಾರಕ್ಕೆ ಸಮ ಎಂದು ಪುರಾಣಗಳು ಸಾರುತ್ತವೆ. ತದನುಸಾರವಾಗಿ ಶಮೀವೃಕ್ಷದ ಪೂಜೆ, ಶಮೀಪತ್ರದ ಧಾರಣೆಗಳೆಲ್ಲ ವಿಜಯದಶಮಿಯ ದಿನದಂದು ಆಚರಿಸಲ್ಪಡುವ ಪವಿತ್ರ ಹಾಗೂ ವಿಶೇಷವಾದ ಕಾರ್ಯಕ್ರಮಗಳಾಗಿವೆ. ವಿಜಯದಶಮಿಯಂದು ಅನೇಕ ವಿಧದ ಸಾಂಸ್ಕೃತಿಕವಾದ ಕಾರ್ಯಕ್ರಮವನ್ನು ಮನೆಮನೆಗಳಲ್ಲೂ, ಸಾಮೂಹಿಕ ರಂಗಗಳಲ್ಲೂ ನಡಸಿ ವಿಜಯದ ಸಂತೋಷವನ್ನು ವ್ಯಕ್ತಪಡಿಸುತ್ತಾರೆ. ಪ್ರಾಚೀನಕಾಲದಲ್ಲಿ ಅರಸುಗಳು ದಿಗ್ವಿಜಯಕ್ಕಾಗಿ ವಿಜಯದಶಮಿಯ ಮಂಗಳಮುಹೂರ್ತದಲ್ಲಿ ಹೊರಡುತ್ತಿದ್ದರು.

ಹೀಗೆ ನವರಾತ್ರಿ ಹಬ್ಬವು ವೈವಿಧ್ಯಮಯವಾದ ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳಿಂದ ಕೂಡಿರುವ ಪವಿತ್ರವಾದ ವೈಭವದ ಹಬ್ಬವಾಗಿದೆ.

## ದೀಪಾವಳಿ ಹಬ್ಬ

ದೀಪಾವಳಿಯು ಹಿಂದೂಗಳಿಗೆಲ್ಲಾ ಆಂದದ ಹಬ್ಬವಾಗಿರುತ್ತದೆ. ಪುಟ್ಟ ಮಗುವಿನಿಂದ ವೃದ್ಧರ ತನಕ ಹಿಂದೂಗಳಲ್ಲಿ ದೀಪಾವಳಿ ಹಬ್ಬದ ಆಚರಣೆಯ ಆನಂದವನ್ನು ಅನುಭವಿಸುತ್ತಾರೆ. ಪುಟ್ಟ ಬಾಲಕರ ಪಟಾಕಿಗಳ ಸಡಗರ, ಗೃಹಿಣಿಯರ ಅಭ್ಯಂಜನ, ಅಲಂಕಾರಗಳ ಸಡಗರ, ಗೃಹಸ್ಥರ ದೇವತಾಪೂಜೆ-ಆರಾಧನೆಗಳು—ಹೀಗೆ ಒಂದಲ್ಲ ಒಂದು ವಿಧದಲ್ಲಿ ಹಿರಿಯರೂ ಕಿರಿಯರೂ ಎಲ್ಲರೂ ಸುಂದರ ಉಡಿಗೆ, ಪುಷ್ಕಳ ಭೋಜನ, ಆನಂದದ ಕಾರ್ಯಕ್ರಮಗಳು ಇವುಗಳಿಂದ ಕೂಡಿ ದೀಪಾವಳಿ ಹಬ್ಬವನ್ನು ಆಚರಿಸುತ್ತಾರೆ. ದೀಪಾವಳಿ ಹಬ್ಬದ ಹೆಸರಿನಲ್ಲಿ ಹಿಂದೂಗಳು ಬೆಳಕಿನ ಆರಾಧನೆಯನ್ನು ಮಾಡಿ ಮನೆ-ಮಂದಿರಗಳನ್ನೆಲ್ಲಾ ದೀವಳಿಗೆಯ ಜ್ಯೋತಿಯಿಂದ ಬೆಳಗಿಸುತ್ತಾರೆ. ಕತ್ತಲಿನ ನಿವಾರಣೆಯಾಗಿ ಎಲ್ಲೆಲ್ಲೂ ಬೆಳಕಿನ ಪ್ರಕಾಶ ದೀಪಾವಳಿಯ ರಾತ್ರಿಯಂದು ಕಂಡು ಬರುತ್ತದೆ.

ಆಶ್ವಯುಜ ಬಹುಳ ದ್ವಾದಶೀ ದಿನದಂದು ಆರಂಭವಾಗುವ ದೀಪಾವಳಿ ಹಬ್ಬ ಐದು ದಿನಗಳ ಪರ್ಯಂತ ಸಾಗಿ ಕಾರ್ತೀಕಮಾಸದ ಶುದ್ಧ ಬಲಿಪಾಡ್ಯಮಿಯಂದು ಮುಕ್ತಾಯಗೊಳ್ಳುತ್ತದೆ. ಈ ಐದು ದಿನಗಳೂ ತೈಲಾಭ್ಯಂಜನ, ದೇವತಾರಾಧನೆ, ಭೋಜನ ವಿನೋದಗಳೆಂದು ವಿವಿಧ ಅಂಶಗಳಿಂದ ಕೂಡಿದ ಹಬ್ಬವು ವೈಭವದಿಂದ ಆಚರಿಸಲ್ಪಡುತ್ತದೆ. ದ್ವಾದಶಿಯಂದು ಆರಂಭವಾದ ಹಬ್ಬದ ತಯಾರಿಯು ತ್ರಯೋದಶಿಯ ರಾತ್ರಿಗೆ ಪೂರ್ತಿಯಾಗುತ್ತದೆ. ಮಾರನೇ ದಿನ ಚತುರ್ದಶಿಯಂದು ಸೂರ್ಯೋದಯದ ಕಾಲಕ್ಕೆ ತೈಲಾಭ್ಯಂಜನದ ಒಡನೆ ಹಬ್ಬದ ಸಡಗರ-ವೈಭವಗಳು ಆರಂಭವಾಗುತ್ತದೆ. ದೇವತಾರಾಧನೆಯಲ್ಲಿ ಕಳೆದ ಆ ದಿನದ ಮಾರನೇ ದಿನವೇ ದೀಪಾವಳಿ ಅಮಾವಾಸ್ಯೆ. ದೀಪಾವಳಿ ಹಬ್ಬವನ್ನು ದೀವಳಿಗೆ ಹಬ್ಬ ಎಂದೂ ಕರೆಯುವುದಿದೆಯಾದ್ದರಿಂದ ದೀಪಾವಳಿ ಅಮಾವಾಸ್ಯೆಯನ್ನು ದೀವಳಿಗೆ ಅಮಾವಾಸ್ಯೆ ಎಂದೂ ಕರೆಯುತ್ತಾರೆ.

ಆ ದಿನ ಪಿತೃಗಳಿಗೆ ತರ್ಪಣವನ್ನಿತ್ತು ಶ್ರಾದ್ಧವಿಧಿಗಳನ್ನು ತೀರಿಸಿ ಜನರು ತಮ್ಮನ್ನಗಲಿದ ಹಿರಿಯರಿಗೆ ಭಕ್ತಿ-ಪ್ರಾರ್ಥನೆಗಳನ್ನು ಸಲ್ಲಿಸಿ ಪಿತೃದೇವತೆಗಳ ಆಶೀರ್ವಾದವನ್ನು ಕೋರುತ್ತಾರೆ. ಮಾರನೆಯ ದಿನವೇ ಬಲಿಪಾಡ್ಯಮಿ—ದೀಪಗಳ ಆರಾಧನೆಯ ದಿವಸ! ಬೆಳಕಿನ ಹಬ್ಬ! ಮನೆಮನೆಗಳಲ್ಲಿ ದೀಪಗಳನ್ನು ಹಚ್ಚಿ ಜನರು ಜ್ಯೋತಿಸ್ವರೂಪನಾದ ಭಗವಂತನನ್ನು ಆರಾಧಿಸುತ್ತಾರೆ. ದೀವಳಿಗೆಯ ಮಂಗಳ ಜ್ಯೋತಿಗಳ ದಿವ್ಯಪ್ರಭೆಯ ಆನಂದವನ್ನು ಅನುಭವಿಸಿ ಧನ್ಯರಾಗುತ್ತಾರೆ. ದೇವಾಲಯ, ನದೀತೀರಗಳಲ್ಲೆಲ್ಲಾ ದೀಪೋತ್ಸವವು ನಡೆಯುತ್ತದೆ. ಭಾರತದ ವಿವಿಧ ಪ್ರಾಂತಗಳಲ್ಲಿ ವಿವಿಧ ರೀತಿಗಳಲ್ಲಿ ಹಿಂದೂಗಳು ದೀಪಾವಳಿ ಹಬ್ಬವನ್ನು ಆಚರಿಸುತ್ತಾರೆ. ಅಳಿಯಂದಿರನ್ನು ಕರೆಸಿ 'ದಂಪತಿ'ಗಳನ್ನು ಹಸೆಯಲ್ಲಿ ಕೂರಿಸಿ ಆರತಿ-ಅಕ್ಷತೆ ನಡೆಸುತ್ತಾರೆ. ಪರಸ್ಪರ ಬಂಧುಬಳಗದವರು ದೀವಳಿಗೆ ಉಡುಗೊರೆಗಳ ವಿನಿಮಯ ಮಾಡುತ್ತಾರೆ. ಧನಧಾನ್ಯ ಸಂಪತ್ತುಗಳಿಗೆ ಅಧಿದೇವತೆಯಾದ ಶ್ರೀ ಮಹಾಲಕ್ಷ್ಮೀದೇವಿಯ ಆರಾಧನೆಯನ್ನು ಮಂಗಳದೀಪಗಳನ್ನು ಬೆಳಗಿಸಿ ಹರ್ಷಭಕ್ತಿಗಳಿಂದ ಒಡಗೂಡಿ ನಡೆಸುತ್ತಾರೆ. ಬಲಿಪಾಡ್ಯಮಿಯ ದಿವಸದ ಆಚರಣೆಗಳ ಮುಕ್ತಾಯದ ಒಡನೆಯೇ ದೀಪಾವಳಿ ಹಬ್ಬದ ಸಡಗರವೂ ಕೊನೆಗೊಳ್ಳುತ್ತದೆ.

ದೀವಳಿಗೆ ಹಬ್ಬದ ಕುರಿತಾಗಿ ಅನೇಕ ಕಥೆಗಳು ಪ್ರಚಾರದಲ್ಲಿವೆ. ಕೆಲವು ಪುರಾಣೋಕ್ತವಾದವುಗಳಾದರೆ ಹಲವು ಸಂಪ್ರದಾಯಸಂಬಂಧವಾದವುಗಳಾಗಿವೆ. ದೀಪಾವಳಿಯನ್ನು ಕುರಿತು ಪ್ರಚಲಿತವಿರುವ ಕಥೆಗಳಲ್ಲಿ ನರಕಾಸುರವಧೆ ಮತ್ತು ಬಲೀಂದ್ರಚಕ್ರವರ್ತಿಯ ವೃತ್ತಾಂತ ಇವುಗಳು ಮುಖ್ಯವಾದುವು. ಇವೆರಡನ್ನು ಬಿಟ್ಟರೆ ದೀಪಾವಳಿಯ ಬಗ್ಗೆ ಇರುವ ಪ್ರಬಲವಾದ ಆಧಾರದ ಕತೆಯೆಂದರೆ ಶ್ರೀರಾಮಚಂದ್ರನ ವಿಜಯೋತ್ಸವ. ಉತ್ತರ ಭಾರತದಲ್ಲಿ ಹಿಂದೂಗಳಲ್ಲಿ ಬಹುಮಂದಿ, ಶ್ರೀರಾಮಚಂದ್ರನು ರಾವಣೇಶ್ವರನನ್ನು ಸಂಹಾರಮಾಡಿ ಅಯೋಧ್ಯೆಗೆ ಮರಳಿ ಬಂದಾಗ ಅಯೋಧ್ಯಾನಗರದ ಜನರು ಆನಂದದಿಂದ ದೀಪಗಳನ್ನು ಬೆಳಗಿಸಿ ಶ್ರೀರಾಮಚಂದ್ರನನ್ನು ಸ್ವಾಗತಿಸಿದ ಸಂಗತಿಯನ್ನೇ ದೀಪಾವಳಿಯ ಮೂಲ ಎಂದು ನಂಬಿ ಇಂದಿಗೂ ಆಚರಿಸುತ್ತಾರೆ. ದಕ್ಷಿಣ ಭಾರತದಲ್ಲಿ

ಬಹುಮಂದಿ ಹಿಂದೂಗಳು ನರಕಾಸುರ ಮತ್ತು ಬಲೀಂದ್ರಚಕ್ರವರ್ತಿ ಇವರುಗಳ ಕುರಿತಾಗಿರುವ ಕಥೆಗಳನ್ನೇ ಆಧಾರವಾಗಿ ಇಟ್ಟುಕೊಂಡು ದೀಪಳಿ ? ಹಬ್ಬವನ್ನು ಆಚರಿಸುತ್ತಾರೆ.

ಹಿಂದೂಸ್ಥಾನದಲ್ಲಿ ಹಿಂದೆ ಪ್ರಾಗ್‌ಜ್ಯೋತಿಷಪುರ ಎಂಬಲ್ಲಿ (ಇಂದಿನ ಅಸ್ಸಾಂ) ಆಳುತ್ತಿದ್ದ ನರಕಾಸುರನೆಂಬ ಚಕ್ರವರ್ತಿ ತನ್ನ ದುಷ್ಟ ಆಚಾರಗಳಿಂದ ಲೋಕಕಂಟಕ ನಾಗುತ್ತಾನೆ. ಲೋಕೋದ್ಧಾರಕನಾದ ಶ್ರೀ ಕೃಷ್ಣ ತನ್ನ ಮಡದಿ ಸತ್ಯಭಾಮೆಯನ್ನು ಒಡಗೂಡಿಕೊಂಡು ತೆರಳಿ ನರಕಾಸುರನ ವಿರುದ್ಧ ಯುದ್ಧವನ್ನು ಮಾಡಿ ಅವನನ್ನು ಸಂಹರಿಸಿ ಲೋಕಕಲ್ಯಾಣವನ್ನು ಎಸಗುತ್ತಾನೆ ನರಕಾಸುರನು ಬಂಧನದಲ್ಲಿ ಇಟ್ಟಿದ್ದ ಹದಿನಾರು ಸಹಸ್ರ ಸ್ತ್ರೀಯರನ್ನು ಬಂಧಮುಕ್ತನ್ನಾಗಿ ಮಾಡಿದ ಶ್ರೀಕೃಷ್ಣನನ್ನು ಅವರೆಲ್ಲರೂ 'ಸ್ವಾಮಿ' ಎಂದು ಆರಾಧಿಸುತ್ತಾರೆ. ನರಕಚತುರ್ದಶಿಯಂದು ನರಕಾಸುರನ ವಧೆಮಾಡಿದ ಶ್ರೀಕೃಷ್ಣನು ಪ್ರಾತಃಕಾಲದಲ್ಲಿ ಮಂಗಳಸ್ನಾನವನ್ನು ಕೈಗೊಳ್ಳುತ್ತಾನೆ. ಪವಿತ್ರಳಾದ ಮಹಾಗಂಗೆಯೇ ಬಂದು ಸ್ನಾನಜಲವಾಗಿ ರೂಪುಗೊಂಡು ಶ್ರೀಕೃಷ್ಣನ ಸ್ನಾನದ ಕಾರ್ಯ ನೆರವೇರಲು ನೆರವಾಗುತ್ತಾಳೆ. ಮಹಾಲಕ್ಷ್ಮಿಯು ತೈಲರೂಪಿಯಾಗಿ ಬಂದು ಸಮರದ ಆಯಾಸದಿಂದ ಕೂಡಿದ್ದ ಶ್ರೀಕೃಷ್ಣನ ದೇಹದ ದಣಿವನ್ನು ಆರಿಸುತ್ತಾಳೆ. ಹಾಗಾಗಿ ದೀಪಾವಳಿಯಂದು ಪ್ರಾತಃಕಾಲ ತೈಲದಿಂದ ಅಭ್ಯಂಜನ ಮಾಡಿದರೆ ಗಂಗಾಸ್ನಾನದ ಪುಣ್ಯ ಲಭಿಸಿ ಲಕ್ಷ್ಮೀಕಟಾಕ್ಷ ದೊರೆಯುವುದು ಎಂದು ನಂಬಲಾಗಿದೆ.

ವಾಮನಾವತಾರಿ ಮಹಾವಿಷ್ಣುವಿನಿಂದ ಪಾತಾಳಕ್ಕೆ ತಳ್ಳಲ್ಪಟ್ಟ ಬಲಿಚಕ್ರವರ್ತಿ ತನ್ನ ದೇಶವನ್ನು ವರ್ಷಕ್ಕೊಮ್ಮೆ ನೋಡಲು ಬರುವುದಕ್ಕೆ ಮತ್ತು ಆ ಸಂದರ್ಭದಲ್ಲಿ ಮೂರು ದಿನಗಳ ಕಾಲ ಭೂಲೋಕದ ಒಡೆತನ ತನಗೆ ಕರುಣಿಸಬೇಕೆಂದು ಭಗವಂತನಲ್ಲಿ ಪ್ರಾರ್ಥಿಸಿ ಕೊಂಡನಂತೆ. ಭಗವಾನ್ ಶ್ರೀವಿಷ್ಣುವಿನ ಅನುಗ್ರಹಕ್ಕೆ ಪಾತ್ರನಾದ ಬಲಿಚಕ್ರವರ್ತಿಯು ಪಾತಾಳಲೋಕದಿಂದ ವರ್ಷಕ್ಕೊಮ್ಮೆ ಭೂಲೋಕಕ್ಕೆ ಬರುವಾಗ ಜನತೆ ಅವನಿಗೆ ದೀಪಗಳ ಸಹಿತವಾದ ಸ್ವಾಗತ ನೀಡುವುದು ಎಂಬುದಾಗಿ ಹೇಳುತ್ತಾರೆ.

ಚಕ್ರವರ್ತಿ ನರಕಾಸುರ ತನ್ನ ವಧಾನಿಮಿತ್ತದಲ್ಲಿ ತನ್ನ ಹೆಸರಿನಲ್ಲಿ ಸಂವತ್ಸರಕ್ಕೊಮ್ಮೆ ಜನತೆ ಹರ್ಷೋತ್ಸವವನ್ನು ಮಾಡಬೇಕೆಂದು ಭಗವಂತನನ್ನು ಕೇಳಿಕೊಂಡ ಮೇರೆ ಅನುಗ್ರಹರೂಪವಾಗಿ ಹುಟ್ಟಿಕೊಂಡ ಹಬ್ಬವೇ ದೀಪಾವಳಿ ಎಂದೂ ಹೇಳುತ್ತಾರೆ. ನರಕಾಸುರನ ಮಾತೆ ಭೂದೇವಿ ತನ್ನ ಮಗ ದುಷ್ಟನಾಗಿದ್ದರೂ ಭಗವಂತನ ಕೈಯಲ್ಲಿ ಮುಕ್ತಿಯನ್ನು ಹೊಂದಿದ ಹಾಗೂ ತನ್ಮೂಲಕ ಅವನು ಲೋಕಕಂಟಕನಾಗಿ ಇದ್ದುದು ತೀರಿದಂತಾಯಿತು ಎನ್ನುತ್ತಾ ಜನತೆಯು ಕಲ್ಯಾಣಸಾಧನೆಯಾದ ದಿನದ ನೆನಪಿಗಾಗಿ ವರ್ಷಕ್ಕೊಮ್ಮೆ ವಿಜಯೋತ್ಸವವನ್ನು ನಡೆಸುವಂತಾಗಬೇಕು ಎಂದು ಭಗವಂತನನ್ನು ಪ್ರಾರ್ಥಿಸಿಕೊಂಡ ಮೇರೆ ದೀಪಾವಳಿ ಹಬ್ಬವು ಹುಟ್ಟಿಕೊಂಡಿತು ಎಂದೂ ಹೇಳುತ್ತಾರೆ. ಒಟ್ಟಿನಲ್ಲಿ ದೀಪಾವಳಿ ಹಬ್ಬವನ್ನು ದುಷ್ಟಶಕ್ತಿಯನ್ನು ದಮನಮಾಡಿದ ಶಿಷ್ಟಶಕ್ತಿ ಅಥವಾ ಸಾತ್ವಿಕಶಕ್ತಿಯ ವಿಜಯದ ಸಂಕೇತಾತ್ಮಕವಾದ ಉತ್ಸವ ಎಂದು ತಾತ್ಪರ್ಯವಾಗಿ ಹೇಳಬಹುದು.

ದೀಪಾವಳಿಯಂದು ದಿವ್ಯಜ್ಯೋತಿಯನ್ನು ಬೆಳಗಿಸಿ ಆರಾಧನೆ ಮಾಡುವ ಮಾನವನು ತನ್ನ ಅಂತರಂಗದಲ್ಲಿರುವ ಜ್ಯೋತಿಯನ್ನು ಆರಾಧಿಸಬೇಕು. ಬಾಹ್ಯದ ಜ್ಯೋತಿ ಜಗದ ಕತ್ತಲನ್ನು ನಿವಾರಿಸಿ ಹೇಗೆ ಬೆಳಕನ್ನು ಬೀರಬಲ್ಲುದೋ ಅಂತೆಯೇ ಅಂತರ್ಯದ ಜ್ಯೋತಿಯಾದ ಪರಮಾತ್ಮನ ಆರಾಧನೆಯಿಂದ ಜೀವನದ ಕತ್ತಲು ನಿವಾರಣೆಯಾಗಿ ಮೋಕ್ಷದ ಬೆಳಕು ಬೆಳಗುತ್ತದೆ ಎಂಬುದೇ ದೀಪಾವಳಿಯ ದಿವ್ಯದೀಪದ ಅಮರಸಂದೇಶ. ದೇಹವೇ ದೀಪ, ಶ್ರದ್ಧಾಪೂರ್ವಕ ಭಕ್ತಿಯೇ ಎಣ್ಣೆ, ಜ್ಯೋತಿಯಿಲ್ಲದ ಸಾಧನೆಯೇ ಬತ್ತಿ, ಶ್ರದ್ಧಾಭಕ್ತಿಗಳಿಂದ ಪೋಷಿತವಾದ ಸಾಧನೆಯ ಫಲವೇ ಬೆಳಕು! ಆ ದಿವ್ಯಬೆಳಕು ಪ್ರಕಾಶಗೊಂಡಾಗ ಬದುಕಿನ ತಮಸ್ಸು ನಿವಾರಣೆಗೊಳ್ಳುತ್ತದೆ.

ಸಮ್ರಾಟ ನರಕಾಸುರನ ಮಾತೆ ಭೂದೇವಿ ತನ್ನ ದಿವ್ಯ ಆದರ್ಶದಿಂದ ಜಗತ್ತಿಗೆ ವಿಶೇಷವಾದ ಸಂದೇಶವನ್ನು ಸಾರಿದ್ದಾಳೆ. ತನ್ನ ಮುದ್ದಿನ ಮಗ ತೀರಿಕೊಂಡಾಗ ಆಕೆ ದುಃಖಿಸದೆ ಜಗತ್ತು ದುಷ್ಟಶಕ್ತಿಯ ಸಂಹಾರವಾದ ಬಗ್ಗೆ ವಿಜಯೋತ್ಸವ ಮಾಡಿ ಆನಂದಪಡಬೇಕೆಂದು ಭಗವಂತನಲ್ಲಿ ಕೋರಿದ್ದಾಳೆ. ವೈಯಕ್ತಿಕ ಆಶೋತ್ತರಸಾಧನೆ ಗಳು ವಿಶ್ವಕಲ್ಯಾಣದ ದೃಷ್ಟಿಯಲ್ಲಿ ಕೇವಲ ಗೌಣ. ಮಾನವನು ವಿಶ್ವಕಲ್ಯಾಣದ ಉದಾತ್ತದೃಷ್ಟಿಯನ್ನು ಇಟ್ಟುಕೊಂಡು ವೈಯಕ್ತಿಕ ಸುಖಸ್ವಾರ್ಥಗಳನ್ನು ವಿಶ್ವ ಕಲ್ಯಾಣಕ್ಕಾಗಿ ಧಾರೆ ಎರೆಯಬೇಕು. ಅದೇ ಜೀವನದ ಮಹೋನ್ನತಧರ್ಮ ಹಾಗೂ ಆನಂದ ಎಂಬುದೇ ಭೂದೇವಿಯ ಜೀವನದ ಸಂದೇಶವಾಗಿದೆ. ಅದೇ ದೀಪಾವಳಿಯ ಸಂದೇಶವೂ ಆಗಿದೆ. ದೀಪಾವಳಿಗೆಯ ದೀಪದ ಬತ್ತಿ ಉರಿದು ಬೆಳಕನ್ನು ಸುತ್ತಲೂ ಬೀರಿ ಕತ್ತಲಿನ ನಿವಾರಣೆಗೆ ನೆರವಾಗುವಂತೆ, ಮಾನವನ ಬದುಕು ಕೂಡ ಜಗದ ಸಂಸಾರದ ಕತ್ತಲಿನ ನಿವಾರಣೆಗೆ ವಿನಿಯೋಗವಾಗುತ್ತಾ ನೆರವಾಗಬೇಕು ಎಂಬುದನ್ನು ದೀಪಾವಳಿ ಹಬ್ಬವು ವರ್ಷವರ್ಷವೂ ನೆನಪನ್ನುಂಟುಮಾಡುತ್ತದೆ.

### ದೇವಸ್ಥಾನಗಳು ಮತ್ತು ಯಾತ್ರಾಸ್ಥಳಗಳು

ದೇವಸ್ಥಾನಗಳೆಂದರೆ ಸಾರ್ವಜನಿಕವಾಗಿರುವ ಸಾಮೂಹಿಕ ಪೂಜೆಗೆ ಮತ್ತು ವ್ಯಕ್ತಿಗತ ವಾದ ಪೂಜೆ-ಆರಾಧನೆಗಳನ್ನು ನಡೆಸಲು ಅವಕಾಶ ಒದಗಿಸುವ ಪೂಜಾಸ್ಥಳವಾಗಿರುತ್ತವೆ. ಪ್ರತಿನಿತ್ಯವೂ ದೇವಸ್ಥಾನಗಳಲ್ಲಿ ಶಾಸ್ತ್ರಬದ್ಧವಾಗಿ ಪೂಜೆಯು ನಡೆಯಬೇಕಾಗಿದ್ದು ಗ್ರಾಮದ, ನಾಡಿನ, ರಾಷ್ಟ್ರದ ಹಾಗೂ ಜಗತ್ತಿನ ಕಲ್ಯಾಣಕ್ಕಾಗಿ ಅಲ್ಲಿ ಪೂಜೆ, ಪ್ರಾರ್ಥನೆ ಗಳು ನೆರವೇರುತ್ತವೆ. ಹಿಂದೂದೇಶದಲ್ಲಿ ಸಾಮಾನ್ಯವಾಗಿ ಪ್ರತಿ ಗ್ರಾಮಗಳಲ್ಲಿ ಮತ್ತು ನಾಡುಗಳಲ್ಲಿ ದೇವಸ್ಥಾನಗಳು ಇವೆ. ಮಾತ್ರವಲ್ಲದೆ ರಾಷ್ಟ್ರೀಯ ಮಟ್ಟದಲ್ಲಿ ಹಲವು ಪ್ರಮುಖವಾದ ದೇವಾಸ್ಥಾನಗಳೂ ಇವೆ. ಹಿಂದೂಸ್ಥಾನದಲ್ಲಿ ಹಿಂದೂ ದೇವಸ್ಥಾನ ಗಳಲ್ಲಿ ಹಿಂದೂಧರ್ಮದ ವಿವಿಧ ಒಳಪಂಥದವರ ಆರಾಧನಾದೇವರ ಸಂಬಂಧದವುಗಳು, ವೇದಪುರಾಣಾದಿಗಳಲ್ಲಿ ಹೇಳಲ್ಪಟ್ಟಿರುವ ದೇವದೇವತೆಗಳ ಪರವಾಗಿ ಇರುವವು ಎಂದು ಹಲವು ವಿಧಗಳಿವೆ. ಮತಾಚಾರ್ಯರು, ಸಾಧುಸಂತರು ಮತ್ತು ಮಹಾತ್ಮರುಗಳ ಹೆಸರಿನಲ್ಲೂ ಅನೇಕ ದೇವಾಲಯಗಳು ಹಿಂದೂಸ್ಥಾನದಲ್ಲಿ ಇವೆ.

ದೇವಾಲಯಗಳು ಹಿಂದೂ ಸಮಾಜದ ವ್ಯಕ್ತಿಗತ ಹಾಗೂ ಸಾಮಾಜಿಕ ಜೀವನದಲ್ಲಿ ಮಹತ್ವವಾದ ಪಾತ್ರವನ್ನು ವಹಿಸಿ ವಿಶೇಷವಾದ ಪ್ರಭಾವವನ್ನು ಬೀರಿವೆ. ಹಿಂದೂವಿನ ಜೀವನಕ್ಕೆ ದೇವಾಲಯ ಎಂದರೆ ಲೌಕಿಕ ಮತ್ತು ಆಧ್ಯಾತ್ಮಿಕವಾದ ಸ್ಫೂರ್ತಿ, ಬೆಳಕು ಮತ್ತು ಬಲಗಳನ್ನು ನೀಡುವ ಕೇಂದ್ರವಾಗಿರುತ್ತದೆ. ಅಷ್ಟುಮಾತ್ರವಲ್ಲದೆ ದೇವಾಲಯ ಎಂದರೆ ಧಾರ್ಮಿಕ ಜೀವನದ ಪ್ರಾಯೋಗಿಕ ನಿದರ್ಶನದ ಜೀವಂತ ಸಂಕೇತವೂ, ಸಂಸ್ಕೃತಿಯ ಸ್ಫೂರ್ತಿಯುತವಾದ ಪ್ರತೀಕವೂ, ಪರಂಪರೆಗಳ ಪ್ರಾಮಾಣಿಕವಾದ ರಕ್ಷಣೆ ಮತ್ತು ಪೋಷಣೆಯ ನೆಲೆಯೂ ಆಗಿರುತ್ತದೆ. ಸಾಹಿತ್ಯ, ಸಂಗೀತ, ನೃತ್ಯ, ನಾಟಕ, ಚಿತ್ರ, ಶಿಲ್ಪ, ವಾಸ್ತುಶಿಲ್ಪ ಇತ್ಯಾದಿ ಸಾಂಸ್ಕೃತಿಕವಾದ ಮತ್ತು ಕಲಾತ್ಮಕವಾದ ವಿಚಾರಗಳು ಹಿಂದೂವಿನ ಜೀವನದಲ್ಲಿ ಪ್ರಾಯೋಗಿಕವಾಗಿ ಕಾರ್ಯರೂಪಕ್ಕೆ ಬರಲು ಮತ್ತು ಆಯಾಯಾ ಕ್ಷೇತ್ರಗಳಲ್ಲಿ ಮಹಾಮೇಧಾವಿಗಳು ಬೆಳೆದು ಬೆಳಗಲು ದೇವಾಲಯಗಳ ನಿರ್ಮಾಣ, ದೇವಾಲಯಗಳಲ್ಲಿನ ದಿನನಿತ್ಯದ ಪೂಜೆ ಕಾರ್ಯಕ್ರಮಗಳು, ಪುರಾಣೋಪನ್ಯಾಸಗಳು. ಹಬ್ಬ ಉತ್ಸವಾದಿಗಳು ವಿಶೇಷವಾದ ರೀತಿಯಲ್ಲಿ ಕಾರಣವಾಗಿರುತ್ತವೆ. ಹಾಗೆಯೇ ಊರಿನ ಜನರಲ್ಲಿ ಒಗ್ಗಟ್ಟು, ಧಾರ್ಮಿಕವಾದ ಹಾಗೂ ಸಾಂಸ್ಕೃತಿಕವಾದ ಪ್ರಜ್ಞೆ, ಅಭಿಮಾನ ಮತ್ತು ಪರಸ್ಪರ ಸಹಕಾರಗಳು ನೆಲೆಗೊಂಡು ಬೆಳೆದು ಬೆಳಗಲು ದೇವಾಲಯಗಳೂ ಆ ಮೂಲಕ ನಡೆಯುವ ಜಾತ್ರೆ, ಉತ್ಸವ, ಅನ್ನಸಮಾರಾಧನೆ. ಶಿಕ್ಷಣವ್ಯವಸ್ಥೆ ಇತ್ಯಾದಿ ಕಾರ್ಯಕ್ರಮಗಳೂ ಮಹತ್ವಪೂರ್ಣವಾದ ಪಾತ್ರವನ್ನು ವಹಿಸಿವೆ. ಸಹಸ್ರಸಂಖ್ಯೆಯಲ್ಲಿ ಭಕ್ತರು ಮತ್ತು ಮಹಾತ್ಮರು ದೇವಾಲಯಗಳಲ್ಲಿ ಪ್ರತಿಷ್ಠೆಗೊಂಡ ದೇವ-ದೇವತೆಯರ ದರ್ಶನವನ್ನು ತಮ್ಮ ಆಧ್ಯಾತ್ಮಿಕ ಸಾಧನೆಯ ಮೂಲಕ ಪಡೆದು ಧರ್ಮ–ಅಧ್ಯಾತ್ಮಗಳ ವಿಚಾರದಲ್ಲಿ ಅಡಗಿರುವ ಸಾರ್ಥಕತೆ ಮತ್ತು ಸೌಖ್ಯಗಳನ್ನು ಸತ್ಯವೆಂದು ದೃಢೀಕರಿಸುತ್ತಾರೆ.

ದೇವಾಲಯಗಳ ನಿರ್ಮಾಣ, ದೇವತಾವಿಗ್ರಹಗಳ ಪ್ರತಿಷ್ಠಾಪನೆ, ದೇವಾಲಯಗಳಲ್ಲಿ ದೇವತಾರಾಧನೆ, ಇವುಗಳ ಹಿನ್ನೆಲೆಯಲ್ಲಿ ವಿಶೇಷವಾದ ಆಧ್ಯಾತ್ಮಿಕವಾದ ತತ್ತ್ವ ಮತ್ತು ವಿಚಾರಗಳು ಸೇರಿರುತ್ತವೆ. ಹಿಂದೂಧರ್ಮದ ಆಗಮಶಾಸ್ತ್ರಗ್ರಂಥಗಳಲ್ಲಿ ಹೇಳಿರುವ ವಿಧಿವಿಧಾನಗಳು, ತತ್ತ್ವಸೂತ್ರಗಳು, ವಿಚಾರವಿವರಗಳು, ದೇವಾಲಯಗಳ ನಿರ್ಮಾಣ, ಅಲ್ಲಿ ನಡೆಯುವ ಪೂಜಾದಿ ಕೆಲಸಕಾರ್ಯಗಳಿಗೆ ಮುಖ್ಯವಾದ ಆಧಾರವಾಗಿವೆ. ಆಯಾಯಾ ಸಂಪ್ರದಾಯದ ದೇವಾಲಯಗಳಲ್ಲಿ ಅದಕ್ಕದಕ್ಕೆ ಸಂಬಂಧಿಸಿದ ಆಗಮಗಳನ್ನು ಅನುಸರಿಸಲಾಗುತ್ತದೆ. ಉದಾ : ಶಿವದೇಗುಲಗಳಲ್ಲಿ ಶೈವ ಆಗಮಗಳನ್ನು ಅನುಸರಿಸುತ್ತಾರೆ. ಮನುಷ್ಯನ ಶರೀರದಲ್ಲಿರುವ ಯೋಗಚಕ್ರಗಳ ತತ್ತ್ವವನ್ನೇ ಅನುಸರಿಸಿ ಅದರ ಸಂಕೇತವಾಗಿ ದೇವಾಲಯದಲ್ಲಿ ದೇವತಾವಿಗ್ರಹಗಳ ಪ್ರತಿಷ್ಠಾಪನೆ ಮಾಡುವುದಾಗಿದೆ. ದೇವಾಲಯದ ರಚನೆ, ವಿಗ್ರಹಪ್ರತಿಷ್ಠೆ, ಪೂಜೆ ಇವುಗಳಲ್ಲೆಲ್ಲಾ ಬಹಳ ವಿವರವಾದ ಹಾಗೂ ಯುಕ್ತಿ ನ್ಯಾಯ ವಿಚಾರಪೂರಿತವಾದ ಆಧ್ಯಾತ್ಮಿಕತತ್ತ್ವ, ಸಾಂಸ್ಕೃತಿಕ ದೃಷ್ಟಿಗಳು ಅಡಗಿರುತ್ತವೆ. ಆದುದರಿಂದ ದೇವಾಲಯಗಳೆಂದರೆ ಅಧ್ಯಾತ್ಮಶಕ್ತಿಯು ಕೇಂದ್ರೀಕೃತವಾಗಿರುವ ಸ್ಥಳವಾಗಿದ್ದು ಬ್ರಹ್ಮಾಂಡದಲ್ಲಿರುವ ದಿವ್ಯಶಕ್ತಿತತ್ತ್ವಗಳನ್ನು ಸಾಂಕೇತಿಕವಾಗಿ ಪ್ರತಿನಿಧೀಕರಿಸುವ ಪವಿತ್ರವಾದ ಹಾಗೂ ದಿವ್ಯವಾದ ಪ್ರಭಾವಶಾಲಿ ನೆಲೆಯಾಗಿರುತ್ತದೆ.

ಯಾತ್ರಾಸ್ಥಳಗಳು ಮತ್ತು ಪುಣ್ಯಕ್ಷೇತ್ರಗಳು

ದಿವ್ಯತೆಯ ಶಕ್ತಿಯು ವಿಶೇಷವಾಗಿ ಒಂದಲ್ಲ ಒಂದು ರೀತಿಯಲ್ಲಿ ಮೂರ್ತಿ, ನದಿ, ಮಹಾಪುರುಷ ಎಂಬಂದಾಗಿ ಪ್ರಕಟಗೊಂಡು ಅಲ್ಲಿಗೆ ಬಹುಸಂಖ್ಯೆಯಲ್ಲಿ ಭಕ್ತರು, ಮಹಾತ್ಮರು ಮತ್ತು ಪುಣ್ಯಪುರುಷರು ಸಂದರ್ಶನವನ್ನು ನೀಡಿ, ದೇವರನ್ನು ಪ್ರಾರ್ಥಿಸಿ, ಪೂಜಿಸಿದ ಸ್ಥಳವೇ ಪುಣ್ಯಕ್ಷೇತ್ರವಾಗಿರುತ್ತದೆ. ಪ್ರತಿ ಪುಣ್ಯಕ್ಷೇತ್ರಕ್ಕೂ ಪೌರಾಣಿಕವಾದ ಕಥೆಯ ಹಿನ್ನೆಲೆ, ಒಬ್ಬ ಮಹಾತ್ಮ ಅಥವಾ ಮಹಿಮೆಯಿಂದ ಕೂಡಿದ ಪುಣ್ಯಪುರುಷರ, ಋಷಿಮುನಿಗಳ ಸಂಪರ್ಕದ ಕಥೆ ಇದ್ದೇ ಇರುತ್ತದೆ. ಉತ್ತಮವಾದ ಹಾಗೂ ದಿವ್ಯವಾದ ಚಿಂತನೆ ಮತ್ತು ಪ್ರಾರ್ಥನೆಗಳಿಂದ ವಿಶೇಷವಾದ ಹಾಗೂ ಪ್ರಭಾವಯುತವಾದ ಆಧ್ಯಾತ್ಮಿಕಶಕ್ತಿಯು ಪುಣ್ಯಕ್ಷೇತ್ರಗಳಲ್ಲಿ ಸಂಚಿತವಾಗಿರುತ್ತದೆ. ಅಲ್ಲಿಗೆ ತೆರಳಿ ಸದ್ಭಾವನೆ, ಸದ್ವರ್ತನೆಯಿಂದ ದೇವರ ಪೂಜೆಧ್ಯಾನಾದಿಗಳನ್ನು ಮಾಡಿದರೆ, ಮಾಡಿದವರ ಆಧ್ಯಾತ್ಮಿಕ, ಸಾಂಸ್ಕೃತಿಕ ಮತ್ತು ಲೌಕಿಕ ಜೀವನಕ್ಕೆ ವಿಶೇಷವಾದ ಬಲ, ಭದ್ರತೆ ಮತ್ತು ಬೆಳಕುಗಳು ದೊರೆಯುತ್ತವೆ ಎಂಬುದೇ ಪುಣ್ಯಕ್ಷೇತ್ರಗಳ ಕುರಿತಾಗಿರುವ ಮುಖ್ಯವಾದ ತತ್ತ್ವವಾಗಿದೆ. ಹಿಂದೂದೇಶದಲ್ಲಿ ವಿಪುಲ ಸಂಖ್ಯೆಯಲ್ಲಿರುವ ಹಿಂದೂ ಪುಣ್ಯಕ್ಷೇತ್ರಗಳು ಹಿಂದೂ ಸಂಸ್ಕೃತಿಯ ಪ್ರಾಯೋಗಿಕವಾದ ಪ್ರಕಟಣಾಕೇಂದ್ರವೂ ಆಗಿದ್ದು ಅಲ್ಲಿಗೆ ದೇಶದ ವಿವಿಧ ಭಾಗಗಳಿಂದ ವಿವಿಧ ಸಂಪ್ರದಾಯಕ್ಕೆ ಸೇರಿದ ಹಿಂದೂಗಳು ತೆರಳುವುದರಿಂದ ತಮ್ಮ ಸಂಸ್ಕೃತಿ ಮತ್ತು ಧರ್ಮಗಳಲ್ಲಿ ಇರುವ ಅನೇಕದಲ್ಲಿನ ಏಕತೆಯನ್ನು ಗ್ರಹಿಸಿ, ಸ್ನೇಹ, ಸಹನೆ ಮತ್ತು ಸಹಕಾರಗಳಿಂದ ಕೂಡಿ ಬಾಳಲು ಬಹುಮಟ್ಟಿಗೆ ಸ್ಫೂರ್ತಿ, ಮನೋನಿರ್ಧಾರಗಳು ದೊರೆಯುತ್ತವೆ.

ಪುಣ್ಯಕ್ಷೇತ್ರಗಳಲ್ಲಿ ಹೆಚ್ಚಿನ ಕಡೆಗಳಲ್ಲಿ ಕ್ಷೇತ್ರದ ಪುರಾಣಕಥೆಗೆ ಸಂಬಂಧವಾಗಿರುವ ನದಿಗಳೂ ಇದ್ದು ಅವುಗಳೂ ಕೂಡ ಪವಿತ್ರವೆಂದು ಪರಿಗಣಿಸಲಾಗಿದೆ. ಯಾತ್ರಿಕರು ಪುಣ್ಯನದಿಗಳಲ್ಲಿ ಮಿಂದು ಪವಿತ್ರರಾಗುತ್ತಾರೆ. ಪುಣ್ಯಕ್ಷೇತ್ರಗಳಿಗೆ ತೆರಳಿ ಸ್ನಾನಮಾಡಿ ದೇವತಾರಾಧನೆಯನ್ನು ಮಾಡಿದರೆ ತನ್ನ ಪಾಪ ಪರಿಹಾರವಾಗುವುದು, ಜೀವನದಲ್ಲಿ ಸುಖಶಾಂತಿಗಳು ಲಭಿಸುವುವು ಎಂಬ ನಂಬಿಕೆಯು ಯಾತ್ರೆಯ ವಿಚಾರವಾಗಿ ಹಿಂದೂಗಳಲ್ಲಿ ರಕ್ತಗತವಾಗಿರುವ ಸತ್ಯಸಂಗತಿಯಾಗಿದೆ. ಮಾತ್ರವಲ್ಲದೆ ಅಸಂಖ್ಯಾತ ಭಕ್ತಾದಿಗಳ ಯಾತ್ರಿಕರ ಅನುಭವವೂ ಅದೇ ಆಗಿದೆ. ಯಾತ್ರೆ ಕೈಗೊಳ್ಳಲಾರದವರು ದೂರದಿಂದ ತಮ್ಮ ಮನೆಗಳಿಂದಲೇ ಸಂಬಂಧಪಟ್ಟ ಪುಣ್ಯಕ್ಷೇತ್ರ ಮತ್ತು ಕ್ಷೇತ್ರದೇವತೆಯನ್ನು ಸ್ಮರಿಸಿ ಪೂಜಾಕಾಣಿಕೆಗಳನ್ನು ಹಣದ ರೂಪದಲ್ಲಿ ಹರಕೆಯಾಗಿ ಕಟ್ಟಿಡುತ್ತಾ ಅನುಗ್ರಹಕ್ಕಾಗಿ ಪ್ರಾರ್ಥಿಸುತ್ತಾರೆ. ಅದರಿಂದಾಗಿ ಅವರ ಕಷ್ಟಗಳು ನಿವಾರಣೆಯಾಗುತ್ತವೆ, ಪ್ರಾರ್ಥನೆಗಳು ನೆರವೇರುತ್ತವೆ. ಹಾಗೆಯೇ ಯಾತ್ರೆಹೋಗುವವರ ಕೈಯಲ್ಲಿ ಕಾಣಿಕೆ ಹಣವನ್ನು ಕೊಟ್ಟು ಕಳುಹಿಸುತ್ತಾರೆ. ಅಲ್ಲದೆ ತಮ್ಮ ಪರವಾಗಿ ದೇವರಿಗೆ ಸಲ್ಲಿಸಬೇಕೆಂದು ಕೇಳಿಕೊಳ್ಳುತ್ತಾರೆ. ಯಾತ್ರೆ ನಡೆಸಿ ಬಂದವರನ್ನು ಭೇಟಿಮಾಡಿ ನೋಡಿದಮಾತ್ರಕ್ಕೇ ಯಾತ್ರಾಪುಣ್ಯ ಲಭಿಸುತ್ತದೆ ಎಂಬುದಾಗಿ ಹಿಂದೂಗಳೆಲ್ಲರೂ ನಂಬಿರುತ್ತಾರೆ. ಹೀಗೆ ಪುಣ್ಯಕ್ಷೇತ್ರಗಳ ಸಂದರ್ಶನ, ಸ್ಮರಣ ಮತ್ತು ಇತರರ ಮೂಲಕ ಅಲ್ಲಿಗೆ ಹರಕೆ-ಕಾಣಿಕೆಗಳನ್ನು ಸಲ್ಲಿಸುವಿಕೆ ಇವುಗಳಿಂದ ವ್ಯಕ್ತಿಯ ದೇಹ, ಮನಸ್ಸು ಹಾಗೂ ಜೀವನಕ್ಕೆ ಶಾಂತಿ,

ಭವ್ಯತೆ ಮತ್ತು ಸೌಖ್ಯಗಳುಂಟಾಗುತ್ತವೆ. ವಿಶೇಷವಾದ ಹಾಗೂ ಬಣ್ಣನೆಗೆ ನಿಲುಕದ ಪವಿತ್ರ ಮತ್ತು ದಿವ್ಯವಾದ ಭಗವತ್‌ಶಕ್ತಿಯು ಪುಣ್ಯಕ್ಷೇತ್ರದ ದೇವ-ದೇವತೆಯರನ್ನು ಆರಾಧಿಸುವ ಭಕ್ತರ ಒಳಗೆ ಪರಸ್ಪರ ಹರಿದು ಪ್ರಭಾವವನ್ನು ಬೀರಿ ಕೆಲಸ ಮಾಡುತ್ತದೆ. ಮಾನವಯತ್ನದಿಂದ ಸಾಧ್ಯವಾಗದ, ಮನುಷ್ಯಯೋಜನೆಗೆ ಮೀರಿದ ವಿಶೇಷವಾದ ಕೆಲಸಗಳು, ಕಾರ್ಯಕ್ರಮಗಳು, ಪುಣ್ಯಕ್ಷೇತ್ರಗಳ ಸಂದರ್ಶನ, ಅಲ್ಲಿಗೆ ಕಳುಹಿಸುವ ಹರಕೆ-ಕಾಣಿಕೆಗಳು, ಪ್ರಾರ್ಥನೆಗಳ ಪರಿಣಾಮವಾಗಿ ಸಾಧಿತವಾಗುತ್ತವೆ. ಹೀಗಾಗುವುದೇ ಪುಣ್ಯಕ್ಷೇತ್ರಗಳ ಮತ್ತು ತೀರ್ಥಯಾತ್ರೆಗಳ ಮಹಿಮೆ ಹಾಗೂ ಪವಿತ್ರತೆಗಳಿಗೆ ಜ್ವಲಂತವಾದ ನಿದರ್ಶನವಾಗಿರುತ್ತದೆ. ಹಾಗಾಗಿ ಪುಣ್ಯಕ್ಷೇತ್ರ ಹಾಗೂ ಯಾತ್ರಾಸ್ಥಳಗಳು ಹಿಂದೂವಿಗೆ ಜೀವನಕ್ಕೆ ಬೇಕಾದ ರಕ್ಷಣೆ, ಭರವಸೆ ಮತ್ತು ದಿವ್ಯಮಾರ್ಗದರ್ಶನವನ್ನು ನೀಡುವ ಪವಿತ್ರವಾದ ಕೇಂದ್ರಗಳಾಗಿವೆ.

ಹಿಂದೂಧರ್ಮದ ವಿವಿಧ ಒಳಪಂಥದವರಿಗೆ ಸಂಬಂಧಿಸಿದ ಅನೇಕ ಪುಣ್ಯಕ್ಷೇತ್ರಗಳೂ, ಪುಣ್ಯನದಿಗಳೂ ನಮ್ಮ ದೇಶದ ಉದ್ದಗಲಕ್ಕೂ ನಿವೇಶನಗೊಂಡಿರುತ್ತವೆ. ಈ ಪೈಕಿ ಕೆಲವು ಕ್ಷೇತ್ರಗಳಿಗೆ ಹಿಂದೂಧರ್ಮದ ಎಲ್ಲಾ ಒಳಪಂಥದವರೂ ಯಾತ್ರಿಕರಾಗಿ ತೆರಳುತ್ತಾರೆ. ಉದಾ : ಕಾಶಿ, ಅಯೋಧ್ಯೆ, ರಾಮೇಶ್ವರ, ಬದರಿ, ಮಥುರಾ, ಬೃಂದಾವನ, ಕನ್ಯಾಕುಮಾರಿ ಇತ್ಯಾದಿ.

ಜೀವನವೇ ಒಂದು ಯಾತ್ರೆಯಾಗಿದ್ದು ಅದು ಜೀವಿಯು ಭವಬಂಧನದಿಂದ ಮುಕ್ತಿಯ ಕಡೆಗೆ ಅಥವಾ ಜೀವಾತ್ಮನು ಪರಮಾತ್ಮನ ಎಡೆಗೆ ಸಾಗುವುದು ಆಗಿರುತ್ತದೆ. ಈ ತತ್ತ್ವವನ್ನು ಆಗಿಂದಾಗ್ಗೆ ನೆನಪುಮಾಡಿಕೊಂಡು ತನ್ನ ಬಾಳಿನ ಮಹೋನ್ನತ ಗುರಿಯಾದ ಮೋಕ್ಷವನ್ನು ಪಡೆಯುವುದಕ್ಕಾಗಿ ತನ್ನ ಜೀವನದ ಮೂಲಕ ಪ್ರಯತ್ನಿಸಲು ಆಗತ್ಯವಾದ ಶಕ್ತಿಚೇತನಗಳನ್ನು, ತೀರ್ಥಯಾತ್ರೆ ಪುಣ್ಯಕ್ಷೇತ್ರಗಳ ಸಂದರ್ಶನದಿಂದ ಹಿಂದುವು ಪಡೆದುಕೊಳ್ಳುತ್ತಾನೆ.

ಈಗಾಗಲೇ ಹೇಳಿದಂತೆ ಹಿಂದೂಗಳ ಪವಿತ್ರವಾದ ಯಾತ್ರಾಸ್ಥಳಗಳು, ನದಿಗಳು ಬಹುಸಂಖ್ಯೆಯಲ್ಲಿದ್ದು ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ವಾಚಕರ ತಿಳುವಳಿಕೆಗಾಗಿ ಹೆಸರನ್ನು ಸೂಚಿಸಿ ತಿಳಿಯಪಡಿಸಿರುತ್ತದೆ :

ಪವಿತ್ರವಾದ ಯಾತ್ರಾಸ್ಥಳಗಳು : (೧) ಶ್ರೀ ಬದರೀನಾರಾಯಣ, (೨) ಶ್ರೀ ಕೇದಾರನಾಥ, (೩) ಅಮರನಾಥ, (೪) ಹರಿದ್ವಾರ, (೫) ಅಯೋಧ್ಯೆ, (೬) ಅವಂತಿಕಾಪುರ, (೭) ಗಯೆ, (೮) ವಾರಾಣಸೀ (ಕಾಶಿ), (೯) ಸೋಮನಾಥ, (೧೦) ಅಮರಾವತಿ, (೧೧) ವೈದ್ಯನಾಥ, (೧೨) ಉಜ್ಜೈನಿ, (೧೩) ಓಂಕಾರೇಶ್ವರಕ್ಷೇತ್ರ, (೧೪) ಶ್ರೀ ಭೀಮಾಶಂಕರ ಕ್ಷೇತ್ರ, (೧೫) ಶ್ರೀ ತ್ರ್ಯಂಬಕ ಕ್ಷೇತ್ರ, (೧೬) ಶ್ರೀ ವೈದ್ಯನಾಥ ಕ್ಷೇತ್ರ, (೧೭) ನಾಗೇಶ್ವರ ಕ್ಷೇತ್ರ, (೧೮) ಘುಶ್ಮೇಶ್ವರ ಕ್ಷೇತ್ರ, (೧೯) ಕಾಮಾಖ್ಯ ಕ್ಷೇತ್ರ, (೨೦) ಬೃಂದಾವನ, (೨೧) ಜಗನ್ನಾಥಪುರೀ, (೨೨) ಮಥುರಾ, (೨೩) ದ್ವಾರಮತೀ (ದ್ವಾರಕಾ), (೨೪) ಪ್ರಯಾಗ, (೨೫) ಕಲ್ಕತ್ತಾ ಶ್ರೀ ಕಾಳೀಕ್ಷೇತ್ರ, (೨೬) ಬೇಲೂರು ಮಠ, ಶ್ರೀ ರಾಮಕೃಷ್ಣ ಕ್ಷೇತ್ರ, (೨೭) ನಾಸಿಕ, (೨೮) ಪಂಢರಾಪುರ, (೨೯) ಶ್ರೀಶೈಲ ಮಲ್ಲಿಕಾರ್ಜುನ ಕ್ಷೇತ್ರ, (೩೦) ತಿರುಪತಿ, (೩೧) ಶ್ರೀರಂಗಂ, (೩೨) ಕಾಂಚೀಪುರ,

(೩೩) ರಾಮೇಶ್ವರ, (೩೪) ಉಡುಪಿ, (೩೫) ತಲಕಾವೇರಿ, (೩೬) ಶೃಂಗೇರಿ, (೩೭) ಮೇಲುಕೋಟೆ, (೩೮) ಕೊಲ್ಲೂರು, (೩೯) ಗೋಕರ್ಣ, (೪೦) ಸುಬ್ರಹ್ಮಣ್ಯ (ದ.ಕ. ಜಿಲ್ಲೆ), (೪೧) ಧರ್ಮಸ್ಥಳ, (೪೨) ಕೂಡಲಸಂಗಮ ಕ್ಷೇತ್ರ, (೪೩) ಮಂತ್ರಾಲಯ, (೪೪) ಕುಂಭಕೋಣಂ, (೪೫) ಚಿದಂಬರಂ, (೪೬) ಅರುಣಾಚಲ-ತಿರುವಣ್ಣಾಮಲೈ, (೪೭) ಮಧುರೆ, (೪೮) ಕಾಲಡಿ, (೪೯) ಗುರುವಾಯೂರು, (೫೦) ಅನಂತಶಯನ (ತಿರುವನಂತಪುರ), (೫೧) ತಲಕಾಡು, (೫೨) ಶಬರಿಮಲೈ, (೫೩) ಪಳನಿ, (೫೪) ಶಿರಡಿ, (೫೫) ಕನ್ಯಾಕುಮಾರಿ, (೫೬) ಶ್ರೀಕೈಲಾಸ (ಹಿಮಾಲಯ), (೫೭) ಮಾನಸ ಸರೋವರ (ಟಿಬೆಟ್).

ಪವಿತ್ರವಾದ ಏಳು ಪುಣ್ಯನದಿಗಳು : (೧) ಗಂಗಾ, (೨) ಯಮುನಾ, (೩) ಗೋದಾವರೀ, (೪) ಸರಸ್ವತೀ, (೫) ನರ್ಮದಾ. (೬) ಸಿಂಧು, (೭) ಕಾವೇರಿ.

ಮೋಕ್ಷದಾಯಕವಾದ ಏಳು ಪ್ರಮುಖ ಕ್ಷೇತ್ರಗಳು : (೧) ಕಾಶೀ (ವಾರಾಣಸೀ), (೨) ಕಾಂಚೀ, (೩) ಮಾಯಾಪುರೀ, (ಹರಿದ್ವಾರ), (೪) ಅಯೋಧ್ಯಾ, (೫) ದ್ವಾರವತೀ (ದ್ವಾರಕಾ), (೬) ಮಥುರಾ, (೭) ಅವಂತಿಕಾಪುರ (ಉಜ್ಜೈನಿ).

ಪುಣ್ಯಪ್ರದವಾದ ಐದು ಪ್ರಮುಖ ಸರೋವರಗಳು : (೧) ಬಿಂದು ಸರೋವರ ಸಿದ್ಧಪುರ (ಗುಜರಾಥ), (೨) ನಾರಾಯಣ ಸರೋವರ (ಕಚ್), (೩) ಪಂಪಾಸರೋವರ (ಕರ್ನಾಟಕ ರಾಜ್ಯ), (೪) ಪುಷ್ಕರ ಸರೋವರ (ರಾಜಾಸ್ಥಾನ), (೫) ಮಾನಸ ಸರೋವರ (ಟಿಬೆಟ್).

# ೧೩

# ಹಿಂದೂಧರ್ಮದ ಋಷಿಗಳು, ಆಚಾರ್ಯರು, ಸಂತರು ಮತ್ತು ಮಠಸಂಸ್ಥೆಗಳು

ಹಿಂದೂಧರ್ಮದ ಅವಿನಾಶಿಯಾದ ಸತ್ಯತತ್ತ್ವಗಳನ್ನು ಕಾಲಕಾಲಕ್ಕೆ ಸರಿಯಾಗಿ ಜನರಿಗೆ ತಮ್ಮ ಆದರ್ಶ ಜೀವನದ ಮೂಲಕ, ಸಂದೇಶಗಳ ಮೂಲಕ ಬೋಧಿಸಿ ಮಾರ್ಗ ದರ್ಶನ ನೀಡಲು ಪವಿತ್ರ ಭೂಮಿಯಾದ ಈ ಭರತಖಂಡದಲ್ಲಿ ಅನೇಕ ಮಹಾಪುರುಷರು ಜನ್ಮವೆತ್ತಿ ಜನರ ಕಲ್ಯಾಣಕ್ಕಾಗಿ ತಮ್ಮ ಬಾಳನ್ನು ಬಾಳಿರುತ್ತಾರೆ. ಇವರನ್ನು ಸಾಮಾನ್ಯ ವಾಗಿ ಋಷಿ, ಆಚಾರ್ಯ, ಸಂತ ಮತ್ತು ಮಹಾತ್ಮ ಎಂದು ನಾಲ್ಕು ವರ್ಗಗಳಾಗಿ ವರ್ಗೀಕರಿಸಬಹುದು. ಇವರೆಲ್ಲರೂ ಹಿಂದೂಧರ್ಮದ ತತ್ತ್ವಗಳನ್ನು ಜೀವನದಲ್ಲಿ ಹೇಗೆ ಅನುಷ್ಠಾನಕ್ಕೆ ತರಲು ಸಾಧ್ಯ ಎಂಬುದನ್ನು ಸ್ವಯಂ ಆದರ್ಶಜೀವನದಿಂದ ತೋರಿಸಿ ಕೊಟ್ಟಿರುವಂತೆ ಹಿಂದೂಧರ್ಮದ ತತ್ತ್ವಗಳಿಗೆ ಪ್ರಾಯೋಗಿಕ ಸಚೇತನ ಭಾಷ್ಯದಂತೆ ಜನಕೋಟಿಯ ಮಧ್ಯೆ ಬಾಳಿ ಬೆಳಗಿರುತ್ತಾರೆ. ಹಾಗಾಗಿ ಈ ಮಹಾಪುರುಷರ ಜೀವನ ದಿಂದ ನಮಗೆ ಧೈರ್ಯ ಮತ್ತು ಭರವಸೆಗಳು ದೊರೆಯುತ್ತವೆ. ಈ ಮಹಾಪುರುಷರೆಲ್ಲ ಭಗವಂತನ ದಿವ್ಯಮಂಗಳಕರವಾದ ಆಶೀರ್ವಾದವೇ ಸಚೇತನಮೂರ್ತಿಯಾಗಿ ಮೈವೆತ್ತುಬಂದಿರುವುದೋ ಎಂಬಂತೆ ಜನ್ಮವೆತ್ತಿ ಇಳೆಯಲ್ಲಿ ಬೆಳಗಿ ಜಗತ್ತಿನಿಂದ ಕಣ್ಮರೆ ಯಾಗಿರುತ್ತಾರೆ.

ಜಾತಿಮತಪಂಥಗಳ ಭೇದವಿಲ್ಲದೆ ಎಲ್ಲರೂ ಭಗವಂತನ ಕೃಪೆಗೆ ಪಾತ್ರರಾಗಲು ಸಾಧ್ಯವಿದೆ. ಆ ಬಗೆಗೆ ಎಲ್ಲರಲ್ಲಿರಬೇಕಾದುದು ಹೃದಯಶುದ್ಧಿ, ಪವಿತ್ರಭಾವನೆ ಮತ್ತು ಭಗವಂತ ಬೇಕೆಂಬ ವ್ಯಾಕುಲತೆ ಎಂಬುದನ್ನು ಈ ಮಹಾಪುರುಷರೆಲ್ಲರೂ ತಮ್ಮ ಆದರ್ಶ ದಿಂದ ತೋರಿಸಿಕೊಟ್ಟಿರುತ್ತಾರೆ.

ವೇದವೇದಾಂತಗಳಲ್ಲಿ ಹೇಳಿರುವ ಗಹನವಾದ ತತ್ತ್ವಗಳನ್ನೂ ಸ್ಮೃತಿಪುರಾಣ ಗಳಲ್ಲಿ ಉಲ್ಲೇಖಿಸಿರುವ ಧರ್ಮಕರ್ಮಗಳ ನಿಯಮಗಳನ್ನೂ ಜನಸಾಮಾನ್ಯರಿಗೂ

ಅರ್ಥವಾಗುವಂತೆ ತಮ್ಮ ಜೀವನದ ಆದರ್ಶ, ಬೋಧನಾವಾಣಿ ಮತ್ತು ಹಾಡುಗಳ ಮೂಲಕ ಈ ಮಹಾಪುರುಷರು ಪ್ರಚಾರಮಾಡಿರುತ್ತಾರೆ.

ದೇವರು ಇಲ್ಲ ಎನ್ನುವ ನಾಸ್ತಿಕರಿಗೆ ನಂಬಿಗೆಯ ಬೆಳಕು, ದೇವರಿದ್ದಾನೆ ಎಂದು ನಂಬಿಯೂ ದೇವರ ವಿಚಾರದಲ್ಲಿ ಸಂಶಯಪಡುವವರಿಗೆ ಎಚ್ಚರಿಕೆ, ದೇವರನ್ನು ಕಾಣಲು ಮತ್ತು ಸಾಕ್ಷಾತ್ಕಾರ ಮಾಡಿಕೊಳ್ಳಲು ಕಾತರರಾಗಿ ಇರುವವರಿಗೆ ಮಾರ್ಗದರ್ಶನ ಹಾಗೂ ಅಭಯಗಳನ್ನು ಈ ಮಹಾಪುರುಷರು ತಮ್ಮ ಜೀವನ–ಬೋಧನೆಗಳ ಮೂಲಕ ನೀಡಿರುತ್ತಾರೆ.

ಜನಸಾಮಾನ್ಯರಂತೆ ಬೆಳೆದು, ಲೋಕದ ಕಷ್ಟಸಂದಿಗ್ಧತೆಗಳನ್ನೆಲ್ಲಾ ಅನುಭವಿಸಿ, ಕೊನೆಗೆ ಅವುಗಳನ್ನು ಮೀರಿ ಮಹಾತ್ಮರಾಗಿ ಬೆಳಗಿದ ಈ ಮಹಾಪುರುಷರೆಲ್ಲರ ಜೀವನ ದಲ್ಲಿ ಬದುಕಿನ ಅನೇಕ ಸಮಸ್ಯೆಗಳಿಗೆ ಉತ್ತರ ದೊರೆಯುತ್ತದೆ. ಜೀವನದ ಅನೇಕ ಕಷ್ಟನೋವುಗಳಿಗೆ ಶಾಂತಿಸಮಾಧಾನಗಳು ಲಭಿಸುತ್ತವೆ. ಅನೇಕ ಮಹಾಪುರುಷರ ಹುಟ್ಟಿನ ಹಿನ್ನೆಲೆಯು, ನದಿಗಳ ಹಿನ್ನೆಲೆಯಂತೆ. ಅತಿರೇಕಗಳು ಆಶ್ಚರ್ಯಗಳು ಹಾಗೂ ಸಂಶಯಕ್ಕೆ ಎಡೆಯುಳ್ಳ ರೀತಿಯಿಂದ ಕೂಡಿವೆ. ಆದರೆ ಅವರ ಬೆಳವಣಿಗೆ ಮತ್ತು ಜೀವನಸ್ಥಿತಿಗಳು ನದಿಗಳಂತೆಯೇ ಅತ್ಯಂತ ಉಪಯುಕ್ತವೂ ಪರಿಣಾಮಕಾರಿಯೂ ಆಗಿರುತ್ತದೆ.

ತಮ್ಮ ತ್ಯಾಗಭಕ್ತಿವೈರಾಗ್ಯ ಮತ್ತು ತಪಸ್ಸುಗಳ ಸಾಧನೆಯಿಂದ ಇವರು ಪರಮಾತ್ಮನ ಸಾಕ್ಷಾತ್ಕಾರ ಮಾಡಿಕೊಂಡವರಾಗಿ ಸಿದ್ಧಪುರುಷರಾಗಿದ್ದು ಈ ಪೈಕಿ ಹಲವರು ಭಕ್ತರಾಗಿದ್ದಾರೆ ಮತ್ತೆ ಕೆಲವರು ಮಹಾಯೋಗಿಗಳಾಗಿರುತ್ತಾರೆ. ಒಬ್ಬರಲ್ಲೇ ಎಲ್ಲಾ ಲಕ್ಷಣಗಳೂ ಕೂಡಿರುವುದು, ಇನ್ನು ಕೆಲವರಲ್ಲಿ ಭಕ್ತ ಕರ್ಮಯೋಗಿ ಜ್ಞಾನಿ ಇತ್ಯಾದಿಗಳ ಒಂದೊಂದು ಲಕ್ಷಣವು ಮಾತ್ರ ಕೂಡಿಕೊಂಡಿರುವುದು ಅಥವಾ ಜೀವನದ ವಿವಿಧ ಘಟ್ಟಗಳಲ್ಲಿ ಈ ವಿವಿಧ ಲಕ್ಷಣಗಳು ಸೇರಿ ಪ್ರಕಾಶಗೊಂಡಿರುವುದು ಇವೆಲ್ಲಾ ಇವರ ಜೀವನವನ್ನು ಅಧ್ಯಯನ ಮಾಡಿದಾಗ ತಿಳಿದುಬರುತ್ತದೆ.

ಹಿಂದೂಧರ್ಮದ ವಿವಿಧ ಒಳಪಂಥಗಳಲ್ಲಿ ಕಾಲಕಾಲಕ್ಕೆ ಸರಿಯಾಗಿ ಅನೇಕ ಸಂತರು ಮಹಾತ್ಮರು ಜನ್ಮತಳೆದಿರುತ್ತಾರೆ. ಅವರು ಆಯಾಯಾ ಪಂಥಗಳಲ್ಲಿ ಭಗವಂತನ ಕಡೆಗೆ ಸಾಗುವವರಿಗೆ ಸಹಾಯ ಮತ್ತು ಮಾರ್ಗದರ್ಶನವನ್ನು ನೀಡುತ್ತ ಮತಭ್ರಾಂತಿ ಪಥಜಾಳವನ್ನು ತ್ಯಜಿಸಿ ಸ್ನೇಹ ಮತ್ತು ಸಹಬಾಳ್ವೆಯಿಂದ ಬಾಳಲು ಪ್ರೋತ್ಸಾಹಯುಕ್ತ ಬೋಧನೆಗಳನ್ನು ನೀಡಿರುತ್ತಾರೆ. ಹೀಗೆ ಈ ಮಹಾಪುರುಷರೆಲ್ಲರೂ ಹಿಂದೂಧರ್ಮದ ದಿವ್ಯತತ್ತ್ವಗಳ ಮತ್ತು ಸಂಸ್ಕೃತಿಯ ಮಹಾಪೋಷಕರೂ ಹಾಗೂ ಪ್ರಚಾರಕರೂ ಆಗಿ ತಮ್ಮ ಜನ್ಮ-ನಡೆನುಡಿಗಳಿಂದ ಈ ದೇಶವನ್ನು ಪವಿತ್ರವೂ ಶಕ್ತಿಪ್ರದವೂ ಆಗಿ ಮಾಡಿರುತ್ತಾರೆ.

ಇವರನ್ನೆಲ್ಲಾ ಕೇವಲ ಪರಿಚಯದ ಅನುಕೂಲಕ್ಕಾಗಿ ಮಾತ್ರ ನಾಲ್ಕು ರೀತಿ ವರ್ಗೀ ಕರಣ ಮಾಡಲಾಗಿದೆಯೇ ವಿನಾ ಅವರಲ್ಲಿ ಒಬ್ಬರಿಗೊಬ್ಬರು ಮೇಲೆಂದಾಗಲಿ ಕೀಳು ಎಂದಾಗಲಿ ಅಲ್ಲ.

(೧) ಋಷಿಗಳು : ತಮ್ಮ ತ್ಯಾಗ ಮತ್ತು ತಪಸ್ಸಿನಿಂದ ದಿವ್ಯವಾದ ಆಧ್ಯಾತ್ಮಜ್ಞಾನವನ್ನು ಪಡೆದು ಮಂತ್ರಗಳನ್ನು ಅಂತರಂಗದ ಅನುಭವದ ಮೂಲಕ ಕಂಡುಕೊಂಡ ಮಂತ್ರದ್ರಷ್ಟಾರರೇ ಋಷಿಗಳು. (ಒಟ್ಟಿನಲ್ಲಿ ದಿವ್ಯವಾದ ಆಧ್ಯಾತ್ಮತತ್ತ್ವದ ಅನುಭೂತಿಯನ್ನು ಪಡೆದ ಸಿದ್ಧಮಹಾಪುರುಷರೇ ಋಷಿಗಳು ಎಂದು ತಾತ್ಪರ್ಯ.) ಇವರಲ್ಲಿ ನೇರವಾಗಿ ಸಂನ್ಯಾಸ ಸ್ವೀಕಾರ ಮಾಡಿದವರು, ಗೃಹಸ್ಥಾಶ್ರಮ ಧರ್ಮಪಾಲಕರು —ಎಂದು ಎರಡು ಒಳವರ್ಗಗಳಿವೆ. ಹಾಗೆಯೇ ಬ್ರಹ್ಮರ್ಷಿ, ದೇವರ್ಷಿ, ಮಹರ್ಷಿ, ಪರಮರ್ಷಿ, ಕಾಂಡರ್ಷಿ, ಶ್ರುತರ್ಷಿ ಮತ್ತು ರಾಜರ್ಷಿ ಎಂಬ ಏಳು ಪ್ರಕಾರಗಳಿವೆ.

(೨) ಆಚಾರ್ಯರು : ಇವರಲ್ಲಿ ಮಠಾಚಾರ್ಯರು ಮತ್ತು ಪೀಠಾಚಾರ್ಯರು ಎಂದು ಎರಡು ವಿಧ. ಪೀಠಾಚಾರ್ಯರನ್ನು ಸ್ವಾಮಿಗಳು, ಗುರುಗಳು ಎಂದು ಕರೆಯುತ್ತಾರೆ. ಸಂನ್ಯಾಸ ಸ್ವೀಕಾರಮಾಡಿ ದಿವ್ಯವಾದ ಆಧ್ಯಾತ್ಮಿಕ ತತ್ತ್ವಗಳನ್ನು ಸಾಕ್ಷಾತ್ಕಾರ ಮಾಡಿಕೊಂಡು ಲೋಕಶಿಕ್ಷಣಾರ್ಥವಾಗಿ ಸಮಾಜರಂಗದಲ್ಲಿ ಹೊಸ ಮತವನ್ನು ಸ್ಥಾಪಿಸಿ, ಬೋಧನೆ, ಗುರುಮಠ, ಗುರುಪೀಠಗಳನ್ನು ಸ್ಥಾಪನೆ ಮಾಡುವಿಕೆ—ಇತ್ಯಾದಿ ಕಾರ್ಯಕ್ರಮ ಕೈಗೊಂಡ ಸಂನ್ಯಾಸೀ ಮಹಾಪುರುಷರೇ ಮಠಾಚಾರ್ಯರು. ಸಂನ್ಯಾಸ ಸ್ವೀಕರಿಸಿ ಮಠ, ಆಶ್ರಮಗಳ ಅಧಿಪತಿಗಳಾಗಿ ಧರ್ಮಪ್ರಚಾರ, ಧರ್ಮಬೋಧನೆ, ಮಠದ ಸಂಪ್ರದಾಯಗಳನ್ನು ಅನುಸರಿಸಿಕೊಂಡು ಅದನ್ನು ರಕ್ಷಿಸಿ ಪೋಷಿಸಿಕೊಂಡು ಬರುವವರೇ ಮಠಾಧಿಪತಿಗಳು. ಅವರನ್ನು ಪೀಠಾಚಾರ್ಯರು, ಪೀಠಾಧಿಪತಿಗಳು ಎಂದೂ ಕರೆಯುತ್ತಾರೆ.

(೩) ಸಂತರು : ಭಗವಂತನೊಬ್ಬನೇ ತನಗೆ ಬೇಕೆಂದು, ಭಗವಂತನಿಗಾಗಿ ಹಂಬಲಿಸಿ, ಭಗವಂತನ ಸಾಕ್ಷಾತ್ಕಾರವನ್ನು ಪಡೆದು, ಜಗತ್ತಿನಲ್ಲಿ ಭಗವದಾನಂದದಿಂದ ಬಾಳನ್ನು ನಡೆಸಿ, ಇತರರಿಗೆ ಮಾರ್ಗದರ್ಶನ ಬೋಧನೆಗಳನ್ನು ನೀಡಿದವರೇ ಸಂತರು. ಇವರಲ್ಲಿ ಜಾತಿಮತಗಳ ಭೇದವಾಗಲಿ, ವಿದ್ಯೆಪಾಂಡಿತ್ಯಗಳ ತಾರತಮ್ಯದೃಷ್ಟಿಯಾಗಲಿ ಇರುವುದಿಲ್ಲ. ಇವರಲ್ಲಿ ಹಲವರು ಭಗವಂತನ ಸಾಕ್ಷಾತ್ಕಾರವನ್ನು ಅನುಭವಿಸಿ ದಿವ್ಯಾನಂದದಿಂದ ಕೂಡಿ ಹಾಡುಗಳ ಮೂಲಕ ಗಹನವಾದ ಆಧ್ಯಾತ್ಮಿಕ ತತ್ತ್ವಗಳನ್ನು ಜನಸಾಮಾನ್ಯರಿಗೂ ಅರ್ಥವಾಗುವಂತೆ ಬೋಧಿಸಿರುತ್ತಾರೆ. ಇವರನ್ನು ದಾಸರು, ಶರಣರು ಎಂದೂ ಕರೆಯುತ್ತಾರೆ.

(೪) ಮಹಾತ್ಮರು : ಜಗದ ಹಿತವನ್ನೇ ಬಯಸಿ ಲೋಕಕಲ್ಯಾಣಕ್ಕಾಗಿ ಈ ಇಳೆಯಲ್ಲಿ ಹಲವು ರೀತಿಯಲ್ಲಿ ದುಡಿದು ದಿವ್ಯವಾದ ಆಧ್ಯಾತ್ಮಸಾಕ್ಷಾತ್ಕಾರದ ಆನಂದದಿಂದ ಕೂಡಿ ಪವಿತ್ರವಾದ ಜೀವನವನ್ನು ನಡಸಿ ಜನಕೋಟಿಯ ಭಕ್ತಿಗೌರವಗಳಿಗೆ ಪಾತ್ರರಾದವರೇ ಮಹಾತ್ಮರು.

ಹಿಂದೂದೇಶದಲ್ಲಿ ಬಾಳಿ ಬೆಳಗಿದ ಈ ನಾಲ್ಕು ವರ್ಗದ ಮಹಾಪುರುಷರ ಸಂಖ್ಯೆ ವಿಪುಲವಾದುದು. ಅವರೆಲ್ಲರ ಹೆಸರನ್ನು ಹೇಳಿ ಜೀವನಚರಿತ್ರೆಯನ್ನು ತಿಳಿಸುವುದೆಂದರೆ ಪ್ರಸ್ತುತ ಗ್ರಂಥದಲ್ಲಿ ಸಾಧ್ಯವಾಗದ ಸಂಗತಿಯಾಗಿದೆ. ಆದುದರಿಂದ ಇವರಲ್ಲಿ ಮುಖ್ಯರಾದ ಕೆಲವರ ಹೆಸರುಗಳನ್ನು ಮಾತ್ರ ಇಲ್ಲಿ ಸೂಚಿಸಿರುವುದಾಗಿದ್ದು ಅವರವರ ಜೀವನ

ಚರಿತ್ರೆಯನ್ನು ಯಥಾವಕಾಶವಾಗಿ ಓದುಗರು ಅನ್ಯಗ್ರಂಥಗಳ ಮೂಲಕ ಸಂಗ್ರಹಿಸಿ ತಿಳಿದುಕೊಳ್ಳಬೇಕೆಂದು ಸೂಚಿಸಲಾಗಿದೆ.

ಋಷಿಗಳು : ಸನಕ, ಸನಂದನ, ಸನಾತನ, ಸನತ್ಕುಮಾರ, ನಾರದ, ದಧೀಚಿ, ವಸಿಷ್ಠ, ವಿಶ್ವಾಮಿತ್ರ, ಮುದ್ಗಲ, ವಾಲ್ಮೀಕಿ, ವೇದವ್ಯಾಸ, ಶುಕ, ಯಾಜ್ಞವಲ್ಕ್ಯ, ಕಶ್ಯಪ, ಅತ್ರಿ, ಗೌತಮ, ಜಮದಗ್ನಿ, ಭರದ್ವಾಜ, ಅಂಗಿರಸ, ಭೃಗು, ಕಪಿಲ, ಕಣಾದ, ಜೈಮಿನಿ ಮತ್ತು ಪತಂಜಲಿ—ಎಂಬುದಾಗಿ ಹಲವರಿದ್ದಾರೆ.

ಈ ಪೈಕಿ ಅತ್ರಿ, ವಸಿಷ್ಠ. ಕಶ್ಯಪ, ಜಮದಗ್ನಿ, ಭರದ್ವಾಜ, ವಿಶ್ವಾಮಿತ್ರ ಮತ್ತು ಗೌತಮ ಎಂಬವರುಗಳು ಈ ಯುಗದಲ್ಲಿ ಸಪ್ತಋಷಿಗಳೆಂದು ಪೂಜ್ಯತೆ-ಗೌರವಗಳಿಗೆ ಪಾತ್ರರಾಗಿ ಪ್ರಸಿದ್ಧರಾಗಿರುತ್ತಾರೆ.

ಆಚಾರ್ಯರು : (೧) ಗೀತಾಚಾರ್ಯ ಭಗವಾನ್ ಶ್ರೀಕೃಷ್ಣ, (೨) ಶ್ರೀವೃಷಭ ದೇವಸ್ವಾಮಿ, (೩) ಶ್ರೀಮಹಾವೀರಸ್ವಾಮಿ, (೪) ಶ್ರೀ ಗೌತಮಬುದ್ಧ, (೫) ಶ್ರೀ ಗೌಡ ಪಾದಾಚಾರ್ಯ, (೬) ಶ್ರೀಶಂಕರಾಚಾರ್ಯ, (೭) ಶ್ರೀಯಾಮುನಾಚಾರ್ಯ, (೮) ಶ್ರೀ ರಾಮಾನುಜಾಚಾರ್ಯ, (೯) ಶ್ರೀಮಧ್ವಾಚಾರ್ಯ, (೧೦) ಶ್ರೀವಲ್ಲಭಾಚಾರ್ಯ, (೧೧) ಶ್ರೀರಾಮಾನಂದಾಚಾರ್ಯ, (೧೨) ಶ್ರೀಕೃಷ್ಣಚೈತನ್ಯ, (೧೩) ಶ್ರೀವೇದಾಂತದೇಶಿಕ, (೧೪) ಶ್ರೀರಾಘವೇಂದ್ರಸ್ವಾಮಿ, (೧೫) ಮಧುಸೂದನ ಸರಸ್ವತೀಸ್ವಾಮಿ, (೧೬) ಶ್ರೀ ವಿದ್ಯಾರಣ್ಯಸ್ವಾಮಿ, (೧೭) ಶ್ರೀಬಸವೇಶ್ವರ, (೧೮) ಶ್ರೀದಯಾನಂದಸರಸ್ವತೀ, (೧೯) ಶ್ರೀರಾಮಕೃಷ್ಣ ಪರಮಹಂಸ, (೨೦) ಶ್ರೀಸ್ವಾಮಿ ವಿವೇಕಾನಂದ, (೨೧) ಶ್ರೀಶಿರಡಿ ಸಾಯಿಬಾಬಾ, (೨೨) ಶ್ರೀಸ್ವಾಮಿ ರಾಮತೀರ್ಥ, (೨೩) ಶ್ರೀನಾರಾಯಣಗುರು, (೨೪) ಶ್ರೀರಮಣಮಹರ್ಷಿ, (೨೫) ಶ್ರೀಸ್ವಾಮಿ ಶಿವಾನಂದ, (೨೬) ಶ್ರೀ ಅರವಿಂದಮಹರ್ಷಿ, (೨೭) ಶ್ರೀಸ್ವಾಮಿ ನಿತ್ಯಾನಂದ, (೨೮) ಶ್ರೀಸ್ವಾಮಿ ರಾಮದಾಸ, (೨೯) ಶ್ರೀಸತ್ಯ ಸಾಯಿಬಾಬಾ.

ಸಂತರು : (೧) ಶ್ರೀ ನರಸೀ ಮೆಹ್ತಾ, (೨) ಶ್ರೀ ಗೋಸ್ವಾಮಿತುಲಸೀದಾಸ, (೩) ಶ್ರೀ ಸೂರದಾಸ, (೪) ಶ್ರೀ ಕಬೀರ, (೫) ಶ್ರೀ ಜ್ಞಾನೇಶ್ವರ, (೬) ಶ್ರೀ ನಾಮದೇವ್, (೭) ಶ್ರೀ ಏಕನಾಥ, (೮) ಶ್ರೀ ತುಕಾರಾಮ್, (೯) ಶ್ರೀ ಪುರಂದರದಾಸ, (೧೦) ಶ್ರೀ ಕನಕದಾಸ, (೧೧) ಶ್ರೀ ತ್ಯಾಗರಾಜ, (೧೨) ಶ್ರೀ ಅಪ್ಪಯ್ಯ ದೀಕ್ಷಿತ, (೧೩) ಶ್ರೀ ಜ್ಞಾನ ಸಂಬಂಧರ್, (೧೪) ಶ್ರೀ ನಮ್ಮಾಳ್ವಾರ್, (೧೫) ಶ್ರೀ ಕುಲಶೇಖರ ಆಳ್ವಾರ್.

ಮಹಾತ್ಮರು : (೧) ಶ್ರೀ ರಾಮಚರಣ ರಾಮಸ್ನೇಹಿ, (೨) ಶ್ರೀ ತ್ರೈಲಿಂಗಸ್ವಾಮಿ, (೩) ಶ್ರೀ ಭಾಸ್ಕರಾನಂದಜೀ, (೪) ಶ್ರೀ ಪಾವ್‌ಹಾರಿಬಾಬಾ, (೫) ಮಹಾತ್ಮಗಾಂಧೀಜಿ,

ಸ್ತ್ರೀವರ್ಗದ ಮಹಾತ್ಮರು ಸಂತರು ಇತ್ಯಾದಿ: (೧) ಗೋದಾದೇವಿ, (೨) ವಿಶ್ವವಾರಾ, (೩) ಇಂದ್ರಾಣೀ, (೪) ಲೋಪಾಮುದ್ರಾ, (೫) ಶ್ರದ್ಧಾ, (೬) ಮೇಧಾ, (೭) ಸಾವಿತ್ರಿ, (೮) ಗಾರ್ಗೀ, (೯) ಮೈತ್ರೇಯಿ, (೧೦) ಮೀರಾಬಾಯಿ, (೧೧) ಅಕ್ಕಮಹಾದೇವಿ, (೧೨) ವೇಣೂಬಾಯಿ, (೧೩) ಗಂಗಾಮಣಿ, (೧೪) ಶ್ರೀಮಾತೆ ಶಾರದಾಮಣಿ ದೇವಿ,

**ಹಿಂದೂಧರ್ಮದ ಗುರುಪೀಠಗಳು ಮತ್ತು ಮಠಸಂಸ್ಥೆಗಳು**

ಹಿಂದೂಧರ್ಮದ ಪ್ರಕಾರವಾಗಿ ಗುರು, ಗುರುಪೀಠ ಮತ್ತು ಮಠಸಂಸ್ಥೆಗಳು ತುಂಬಾ ಪ್ರಾಮುಖ್ಯತೆಯನ್ನು ಮತ್ತು ಪವಿತ್ರತೆಯನ್ನು ಪಡೆದಿರುತ್ತವೆ. 'ಗುರು' ಎಂದರೆ ಅಜ್ಞಾನವೆಂಬ ಕತ್ತಲನ್ನು ನಿವಾರಿಸುವವರಾಗಿರುತ್ತಾರೆ. ಹಿಂದೂಧರ್ಮದ ತತ್ತ್ವಗಳನ್ನು ಜನಸಾಮಾನ್ಯರಿಗೆ ತಮ್ಮ ಹಿರಿಯ ಆದರ್ಶಜೀವನ, ಉಪದೇಶಗಳ ಮೂಲಕ ಬೋಧಿಸಿ ಮಾರ್ಗದರ್ಶನ ನೀಡಲು ಕಾಲಕಾಲಕ್ಕೆ ಅನೇಕ ಪುಣ್ಯಪುರುಷರು ಜನ್ಮತಳೆದು ಗುರುಗಳಾಗಿ ಹಿಂದೂಸ್ಥಾನದಲ್ಲಿ ಬಾಳಿ ಬೆಳಗಿರುತ್ತಾರೆ. ಹಿಂದೂಧರ್ಮದ ವಿವಿಧ ಪಂಥಗಳಾದ ಶೈವ, ವೈಷ್ಣವ, ಶಾಕ್ತ ಎಂಬಿತ್ಯಾದಿ ಮತಗಳ ತತ್ತ್ವಗಳನ್ನು ಪ್ರಚಾರಮಾಡಲು ಮತ್ತು ಆಯಾಯಾ ಪಂಥದವರಿಗೆ ಧರ್ಮಬೋಧೆ, ಧಾರ್ಮಿಕ ಪರವಾದ ಮಾರ್ಗದರ್ಶನ ನೀಡಲು ಗುರುಪೀಠ, ಆಶ್ರಮ ಮತ್ತು ಮಠಸಂಸ್ಥೆಗಳು ಸ್ಥಾಪನೆಗೊಂಡಿರುತ್ತವೆ.

ಆಶ್ರಮ ಎಂಬ ಶಬ್ದವು ಸಾಮಾನ್ಯವಾಗಿ ಮೂರು ತರಹದ ಅರ್ಥದಿಂದ ವ್ಯವಹಾರದಲ್ಲಿ ಉಪಯೋಗಿಸಲ್ಪಡುತ್ತದೆ. ಒಂದನೆಯದಾಗಿ ಆಶ್ರಮ ಎಂದರೆ ಜೀವನದಲ್ಲಿನ ಒಂದು ಹಂತವಾಗಿರುತ್ತದೆ. ಉದಾ : ಬ್ರಹ್ಮಚರ್ಯ ಆಶ್ರಮ, ಗೃಹಸ್ಥ ಆಶ್ರಮ, ವಾನಪ್ರಸ್ಥ ಆಶ್ರಮ, ಸಂನ್ಯಾಸ ಆಶ್ರಮ. ಎರಡನೆಯದಾಗಿ, ಆಶ್ರಮ ಎಂದರೆ ಜಗತ್ತಿನಲ್ಲಿನ ಲೌಕಿಕ ವ್ಯವಹಾರಗಳಿಂದ ದೂರವಾಗಿರುವ ವಾನಪ್ರಸ್ಥ ಆಶ್ರಮಿಯು ಕಟ್ಟಿಕೊಂಡ ವಾಸದ ನೆಲೆ ಎಂದು ಅರ್ಥ. ಮೂರನೆಯದಾಗಿ, ಆಶ್ರಮ ಎಂದರೆ ಸಂನ್ಯಾಸಿಗಳು, ಬ್ರಹ್ಮಚಾರಿಗಳು, ವಿರಕ್ತರು ವಾಸಮಾಡುವ ತಾಣ, ಮನೆ ಎಂದು ಅರ್ಥವಾಗುತ್ತದೆ. ಅದನ್ನೇ ಮಠ ಎಂದು ಕರೆಯುತ್ತಾರೆ. ಭಾರತ ದೇಶದಲ್ಲಿ ಸಂನ್ಯಾಸ ಧರ್ಮ, ಆಶ್ರಮಗಳು ಯಾವಾಗ ಆರಂಭವಾಯಿತೆಂದು ನಿರ್ದಿಷ್ಟವಾಗಿ ಹೇಳಲು ಸಾಧ್ಯವಾಗುವುದಿಲ್ಲವಾದರೂ ವೇದಕಾಲದಿಂದ ಆರಂಭವಾಗಿದೆ ಎಂದು ಸಾಮಾನ್ಯವಾಗಿ ಹೇಳಲಾಗುತ್ತಿದೆ. ವೇದಗಳ ಕಾಲದನಂತರ ಬುದ್ಧದೇವನ ಕಾಲದಲ್ಲಿ ಸಂನ್ಯಾಸ ಧರ್ಮವು ಹೆಚ್ಚು ವ್ಯವಸ್ಥಿತವಾದ ಹಾಗೂ ನಿಶ್ಚಿತವಾದ ರೀತಿಯಲ್ಲಿ ರೂಪುಗೊಂಡು ಹೆಚ್ಚಿನ ಪ್ರಮಾಣದಲ್ಲಿ ಬೆಳೆಯಿತು. ಅನಂತರ ಆಚಾರ್ಯ ಶ್ರೀ ಶಂಕರರು ಪ್ರಾಚೀನ ಹಿಂದೂ ಸಂನ್ಯಾಸ ಸಂಪ್ರದಾಯವನ್ನು ಹತ್ತು ವಿಧವೆಂದು ವಿಂಗಡಿಸಿ ಅದನ್ನು 'ದಶನಾಮಿ' ಸಂಪ್ರದಾಯ ಎಂದು ಹೆಸರಿಸಿ ಧರ್ಮಕ್ಕೆ ನವಚೇತನವನ್ನು ತುಂಬಿ, ಹಿಂದೂದೇಶದ ನಾಲ್ದೆಸೆಗಳಲ್ಲೂ ಸಂನ್ಯಾಸಪೀಠಗಳನ್ನು ಸ್ಥಾಪಿಸಿದರು. ಬುದ್ಧದೇವನ ಕಾಲದಲ್ಲಿ ರೂಪುಗೊಂಡು ಪ್ರಚಾರಕ್ಕೆ ಬಂದ ಬೌದ್ಧಸಂಘಗಳು, ವಿಹಾರಗಳೆಂಬ ಬುದ್ಧ ಸಂಘದ ಆಶ್ರಮಗಳು, ಬುದ್ಧಮತದ ಭಿಕ್ಷುಗಳೆಂಬ ಸಂನ್ಯಾಸಿಗಳು ಎಲ್ಲರೂ ದೇಶದಲ್ಲಿ ಹೆಚ್ಚಾದಂತೆ ವೈದಿಕಮತದ ರೀತಿಯಾಗಿ ಹಿಂದೂಧರ್ಮದ ಸಂನ್ಯಾಸಿಗಳು, ಆಶ್ರಮಗಳು ಹೆಚ್ಚಾಗದೆ ಸಾಕಷ್ಟು ಅವ್ಯವಸ್ಥೆ, ಶೈಥಿಲ್ಯಗಳು ನೆಲೆಗೊಂಡವು. ಈ ಕಾಲಘಟ್ಟದಲ್ಲಿ ಶ್ರೀ ಶಂಕರಾಚಾರ್ಯರು ಅವತರಿಸಿ ದೇಶದಲ್ಲಿ ಹರಡಿದ್ದ ವಿವಿಧ ರೀತಿಯ ಹಿಂದೂ ಸಂನ್ಯಾಸಧರ್ಮ ಹಾಗೂ ಪೀಠಗಳನ್ನೆಲ್ಲಾ ತಾತ್ವಿಕವಾಗಿ ಒಗ್ಗೂಡಿಸಿ ಸುವ್ಯವಸ್ಥಿತವಾದ ನೆಲೆಯಲ್ಲಿ ಅವುಗಳು ನಿಂತು ಬೆಳೆಸುವಂತೆ ವ್ಯವಸ್ಥೆಮಾಡಿದರು.

ಅನಂತರ ಕಾಲಕಾಲಕ್ಕೆ ಜನ್ಮತಳೆದ ವಿವಿಧ ಪಂಥದ ಆಚಾರ್ಯರು ಗುರುಗಳು ದೇಶದಲ್ಲಿ ಅವರವರ ಸಂಪ್ರದಾಯದಂತೆ ಅನೇಕ ಗುರುಪೀಠಗಳನ್ನು ಸ್ಥಾಪಿಸಿದರು. ಆಯಾಯಾ ಪಂಥದವರು ಅವರವರ ಗುರುಪೀಠವನ್ನು ತಮ್ಮ ಜೀವನದ ಸ್ಫೂರ್ತಿ, ರಕ್ಷಣೆ ಮತ್ತು ಮಾರ್ಗದರ್ಶನದ ಕೇಂದ್ರ ಎಂದು ಪರಿಗಣಿಸಿ ಗುರುಪೀಠದ ಅಧಿಪತಿಯಾದ ಗುರುಗಳನ್ನು ಸಾಕ್ಷಾತ್ ಭಗವಂತನೆಂದೇ ಗೌರವಿಸಿ ಪೂಜಿಸುತ್ತಾರೆ. ಹೇಗೆ ಪಥಗಳು ಬೇರೆಯಾದ ಮಾತ್ರಕ್ಕೆ ದೇವರು ಬೇರೆ ಬೇರೆ ಅಲ್ಲದೆ ಒಬ್ಬನೇ ಆಗಿರುತ್ತಾನೋ ಮತ್ತು ಇರುವ ಸತ್ಯ ಒಂದೇ ಆಗಿರುತ್ತದೋ ಹಾಗೆಯೇ ಗುರುಪೀಠಗಳು ಹಾಗೂ ಗುರುಗಳು ಬೇರೆ ಬೇರೆ ಆದಮಾತ್ರಕ್ಕೆ ಗುರುತತ್ತ್ವ ಏನೂ ಬೇರೆ ಆಗಿರುವುದಿಲ್ಲ. ಎಲ್ಲಾ ಗುರುಪೀಠಗಳ ಸ್ಥಾಪನೆ ಅವುಗಳ ಅಸ್ತಿತ್ವಗಳ ಗುರಿಯೂ ಜೀವನದಲ್ಲಿ ಜೀವಿಯು ಧರ್ಮವಿರುದ್ಧವಲ್ಲದ ಲೌಕಿಕ ಪ್ರಗತಿ ಮತ್ತು ಆಧ್ಯಾತ್ಮಿಕ ಉನ್ನತಿಯಾಗಿದ್ದು ಅಂತ್ಯದಲ್ಲಿ ಭಗವಂತನ ಸಾಕ್ಷಾತ್ಕಾರವೇ ಆಗಿರುತ್ತದೆ. ಹಿಂದೂದೇಶದಲ್ಲಿ ಇಂದು ಬಹುಸಂಖ್ಯೆಯಲ್ಲಿ ಗುರು ಮಠಗಳು ಮತ್ತು ಗುರುಪೀಠಗಳು ಇದ್ದು ಅವುಗಳೆಲ್ಲವನ್ನೂ ಸಂಗ್ರಹವಾಗಿ ಶೈವ, ವೈಷ್ಣವ, ಶಾಕ್ತ ಎಂದು ಮೂರು ಪಂಗಡಗಳಾಗಿ ವಿಂಗಡಿಸಬಹುದು. ಇವುಗಳ ಪೈಕಿ ಅನೇಕ ಶತಮಾನಗಳ ಗುರುಪರಂಪರೆಯನ್ನು ಹೊಂದಿರುವ ಜಗದ್ಗುರು ಸಂಸ್ಥಾನ ಮಠಗಳೂ ಕೆಲವು ಇವೆ. ಉದಾ : ಜಗದ್ಗುರು ಶ್ರೀ ಶಂಕರಾಚಾರ್ಯಪೀಠಗಳಾದ ಶೃಗೇರಿ, ದ್ವಾರಕಾ ಇತ್ಯಾದಿ. ಶ್ರೀ ಜಗದ್ಗುರು ರಾಮಾನುಜಾಚಾರ್ಯ ಪೀಠಗಳಾದ ಆಂಡವನ್ ಶ್ರೀರಂಗಮಠ. ಅಹೋಬಿಲಮಠ, ಬ್ರಹ್ಮತಂತ್ರ ಪರಕಾಲಮಠ ಇತ್ಯಾದಿ. ಶ್ರೀ ಜಗದ್ಗುರು ಮಧ್ವಾಚಾರ್ಯಪೀಠಗಳಾದ ಉಡುಪಿ ಪೇಜಾವರ, ಅದಮಾರುಮಠ ಇತ್ಯಾದಿ, ಇತ್ಯಾದಿ.

ಇನ್ನು ಜನಾಂಗಗಳಿಗೆ ಸಂಬಂಧಿಸಿದಂತೆ ದೇವಾಂಗದವರು, ಒಕ್ಕಲಿಗರು, ಕುರುಬರು ಎಂಬಿತ್ಯಾದಿ ಬೇರೆ ಬೇರೆ ಸಂಪ್ರದಾಯದ ಗುರುಪೀಠಗಳು ನಮ್ಮ ದೇಶದಲ್ಲಿ ಬಹು ಸಂಖ್ಯೆಯಲ್ಲಿವೆ.

ಗುರು ಎಂದರೆ ಸಾಕ್ಷಾತ್ ಭಗವಂತನೇ ಮಾನವದೇಹ ಧರಿಸಿಬಂದಂತೆಯೇ ಸರಿ ಎಂದು ಹಿಂದೂಧರ್ಮದ ಸ್ಪಷ್ಟವಾದ ಹೇಳಿಕೆಯಾಗಿದೆ. ಹಾಗಾಗಿ ಗುರುವೇ ವಿಷ್ಣು, ಗುರುವೇ ಮಹೇಶ್ವರನಾಗಿ ಗುರುವು ಸರ್ವಸ್ವವೂ ಆಗಿರುತ್ತಾನೆ ಎಂದು ಹಿಂದೂ ಧರ್ಮದಲ್ಲಿ ವಿಪುಲಸಂಖ್ಯೆಯಲ್ಲಿ ಗುರುವಿನ ಕುರಿತಾದ ಸ್ತೋತ್ರಗಳು ಹಾಗೂ ವಿವರಣೆ ಗಳು ಇವೆ.

ಗುರುರ್ಬ್ರಹ್ಮಾ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ ।
ಗುರುಸ್ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ

ಗುರುವಿಗೆ ಹಿಂದೂಧರ್ಮದ ಪ್ರಕಾರವಾಗಿ ಇರುವ ಸ್ಥಾನ ಅತ್ಯಂತ ಪವಿತ್ರ ಹಾಗೂ ಪ್ರಾಮುಖ್ಯವಾಗಿರುತ್ತದೆ. ಗುರುವೆಂದರೆ ಧರ್ಮ ಮತ್ತು ಸಂಸ್ಕೃತಿಯ ರಕ್ಷಣೆ ಹಾಗೂ ಪೋಷಣೆ ಮಾಡುವವರು ಮತ್ತು ಮಾರ್ಗದರ್ಶಕರೂ ಆಗಿರುತ್ತಾರೆ. ಹೀಗೆ ಆಧ್ಯಾತ್ಮಿಕ ಮತ್ತು ಸಾಮಾಜಿಕ ಎಂಬ ಎರಡು ದೃಷ್ಟಿಗಳಿಂದ ಹೇಳುವುದಾದರೂ ಗುರುವೆಂದರೆ ಹಿಂದುವಿನ ಜೀವನಕ್ಕೆ ವಿಶೇಷವಾದ ಬೆಳಕು-ಚೇತನ ಹಾಗೂ ಮಾರ್ಗ

ದರ್ಶನವನ್ನು ನೀಡುವ ಪವಿತ್ರ ಹಾಗೂ ಪೂಜ್ಯವ್ಯಕ್ತಿ ಎಂಬುದು ಸರ್ವಸಮ್ಮತವಾದ ಸತ್ಯಾಂಶವಾಗಿರುತ್ತದೆ. ಆದ್ದರಿಂದಲೇ ಗುರುಪೀಠಗಳಿಗೆ ಹಿಂದೂಗಳೆಲ್ಲರೂ ತಮ್ಮ ತ್ರಿಕರಣಪೂರ್ವಕವಾದ ಸಹಕಾರ-ಗೌರವ ಮತ್ತು ಪೂಜ್ಯತೆಗಳನ್ನು ನೀಡುತ್ತಾರೆ. ರಾಜನು ರಾಜ್ಯವನ್ನು ಆಳಿದರೆ ಗುರುವು ಭಕ್ತಜನರೆಲ್ಲರ ಹೃದಯಸಾಮ್ರಾಜ್ಯದ ಆಧ್ಯಾತ್ಮಪೀಠಾಧಿಪತಿಯಾಗಿರುತ್ತಾನೆ. ಹಾಗಾಗಿ ಸರಕಾರ ಮತ್ತು ಸಮಾಜ ಎರಡೂ ಪತಿಗಳಿಂದಲೂ ಗುರುಪೀಠಗಳು ಮಾನ್ಯತೆಯನ್ನು ಪಡೆಯಲು ಕಾರಣವಾಗಿರುತ್ತದೆ.

ಗುರುಪೀಠದಲ್ಲಿ ಪೀಠಾಧಿಪತಿಯಾಗಿರುವವರು ಸರ್ವಸಂಗಪರಿತ್ಯಾಗಿಯಾದ ಸಂನ್ಯಾಸಿಗಳಾಗಿರುತ್ತಾರೆ. ಆಯಾಯಾ ಒಳಪಂಥವನ್ನು ಅನುಸರಿಸಿ ಸಂನ್ಯಾಸಿಯಾಗಿರುವ ಪೀಠಾಧಿಪತಿ ಸ್ವಾಮಿಗಳವರ ಬಾಹ್ಯ ವೇಷಭೂಷಣಗಳು, ಗುರುಪೀಠದ ಸಂಪ್ರದಾಯಗಳು—ಇವುಗಳ ಕುರಿತಾಗಿ ಭೇದಗಳು ಕಂಡುಬರುತ್ತವೆ.

ಹಿಂದೂದೇಶದಲ್ಲಿ ಪ್ರಸಿದ್ಧವಾಗಿರುವ ಕೆಲವು ಗುರುಪೀಠ ಹಾಗೂ ಮಠಸಂಸ್ಥೆಗಳ ಹೆಸರುಗಳ ವಿವರ ಹೀಗಿದೆ :

೧. ಶ್ರೀಮದ್ ಜಗದ್ಗುರು ಶಂಕರಾಚಾರ್ಯ ಮಹಾಸಂಸ್ಥಾನ ಪೀಠಗಳು ಮತ್ತು ಆ ಪರಂಪರೆಗೆ ಸೇರಿದ ಇತರ ಪೀಠಗಳು.
೨. ಶ್ರೀಮದ್ ಜಗದ್ಗುರು ರಾಮಾನುಜ ಆಚಾರ್ಯರ ಮಹಾಸಂಸ್ಥಾನಪೀಠಗಳು ಮತ್ತು ಆ ಪರಂಪರೆಗೆ ಸೇರಿದ ಇತರ ಪೀಠಗಳು.
೩. ಶ್ರೀಮದ್ ಜಗದ್ಗುರು ಮಧ್ವಾಚಾರ್ಯರ ಸಂಸ್ಥಾನ ಪೀಠಗಳು ಮತ್ತು ಆ ಪರಂಪರೆಗೆ ಸೇರಿದ ಇತರ ಪೀಠಗಳು.
೪. ಶ್ರೀ ವೀರಶೈವ ಮತದ ಜಗದ್ಗುರು ಸಂಸ್ಥಾನ ಪೀಠಗಳು.
೫. ಶ್ರೀರಾಮಕೃಷ್ಣ ಮಠ ಮತ್ತು ಮಿಶನ್ ಸಂಸ್ಥೆಗಳು.
೬. ಆರ್ಯಸಮಾಜದ ಗುರುಪೀಠಗಳು.
೭. ಶೈವಮತೀಯ ಮಠಗಳು.
೮. ಮಹಾಬೋಧಿ ಸಂಘದ ಗುರುಮಠಗಳು (ಬೌದ್ಧಮತದ ಮಠಗಳು).
೯. ಜೈನಮತೀಯ ಗುರುಪೀಠಗಳು.

ಈ ಮೇಲೆ ಹೇಳಿದ ಮಠಗಳ ಶಾಖೆಗಳು ಹಿಂದೂದೇಶದ ವಿವಿಧ ಭಾಗಗಳಲ್ಲಿ ಇದ್ದು ಅವುಗಳ ಮೂಲಕ ಧರ್ಮಪ್ರಚಾರ, ವಿದ್ಯಾಪ್ರಚಾರ, ಔಷಧೀಯ ಚಿಕಿತ್ಸೆ ಇತ್ಯಾದಿ ಅನೇಕ ರೀತಿಯ ಸೇವಾಕಾರ್ಯಕ್ರಮಗಳು ರಚನಾತ್ಮಕ ಹಾಗೂ ಪರಿಣಾಮಕಾರಿಯಾದ ರೀತಿಯಲ್ಲಿ ನಡೆಸಲ್ಪಡುತ್ತಿವೆ. ಸಂನ್ಯಾಸಸ್ವೀಕಾರಮಾಡಿದ ಗುರುಗಳೂ ಸೇವಾಭಾವನೆಯಿಂದ ಕೂಡಿದ ಮಹನೀಯರೂ, ಈ ಮಠಸಂಸ್ಥೆಗಳ ಆಶ್ರಯದಲ್ಲಿ ನಡೆಯುವ ವಿವಿಧ ಚಟುವಟಿಕೆಗಳನ್ನು ನಡೆಸಿಕೊಂಡು ಹೋಗುತ್ತಿದ್ದಾರೆ. ಈ ಪೈಕಿ ಕೆಲವು ಮಠಗಳ ಶಾಖೆಗಳು ಜಗತ್ತಿನ ವಿವಿಧ ಭಾಗಗಳಲ್ಲಿ ಹರಡಿರುತ್ತವೆ.

೧೪

# ಹಿಂದೂಧರ್ಮದ ಜೀವನದೃಷ್ಟಿ, ಆದರ್ಶ ಹಿಂದೂ ಮತ್ತು ಅವನ ದಿನಚರಿ

ಹಿಂದೂಧರ್ಮವು ಜೀವನ, ಅದರ ಉದ್ದಿಶ್ಯ, ಜೀವಜಗತ್ತುಗಳ ಸಂಬಂಧ ಇತ್ಯಾದಿಗಳ ಬಗೆಗೆ ಅತ್ಯಂತ ಪ್ರಾಯೋಗಿಕವೂ, ಯುಕ್ತಿಸಮ್ಮತವೂ, ವೈಜ್ಞಾನಿಕಪ್ರದವೂ ಆದ ರೀತಿಯಲ್ಲಿ ವಿವರಣೆಗಳನ್ನು ನೀಡಿರುತ್ತದೆ. ಮಾತ್ರವಲ್ಲದೆ ಜೀವನವನ್ನು ಧರ್ಮದ ತತ್ತ್ವಗಳ ಆಧಾರದಲ್ಲಿ ಹೇಗೆ ಸುಗಮವಾಗಿ ನಿರ್ವಹಿಸಿ ಕೃತಕೃತ್ಯತೆಯನ್ನು ಪಡೆಯಬಹುದು ಎಂಬುದನ್ನು ಚತುರ್ವರ್ಣ ಮತ್ತು ವರ್ಣಾಶ್ರಮಧರ್ಮ, ಜೀವನದಲ್ಲಿ ಮನುಷ್ಯನು ಸಾಧಿಸಬೇಕಾದ ಚತುರ್ವಿಧ ಪುರುಷಾರ್ಥಗಳ ನಿಶ್ಚಯ, ಇವುಗಳ ಮೂಲಕ ತೋರಿಸಿಕೊಟ್ಟಿರುತ್ತದೆ.

ಜೀವನವ ಯಾವ ಹಂತವೇ ಆಗಲಿ, ಯಾವ ಸಮಸ್ಯೆಯೇ ಆಗಲಿ. ಅದಕ್ಕೆ ಹಿಂದೂ ಧರ್ಮದಲ್ಲಿ ಸರಿಯಾದ ಮಾರ್ಗದರ್ಶಕ ಪರಿಹಾರಗಳೂ ಅನುಷ್ಠಾನಸೂತ್ರಗಳೂ ಇವೆ. ಆದುದರಿಂದ ದೇಶಕಾಲಗಳ ಭೇದವಿಲ್ಲದೆ ಹಿಂದೂಧರ್ಮವು ಅತ್ಯಂತ ಪ್ರಾಯೋಗಿಕವಾದ ಧರ್ಮ ಎನ್ನುವುದರಲ್ಲಿ ಎರಡಭಿಪ್ರಾಯವಿರುವುದಿಲ್ಲ. ಈ ಧರ್ಮವು ಜೀವನವನ್ನು ಆಳವಾದ ಹಾಗೂ ನ್ಯಾಯಸಮ್ಮತವಾದ ರೀತಿಯಲ್ಲಿ ಪರಿಶೀಲಿಸಿ ಜೀವ-ಜಗತ್ತು-ಜೀವನ ಇವುಗಳ ಒಳಗಿನ ಸಂಬಂಧವನ್ನು ಸತ್ಯರೀತಿಯಲ್ಲಿ ಕಂಡುಕೊಂಡು ಬಾಳಿಗೊಂದು ನಂಬಿಕೆ-ಮೌಲ್ಯಗಳನ್ನು ನೀಡಿರುತ್ತದೆ. ಅಷ್ಟೇ ಅಲ್ಲದೆ ಜೀವನದಲ್ಲಿ ಮನುಷ್ಯನ ಸರ್ವತೋಮುಖವಾದ ಹಾಗೂ ಧರ್ಮಸಮ್ಮತವಾದ ಅಭಿವೃದ್ಧಿಗೆ ಹಿಂದೂಧರ್ಮವು ಗಮನವನ್ನು ನೀಡಿದ್ದು, ಅದಕ್ಕನುಗುಣವಾಗಿ ಜೀವನಧರ್ಮಶಾಸ್ತ್ರಗಳು, ವಿಧಿನಿಯಮಗಳು ಇತ್ಯಾದಿಗಳೆಲ್ಲ ರೂಪಿಸಲ್ಪಡುತ್ತವೆ. ಲೌಕಿಕ ಜೀವನದ ಯಾವ ವಿಚಾರವೇ ಆಗಲಿ, ಅದನ್ನು ಕಡೆಗಣಿಸದೆ ಅದಕ್ಕೆ ಆಧ್ಯಾತ್ಮಿಕವಾದ ದೃಷ್ಟಿಯನ್ನು ನೀಡಿ ಜೀವನದ ಕೆಲಸಕಾರ್ಯಗಳೆಲ್ಲವೂ

ಧರ್ಮಸಮ್ಮತವಾಗಿ ನಡೆಯಬೇಕೆಂಬುದೇ ಹಿಂದೂಧರ್ಮದ ನಿಲವು ಹಾಗೂ ಜೀವನಾದರ್ಶವಾಗಿರುತ್ತದೆ. ಮಾನವನ ಜೀವನಕ್ಕೊಂದು ಉತ್ತಮ ಗುರಿ, ಅರ್ಥ ಮತ್ತು ಔಚಿತ್ಯ, ಗಾಂಭೀರ್ಯ ಮತ್ತು ನಿಯಮ ಇರಬೇಕು ಎಂದು ಹಿಂದೂಧರ್ಮವು ನಿಶ್ಚಯವಾಗಿ ಸ್ಪಷ್ಟಪಡಿಸುತ್ತದೆ. ಅಂತಹ ನಿಯಮನಿಷ್ಠಾವಂತನೇ ಆದರ್ಶ ಹಿಂದೂವಾಗುತ್ತಾನೆ. ಅವನೇ ಆದರ್ಶಜೀವಿ. ಅವನ ಬಾಳೇ ಆದರ್ಶಜೀವನವಾಗುತ್ತದೆ. ಹಾಗಾದರೆ ಆದರ್ಶ ಹಿಂದೂ ಯಾರು ? ಅವನ ಗುಣಲಕ್ಷಣಗಳೇನು ? ಅವನಿಂದ ಜಗತ್ತಿನ ಇಂದಿನ ಪರಿಸ್ಥಿತಿಯನ್ನು ಸುಧಾರಿಸಲು ದೊರೆಯುವ ಸಹಾಯ–ಮಾರ್ಗದರ್ಶನ ಏನು ? ಎಂಬುದಕ್ಕೆ ಉತ್ತರವಾಗಿ ಅವನ ಲಕ್ಷಣಗಳನ್ನು ಸಂಗ್ರಹವಾಗಿ ಹೀಗೆ ಹೇಳಬಹುದು :

(೧) ಆದರ್ಶ ಹಿಂದುವು ಪರಮಾತ್ಮ, ಜೀವಾತ್ಮ, ಜೀವನ ಇತ್ಯಾದಿ ವಿಚಾರಗಳ ಕುರಿತಾಗಿ ವೇದಗಳಲ್ಲಿ ಹೇಳಿರುವ ತತ್ತ್ವ, ಅನುಷ್ಠಾನಮಾರ್ಗಗಳನ್ನು ನಂಬುತ್ತಾ ಅವುಗಳನ್ನು ತನ್ನ ಬಾಳಿನಲ್ಲಿ ಆಚರಣೆಗೆ ತರುತ್ತಾನೆ. ವೇದೋಕ್ತ ಉಪದೇಶ ವಿಚಾರಗಳು ಸರ್ವಕಾಲ-ಸರ್ವದೇಶಗಳಿಗೂ ಅನ್ವಯವಾಗುವ ಅವಿನಾಶಿಯಾದ ಅನಂತಸತ್ಯ ಎಂದು ತಿಳಿದಿರುತ್ತಾನೆ. ಆ ಸತ್ಯವು ಏಕಮೇವಾದ್ವಿತೀಯವಾಗಿದ್ದು ಅದನ್ನು ಬೇರೆ ಬೇರೆ ವಿಧಗಳಲ್ಲಿ ಹೇಳಲು ಸಾಧ್ಯವಿದೆ ಎಂದು ತಿಳಿದು ಜಗತ್ತಿನಲ್ಲಿರುವ ಇತರ ಧರ್ಮಗಳನ್ನು ಮಾನ್ಯಮಾಡುತ್ತಾನೆ.

(೨) ನಿಜವಾದ ಸಂಸ್ಕೃತಿಯಾಗಲಿ ಜೀವನವಾಗಲಿ ಧರ್ಮದ ಆಧಾರದ ಮೇಲೆ ನಿಂತಿರಬೇಕೆಂದೂ ಧರ್ಮವನ್ನು ಬಿಟ್ಟು ಅವು ಉಳಿಯಲಾರವೆಂದೂ ಆದರ್ಶ ಹಿಂದುವು ಅರಿತಿರುತ್ತಾನೆ.

(೩) ಜಗತ್ತಿನ ಚರಾಚರ ವಸ್ತುಗಳ ಹಿನ್ನೆಲೆಯಲ್ಲಿ ಸತ್ಯವೂ ಮತ್ತು ಏಕಮೇವಾದ್ವಿತೀಯವೂ ಆದ ಪರಮಾತ್ಮನಿದ್ದು ಅವನು ಜಗತ್ತೆಲ್ಲವನ್ನೂ ಆವರಿಸಿದ್ದು ಜೀವಿಗಳ ಅಂತರ್ಯಾಮಿಯಾಗಿದ್ದಾನೆ. ಪರಮಾತ್ಮನ ಸಾಕ್ಷಾತ್ಕಾರದಿಂದ ಜನ್ಮಮರಣಗಳ ದುಃಖತಾಪಗಳಿಂದ ಮುಕ್ತಿ ದೊರೆಯುತ್ತದೆ ಎಂಬುದು ಆದರ್ಶ ಹಿಂದೂವಿನ ನಂಬಿಕೆಯಾಗಿದೆ.

(೪) ಆತ್ಮದ ಅಸ್ತಿತ್ವ ಮತ್ತು ಅಮರತ್ವ, ಕರ್ಮ, ಪುನರ್ಜನ್ಮ ಹಾಗೂ ಅವತಾರ —ಎಂಬ ಐದು ಸಿದ್ಧಾಂತಗಳನ್ನು ಆದರ್ಶ ಹಿಂದುವು ಮಾನ್ಯಮಾಡುತ್ತಾನೆ.

(೫) ಜಗತ್ತಿನಲ್ಲಿ ಸಾಂಸಾರಿಕ ಜೀವನವನ್ನು ಅಲಕ್ಷಿಸದೆ ಇದ್ದು, ಆದರೆ ಅದರ ಇತಿಮಿತಿಗಳೆಷ್ಟು ಎಂಬುದನ್ನು ಅರಿತಿರುತ್ತಾನೆ. ಜೀವನವನ್ನು ಶಾಪವೆಂದು ಪರಿಗಣಿಸದೆ ಆತ್ಮಸಾಕ್ಷಾತ್ಕಾರವೇ ಜೀವನದ ಪರಮಗುರಿಯಾಗಿರುತ್ತದೆಂದೂ ಅದರ ಸಾಧನೆಗೆ ಜೀವನವೊಂದು ಸದವಕಾಶ ಎಂದೂ ಹಿಂದುವು ತಿಳಿದಿರುತ್ತಾನೆ. ಅನುಸಾರವಾಗಿ ಇಹಲೋಕ ಮತ್ತು ಪರಲೋಕ, ಲೌಕಿಕ ಮತ್ತು ಪಾರಮಾರ್ಥಿಕ ವಿಚಾರಗಳ ಬಗೆಗೆ ಯಥಾಯೋಗ್ಯವಾದ ಮೌಲ್ಯಗಳ ದೃಷ್ಟಿಯನ್ನು ತಳೆದು ಜಗದಲ್ಲಿ ಜೀವನದ ಎಲ್ಲಾ ಕ್ಷೇತ್ರಗಳಲ್ಲೂ ಯತ್ನಪೂರ್ವಕವಾಗಿ ಸಾರ್ಥಕತೆಯಿಂದ ಜೀವನವನ್ನು ನಿರ್ವಹಿಸುತ್ತಾನೆ. ಶಾರೀರಿಕ ದೃಢತೆ, ಮಾನಸಿಕ ಪರಿಶುದ್ಧತೆ, ಆಧ್ಯಾತ್ಮಿಕಶಕ್ತಿ ಇವು ಮೂರರಿಂದ ಕೂಡಿ ಸಮರಸವಾದ ಬೆಳವಣಿಗೆಯೇ ಜೀವನದ ಬಲ ಹಾಗೂ ಸ್ವರೂಪ ಎಂಬುದು ಹಿಂದೂವಿನ ನಿಶ್ಚಯದ ನಿಲವು ಆಗಿರುತ್ತದೆ. ಅನುಸಾರವಾಗಿ ಸಾಹಿತ್ಯ, ವಿಜ್ಞಾನ,

ವೈದ್ಯ, ಸಂಗೀತ, ಚಿತ್ರಕಲೆ, ಶಿಲ್ಪ ಇತ್ಯಾದಿ ಶಾಸ್ತ್ರಗಳಿಗೆ ಹಿಂದುವು ಉಚಿತವಾದ ಸ್ಥಾನಬೆಲೆಯನ್ನು ನೀಡುತ್ತಾ, ಅವೆಲ್ಲ ಸತ್ಯವೂ ಶಿವವೂ ಸುಂದರವೂ ಆದ ಸಚ್ಚಿದಾನಂದ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಸಾಧನಗಳೆಂದು ಪರಿಗಣಿಸುತ್ತಾನೆ.

(೬) ಪರಮಾತ್ಮನು ಸರ್ವಶಕ್ತನೂ, ಸುಖಶಾಂತಿಗಳ ಶಾಶ್ವತ ಕೇಂದ್ರನೂ, ಜೀವಿಗಳ ಬಾಳಿನ ಪರಮಗುರಿ ಅರ್ಥಾತ್ ಮಹೋನ್ನತವಾದ ಪುರುಷಾರ್ಥ ಎಂದೆನಿಸಿಕೊಂಡವನೂ ಆಗಿರುತ್ತಾನೆ ಎಂದು ಆದರ್ಶ ಹಿಂದುವು ತಿಳಿದಿರುವುದು ಮಾತ್ರವಲ್ಲದೆ ಅದರಂತೆ ತನ್ನ ಜೀವನವನ್ನು ನಿರ್ವಹಿಸುತ್ತಾನೆ.

(೭) ಮತವು ಜೀವನದಲ್ಲಿ ಅಶಾಂತಿ ಅವ್ಯವಸ್ಥೆ ಅನ್ಯಾಯ ಅಧರ್ಮಗಳಿಗೆ ಕಾರಣ ವಾಗಬಾರದೆಂದು ತಿಳಿಯುತ್ತಾ, ಅದು ಜೀವನದ ಸುಗಮ, ಸುಭದ್ರವಾದ ನಿರ್ವಹಣೆಗೆ ಸಹಕಾರಿಯಾಗಬೇಕು, ಮಾತ್ರವಲ್ಲದೆ ಆತ್ಮಸಾಕ್ಷಾತ್ಕಾರಕ್ಕೆ ಅಥವಾ ಮೋಕ್ಷಪ್ರಾಪ್ತಿಗೆ ನೆರವಾಗಬೇಕು ಎಂಬ ನಿಲವನ್ನೂ ಹಿಂದುವು ತಳೆದಿರುತ್ತಾನೆ.

(೮) ಹುಟ್ಟಿನಿಂದ ಯಾರೂ ಕೂಡ ಅಧಮರು ಇಲ್ಲವೇ ಪಾಪಿಗಳು ಆಗಿರುವುದಿಲ್ಲ. ಪ್ರತಿಯೊಬ್ಬರೂ ಅಮೃತಪುತ್ರರೂ ಅಮೃತಾತ್ಮರೂ ಆಗಿರುತ್ತಾರೆ. ಆದರೆ ದುಷ್ಕರ್ಮ, ದುಷ್ಟಪ್ರವೃತ್ತಿಗಳಿಂದಾಗಿ ಆತ್ಮದ ದಿವ್ಯತೆ-ಪ್ರಕಾಶಗಳನ್ನು ಪ್ರಕಟಗೊಳಿಸದಂತಾಗಿದೆ. ಪ್ರತಿಯೊಬ್ಬ ಕೀಳುಮಟ್ಟದ ಜೀವಿಗೆ—ಪಾಪಿಯೆಂದು ಕರೆಸಿಕೊಳ್ಳುವವನಿಗೆ ಸಹ ಉತ್ತಮ ಉದಾತ್ತ ಹಾಗೂ ಪುಣ್ಯಪ್ರದವಾದ ಭವಿಷ್ಯವಿದೆ. ಹಾಗೆಯೇ ಪ್ರತಿಯೊಬ್ಬ ಸಂತನಿಗೂ ವಿಕಾಸದ ಹಿನ್ನೆಲೆ ಅಥವಾ ಭೂತಕಾಲದ ಕಥೆ ಇದ್ದೇ ಇದೆ ಎಂದು ನಂಬುತ್ತಾ ಅಯೋಗ್ಯರಿಗೂ ಯೋಗ್ಯರಾಗುವ ಅವಕಾಶ ಇದ್ದೇ ಇದೆ ಎಂಬುದನ್ನು ಹಿಂದುವು ನಿಶ್ಚಯವಾಗಿ ತಿಳಿದಿರುತ್ತಾನೆ. ಪಾಪ ಎಂದರೆ ಅದೊಂದು ಶಾಪವಲ್ಲ. ಭಗವಂತನ ಎಡೆಗೆ ಮಾನವನು ವಿಕಾಸಪಥದಲ್ಲಿ ಸಾಗುತ್ತಿರುವಾಗ ದಾರಿಯಲ್ಲಿ ಸಿಗುವ ಮುಳ್ಳೇ ಪಾಪ ವಿನಾ ಅದು ದಾಟಲಾರದ ಹಂತವಲ್ಲ. ಪಾಪ ಎಂದರೆ ಅಜ್ಞಾನ-ಅವಿದ್ಯೆಗಳ ಪರಿಣಾಮ ಎಂದು ತಿಳಿದಿರುವ ಹಿಂದುವು ಅವುಗಳಿಗೆಲ್ಲಾ ಅಂತ್ಯ ಇದ್ದೇ ಇದೆ ಎಂಬ ನಂಬಿಕೆಯುಳ್ಳವ ನಾಗಿರುತ್ತಾನೆ.

(೯) ಆತ್ಮವು ಅಮರ. ಹುಟ್ಟುಸಾವುಗಳು ದೇಹಕ್ಕೆ ವಿನಾ ಆತ್ಮಕ್ಕಲ್ಲ. ದೇಹ ಬುದ್ಧಿ ಇರುವವರೆಗೆ ಅಜ್ಞಾನ (ಅವಿದ್ಯೆ) ಇದ್ದೇ ಇರುತ್ತದೆ. ಹಾಗೆಯೇ ಹುಟ್ಟು ಸಾವುಗಳು, ಜನ್ಮಜನ್ಮಾಂತರಗಳು ಇದ್ದೇ ಇರುತ್ತವೆ—ಎಂಬುದು ಹಿಂದೂವಿನ ನಂಬಿಗೆ ಯಾಗಿರುತ್ತದೆ.

(೧೦) ನೀತಿಸಂಪತ್ತೇ ಧರ್ಮದ ಜೀವಾಳವಾಗಿದ್ದು ಧರ್ಮವೇ ಜೀವನದ ಆಧಾರವೆಂದು ಹಿಂದುವು ನಂಬಿರುತ್ತಾನೆ. ಅನುಗುಣವಾಗಿ ತನ್ನ ಜೀವನವನ್ನು ನೀತಿ ಧರ್ಮಗಳ ಆಧಾರದಿಂದ ನಡೆಸುತ್ತಾನೆ.

(೧೧) ಲೌಕಿಕ ಸುಖಸಂಪತ್ತು, ಸಾಮಾಜಿಕ ಜೀವನ ಇವುಗಳೆಲ್ಲ ಜೀವನದ ಪರಮ ಗುರಿಯಾಗಿರದೆ, ಜೀವನದ ಪರಮೋನ್ನತಗುರಿಯ ಸಾಧನೆಗೆ ಇರುವ ಸಾಧನಗಳೆಂದು ಹಿಂದುವು ನಂಬಿರುತ್ತಾನೆ. ಅನುಸಾರವಾಗಿ, ಜೀವನದಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳನ್ನು ಸಾಧಿಸಬೇಕೆಂದು ತಿಳಿದು, ಈ ನಾಲ್ಕು

ಪುರುಷಾರ್ಥಗಳಲ್ಲಿ ಬಾಳಿನ ಸಮಗ್ರ ಆಶೋತ್ತರಗಳು ಅಡಗಿವೆ ಎಂಬುದನ್ನು ಅರಿತು ಕೊಂಡಿರುತ್ತಾನೆ. ಅದರಂತೆ ಧರ್ಮದಲ್ಲಿ ನೈತಿಕ ಸಂಪತ್ತು ಮತ್ತು ಬಲ, ಅರ್ಥದಲ್ಲಿ ಹಣಕಾಸು ಲೋಕವ್ಯವಹಾರಗಳ ಭದ್ರತೆ, ಕಾಮದಲ್ಲಿ ಧರ್ಮಸಮ್ಮತವಾದ ಲೋಕದ ಸುಖಸಂಪತ್ತುಗಳ ಭೋಗತೃಪ್ತಿಗಳು, ಮೋಕ್ಷದಲ್ಲಿ ಶಾಶ್ವತವಾದ (ಸುಖದ ನೆಲೆಯಾದ ಪರಮಾತ್ಮನ ಸಾಕ್ಷಾತ್ಕಾರರೂಪವಾದ) ಸುಖ ಅಡಗಿದೆ ಎಂದು ಆದರ್ಶ ಹಿಂದುವು ನಂಬಿರುತ್ತಾನೆ.

(೧೨) ಜಗತ್ತಿನಲ್ಲಿ ಜನ್ಮತಳೆದ ಮಾನವರೆಲ್ಲರೂ ಅವರವರ ಕರ್ಮಗಳಿಗೆ ಅನುಸಾರವಾಗಿ ವಿವಿಧ ಮನೋಧರ್ಮ ಆಶೋತ್ತರ ಗುಣಸ್ವಭಾವಗಳಿಂದ ಕೂಡಿದ್ದು ಎಲ್ಲರಿಗೂ ಒಂದೇ ತರಹದ ಬುದ್ಧಿ ಹಾಗೂ ದೃಷ್ಟಿಗಳು ಇರುವುದಿಲ್ಲ ಎಂಬುದನ್ನು ಕಂಡುಕೊಂಡೇ ಜೀವನದಲ್ಲಿ ಸಹನೆ, ಸಹಬಾಳ್ವೆ, ಸಹಯೋಗ, ಸಹಕಾರಗಳನ್ನು ಹಿಂದುವು ಸರಿಯಾಗಿ ಅನುಷ್ಠಾನಕ್ಕೆ ತರಲು ಯತ್ನಿಸುತ್ತಾನೆ. ಹೀಗೆ ವೈವಿಧ್ಯಮಯವಾದ ಗುಣ ಧರ್ಮಗಳ ಉದಾತ್ತೀಕರಣವೇ ಚಾತುರ್ವರ್ಣ್ಯದ ಮತ್ತು ವರ್ಣಾಶ್ರಮಧರ್ಮಗಳ ಉದ್ದೇಶ ಎಂಬುದನ್ನು ಅರಿತು ಹಿಂದುವು ವರ್ಣಾಶ್ರಮಗಳನ್ನು ಬದಲಾದ ಪರಿಸ್ಥಿತಿಗೆ ತಕ್ಕಂತೆ ಹೊಂದಿಕೊಂಡು ತತ್ತ್ವಶಃ ಪರಿಪಾಲನೆ ಮಾಡುತ್ತಾನೆ. ಗುಣಕರ್ಮಗಳಿಗೆ ಅನುಸಾರವಾಗಿ ವಿಭಕ್ತವಾಗಿರುವ ನಾಲ್ಕು ವರ್ಣಗಳನ್ನು ಹಿಂದುವು ಗೌರವಿಸಿ ಪರಸ್ಪರ ವೈಷಮ್ಯ, ಜಾತೀಯತಾದ್ವೇಷ ಇಲ್ಲದವನಾಗಿರುತ್ತಾನೆ. ಒಂದೇ ಶರೀರದ ವಿವಿಧ ಅಂಗಗಳಾದ ಶಿರ, ಭುಜ, ತೊಡೆ, ಪಾದಗಳು ಹೇಗೆ ನಿಜಕ್ಕೂ ಸ್ವರೂಪಕಾರ್ಯ ಮತ್ತು ಉಪಯೋಗಗಳ ದೃಷ್ಟಿಯಿಂದ ಬೇರೆ ಬೇರೆ ಆಗಿರುವುದು ಎಷ್ಟು ಸತ್ಯವೋ ಅಷ್ಟೇ ಸತ್ಯ ಅವುಗಳು ಒಂದೇ ಶರೀರದ ಅಂಗಗಳು—ಎಂಬ ಈ ತತ್ತ್ವವೇ ಈ ವರ್ಣವಿಭಜನೆ ಅರ್ಥಾತ್ ನಾಲ್ಕು ಜಾತಿಭೇದಗಳ ಹಿನ್ನೆಲೆಯಲ್ಲಿ ಅಡಗಿರುತ್ತದೆ ಎಂದು ಹಿಂದುವು ನಂಬಿರುತ್ತಾನೆ.

ವರ್ಣಾಶ್ರಮಗಳಲ್ಲಿ ಬ್ರಹ್ಮಚರ್ಯವು ಜೀವನದ ನಿರ್ವಹಣೆಗೆ ಬೇಕಾದ ವೀರ್ಯಶಕ್ತಿ, ವಿಚಾರಶಕ್ತಿ, ನೀತಿಶಕ್ತಿ, ದೇಹಶಕ್ತಿ ಇವುಗಳನ್ನು ಸಂಪಾದಿಸುವ ಹಂತವಾಗಿದ್ದು, ಗೃಹಸ್ಥಾಶ್ರಮವು ಸಹಜವಾಗಿ ಮಾನವನಲ್ಲಿರುವ ಭೋಗತ್ಯಾಗಗಳ ಪ್ರವೃತ್ತಿಗಳನ್ನು ಉದಾತ್ತೀಕರಣ ಮಾಡಲು ನೆರವಾಗುತ್ತಾ ಲೋಕಕಲ್ಯಾಣವನ್ನು ಸಾಧಿಸಲು ಎಲ್ಲ ಆಶ್ರಮದವರಿಗೂ ನೆರವಾಗುವ ಆಶ್ರಮವಾಗಿರುತ್ತದೆ. ವಾನಪ್ರಸ್ಥವು ತನ್ನ ಜೀವನದ ಪರಮಗುರಿಯಾದ ಮೋಕ್ಷದ ಸಂಪಾದನೆಗೆ ಸಿದ್ಧತೆಯನ್ನು ಮಾಡುತ್ತಾ ಸಾಗಲು ನೆರವಾದರೆ, ಸಂನ್ಯಾಸ ಆಶ್ರಮವು ಮೋಕ್ಷಪ್ರಾಪ್ತಿಗಾಗಿ ಸೂಕ್ತವಾದ ಏಕನಿಷ್ಠೆಯ ಸಾಧನೆಗೆ ನೆರವಾಗುವ ಆಶ್ರಮ, ಜೀವನದ ಹಂತ ಎಂದು ಹಿಂದುವು ನಂಬಿರುತ್ತಾನೆ. ಅನುಸಾರವಾಗಿ ಅವನು ನಾಲ್ಕು ಆಶ್ರಮಧರ್ಮಗಳನ್ನು ಸಹನೆಯಿಂದ ಸದಾಚಾರದಿಂದ ಸಾಮರ್ಥ್ಯದಿಂದ ಪರಿಪಾಲಿಸುತ್ತಾನೆ. ಜೀವನವು ತನ್ನ ಆತ್ಮಸಾಕ್ಷಾತ್ಕಾರಕ್ಕೆ ಸಹಾಯ ಮಾಧ್ಯಮವಾಗುತ್ತಾ ತನ್ಮೂಲಕ ಲೋಕಕಲ್ಯಾಣಕ್ಕೂ ಕಾರಣವಾಗಬೇಕು ಎನ್ನುವ ಸೇವಾದೃಷ್ಟಿಯನ್ನು ತಳೆದಿರುತ್ತಾನೆ. ಅದಕ್ಕನುಗುಣವಾಗಿ ದೀನರು, ದುಃಖಿಗಳು ಇತ್ಯಾದಿ ವರ್ಗದವರೆಲ್ಲರೂ ಮಾನವ ಬಳಗಕ್ಕೆ ಸೇರಿದವರು ; ಅವರ ಕಲ್ಯಾಣಕ್ಕಾಗಿ ತನ್ನಿಂದಾದ

ಸಹಾಯವನ್ನು ಮಾಡಬೇಕಾಗಿರುವುದೂ ತನ್ನ ಕರ್ತವ್ಯಗಳಲ್ಲಿ ಒಂದಾಗಿವೆ ಎಂಬುದು ಹಿಂದೂವಿನ ನಿಲವು ಆಗಿರುತ್ತದೆ.

(೧೬) ಜೀವನದಲ್ಲಿ ಗಂಡು-ಹೆಣ್ಣುಗಳೆಂಬ ಭೇದವನ್ನು ಬಾಹ್ಯಭೇದವೆಂದು ಗ್ರಹಿಸಿ ಆಂತರಿಕವಾಗಿ ಎಲ್ಲರಲ್ಲೂ ಒಂದೇ ಆತ್ಮತತ್ತ್ವವಿದೆ ಎಂಬುದನ್ನು ಗ್ರಹಿಸುವ ಹಿಂದುವು ಗಂಡು-ಹೆಣ್ಣುಗಳ ಪರಸ್ಪರ ಸಂಬಂಧ, ಜೀವನದಲ್ಲಿ ಅವರವರ ಪಾತ್ರ ಇವುಗಳನ್ನು ಜೀವನದ ಉಪಯುಕ್ತತೆ, ಯೋಗ್ಯತೆಗಳ ದೃಷ್ಟಿಯಿಂದ ನೋಡುತ್ತಾನೆ. ಅನುಸಾರವಾಗಿ ಹಿಂದುವು ಸ್ತ್ರೀಯನ್ನು, ಅವಳು ಜೀವನದಲ್ಲಿ ವಹಿಸುವ ಪಾತ್ರದ ದೃಷ್ಟಿಯಿಂದ ಅತ್ಯಂತ ಉದಾರ ಹಾಗೂ ಗೌರವದಿಂದ ಕಾಣುತ್ತಾನೆ. ಸ್ತ್ರೀ ಎಂದರೆ ಇಂದ್ರಿಯಭೋಗಲಾಲಸೆಯ ತೃಪ್ತಿಯ ಸಾಧನ ಎಂಬುದಾಗಿ ಹಿಂದುವು ಪರಿಗಣಿಸುವುದಿಲ್ಲ. ವಿವಾಹ ಎಂದರೆ ಗಂಡು-ಹೆಣ್ಣುಗಳ ಲೈಂಗಿಕಸುಖಕ್ಕಿರುವ ಸಾಮಾಜಿಕವಾದ ಒಂದು ಬಹಿರಂಗ ಅನುಮತಿ ಅಥವಾ ಅವಕಾಶ ಎಂದು ಹಿಂದುವು ಪರಿಗಣಿಸುವುದಿಲ್ಲ. ಹಾಗೆಯೇ ವಿವಾಹ ಎಂದರೆ ಎಂದು ಬೇಕಾದರೂ ವಿಚ್ಛೇದನ ಮಾಡಬಹುದಾದ ತಾತ್ಕಾಲಿಕ ಬಂಧ ಎಂದು ಹಿಂದುವು ನಂಬಿರುವುದಿಲ್ಲ. ವಿವಾಹ ಎಂದರೆ ಜಗತ್ತಿನಲ್ಲಿ ಪ್ರಜಾತಂತುವನ್ನು ಮುಂದುವರಿಸಲು ಇರುವ ಪವಿತ್ರವಾದ ಒಂದು ಅವಕಾಶವಾಗಿದ್ದು ವಿವಾಹಜೀವನದ ಗುರಿ ಪ್ರಜೋತ್ಪತ್ತಿ ಮಾತ್ರ ಆಗಿರುವುದಿಲ್ಲ. ವಿವಾಹಬಂಧನಕ್ಕೆ ಒಳಗಾದ ಎರಡು ವ್ಯಕ್ತಿಗಳು ಆತ್ಮಸಾಕ್ಷಾತ್ಕಾರಕ್ಕೆ (ಮೋಕ್ಷಕ್ಕೆ) ಪರಸ್ಪರ ಅನುಕೂಲವಾಗಿರುವಂತೆ ಬಾಳನ್ನು ಬಾಳುತ್ತಾ ಜೀವನದಲ್ಲಿ- ಆತ್ಮೋನ್ನತಿಗಾಗಿಯೂ ಲೋಕಕಲ್ಯಾಣಕ್ಕಾಗಿಯೂ ಬಾಳಬೇಕು, ಅದೇ ವಿವಾಹದ ಮುಖ್ಯ ಗುರಿಯಾಗಿರುತ್ತದೆ ಎಂದೂ ಹಿಂದುವು ಭಾವಿಸಿರುತ್ತಾನೆ. ಇದರಿಂದ ವಿವಾಹಜೀವನಕ್ಕೊಂದು ಮೌಲ್ಯ ಹಾಗೂ ಭದ್ರತೆ ದೊರಕುತ್ತದೆ. ಮಾತ್ರವಲ್ಲದೆ ವನಿತೆಯರಿಗೆ ಜಗತ್ತಿನಲ್ಲಿ ಗೌರವಸ್ಥಾನ, ಭದ್ರತೆ ಮತ್ತು ಮಾನಪೂರ್ಣವಾದ ಸಮಾನತೆಗಳನ್ನು ನೀಡಿದಂತಾಗುತ್ತದೆ ಎಂಬುದು ಹಿಂದೂವಿನ ನಿಲವು ಆಗಿರುತ್ತದೆ. ಜಗತ್ತಿನಲ್ಲಿ ಜೀವಿಯ ಜನ್ಮ, ಅನಂತರದ ಪಾಲನೆಗಳು ಮುಂತಾದ ವಿಚಾರದಲ್ಲಿ ಸ್ತ್ರೀಯು ವಹಿಸುವ ಪಾತ್ರವು ಅನುಪಮವಾದುದು. ಈ ಜಗತ್ತಿನ ಚರಾಚರವಸ್ತುಗಳ ಹುಟ್ಟಿಗೆ ಕಾರಣವಾದುದು ಯಾವುದಿದೆಯೋ ಆ ಶಕ್ತಿಯನ್ನು, ದಿನನಿತ್ಯದ ಜೀವನದಲ್ಲಿ ಸ್ತ್ರೀಯು ವಹಿಸುವ ಅವಳ ಪಾತ್ರದ ದೃಷ್ಟಿಯಿಂದ ಪರಿಶೀಲಿಸಿ ಜಗನ್ಮಾತೆ ಎಂದು ಹಿಂದುವು ಕರೆಯುತ್ತಾನೆ. ಚರಾಚರ ವಸ್ತುಗಳಲ್ಲಿ ಭಗವಂತನು ಇದ್ದಾನೆಂದು ನಿಶ್ಚಯವಾಗಿ ತಿಳಿದಿರುವ ಹಿಂದುವು, ಸ್ತ್ರೀಯು ಜಗತ್ತಿನಲ್ಲಿ ವಹಿಸುವ ಪಾತ್ರದ ದೃಷ್ಟಿಯಿಂದ ಅವಳಲ್ಲಿ ಜಗನ್ಮಾತೆಯನ್ನು (ದೇವರನ್ನು) ಕಾಣುವುದರಲ್ಲಿ ಸತ್ಯತೆ ಇದೆ, ಸಾರ್ಥಕತೆ ಇದೆ, ಜೀವನಸಾಫಲ್ಯವಿದೆ ಎಂದು ನಂಬಿರುತ್ತಾನೆ. ಅನುಸಾರವಾಗಿ ಅವನು ಸ್ತ್ರೀಯನ್ನು ಮಾತೆ, ದೇವಿ ಎಂದು ಕರೆದು 'ಮಾತೃದೇವೋ ಭವ' ಎಂಬ ವಚನದ ಮೂಲಕ ವನಿತೆಯನ್ನು ದೇವತ್ವದ ಪೀಠಕ್ಕೆ ಏರಿಸಿ ಪೂಜ್ಯತೆ, ಗೌರವಗಳಿಂದ ಕಾಣುತ್ತಾನೆ. ಇದೇ ಸಾಮಾಜಿಕ ಭದ್ರತೆ, ಜೀವನ ಸುಗಮತೆ, ಬದುಕಿನ ಗುರಿಯ ಸಾಕ್ಷಾತ್ಕಾರ ಸಾಧ್ಯತೆಗಳಿಗೆ ಇರುವ ರಾಜಪಥ, ಜೀವನಧರ್ಮಸೂತ್ರ ಎಂದು ದೃಢವಾಗಿ ತಿಳಿದಿರುತ್ತಾನೆ.

(೧೭) ಜಗತ್ತಿನಲ್ಲಿ ವಿವಿಧ ಭೂಭಾಗಗಳಾಗಲಿ, ಭಿನ್ನಭಿನ್ನ ಪರಂಪರೆ ಸಂಸ್ಕೃತಿ ಮತಗಳ ಜನಕೋಟಿಯಾಗಲಿ, ವಿವಿಧ ಮತಧರ್ಮಗಳಾಗಲಿ, ದೇವಸ್ವರೂಪಗಳಾಗಲಿ, ಹೆಚ್ಚೇಕೆ ಪ್ರಾಣಿವರ್ಗಗಳೇ ಆಗಲಿ, ಯಾವುದನ್ನೂ ಹಿಂದುವು ಮೂಲತಃ ಭಿನ್ನವಾಗಿ ಕಾಣದೆ ಭಿನ್ನತೆಯ ಹಿನ್ನೆಲೆಯಲ್ಲಿ ಅಡಕವಾಗಿರುವ ಏಕಸತ್ಯವನ್ನು ಕಾಣುತ್ತಾನೆ. ಆ ಸತ್ಯವನ್ನು ಸಾಕ್ಷಾತ್ಕರಿಸಲು ಮನುಷ್ಯನ ಸ್ವಭಾವಕ್ಕೆ ಅನುಗುಣವಾಗಿ ಕೆಲಸ, ಪ್ರೀತಿ, ವಿಚಾರ, ಮನಸ್ಸಿನ ಕೇಂದ್ರೀಕರಣ ಅಥವಾ ಏಕಾಗ್ರತೆ ಎಂಬ ನಾಲ್ಕು ಹಾದಿಗಳು ಇವೆಯೆಂದೂ ಇವೆಲ್ಲ ಪರಮಾತ್ಮನನ್ನು ಸೇರಲು ನೆರವಾಗುವ ಬೇರೆ ಬೇರೆ ಮಾರ್ಗಗಳು ಎಂದೂ ಹಿಂದುವು ನಂಬಿರುತ್ತಾನೆ. ಮತಗಳಲ್ಲಾಗಲಿ, ಪಥಗಳಲ್ಲಾಗಲಿ, ನಾಮಗಳಲ್ಲಾಗಲಿ, ರೂಪಗಳಲ್ಲಾಗಲಿ ಹಿಂದೂವಿಗೆ ಜಗಳ ದ್ವೇಷಗಳಿರುವುದಿಲ್ಲ. ದೇಶ-ಕಾಲ-ಜನಾಂಗಗಳ ಭೇದಭಾವಗಳಿಲ್ಲದೆ ಎಲ್ಲೆಲ್ಲೂ ಏಕತತ್ತ್ವವನ್ನು ಹಿಂದುವು ಕಾಣುತ್ತಾ, ಮೈತ್ರಿ, ಐಕ್ಯಭಾವ, ಸಹಯೋಗ, ಸಹಕಾರಗಳನ್ನು ಜೀವನದಲ್ಲಿ ಅನುಷ್ಠಾನಕ್ಕೆ ತರುತ್ತಾನೆ.

(೧೮) ಜಗತ್ತಿನಲ್ಲಿರುವ ಸ್ತ್ರೀಯರೆಲ್ಲರನ್ನೂ ಧಾರ್ಮಿಕದೃಷ್ಟಿಯಿಂದ, ಪೂಜ್ಯಭಾವದಿಂದ ಕಾಣುವುದು ಹೌದಾದರೂ ತನ್ನ ಜನ್ಮದಾತೆ ತಾಯಿಯನ್ನು ಹಿಂದುವು ಮಾನವ ಸಹಜವಾದ ಒಲವು, ಗೌರವಗಳಿಂದ ಕೂಡಿ ಹೆಚ್ಚು ಪೂಜ್ಯಭಾವನೆಯಿಂದ ಕಾಣುತ್ತಾನೆ. ಅದರಂತೆಯೇ ಇಡೀ ಜಗತ್ತೇ ತನ್ನ ಮನೆ ಎಂದು ತಿಳಿಯುವ ಹಿಂದೂವು ತನ್ನ ಜನ್ಮಭೂಮಿಯನ್ನು ಜನ್ಮದಾತೆಯಾದ ಮಾತೆಯಂತೆಯೇ ಪ್ರೀತಿಪೂಜ್ಯತೆಗಳಿಂದ ಕಾಣುತ್ತಾನೆ. ತನ್ನ ಜನನಿ, ತನ್ನ ಜನ್ಮಭೂಮಿ, ತನ್ನ ಸ್ವಧರ್ಮ ಇವುಗಳನ್ನು ಹಿಂದುವು ಅತ್ಯಂತ ಪ್ರೀತಿ ಹಾಗೂ ಪೂಜ್ಯತೆಯ ಭಾವನೆಗಳಿಂದ ಕಾಣುತ್ತಾನೆ. ಅಹಿಂಸೆ ಎಂದರೆ ಹೇಡಿತನವಲ್ಲ, ಸಹನೆ ಎಂದರೆ ನಿಸ್ಸಹಾಯಕತೆಯಲ್ಲ, ವಿಶಾಲಭಾವನೆ ಎಂದರೆ ಆತ್ಮಗೌರವ ಅಭಿಮಾನಗಳು ಇಲ್ಲದಿರುವಿಕೆಗಳಲ್ಲ ಎಂಬುದನ್ನು ಆದರ್ಶ ಹಿಂದುವು ದೃಢವಾಗಿ ತಿಳಿದಿರುತ್ತಾ ಅವುಗಳನ್ನು ಜೀವನದಲ್ಲಿ ಆಚರಿಸುತ್ತಾನೆ. ಅನ್ಯಾಯ, ಅಸತ್ಯ, ಅನಾಚಾರಗಳನ್ನು ಸಾಮಾಜಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ರಂಗಗಳಲ್ಲಿ ಹಿಂದೂವು ಸಾಮರ್ಥ್ಯ, ಸಾಹಸ, ಸದ್ವರ್ತನೆಗಳಿಂದ ಎದುರಿಸಿ, ನ್ಯಾಯ, ಸತ್ಯ, ಸದಾಚಾರ, ಶಾಂತಿಗಳ ಬೆಳವಣಿಗೆಗೆ ಸಹಕಾರವಾಗುವ ರೀತಿಯಲ್ಲಿ ಕಾರ್ಯಕ್ರಮವನ್ನು ತನ್ನ ತನ್ನ ಸ್ಥಾನ, ಸ್ಥಿತಿಗತಿಗಳಿಗೆ ಅನುಸಾರವಾಗಿ ಕೈಗೊಳ್ಳುತ್ತಾನೆ. ಗೀತೆ, ಗಾಯತ್ರಿ, ಗೋವು, ಗಂಗೆ ಮತ್ತು ಗೋವಿಂದ ಎಂಬ ಈ ಐದು ಅಂಶಗಳನ್ನು ಆದರ್ಶ ಹಿಂದೂವು ತನ್ನ ಬಾಳಿನಲ್ಲಿ ಪ್ರೀತಿ, ಗೌರವ ಹಾಗೂ ಪೂಜ್ಯತೆಗಳಿಂದ ಕಾಣುತ್ತಾ ಅವುಗಳಿಂದ ತನ್ನ ಬಾಳಿಗೆ ಸ್ಫೂರ್ತಿ ಮತ್ತು ಮಾರ್ಗದರ್ಶನಗಳನ್ನು ಪಡೆಯುತ್ತಾನೆ. ಗೀತೆಯು ಸರ್ವವೇದೋಪನಿಷತ್ತುಗಳ ಉಪದೇಶಸಾರಸರ್ವಸ್ವವಾದ ಜೀವನಧರ್ಮಶಾಸ್ತ್ರಗ್ರಂಥವೆಂದಾದರೆ ಗಾಯತ್ರಿಯು ಸರ್ವವೇದೋಪನಿಷತ್ತುಗಳ ಮಂತ್ರಸಾರಸರ್ವಸ್ವದ ಪವಿತ್ರಮಂತ್ರ ಎಂದು ಹಿಂದುವು ದೃಢವಾಗಿ ನಂಬಿರುತ್ತಾನೆ. ಗೋವನ್ನು ಗೋಮಾತೆ ಎಂದು ಕರೆದು ಗೌರವಿಸುವ ಹಿಂದುವು ಲೋಕಜೀವನದಲ್ಲಿ ಲೌಕಿಕ ಮತ್ತು ವೈದಿಕ ದೃಷ್ಟಿಗಳಿಂದ ಗೋವಿನ ಬಹು ಮುಖ್ಯವಾದ ಉಪಯೋಗ, ಪ್ರಮುಖತೆಗಳನ್ನು ಗ್ರಹಿಸಿ, ಗೋವಿನ ರಕ್ಷಣೆ ಪೋಷಣೆಗಳಿಗೆ ಯಥೋಚಿತವಾದ ವ್ಯವಸ್ಥೆಗಾಗಿ ವ್ಯಷ್ಟಿ ಮತ್ತು ಸಮಷ್ಟಿರಂಗಗಳಲ್ಲಿ ತನ್ನ

ಜೀವನ ಸ್ಥಿತಿಗತಿಗಳಿಗೆ ತಕ್ಕಂತೆ ದುಡಿಯುತ್ತಾನೆ. ಗಂಗೆಯು ಜೀವನೋಪಯೋಗವಾಗಿರುವ ಪವಿತ್ರವಾದ ನದಿ ಆಗಿರುವುದು ಮಾತ್ರವಲ್ಲದೆ ಪರೋಪಕಾರ ಮತ್ತು ಜೀವನ ಸಾರ್ಥಕತೆಯ ಸಂಕೇತವಾಗಿದ್ದು ಹಿಂದೂಧರ್ಮದ ಸಂಸ್ಕೃತಿಯ ಕುರಿತಾದ ಉತ್ತಮೋತ್ತಮವಾದ, ಅಭಿಮಾನಪೂರ್ಣವಾದ ಜಲರೂಪದ ಚೇತನವಾಗಿದೆ ಎಂದು ಹಿಂದುವು ಪರಿಗಣಿಸುತ್ತಾನೆ. ಗೋವಿಂದ ಎಂದರೆ ಬಹುಮುಖಪ್ರತಿಭೆಯ ಯೋಗೀಶ್ವರನಾದ ಶ್ರೀಕೃಷ್ಣನು ಹಿಂದೂ ಧರ್ಮದ ತತ್ತ್ವಸಿದ್ಧಾಂತಗಳ ಕುರಿತಾದ ಜೀವಂತಭಾಷ್ಯ ಎಂದು ಹಿಂದು ತಿಳಿದಿರುತ್ತಾನೆ. ಶ್ರೀಕೃಷ್ಣನ ಜೀವನ, ಆದರ್ಶಗಳೆಲ್ಲವೂ ಹಿಂದುವಿಗೆ ಸ್ಫೂರ್ತಿ, ಬೆಳಕನ್ನು ನೀಡುವಂತಹವುಗಳಾಗಿದ್ದು ಶ್ರೀಕೃಷ್ಣನೇ ಸಾಕ್ಷಾತ್ ಪರಬ್ರಹ್ಮ, ಭಗವಂತವಾಗಿದ್ದು ಪರಮಾತ್ಮನೇ (ದೇವರು) ಹಿಂದುವಿನ ಜೀವನದ ಚೇತನ ಮತ್ತು ಮುಖ್ಯ ಕೇಂದ್ರವಾಗಿದ್ದು, ಸೊನ್ನೆಗಳಿಗೆಲ್ಲಾ ಬೆಲೆ ಬರಲು ಎಡಗಡೆ ಒಂದು ಅಂಕೆಯು ಎಷ್ಟು ಮುಖ್ಯವೋ ಹಾಗೆಯೇ ಜೀವನಕ್ಕೆ ಬೆಲೆ ಮತ್ತು ಬಲ ಬರಲು ಗೋವಿಂದ ಅಥವಾ ದೇವರು ಮುಖ್ಯ ಹಾಗೂ ಅಗತ್ಯ ಎಂದು ಆದರ್ಶ ಹಿಂದುವು ಸ್ಪಷ್ಟವಾದ ನಿಲುವನ್ನು ತಳೆದಿರುತ್ತಾನೆ. ಹಿಂದುವಿಗೆ ಗೋವಿಂದ ಎಂದರೆ ಪರಮಾತ್ಮ ಎಂದು ತಾತ್ಪರ್ಯವೇ ವಿನಾ ಯಾವುದೇ ಒಂದು ಪಂಥ ಪಂಗಡದ ಸಂಕೇತ ಇಲ್ಲವೇ ಆರಾಧ್ಯದೇವ ಎಂಬ ಸಂಕುಚಿತವಾದ ಅರ್ಥವೆಂದು ಆದರ್ಶ ಹಿಂದುವು ಭಾವಿಸುವುದಿಲ್ಲ. ಗೋವಿಂದ ಎಂದರೆ ವೇದವಾಣಿಯ ಮೂಲಕ ತನ್ನನ್ನು ಪಡೆಯಲು ಅನುಕೂಲ ಮಾಡಿಕೊಡುವವನು, ಮುಕ್ತಿಯನ್ನು ಕೊಡುವವನು ಎಂಬಿತ್ಯಾದಿ ಬೇರೆ ಬೇರೆ ಅರ್ಥಗಳಿಗೂ ಆಸ್ಪದವಾಗುತ್ತದೆ. ಒಟ್ಟಿನಲ್ಲಿ ಗೋವಿಂದ ಎಂದರೆ ಸರ್ವಶಕ್ತನೂ ಸರ್ವಾಂತರ್ಯಾಮಿಯೂ ಆದ ಭಗವಂತನೆಂದರ್ಥ.

'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ' (ಹೆತ್ತ ತಾಯಿ ಮತ್ತು ಜನ್ಮಭೂಮಿ ಇವುಗಳು ಸ್ವರ್ಗಕ್ಕಿಂತ ಮೇಲು) ಎಂಬುದು ಆದರ್ಶ ಹಿಂದೂವಿನ ನಿಲವು ಆದಂತೆ 'ಸತ್ಯಮೇವ ಜಯತೇ, ನಾನೃತಮ್' (ಸತ್ಯಕ್ಕೇ ಜಯ, ಅನೃತಕ್ಕೆ ಅಲ್ಲ) ಎಂಬುದು ಅವನ ಬಾಳಿನ ಗಾಯತ್ರಿಯಾಗಿರುತ್ತದೆ. 'ಧರ್ಮ ಏವ ಹತೋ ಹಂತಿ, ಧರ್ಮೋ ರಕ್ಷತಿ ರಕ್ಷಿತಃ' ಯಾರು ಧರ್ಮವನ್ನು ರಕ್ಷಿಸುತ್ತಾನೋ ಅವನನ್ನು ಧರ್ಮವು ರಕ್ಷಿಸುತ್ತದೆ. ಧರ್ಮವನ್ನು ಯಾರು ನಾಶಮಾಡಲು ಯತ್ನಿಸುತ್ತಾನೋ ಅವನನ್ನು ಆ ಧರ್ಮವೇ ನಾಶಮಾಡುತ್ತದೆ ಎಂಬುದು ಹಿಂದೂವಿನ ನಿತ್ಯಜೀವನದಲ್ಲಿನ ನಂಬಿಕೆಯ ಸೂತ್ರವಾದರೆ 'ಸರ್ವೇ ಜನಾಃ ಸುಖಿನೋ ಭವಂತು', 'ಸಮಸ್ತ ಸನ್ಮಂಗಳಾನಿ ಭವಂತು'. (ಎಲ್ಲರೂ ಸುಖವಾಗಿರಲಿ, ಸಮಸ್ತವೂ ಸನ್ಮಂಗಳವಾಗಿ ಪರಿಣಮಿಸಲಿ) ಎಂಬುದು ಹಿಂದೂವಿನ ದಿನನಿತ್ಯದ ಹಾರೈಕೆಯಾಗಿರುತ್ತದೆ. ಸದಾ ಉತ್ತಮವಾದುದನ್ನೇ, ಹಿತವಾದುದನ್ನೇ ಕೇಳುತ್ತ, ನುಡಿಯುತ್ತ, ನೋಡುತ್ತ, ಉತ್ತಮವಾದುದನ್ನೇ ಎಲ್ಲೆಡೆಗಳಿಂದಲೂ ಸ್ವಾಗತಿಸುತ್ತ ಹಿಂದುವು ತನ್ನ ಜೀವನವನ್ನು ತ್ರಿಕರಣಪೂರ್ವಕವಾದ ಪರಿಶುದ್ಧತೆ, ಶಕ್ತಿ ಮತ್ತು ಸ್ಥೈರ್ಯಗಳಿಂದ ನಿರ್ವಹಿಸಲು ಸದಾ ಯತ್ನಶೀಲನೂ ನಿತ್ಯಸಂಕಲ್ಪನೂ ಆಗಿರುತ್ತಾನೆ.

ಹೀಗೆ ಈ ಹದಿನೆಂಟು ಅಂಶಗಳು ಹಿಂದೂವಿನ ಜೀವನದ ಮೂಲಸೂತ್ರಗಳೂ

ಲಕ್ಷಣಗಳೂ ಆಗಿದ್ದು ಈ ವಿಚಾರಗಳನ್ನೆಲ್ಲ ಜೀವನದಲ್ಲಿ ಅನುಷ್ಠಾನಕ್ಕೆ ತರುವವನೇ ಆದರ್ಶ ಹಿಂದೂ ಎಂದು ಅರಿಯಬೇಕು. ಆಗ ಅವನು ಜಗತ್ತಿನಲ್ಲಿ ಜೀವಂತ ಚೇತನ, ಜ್ವಲಂತ ಬೆಳಕು, ಜಾಜ್ವಲ್ಯಮಾನವಾದ ಆದರ್ಶಪ್ರಭೆಯಾಗಿ ಬೆಳಗುತ್ತಾನೆ. ಹಾಗೆ ಅವನ ಜೀವನ ಪಾವನವಾಗುತ್ತದೆ. ಅವನು ನಡೆದ ನೆಲ ಪವಿತ್ರವಾಗುತ್ತದೆ. ಇಳೆಯಲ್ಲಿ ಅವನ ಇರವು, ಅವನಿಗೂ ಆ ಮೂಲಕ ಇತರರಿಗೂ ಭಗವಂತನ ಅನುಗ್ರಹ-ಆಶೀರ್ವಾದ ಎಂಬಂತೆ ಆಗುತ್ತದೆ.

## ಆದರ್ಶ ಹಿಂದೂವಿನ ದಿನಚರಿ

ನಾವಿಂದು ವಿಜ್ಞಾನಯುಗದಲ್ಲಿ ಬಾಳುತ್ತಿದ್ದೇವೆ. ವೇದಕಾಲಕ್ಕೂ ಈ ಸ್ಪುಟ್ನಿಕ್ ಯುಗಕ್ಕೂ ಸಹಸ್ರಾರು ವರ್ಷಗಳ ಅಂತರವಿರುವಂತೆ, ಸ್ಥಿತಿಗತಿಗಳ ವಿಚಾರದಲ್ಲೂ ಮಹತ್ವಪೂರ್ಣವಾದ ವ್ಯತ್ಯಾಸವಿದೆ. ಹಿಂದೂಧರ್ಮದ ಆದರ್ಶಗಳು ಹಿರಿದಾದುದೇನೋ ನಿಜ. ಆದರೆ ಅವುಗಳು ಬದಲಾಗಿರುವ ಇಂದಿನ ಪರಿಸ್ಥಿತಿಯಲ್ಲಿ ಕಾರ್ಯಗತ ಮಾಡಲು, ಅನುಷ್ಠಾನದಲ್ಲಿ ಅಳವಡಿಸಲು ಅಸಾಧ್ಯ ಅಥವಾ ಬಹಳ ಕಷ್ಟ ಎಂಬ ಅಭಿಪ್ರಾಯ ಹಲವೆಡೆಗಳಲ್ಲಿ ಕೇಳಿಬರುತ್ತಿದೆ.

ಹಿಂದಿನ ಕಾಲದ ಮಾನವನೂ ಇಂದಿನ ಯುಗದ ಮಾನವನೂ ಜೀವನ ಮಾಡುವ ಕ್ರಮದಲ್ಲಿ ಬದಲಾವಣೆ ಕಾಣುತ್ತಿದೆ ಎನ್ನುವುದು ನಿಜ. ಆದರೆ ಹಾಗೆ ಕಾಣುವುದು ಜೀವನಸೌಕರ್ಯದಲ್ಲಿಯೇ ವಿನಾ ಜೀವನದ ಮೂಲಭೂತವಾದ ಅಗತ್ಯ ಹಾಗೂ ತತ್ತ್ವಗಳಲ್ಲಿ ಬದಲಾವಣೆ ಏನೂ ಆಗಿರುವುದಿಲ್ಲ ಎಂಬುದು ಸ್ಪಷ್ಟವಾದ ಸತ್ಯವಾಗಿದೆ. ಹೇಗೆಂದರೆ :

(೧) ಹಿಂದೆ ಸೂರ್ಯನು ಪ್ರಕಾಶವನ್ನು ನೀಡುತ್ತಿದ್ದನು. ಋತುಬದಲಾವಣೆಗಳು ಆಗುತ್ತಿದ್ದವು. ಇಂದೂ ಕೂಡ ಇವೆಲ್ಲಾ ಆಗುತ್ತಿವೆ.

(೨) ಜೀವನದಲ್ಲಿ ಸುಖ, ದುಃಖ, ಜನ್ಮಮೃತ್ಯುಗಳು ಮಾನವನ ಅನುಭವಕ್ಕೆ ಹಿಂದಿನ ಕಾಲದಲ್ಲಿ ಬರುತ್ತಿದ್ದುವು. ಇಂದೂ ಕೂಡ ಅವು ಬರುತ್ತಿದ್ದು ಅವುಗಳ ನಿವಾರಣೆಯಾಗಲಿ ಬದಲಾವಣೆಯಾಗಲಿ ಆಗಿರುವುದಿಲ್ಲ.

(೩) ಮಾನವನಲ್ಲಿ ಕಂಡುಬರುವ ಸ್ವರೂಪವೈವಿಧ್ಯ, ಗುಣಧರ್ಮಗಳ ವ್ಯತ್ಯಾಸ, ಜೀವನದ ಪರಿಸ್ಥಿತಿಗಳ ಭಿನ್ನತೆ, ಇವುಗಳು ಅಂದೂ ಇದ್ದವು, ಇಂದೂ ಇವೆ. ಜೀವನದಲ್ಲಿ ಅನ್ನ, ವಸನ, ಆಸರೆಗಳಿಗಾಗಿ ಅಂದೂ ಮಾನವನು ದುಡಿಯುತ್ತಿದ್ದು ಇಂದೂ ಅವನ ದುಡಿಮೆಯ ಗುರಿ ಅದೇ ಆಗಿದೆ. ಆದರೆ ಕೆಲಸದ ಸ್ವರೂಪದ ಬದಲಾವಣೆ ಮಾತ್ರ ಅಷ್ಟಿಷ್ಟು ಆಗಿದೆ.

(೪) ಜೀವನದಲ್ಲಿ ಸುಖ ಬೇಕು ಎಂಬುದು ಅಂದಿನ ಬಯಕೆ, ಕಾತರತೆ ಆಗಿತ್ತು. ಇಂದಿಗೂ ಅದೇ ಕೂಗು, ಅದೇ ದಾಹ ಮಾನವನನ್ನು ಕಾಡುತ್ತಿದೆ.

(೫) ಶಿಷ್ಟ ಮತ್ತು ದುಷ್ಟಶಕ್ತಿಗಳ ಪ್ರಭಾವ ವ್ಯಕ್ತಿಯ ಅಂತರ್ಯದಲ್ಲಿ, ವ್ಯಕ್ತಿ ಜೀವನದಲ್ಲಿ, ಸಾಮೂಹಿಕವಾದ ರಂಗದಲ್ಲಿ ಅಂದು ಕಾಣುತ್ತಿದ್ದು ಇಂದೂ ಕಾಣುತ್ತಿದೆ.

ಜೀವನದ ಪರಮಗುರಿಯು ಆತ್ಮಸಾಕ್ಷಾತ್ಕಾರವಾಗಿದ್ದು ಅದರ ಸಾಧನೆಗೆ ಸೂಕ್ತವಾದ ದಾರಿ ಇದೆಯೆಂದು ಕಂಡುಕೊಂಡ ಆತ್ಮವಿದ್ಯೆಯು ಅಂದಿಗೆ ಎಷ್ಟು ಹೊಸದು ಮತ್ತು ಪ್ರಾಯೋಗಿಕವೋ ಇಂದಿಗೂ ಅಷ್ಟೇ ನವೀನ ಮತ್ತು ಕಾರ್ಯಾಚರಣೆಗೆ ಯೋಗ್ಯವಾಗಿರುತ್ತದೆ. ಈ ಐದು ಅಂಶಗಳನ್ನು ಸರಿಯಾಗಿ ಪರಿಶೀಲಿಸಿದರೆ ಜಗತ್ತಿನಲ್ಲಿ ಬದಲಾದುದು ಏನು ?—ಎಂಬ ಪ್ರಶ್ನೆ ಉದ್ಭವಿಸುತ್ತದೆ. ಮೂಲವಾಗಿ ಯಾವುದೂ ಬದಲಾಗಿರುವುದಿಲ್ಲ. ಬದಲು ಜೀವನ ಕ್ರಮ, ಸುಖಸಲಕರಣೆಗಳ ಪ್ರಭಾವ, ಮನುಷ್ಯನ ಆಸೆ, ಬೇಕು-ಬೇಡಿಕೆಗಳ ಅಂಕಿ–ಅಂಶ ಹಾಗೂ ಸ್ವರೂಪಗಳ ಬದಲಾವಣೆ ಮಾತ್ರ ಆಗಿದೆಯಷ್ಟೆ!

ಜೀವನದಲ್ಲಿ ಮಾನವನ ದುಡಿಮೆಯ ಸ್ವರೂಪ, ದುಡಿಮೆಯ ವೇಳೆ, ಪ್ರಮಾಣ, ಸಮಯಸನ್ನಿವೇಶ ಇತ್ಯಾದಿಗಳೆಲ್ಲ ಈ ಕಾಲದಲ್ಲಿ ಬಹಳ ಬದಲಾವಣೆಯಾಗಿದ್ದು ಅವನ ಜೀವನದ ಮಟ್ಟ ಸಾಕಷ್ಟು ಪ್ರಮಾಣದಲ್ಲಿ ಹೆಚ್ಚಾಗಿದೆ. ಪರಿಣಾಮವಾಗಿ ಎಲ್ಲರಂತೆ ಹಿಂದೂವಿಗೆ ಜೀವನದ ಆವಶ್ಯಕತೆಗಳು ಹೆಚ್ಚಾಗಿದ್ದು ಆತನ ದುಡಿಮೆಯ ವರಮಾನ, ಆರ್ಥಿಕ ಪರಿಸ್ಥಿತಿಗಳು ಈ ಆವಶ್ಯಕತೆಗಳನ್ನು ಸರಿದೂಗುತ್ತಿಲ್ಲ ಎಂಬಂತಾಗಿದೆ. ಈ ಅತೃಪ್ತಿ, ಅಪೂರ್ಣತೆಗಳು ತನ್ನ ಜೀವನದ ಮೌಲ್ಯ ಹಾಗೂ ಶಾಶ್ವತ ಗುರಿಯನ್ನು ಸಾಮಾನ್ಯವಾಗಿ ಹಿಂದೂವಿನ ಮನಸ್ಸಿನಿಂದ ಸರಿಸಿ ಬದುಕಿನ ಮುಖ್ಯವಾದ ಗುರಿಯೆಂದರೆ ಲೌಕಿಕ ಸುಖ, ಭೌತಿಕ ಜೀವನದ ಸುಖಸಲಕರಣೆಗಳ ಹೆಚ್ಚಿಸುವಿಕೆಯಷ್ಟೇ ಎಂಬಂತಾಗಿದೆ.

ಪರಿಸ್ಥಿತಿ ಹೀಗಿದ್ದರೂ ಕೂಡ ಹಿಂದುವು ಆದರ್ಶವಾಗಿ ಬದುಕಲು ಸಾಧ್ಯವಿಲ್ಲವೇ ? —ಎಂದಾಗ ಸಾಧ್ಯವಿದೆ, ಎಂದು ಹಿಂದೂಧರ್ಮವು ಆಶ್ವಾಸನೆ ನೀಡುತ್ತದೆ. ಕಾಲ ಪರಿಸ್ಥಿತಿಗಳು ಎಷ್ಟೇ ಬದಲಾದಂತೆ ತೋರಿದರೂ, ಆದರ್ಶವಾಗಿ ತನ್ನ ದಿನಚರಿಯನ್ನು ರೂಪಿಸಿಕೊಂಡು ಬಾಳನ್ನು ಬಾಳಲು ಸಾಧ್ಯ, ಎಂದು ಈಗಲೂ ಹಿಂದೂಧರ್ಮವು ದೃಢವಾಗಿ, ಸ್ಪಷ್ಟವಾಗಿ ಆಶ್ವಾಸನೆಯನ್ನು ನೀಡುತ್ತದೆ.

ಆದರ್ಶ ಹಿಂದುವಿನ ದಿನಚರಿ ಹೇಗಿರುತ್ತದೆ ? ವಿವರಗಳೇನು ?—ಎಂದು ಪರ್ಯಾಲೋಚಿಸುವ ಮೊದಲು ಇಂದಿನ ಕಾಲದಲ್ಲಿ ಹಿಂದೂ ಸಮಾಜದಲ್ಲಿರುವ ಹಿಂದೂಗಳನ್ನು ಅವರವರ ದುಡಿಮೆಯ ಸಂಬಂಧವಾಗಿ ವಿಚಾರಪರಿಶೀಲನೆಯ ಅನುಕೂಲಕ್ಕಾಗಿ ವರ್ಗೀಕರಿಸುವುದು ಅಗತ್ಯ. ಸಾಮಾನ್ಯವಾಗಿ ದುಡಿಮೆಯ ಕ್ಷೇತ್ರಸ್ವರೂಪಗಳನ್ನು ಅನುಸರಿಸಿ ಹಿಂದೂ ಸಮಾಜದಲ್ಲಿ ಮೂರು ಒಳಭೇದಗಳನ್ನು ನಾವು ಗುರುತಿಸಬಹುದು :

(೧) ದಿನದಲ್ಲಿ ನಿಶ್ಚಿತವಾದ ಸಮಯ ಹಾಗೂ ಕಾಲಾವಧಿಯ ದುಡಿಮೆ ಉಳ್ಳವರು (ಸರಕಾರಿ ಆಫೀಸು, ಶಾಲೆ, ಬ್ಯಾಂಕು, ವರ್ಗದವರು).ಖಾಸಗಿ ಕಛೇರಿ, ಮಜದೂರಿ.

(೨) ದುಡಿಮೆಗೆ ನಿಶ್ಚಿತವಾದ ಅವಧಿ ಇದ್ದರೂ ಅವಧಿಯ ನಿರ್ಣಯದ ಬದಲಾವಣೆ ಇರುವವರು (ಕಾರ್ಖಾನೆ ನೌಕರರು—ಶಿಫ್ಟ್ ಸಿಸ್ಟಮ್‌ನವರು).

(೩) ದುಡಿಮೆಗೆ ನಿಶ್ಚಿತವಾದ ಅವಧಿ ಇಲ್ಲದ ಅವಧಿಯ ನಿರ್ಣಯದ ಕುರಿತಾಗಿ ಸ್ವಾತಂತ್ರ್ಯ ಉಳ್ಳವರು (ಜಮೀನ್ದಾರರು, ಸಾಹುಕಾರರು, ಕಲಾವಿದರು, ಕೃಷಿಕರು, ವಾಣಿಜ್ಯ ಉದ್ಯಮಿಗಳು ಇತ್ಯಾದಿ).

ಹಿಂದುವು ಇಂದು ಮೂರು ವರ್ಗಗಳಲ್ಲಿ ಒಂದಲ್ಲ ಒಂದು ಅಂಶಕ್ಕೆ ಒಳಪಟ್ಟಿರುತ್ತಾನೆ. ಹಾಗಾಗಿ ಆದರ್ಶ ಹಿಂದೂವಿನ ದಿನಚರಿ ಈ ಮೂರು ವಿಧದ ವರ್ಗೀಕರಣಕ್ಕೂ ಹೊಂದಿಕೊಳ್ಳುವಂತಿರಬೇಕು ಎಂಬ ಅಭಿಪ್ರಾಯವು ಸಹಜವೇ ಸರಿ. ಆದರೆ ಪರಿಸ್ಥಿತಿಗೆ ಜೀವಿಯು ಹೊಂದಿಕೊಳ್ಳಬೇಕೇ ವಿನಾ ಪರಿಸ್ಥಿತಿ ಜೀವಿಗೆ ಹೊಂದಿಕೊಳ್ಳುವುದಿಲ್ಲ ಎಂಬುದು ಹಿಂದುವು ನೆನಪಿಡಬೇಕಾದ ಒಂದನೇ ಅಂಶವಾಗಿದೆ.

ಜೀವನದ ಪರಮಗುರಿಯು ಆತ್ಮಸಾಕ್ಷಾತ್ಕಾರವಾಗಿದ್ದು ಲೌಕಿಕ ಜೀವನವು ಅದಕ್ಕೆ ಪೂರಕವಾದುದೆಂದು ತಿಳಿದು ಅದರಂತೆ ತನ್ನ ಕ್ಷೇತ್ರದಲ್ಲಿ ದುಡಿಯಬೇಕಾದುದು ಎರಡನೆಯ ಮುಖ್ಯಾಂಶವಾಗಿದೆ. ಆತ್ಮವಿಶ್ವಾಸ, ತನ್ನ ಮತ-ಸ್ವಭಾವ-ಸ್ವಧರ್ಮಗಳಲ್ಲಿ ಅಚಲವಾದ ನಂಬಿಗೆ, ಇವು ಇರಬೇಕಾದುದು ಮೂರನೆಯ ಮುಖ್ಯಾಂಶವಾಗಿದೆ.

ಮನಸ್ಸಿದ್ದರೆ ಮಾರ್ಗವಿದ್ದೇ ಇದೆ ಎಂಬುದನ್ನು ಸ್ಪಷ್ಟವಾಗಿ ತಿಳಿದಿರಬೇಕಾದುದು ನಾಲ್ಕನೆಯ ಮುಖ್ಯಾಂಶವಾಗಿರುತ್ತದೆ.

ತನ್ನ ದೈನಂದಿನ ಜೀವನದ ಆಗುಹೋಗುಗಳು ಎಷ್ಟು ಸಹಜ ಹಾಗೂ ಸತ್ಯವಾಗಿ ಕಾಣುತ್ತವೆಯೋ ಅಷ್ಟೇ ಸಹಜ ಹಾಗೂ ಸತ್ಯವಾಗಿ ಅವಕ್ಕೆ ನಿಯಮ, ನಿಷ್ಠೆ, ನೀತಿ ಧರ್ಮಗಳ ತತ್ತ್ವಗಳಿಂದ ಕೂಡಿದ ಸದ್ವರ್ತನೆ—ಇವನ್ನು ನೀಡುವುದು ಆಗತ್ಯ ಮತ್ತು ಸಾಧ್ಯ ಎಂದು ತಿಳಿದಿರಬೇಕು. ಮಾತ್ರವಲ್ಲದೆ, ಕಾಲ ಎಷ್ಟೇ ಬದಲಾಗಿರಲಿ, ಪರಿಸ್ಥಿತಿ ಎಷ್ಟೇ ಪರಿವರ್ತನಗೊಂಡಿರಲಿ, ಮನುಷ್ಯನನ್ನು ಆಧರಿಸಿ ನಿಲ್ಲಿಸುವ ಮಾನವೀಯ ಗುಣ ಶಕ್ತಿಗಳಾದ ಸತ್ಯ, ಪ್ರಾಮಾಣಿಕತೆ, ಅಹಿಂಸೆ, ಅಭಯ, ಶರೀರ ಮನ ಬುದ್ಧಿಗಳ ಶಕ್ತಿ ಮತ್ತು ಪರಿಶುದ್ಧತೆ ಇವುಗಳು ಮನುಷ್ಯನಿಗೆ ಬೇಕೇ ಬೇಕು. ಇವುಗಳನ್ನು ಸರಿಯಾಗಿ ಪಾಲಿಸಿ ಅಂತರ್ಯದ ಶುದ್ಧಿ ಮತ್ತು ಶಕ್ತಿಯನ್ನು ಬೆಳೆಸಿಕೊಂಡರೆ ಬಾಹ್ಯ ಪರಿಸ್ಥಿತಿ, ಸನ್ನಿವೇಶ, ಉಡುಗೆತೊಡುಗೆ, ಕೆಲವು ಆಚಾರಗಳು, ಇವುಗಳನ್ನೆಲ್ಲಾ ಅನುಕೂಲವಾಗಿ ಹೊಂದಿಸಿ, ಸುಧಾರಿಸಿಕೊಂಡು ಬಾಳಬಹುದು ಎಂಬುದನ್ನು ತಿಳಿದಿರಬೇಕಾದುದು ಐದನೆಯ ಮುಖ್ಯಾಂಶವಾಗಿರುತ್ತದೆ.

ಈ ಐದು ಅಂಶಗಳನ್ನು ಹಿಂದುವು ಸರಿಯಾಗಿ ಪಾಲಿಸಿದಾಗ ಅವನು ತನ್ನ ದಿನಚರಿಯನ್ನು ಸಮರ್ಪಕವಾಗಿ ನಿರ್ವಹಿಸಲು ನಿಶ್ಚಯವಾಗಿಯೂ ಸಾಧ್ಯವಾಗುವುದು.

ಆದರ್ಶ ಹಿಂದೂವಿನ ದಿನಚರಿಯಲ್ಲಿ ಈ ಕೆಳಗಿನ ಅಂಶಗಳು ಅಡಕವಾಗಿರುತ್ತವೆ :

೧. ಪ್ರಾರ್ಥನೆ, ಸ್ವಾಧ್ಯಾಯ ಮತ್ತು ತಪಸ್ಸು.
೨. ಯಜ್ಞ–ಆಶ್ರಮಧರ್ಮಪಾಲನೆ.
೩. ಆಹಾರಸ್ವೀಕರಣೆ.
೪. ಜೀವನರಂಗದಲ್ಲಿ ದುಡಿಮೆ.
೫. ಸಮಾಜದೊಂದಿಗೆ ಸಮಾವೇಶ-ಲೌಕಿಕ ವ್ಯವಹಾರ.
೬. ಸೇವೆ ಮತ್ತು ಸತ್ಸಂಗ.
೭. ದಿನದ ಮುಕ್ತಾಯದ ಪ್ರಾರ್ಥನೆ.
೮. ತನ್ನ ಕುಟುಂಬದವರೊಡನೆ ಸಂಭಾಷಣೆ-ಒಡನಾಟ,

೯. ಅಂತರ್ನಿರೀಕ್ಷಣೆ.

೧೦. ಭಗವದರ್ಪಣ-ಪ್ರಾರ್ಥನೆ.

ಈ ಮೇಲಿನ ದಶಾಂಶ ಕಾರ್ಯಕ್ರಮಗಳನ್ನು ಸುಸೂತ್ರವಾಗಿ ನಿರ್ವಹಿಸಲು ಆದರ್ಶ ಹಿಂದೂವಿಗೆ ಆಧಾರವಾಗಿ ನೆರವಾಗುವ ಮೂಲವಾದ, ನೀತಿಧರ್ಮಯುತವಾದ ಅಂಶಗಳು ಮುಖ್ಯವಾಗಿ ಇವುಗಳಾಗಿವೆ :

(೧) ಸತ್ಯ, (೨) ಅಹಿಂಸೆ, (೩) ಬ್ರಹ್ಮಚರ್ಯ, (೪) ಆತ್ಮವಿಶ್ವಾಸ, (೫) ಅಭಯ, (೬) ಶ್ರದ್ಧೆ, (೭) ನಿರ್ಲಿಪ್ತತೆ, (೮) ಪ್ರೀತಿ, (೯) ವಿವೇಕ, (೧೦) ನಿಯಮನಿಷ್ಠೆ.

ಇನ್ನೀಗ ಹಿಂದೂವಿನ ದಿನಚರಿಯ ಕಾರ್ಯಕ್ರಮಗಳ ಅಂಶಗಳನ್ನು ಒಂದೊಂದಾಗಿ ತೆಗೆದುಕೊಂಡು ವಿಚಾರಮಾಡೋಣ :

(೧) ಪ್ರಾರ್ಥನೆ : ಹಿಂದೂವಿನ ಜೀವನದಲ್ಲಿ ಪ್ರಾರ್ಥನೆಗೆ ಮಹತ್ವಪೂರ್ಣವಾದ ಸ್ಥಾನವಿದೆ. ಪ್ರಾರ್ಥನೆಯೆಂದರೆ ಜೀವಾತ್ಮನು ಪರಮಾತ್ಮನ ಒಡನೆ ಸಂಭಾಷಿಸುವುದು ಎಂದು ಹೇಳಬಹುದು. ತನ್ನ ಜೀವನಕ್ಕೆ ಬೇಕಾದ ಕ್ರಿಯಾಶಕ್ತಿಯು ಪ್ರಾರ್ಥನೆಯಿಂದ ಲಭಿಸುತ್ತದೆ, ಮನಸ್ಸಿಗೆ ಶಾಂತಿ, ಬದುಕಿಗೆ ಬೆಳಕು, ಜೀವನದ ಹೋರಾಟಕ್ಕೆ ಧೈರ್ಯ ಸ್ಥೈರ್ಯಗಳು ಪ್ರಾರ್ಥನೆಯಿಂದ ಲಭಿಸುತ್ತವೆ. ದಿನದ ಕಾರ್ಯಕ್ರಮಗಳು ಪ್ರಾರ್ಥನೆ ಯಿಂದಲೇ ಆರಂಭವಾಗಬೇಕು. ತನ್ನ ಜೀವನಕ್ಕೊಂದು ಅರ್ಥವಿದೆ, ತನ್ನ ಬಾಳಿಗೆ ಹಿನ್ನೆಲೆಯಾಗಿ ಅಗೋಚರವಾದ ಶಕ್ತಿಯೊಂದಿದೆ ಎಂಬ ನೆನಪು ಪ್ರಾರ್ಥನೆಯಿಂದ ದೊರೆಯುತ್ತದೆ. ಮಾತ್ರವಲ್ಲದೆ ದಿನದ ಕೆಲಸಕಾರ್ಯಗಳ ನಿರ್ವಹಣೆಗೆ ಹೊಸ ಉತ್ಸಾಹ, ಚೇತನಗಳನ್ನು ಪ್ರಾರ್ಥನೆಯು ನೀಡುತ್ತದೆ. ಶರೀರದ ಪೋಷಣೆಗೆ ಅನ್ನ ಆಹಾರಗಳು. ಹೇಗೆ ಅಗತ್ಯವೋ ಹಾಗೆಯೇ ಮನಸ್ಸಿನ ಶಕ್ತಿಗೆ, ಆತ್ಮದ ಪ್ರಕಾಶಪ್ರಕಟಣೆಗೆ ಪ್ರಾರ್ಥನೆ ಅತ್ಯಂತ ಅಗತ್ಯ. ಪ್ರಾರ್ಥನೆ ಎಂದರೆ ಮನುಷ್ಯನು ತನ್ನ ಅಂತರಂಗದಲ್ಲಿರುವ ಪರಮಾತ್ಮ ನೊಡನೆ ಸಂಭಾಷಿಸುವುದೆಂಬಂತೆಯೇ ಜಗತ್ತಿನಲ್ಲೆಲ್ಲಾ ಆವರಿಸಿರುವ ಪರಮಾತ್ಮಶಕ್ತಿ ಯನ್ನು ತನ್ನ ಬಾಳಿಗೆ ಮೇಳವಿಸಿಕೊಳ್ಳುವುದು ಎಂದೂ ಹೇಳಬಹುದು. ಹೀಗೆ ಪ್ರಾರ್ಥನೆ ಯಿಂದ ನೈತಿಕಬಲ, ಶಾರೀರಿಕವಾದ ಆರೋಗ್ಯ, ಆಧ್ಯಾತ್ಮಿಕವಾದ ಶಕ್ತಿ—ಇವು ವರ್ಧಿಸಿ ಮನುಷ್ಯನಿಗೆ ತಾನು ಜೀವನದ ಎಲ್ಲಾ ರಂಗಗಳಲ್ಲೂ ಉಪಯುಕ್ತನೂ, ಪ್ರಭಾವ ಶಾಲಿಯೂ ಮತ್ತು ಪರಿಣಾಮಕಾರಿಯೂ ಆಗಿ ಯಶಸ್ವಿಯಾಗಿ ಬಾಳಲು ಸಾಧ್ಯವಾಗು ತ್ತದೆ. ಆದರ್ಶ ಹಿಂದುವು ತನ್ನ ಸರ್ವಾಂಗೀಣ ಉನ್ನತಿಗಾಗಿ ಪ್ರಾರ್ಥನೆ ಮಾಡುತ್ತಾ ಜಗತ್ತಿನ ಮಾನವಕೋಟಿಯ ಉದ್ಧಾರಕ್ಕಾಗಿಯೂ ಪ್ರಾರ್ಥನೆಯನ್ನು ಮಾಡುತ್ತಾನೆ. ತಾನು ಬೇರೆ, ಜಗತ್ತು ಬೇರೆ ಎಂದು ತಿಳಿಯದೆ ಜಗತ್ತಿನ ಜನರೆಲ್ಲರೂ ಮಾನವಬಳಗದ ಬಂಧುಗಳು—ಎಂದು ಹಿಂದುವು ತಿಳಿದಿರುತ್ತಾನೆ. ಆದ್ದರಿಂದಲೇ ಅವನು ಸರ್ವರ ಹಿತ ಹಾಗೂ ಕಲ್ಯಾಣಕ್ಕಾಗಿ ಪ್ರಾರ್ಥನೆಯನ್ನು ಮಾಡುತ್ತಾನೆ. ಹೀಗೆ ಆದರ್ಶ ಹಿಂದೂವಿನ ದಿನಚರಿ ಭಗವಂತನ ಪ್ರಾರ್ಥನೆಯೊಡನೆ ಆರಂಭವಾಗುತ್ತದೆ.

ಪ್ರಾರ್ಥನೆ ಇಷ್ಟೇ ಹೊತ್ತು, ಇದೇ ಸ್ವರೂಪದ್ದಾಗಿರಬೇಕು ಎಂದು ನಿಶ್ಚಿತವಾಗಿ ಒಂದು ವಿಧಾನವನ್ನು ಹೇಳಿ ಎಲ್ಲರಿಗೂ ಅದು ಅನ್ವಯವಾಗಬೇಕೆಂದು ಹೇಳಲು

ಸಾಧ್ಯವಿಲ್ಲ. ಅವರವರ ಮನಃಕಾಂಕ್ಷೆ, ಧರ್ಮ, ಸಂಸ್ಕಾರಗಳಿಗೆ ಅನುಗುಣವಾಗಿ ಪ್ರಾರ್ಥನೆಯನ್ನು (೧) ಮಾತು, (೨) ಮಂತ್ರ, (೩) ಹಾಡು, (೪) ಮೌನಜಪ, (೫) ಬಾಹ್ಯ ಅಥವಾ ಆಂತರಿಕವಾದ ಪೂಜೆ—ಇವುಗಳನ್ನು ಒಳಗೊಂಡು ಮಾಡಬಹುದು. ಒಟ್ಟಿನಲ್ಲಿ ಪ್ರಾರ್ಥನೆಯನ್ನು ಮಾಡಿದನಂತರ ವ್ಯಕ್ತಿಯಲ್ಲಿ—

(೧) ಆತ್ಮವಿಶ್ವಾಸ ವರ್ಧಿಸಬೇಕು.
(೨) ಉತ್ಸಾಹ, ಮನಃಸ್ಥೈರ್ಯ, ಮನಶ್ಶುದ್ಧಿ ಉಂಟಾಗಬೇಕು.
(೩) ಶಾಂತಿಸಂತೋಷಗಳುಂಟಾಗಬೇಕು.

ಈ ಮೂರು ಅಂಶಗಳು ವ್ಯಕ್ತಿಯಲ್ಲಿ ಪ್ರಾರ್ಥನೆಯ ಅನಂತರ ಎಷ್ಟೆಷ್ಟುಮಟ್ಟಿಗೆ ನೆಲೆನಿಂತು ಅವು ದಿನದ ಕಾರ್ಯಕ್ರಮಗಳಿಗೆ ನೆರವಾಗುವುವೋ ಅಷ್ಟಷ್ಟರಮಟ್ಟಿಗೆ ಪ್ರಾರ್ಥನೆ ಯಶಸ್ವಿಯಾಯಿತು ಎಂದು ಹೇಳಬಹುದು. ಈ ಮೂರು ಅಂಶಗಳು ವ್ಯಕ್ತಿಯ ಜೀವನದಲ್ಲಿ ನೆಲೆಗೊಳ್ಳುವಂತೆ ಸಹಾಯಮಾಡುವ ಯಾವುದೇ ವಿಧಾನವನ್ನು ಬೇಕಾದರೂ ಪ್ರಾರ್ಥನೆಯ ಅಂಶವಾಗಿ ಅನುಸರಿಸಬಹುದು ಎಂಬುದು ಹಿಂದೂಧರ್ಮದ ನಿಲವು ಆಗಿರುತ್ತದೆ.

ಸ್ವಾಧ್ಯಾಯ ಮತ್ತು ತಪಸ್ಸುಗಳಲ್ಲಿ ಸ್ವಾಧ್ಯಾಯವು ಜೀವಿಯ ಜೀವನದ ಮಹತ್ವ, ಪಾವಿತ್ರ್ಯತೆ ಹಾಗೂ ಜವಾಬ್ದಾರಿಗಳನ್ನು ನೆನಪಿಗೆ ತರುವುದಲ್ಲದೆ, ತಪಸ್ಸನ್ನೂ ಮತ್ತು ಜೀವನವನ್ನೂ ನಿರ್ವಹಿಸಲು ಬೇಕಾದ ನಿಯಮನಿಷ್ಠೆಗಳನ್ನೂ ಬೆಳೆಸಿಕೊಳ್ಳಲು ಸಹಾಯ ಮಾಡುತ್ತದೆ. ಸದ್ಗ್ರಂಥಗಳ ಪಠಣ, ಸದ್ವಿಚಾರಗಳ ಕುರಿತಾಗಿ ಮನನ, ಆತ್ಮತತ್ತ್ವ ವಿಚಾರವಾಗಿ ಚಿಂತನೆ ಮಾಡುವಿಕೆ—ಇವುಗಳೇ ಸ್ವಾಧ್ಯಾಯವೆಂದೆನಿಸಿರುತ್ತದೆ. ತಪಸ್ಸು ಎಂದರೆ ಮೂರು ವಿಧವಿದ್ದು, ಅದು ಶರೀರ ಮಾತು ಮನಸ್ಸುಗಳಿಗೆ ಸಂಬಂಧಿಸಿರುತ್ತದೆ. ಈ ಮೂರು ವಿಧದ ತಪಸ್ಸುಗಳ ಕುರಿತಾಗಿ ಸ್ಪಷ್ಟವಾದ ವಿವರಣೆಯನ್ನು ಭಗವದ್ಗೀತೆಯಲ್ಲಿ ಹೀಗೆ ನೀಡಲಾಗಿದೆ :

**ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥**

'ದೇವ ಬ್ರಾಹ್ಮಣ ಗುರು ಜ್ಞಾನಿಗಳ ಪೂಜೆಯೂ ಶೌಚವೂ, ಸರಳತೆಯೂ ಬ್ರಹ್ಮಚರ್ಯವೂ ಮತ್ತು ಅಹಿಂಸೆಯೂ ಶಾರೀರಿಕ ತಪಸ್ಸು ಎಂದು ಹೇಳಲ್ಪಡುತ್ತದೆ.'

**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥**

'ಉದ್ವೇಗಕರವಲ್ಲದ, ಸತ್ಯವೂ ಪ್ರಿಯವೂ ಹಿತವೂ ಆದ ವಾಕ್ಯವೂ ಮತ್ತು ಸ್ವಾಧ್ಯಾಯ (ಸ್ವಶಾಖೆಯ ಅಧ್ಯಯನ, ಸದ್‌ವಿಚಾರ ಚಿಂತನೆ ಇತ್ಯಾದಿ) ವಾಚಿಕ ತಪಸ್ಸು ಎಂದು ಹೇಳಲ್ಪಡುತ್ತದೆ.'

**ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।**
**ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥**

'ಮನಸ್ಸಿನ ಪ್ರಸನ್ನತೆ, ಸೌಮ್ಯಭಾವ, ಮೌನ, ಮನೋನಿರೋಧ, ಭಾವಸಂಶುದ್ಧಿ —ಇವು ಮಾನಸಿಕ ತಪಸ್ಸು ಎಂದು ಹೇಳಲ್ಪಡುತ್ತದೆ.'

—ಗೀತಾ, ಅ. ೧೭, ಶ್ಲೋಕ ೧೪, ೧೫, ೧೬

ಈ ಮೂರು ತಪಸ್ಸುಗಳನ್ನು ದಿನದ ಪ್ರತಿಯೊಂದು ಕಾರ್ಯಕ್ರಮಗಳ ಹಿನ್ನೆಲೆಯಲ್ಲಿ ಅಡಕವಾಗಿರುವಂತೆ ದಿನವಿಡೀ ಎಚ್ಚರ ವಹಿಸಬೇಕಾಗಿರುವುದು ಮುಖ್ಯವಾದ ಅಂಶವಾಗಿರುತ್ತದೆ.

(೨) ಯಜ್ಞ—ಆಶ್ರಮಧರ್ಮಪಾಲನೆ: ಯಜ್ಞವೆಂದರೆ ಇತರರ ಹಿತಕ್ಕಾಗಿ ಮಾಡುವ ತ್ಯಾಗ ಎಂದು ಸ್ಥೂಲವಾಗಿ ಹೇಳಬಹುದು. ತನ್ನಲ್ಲಿ ಇರುವುದನ್ನು ಇತರರಿಗೆ ನೀಡಿ, ಇತರರೊಂದಿಗೆ ಹಂಚಿಕೊಳ್ಳುವುದೇ ಯಜ್ಞದ ತತ್ತ್ವವಾಗಿದೆ. ಇದರಿಂದಾಗಿ ಹೃದಯ ವೈಶಾಲ್ಯತೆ, ಕರುಣೆ, ಸಹಾನುಭೂತಿ, ಸಹಕಾರ ಎಂಬಿತ್ಯಾದಿ ಸದ್ಗುಣಗಳ ವೃದ್ಧಿಯಾಗುತ್ತದೆ. ಈ ತತ್ತ್ವವನ್ನೇ ಆಧರಿಸಿ, ಹಿಂದುವು ತನ್ನ ಸ್ಥಿತಿಗತಿಗಳಿಗೆ ಅನುಸಾರವಾಗಿ ದಿನದ ಕಾರ್ಯಕ್ರಮಗಳಲ್ಲಿ ತ್ಯಾಗದಾನಗಳನ್ನು ಎಸಗುತ್ತಾನೆ. ತನ್ನ ಆಶ್ರಮಧರ್ಮವನ್ನು ಪಾಲನೆಮಾಡುವ ಯಜ್ಞತತ್ತ್ವವನ್ನು ಉಪಯೋಗಿಸಿಕೊಂಡು ತನ್ನ ದೈನಂದಿನ ಜೀವನದ ಕಾರ್ಯಭಾಗಗಳನ್ನು ನಿರ್ವಹಿಸುತ್ತಾನೆ. ಪ್ರಾಣಿದಯೆ, ಪರೋಪಕಾರ, ಸಮಾಜಸೇವಾಕಾರ್ಯಕ್ರಮಗಳು ಇತ್ಯಾದಿ ತತ್ತ್ವಗಳೆಲ್ಲ ಈ ಯಜ್ಞದಲ್ಲಿ ಸೇರಿರುತ್ತವೆ. ಒಟ್ಟಿನಲ್ಲಿ ಸ್ವಾರ್ಥತ್ಯಾಗಕ್ಕೂ ನಿಃಸ್ವಾರ್ಥಭಾವನೆಯ ವೃದ್ಧಿಗೂ ಯಾವುವು ಸಹಕಾರಿಯಾಗಿ ಜೀವಿಯ ಸಂಕುಚಿತ ಮನಃಸ್ಥಿತಿಯಿಂದ ವಿಶಾಲವಾದ ಮನೋಭಾವನೆಯ ಬೆಳವಣಿಗೆಗೆ ಕಾರಣವಾಗುವುವೋ ಅವೆಲ್ಲ ಯಜ್ಞತತ್ತ್ವದ ಪರಿಣಾಮ ಎನ್ನಬಹುದು.

(೩) ಆಹಾರ ಸ್ವೀಕರಣೆ: ಆಹಾರ ಸ್ವೀಕರಣೆಯು ಹಿಂದೂವಿನ ಜೀವನದಲ್ಲಿ ಕೇವಲ ಶರೀರಪೋಷಣೆಯ ಅಂಶವೆಂದು ಭಾವಿಸಲ್ಪಟ್ಟಿರುವುದಿಲ್ಲ. 'ಆಹಾರಶುದ್ಧೌ ಸತ್ತ್ವಶುದ್ಧಿಃ' ಎಂಬ ಛಾಂದೋಗ್ಯ ಉಪನಿಷತ್ ವಾಕ್ಯದಂತೆ ಹಿಂದುವು ಶುದ್ಧವಾದ ಆಹಾರದಿಂದ ಶುದ್ಧಮನಸ್ಸು, ಶುದ್ಧಮನಸ್ಸಿನಿಂದ ಶುದ್ಧಯೋಚನೆ, ಶುದ್ಧಯೋಚನೆಯಿಂದ ಶುದ್ಧಕ್ರಿಯೆ, ಶುದ್ಧಕ್ರಿಯೆಯಿಂದ ಶುದ್ಧಗತಿ–ಶುದ್ಧಫಲ ಎಂಬುದನ್ನು ತಿಳಿದಿರುತ್ತಾನೆ. ಮಾತ್ರವಲ್ಲದೆ ಆಹಾರವು ಚೈತನ್ಯದಿಂದ ಕೂಡಿರುವುದಾಗಿದ್ದು ಚೈತನ್ಯದಾಯಕವೂ ಆಗಿರುವುದರಿಂದ ಅದರ ಸ್ವೀಕರಣೆ ಎಂದರೆ ತನ್ನಲ್ಲಿ ಅಡಕವಾಗಿರುವ ದಿವ್ಯಪರಮಾತ್ಮಚೈತನ್ಯಕ್ಕೆ ಅರ್ಪಣೆ ಎಂಬ ಸಮರ್ಪಣಭಾವದಿಂದ ಆಹಾರವನ್ನು ಸ್ವೀಕರಿಸುತ್ತಾನೆ. ಮನಸ್ಸಿನ ಉದ್ವೇಗ, ಅನಗತ್ಯದ ಹರಟೆ ಇತ್ಯಾದಿಗಳಿಲ್ಲದೆ ಶಾಂತವಾಗಿ ತಾನು ಉಪಯೋಗಿಸುವ ಆಹಾರವನ್ನು ಮೊದಲು ಭಗವಂತನಿಗೆ ಅರ್ಪಿಸಿ ಅನಂತರ ಅದು ಅವನ ಪ್ರಸಾದ ಎಂಬ ಪವಿತ್ರ ಭಾವನೆಯಿಂದ ಸ್ವೀಕರಿಸುತ್ತಾನೆ. ಈ ದೃಷ್ಟಿಯಿಂದಲೇ ಆದರ್ಶ ಹಿಂದುವು ಆಹಾರದ ಆಶ್ರಯ, ಶುದ್ಧಸ್ವರೂಪ, ಗುಣಧರ್ಮಗಳು ಎಂಬ ಈ ಮೂರು ಅಂಶಗಳ ಬಗೆಗೆ ಅತ್ಯಂತ ಜಾಗರೂಕನಾಗಿರುತ್ತಾನೆ.

(೪) ಜೀವನರಂಗದಲ್ಲಿ ದುಡಿಮೆ: ಆದರ್ಶ ಹಿಂದುವು ದುಡಿಮೆಯೆಂದರೆ ಜೀವನಕ್ಕಿಂತ ಹೊರತಾದ ಸಂಗತಿ ಎಂದಾಗಲಿ ಅಥವಾ ಅದರ ಹಿಂದೆ ಪವಿತ್ರವಾದ ಭಾವನೆ

ಇಲ್ಲ ಎಂದಾಗಲಿ ಭಾವಿಸುವುದಿಲ್ಲ. ದುಡಿಮೆಯ ಉದ್ದಿಷ್ಟವು ಸಾಮಾನ್ಯವಾಗಿ ಹಣಸಂಪಾದನೆ, ಜೀವನಸೌಕರ್ಯಗಳ ಅರ್ಜನೆ ಆಗಿದ್ದರೂ ಕೂಡ ಅದರ ಹಿನ್ನೆಲೆ ಧರ್ಮವೇ ದುಡಿಮೆಯ ಆಧಾರವಾಗಿರಬೇಕೆಂದು ಹಿಂದುವು ತಿಳಿದಿರುತ್ತಾನೆ. ತನ್ನ ಕೆಲಸಕಾರ್ಯಗಳ ಸ್ವರೂಪ ಏನೇ ಇರಲಿ, ಅದನ್ನು ಕುಶಲತೆಯಿಂದ ತನ್ನ ಸ್ವಭಾವ–ಸ್ವಧರ್ಮಗಳಿಗೆ ಅನುಸಾರವಾಗಿ ಜವಾಬ್ದಾರಿಯಿಂದ ನಿರ್ವಹಿಸುತ್ತಾ ಅದರಲ್ಲಿಯೇ ಶಾಂತಿ, ತೃಪ್ತಿಯನ್ನು ಕಾಣುತ್ತಾನೆ. ಮಾತ್ರವಲ್ಲದೆ ತನ್ನ ಜೀವನದ ಪರಮಗುರಿಯಾದ ಆತ್ಮಸಾಕ್ಷಾತ್ಕಾರ ಅಥವಾ ಮೋಕ್ಷವು ತನ್ನ ಜೀವನಕರ್ಮಗಳನ್ನು ಸರಿಯಾಗಿ ಪಾಲಿಸುವುದರಿಂದ ಸಿದ್ಧಿಸುತ್ತದೆ ಎಂದು ಹಿಂದುವು ನಂಬಿರುತ್ತಾನೆ.

(೫) ಸಮಾಜದೊಂದಿಗೆ ಸಮಾವೇಶ–ವ್ಯವಹಾರ : ದಿನದಿನವೂ ಆದರ್ಶ ಹಿಂದುವು ತನ್ನ ಸಮಾಜದೊಂದಿಗೆ ವ್ಯವಹರಿಸುವಾಗ ಭಿನ್ನಭಿನ್ನ ಪ್ರಕೃತಿಯ ಜನರನ್ನೂ ವೈವಿಧ್ಯಮಯ ಗುಣಧರ್ಮಗಳಿಂದ ಕೂಡಿದವರನ್ನೂ ಕಾಣುತ್ತಾನೆ. ದಿನನಿತ್ಯದ ಈ ಅನುಭವವು ಹಿಂದುವಿಗೆ ಸಹನೆ, ಅನೇಕದಲ್ಲಿ ಏಕವನ್ನು ಕಾಣುವಿಕೆ ಮುಂತಾದವುಗಳನ್ನು ಶಾಸ್ತ್ರಗಳಲ್ಲಿ ಅಧ್ಯಯನ ಮಾಡಿ ತಿಳಿದಮೇಲೆ ಅವುಗಳನ್ನು ಕಾರ್ಯತಃ ಅನುಷ್ಠಾನಕ್ಕೆ ತರಲು ದೊರೆತಿರುವ ಸದವಕಾಶವೇ ಆಗಿರುತ್ತದೆ. ಸತ್ಯ, ಧೈರ್ಯ, ಸಾಹಸ, ಸಹನೆ ಇತ್ಯಾದಿಗಳಿಂದ ಕೂಡಿ ಸಮಾಜವ್ಯವಹಾರವನ್ನು ತನ್ನ ತಪಸ್ಸಿನ ಬಲದಿಂದ, ಅಧ್ಯಯನದ ಸಾಮರ್ಥ್ಯದಿಂದ ನಡೆಸುತ್ತಾ ಅದು ಸುಖಮಯವೂ ಸುಗಮವೂ ಆಗಿ ಸಾಗುವಂತೆ ಸದಾ ಯತ್ನಿಸುತ್ತಾನೆ. ಆದರ್ಶ ಹಿಂದುವು ಸಮಾಜದೊಂದಿಗೆ ಬೆರೆಯುವ ರೀತಿಯು ಹಿಂದೂಧರ್ಮದ ಜೀವನಸೂತ್ರಗಳ ಪ್ರಾಯೋಗಿಕ ವಿವರಣೆಯ ಪ್ರತೀಕದಂತಿರುತ್ತದೆ.

(೬) ಸತ್ಸಂಗ ಮತ್ತು ಸೇವೆ : ಸತ್ಸಂಗವು ತನ್ನಲ್ಲಿರುವ ಸದ್ಗುಣಗಳ ವರ್ಧನೆಗೆ ಸಹಾಯಮಾಡುತ್ತದೆ. ಸೇವೆಯು ಪ್ರೇಮದ ಪ್ರಾಯೋಗಿಕವಾದ ಪ್ರಕಟಣೆ ಎಂದು ತಿಳಿದಿರುವ ಹಿಂದುವಿನ ದಿನನಿತ್ಯದ ಜೀವನದಲ್ಲಿ ಸತ್ಸಂಗ ಮತ್ತು ಸೇವೆಗಳಿಗೆ ಮಹತ್ವಪೂರ್ಣವಾದ ಸ್ಥಾನವಿದೆ.

ಉತ್ತಮವಾದ ಹಾಗೂ ಉದಾತ್ತವಾದ ವಿಚಾರಗಳನ್ನು ಹಿರಿಯರಿಂದ, ಸಾಧುಸಂತರಿಂದ ಕೇಳುವುದು ಮತ್ತು ವಿಚಾರವಿನಿಮಯ ಮಾಡುವುದು, ಊರಿನ ದೇವಾಲಯಗಳಿಗೆ ಆಶ್ರಮಗಳಿಗೆ ಸಂದರ್ಶನ ನೀಡುವುದು, ಹರಿಕಥೆ ಸದ್‌ವಿಚಾರಗಳ ಕುರಿತಾಗಿ ಪ್ರವಚನ ಇವುಗಳನ್ನು ಕೇಳುವುದು ಇವೆಲ್ಲವೂ ಸತ್ಸಂಗವಾಗುತ್ತದೆ. ಅಂತಹ ಅವಕಾಶವು ದಿನದಲ್ಲಿ ಸಿಗಲಿಲ್ಲ ಎಂದಾದರೆ ಹಿರಿಯರು, ಸಂತರು ಹಾಗೂ ಪುಣ್ಯಾತ್ಮರ ಜೀವನಸಂದೇಶ ಮತ್ತು ಇನ್ನಿತರ ಸದ್ಗ್ರಂಥಗಳ ಪಠಣವೇ ಸತ್ಸಂಗವಾಗುತ್ತದೆಯಾದ್ದರಿಂದ ಹಿಂದುವು ಅದನ್ನು ತನ್ನಲ್ಲಿ ತಾನೇ ಕಲ್ಪಿಸಿಕೊಳ್ಳುತ್ತಾನೆ.

ಇತರರಿಗೆ ಉಪಕಾರವಾಗುವಂತೆ, ಶಾರೀರಿಕವಾಗಿ, ಬೌದ್ಧಿಕವಾಗಿ ಹಾಗೂ ಆರ್ಥಿಕವಾಗಿ ನೆರವಾಗುವುದೇ ಸೇವೆ ಆಗುತ್ತದೆ. ಆದರ್ಶ ಹಿಂದುವು ಒಂದಲ್ಲ ಒಂದು ರೀತಿಯಲ್ಲಿ ಸೇವೆಗೆ ಅವಕಾಶವನ್ನು ಕಲ್ಪಿಸಿಕೊಂಡು ಇಲ್ಲವೇ ದೊರೆತ ಸನ್ನಿವೇಶಗಳನ್ನುಪಯೋಗಿಸಿಕೊಂಡು ಬಳಗಕ್ಕೆ, ಸಮಾಜಕ್ಕೆ ಹಾಗು ದೇಶಕ್ಕೆ ಸೇವೆಯನ್ನು ಸಲ್ಲಿಸುತ್ತಾನೆ.

(೭) ದಿನದ ಮುಕ್ತಾಯದ ಪ್ರಾರ್ಥನೆ : ದಿನದ ಕಾರ್ಯಕ್ರಮಗಳ ಅನಂತರ ತನ್ನ ಮನೆಯಲ್ಲಿ ಭಗವಂತನ ಪ್ರಾರ್ಥನೆ, ಧ್ಯಾನಚಿಂತನೆಗಳನ್ನು ಮಾಡುವುದು, ತನ್ನ ಬಳಗದವರೊಡನೆ ಕೂಡಿಕೊಂಡು ನಾಮಸಂಕೀರ್ತನೆ, ಸದ್ವಿಚಾರಪಠಣ-ವಿಚಾರನಿರೂಪಣೆಗಳನ್ನು ನಡೆಸುವುದು ಇವುಗಳೆಲ್ಲ ದಿನದ ಮುಕ್ತಾಯದ ಪ್ರಾರ್ಥನೆಯ ಅಂಗವಾಗಿರುತ್ತದೆ. ಮುಕ್ತಾಯದ ಪ್ರಾರ್ಥನೆಯಿಂದ ದೈನಂದಿನ ಕಾರ್ಯಕ್ರಮಗಳಿಂದಾಗಿ ಅನಿವಾರ್ಯವಾಗಿ ಪಡೆದ ಅನೇಕ ಕೆಟ್ಟ ಸಂಸ್ಕಾರಗಳನ್ನು ಅಳಿಸುವಿಕೆ, ಸತ್‌ಸಂಸ್ಕಾರಗಳ ಪೋಷಣೆ, ಕಳೆದುಕೊಂಡ ಮಾನಸಿಕ ಹಾಗೂ ಆಧ್ಯಾತ್ಮಿಕ ಶಕ್ತಿಗಳ ಪುನಸ್ಸಂಚಯನ ಇವುಗಳೆಲ್ಲ ದೊರೆಯುತ್ತದೆ.

(೮) ತನ್ನ ಕುಂಟುಂಬದವರೊಡನೆ ಸಂಭಾಷಣೆ : ತನ್ನ ಕುಂಟುಂಬ ಎಂದರೆ ಹಿಂದುವಿಗೆ ಸಮಗ್ರ ಜಗತ್ ಸಂಸಾರದ ಪುಟ್ಟ ಪ್ರತೀಕದಂತೆ ಎಂದು ಹೇಳಬಹುದು. ಜೀವನದ ಕ್ರಿಯಾಶಕ್ತಿಗಳಾದ ಸದ್ಗುಣ, ಸದಾಚಾರಗಳನ್ನು ತನ್ನ ಮನೆಯಲ್ಲಿ ಮೊದಲು ಅನುಷ್ಠಾನಕ್ಕೆ ತರುವುದು ಹಿಂದೂವಿನ ಪ್ರಥಮ ಕರ್ತವ್ಯವಾಗಿರುತ್ತದೆ. ದಿನನಿತ್ಯದ ಕೆಲಸಕಾರ್ಯಗಳ ಜೊತೆಯಲ್ಲಿ ಆದರ್ಶ ಹಿಂದುವು ತನ್ನ ಬಳಗದವರೊಡನೆ ಲೌಕಿಕ ವ್ಯವಹಾರ-ನೀತಿಗಳ ಬಗ್ಗೆ ವಿಚಾರವಿನಿಮಯ ಮಾಡಿ ಮಾರ್ಗದರ್ಶನ ನೀಡಿದಂತೆ ಅವರ ಆಧ್ಯಾತ್ಮಿಕ ಉನ್ನತಿಗೆ ಅವರೊಡನೆ ತಾನೂ ಸೇರಿ ಶ್ರಮಿಸಿ ಮನೆಯವರೆಲ್ಲರ ಜೀವನಸಾರ್ಥಕತೆಗೆ ತನ್ನ ಪಾಲಿನ ನೆರವನ್ನು ನೀಡುತ್ತಾನೆ. ಇದರಿಂದ ಪರಸ್ಪರ ಪ್ರೀತಿ, ನಂಬಿಕೆ, ಸಹಕಾರಗಳು ವೃದ್ಧಿಹೊಂದುವುದಲ್ಲದೆ ವ್ಯಕ್ತಿ ಹಾಗೂ ಸಮಷ್ಟಿ ಜೀವನದಲ್ಲಿ ಹಿಂದುವು ಸುಗಮ ಹಾಗೂ ಪರಿಣಾಮಕಾರಿಯಾದ ರೀತಿಯಲ್ಲಿ ತನ್ನ ಪಾತ್ರವನ್ನು ನಿರ್ವಹಿಸಲು ಸಾಧ್ಯವಾಗುತ್ತದೆ.

(೯) ಅಂತರ್ನಿರೀಕ್ಷಣೆ : ದಿನದ ಕಾರ್ಯಕ್ರಮಗಳು ಮುಗಿದಂತೆ ಹಿಂದೂವು ತಾನು ದಿನದಲ್ಲಿ ಸಾಧಿಸಿದ್ದೇನು-ಪಟ್ಟ ಕಷ್ಟ—ಎಸಗಿದ ತಪ್ಪುಗಳು ಏನೇನು ಎಂಬುದರ ಬಗೆಗೆ ಅಂತರಂಗಶೋಧನೆ ಮಾಡಿ ಮುಂದಿನ ದಿನದ ಜೀವನ ಇನ್ನೂ ಉತ್ತಮ ಹಾಗೂ ಪರಿಣಾಮಕಾರಿಯಾಗಬೇಕೆಂದು ನಿಶ್ಚಯಿಸಿಕೊಳ್ಳುವುದನ್ನೆಲ್ಲ ಒಟ್ಟಾಗಿ ಅಂತರ್ನಿರೀಕ್ಷಣೆ ಅಥವಾ ಅಂತರಂಗದ ಪರೀಕ್ಷಣ ಎಂದು ಕರೆಯಬಹುದು. ಅಂತರಂಗಪರೀಕ್ಷಣದಿಂದ ಜೀವನಕ್ಕೆ ವಿಶೇಷವಾದ ಮೌಲ್ಯ, ದೈನಂದಿನ ಕಾರ್ಯಭಾರಗಳಿಗೆ ವ್ಯವಸ್ಥೆ ಮತ್ತು ಮಹತ್ವಗಳು ಕೂಡಿಬರುವಂತಾಗಿ ಜೀವನದ ಮುನ್ನಡೆಯು ಪ್ರಗತಿದಾಯಕವಾಗಿ ಸಾಗಲು ಅನುಕೂಲವಾಗುತ್ತದೆ.

(೧೦) ಭಗವದರ್ಪಣ—ಪ್ರಾರ್ಥನೆ : ದಿನದ ದುಡಿಮೆಯನಂತರ ಇದೀಗ ದೈನಂದಿನ ಕಾರ್ಯಕ್ರಮಗಳನ್ನು ತೀರಿಸಿ ನಿದ್ದೆಹೋಗುವ ಕಾಲ ಸಮೀಪವಾದಾಗ ಸರ್ವವೂ ಭಗವಂತನಿಗೆ ಅರ್ಪಿತ ಎಂಬ ಸಮರ್ಪಣಭಾವದಿಂದ ಆದರ್ಶ ಹಿಂದೂವು ತಾನು ದಿನದಲ್ಲಿ ಎಸಗಿದ ಕೆಲಸಕಾರ್ಯಗಳ ಫಲವನ್ನು ಹಾಗೂ ತನ್ನನ್ನು ದೇವರಿಗೆ ಅರ್ಪಿಸಿಕೊಳ್ಳುತ್ತಾನೆ. ದೇವರಿಗೆ ಏನನ್ನು ಅರ್ಪಿಸಲಾಗುವುದೋ ಅದು . ಅರ್ಪಿಸಿದವನಿಗೇ ಹೆಚ್ಚಿನ ಪ್ರಮಾಣದಲ್ಲಿ ಹಿಂದಿರುಗಿ ಬರುತ್ತದೆ ಎಂಬ ದಿವ್ಯತತ್ತ್ವವು ಈ ಭಗವದರ್ಪಣದಲ್ಲಿ ಸೇರಿರುತ್ತದೆ. ಅಲ್ಲದೆ ಭಗವಂತನನ್ನು ನಂಬಿ, ಅವನಿಗೇ ವಿಧೇಯನಾಗಿ, ಅವನ ಶಕ್ತಿಯ

ಬಲದಿಂದ ತಾನು ಬಾಳುತ್ತಿದ್ದೇನೆ ಎಂಬ ನಿರಹಂಕಾರ, ಸೌಜನ್ಯಯುತವಾದ ದೃಷ್ಟಿ ಮತ್ತು ವ್ಯವಹಾರಗಳಿಂದ ಜೀವನಕ್ಕೆ ವಿಶೇಷವಾದ ಬೆಳಕು ಹಾಗೂ ಶಕ್ತಿಗಳು ಬರುತ್ತವೆ ಎನ್ನುವ ಇನ್ನೊಂದು ತತ್ತ್ವವು ಭಗವದರ್ಪಣವಿಚಾರದಲ್ಲಿ ಅಡಗಿರುತ್ತದೆ. ಸರ್ವವೂ ಭಗವಂತನಿಂದ ಆವೃತವಾಗಿರುವುದರಿಂದ ಜಗತ್ತಿನಲ್ಲಿ ತನ್ನದೆನ್ನುವುದು ಯಾವುದೂ ಇಲ್ಲ ಎಂಬ ನಿಯಮ—ನಿರಹಂಕಾರ ಭಾವವೂ ಈ ಭಗವದರ್ಪಣ ವಿಚಾರದಲ್ಲಿ ಅಡಗಿರುತ್ತದೆ.

ಹೀಗೆ ಹಿಂದೂವಿನ ಜೀವನದಲ್ಲಿ ದಿನನಿತ್ಯವೂ ಈ ಹತ್ತು ಅಂಶಗಳು ಸೇರಿದ್ದು ಯಾವುದೇ ಪರಿಸ್ಥಿತಿ, ಸನ್ನಿವೇಶಗಳಲ್ಲಿ ಹಿಂದೂವು ಇದ್ದರೂ ಕೂಡ ಆಚರಿಸಲು ಸಾಧ್ಯವಾಗುವವುಗಳಾಗಿವೆ ಎನ್ನುವುದು ಅನುಭವಸತ್ಯವಾದ ಸಂಗತಿಯಾಗಿದೆ. ಹಿಂದೂವು ನಿದ್ದೆಯಿಂದ ಎಚ್ಚೆತ್ತು ಆ ದಿನದ ಅವನ ಕೆಲಸಕಾರ್ಯಗಳು ಆರಂಭವಾದಾಗ ಅವನ ಮಟ್ಟಿಗೆ ದಿವಸವು ಆರಂಭವಾಗಿ ಪುನಃ ನಿದ್ದೆಹೋಗುವಾಗ ಆ ದಿನವು ಮುಕ್ತಾಯವಾಗುತ್ತದೆ ಎಂದು ಈ ಕಾರ್ಯಕ್ರಮಗಳ ಸಂಬಂಧದಲ್ಲಿ ನೆನಪಿಡಬೇಕಾದ ಅಂಶವಾಗಿದೆ. ಇದರಿಂದಾಗಿ ಈ ಹಿಂದೆ ಪ್ರಸ್ತಾಪಿಸಿದ ಮೂರು ವರ್ಗದ ಜನರೂ ಕೂಡ ಈ ಕಾರ್ಯಕ್ರಮಗಳನ್ನು ತಮ್ಮ ದಿನಚರಿಯಲ್ಲಿ ಅಳವಡಿಸಿಕೊಂಡು ಪ್ರಾಮಾಣಿಕವಾಗಿ ಪ್ರಯತ್ನಮಾಡಿದರೆ ಆದರ್ಶವಾಗಿ ಜೀವನವನ್ನು ನಿರ್ವಹಿಸಲು ಸಾಧ್ಯವಾಗುವುದು.

### ಹಿಂದೂವಿನ ಮನೆಯಲ್ಲಿರಬೇಕಾದ ಪರಂಪರಾನುಗತ ಆಚಾರವಿಚಾರಗಳು

ಯಾವ ವ್ಯಕ್ತಿಯೇ ಆಗಲಿ ಅವನ ಗುಣಯೋಗ್ಯತೆಗಳು ಅವನವನ ಕರ್ಮಗಳಿಂದಾಗಿ ಇತರರಿಗೆ ತಿಳಿದುಬರುತ್ತವೆ. ನುಡಿಯುವ ನುಡಿ ಮತ್ತು ಅದರಂತೆ ಜೀವವದಲ್ಲಿ ಆಚರಣೆ ಇರದಿದ್ದರೆ ಬದುಕು ಹಿತಕರವಾಗಲಾರದು ಮಾತ್ರವಲ್ಲದೆ, ಪರಿಣಾಮಕಾರಿಯೂ ಸಾರ್ಥಕವೂ ಆಗಲಾರದು. ತಾನು ವಾಸಮಾಡುವ ಮನೆ ಮತ್ತು ಬಳಗ ಇವುಗಳ ವ್ಯಾಪ್ತಿಯ ಒಳಗೆ ಜೀವನದ ಉತ್ತಮ ಹಾಗು ಉದಾತ್ತಧ್ಯೇಯಗಳ ಪ್ರಯೋಗವು ಯಶಸ್ವಿಯಾಗಿ ಅನುಷ್ಠಾನಕ್ಕೆ ಬಂದರೆ ಆಗ ಅದರಿಂದ ವ್ಯಕ್ತಿಯ ಜೀವನ ಹಿತಕರವಾಗುವುದಲ್ಲದೆ ತನ್ಮೂಲಕ ಸಮಾಜದ ಜೀವನದ ಯೋಗ್ಯತೆ ವರ್ಧಿಲು ಸಹಾಯಕವಾಗುತ್ತದೆ. ಕೆಲವೊಂದು ವಸ್ತುಗಳು-ವ್ಯವಸ್ಥೆಗಳು, ಆಚಾರವಿಶೇಷಗಳು ಜೀವನದ ಹಿರಿ ಆದರ್ಶಗಳ ಸಾಧನೆಗೆ ಸಹಕಾರಿಯಾಗುವ ಸಮರ್ಥವಾದ ಸಾಧನಗಳಾಗಿದ್ದು ಬಾಳಿನಲ್ಲಿ ಉಪಯೋಗಕ್ಕೆ ಬರುತ್ತವೆ ಎನ್ನುವುದು ಅನುಭವಸತ್ಯವಾದ ಸಂಗತಿಯಾಗಿದೆ. ಆದರ್ಶ ಹಿಂದೂವಿಗೆ ಸಹಾಯಕವಾಗುವ ಮತ್ತು ಆದರ್ಶ ಹಿಂದೂವಾಗಿ ಜೀವನವನ್ನು ನಡೆಸಲು ಆಗತ್ಯವಾದ ಉಪಯೋಗಕ್ಕೆ ಬರುವ ವಸ್ತುಗಳು—ವ್ಯವಸ್ಥೆಗಳು ಇಷ್ಟೇ ಎಂದಾಗಲಿ, ಇವೇ ಎಂದಾಗಲಿ ಎಲ್ಲವನ್ನೂ ನಿಗದಿಮಾಡಿ ಹೇಳಲು ಸಾಧ್ಯವಿಲ್ಲ. ಜೀವನದಲ್ಲಿ ಹಿಂದೂವು ಅನುಸರಿಸುವ ಸಾಧನಾಮಾರ್ಗ, ಜೀವನದ ಕುರಿತಾಗಿ ತಳೆದಿರುವ ದೃಷ್ಟಿ ಇವುಗಳನ್ನು ಹೊಂದಿಕೊಂಡು ಒಬ್ಬರಿಗೆ ಸಹಕಾರಿಯಾದುದು ಇನ್ನೊಬ್ಬರಿಗೆ ಉಪಯುಕ್ತವಲ್ಲ ಎಂದು ತೋರಬಹುದು. ಒಂದು ಮನೆಯ ಸಂಸಾರದಲ್ಲಿ ಇರುವವರೆಲ್ಲರೂ ಒಂದೇ ರೀತಿಯ ಮಾನಸಿಕ ದೃಷ್ಟಿ, ಜೀವನ ವಿಧಾನ, ಅಧ್ಯಾತ್ಮವಾದ

ಸಾಧನಾಕ್ರಮವನ್ನು ಅನುಸರಿಸಲು ಸಾಧ್ಯವಾಗಲಾರದು. ಅಷ್ಟುಮಾತ್ರವಲ್ಲದೆ ಮನೆಯವರೆಲ್ಲರೂ ಒಂದೇ ಮಟ್ಟದ ವ್ಯಕ್ತಿತ್ವದ ವಿಚಾರ ಹೊಂದಿರುವವರು ಎಂದೂ ಹೇಳಲು ಸಾಧ್ಯವಿಲ್ಲ. ಹಾಗಾಗಿ ತೀರ ಸರಳ ಹಾಗು ಆರಂಭಮಟ್ಟದ ವಸ್ತು–ವಿಚಾರಗಳೆಂದು ಹಿರಿಯರು ಹಾಗು ಸಾಧನೆಯಲ್ಲಿ ಮುಂದುವರಿದವರಿಗೆ ಕಂಡುಬರುವ ಸಂಗತಿಗಳು ಅವರ ಮಟ್ಟಕ್ಕೆ ಏರದವರಿಗೆ ಹಿರಿದಾಗಿರುವುದೆಂದು ಕಂಡುಬರಲು ಸಾಧ್ಯವಿದೆ: ಅಷ್ಟುಮಾತ್ರವಲ್ಲದೆ ಅವರಿಗೆ ಅವುಗಳು ಅಗತ್ಯ ಎಂದೂ ಕಂಡುಬರುತ್ತದೆ. ಹಾಗಾಗಿ ಭಿನ್ನಭಿನ್ನಪ್ರಕೃತಿಯಿಂದ ಕೂಡಿದ ತನ್ನ ಮನೆಯ ಸಂಸಾರದವರೆಲ್ಲರ ಹಿತದೃಷ್ಟಿಯಿಂದ ಆದರ್ಶ ಹಿಂದುವು ಕೆಲವೊಂದು ವಸ್ತು-ವಿಚಾರ-ವ್ಯವಸ್ಥೆಗಳ ಕುರಿತು ಮನೆಯಲ್ಲಿ ಅನುಕೂಲ ಮಾಡಿಕೊಂಡಿರಲೇಬೇಕಾದುದು ಅನಿವಾರ್ಯ ಹಾಗು ಅಗತ್ಯ. ಉದಾಹರಣೆಗೆ ಹೇಳುವುದಾದರೆ ಆದರ್ಶ ಹಿಂದೂವಿನ ಮನೆಯಲ್ಲಿ ಪ್ರಾರ್ಥನಾಕೋಣೆಯೊಂದು ಇರಲೇಬೇಕು. ಮನೆಯಲ್ಲಿರುವವರಲ್ಲಿ ಕೆಲವರು ಧ್ಯಾನಯೋಗಿಗಳಾಗಿರಬಹುದು. ಹಾಗೆಯೇ ಇನ್ನು ಕೆಲವರು ಮಾನಸಿಕವಾಗಿಯೇ ದೇವತಾರಾಧನೆ ಮಾಡುತ್ತಿರುವ ಮುಂದುವರಿದ ಸಾಧಕರಿರಬಹುದು. ಅವರಿಗೆಲ್ಲಾ ಪ್ರಾರ್ಥನಾಮಂದಿರದ ಅಗತ್ಯವಿರಬಾರದು ಎನ್ನುವುದು ನಿಜವೇ ಆದರೂ ಮನೆಯಲ್ಲಿ ಇರುವ ಇತರರ ಹಿತದೃಷ್ಟಿಯಿಂದ ಪ್ರಾರ್ಥನಾಮಂದಿರ ಅಗತ್ಯ. ಬೆಳೆದುಬರುತ್ತಿರುವ ಮನೆಯ ಮಕ್ಕಳ ದೃಷ್ಟಿಯಿಂದ ತನ್ನ ಸಮಾಜದಲ್ಲಿ ಇನ್ನೂ ಸಾಕಷ್ಟು ಧಾರ್ಮಿಕ ವಿಚಾರದಲ್ಲಿ ವಿಕಾಸಹೊಂದದೇ ಇರುವ ತನ್ನ ಬಳಗದವರ ಹಿತದೃಷ್ಟಿಯಿಂದ ಆದರ್ಶ ಹಿಂದೂವಿನ ಮನೆಯಲ್ಲಿ ಪ್ರಾರ್ಥನಾಮಂದಿರ ಅತ್ಯಂತ ಅಗತ್ಯ. ಹೀಗೆಯೇ ಇತರ ಕೆಲವು ಮುಖ್ಯವಾದ ವಸ್ತು–ಆಚರಣಾವ್ಯವಸ್ಥೆಗಳು ಆದರ್ಶ ಹಿಂದೂವಿನ ಮನೆಯಲ್ಲಿ ಮತ್ತು ಜೀವನದಲ್ಲಿ ತನ್ನ ಹಾಗು ಇತರರ ಹಿತದೃಷ್ಟಿಯಿಂದ ಇರಲೇಬೇಕಾಗುತ್ತದೆ. ಅವುಗಳಲ್ಲಿ ಮುಖ್ಯವಾದುದು ಯಾವುದೆಂದರೆ:

(೧) ಪ್ರಾರ್ಥನಾಮಂದಿರ ಅಥವಾ ದೇವರ ಕೋಣೆ. (೨) ಶ್ರೀಮದ್ ಭಗವದ್ಗೀತಾ ಗ್ರಂಥ. (೩) ಶ್ರೀಮದ್ ರಾಮಾಯಣ, ಶ್ರೀಮನ್ ಮಹಾಭಾರತ, ಶ್ರೀಮದ್ ಭಾಗವತ ಮತ್ತು ಇತರ ಕೆಲವು ಉತ್ತಮ ಧಾರ್ಮಿಕ ಗ್ರಂಥಗಳು. (೪) ಗುರುಗಳು, ಕುಲದೇವತೆ, ಇಷ್ಟದೇವತೆ, ಸಾಧುಸಂತರು, ರಾಷ್ಟ್ರವೀರರು, ಮಹಾತ್ಮರು, ಪುಣ್ಯಕ್ಷೇತ್ರಗಳು ಇವುಗಳ ಚಿತ್ರಗಳು. (೫) ಮನೆಯ ಮುಂದುಗಡೆ ತುಲಸೀಕಟ್ಟೆ. (೬) ಗಂಗಾತೀರ್ಥ. (೭) ವರ್ಷದಲ್ಲಿ ಕಡಿಮೆ ಪಕ್ಷಕ್ಕೆ ಮೂರು ಧಾರ್ಮಿಕ ವ್ರತಗಳ ಯಥಾಶಕ್ತಿ ಆಚರಣೆ. (೮) ಮುಖ್ಯವಾದ ಕೆಲವು ಹಿಂದೂ ವ್ರತ-ಹಬ್ಬಗಳ ಆಚರಣೆ. (೯) ಸುಪ್ರಸಿದ್ಧವಾದ ಪವಿತ್ರ ಹಿಂದೂ ತೀರ್ಥಕ್ಷೇತ್ರಗಳಿಗೆ ಕುಟುಂಬಸಹಿತವಾಗಿ ಯಾತ್ರೆಹೋಗುವುದು. (೧೦) ಯಥಾಶಕ್ತಿಯಾಗಿ ದಿನಂಪ್ರತಿ ದಾನಧರ್ಮಗಳನ್ನು ಮಾಡಲು ವ್ಯವಸ್ಥೆ.

ಹೀಗೆ ಈ ವಿಚಾರಗಳನ್ನು ಹಿಂದುವು ಬಾಳಿನಲ್ಲಿ ಅಳವಡಿಸಿ ಅನುಷ್ಠಾನಮಾಡಿದರೆ ಅವನ ಬದುಕು ಆದರ್ಶವಾಗಿ ಈ ಆಧುನಿಕ ಯುಗದಲ್ಲೂ ಕೂಡ ಅರ್ಥಪೂರ್ಣವೂ, ಸಾರ್ಥಕಸಂಪನ್ನವೂ ಆಗಲು ಸಾಧ್ಯವಿದೆ.

# ೧೫

# ಹಿಂದೂಧರ್ಮವು ಸಾಗಿಬಂದ ದಾರಿ

## (ವೇದಕಾಲದಿಂದ ಆಧುನಿಕ ಕಾಲದವರೆಗೆ)

---

ಸನಾತನ ಹಿಂದೂಧರ್ಮವು ವೇದಕಾಲದಿಂದ ಆಧುನಿಕ ಕಾಲದವರೆಗೆ ವಿವಿಧ ಕಾಲ ಘಟ್ಟಗಳಲ್ಲಿ ಹೇಗೆ ಬೆಳಗಿ, ಸಾಗಿಬಂದಿದೆ ಎಂಬುದರ ಪರಿಶೀಲನೆಯಿಂದ, ಅದರ ವಿವಿಧ ಮುಖಗಳ ಪರಿಚಯವು ಪರಿಣಾಮಕಾರಿಯಾಗಿ ತಿಳಿದುಬರುತ್ತದೆ. ವೇದಕಾಲದಿಂದ ಆಧುನಿಕ ಕಾಲದವರೆಗಿನ ಕಾಲವನ್ನು, ಹಿಂದೂಧರ್ಮವು ಸಾಗಿಬಂದ ವಿವರಗಳನ್ನು ತಿಳಿಯುವುದಕ್ಕೆ ಅನುಕೂಲವಾಗುವಂತೆ ಸಾಮಾನ್ಯವಾಗಿ ಏಳು ಘಟ್ಟಗಳಾಗಿ ವಿಭಾಗಿಸಬಹುದು :

(೧) ವೇದಗಳ ಕಾಲ : ಕ್ರಿ.ಪೂ. ೫೦೦೦ದಿಂದ ಕ್ರಿ.ಪೂ. ೫೦೦ರ ವರೆಗೆ (ಮಂತ್ರಗಳು, ಬ್ರಾಹ್ಮಣಗಳು, ಉಪನಿಷತ್ತುಗಳು).

(೨) ವೇದಾಂಗಗಳ ಮತ್ತು ಕಲ್ಪಸೂತ್ರಗಳ ಕಾಲ: ಕ್ರಿ.ಪೂ. ೬೦೦ರಿಂದ ಕ್ರಿ.ಪೂ. ೨೦೦ರವರೆಗೆ.

(೩) ಇತಿಹಾಸಗಳ ಮತ್ತು ದರ್ಶನಗಳಕಾಲ: ಕ್ರಿ.ಪೂ. ೫೦೦ರಿಂದ ಕ್ರಿ.ಶ. ೧೦೦ರ ವರೆಗೆ

(೪) ಆಗಮಗಳ ಕಾಲ : ಕ್ರಿ.ಪೂ. ೫೦೦ರಿಂದ ಕ್ರಿ.ಶ. ೬೫೦ರ ವರೆಗೆ

(೫) ಆಚಾರ್ಯರ ಕಾಲ : ಕ್ರಿ.ಶ. ೬೫೦ರಿಂದ ಕ್ರಿ.ಶ. ೧೦೦೦.

(೬) ಭಕ್ತಿಪಂಥ, ಮತಾಚಾರ್ಯರ ಕಾಲ : ಕ್ರಿ.ಶ. ೧೦೦೦ದಿಂದ ಕ್ರಿ.ಶ. ೧೬೫೦

(೭) ಸುಧಾರಣಾ ಚಳವಳಿಗಳ ಕಾಲ : ಕ್ರಿ.ಶ. ೧೬೫೦ರಿಂದ ಕ್ರಿ.ಶ. ೧೯೫೦.

**ವೇದಗಳ ಕಾಲ**

ವೇದಗಳ ಕಾಲದಲ್ಲಿ ಅನುಕೂಲಕ್ಕಾಗಿ ಮೂರು ಒಳವಿಭಾಗಗಳನ್ನು ಮಾಡಿ ಮಂತ್ರಗಳು, ಬ್ರಾಹ್ಮಣಗಳು, ಉಪನಿಷತ್ತುಗಳು—ಇವುಗಳ ರಚನಾಕಾಲ ಎಂದು ನಿಶ್ಚಯಿಸಿ

ಕೊಳ್ಳಬಹುದು. ವೇದಗಳ ಕಾಲದ ಬಗೆಗೆ ಇತಿಹಾಸತಜ್ಞರು ಸಾಕಷ್ಟು ಪರಿಶೀಲಿಸಿ ನಿರ್ಧಾರಕ್ಕೆ ಬಂದಿರುತ್ತಾರೆ. ಆದರೆ ಈ ಅಂತಿಮನಿರ್ಧಾರವಿದೇ ಎಂದು ಹೇಳುವಂತಿಲ್ಲ.

ವೇದಗಳ ಕಾಲದಲ್ಲಿ ಯಜ್ಞಯಾಗಾದಿಗಳ ಮೂಲಕ ಅಗ್ನಿ, ಇಂದ್ರ, ವರುಣ, ವಾಯು ಮುಂತಾದ ದೇವತೆಗಳ ಪೂಜೆ ನಡೆಯುತ್ತಿತ್ತು. 'ಏಕಂ ಸತ್ ವಿಪ್ರಾ ಬಹುಧಾ ವದಂತಿ' ಎಂಬ ವೇದೋಕ್ತಿಯಂತೆ (ಇರುವುದೊಂದೇ ಸತ್ಯ, ಜ್ಞಾನಿಗಳು ಅದನ್ನು ಬಹುವಿಧವಾಗಿ ಹೇಳುತ್ತಾರೆ.), ದೇವತೆಗಳು ವಿವಿಧವಾದರೂ ದೇವರು ಒಬ್ಬನೇ ಎಂಬ ನಿಶ್ಚಯವು ಈ ಕಾಲದಲ್ಲಿ ಸ್ಪಷ್ಟವಾಗಿ ನೆಲೆಸಿನಿತಿತ್ತು. ಕ್ರಿ.ಪೂ. ೫೦೦೦ ದಿಂದ ೩೦೦೦ದ ಕಾಲಾವಧಿ ಒಳಗೆ ಮೊದಲು ಋಗ್ವೇದವು ರೂಪತಳೆದು ಅನಂತರ ಯಜುರ್ವೇದ, ಸಾಮವೇದ, ಅಥರ್ವವೇದ ಎಂಬ ಬೇರೆ ಬೇರೆ ವೇದಭಾಗಗಳು ಬೆಳಕಿಗೆ ಬಂದವು. ವಿಷ್ಣು, ರುದ್ರರು ಈ ಕಾಲದಲ್ಲಿ ಮುಖ್ಯ ದೇವತೆಗಳಾಗಿ ಪೂಜಿಸಲ್ಪಡುತ್ತಿದ್ದರು.

ಈ ಕಾಲದಲ್ಲಿ ವಿಶ್ವಾಮಿತ್ರ, ವಾಮದೇವ, ಕಶ್ಯಪ, ಅತ್ರಿ, ಭರದ್ವಾಜ, ವಸಿಷ್ಠ, ಐತರೇಯ, ಶಾಂಡಿಲ್ಯ, ಪಿಪ್ಪಲಾಯ ಎಂಬ ಮಹರ್ಷಿಗಳು ಪ್ರಸಿದ್ಧರಾದ ಮಹಾ ಪುರುಷರಾಗಿ ಬಾಳಿದವರಾಗಿರುತ್ತಾರೆ. ಇವರು ವೇದೋಕ್ತವಾದ ಯಜ್ಞಯಾಗಾದಿ ಗಳನ್ನು, ತತ್ತ್ವವಿಚಾರಗಳನ್ನು ಅನುಷ್ಠಾನಮಾಡಿಕೊಂಡುಬಂದದ್ದು ಮಾತ್ರವಲ್ಲದೆ ತಮ್ಮ ಆದರ್ಶವಾದ ದಿವ್ಯಜೀವನದಿಂದ ಪ್ರಸಿದ್ಧರಾಗಿ ಮಹಾಪುರುಷರೆಂಬ ಗೌರವಕ್ಕೆ ಪಾತ್ರರಾಗಿರುತ್ತಾರೆ. ವೇದಮಂತ್ರಗಳು, ಆರಣ್ಯಕಗಳು ಇವೆಲ್ಲ ಈ ಕಾಲದಲ್ಲಿ ರೂಪು ಗೊಂಡವು. ಜೊತೆಯಲ್ಲೇ ಉಪನಿಷತ್ತುಗಳೂ ರೂಪುಗೊಳ್ಳಲು ಆರಂಭವಾದುವು.

ಕ್ರಿ.ಪೂ. ೩೦೦೦ ದಿಂದ ಕ್ರಿ.ಪೂ. ೫೦೦ರ ವರೆಗಿನ ಕಾಲಭಾಗದಲ್ಲಿ ಉಪನಿಷತ್ತು ಗಳಲ್ಲಿ ಪ್ರತಿಪಾದ್ಯವಾದ ತತ್ತ್ವಗಳ ಪ್ರಚಾರವಾಯಿತು. ಮುಖ್ಯವಾದ ಈಶ, ಕೇನ, ಕಠ ಇತ್ಯಾದಿ ದಶ ಉಪನಿಷತ್ತುಗಳು ಈ ಕಾಲದಲ್ಲಿ ರೂಪುಗೊಂಡವು. ಹಾಗೆಯೇ ವೇದಗಳು ಪುನಃ ಅವತರಿಸಿ ರೂಪುಗೊಂಡ ಗ್ರಂಥಗಳು ಎಂದು ಮಾನ್ಯವಾಗಿರುವ ರಾಮಾಯಣ ಮತ್ತು ಪಂಚಮ ವೇದವೆಂದು ಕರೆಯಲ್ಪಡುವ ಶ್ರೀಮನ್ಮಹಾಭಾರತ ಕಾವ್ಯಗ್ರಂಥಗಳು ಈ ಕಾಲದಲ್ಲಿ ಬಾಯ್ದೆರೆಯಾಗಿ ಹಾಡುವ ವಿಧಾನದ ಮೂಲಕ ಪ್ರಚಾರಕ್ಕೆ ಬಂದುವು.

ಯಾಜ್ಞವಲ್ಕ್ಯ, ಸನತ್ಕುಮಾರ ಮೊದಲಾದ ಉಪನಿಷತ್ತಿನ ಋಷಿಗಳು, ಗಾರ್ಗಿ, ಮೈತ್ರೇಯಿ ಮೊದಲಾದ ಬ್ರಹ್ಮವಾದಿನಿಯರು, ಮಹರ್ಷಿ ವಾಲ್ಮೀಕಿ, ಮಹರ್ಷಿ ವೇದವ್ಯಾಸ, ರಾಜರ್ಷಿ ಜನಕ ಇವರೇ ಮೊದಲಾದವರೆಲ್ಲ ಈ ಕಾಲದಲ್ಲಿ ಬಾಳಿ ಬೆಳಗಿದ ಮಹಾಪುರುಷರಾಗಿರುತ್ತಾರೆ.

ಭಗವಾನ್ ಬುದ್ಧ ಮತ್ತು ಭಗವಾನ್ ಮಹಾವೀರಸ್ವಾಮಿ ಇವರುಗಳು ಬೆಳಗಿ ಬಾಳಿ ತಮ್ಮ ತಮ್ಮ ಧರ್ಮಗಳನ್ನು ಈ ಕಾಲಘಟ್ಟದಲ್ಲಿ ಪ್ರಸರಿಸಿರುತ್ತಾರೆ.

**ವೇದಾಂಗಗಳ ಮತ್ತು ಕಲ್ಪಸೂತ್ರಗಳ ಕಾಲ (ಕ್ರಿ.ಪೂ. ೬೦೦ ರಿಂದ ೨೦೦ರ ವರೆಗೆ)**

ಈ ಕಾಲಘಟ್ಟದಲ್ಲಿ ವೇದಾಂಗಗಳು ರೂಪುಗೊಂಡುವು. ಅಲ್ಲದೆ ಯಾಸ್ಕ ಮತ್ತು ಪಾಣಿನಿಯರ ವ್ಯಾಕರಣಸೂತ್ರ ಗ್ರಂಥಗಳೂ ರಚನೆಗೊಂಡುವು. ಮಾತ್ರವಲ್ಲದೆ

ಬೋಧಾಯನ ಆಪಸ್ತಂಭ, ಆಶ್ವಲಾಯನ ಇತ್ಯಾದಿ ಶ್ರೌತ ಮತ್ತು ಗೃಹ್ಯಸೂತ್ರಗಳು ಈ ಕಾಲದಲ್ಲಿ ಸಿದ್ಧಪೂರ್ಣಗೊಂಡವು. ಈ ಕಾಲಮಾನದ ಕೊನೆಯ ಭಾಗದಲ್ಲಿ ಬೌದ್ಧಧರ್ಮವು ಹೊರದೇಶಗಳಲ್ಲೂ ಪ್ರಚಾರಗೊಳ್ಳುವಂತಾಯಿತು. ಜೈನಧರ್ಮವು ದಕ್ಷಿಣ ಭಾರತದಲ್ಲಿ ಪ್ರಚಾರಗೊಂಡಿತು. ಎರಡು ಮತಗಳಿಗೆ ಸಂಬಂಧಿಸಿದ ವಿಪುಲವಾದ ಧಾರ್ಮಿಕ ಸಾಹಿತ್ಯಗಳು ಈ ಸಮಯದಲ್ಲಿ ರಚನೆಯಾದುವು. ಬೋಧಾಯನ, ಆಶ್ವಲಾಯನ, ಆಪಸ್ತಂಭ, ಗೌತಮ ಮೊದಲಾದ ಮಹರ್ಷಿಗಳು ಈ ಕಾಲದ ಮಹಾಪುರುಷರು.

**ಪುರಾಣ, ಇತಿಹಾಸಗಳ ಹಾಗೂ ದರ್ಶನಗಳ ಕಾಲ** (ಕ್ರಿ.ಪೂ. ೫೦೦–ಕ್ರಿ.ಶ. ೧೦೦)

ಈ ಕಾಲಾವಧಿಯಲ್ಲಿ ಹಿಂದೂಧರ್ಮದ ವಿವಿಧ ಸ್ವರೂಪಗಳಲ್ಲಿ ವಿಶೇಷವಾದ ಬೆಳವಣಿಗೆಯು ಆಯಿತು. ಈ ಕಾಲಭಾಗದಲ್ಲಿ ಪುರಾಣಗಳು ಪರಿಷ್ಕರಿಸಲ್ಪಟ್ಟು ಗ್ರಂಥ ರೂಪವನ್ನು ತಾಳಿದವು. ಧರ್ಮಶಾಸ್ತ್ರಗ್ರಂಥಗಳು ಈ ಕಾಲದಲ್ಲಿ ರಚನೆಯಾಗಿ ಮನು ಸ್ಮೃತಿ, ಯಾಜ್ಞವಲ್ಕ್ಯಸ್ಮೃತಿ ಮೊದಲಾದ ಸ್ಮೃತಿಗ್ರಂಥಗಳು ಬೆಳಕಿಗೆ ಬಂದುವು. ಅಲ್ಲದೆ ನ್ಯಾಯ, ಸಾಂಖ್ಯ, ವೈಶೇಷಿಕಾದಿ ಆರು ದರ್ಶನಗಳು ಈ ಕಾಲಾವಧಿಯಲ್ಲಿ ಹುಟ್ಟಿ ಕೊಂಡುವು. ಮಾತ್ರವಲ್ಲದೆ, ಬಾದರಾಯಣ ಮಹರ್ಷಿಗಳಿಂದ ಪ್ರಣೀತವಾದ ವೇದಾಂತಸೂತ್ರ(ಬ್ರಹ್ಮಸೂತ್ರ)ಗಳೂ, ಪತಂಜಲಿ ಮಹರ್ಷಿಗಳ ಮಹಾಭಾಷ್ಯವೂ ಈ ಕಾಲದಲ್ಲಿ ರಚಿಸಲ್ಪಟ್ಟವು. ಮಹರ್ಷಿ ಮನು, ಗೌತಮಮಹರ್ಷಿ, ಕಪಿಲಮಹರ್ಷಿ, ಜೈಮಿನಿ ಮಹರ್ಷಿ, ಕಣಾದ ಮಹರ್ಷಿ, ಪತಂಜಲಿ ಮಹರ್ಷಿ ಇತ್ಯಾದಿ ಮಹಾ ಪುರುಷರು ಈ ಕಾಲದಲ್ಲಿ ಬಾಳಿ ಬೆಳಗಿರುತ್ತಾರೆ. ಈ ಕಾಲಾವಧಿಯಲ್ಲಿ ಇತಿಹಾಸ ಎಂದು ಪ್ರಸಿದ್ಧವಾಗಿರುವ ರಾಮಾಯಣ-ಮಹಾಭಾರತಗಳು ಗ್ರಂಥರೂಪತಾಳಿ ಹೆಚ್ಚು ಪ್ರಸಾರಗೊಂಡು ಜನಪ್ರಿಯವಾದುವು.

**ಆಗಮಗಳ ಕಾಲ** (ಕ್ರಿ.ಪೂ. ೫೦೦ ರಿಂದ ಕ್ರಿ.ಶ. ೬೫೦ರವರೆಗೆ)

ಶೈವ, ವೈಷ್ಣವ ಇತ್ಯಾದಿ ಧಾರ್ಮಿಕ ಪಂಥಗಳು ಈ ಕಾಲಭಾಗದಲ್ಲಿ ಬೆಳೆದು ಪ್ರಸಿದ್ಧವಾದುವು. ವೇದೋಪನಿಷತ್ತುಗಳಲ್ಲಿ ಹೇಳಿದ ಆಧ್ಯಾತ್ಮಿಕ ವಿಚಾರಗಳನ್ನು ಪುರಾಣಗಳ ಮೂಲಕ ಜನಪ್ರಿಯವಾಗಿ ಮಾಡಲಾಯಿತು. ಸಾಮೂಹಿಕ ಪೂಜೆ, ದೇವಸ್ಥಾನಗಳ ನಿರ್ಮಾಣ ಇವುಗಳೆಲ್ಲ ಈ ಕಾಲಾವಧಿಯಲ್ಲಿ ಆಚರಣೆಗೆ ಬಂದುವು. ಶೈವ, ವೈಷ್ಣವ ಇತ್ಯಾದಿ ಆಗಮಗ್ರಂಥಗಳು ಈ ಕಾಲಘಟ್ಟದಲ್ಲಿ ನಿರ್ಮಾಣವಾಗಿ ದೇಶದಲ್ಲಿ ಪ್ರಚುರಗೊಂಡುವು. ವೇದದ ಕರ್ಮಕಾಂಡದ ರೀತಿಯ ಜೀವನ, ಇನ್ನೊಂದೆಡೆ ಬೌದ್ಧ ಮತ್ತು ಜೈನಧರ್ಮದಂತೆ ಜನರು ಮತಾಚರಣೆ ಮಾಡುವಿಕೆ, ಮತ್ತೊಂದೆಡೆ ಆಗಮೋಕ್ತ ಧರ್ಮಾಚರಣೆಗಳು––ಹೀಗೆ ಹಿಂದೂಧರ್ಮದ ವಿಚಾರವಾಗಿ ಹಲವು ರೀತಿಯ ಅಭಿಪ್ರಾಯ, ಆಚರಣೆಗಳು ದೇಶದಲ್ಲಿ ತಲೆಯೆತ್ತಿ ನೆಲೆನಿಂತವು. ಭಾರತದಿಂದ ವಸಾಹತುಗಾರರು ಕಾಂಬೋಡಿಯಾ, ಸುಮಾತ್ರಾ, ಜಾವಾ, ಬಾಲಿ ಇತ್ಯಾದಿ ಹೊರ ದೇಶಗಳಿಗೆ ತೆರಳಿ ಹಿಂದೂ ಮತ್ತು ಬೌದ್ಧ ಧರ್ಮಗಳ ಪ್ರಚಾರವನ್ನು ಮಾಡಿದರು.

ಧರ್ಮಕೀರ್ತಿ, ಬೌದ್ಧಘೋಷ, ಜ್ಞಾನಸಂಬಂಧರ್, ಅಪ್ಪರ್ ಮೊದಲಾದವರು— ಈ ಕಾಲದ ಪ್ರಸಿದ್ಧ ಮಹಾಪುರುಷರು.

**ಆಚಾರ್ಯರುಗಳ ಕಾಲ (ಕ್ರಿ.ಶ. ೬೫೦ ರಿಂದ ೧೦೦೦ದ ವರೆಗೆ)**

ಪುರಾಣ ಮತ್ತು ಆಗಮಗಳ ಕಾಲದಲ್ಲಿ, ಹಿಂದೂಧರ್ಮದ ವಿವಿಧ ಪ್ರಕಾರಗಳಲ್ಲಿ ಉಂಟಾದ ಬದಲಾವಣೆ–ಬೆಳವಣಿಗೆಗಳಿಂದಾಗಿ ಧರ್ಮದ ವಿಚಾರದಲ್ಲಿ ಒಂದು ರೀತಿಯ ಗೊಂದಲ, ಸಂದಿಗ್ಧತೆ ದೇಶದಲ್ಲಿ ತಲೆಯೆತ್ತಿತ್ತು. ವೇದದ ಕರ್ಮಕಾಂಡ, ದರ್ಶನ ಶಾಸ್ತ್ರ, ಆಗಮಗಳು, ಜೈನ, ಬೌದ್ಧಮತ—ಹೀಗೆ ವಿವಿಧ ಅಭಿಪ್ರಾಯಗಳು ದೇಶದಲ್ಲಿ ಉತ್ಪತ್ತಿಯಾಗಿ ಹಿಂದೂತತ್ತ್ವ ಅನುಷ್ಠಾನವಿಚಾರಗಳಲ್ಲಿ ವಿಪರೀತವಾದ ಸಂಶಯ, ಚರ್ಚೆ ಹಾಗು ತತ್ಪರಿಣಾಮದ ಗೊಂದಲಗಳುಂಟಾದುವು. ಅಂತಹ ಸಂದಿಗ್ಧತೆಯ ಸನ್ನಿವೇಶದಲ್ಲಿ ಹಿಂದೂಧರ್ಮಕ್ಕೆ ಒಂದು ಸರಿಯಾದ ಸ್ವರೂಪವನ್ನು ನೀಡಿ ಅದನ್ನು ಭದ್ರವಾದ ಬುನಾದಿಯ ಮೇಲೆ ನಿಲ್ಲಿಸಿದ ಮಹಾಮಹಿಮರಾದ ಜಗದ್ಗುರು ಶ್ರೀ ಶಂಕರಾಚಾರ್ಯರು ಈ ಕಾಲಾವಧಿಯಲ್ಲಿ ಅವತರಿಸಿ ಹಿಂದೂಧರ್ಮದ ಉದ್ಧಾರ ಮಾಡಿದರು. ಇವರ ಪೂರ್ವದಲ್ಲಿ ಶ್ರೀ ಗೌಡಪಾದಾಚಾರ್ಯರು, ಗೋವಿಂದಭಗವತ್ಪಾದಾಚಾರ್ಯರೂ ಈ ದಿಸೆಯಲ್ಲಿ ಕೆಲಸ ಮಾಡಿರುತ್ತಾರೆ. ದೇಶದಲ್ಲಿ ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ದುಷ್ಕೃತ್ಯಗಳು, ಅಧರ್ಮಯುತವಾದ ಆಚರಣೆ, ಸಂಪ್ರದಾಯಗಳು ಇವುಗಳನ್ನೆಲ್ಲ ಶ್ರೀ ಶಂಕರಾಚಾರ್ಯರು ಖಂಡಿಸಿ ಧರ್ಮಸ್ಥಾಪನೆಮಾಡಿ ಧರ್ಮೋದ್ಧಾರ ಮಾಡಿದರು. ಶ್ರೀ ಶಂಕರಾಚಾರ್ಯರಿಂದ ವೇದಾಂತಧರ್ಮದ ಪ್ರಚಾರ, ಸುಪ್ರಸಿದ್ಧವಾದ ಪ್ರಸ್ಥಾನತ್ರಯಗಳಿಗೆ ಭಾಷ್ಯ ಬರೆಯುವಿಕೆ, ಇವುಗಳೆಲ್ಲ ಈ ಕಾಲಾವಧಿಯಲ್ಲಿ ನೆರವೇರಿದವು.

ಹಿಂದೂಧರ್ಮದ ಭದ್ರತೆ, ಸುವ್ಯವಸ್ಥಿತವಾದ ಪ್ರಚಾರ ಮತ್ತು ಹಿಂದೂದೇಶದ ಸಾಂಸ್ಕೃತಿಕವಾದ ಐಕ್ಯ, ಭೌಗೋಳಿಕವಾದ ಏಕತೆ ಇವುಗಳ ಸಂಕೇತವಾಗಿ ಶ್ರೀ ಶಂಕರಾಚಾರ್ಯರು ಶೃಂಗೇರಿ, ದ್ವಾರಕಾ, ಪುರೀ ಮತ್ತು ಬದರಿಯೆಂಬ ನಾಲ್ಕು ಪುಣ್ಯಧಾಮಗಳಲ್ಲಿ ವಿಶೇಷವಾಗಿ ನಾಲ್ಕು ಧರ್ಮಪೀಠಗಳನ್ನು ಸ್ಥಾಪಿಸಿ ಅವುಗಳ ಮೂಲಕವಾಗಿ ಹಿಂದೂಧರ್ಮದ ಶಾಶ್ವತವಾದ ಪ್ರಚಾರ, ಸಮಾಜಸಂಘಟನಾಕಾರ್ಯಕ್ರಮಗಳನ್ನು ಆರಂಭಿಸಿದರು.

ಈ ಕಾಲದಲ್ಲಿಯೇ ವಿಶಿಷ್ಟಾದ್ವೈತಮತದ ತತ್ತ್ವಗಳ ಪ್ರಚಾರಕರಾದ ಶ್ರೀ ಯಾಮುನಾಚಾರ್ಯರು, ಶ್ರೀ ನಾಥಮುನಿಗಳು ಬಾಳಿ ಬೆಳಗಿದರು. ಶೈವ, ವೈಷ್ಣವ, ಶಾಕ್ತ ಮತಗಳು ಈ ಕಾಲದಲ್ಲಿ ಪ್ರಬಲವಾದುವು. ಶ್ರೀ ಶಂಕರಾಚಾರ್ಯ, ಶ್ರೀ ಮಂಡನ ಮಿಶ್ರ, ಶ್ರೀ ನಾಥಮುನಿಗಳು, ಶ್ರೀ ಯಾಮುನಾಚಾರ್ಯರು, ಶ್ರೀ ನೀಲಕಂಠ, ಶ್ರೀ ನಮ್ಮಾಳ್ವಾರ್ ಇವರುಗಳೆಲ್ಲ ಈ ಕಾಲಮಾನದಲ್ಲಿ ಪ್ರಸಿದ್ಧರಾದ ಮಹಾಪುರುಷರಾಗಿರುತ್ತಾರೆ.

ಈ ವೇಳೆಗೆ ಹಿಂದೂಸ್ಥಾನದಲ್ಲಿ ವಿವಿಧ ಪಂಥಗಳು, ಜಾತಿಮತಗಳ ಪ್ರಾಬಲ್ಯಗಳು ಉಂಟಾದವು. ಪಾಂಚರಾತ್ರಸಂಹಿತೆ, ಶೈವಾಗಮ ಮತ್ತು ಶಾಕ್ತತಂತ್ರ ಗ್ರಂಥಗಳು ಈ

ಕಾಲದಲ್ಲಿ ಹೆಚ್ಚು ಜನಪ್ರಿಯವಾದವು. ದೇಶದಲ್ಲಿ ಧಾರ್ಮಿಕವಾಗಿ ವಿಶೇಷವಾದ ಬದಲಾವಣೆ, ಜಾಗೃತಿಗಳು ಉಂಟಾದಂತೆ ಗೊಂದಲ, ತೊಂದರೆಗಳೂ ತುಂಬಾ ಉಂಟಾದುವು.

## ಭಕ್ತಿಪಂಥ ಮತ್ತು ಮತಾಚಾರ್ಯರುಗಳ ಕಾಲ

(ಕ್ರಿ.ಶ. ೧೦೦೦ ದಿಂದ ೧೭೫೦ರ ವರೆಗೆ)

ಈ ಕಾಲಭಾಗದಲ್ಲಿ ಭಾರತದಲ್ಲಿ ಅನೇಕ ಭಕ್ತಿಪಂಥಗಳು ಹುಟ್ಟಿಕೊಂಡವು. ಶ್ರೀ ರಾಮಾನಂದ, ಕಬೀರ, ಚೈತನ್ಯ, ತುಲಸೀದಾಸ, ಗುರುಗೋವಿಂದ ಇತ್ಯಾದಿ ಅನೇಕ ಮಹಾಪುರುಷರು ಜನ್ಮತಳೆದು ಜನಸಮೂಹದಲ್ಲಿ ಸರಿಯಾದ ಧಾರ್ಮಿಕವಾದ ವ್ಯವಸ್ಥೆಯನ್ನು ಉಂಟುಮಾಡಲು ಶ್ರಮಿಸಿದರು. ಜಗದ್ಗುರು ಶ್ರೀಮದ್ ರಾಮಾನುಜಾಚಾರ್ಯರು ಈ ಕಾಲದಲ್ಲಿ ಜನ್ಮವೆತ್ತಿ ವಿಶಿಷ್ಟಾದ್ವೈತಮತಕ್ಕೆ ಸರಿಯಾದ ಹಾಗೂ ಭದ್ರವಾದ ಪ್ರಚಾರ, ಸ್ಥಾನಗಳನ್ನು ಕಲ್ಪಿಸಿಕೊಟ್ಟರು. ಹಾಗೆಯೇ ಜಗದ್ಗುರು ಶ್ರೀಮನ್ ಮಧ್ವಾಚಾರ್ಯರು ಅವತರಿಸಿ ದ್ವೈತಮತದ ತತ್ತ್ವಗಳನ್ನು ಪ್ರತಿಪಾದನೆ ಮಾಡಿ ಮತಪ್ರಚಾರ ಮಾಡಿದರು. ಈ ಕಾಲದಲ್ಲಿ ಭಕ್ತಿಗೆ ಹೆಚ್ಚಿನ ಪ್ರಾಧಾನ್ಯವು ಕೊಡಲ್ಪಟ್ಟು ಅನೇಕ ಭಕ್ತಿಪಂಥಗಳು ಹುಟ್ಟಿಕೊಂಡುವು. ಹಾಗೆಯೇ ವೀರಶೈವಮತಾಚಾರ್ಯರಾದ ಶ್ರೀ ಬಸವಣ್ಣನವರು ಈ ಕಾಲದಲ್ಲಿಯೇ ಅವತರಿಸಿದರು. ವೇದಗಳಿಗೆ ಭಾಷ್ಯಗಳನ್ನು ಬರೆದ ಶ್ರೀ ಸಾಯಣಾಚಾರ್ಯರೂ, ಜಗದ್ಗುರು ಶ್ರೀ ವಿದ್ಯಾರಣ್ಯರೂ, ಶ್ರೀವೇದಾಂತದೇಶಿಕರೂ, ಮಂತ್ರಾಲಯದ ಪ್ರಭುಗಳಾದ ಶ್ರೀರಾಘವೇಂದ್ರಸ್ವಾಮಿಗಳೂ ಈ ಕಾಲದಲ್ಲಿ ಬಾಳಿದ ಮಹಾಪುರುಷರಾಗಿರುತ್ತಾರೆ. ಈ ಕಾಲಾವಧಿಯಲ್ಲಿ ಭಕ್ತ ಮೀರಾಬಾಯಿಯ ಗೀತೆಗಳು, ಸಂತತುಕಾರಾಮರ ಅಭಂಗಗಳು, ಶ್ರೀ ರಾಮಾನುಜಾಚಾರ್ಯ, ಶ್ರೀ ಮಧ್ವಾಚಾರ್ಯರ ಪ್ರಸ್ಥಾನತ್ರಯದ ಮೇಲಿನ ಭಾಷ್ಯ ಇವುಗಳು ರೂಪುಗೊಂಡವು. ಧರ್ಮ ಮತ್ತು ಮತಗಳ ಬಗೆಗೆ ಜನರಲ್ಲಿ ವಿವಿಧ ರೀತಿಯ ಅಭಿಪ್ರಾಯಗಳುಂಟಾಗಿ ಅನೇಕ ಮತಪಂಗಡಗಳೂ ಮತಪ್ರವರ್ತಕರೂ ದೇಶದಲ್ಲಿ ವಿಪುಲಸಂಖ್ಯೆಯಲ್ಲಿ ಹುಟ್ಟಿ ನಾನಾಭಾಗಗಳಿಗೆ ಸಂಚರಿಸಿ ತಮ್ಮ ತಮ್ಮ ಪಂಥಗಳ ತತ್ತ್ವವಿಚಾರಗಳನ್ನು ಪ್ರಚಾರಮಾಡಿದರು. ಇಷ್ಟರಲ್ಲಿ ಆಗಲೇ ಸಂಭವಿಸಿಹೋದ ಪಾಶ್ಚಾತ್ಯ ದೇಶದ ಗ್ರೀಕ್, ಮಹಮ್ಮದೀಯ ದಾಳಿಗಳಿಂದಾಗಿಯೂ ಸುಮಾರು ೭೦೦ ವರ್ಷಗಳ ಮಹಮ್ಮದೀಯ ರಾಜ್ಯಭಾರದಿಂದಲೂ ಹಿಂದೂಧರ್ಮದ ಮೇಲೆ ಸಾಕಷ್ಟು ಆಘಾತಗಳು ಉಂಟಾದವು. ಜೊತೆಗೆ ಯೂರೋಪಿನವರ ಪ್ರಭಾವಕ್ಕೆ ಹಿಂದೂ ಸಮಾಜವು ಸಿಲುಕುವಂತಾಯಿತು.

ಮಹಮ್ಮದೀಯರ ರಾಜ್ಯಭಾರದ ಕಾಲದಲ್ಲಿ ಸಹಸ್ರಗಟ್ಟಲೆಯಲ್ಲಿ ಹಿಂದೂ ಜನರು ಬಲಾತ್ಕಾರದಿಂದ ಇಸ್ಲಾಂ ಧರ್ಮಕ್ಕೆ ಮತಾಂತರಗೊಳಿಸಲ್ಪಟ್ಟರು. ಹಿಂದೂ–ಮುಸ್ಲಿಮರ ಒಳಗೆ ಮೈತ್ರಿಯು ಕಡಿಮೆಯಾಯಿತು. ಆಗ ಕಬೀರ ಎಂಬ ಮಹಾತ್ಮರು ಜನ್ಮತಳೆದು ಹಿಂದೂ–ಮುಸ್ಲಿಮರ ಒಳಗೆ ಧಾರ್ಮಿಕವಾದ ಮೈತ್ರಿಯನ್ನು ಬೆಳೆಸಲು ಯತ್ನಿಸಿದರು. ಯೂರೋಪಿಯನ್ನರ ಮತವಾದ ಕ್ರೈಸ್ತ ಮತವೂ ಭಾರತದಲ್ಲಿ ಜನರ ಮೇಲೆ ಪ್ರಭಾವ ಬೀರಲು ಆರಂಭಿಸಿತು. ಇದರಿಂದಾಗಿ ಹಿಂದೂ ಜನರಲ್ಲಿ ಒಂದೆಡೆ ತಮ್ಮ ಮತದ ಬಗೆಗೆ ನಂಬಿಕೆ ಕಡಿಮೆ ಆದಂತೆ ಇನ್ನೊಂದೆಡೆ ಪರಕೀಯ

ಸಂಸ್ಕೃತಿಗೆ ದಾಸರೂ ಆಗುವಂತಾಯಿತು. ಹಾಗೆಯೇ ಜಾತಿ-ಪಂಥಗಳು ಅತ್ಯಂತ ಸಂಕುಚಿತವಾಗಿ ಅವುಗಳ ಸಂಖ್ಯೆ ದಿನೇ ದಿನೇ ಹೆಚ್ಚಾಗತೊಡಗಿದವು. ಪರಿಣಾಮವಾಗಿ, ದೇಶದಲ್ಲಿ ಸಾಮಾಜಿಕವಾದ ಅಶಾಂತಿ, ಅವ್ಯವಸ್ಥೆಗಳಾದುವು. ಧಾರ್ಮಿಕ ರಂಗದಲ್ಲಿ ಮೂಢನಂಬಿಕೆಗಳು, ಅನ್ಯಾಯಗಳು, ಅಜ್ಞಾನ ಇವುಗಳೆಲ್ಲ ಪ್ರವೇಶಿಸಿ ಬೇರೂರ ತೊಡಗಿದುವು. ಹಾಗಿದ್ದರೂ ಹಿಂದೂಧರ್ಮವು ಈ ಆಘಾತಗಳನ್ನೆಲ್ಲ ಸಹಿಸಿಕೊಂಡು ಬಾಳುವಂತಾಯಿತು. ಗುರು ನಾನಕ, ಅಪ್ಪಯ್ಯ ದೀಕ್ಷಿತರು, ಮಧುಸೂದನ ಸರಸ್ವತೀ, ತುಳಸೀದಾಸರು, ತಾಯುಮಾನವರ್ ಮೊದಲಾದ ಮಹಾಪುರುಷರು ಈ ಕಾಲಮಾನ ದಲ್ಲಿ ಜನ್ಮತಳೆದು ಹಿಂದೂಧರ್ಮದ ರಕ್ಷಣೆಗೆ ತುಂಬಾ ಶ್ರಮಿಸಿರುತ್ತಾರೆ.

ಒಂದೆಡೆ ಮಹಮ್ಮದೀಯರ ಸುಮಾರು ೭೦೦ ವರ್ಷದ ರಾಜ್ಯಭಾರದ ಪ್ರಭಾವ, ಇನ್ನೊಂದೆಡೆ ಯೂರೋಪಿಯನ್ನರ ಪ್ರಭಾವ, ಮತ್ತೊಂದೆಡೆ ವಿವಿಧ ಧಾರ್ಮಿಕ ಪಂಥಗಳ ಪ್ರಭಾವ, ಮಗುದೊಂದೆಡೆ ಅನೇಕ ವಿಧವಾದ ಒಳಜಾತಿ, ಮತಗಳ ಸಂಕೀರ್ಣತಾದೃಷ್ಟಿಯ ಪರಿಣಾಮ—ಇವುಗಳಿಂದಾಗಿ ಹಿಂದೂ ಸಮಾಜದಲ್ಲಿ ಸಾಕಷ್ಟು ತೊಂದರೆ ಗೊಂದಲಗಳುಂಟಾದುವು. ಹೊಸ ಸುಧಾರಣೆಗಳು ಅಗತ್ಯ ಎಂದು ಕಂಡು ಬಂದುವು. ಆಗಲೇ ದೇಶದಲ್ಲಿ ಹೊಸ ಸುಧಾರಣಾಯುಗವು ಆರಂಭವಾಯಿತು.

**ಸುಧಾರಣಾಯುಗ** (ಕ್ರಿ.ಶ. ೧೭೫೦-೧೯೫೦)

ಈ ಸುಧಾರಣಾ ಯುಗದ ಆರಂಭಕಾಲದಲ್ಲಿ ಹಿಂದೂಸಮಾಜದ ಸುಧಾರಣೆ ಮತ್ತು ಭದ್ರತೆಗಾಗಿ ಹೋರಾಡಿದ ಮಹನೀಯರಲ್ಲಿ ರಾಜಾ ರಾಮಮೋಹನ ರಾಯರು. ಇವರು ಅನೇಕ ಮೂಢನಂಬಿಕೆಗಳು, ಒಳಪಂಥಗಳು ಇವುಗಳಿಂದಲೇ ಹಿಂದೂಸಮಾಜವು ಅಭಿವೃದ್ಧಿಯಾಗದಿರಲು ಕಾರಣ ಎಂದು ತಿಳಿದು ಬ್ರಹ್ಮಸಮಾಜ ಎಂಬ ಸಂಸ್ಥೆಯನ್ನು ಕಟ್ಟಿದರು. ಏಕಮೇವಾದ್ವಿತೀಯವಾದ ನಿರ್ಗುಣ ನಿರಾಕಾರ ಬ್ರಹ್ಮನ ಉಪಾಸನೆಯಲ್ಲದೆ ಬೇರೆ ಯಾವ ವಿಧದ ಉಪಾಸನೆಗಳಿಗೂ ಇಲ್ಲಿ ಅವಕಾಶ ವಿರಲಿಲ್ಲ. ರೂಪ, ವಿಗ್ರಹಗಳು ಇವುಗಳೆಲ್ಲಾ ಬ್ರಹ್ಮಸಮಾಜದಲ್ಲಿ ಮಾನ್ಯವಾಗಿರಲಿಲ್ಲ. ಜಾತಿ, ಮತ, ಜನಾಂಗ, ವರ್ಣಭೇದವಿಲ್ಲದೆ ಈ ಸಂಸ್ಥೆಯು ಎಲ್ಲರಿಗೂ ಪ್ರವೇಶದ ಅವಕಾಶವನ್ನು ನೀಡಿತು. ಗಾಯತ್ರೀಮಂತ್ರೋಪಾಸನೆಯನ್ನು, ಉಪನಿಷತ್‌ನಲ್ಲಿರುವ ದೇವರ ಕುರಿತಾದ ನಿರ್ಗುಣ ನಿರಾಕಾರತತ್ತ್ವಗಳನ್ನು ಹೇಳುವ ಮಂತ್ರಗಳ ಪಠನ—ಇವು ಬ್ರಹ್ಮಸಮಾಜದ ಉಪಾಸನಾವಿಧಿಗಳಲ್ಲಿ ಮುಖ್ಯವಾದುವು. ಬ್ರಹ್ಮಸಮಾಜವು ಹಿಂದೂ ಸಮಾಜದಲ್ಲಿದ್ದ ಅನೇಕ ಸಾಮಾಜಿಕ ತೊಂದರೆಗಳ ಪದ್ಧತಿಗಳನ್ನು ತೊಡೆದು ಹಾಕಲು ಯತ್ನಿಸಿದೆ. ಸತಿಸಹಗಮನ ಪದ್ಧತಿಯನ್ನು ನಿಲ್ಲಿಸಲು ಬಹುಮಟ್ಟಿಗೆ ಹೋರಾಟ ನಡೆಸಿ ಕೊನೆಗೆ ದೇಶದಲ್ಲಿದ್ದ ಆಗಿನ ಇಂಗ್ಲಿಷ್ ಸರಕಾರದವರಿಂದ ಕಾನೂನಬದ್ಧವಾಗಿ ಅದನ್ನು ನಿಲ್ಲಿಸುವುದರಲ್ಲಿ ಶ್ರೀ ರಾಜಾ ರಾಮಮೋಹನ ರಾಯರು ಯಶಸ್ವಿಯಾದರು. ಇವರು ಮೂರ್ತಿಪೂಜೆಯ ವಿರುದ್ಧ, ಸ್ತ್ರೀಸ್ವಾತಂತ್ರ್ಯದ ಸಂಬಂಧವಾಗಿ ಮತ್ತು ಇನ್ನೂ ಅನೇಕ ವಿಚಾರಗಳ ಬಗೆಗೆ ಶಾಸ್ತ್ರಗ್ರಂಥಗಳಿಂದ ಆಧಾರವನ್ನು ಉದಾಹರಿಸುತ್ತಾ ಸುಧಾರಣಾ ಕಾರ್ಯಕ್ರಮಗಳನ್ನು ಜಾರಿಗೆ ತರಲು ಸಾಕಷ್ಟು ಶ್ರಮಿಸಿದರು.

೧೭೭೪ರಲ್ಲಿ ಬಂಗಾಳ ದೇಶದ ಶ್ರೀಮಂತ ಮನೆತನವೊಂದರಲ್ಲಿ ಜನಿಸಿದ ಶ್ರೀ ರಾಜಾ ರಾಮಮೋಹನ ರಾಯ್ ಸಂಸ್ಕೃತ, ಪಾರಸಿ, ಅರಬ್ಬಿ, ಇಂಗ್ಲಿಷ್ ಭಾಷೆಗಳಲ್ಲಿ ಉದ್ದಾಮ ಪಂಡಿತರಾಗಿದ್ದರು. ಬಾಲ್ಯದಲ್ಲಿ ಮೊಗಲ್ ಚಕ್ರವರ್ತಿಯ ಆಸ್ಥಾನದ ಆವರಣದಲ್ಲಿ ಬೆಳೆದ ಇವರು ಮುಸ್ಲಿಂ ಧರ್ಮದ ಬಗ್ಗೆ ಸರಿಯಾದ ಪರಿಜ್ಞಾನವುಳ್ಳವರಾಗಿದ್ದರು. ಹಿಂದೂ ಧರ್ಮದ ಹೆಸರಿನಲ್ಲಿ ಹಿಂದೂಸಮಾಜದ ಉದ್ಧಾರಕ್ಕಾಗಿ ಇವರು ಸಾಕಷ್ಟು ಶ್ರಮಿಸಿ ೧೮೩೦ರಲ್ಲಿ ಇಂಗ್ಲೆಂಡಿಗೆ ದೆಹಲಿ ಚಕ್ರವರ್ತಿಯ ಇಷ್ಟದ ಮೇರೆ ತೆರಳಿದರು. ೧೮೩೩ರಲ್ಲಿ ಅಲ್ಲಿಂದ ಮರಳಿ ತಾಯ್ನಾಡಿಗೆ ಬರುತ್ತಾ ಬ್ರಿಸ್ಟಲ್ ಎಂಬಲ್ಲಿ ನಿಧನರಾದರು.

ಇವರ ಅನಂತರ ಬ್ರಹ್ಮಸಮಾಜವು ಮಹರ್ಷಿ ದೇವೇಂದ್ರನಾಥ ಠಾಕೂರರ ನೇತೃತ್ವದಲ್ಲಿ ಹೊಸ ಹುರುಪಿನಿಂದ ಬೆಳೆದು ಬೆಳಗಲು ಆರಂಭವಾಯಿತು. ಅವರ ಕಾಲದಲ್ಲಿ ಬ್ರಹ್ಮಸಮಾಜದಲ್ಲಿ ಎರಡು ಪಂಗಡಗಳು ಹುಟ್ಟಿಕೊಂಡು ಇದರಿಂದ ಹೊರಹೋದ ಪಂಗಡದವರು ನವವಿಧಾನ-ನವಸಂಹಿತ ಎಂಬ ಹೆಸರಿನಿಂದ ತಮ್ಮ ಸಮಾಜವನ್ನು ಕರೆದರು. ಈ ನವಸಂಹಿತ ಬ್ರಹ್ಮಸಮಾಜದ ಮುಖಂಡರು ಶ್ರೀ ಕೇಶವ ಚಂದ್ರ ಸೇನರು. ಶ್ರೀ ಕೇಶವ ಚಂದ್ರ ಸೇನರು ಸುಪ್ರಸಿದ್ಧ ವಾಗ್ಮಿಗಳೂ ಮಹಾವಿದ್ವಾಂಸರೂ ಆಗಿದ್ದರು. ಮಹರ್ಷಿ ದೇವೇಂದ್ರನಾಥ ಠಾಕೂರರು ಋಷಿಸದೃಶರಾದ ಮಹಾನ್ ವ್ಯಕ್ತಿ ಆಗಿದ್ದರು. ಬ್ರಹ್ಮಸಮಾಜವು ತನ್ನ ಚಟುವಟಿಕೆಗಳ ಮೂಲಕ ಕ್ರಿಸ್ತಮತದವರು ಹಿಂದೂಗಳನ್ನು ಮತಾಂತರಗೊಳಿಸುವುದನ್ನು ಮತ್ತು ತನ್ಮೂಲಕ ಹಿಂದೂಸಮಾಜವನ್ನು ನಿರ್ಬಲಗೊಳಿಸುವುದನ್ನು ತಡೆಹಿಡಿಯುವುದರಲ್ಲಿ ಗಮನಾರ್ಹವಾದ ರೀತಿಯಲ್ಲಿ ಯಶಸ್ಸನ್ನು ಪಡೆಯಿತು. ಹೀಗೆ ಬ್ರಹ್ಮಸಮಾಜದ ಈ ಎರಡು ಶಾಖೆಗಳು ಮತ್ತು ಮುಂದೆ ಇದರಿಂದ ಕೇಶವ ಚಂದ್ರ ಸೇನರ ಸಮಾಜದಿಂದ ಬೇರೆಯಾಗಿ ಹುಟ್ಟಿಕೊಂಡ ಸಾಧಾರಣ ಬ್ರಹ್ಮಸಮಾಜ ಎಂಬ ಸಂಸ್ಥೆಗಳು ಹಿಂದೂಸಮಾಜದಲ್ಲಿ ಸೇರಿಹೋಗಿದ್ದ ಅನೇಕ ಮೂಢನಂಬಿಕೆಗಳನ್ನು ಕಿತ್ತೆಸೆದು ಹೊಸ ಚೇತನವನ್ನು ತುಂಬಲು ಶ್ರಮಿಸಿರುತ್ತವೆ. ಇದರಿಂದಾಗಿ ಇಂಗ್ಲಿಷ್ ವಿದ್ಯಾಭ್ಯಾಸವನ್ನು ಹೊಂದಿದ ತರುಣ ಜನಾಂಗದರು ಹಿಂದೂಧರ್ಮವನ್ನು ತ್ಯಜಿಸಿ ಕ್ರೈಸ್ತ ಧರ್ಮವನ್ನು ಅವಲಂಬಿಸುವುದು ವಿಪುಲ ಪ್ರಮಾಣದಲ್ಲಿ ತಪ್ಪಿದಂತಾಯಿತು. ಹಿಂದೂ ಸಮಾಜದಲ್ಲಿ ಒಂದು ಕ್ರೈಸ್ತ ಸಂಘವೋ ಎಂಬಂತೆ ಬ್ರಹ್ಮಸಮಾಜವು ಹಿಂದೂ ಕ್ರೈಸ್ತ ಗ್ರಂಥಗಳ ಮುಖ್ಯಾಂಶಗಳನ್ನು ಮಾನ್ಯ ಮಾಡಿ ಪರಮಾತ್ಮನ ನಿರ್ಗುಣ ಉಪಾಸನೆಯನ್ನು ಎತ್ತಿಹಿಡಿದು, ಮೂರ್ತಿಪೂಜೆಯನ್ನು ಖಂಡಿಸಿ, ವರ್ಣ, ಜಾತಿ, ಜನಾಂಗಗಳ ಭೇದವೆಣಿಸದೆ ಧರ್ಮಪ್ರಚಾರವನ್ನು ಮಾಡತೊಡಗಿತು.

ಬ್ರಹ್ಮಸಮಾಜದಂತೆ ಹಿಂದೂಸಮಾಜದ ಉದ್ಧಾರಕ್ಕಾಗಿ ಶ್ರಮಿಸಿದ ಇನ್ನೊಂದು ಸಂಸ್ಥೆಯೇ ಬೊಂಬಾಯಿಯ ಪ್ರಾರ್ಥನಾಸಮಾಜವಾಗಿರುತ್ತದೆ. ಬ್ರಹ್ಮಸಮಾಜದ ಧುರೀಣರಿಂದ ಸ್ಫೂರ್ತಿಯನ್ನು ಪಡೆದು ಹುಟ್ಟಿಕೊಂಡ ಸಂಸ್ಥೆಯು ತನ್ನದೇ ಆದ ತತ್ತ್ವಗಳಿಂದಲೂ ಗುರಿಗಳಿಂದಲೂ ಕೂಡಿ ಬ್ರಹ್ಮಸಮಾಜದಿಂದ ತತ್ತ್ವಗಳಲ್ಲಿ ವಿಭಿನ್ನವಾದ ಸಂಸ್ಥೆಯಾಗಿ ಬೆಳೆಯಿತು. ಪ್ರಾರ್ಥನಾಸಮಾಜವು ೧೮೬೭ರ ಹೊತ್ತಿಗೆ ಬೊಂಬಾಯಿಯ ಆ ಕಾಲದ ಪ್ರಮುಖ ವ್ಯಕ್ತಿಗಳಾದ ಜಸ್ಟಿಸ್ ಮಹಾದೇವ ಗೋವಿಂದ ರಾನಡೆ, ಡಾ|| ಆತ್ಮಾರಾಮ ಪಾಂಡುರಂಗ, ಶಾಂತಾರಾಮ ಭೋನ್ಸ್ಲೇ, ಮೋರೋಬ ಸಂಪ್ರು

ಮೊದಲಾದವರಿಂದ ಸ್ಥಾಪಿಸಲ್ಪಟ್ಟಿತು. ಇವರಲ್ಲಿ ಕೊನೆಗೆ ಶ್ರೀ ರಾನಡೆಯವರೇ ಸಮಾಜದ ಏಳಿಗೆಗೆ ಹಾಗೂ ತನ್ಮೂಲಕ ಹಿಂದೂಸಮಾಜದ ಉದ್ಧಾರಕ್ಕಾಗಿ ದುಡಿದ ಧುರೀಣರಾದರು. ಈ ಸಮಾಜದಲ್ಲಿ ಪ್ರಾರ್ಥನೆಯ ಮೂಲಕ ಭಗವಂತನ ಆರಾಧನೆ ನಡೆಯುವ ಏರ್ಪಾಡಾಯಿತು. ಮಾತ್ರವಲ್ಲದೆ ಮೂರ್ತಿಪೂಜೆಯ ಖಂಡನೆಯಾಗಲಿ, ಸಾಂಪ್ರದಾಯಿಕವಾದ ಸಂಸ್ಕಾರ, ಪೂಜೆಗಳನ್ನು ಬಿಡುವುದಾಗಲಿ ಈ ಸಭೆಯ ಕಾರ್ಯಕ್ರಮವಾಗಿರದೆ ಇದು ಹಿಂದೂಧರ್ಮದ ಪರಂಪರಾಗತ ತತ್ತ್ವಗಳಿಗೆ ವಿರುದ್ಧವಾಗಿ ಹೋಗದೆ ಉಳಿಯಿತು. ಬಹುಮಟ್ಟಿಗೆ ಸಮಾಜಸುಧಾರಣೆಯು ಈ ಪ್ರಾರ್ಥನಾಸಮಾಜದ ಗುರಿಯಾಯಿತು. ಜಾತಿಮತಗಳ ಭೇದವು ಬೇಡ ಎಂದು ಹೇಳಿ ಜಾತೀಯತೆಯ ದ್ವೇಷವನ್ನು ಈ ಸಮಾಜ ಖಂಡಿಸಿತು. ವಿಧವಾವಿವಾಹ, ಮಹಿಳೆಯರ ವಿದ್ಯಾಭ್ಯಾಸ, ಬಾಲ್ಯವಿವಾಹ ಪದ್ಧತಿಯ ರದ್ದುಪಡಿಸುವಿಕೆ—ಇವುಗಳು ಈ ಸಮಾಜದ ಆಶ್ರಯದಲ್ಲಿ ಪ್ರಬಲಗೊಂಡ ಕಾರ್ಯಚಟುವಟಿಕೆಗಳು. ಜಾತೀಯತೆಯು ಬೇಡವೆಂದು ಹೇಳಿದ ಪ್ರಾರ್ಥನಾ ಸಮಾಜದಲ್ಲಿ ಸಂಪ್ರದಾಯಬದ್ಧರು ಅವರವರ ವರ್ಣಧರ್ಮಗಳನ್ನು ಇಟ್ಟುಕೊಂಡು ಪ್ರಾರ್ಥನಾ ಸಮಾಜದ ಸದಸ್ಯರಾಗಿ ಮುಂದುವರಿಯಲು ಅವಕಾಶವೂ ಇತ್ತು.

ಬ್ರಹ್ಮಸಮಾಜದಿಂದ ಕೆಲವು ದುಷ್ಪರಿಣಾಮಗಳು ಹುಟ್ಟಿಕೊಂಡವು. ಪರಿಣಾಮವಾಗಿ ಅವತಾರವಾದ, ಕರ್ಮವಾದ, ಪುನರ್ಜನ್ಮಸಿದ್ಧಾಂತ ಇವುಗಳಲ್ಲಿ ಅಶ್ರದ್ಧೆಯು ಜನರಲ್ಲಿ ಉಂಟಾಯಿತು. ಮೂರ್ತಿಪೂಜೆ, ವರ್ಣಧರ್ಮ ಎಲ್ಲವನ್ನೂ ಬ್ರಹ್ಮಸಮಾಜವು ಖಂಡಿಸಿದುದರ ಪರಿಣಾಮವಾಗಿ ಹಿಂದೂಸಮಾಜದಲ್ಲಿ ಸಾಕಷ್ಟು ಗೊಂದಲಗಳುಂಟಾಗಲು ಕಾರಣವಾಯಿತು.

ಈ ಸಂದಿಗ್ಧಪರಿಸ್ಥಿತಿಯಲ್ಲಿ ಮತ್ತೆ ಹಿಂದೂಸಮಾಜವನ್ನು ಉದ್ಧರಿಸಿ ಅದನ್ನು ಭದ್ರಗೊಳಿಸಲು ಯತ್ನಿಸಿದ ಮಹಾಪುರುಷರೇ ಮಹರ್ಷಿ ದಯಾನಂದ ಸರಸ್ವತಿಯವರು. ಇವರು ಕ್ರೈಸ್ತ, ಮಹಮ್ಮದೀಯ ಮತಪ್ರಚಾರಕರಿಂದಲೂ ಅವರ ಸಂಸ್ಕೃತಿಯ ಪ್ರಭಾವದಿಂದಲೂ ಹಿಂದೂಸಮಾಜದ ಮೇಲೆ ಆದ ತೊಂದರೆಗಳನ್ನು ನಿವಾರಿಸಲು ಕಂಕಣಬದ್ಧರಾದರು. ಕ್ರೈಸ್ತ, ಮಹಮ್ಮದೀಯ ಮತದವರು ಹಿಂದೂಧರ್ಮವನ್ನು ಯೋಚಿಸದೆ ನಿರ್ದಾಕ್ಷಿಣ್ಯವಾಗಿ ಟೀಕಿಸಿದಂತೆ ಸ್ವಾಮಿ ದಯಾನಂದ ಸರಸ್ವತಿಯವರು ಸಹ ತಮ್ಮ ಅಪಾರಪಾಂಡಿತ್ಯ, ನ್ಯಾಯಗಳ ಬಲದಿಂದ ಆ ಮತಗಳನ್ನು ಕಟುವಾಗಿ ಖಂಡಿಸಿದರು. ಮುಯ್ಯಿಗೆ ಮುಯ್ಯಿ ಎಂಬಂತೆ ಇವರು ಉತ್ತರ ಭಾರತದಲ್ಲಿ ಅನೇಕ ವೇದಧರ್ಮಶಾಲೆ-ಗುರುಕುಲಪೀಠಗಳನ್ನು ಸ್ಥಾಪಿಸಿ ಹಿಂದೂಸಮಾಜದಲ್ಲಿ ಧಾರ್ಮಿಕವಾದ, ವೇದೋಕ್ತವಾದ ಪ್ರಜ್ಞೆಯನ್ನು ಬಲಪಡಿಸಲು ಯತ್ನಿಸಿದರು. ಆರ್ಯಸಮಾಜವೆಂಬ ಸಂಸ್ಥೆಯನ್ನು ೧೮೭೫ನೆಯ ಇಸವಿಯಲ್ಲಿ (ಏಪ್ರಿಲ್ ೧೦) ಸ್ಥಾಪಿಸಿ ಇವರು ವೈದಿಕಸಂಸ್ಕೃತಿ ಎಲ್ಲಿ ಸಂಪೂರ್ಣವಾಗಿ ಅಳಿಸಿಬಿಡುವುದೋ ಎಂಬಂತೆ, ರಭಸದಿಂದ ಹರಿದು ಬಂದ ಪಾಶ್ಚಾತ್ಯ ಸಂಸ್ಕೃತಿಯ ಪ್ರಚಂಡ ಪ್ರವಾಹವನ್ನು ತಡೆಯುವುದರಲ್ಲಿ ತುಂಬಾ ಯಶಸ್ವಿಯಾದರು. ದಯಾನಂದ ಸರಸ್ವತಿಯವರು ಸ್ವತಃ ವೈದಿಕಧರ್ಮಯುಕ್ತವಾದ ಸಂನ್ಯಾಸ ಸ್ವೀಕಾರಮಾಡಿದ್ದರು ಮಾತ್ರವಲ್ಲದೆ ವೇದಗಳು ಮಾತ್ರವೇ ಹಿಂದೂಧರ್ಮಕ್ಕೆ ಆಧಾರ ಎಂದು ಹೇಳಿ ಅವುಗಳ ಆಧಾರದಿಂದ ತಮ್ಮ ನಿಲವನ್ನು ಸ್ಪಷ್ಟ

ಪಡಿಸಿದರು. ವೇದೋಕ್ತ ಅಗ್ನಿಹೋತ್ರಾದಿ ಹೋಮಯಜ್ಞಗಳು, ಪೂಜೆಪ್ರಾರ್ಥನೆಗಳು ಇವುಗಳೆಲ್ಲ ಇವರ ಕಾಲದಲ್ಲಿ ಮತ್ತೆ ಜನಜೀವನದಲ್ಲಿ ಪ್ರಚುರಗೊಂಡು, ಪುನರುಜ್ಜೀವನವನ್ನು ಪಡೆದುವು. ತಮ್ಮ ಪ್ರಚಂಡವಾದ ವಿದ್ವತ್‌ಪ್ರತಿಭೆಗಳಿಂದ ವೇದಧರ್ಮದ ಹಿರಿಮೆ, ಸಂಸ್ಕೃತ ಭಾಷೆಯ ಶ್ರೇಷ್ಠತೆ—ಇವುಗಳನ್ನು ಪ್ರಚಾರ ಮಾಡಿ, ಜನರಲ್ಲಿ ನೂತನವಾದ ಭರವಸೆಯನ್ನು ತುಂಬಲು ನಿರಂತರವಾಗಿ ದುಡಿದರು. ಇತರ ಮತಗಳಿಗೆ ಹಿಂದೂಧರ್ಮದಿಂದ ಮತಾಂತರಗೊಂಡು ಹೋದವರನ್ನು ಇವರು ಪುನಃ ಹಿಂದೂಧರ್ಮಕ್ಕೆ ಸೇರಿಸಿಕೊಳ್ಳುವ ಸಲುವಾಗಿ ಶುದ್ಧಿಸಂಸ್ಕಾರವನ್ನು ಪ್ರಾರಂಭಿಸಿದರು. ಪುನಃ ಮತಾಂತರಗೊಳಿಸುವಿಕೆ. ಹಿಂದೂಗಳ ಸಂಘಟನಾಕಾರ್ಯಗಳನ್ನು ಸಹ ಆರಂಭಿಸಿ, ನಿರ್ಬಲವಾಗುತ್ತಿದ್ದ ಹಿಂದೂಸಮಾಜವನ್ನು ಉದ್ಧರಿಸಿದರು. ಹಿಂದೂಧರ್ಮದ ವೇದತತ್ತ್ವಗಳನ್ನು ಪುನಃ ದೃಢೀಕರಿಸಿ ಅದರ ಹಿರಿಮೆಯನ್ನು ಸಾರಿದರು.

ಇಷ್ಟಾದರೂ, ಈ ವೇಳೆಗೆ ಹಿಂದೂ ಸಮಾಜದಲ್ಲಿ ದೇಶವನ್ನು ಆಳುತ್ತಿದ್ದ ಇಂಗ್ಲಿಷಿನವರ ಪ್ರಭಾವ ಸಾಕಷ್ಟು ನೆಲೆನಿಲ್ಲುವಂತಾಗಿತ್ತು. ಬಹುಸಂಖ್ಯೆಯಲ್ಲಿ ಹಿಂದೂಗಳು ಇಂಗ್ಲಿಷ್ ವಿದ್ಯಾಭ್ಯಾಸವನ್ನು ಪಡೆದರು. ಕ್ರೈಸ್ತಮತದವರ ಶಾಲಾಕಾಲೇಜುಗಳು, ಇಂಗ್ಲಿಷ್ ಅಧ್ಯಾಪಕರು, ಕ್ರಿಸ್ತಮತದ ಪ್ರಚಾರಕರು, ಕ್ರಿಸ್ತಮತದವರೇ ಆದ ಅಧಿಕಾರಿಗಳು ಇವರಿಂದಾಗಿ ಹಿಂದೂಸಮಾಜದಲ್ಲಿ ಕೆಲಮಟ್ಟಿಗೆ ಕ್ರೈಸ್ತ ಧರ್ಮ, ಯೂರೋಪಿನ ಸಂಸ್ಕೃತಿ ಇವುಗಳ ಮೇಲೆ ಒಲವು ಉಂಟಾಯಿತು. ಹಾಗಾಗಿ ಹಿಂದೂಧರ್ಮದ ಮೇಲೆ ಅಭಿಮಾನವುಳ್ಳವರು ಆದರೆ ಆಚರಣೆಯಲ್ಲಿ ಅದನ್ನು ತರದವರು, ಅಭಿಮಾನ ಇಲ್ಲದವರು, ನಿಶ್ಚಯವಾದ ನಿಲವು ಇಲ್ಲದವರು ಎಂದು ಹೀಗೆ ವಿವಿಧ ರೀತಿಯ ಪಂಗಡದವರು ಹಿಂದೂ ಸಮಾಜದಲ್ಲಿ ರೂಪುಗೊಂಡರು. ಇದರಿಂದಾಗಿ ಹಿಂದೂ ಸಮಾಜದಲ್ಲಿ ವಿಶೇಷವಾಗಿ ಗೊಂದಲ–ಸಂದಿಗ್ಧತೆಗಳು ಹೆಚ್ಚುಹೆಚ್ಚಾದುವು.

ಇದೇ ಸಮಯದಲ್ಲಿ ಪಾಶ್ಚಾತ್ಯ ದೇಶದಿಂದ ಥಿಯೊಸೊಫಿಕಲ್ ಸೊಸೈಟಿ ಎಂಬ ನವೀನವಾದ ಸಂಸ್ಥೆ ಭಾರತ ದೇಶದ ದಕ್ಷಿಣ ಭಾಗದಲ್ಲಿ ನೆಲೆನಿಂತಿತು. ರಷ್ಯಾ ದೇಶದ ಮ್ಯಾಡಂ ಹೆಚ್. ಪಿ. ಬ್ಲಾವಟ್‌ಸ್ಕಿ ಎಂಬ ಮೇಧಾವಿನಿ ಮತ್ತು ಇಂಗ್ಲೆಂಡಿನ ಕರ್ನಲ್ ಹೆಚ್. ಎಸ್. ಆಲ್‌ಕಾಟ್ ಮತ್ತು ಡಬ್ಲ್ಯು. ಕ್ಯೂ. ಜಡ್ಜ್ ಎಂಬುವರು ಈ ಸಂಸ್ಥೆಯ ಸಂಸ್ಥಾಪಕರಲ್ಲಿ ಅತ್ಯಂತ ಪ್ರಮುಖರು. ಇವರೆಲ್ಲರೂ ಸೇರಿ ಥಿಯೊಸೊಫಿಕಲ್ ಸಂಸ್ಥೆಯನ್ನು ೧೮೭೫ರಲ್ಲಿ ಮೂಲವಾಗಿ ಅಮೆರಿಕಾದ ನ್ಯೂಯಾರ್ಕ್ ನಗರದಲ್ಲಿ ಸ್ಥಾಪಿಸಿದರು. ಸಂಸ್ಥೆಯ ಪ್ರಥಮ ಅಧ್ಯಕ್ಷರಾಗಿ ಕರ್ನಲ್ ಆಲ್ಕಾಟ್‌ರವರು ಆಯ್ಕೆಯಾದರು, ಮ್ಯಾಡಮ್ ಬ್ಲಾವಟ್‌ಸ್ಕಿಯವರು ಸಂಸ್ಥೆಯ ಕಾರ್ಯನಿರ್ವಾಹಕ ಕಾರ್ಯದರ್ಶಿಗಳಾಗಿ ಚುನಾಯಿತರಾದರು. ಅನಂತರ ಕೆಲವು ವರ್ಷಗಳಲ್ಲಿ ಈ ಸಂಸ್ಥೆಯು ಭಾರತದಲ್ಲಿ ತನ್ನ ಸ್ಥಾನವನ್ನು ಪಡೆಯುವಂತಾಗಿ ಮುಂದೆ ದಕ್ಷಿಣ ಭಾರತದ ಮದ್ರಾಸಿನ ಅಡ್ಯಾರ್ ಎಂಬಲ್ಲಿ ಬಹಳ ದೊಡ್ಡ ಪ್ರಮಾಣದಲ್ಲಿ ಥಿಯೊಸೊಫಿಕಲ್ ಸೊಸೈಟಿಯ ಶಾಖೆಯಾಗಿ ರೂಪುಗೊಂಡು ನೆಲೆನಿಂತಿತು. ಹಾಗೆಯೇ ಮುಂದೆ ಜಗತ್ತಿನಲ್ಲಿ ವಿವಿಧ ಎಡೆಗಳಲ್ಲಿ ಈ ಸಂಸ್ಥೆಯ ಶಾಖೆಗಳು ಸ್ಥಾಪನೆಗೊಳ್ಳುವಂತಾಯಿತು. ಭಾರತದಲ್ಲಿನ ಅಡ್ಯಾರ್

ಶಾಖೆಯು ೧೮೮೨ರಲ್ಲಿ ಥಿಯೊಸೊಫಿಕಲ್ ಸೊಸೈಟಿಯ ಅಂತಾರಾಷ್ಟ್ರೀಯ ಕೇಂದ್ರ ಕಛೇರಿ ಎಂದು ಪರಿವರ್ತನೆಗೊಂಡಿತು. ಹೀಗೆ ಅಮೆರಿಕಾದಲ್ಲಿ ಜನ್ಮತಳೆದ ಸಂಸ್ಥೆ ಭಾರತದಲ್ಲಿ ತನ್ನ ಕೇಂದ್ರಕಛೇರಿಯನ್ನು ಪಡೆಯುವಂತಾಗಿ ಅಂತಾರಾಷ್ಟ್ರೀಯ ಸಂಸ್ಥೆಯಾಗಿ ಬೆಳಗುವಂತಾಯಿತು. ಥಿಯೊಸೊಫಿ ಎಂದರೆ ಬ್ರಹ್ಮವಿದ್ಯೆ ಎಂದು ಅರ್ಥ. ಕರ್ಮ, ಪುನರ್ಜನ್ಮ, ಅವತಾರವಾದ, ಭಕ್ತಿ, ಧ್ಯಾನ, ಜಪ—ಇತ್ಯಾದಿ ವಿಚಾರಗಳೆಲ್ಲ ಥಿಯೊಸೊಫಿಯಲ್ಲಿ ಸೇರಿರುತ್ತವೆ. ಇವುಗಳಷ್ಟೇ ಅಲ್ಲದೆ ಅನೇಕ ರಹಸ್ಯವಾದ ಆಧ್ಯಾತ್ಮಿಕ ತತ್ತ್ವ-ವಿಚಾರಗಳು ಈ ಥಿಯೊಸೊಫಿಯಲ್ಲಿ ಸೇರಿರುತ್ತವೆ.

ಒಟ್ಟಿನಲ್ಲಿ ಟಿಬೆಟ್ಟಿನ ಬೌದ್ಧರಲ್ಲಿ ಜಾರಿಯಲ್ಲಿ ಇರುವ ಕೆಲವು ಆಚರಣೆಗಳು, ಹಿಂದೂಧರ್ಮದ ಕೆಲವು ಅಂಶಗಳು, ಆಧುನಿಕ ಆತ್ಮವಿದ್ಯಾವಾದಿಗಳ ಕೆಲವು ವಿಚಾರಗಳು—ಈ ಎಲ್ಲಾ ಅಂಶಗಳು ಸೇರಿ ಉಂಟಾದ ಒಂದು ಮತವೇ 'ಥಿಯೊಸೊಫಿ' ಎಂದು ಕರೆಯುವಂತಾಯಿತು. ಇವರ ತತ್ತ್ವಗಳು ಅಂತರಂಗವೂ ಗುಹ್ಯವೂ ಆದುದರಿಂದ ಸಾರ್ವತ್ರಿಕವಾಗಿ ಇದನ್ನು ತಿಳಿಯಲು ಸಾಧ್ಯವಾಗದೆ ಈ ಸಂಸ್ಥೆಗೆ ಎಲ್ಲರೂ ಸೇರಲು ಅವಕಾಶವಾಗಲಿಲ್ಲ. ಆದರೆ ವಿದ್ಯಾವಂತರೂ, ಯುರೋಪಿನ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾದವರೂ ಈ ಸಂಸ್ಥೆಯ ಆಶ್ರಯದಲ್ಲಿ ಸಮಾಧಾನವನ್ನು ಕಾಣುವಂತಾಯಿತು. ಏಕೆಂದರೆ ತಮ್ಮ ತಮ್ಮ ಮತವನ್ನು ಬಿಡದೆ ಈ ಸಂಸ್ಥೆಯ ಧಾರ್ಮಿಕಪರವಾದ ತತ್ತ್ವಗಳನ್ನು ಅನುಷ್ಠಾನಕ್ಕೆ ತರಲು ಸಾಧ್ಯವೆಂದಾದುದರಿಂದ ಹಲವರು ಈ ಸಂಸ್ಥೆಯ ಸದಸ್ಯರಾದರು. ಇದರಿಂದ ತಮ್ಮ ಬಾಳಿಗೆ ಹಿತವನ್ನು ತಂದುಕೊಂಡರು. ಮತಧರ್ಮವೇ ಬೇಡ ಎಂಬ ನಾಸ್ತಿಕ ಭಾವನೆಯ ಹಿಂದೂ ಜನರಿಗೆ ಈ ಸಂಸ್ಥೆಯು ಮತಧರ್ಮದ ಯೋಗ್ಯತೆ, ಅಗತ್ಯಗಳನ್ನು ಸ್ಪಷ್ಟಪಡಿಸಿ ಬಹುಜನರು ನಾಸ್ತಿಕರಾಗದಂತೆ ತಡೆಹಿಡಿಯಿತು. ಈ ಸಂಸ್ಥೆಯು ಹಿಂದೂಧರ್ಮದ ಗ್ರಂಥಗಳನ್ನು ಪ್ರಕಟಗೊಳಿಸಿ, ಸಾಕಷ್ಟು ಪ್ರಭಾವಯುತವಾಗಿ ಅವನ್ನು ದೇಶದಲ್ಲೆಲ್ಲಾ ಪ್ರಚಾರಮಾಡಿ ಹಿಂದೂಸಮಾಜದಲ್ಲಿ ಹೊಸ ಜಾಗೃತಿಯನ್ನು ಉಂಟುಮಾಡಿರುತ್ತದೆ. ಮಾತ್ರವಲ್ಲದೆ ಹಿಂದೂ ಸಮಾಜದವರಿಗೆ ತಮ್ಮ ಧರ್ಮ, ಸಂಸ್ಕೃತಿಯ ಹಿರಿಮೆಯನ್ನು ಪರಿಚಯ ಮಾಡಿಕೊಡುವುದರಲ್ಲಿ ಈ ಸಂಸ್ಥೆಯು ತುಂಬಾ ಯಶಸ್ವಿಯಾಗಿದೆ. ಇದರಿಂದಾಗಿ ಹಿಂದೂಗಳು ಇತರ ಮತಗಳಿಗೆ ಮತಾಂತರಹೊಂದುವ ಅವಕಾಶ ಗಮನಾರ್ಹವಾದ ಮಟ್ಟಿಗೆ ತಪ್ಪಿದಂತಾಯಿತು. ಒಟ್ಟಿನಲ್ಲಿ ಬ್ರಹ್ಮಸಮಾಜ, ಆರ್ಯಸಮಾಜಗಳು ಉತ್ತರ ಭಾರತದಲ್ಲಿ ಮಾಡಿದ ಕೆಲಸವನ್ನು ಥಿಯೊಸೊಫಿಕಲ್ ಸಂಸ್ಥೆಯು ಭಾರತದಲ್ಲೆಲ್ಲ ನಿರ್ವಹಿಸಿದರೂ ಮುಖ್ಯವಾಗಿ ದಕ್ಷಿಣ ಭಾರತದಲ್ಲಿ ಹಿಂದೂಗಳು ಹಿಂದೂಧರ್ಮದಲ್ಲಿಯೇ ಉಳಿಯುವಂತಾಗಲು ತುಂಬಾ ಸಹಾಯಮಾಡಿತು.

ಡಾ॥ ಆನ್ನಿಬೆಸೆಂಟ್ ಎಂಬ ಐರೋಪ್ಯ ಮಹಿಳೆ ಥಿಯೋಸೊಫಿ ಪಂಥವನ್ನು ಭಾರತದಲ್ಲಿ ಪ್ರಚಾರಮಾಡಿದ ಮಹಾಮೇಧಾವಿನಿ ಹಾಗೂ ಮುಖಂಡಳಾಗಿರುತ್ತಾರೆ. ಇವರು ಹಿಂದೂ ಶಾಸ್ತ್ರಗ್ರಂಥಗಳನ್ನು ಸಾಂಗವಾಗಿ ಅಭ್ಯಾಸಮಾಡಿ ಜೊತೆಗೆ ಆಧ್ಯಾತ್ಮಿಕವಾದ ಸಾಧನೆಯನ್ನೂ ಮಾಡಿ ತಮ್ಮ ವಿದ್ವತ್ಪೂರ್ಣವೂ, ಆಕರ್ಷಣೀಯವೂ ಆದ

ಭಾಷಣಗಳು, ಬರಹಗಳ ಮೂಲಕ ಹಿಂದೂಸಮಾಜದಲ್ಲಿ ಹೊಸ ಜಾಗೃತಿ-ಪ್ರಜ್ಞೆಗಳನ್ನು ಉಂಟುಮಾಡಿದರು.

ಹಿಂದೂಧರ್ಮ ಮತ್ತು ಹಿಂದೂ ಸಮಾಜದ ಧಾರ್ಮಿಕ, ರಾಜಕೀಯ ಮತ್ತು ಸಾಂಸ್ಕೃತಿಕವಾದ ಅಭಿವೃದ್ಧಿಗಾಗಿ ಡಾ|| ಆನ್ನಿಬೆಸೆಂಟ್ ಅಮ್ಮನವರು ತ್ರಿಕರಣಪೂರ್ವಕ ವಾಗಿ ಬಹಳ ಪರಿಣಾಮಕಾರಿಯಾದ ರೀತಿಯಲ್ಲಿ ದುಡಿದು ಭಾರತದ ಇತಿಹಾಸದಲ್ಲೇ ಚಿರಸ್ಮರಣೀಯರಾಗಿರುತ್ತಾರೆ. ಭಾರತೀಯರ ಪ್ರೀತಿ, ಗೌರವ ಮತ್ತು ಕೃತಜ್ಞತೆಗಳಿಗೆ ಪಾತ್ರರಾದ ಈ ವಿದೇಶೀಯ ವನಿತೆ ಹೊರರಾಷ್ಟ್ರದವರಾದರೂ ಕೂಡ ತಮ್ಮ ಜೀವನ, ನಡೆನುಡಿಗಳಲ್ಲಿ ಪೂರ್ಣ ಭಾರತೀಯ ಮಹಿಳೆಯೇ ಆಗಿದ್ದು ಭಾರತದ ಉತ್ಕರ್ಷಕ್ಕಾಗಿ ತನ್ನ ಸರ್ವಸ್ವವನ್ನೂ ಮುಡಿಪಾಗಿಟ್ಟು ದುಡಿದು ಸೇವೆಸಲ್ಲಿಸಿದ ಆದರ್ಶ ಮಹಿಳೆ ಯಾಗಿರುತ್ತಾರೆ.

ಹೀಗೆ ಅನೇಕ ರೀತಿಯ ಸುಧಾರಣೆಗಳು ಹಿಂದೂ ಸಮಾಜದಲ್ಲಿ ಆಗುತ್ತಿದ್ದಂತೆಯೇ ಬಹುವಾಗಿ ಈ ಸುಧಾರಣೆಗಳೆಲ್ಲ ಸನಾತನವಾದ ಹಿಂದೂಧರ್ಮದ ಮೂಲತತ್ತ್ವಗಳಿಗೆ ವಿರೋಧವಾಗಿರುತ್ತವೆ ಎಂಬ ಆಕ್ಷೇಪಣೆಯನ್ನು ಎತ್ತಿ, ಹಿಂದೂ ಸಮಾಜದ ಅನೇಕ ಧುರೀಣರು ಪ್ರತಿಭಟಿಸಲು ಮತ್ತು ತಮ್ಮ ವಾದವನ್ನು ಸಪ್ರಮಾಣವಾಗಿ ಸಮರ್ಥಿಸಲು ಆರಂಭಿಸಿದರು. ಈ ಚಳವಳಿಯ ಮುಖಂಡರೇ ಸುಪ್ರಸಿದ್ಧರಾದ ಲೋಕಮಾನ್ಯ ಬಾಲ ಗಂಗಾಧರ ತಿಲಕರು. ಇವರು ಭಗವದ್ಗೀತೆಯ ಕುರಿತಾಗಿ ಶ್ರೀಮದ್‌ಭಗವದ್ಗೀತಾ ರಹಸ್ಯ ಎಂಬ ಮಹಾ ಗ್ರಂಥವೊಂದನ್ನು ಬರೆದು ಅದರಲ್ಲಿ ಹಿಂದೂಧರ್ಮ, ಅದರ ಪ್ರಾಯೋಗಿಕತೆ, ಕರ್ಮ ಮತ್ತು ಸಂನ್ಯಾಸ, ಆತ್ಮಸಾಕ್ಷಾತ್ಕಾರ ಮತ್ತು ಲೋಕಸೇವೆ, ಗೃಹಸ್ಥ ಆಶ್ರಮದ ವೈಶಿಷ್ಟ್ಯ ಇತ್ಯಾದಿ ಅನೇಕ ಮಹತ್ವಪೂರ್ಣವಾದ ಸಮಸ್ಯೆಗಳ ಮೇಲೆ ವಿಸ್ತಾರವಾದ ವಿಚಾರದ ಬೆಳಕನ್ನು ಬೀರಿದರು. ಅಲ್ಲದೆ ತಮ್ಮ ವಿದ್ವತ್ ಪೂರ್ಣವಾದ ಭಾಷಣಗಳು ಮತ್ತು ಬರವಣಿಗೆಗಳ ಮೂಲಕ, ಸಾಂಸ್ಕೃತಿಕವಾಗಿ ಗಣೇಶ ಹಬ್ಬದ (ಚೌತಿ) ಆಚರಣೆಯನ್ನು ಸಾಮೂಹಿಕವಾಗಿ ವ್ಯವಸ್ಥೆಮಾಡುವುದರ ಮೂಲಕ ಹಿಂದೂ ಸಮಾಜದಲ್ಲಿ ಹೊಸ ಚೇತನವನ್ನು ತುಂಬಲು ದುಡಿದು ಯಶಸ್ವಿ ಗಳಾಗಿ ಲೋಕಮಾನ್ಯರಾದರು.

ಹೀಗೆ ಅನೇಕ ರೀತಿಯ ಸುಧಾರಣಾಕಾರ್ಯಕ್ರಮಗಳು ದೇಶದಲ್ಲಿ ನಡೆದಿದ್ದರೂ ಕೂಡ ಹಿಂದೂ ಸಮಾಜದಲ್ಲಿ ಸಂದಿಗ್ಧತೆ ಗೊಂದಲ-ಅಪಾಯಗಳು ಕಡಿಮೆಯಾಗಲಿಲ್ಲ.

(೧) ಬ್ರಹ್ಮಸಮಾಜವು ಹಿಂದೂಧರ್ಮದ ಅವತಾರವಾದ, ವಿಗ್ರಹಾರಾಧನೆ, ಜನ್ಮಾಂತರವಾದಗಳನ್ನು ಖಂಡಿಸಿ ವರ್ಣಭೇದವನ್ನು ಅಲ್ಲಗಳೆದಿತ್ತು.

(೨) ಆರ್ಯಸಮಾಜವು ವೇದೋಕ್ತಧರ್ಮವೇ ಧರ್ಮ ಎಂದು ಹೇಳಿ ಭಗವದ್ಗೀತೆ ಯನ್ನು ಅಲ್ಲಗಳೆದು ಹಿಂದೂಗಳಲ್ಲದ ಇತರ ಮತದವರನ್ನು ದೂಷಿಸಿ, ಖಂಡಿಸಿ ಹಿಂದೂ ಸಮಾಜದಲ್ಲಿ ಹಾಗೂ ಹಿಂದೂಧರ್ಮಕ್ಕೆ ಒಂದು ರೀತಿಯ ಸಂಕುಚಿತ ಸ್ವರೂಪವನ್ನು ತಂದುಕೊಟ್ಟಿತ್ತು. ಮಾತ್ರವಲ್ಲದೆ ಹಿಂದೂ ಸಂಪ್ರದಾಯವನ್ನು ಪೂರ್ತಿ ಅಡಿಮೇಲು ಮಾಡಿದಂತೆಯೂ ಆಗಿತ್ತು.

(೩) ಈ ಸಂದರ್ಭವನ್ನು ಉಪಯೋಗಿಸಿಕೊಂಡು ಕ್ರೈಸ್ತಾದಿ ಮತದ ಗುರುಗಳು, ಪ್ರಚಾರಕರು ಹಿಂದೂಧರ್ಮವನ್ನು ಸಾಕಷ್ಟು ಖಂಡಿಸುತ್ತಿದ್ದರು. ದುಷ್ಟ ರೀತಿಯಲ್ಲಿ ಅಪಪ್ರಚಾರ ಮಾಡುವಿಕೆ, ಹಲವು ರೀತಿಯ ಉಪಾಯಗಳನ್ನು ಹೂಡಿ ಹಿಂದೂಗಳನ್ನು ಮತಾಂತರಗೊಳಿಸುವಿಕೆ ಇವುಗಳು ನಡೆಯುತ್ತಬಂದುವು. ಪರಿಣಾಮವಾಗಿ, ಹಿಂದೂ ಸಮಾಜದಲ್ಲಿ ತುಂಬಾ ಸಂದಿಗ್ಧತೆ, ತೊಂದರೆಗಳು ಉಂಟಾದುವು.

(೪) ಥಿಯೋಸೊಫಿ ಸಂಸ್ಥೆಯು ಹಿಂದೂಧರ್ಮದ ಯೋಗ್ಯತೆಯನ್ನು ಎತ್ತಿ ತೋರಿಸಿದ್ದು ಹೌದಾದರೂ, ಮಾತ್ರವಲ್ಲದೆ ಸಾಕಷ್ಟು ಪ್ರಚಾರಮಾಡಿ ಜನರಲ್ಲಿ ಹಿಂದೂ ಧರ್ಮದ ಕುರಿತಾಗಿ ಉತ್ತಮ ಜೀವನದ ಬಗೆಗೆ ಪ್ರಜ್ಞೆಯನ್ನು ಉಂಟುಮಾಡಿದ್ದು ನಿಜವಾದರೂ, ಹೊರದೇಶದಿಂದ ಬಂದ ಸಂಸ್ಥೆಯಾದ್ದರಿಂದಲೂ, ವರ್ಣಧರ್ಮಕ್ಕೆ ಮಾನ್ಯತೆ ನೀಡದಿದ್ದುದರಿಂದಲೂ ಜನತೆಯ ಮೇಲೆ ಸಾಕಷ್ಟು ಪ್ರಭಾವ-ಹತೋಟಿಗಳನ್ನು ಬೀರಲು ಸಾಧ್ಯವಾಗದಂತಾಯಿತು.

(೫) ಹಿಂದೂಸಮಾಜದಲ್ಲಿ ಅದೆಷ್ಟೋ ಜನರು ಸ್ವತಃ ತಾವೇ ಆಚಾರ್ಯಪುರುಷರಾಗಿ ಹಿಂದೂಧರ್ಮದ ತತ್ತ್ವಗಳನ್ನು ತಮ್ಮ ತಮ್ಮ ದೃಷ್ಟಿಯಿಂದ 'ಇದೇ ಹಿಂದೂಧರ್ಮ' ಎಂದು ಹೇಳಿ ಪ್ರಚಾರಮಾಡಹೊರಟರು. ಅಲ್ಲದೆ ತಮ್ಮ ವಾದವೇ ಸರಿಯಾಗಿದ್ದು ಅದನ್ನು ಅನುಸರಿಸಿದರೆ ಮಾತ್ರ ಸಮಾಜ ಉದ್ಧಾರವಾಗುವುದೆಂದು ಹೇಳತೊಡಗಿದರು.

ಈ ಮೇಲಿನ ಐದು ಅಂಶಗಳ ಪ್ರಭಾವದಿಂದಾಗಿ ಹಿಂದೂ ಸಮಾಜದಲ್ಲಿ ಹೊಸ ಜಾಗೃತಿ, ಹೊಸ ಸುಧಾರಣೆ ಅವಶ್ಯವೆಂದಾಯಿತು. ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವದಿಂದ ಹಿಂದೂಧರ್ಮವನ್ನು ರಕ್ಷಿಸುವ ಅಗತ್ಯ ಅತಿಹೆಚ್ಚಾಯಿತು. ಈ ಬಿಕ್ಕಟ್ಟಿನ ಹಾಗೂ ವಿಷಮಪರಿಸ್ಥಿತಿಯಲ್ಲಿ ಅವತರಿಸಿಬಂದ ಮಹಾಪುರುಷರೇ ಶ್ರೀ ರಾಮಕೃಷ್ಣ ಪರಮಹಂಸರು. ಸನಾತನಧರ್ಮದ ಸಂಪೂರ್ಣ ಪ್ರತಿನಿಧಿಯಂತೆ ಇರುವ ಇವರು ೧೮೩೬ರಲ್ಲಿ ಬಂಗಾಳ ಪ್ರಾಂತ್ಯದಲ್ಲಿ ಅವತರಿಸಿದರು. ಇವರ ಜೀವನವೆಂದರೆ 'ಸಮಗ್ರ ಹಿಂದೂ ಜನಾಂಗವು ಯುಗಯುಗಗಳ ತನಕ ವಿಚಾರ ಮಾಡಿದುದನ್ನು ಒಂದೇ ಜೀವನದಲ್ಲಿ ಅವರು (ಶ್ರೀ ರಾಮಕೃಷ್ಣರು) ಕಾರ್ಯತಃ ಬಾಳಿದರು. ಅವರ ಜೀವನ ಎಂದರೆ ಎಲ್ಲಾ ರಾಷ್ಟ್ರಗಳ ವೇದಗಳ ಕುರಿತಾದ ಸಚೇತನ ಭಾಷ್ಯವಾಗಿರುತ್ತದೆ'[1] ಎಂದು ಸ್ವಾಮಿ ವಿವೇಕಾನಂದರು ಹೇಳಿರುತ್ತಾರೆ. 'ಶ್ರೀ ರಾಮಕೃಷ್ಣ ಪರಮಹಂಸರ ಜೀವನವೆಂದರೆ ಬದುಕಿನಲ್ಲಿ ದೇವರನ್ನು ಮುಖಾಮುಖಿಯಾಗಿ ಕಂಡಂತೆ' ಎಂದು ಮಹಾತ್ಮಾ ಗಾಂಧೀಜಿಯವರು ಹೇಳಿರುತ್ತಾರೆ.[2]

ಶ್ರೀ ರಾಮಕೃಷ್ಣ ಪರಮಹಂಸರು ಯಾವ ಧರ್ಮವನ್ನೂ ಹಳಿಯಲಿಲ್ಲ; ಹೊಸ ಗ್ರಂಥರಚನೆ, ಭಾಷ್ಯ-ಟೀಕೆಗಳ ಬರವಣಿಗೆಯನ್ನೂ ಮಾಡಲಿಲ್ಲ, ನೂತನವಾದ ಪಂಥವೊಂದನ್ನು ಸ್ಥಾಪಿಸಲಿಲ್ಲ. ಭಗವಂತನೊಬ್ಬನೇ, ಅವನನ್ನು ಸೇರಲು ವಿವಿಧ ಪಂಥಗಳು

---

[1] 'What the whole Hindu race has thought for ages he lived in one life. His life is the living commentary on the *Vedas* of all nations ..'

—*Complete Works of S. V.*, Vol., VI, p. 288

[2] 'ಶ್ರೀ ರಾಮಕೃಷ್ಣ ಪರಮಹಂಸರ ಜೀವನ ಚರಿತ್ರೆ'ಯ ಮುನ್ನುಡಿ.

ಇದ್ದು ಅವೇ ವಿವಿಧ ಮತಗಳಾಗಿದ್ದು ಎಲ್ಲವೂ ಸತ್ಯ ಎಂದು ಮಾತ್ರ ಇವರು ಹೇಳಿದರು. ಸನಾತನಧರ್ಮದಲ್ಲಿ ವಿವಿಧ ತತ್ತ್ವ, ಪಂಥಗಳಿಗೆ ಹೇಗೆ ಅವಕಾಶವಿದೆಯೋ ಹಾಗೆ ಶ್ರೀ ರಾಮಕೃಷ್ಣ ಪರಮಹಂಸರ ಜೀವನವು ವಿವಿಧ ಧರ್ಮ, ತತ್ತ್ವಗಳ ಭಾವಗಳಿಂದ ಕೂಡಿದ್ದು ಸರ್ವಧರ್ಮಸಮನ್ವಯಾತ್ಮಕವಾಗಿ ಅರಳಿ ಬೆಳಗಿತು. ಬಾಹ್ಯ ಆರಾಧನೆಯ ಆರಂಭದ ಹಂತದಿಂದ ನಿರ್ವಿಕಲ್ಪಸಮಾಧಿಯ ಉನ್ನತೋನ್ನತ ಹಂತದ ತನಕ ಇವರು ಆಧ್ಯಾತ್ಮಜೀವನದ ಪಥದಲ್ಲಿ ತಮ್ಮ ಒಂದೇ ಜೀವನದ ಕೇವಲ ಐವತ್ತು ವರ್ಷಗಳ ಕಾಲಾವಧಿಯಲ್ಲಿ ಸಾಗಿಹೋದ ಮಹಾಪುರುಷರಾಗಿರುತ್ತಾರೆ. ಇವರು ಹಿಂದುವಾಗಿ ಹಿಂದೂಧರ್ಮದ ಶಾಕ್ತ, ಶೈವ, ವೈಷ್ಣವ ಎಂಬಿತ್ಯಾದಿ ವಿವಿಧ ಪಂಥಗಳ ರೀತಿಯಲ್ಲಿ ಅಧ್ಯಾತ್ಮಸಾಧನೆಯನ್ನು ಮಾಡಿ, ಸಿದ್ಧಿಯನ್ನು ಪಡೆದು ಯಶಸ್ವಿಯಾದರು. ಮಾತ್ರ ವಲ್ಲದೆ ಕ್ರೈಸ್ತ, ಮುಸಲ್ಮಾನ ಧರ್ಮಗಳ ರೀತಿಯಲ್ಲೂ ಸಾಧನೆಯನ್ನು ಮಾಡಿ ಆ ಪಥಗಳ ಮೂಲಕ ಸಾಗಿ, ಸತ್ಯದ ನೆಲೆಯನ್ನು ಸೇರಿ, ಇರುವುದೊಂದೇ ಸತ್ಯ, ಒಬ್ಬನೇ ದೇವರು. ಆದರೆ ಪಥಗಳು ವಿವಿಧ ಎಂಬ ಸನಾತನ ವೈದಿಕಸತ್ಯವನ್ನು ಸತ್ಯ ಸಾಕ್ಷಾತ್ಕಾರದ ಮೂಲಕ ಸ್ವತಃ ಕಂಡುಕೊಂಡು ಆ ದಿವ್ಯಸತ್ಯವನ್ನು ಸ್ಪಷ್ಟವಾಗಿ ಪ್ರಕಟ ಪಡಿಸಿದರು.

ಹೀಗೆ ಶ್ರೀ ರಾಮಕೃಷ್ಣ ಪರಮಹಂಸರು ಸನಾತನಧರ್ಮದ ತತ್ತ್ವಗಳು ಸಚೇತನವೂ ಪ್ರಾಯೋಗಿಕವೂ ಆದುವೆಂದು ತಮ್ಮ ಜೀವನದಲ್ಲಿ ಸ್ವಂತದ ಆದರ್ಶದಿಂದ ತೋರಿಸಿ ಕೊಟ್ಟು, ಅದರಂತೆ ಇತರ ಧರ್ಮಗಳು ಕೂಡ ಅಷ್ಟೇ ಸತ್ಯ ಎಂದು ಸಾಕ್ಷಾತ್ಕಾರದ ಬಲ ದಿಂದ ಅಧಿಕಾರಯುತವಾಗಿ ದೃಢೀಕರಿಸಿದರು.

ಪಾಶ್ಚಾತ್ಯ ಸಂಸ್ಕೃತಿ–ಧರ್ಮಗಳ ಪ್ರಭಾವಕ್ಕೆ ಹಾಗೂ ಹಿಂದೂ ಸಮಾಜದ ಬೇರೆ ಬೇರೆ ಸಂಸ್ಥೆಗಳ ಪ್ರಭಾವಕ್ಕೆ ಒಳಗಾದವರು ಇವರ ಪವಿತ್ರವಾದ ಆದರ್ಶ ಮತ್ತು ಸತ್ಯ ಸಾಕ್ಷಾತ್ಕಾರದ ಬಲದಿಂದ ನುಡಿದ ನುಡಿಗಳಲ್ಲಿ ಬೆಳಕನ್ನು ಕಾಣುವಂತಾಯಿತು. ಮಹರ್ಷಿ ದೇವೇಂದ್ರನಾಥ ಠಾಕೂರರು, ಸ್ವಾಮಿ ದಯಾನಂದ ಸರಸ್ವತಿ, ಶ್ರೀ ಕೇಶವ ಚಂದ್ರ ಸೇನ ಇವರೆಲ್ಲರೊಡನೆ ಶ್ರೀ ರಾಮಕೃಷ್ಣರು ಸಂಭಾಷಣೆಯನ್ನು ನಡೆಸಿದ್ದು ಅವರೆಲ್ಲರ ಸಮಕಾಲೀನರಾಗಿದ್ದರು. ಇತರ ಹಿಂದೂ ಸಂಸ್ಥೆಗಳಿಂದ ಸುಧಾರಿಸಲು ಸಾಧ್ಯವಾಗದ ಜಾತೀಯ-ಮತೀಯವಾದ ಅನೇಕ ವಿಧದ ಸಮಸ್ಯೆಗಳಿಗೆ ಶ್ರೀ ರಾಮಕೃಷ್ಣರ ಬೋಧನೆ ಗಳಲ್ಲಿ ಪರಿಹಾರದ ಬೆಳಕನ್ನು ಜನರು ಕಾಣುವಂತಾಯಿತು. ಹಿಂದೂಸಮಾಜ ಪುನಃ ತನ್ನ ಅಜ್ಞಾನವೆಂಬ ನಿದ್ದೆಯಿಂದ ಎಚ್ಚೆತ್ತ ಸಿಂಹದಂತಾಯಿತು. ಇವರ ಶಿಷ್ಯವೃಂದದಲ್ಲಿ ಪಾಶ್ಚಾತ್ಯವಿದ್ಯಾಪಾರಂಗತರೂ, ಸಮಾಜದ ಗಣ್ಯವ್ಯಕ್ತಿಗಳೂ ಎಲ್ಲರೂ ಸೇರಿದ್ದರು. ಅವರಲ್ಲಿ ಸಂನ್ಯಾಸಿ ಮತ್ತು ಗೃಹಸ್ಥ ಎಂಬ ಎರಡು ತಂಡವಾಗಿ ಇವರ ದಿವ್ಯಸಂದೇಶ ಗಳನ್ನು ದೇಶವಿದೇಶಗಳಲ್ಲೆಲ್ಲಾ ಪ್ರಚಾರಮಾಡುವಂತಾಯಿತು. ಶ್ರೀ ರಾಮಕೃಷ್ಣ ಪರಮಹಂಸರ ಶಿಷ್ಯರಲ್ಲಿ ಅಗ್ರಗಣ್ಯರಾದವರೇ ನರೇಂದ್ರನಾಥ ದತ್ತ ಎಂಬ ಬಿ.ಎ. ಪದವೀಧರ ವ್ಯಕ್ತಿ. ಇವರೇ ಮುಂದೆ ಸ್ವಾಮಿ ವಿವೇಕಾನಂದ ಎಂಬ ಹೆಸರಿನಿಂದ ಸಂನ್ಯಾಸಿಯಾಗಿ ಹಿಂದೂಧರ್ಮದ ಪುನರುದ್ಧಾರಕ್ಕೆ ಕಾರಣರಾಗಿ ಆ ಬಗೆಗೆ ವಿಶ್ವದಲ್ಲೆಲ್ಲಾ ಧರ್ಮಪ್ರಚಾರಕಾರ್ಯವನ್ನು ಎಸಗಿದರು. ಇವರಿಂದಾಗಿ ಹಿಂದೂಧರ್ಮದ ಬಗ್ಗೆ

ದೇಶವಿದೇಶಗಳಲ್ಲಿದ್ದ ತಪ್ಪು ತಿಳುವಳಿಕೆ, ಅಗೌರವ ಅಲಕ್ಷ್ಯ ಭಾವನೆಗಳು ಅಳಿದು, ಗೌರವಪೂಜ್ಯತೆಗಳು ಕೂಡಿಬರುವಂತಾಯಿತು. ಹೀಗೆ ಹಿಂದೂಧರ್ಮದ ಕೀರ್ತಿಧ್ವಜ ವನ್ನು ಇವರು ಉನ್ನತನೆಲೆಯಲ್ಲಿ ಹಾರಿಸಿದರು. ಶ್ರೀ ರಾಮಕೃಷ್ಣ ಪರಮಹಂಸರು ಮತ್ತು ಸ್ವಾಮಿ ವಿವೇಕಾನಂದರು ಒಂದೇ ನಾಣ್ಯದ ಎರಡು ಮುಖಗಳು ಎಂದು ಹೇಳ ಬಹುದು. ಶ್ರೀ ರಾಮಕೃಷ್ಣ ಪರಮಹಂಸರು ತಮ್ಮ ಆಧ್ಯಾತ್ಮಿಕ ಸಾಧನೆಗಳಿಂದ ವಿವಿಧ ಧರ್ಮಗಳ ಸಮನ್ವಯ ಸಿದ್ಧಾಂತವನ್ನು ತೋರಿಸಿಕೊಟ್ಟಂತೆ ಅವರು ಜೀವನದಲ್ಲಿ ಧರ್ಮದ ಅನುಷ್ಠಾನಕ್ಕೆ ಹಾಗೂ ಪ್ರಯೋಗಕ್ಕೆ ಹೊಸ ಸ್ವರೂಪ ಮತ್ತು ಸ್ಥಾನವನ್ನು ನೀಡಿದರು. ಅವರ ಶಿಷ್ಯರಾದ ಸ್ವಾಮಿ ವಿವೇಕಾನಂದರು ೧೮೯೩ರಲ್ಲಿ ಅಮೆರಿಕಾ ಚಿಕಾಗೊ ನಗರದಲ್ಲಿ ಸಮಾವೇಶಗೊಂಡ ಪ್ರಪಂಚದ ಮೊತ್ತಮೊದಲ ಸರ್ವಧರ್ಮ ಸಮ್ಮೇಳನ ದಲ್ಲಿ ಭಾಗವಹಿಸಿ ಸನಾತನಧರ್ಮದ ಪೂರ್ಣಪ್ರತಿನಿಧಿಯಾಗಿ ಮಾತನಾಡಿ, ಹಿಂದೂ ಧರ್ಮದ ಹಿರಿಮೆ, ಆದರ ಸಮನ್ವಯ ಸಿದ್ಧಾಂತವನ್ನು ಜಗತ್ತಿಗೆಲ್ಲಾ ಸಾರಿದರು. ಸ್ವಾಮಿ ವಿವೇಕಾನಂದರು ಆ ಸರ್ವಧರ್ಮ ಸಮ್ಮೇಳನದ ವೇದಿಕೆಯಿಂದ ಮಾಡಿದ ಭಾಷಣವು ಹಿಂದೂಧರ್ಮದ ಇತಿಹಾಸದಲ್ಲಿ ಅತ್ಯಂತ ಸ್ಮರಣೀಯ ಹಾಗೂ ಪ್ರಮುಖ ವಾದ ಅಂಶವಾಗಿದೆ. ಹಿಂದೂಧರ್ಮವು ಜೀವಂತವಾದುದು, ಅದು ಪ್ರಾಯೋಗಿಕ ವಾದುದು ಎಂಬುದನ್ನು ಸ್ವಾಮಿ ವಿವೇಕಾನಂದರು ಜಗತ್ತಿಗೇ ತೋರಿಸಿಕೊಟ್ಟುದು ಮಾತ್ರವಲ್ಲದೆ ಹಿಂದೂಧರ್ಮದ ಕುರಿತಾಗಿ ಸರಿಯಾದ ಪರಿಚಯವನ್ನೂ ಮಾಡಿ ಕೊಟ್ಟರು.

ಸ್ವಾಮಿ ವಿವೇಕಾನಂದರು ಭಾರತದ ಆದ್ಯಂತ ಸಂಚರಿಸಿ ಹಿಂದೂ ಸಮಾಜದಲ್ಲಿ ನೆಲೆನಿಂತಿದ್ದ ಅಧೈರ್ಯ, ಮಾನಸಿಕ ದಾಸ್ಯ, ಪರಸಂಸ್ಕೃತಿಯ ಅನುಕರಣಬುದ್ಧಿ, ಮತೀಯ ವಾದ ಅನೇಕ ಮೂಢನಂಬಿಕೆಗಳು, ಅನೇಕ ವಿಧವಾದ ದುಷ್ಟಬುದ್ಧಿಗಳು, ಕಲ್ಪನೆಗಳು ಇವುಗಳನ್ನು ಎತ್ತಿತೋರಿಸಿ ಅವುಗಳನ್ನು ಖಂಡಿಸಿದರು. ತಮ್ಮ ಆಧ್ಯಾತ್ಮಿಕ ಸಾಧನಾ ಸಂಪತ್ತು, ಅಪಾರವಾದ ಶಾಸ್ತ್ರಪಾಂಡಿತ್ಯ, ಪಾಶ್ಚಿಮಾತ್ಯ-ಪೌರ್ವಾತ್ಯ ಪರಂಪರೆ ಸಂಸ್ಕೃತಿ ಧರ್ಮಗಳ ಆಳವಾದ ಪಾಂಡಿತ್ಯ, ಇವುಗಳೆಲ್ಲದರ ಬಲ ಮತ್ತು ಪ್ರತಿಭೆಗಳಿಂದ ಸ್ವಾಮಿ ವಿವೇಕಾನಂದರು ಭಾಷಣ ಮಾಡಿದರು, ಲೇಖನಗಳನ್ನು ಬರೆದರು. ಭಾರತವಿಡೀ ಸಂಚರಿಸಿ ಹಿಂದೂಗಳು ಶಕ್ತಿಪೂರ್ಣರೂ ವಿವೇಕಿಗಳೂ ಆಗಿ ಜಾಗೃತರಾಗಬೇಕೆಂದು ತಮ್ಮ ಸಿಂಹಸದೃಶವಾದ ವಾಣಿಯಲ್ಲಿ ಎಚ್ಚರಿಸಿ ಮಾರ್ಗದರ್ಶನ ನೀಡಿದರು.

ಭರತಖಂಡವು ಹಿಂದೆ ಸಾಧಿಸಿದ ಮಹಾಕಾರ್ಯಗಳು ಅನೇಕವಾದರೆ ಮುಂದೆ ಅದು ಜಗತ್ತಿನಲ್ಲಿ ಸಾಧಿಸಲಿರುವುದು ಇನ್ನೂ ಹೆಚ್ಚಾಗಿರುವುದು ಎಂದು ಹೇಳಿ ಜಗತ್ತಿನಲ್ಲಿ ಭಾರತದ ಸ್ಥಾನ ಎಂದರೆ ಆಧ್ಯಾತ್ಮ ಆಚಾರ್ಯನಾಗಿ ಧರ್ಮದ ಬೆಳಕನ್ನು ಬೀರುವುದು ಎಂದು ಹೇಳಿದರು. ಹೃದಯ, ಶಿರಸ್ಸು ಮತ್ತು ಕೈಗಳು ಮೂರೂ ಬೆಳೆದು ದೇಶದ ಸರ್ವಾಂಗೀಣ ಉನ್ನತಿಯಾಗಬೇಕು ಎಂದು ಅವರು ಹೇಳಿದರು. 'ಬಹುಜನಹಿತಾಯ' 'ಬಹುಜನಸುಖಾಯ' ಎಂಬಂತೆ (ಬಹುಜನರ ಸುಖಕ್ಕಾಗಿ, ಬಹುಜನರ ಹಿತಕ್ಕಾಗಿ) ಎಲ್ಲರೂ ಶ್ರಮಿಸಬೇಕೆಂದು ಹೇಳಿ ಹಿಂದೂಧರ್ಮದ ನಿಜವಾದ ಸ್ವರೂಪ ಏನೆಂಬುದನ್ನು ಆಧುನಿಕ ಕಾಲದಲ್ಲಿ ಕಾಲಕ್ಕೆ ಸರಿಯಾದ ಭಾಷೆ-ವಾದಗಳ ಸಹಿತ ಸ್ಪಷ್ಟಪಡಿಸಿದರು.

'ಶಿವಜ್ಞಾನೇ ಜೀವೇರ್ ಸೇವಾ' (ಜೀವಿಗಳೆಲ್ಲರೂ ಶಿವನ, ದೇವರ ರೂಪಗಳೆಂದು ತಿಳಿದು ಸೇವೆಮಾಡುವಿಕೆ), 'ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ' (ಆತ್ಮದ ಮೋಕ್ಷಕ್ಕೂ ಮತ್ತು ಜಗತ್ತಿನ ಹಿತಕ್ಕೂ), 'ದರಿದ್ರದೇವೋ ಭವ' (ದರಿದ್ರನನ್ನು ದೇವರೆಂದು ಕಾಣು), 'ದೀನದೇವೋ ಭವ' (ದೀನನನ್ನು ದೇವರೆಂದು ಕಾಣು) ಎಂಬ ಹೊಸ ಮಂತ್ರಗಳನ್ನು ಅವರು ಘೋಷಿಸಿ ಹಿಂದೂಧರ್ಮದ ವೇದಾಂತತತ್ತ್ವಗಳಿಗೆ ವಿನೂತನವಾದ ಪ್ರಯೋಗಸ್ವರೂಪವನ್ನು ನೀಡಿದರು. ಹಿಂದೂಧರ್ಮದ ಅನೇಕ ಒಳಭೇದಗಳನ್ನು ಅವರು ಮಾನ್ಯಮಾಡಿ ಆಯಾಯಾ ಭೇದಗಳು (ಉದಾ : ದ್ವೈತ, ವಿಶಿಷ್ಟಾದ್ವೈತ, ಅದ್ವೈತ ಎಂಬವುಗಳು) ಆಯಾಯಾ ಸ್ಥಾನದಲ್ಲಿ ಮೇಲು ಎಂದು ಹೇಳಿ ಒಂದಕ್ಕೊಂದು ಪೂರಕವಾಗಿವೆಯೇ ವಿನಾ ವಿರೋಧವಾಗಿಲ್ಲ ಎಂದು ಹೇಳಿದರು. ಮಾತ್ರವಲ್ಲದೆ ಹಿಂದೂಧರ್ಮದ ಒಳಪಂಗಡದವರ ಪರಸ್ಪರ ವೈಷಮ್ಯ ಅಳಿದು ಸಹಬಾಳ್ವೆಯುಂಟಾಗಲು ಅನೇಕ ರೀತಿಯಲ್ಲಿ ಬೋಧನೆ–ಮಾರ್ಗದರ್ಶನಗಳ ಮೂಲಕ ದುಡಿದರು. ಅನುದಿನದ ಜೀವನದಲ್ಲಿ ಧರ್ಮವು ಕಾರ್ಯಾನುಷ್ಠಾನಕ್ಕೆ ಬರಬೇಕು ಎಂದು ಹೇಳಿ ಅವರು ಜೀವನದ ವಿವಿಧ ಕ್ಷೇತ್ರದ ಜನರಿಗೆ ಹಿಂದೂಧರ್ಮವು ಪ್ರಯೋಗಸಾಧ್ಯವಾಗಬೇಕೆಂದು ಹೇಳಿ ಆ ಬಗೆಗೆ ತಮ್ಮ ಜೀವನ–ಆದರ್ಶಗಳಿಂದ ಮಾರ್ಗದರ್ಶನ ನೀಡಿದರು. ಹಿಂದೂಧರ್ಮದ ವಿಶ್ವವ್ಯಾಪಕ ಸಂದೇಶವನ್ನು ಜಗತ್ತಿನ ವಿವಿಧ ಭಾಗಗಳಲ್ಲಿ ಹರಡಿದ್ದು ಮಾತ್ರವಲ್ಲದೆ ಧರ್ಮಪ್ರಚಾರಕ್ಕಾಗಿ ಸೂಕ್ತವಾದ ವ್ಯವಸ್ಥೆಯನ್ನು ಮಾಡಿದರು. ಆತ್ಮನ ಮೋಕ್ಷ ಹಾಗೂ ಜಗತ್ತಿನ ಹಿತದ ಆದರ್ಶದೊಡನೆ ಅವರು ಶ್ರೀ ರಾಮಕೃಷ್ಣ ಸಂನ್ಯಾಸಿ ಮಠ ಮತ್ತು ಮಿಶನ್ ಸಂಸ್ಥೆಯನ್ನು ಸ್ಥಾಪಿಸಿದರು. ವೇದಾದಿಶಾಸ್ತ್ರ ಅಧ್ಯಯನ, ದೇವತಾ ಪೂಜೆ,ಧ್ಯಾನ–ಇವುಗಳ ಜೊತೆಗೆ ಅನೇಕ ರೀತಿಯ ಜನೋಪಯೋಗಿ ಕೆಲಸಗಳನ್ನು ಅದರ ಒಡನೆ ಬೆರೆಸಿ ಅವೆಲ್ಲವನ್ನೂ ಸೇವೆ–ಶಿವಜ್ಞಾನದಿಂದ ಜೀವಿಗಳ ಸೇವೆ—ಎಂದು ಕರೆದರು. ಶಿಕ್ಷಣಶಾಲೆಗಳು, ರೋಗಿಗಳಿಗೆ ಆಸ್ಪತ್ರೆ, ಯಾಂತ್ರಿಕ–ತಾಂತ್ರಿಕ ಶಿಕ್ಷಣಾಲಯಗಳು, ಬರಗಾಲ, ಪ್ರವಾಹಗಳಿಂದ ಪೀಡಿತರಾದ ಜನರಿಗೆ ಸಹಾಯಮಾಡುವಿಕೆ ಮೊದಲಾದ ಲೋಕೋಪಯೋಗಿ ಸೇವಾಕೆಲಸಗಳನ್ನು ಮಾಡುವುದೇ ಈ ಸಂಸ್ಥೆಯ ಗುರಿ ಎಂದು ಸಾರಿದರು. ದೇಶವಿದೇಶಗಳಲ್ಲಿ ಧಾರ್ಮಿಕವಾದ ಸಾಹಿತ್ಯಗಳನ್ನು ಪ್ರಕಟಿಸಿ ಸ್ವಂತ ಆದರ್ಶ ಮತ್ತು ಪ್ರಾಯೋಗಿಕ ಶಿಕ್ಷಣದ ಮೂಲಕ ಧರ್ಮಪ್ರಚಾರಮಾಡುವುದನ್ನು ಶ್ರೀ ರಾಮಕೃಷ್ಣ ಮಠದ ಸಂನ್ಯಾಸಿ ಸದಸ್ಯರು ಅತ್ಯಂತ ಪರಿಣಾಮಕಾರಿಯಾದ ರೀತಿಯಲ್ಲಿ ನಿರ್ವಹಿಸುವಂತಾಯಿತು. ತತ್ಫಲವಾಗಿ, ಹೊಸ ಯುಗದಲ್ಲಿ ಸನಾತನಧರ್ಮದ ಪ್ರಯೋಗ-ಸಾಧ್ಯತೆಯ ಅರಿವು ಜನರಲ್ಲಾದಂತೆ ಪರಮತಗಳಿಗೆ ಮತಾಂತರಹೊಂದುವಿಕೆ, ಸ್ವಮತ ಖಂಡನೆ, ಒಳಪಂಥಗಳ ದುಷ್ಪ್ರಭಾವ ಇವುಗಳು ಕಡಿಮೆಯಾಗುವಂತಾಯಿತು. ಹಿಂದೂಸಮಾಜದಲ್ಲಿ ಹೊಸ ಚೇತನ-ಉತ್ಸಾಹ-ಭರವಸೆಗಳುಂಟಾದುವು. ಹಳೆಯದು ಯಾವುದನ್ನೂ ಹಳಿಯದೆ, ಹೊಸದಾಗಿ ಯಾವುದನ್ನೂ ಸೇರಿಸದೆ. ಹಳೆಯದನ್ನೇ ಹೊಸ ಭಾಷೆಯಲ್ಲಿ ಅದೂ ಹೊಸ ಕಾಲಕ್ಕೆ ಸರಿಯಾಗುವಂತೆ ಹೇಳಿರುವ ಶ್ರೀ ರಾಮಕೃಷ್ಣ ಪರಮಹಂಸರ ಸಂದೇಶಗಳ ವಾಹಕರಾಗಿ ಸ್ವಾಮಿ ವಿವೇಕಾನಂದರು ಕೆಲಸ ಮಾಡಿ ಶ್ರೀ ರಾಮಕೃಷ್ಣ ಮಠ ಮತ್ತು ಮಿಶನ್ ಸಂಸ್ಥೆಗಳನ್ನು ಸ್ಥಾಪಿಸಿ ಹಿಂದೂಧರ್ಮದ ಸನಾತನ

ತತ್ತ್ವಗಳಿಗೆ ಬಂದ ಆಘಾತಗಳನ್ನು ಬಹುಮಟ್ಟಿಗೆ ಗುಣಪಡಿಸಿ, ಹೊಸ ಆಘಾತಗಳು ಆದರೂ ಕೂಡ ಅವುಗಳ ಪ್ರಭಾವಕ್ಕೆ ಒಳಗಾಗದಂತೆ ಹಿಂದೂಧರ್ಮದ ರಕ್ಷಣೆಯ ವ್ಯವಸ್ಥೆಯನ್ನು ಮಾಡಿದರು ಎಂದರೆ ತಪ್ಪಾಗಲಾರದು. ಹೀಗೆ ಅನುಪಮವೂ ಅದ್ಭುತ ರಮ್ಯವೂ ಸಾರ್ಥಕಯುಕ್ತವೂ ಆದ ಪವಿತ್ರ ಬಾಳನ್ನು ಬಾಳಿ ಲಕ್ಷಾಂತರ ಮಂದಿಯ ಬದುಕಿಗೆ ಹೊಸ ಬೆಳಕು, ಸ್ಫೂರ್ತಿಗಳನ್ನು ನೀಡಿ, ಹಿಂದೂಧರ್ಮವನ್ನು ಪುನಃ ಉಜ್ಜೀವನಗೊಳಿಸಿ ಸ್ವಾಮಿ ವಿವೇಕಾನಂದರು ೧೯೦೨ ಜುಲೈ ೪ರಂದು ಇಳೆಯಿಂದ ಕಣ್ಮರೆಯಾದರು.

ಸ್ವಾಮಿ ವಿವೇಕಾನಂದರು ಸ್ವತಃ ಆಂಗ್ಲವಿದ್ಯಾಭ್ಯಾಸದಲ್ಲಿ ಪಳಗಿದವರೂ ಆಧುನಿಕ ವಿಜ್ಞಾನವಿದ್ಯಾವಿಚಾರವಾಗಿ ಅರಿವು ಉಳ್ಳವರೂ ಆಗಿದ್ದು ಸನಾತನ ಹಿಂದೂಧರ್ಮದ ಸತ್ಯಗಳನ್ನು ತಮ್ಮ ಆದರ್ಶಜೀವನ, ವಿದ್ವತ್‌ಪೂರ್ಣವಾದ ಭಾಷಣಗಳು, ಲೇಖನಗಳು, ಬೋಧನೆ ಇವುಗಳ ಮೂಲಕ ದೇಶವಿದೇಶಗಳಲ್ಲಿ ಪ್ರಚಾರಮಾಡಿದರು. ಇದರಿಂದಾಗಿ ಹಿಂದೂ ವಿದ್ಯಾವಂತ ಸಮಾಜದಲ್ಲಿ ವಿಶೇಷವಾದ ಪರಿಣಾಮ ಉಂಟಾಗಿ ಹಿಂದೂಧರ್ಮದ ಬಗ್ಗೆ ತಿಳಿಯಲು, ತಿಳಿದುದನ್ನು ಕಾರ್ಯತಃ ಅನುಸರಿಸಲು ವಿಶೇಷವಾದ ಆಸಕ್ತಿ ಹಿಂದೂಗಳಲ್ಲಿ ಉಂಟಾಯಿತು. ಅಷ್ಟೇ ಅಲ್ಲ, ಇತರರಲ್ಲೂ ಉಂಟಾಯಿತು. ಅದರಂತೆ ಭಾರತದ ಆದ್ಯಂತ ಮಾತ್ರವಲ್ಲ ವಿದೇಶಗಳಿಂದಲೂ ಜನರು ಹೆಚ್ಚಿನ ಸಂಖ್ಯೆಯಲ್ಲಿ ಶ್ರೀರಾಮಕೃಷ್ಣ ಮಠಕ್ಕೆ ಬಂದು ಆಧ್ಯಾತ್ಮಿಕ ದೀಕ್ಷೆಯನ್ನು ಪಡೆದು ಸಮರ್ಥ ಸಂನ್ಯಾಸಿಗಳಾಗುವಂತಾಯಿತು. ಇದರಿಂದ ವಿವಿಧ ಭಾಷೆ, ವಿವಿಧ ಪಂಥಗಳಿಗೆ ಸೇರಿದ ಜನರು ಸನಾತನ ಹಿಂದೂಧರ್ಮದ ಹೆಸರಿನಲ್ಲಿ ಒಂದಾಗುವಂತಾಯಿತು. ಹೀಗೆ ಶ್ರೀ ರಾಮಕೃಷ್ಣಮಠ ಮತ್ತು ಮಿಶನ್ ಸಂಸ್ಥೆಯಿಂದಾಗಿ ಹಿಂದೂಧರ್ಮದ ಕುರಿತಾಗಿ ಹೊಸ ಜಾಗೃತಿ, ಪ್ರಜ್ಞೆ ಜನರಲ್ಲುಂಟಾಯಿತು.

ಸ್ವಾಮಿ ವಿವೇಕಾನಂದರನಂತರ ಹಿಂದೂ ಧರ್ಮದ ಬಗ್ಗೆ ಆಧುನಿಕ ಯುಗದಲ್ಲಿ ವಿಶ್ವದ ಬಹುಭಾಗಗಳಲ್ಲಿ ಪ್ರಚಾರಕಾರ್ಯಗಳು ಶ್ರೀರಾಮಕೃಷ್ಣಮಠದ ಅನೇಕ ಶಾಖೆಗಳ ಮೂಲಕ ವಿದ್ಯಾವಂತರೂ ಸಮರ್ಥರೂ ಆದ ಸಂಘದ ಸಂನ್ಯಾಸಿ ಸದಸ್ಯರ ಮೂಲಕ ನಡೆಯುತ್ತಾ ಬರುವಂತಾಯಿತು. ಹಿಂದೂಧರ್ಮದ ಕುರಿತಾಗಿ ಜಗತ್ತಿನ ವಿವಿಧ ಎಡೆಗಳಲ್ಲಿ ಜನರಲ್ಲಿ ಆಸಕ್ತಿಗೌರವಗಳು ಹೆಚ್ಚು ಹೆಚ್ಚು ಉಂಟಾದುವು. ಇವುಗಳಿಗೆ ಒಳಗಾದವರಿಗೆ ಇಂಗ್ಲಿಷ್ ವಿದ್ಯಾಭ್ಯಾಸ-ವಿಜ್ಞಾನದ ಬೆಳವಣಿಗೆಯ ಪ್ರಭಾವ, ಇವುಗಳಿಂದಾಗಿ ಹಿಂದೂಧರ್ಮದ ವೇದಾಂತತತ್ತ್ವಗಳ ಮೇಲೆ (ಜನರಿಗೆ) ಹೆಚ್ಚು ಆಸಕ್ತಿ ಮೂಡಿಬರುವಂತಾಯಿತು. ಹಿಂದೂಧರ್ಮಗ್ರಂಥಗಳ ಪ್ರಸಾರ, ಅಖಿಲ ಭಾರತ ಮಾತ್ರವಲ್ಲದೆ, ವಿಶ್ವದ ವಿವಿಧ ಭಾಗಗಳಲ್ಲಿ ರಾಮಕೃಷ್ಣಮಠಗಳ ಸ್ಥಾಪನೆ, ಧರ್ಮಪ್ರಚಾರ, ಇವುಗಳಿಂದ ಕೂಡಿ ಶ್ರೀ ರಾಮಕೃಷ್ಣಮಠ ಮತ್ತು ಮಿಶನ್ ಸಂಸ್ಥೆಯು ದುಡಿಯುತ್ತಾ ಬರುತ್ತಾ, ಹಿಂದೂಧರ್ಮದ ಬಗೆಗೆ ಹೊಸ ಅರಿವನ್ನು ಜನರಿಗೆ ನೀಡಿತು. ಆಧುನಿಕ ಕಾಲದಲ್ಲಿ ಹಿಂದೂಧರ್ಮದ ಪ್ರಚಾರ ದೇಶವಿದೇಶಗಳಲ್ಲಿ ಬಿರುಸಿನಿಂದ ಆಗಲು ಕಾರಣವಾದ ಮೊಟ್ಟಮೊದಲಿನ ಏಕೈಕವಾದ, ಸರ್ವಜನಾಂಗ, ದೇಶ, ಭಾಷೆ, ಮತಗಳ ಭೇದವಿಲ್ಲದೆ ಬೆಳೆದು ಬಾಳುತ್ತಾ ಬಂದ ಶ್ರೀ ರಾಮಕೃಷ್ಣ ಮಠ ಮತ್ತು ಮಿಶನ್ ಸಂಸ್ಥೆ

ಯಿಂದಾಗಿ ಹಿಂದೂ ಸಮಾಜಕ್ಕೆ, ಹಿಂದೂಧರ್ಮಕ್ಕೆ ಅನೇಕ ವಿಧದಲ್ಲಿ ಉಪಕಾರ ವಾಯಿತು. ಅಷ್ಟೇ ಅಲ್ಲದೆ, ರಕ್ಷಣೆಯೂ ದೊರಕಿ, ಹೊಸ ಚೇತನ ಲಭಿಸಿದಂತಾಯಿತು.

ಈ ಸಂದರ್ಭದಲ್ಲಿ ಗುರುದೇವ ವಿಶ್ವಕವಿ ಶ್ರೀ ರವೀಂದ್ರನಾಥ ಠಾಕೂರರೂ ಹಿಂದೂ ಧರ್ಮದ ಕುರಿತಾಗಿ ತಮ್ಮ ಕವಿತೆ, ಕಾದಂಬರಿ, ನಾಟಕ ಮೊದಲಾದ ಸಾಹಿತ್ಯದ ವಿವಿಧ ರೂಪದ ಮಹಾನ್ ಗ್ರಂಥಗಳು, ದೇಶವಿದೇಶಗಳಲ್ಲಿ ಪ್ರವಾಸ ಕೈಕೊಂಡು ನೀಡಿದ ಭಾಷಣಗಳು, ಬರೆದ ಲೇಖನಗಳು ಇವುಗಳ ಮೂಲಕ ಸಾಕಷ್ಟು ಪ್ರಚಾರಮಾಡಿದರು. ಅವರು ಸ್ವತಃ ತಮ್ಮ ಋಷಿಸದೃಶವಾದ ಜೀವನ ಹಾಗೂ ತಾವು ಸ್ಥಾಪಿಸಿದ ಶಾಂತಿ ನಿಕೇತನ ಮತ್ತು ವಿಶ್ವಭಾರತಿ ಎಂಬ ಶಿಕ್ಷಣಕೇಂದ್ರಗಳ ಮೂಲಕ ಹಿಂದೂ ಸಮಾಜದಲ್ಲಿ ಹೊಸ ಅರಿವು-ಉತ್ಸಾಹವನ್ನು ತುಂಬಿದರು ; ಪ್ರಭಾವವನ್ನು ಬೀರಿದರು.

ಹಿಂದೂಧರ್ಮದ ಕುರಿತಾಗಿ ದೇಶವಿದೇಶಗಳಲ್ಲಿ ಜನರ ಆಸಕ್ತಿಯನ್ನು ಕೆರಳಿಸಿ ಅವರಲ್ಲಿ ತಿಳಿವಳಿಕೆಯನ್ನು ಉಂಟುಮಾಡಿದ ಇನ್ನೊಂದು ಮಹಾಪುಣ್ಯಚೇತನವೇ ಶ್ರೀ ರಮಣ ಮಹರ್ಷಿಗಳು. ಇವರು ತಿರುವಣ್ಣಾಮಲೈ ಎಂಬಲ್ಲಿ ನೆಲೆಸಿ ತಮ್ಮ ದಿವ್ಯತಪಸ್ಸು, ಸಾಧನೆಗಳಿಂದ ಆತ್ಮಸಾಕ್ಷಾತ್ಕಾರವನ್ನು ಪಡೆದು ಜಗತ್ತಿಗೆ ಆಧ್ಯಾತ್ಮಿಕವಾದ ಬೆಳಕನ್ನು ನೀಡಿದ ಮಹಾಯೋಗಿಗಳೂ ತಪೋಧನರೂ ದಿವ್ಯಜ್ಞಾನಿಗಳೂ ಆಗಿರುತ್ತಾರೆ. ಇವರ ದಿವ್ಯವಾದ ಬೋಧನೆ, ಆದರ್ಶಜೀವನ ಇವುಗಳಿಂದಾಗಿ ಹಿಂದೂಧರ್ಮ ಎಂದರೆ ತಾತ್ಸಾರಭಾವದಿಂದ ಕಾಣುತ್ತಿದ್ದವರು, ಧರ್ಮದ ಕುರಿತಾಗಿ ಸರಿಯಾದ ಪರಿಜ್ಞಾನ ವಿಲ್ಲದವರು, ನಾಸ್ತಿಕರು ಎಂದು ಹೀಗೆ ವಿವಿಧ ವರ್ಗದ ಬಹುಸಂಖ್ಯಾತರು ತಮ್ಮ ಜೀವನಕ್ಕೆ ಸರಿಯಾದ ಬೆಳಕು, ಮಾರ್ಗದರ್ಶನ ಮತ್ತು ಆಧ್ಯಾತ್ಮಿಕವಾದ ಮೌಲ್ಯಗಳನ್ನು ಪಡೆಯುವಂತಾಯಿತು. ದೇಶವಿದೇಶಗಳಿಂದ ಬಹುಸಂಖ್ಯೆಯಲ್ಲಿ ಜನರು ಬಂದು ಮಹರ್ಷಿ ರಮಣರ ಪವಿತ್ರ ಪದತಲದಲ್ಲಿ ಕುಳಿತು ತಮ್ಮ ಬದುಕಿಗೆ ಬೆಳಕು, ಚೇತನಗಳನ್ನು ಪಡೆದಿರುತ್ತಾರೆ. ಇವರ ಕಾಲದಲ್ಲಿ ಹಿಂದೂಧರ್ಮದ ಕುರಿತಾಗಿ ದೇಶವಿದೇಶಗಳಲ್ಲಿ ತುಂಬಾ ಪ್ರಚಾರಕಾರ್ಯವು ಇವರ ಅನೇಕ ಅನುಯಾಯಿಗಳ ಮೂಲಕ ಪರಿಣಾಮಕಾರಿಯಾದ ರೀತಿಯಲ್ಲಿ ನಡೆದಿರುತ್ತದೆ. ೧೮೭೯ನೆಯ ಇಸವಿಯಲ್ಲಿ ಶ್ರೀ ರಮಣಮಹರ್ಷಿಗಳು ರಾಮನಾಡು ಜಿಲ್ಲೆಯ ತಿರುಚುಳಿ ಎಂಬಲ್ಲಿ ಜನ್ಮವೆತ್ತಿ ಏಳು ದಶಕಗಳಿಗೂ ಹೆಚ್ಚುಕಾಲ ಇಳೆಯಲ್ಲಿ ಬಾಳಿ ೧೯೫೦ನೇ ಇಸವಿಯಲ್ಲಿ ದೇಹತ್ಯಾಗವೆಸಗಿ ಸ್ಮೃತಿಪೂಜ್ಯರಾದರು. ತಿರುವಣ್ಣಾಮಲೈಯಲ್ಲಿ ಇಂದಿರುವ ಶ್ರೀ ರಮಣಾಶ್ರಮವು ದೇಶವಿದೇಶಗಳ ಸಹಸ್ರಾರು ಮಂದಿ ಜನರಿಗೆ ಹಿಂದೂಧರ್ಮದ ವಿಶ್ವವ್ಯಾಪಕ ಸಂದೇಶಗಳನ್ನು ನೀಡುತ್ತಿರುವ ದಿವ್ಯ ಹಾಗೂ ಪವಿತ್ರವಾದ ಮತಧರ್ಮದ ಕ್ಷೇತ್ರವಾಗಿರುತ್ತದೆ.

ನವೋದಯ ಕಾಲಘಟ್ಟದಲ್ಲಿ ಭಾರತದಲ್ಲಿ ಅವತರಿಸಿ ಪತಿತರ ಪಾಲಿಗೆ ಪರಂಜ್ಯೋತಿ ಯಾಗಿ ಬೆಳಗಿ ಮನುಕುಲಕ್ಕೆ ಸನಾತನ ಹಿಂದೂಧರ್ಮದ ವಿನೂತನ ಸಂದೇಶವನ್ನು ಬೀರಿದ ಮತ್ತೊಬ್ಬ ಮಹಾಪುರುಷರೇ ಬ್ರಹ್ಮಶ್ರೀ ನಾರಾಯಣಗುರು ಸ್ವಾಮಿಗಳು. ದಕ್ಷಿಣ ಭಾರತದ ಕೇರಳ ರಾಜ್ಯದಲ್ಲಿ ತಿರುವನಂತಪುರ ಸಮೀಪದ ಚೆಂಪಳಂದಿ ಎಂಬಲ್ಲಿ ೧೮೫೪ರಲ್ಲಿ ಇವರ ಜನ್ಮವಾಯಿತು. ಶ್ರೀ ನಾರಾಯಣಗುರುಗಳು ಅವತರಿಸಿದ ಸಂದರ್ಭದಲ್ಲಿ ಹಿಂದೂಸಮಾಜದಲ್ಲಿ ಅಸ್ಪೃಶ್ಯತೆಯ ಮಹಾವ್ಯಾಧಿ ಅತ್ಯಂತ ಭೀಕರವಾಗಿ

ಹರಡಿತ್ತು. ಸವರ್ಣೀಯರು ನಡೆಯುವ ಹಾದಿಯಲ್ಲಿ ಅಂತ್ಯಜರು ಎಂದು ಕರೆಯಲ್ಪಟ್ಟವರು ನಡೆಯಬಾರದಾಗಿತ್ತು. ಊರಿನಲ್ಲಿ ಅವರು ಸವರ್ಣೀಯರಿಗೆ ಸೇರಿದ ಬಾವಿಯಿಂದ ನೀರನ್ನು ಸೇದಿಕೊಳ್ಳುವಂತಿಲ್ಲ. ದೇವಸ್ಥಾನಗಳಿಗೆ ಅವರಿಗೆ ಪ್ರವೇಶ ಇರಲಿಲ್ಲ. ದೇವರ ಭಜನೆ-ಸ್ತೋತ್ರಗಳನ್ನು ಮಾಡಲು ಅವರು ಅನರ್ಹರು ಎಂದು ಸವರ್ಣೀಯರಿಂದ ಪರಿಗಣಿತರಾಗಿ ಸಮಾಜದಲ್ಲಿ ನಿರ್ಲಕ್ಷಿಸಲ್ಪಟ್ಟಿದ್ದರು. ಶಾಲೆಗಳಲ್ಲಿ ಅಂತ್ಯಜರಿಗೆ ವ್ಯಾಸಂಗಕ್ಕೆ ಗೌರವದ ಅವಕಾಶವಿರಲಿಲ್ಲ. ಅನೇಕರು ಶಾಲೆಗೆ ಬರುವಂತೆಯೂ ಇರಲಿಲ್ಲ. ಹೀಗ ತೀರಾ ನಿಕೃಷ್ಟರೆಂದು ಕಡೆಗಣಿಸಲ್ಪಟ್ಟ ಉತ್ತಮ ಜೀವನದ ಕಲ್ಪನೆಯೂ ಇಲ್ಲದೆ ಅತ್ಯಂತ ತಾಮಸಿಕವಾದ ಜೀವನವನ್ನು ಅವರು ಮಾಡುವಂತಾಯಿತು. ಇದರಿಂದ ಊರಿನಲ್ಲಿ, ಸಮಾಜದಲ್ಲಿ ತೀರಾ ದಾರುಣವಾದ ಜೀವನಪರಿಸ್ಥಿತಿಯಲ್ಲಿ ಬಾಳುವಂತಹ ಜನಸ್ತೋಮ ಒಂದೆಡೆ ಇರುವಂತಾಯಿತು. ದೇವನೊಬ್ಬ ನಾಮ ಹಲವು, ಎಲ್ಲರ ತಂದೆತಾಯಿ ದೇವರು, ದೇವರು ಸರ್ವರ ಹೃದಯದಲ್ಲೂ ನೆಲಸಿದ್ದಾನೆ ಎಂದು ಸಾರುವ ಸನಾತನ ಹಿಂದೂಧರ್ಮದ ತತ್ತ್ವಗಳು ನಿತ್ಯಜೀವನದಲ್ಲಿ ಪ್ರಯೋಗಕ್ಕೆ ಬರಬೇಕಾದಾಗ ಈ ರೀತಿ ಜಾತಿ-ವರ್ಗಭೇದಗಳು ಒಂದು ಧರ್ಮದ ಹೆಸರಿನಲ್ಲಿ ಉಂಟಾಗಿ ಅನ್ಯಾಯ, ಅವ್ಯವಸ್ಥೆಗಳು ಮಿತಿಮೀರುವಂತಾದವು. ಆಗ ಅಸ್ಪೃಶ್ಯರೆಂದು ಪರಿಗಣಿಸಲ್ಪಟ್ಟು ಕಡೆಗಣಿಸಲ್ಪಟ್ಟಿದ್ದ ತೀಯರ ವರ್ಗದಲ್ಲಿ ಅವತರಿಸಿ ದೀನಜನರ ಉದ್ಧಾರಕ್ಕಾಗಿ ಲೋಕಕ್ಕೆ ಬೆಳಕಾಗಿ ಬಾಳಿದ ವಿಭೂತಿಪುರುಷರೇ ಶ್ರೀ ನಾರಾಯಣಗುರು ಸ್ವಾಮಿಗಳು.

ಶ್ರೀ ನಾರಾಯಣಗುರುಗಳು ನಿಮ್ನವರ್ಗದ ಕುಟುಂಬದಲ್ಲಿ ಜನ್ಮತಳೆದರೂ ಉನ್ನತ ಮಟ್ಟದ ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕ ಸಂಸ್ಕಾರ, ತಪಸ್ಸುಗಳಿಂದ ಪವಿತ್ರರೂ ಪರಿಪೂರ್ಣರೂ ಆದರು. ಮಾನವನ ಗುರಿ ಭಗವಂತನ ಸಾಕ್ಷಾತ್ಕಾರ. ಅದಕ್ಕೆ ಜೀವನದಲ್ಲಿ ಬೇಕಾದುದು ದೇಹ ಮನ ಕಾಯಕಗಳ ಪರಿಶುದ್ಧಿ ಎಂದರು. ಭಗವಂತ ಭಕ್ತಿಯಿಂದ, ಪರಿಶುದ್ಧಿಯಿಂದ ಕರೆದರೆ ಎಲ್ಲರಿಗೂ ಒಲಿಯಬಲ್ಲ. ಜಾತಿ ಮತ ವರ್ಗಗಳೆಲ್ಲ ಮಾನವನಿರ್ಮಿತ, ತಾತ್ಕಾಲಿಕ-ಕೃತಕ. ಇಳೆಯಲ್ಲಿ ಇರುವುದು ಒಂದು ಜಾತಿ, ಒಂದು ಕುಲ, ಒಂದು ದೇವರು. ಹಾಗಾಗಿ ಮಾನವರು ಎಲ್ಲರೂ ಸವರ್ಣೀಯರು ಎಂದು ಸಾರಿದರು. ಅದರಂತೆ ಸಮಾಜದ ಕೀಳುವರ್ಗದವರ ಶುದ್ಧೀಕರಣಕ್ಕೆ ವ್ಯವಸ್ಥೆ ಮಾಡಿದರು. ಅವರಿಗಾಗಿ ಸಂಸ್ಕೃತ ಹಾಗೂ ಇತರ ವಿದ್ಯಾಭ್ಯಾಸಕ್ಕಾಗಿ ಶಾಲೆಗಳನ್ನು ಸ್ಥಾಪಿಸಿದರು, ದೇವಮಂದಿರಗಳನ್ನು ಪ್ರತಿಷ್ಠೆಮಾಡಿದರು. ಅಲ್ಲೆಲ್ಲಾ ಎಲ್ಲ ವರ್ಗದವರಿಗೂ ಪ್ರವೇಶವಿದೆ ಎಂದು ಸಾರಿದರು. ಕೀಳುವರ್ಗದಲ್ಲಿ ಜನಿಸಿದವರು ಪೂಜೆಮಾಡಬಾರದು, ಮಂತ್ರ ಕಲಿಯಬಾರದು, ವಿದ್ಯಾವಂತರಾಗಬಾರದು, ಅವರಿಗದು ಅಗತ್ಯವೂ ಇಲ್ಲ, ಸಾಧ್ಯವೂ ಇಲ್ಲ ಎಂದು ಹೇಳುತ್ತಿದ್ದ ಸವರ್ಣೀಯರ ಮುಂದೆ ಸಮರ್ಥವಾದ ರೀತಿಯಲ್ಲಿ ಪುರೋಹಿತರು, ಅರ್ಚಕರು, ಅಧ್ಯಾಪಕರು, ಧರ್ಮಪ್ರಚಾರಕರು ಎಲ್ಲರನ್ನೂ ನಿಮ್ನವರ್ಗದವರಿಂದಲೇ ಆರಿಸಿ ಶಿಕ್ಷಣ ನೀಡಿ ತಯಾರುಮಾಡಿದರು. ಮಾನವನ ಜಾತಿ ನಿರ್ಣಯವಾಗುವುದು ಹುಟ್ಟಿನಿಂದಲ್ಲ, ಗುಣಕರ್ಮದಿಂದ ಎಂಬುದನ್ನು ಸ್ಪಷ್ಟಪಡಿಸಿದರು. ಕೇರಳ, ಕರ್ನಾಟಕ, ತಮಿಳುನಾಡು, ಸಿಂಹಳ ಇತ್ಯಾದಿ ಎಡೆಗಳಲ್ಲೆಲ್ಲಾ ಸ್ವಾಮಿಗಳು ಸಂಚರಿಸಿ ಜನರಿಗೆ ಸನಾತನಧರ್ಮದ ಕುರಿತಾಗಿ ವಿಶೇಷವಾದ ಮಾರ್ಗದರ್ಶನವಿತ್ತು, ಅನುಗ್ರಹಿಸಿ

ವರು. ಅವರ ಪ್ರೇರಣೆ-ಪ್ರೋತ್ಸಾಹ-ಅನುಗ್ರಹಗಳಿಂದ ನೂರಾರು ದೇವಮಂದಿರಗಳು, ವಿದ್ಯಾಸಂಸ್ಥೆಗಳು ಹುಟ್ಟಿಕೊಂಡವು. ನಿಮ್ನವರ್ಗದ ಜನರು ದೇಹ-ಮನ-ಬುದ್ಧಿಗಳಿಗೆ ಸತ್‌ಸಂಸ್ಕಾರ ಪಡೆದು ಸವರ್ಣೀಯರು ಆಗುವಂತಾಯಿತು. ಶ್ರೀ ನಾರಾಯಣಗುರುಗಳ ಆದರ್ಶವನ್ನು ಅನುಸರಿಸಿ ಅದರ ಪ್ರಚಾರಕ್ಕಾಗಿ ಶ್ರೀ ನಾರಾಯಣ ಧರ್ಮ ಪರಿಪಾಲನ ಸಂಘ (S.N.D.P.) ಎಂಬ ಸೇವಾ ಸಂಸ್ಥೆ ಸ್ಥಾಪನೆಗೊಂಡಿತು.

ಉನ್ನತ ಆದರ್ಶಜೀವನದ ಪರಿಪಾಲನೆಗೆ ಜಾತಿಮತಗಳ ಭೇದವಿಲ್ಲ ಎನ್ನುವ ಹಿಂದೂ ಧರ್ಮದ ನಿತ್ಯನೂತನ ಸಂದೇಶಕ್ಕೆ ಜೀವಂತನಿದರ್ಶನವಾಗಿದ್ದ ಶ್ರೀ ನಾರಾಯಣಗುರುಗಳ ಬೋಧನೆಯ ಬೆಳಕಿನಲ್ಲಿ ಶ್ರೀ ನಾರಾಯಣ ಧರ್ಮ ಪರಿಪಾಲನಾ ಸಂಘವು ವ್ಯಾಪಕವಾಗಿ ಬೆಳೆಯುವಂತಾಯಿತು. ಅದರಿಂದಾಗಿ ಹಿಂದೂ ಸಮಾಜದಲ್ಲಿ ವಿಶೇಷವಾದ ಧಾರ್ಮಿಕ ಪ್ರಜ್ಞೆ ಮೂಡುವಂತಾಗಿ ಅಸಂಖ್ಯಾತ ಮಂದಿ ಅಸ್ಪೃಶ್ಯರು ಉನ್ನತಸಂಸ್ಕಾರ ಹೊಂದುವಂತಾಗಿ ಹಿಂದೂ ಸಮಾಜದ ಶುದ್ಧೀಕರಣಕಾರ್ಯ ವಿಶೇಷವಾದ ಪ್ರಮಾಣದಲ್ಲಿ ಸಾಧಿಸುವಂತಾಯಿತು.

೧೮೫೪ರಲ್ಲಿ ಜನ್ಮತಳೆದ ಶ್ರೀ ನಾರಾಯಣ ಗುರು ಸ್ವಾಮಿಗಳು ೧೯೨೮ರಲ್ಲಿ ಪ್ರಪಂಚದಿಂದ ಅದೃಶ್ಯರಾದರು. ದಿನಕಳೆದಂತೆ ಇವರ ಹಿರಿಜೀವನ, ಆದರ್ಶಗಳು ದೇಶವಿದೇಶಗಳಲ್ಲಿ ಕೊಂಡಾಡಿ ಅನುಸರಿಸುವಂತಾಯಿತು. ಕೇರಳದಲ್ಲಿ ಶಿವಗಿರಿ ಎಂಬಲ್ಲಿ ಶ್ರೀ ನಾರಾಯಣ ಧರ್ಮಪರಿಪಾಲನೆ ಸಂಘದ ಕೇಂದ್ರ ಕಛೇರಿ ಇದ್ದು ಅನೇಕ ಸಂನ್ಯಾಸಿ ಹಾಗೂ ಅಸಂಖ್ಯಾತ ಗೃಹಸ್ಥಭಕ್ತರು ಈ ಮಹಾಸಂಸ್ಥೆಯ ಆಶ್ರಯದಲ್ಲಿ ಧರ್ಮ ಪ್ರಚಾರ, ವಿದ್ಯಾಪ್ರಚಾರ, ದೀನದಲಿತರ ಸೇವೆ ಇವುಗಳನ್ನು ಮಾಡುತ್ತಿದ್ದಾರೆ. ಕನ್ನಡ ನಾಡಿನಲ್ಲಿ ಮಂಗಳೂರಿನಲ್ಲಿ ಕುದ್ರೋಳಿಯಲ್ಲಿರುವ ಶ್ರೀ ಗೋಕರ್ಣನಾಥ ಕ್ಷೇತ್ರವು ಶ್ರೀ ನಾರಾಯಣಗುರು ಸ್ವಾಮಿಗಳ ಆದರ್ಶದ ಅನುಷ್ಠಾನದ ಬಗ್ಗೆ ಪ್ರಖ್ಯಾತವಾದ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕೇಂದ್ರವಾಗಿ ಬೆಳಗುತ್ತಿದೆ.

ಹೀಗೆ ಶ್ರೀ ನಾರಾಯಣಗುರು ಸ್ವಾಮಿಗಳು ಹಿಂದೂಧರ್ಮದ ಉದ್ಧಾರಕ್ಕಾಗಿ ಅವತರಿಸಿಬಂದಂತೆ ನವಯುಗದಲ್ಲಿ ಹಿಂದೂಧರ್ಮದ ಅರ್ಥಪೂರ್ಣವಾದ ಪ್ರಾಯೋಗಿಕ ಅನುಷ್ಠಾನಕ್ಕೆ ಸಮರ್ಥವಾದ ರೀತಿಯಲ್ಲಿ ಮಾರ್ಗದರ್ಶನ ನೀಡಿ ಸುವ್ಯವಸ್ಥೆ ಮಾಡಿ ಅನುಗ್ರಹಿಸಿರುವ ಲೋಕಗುರುವಾಗಿದ್ದು ನಿತ್ಯಸ್ಮರಣೀಯರಾಗಿರುತ್ತಾರೆ.

ಹಿಂದೂಧರ್ಮದ ತತ್ತ್ವಗಳು ನಿತ್ಯನೂತನವಾದವುಗಳು ಹಾಗೂ ನಿತ್ಯೋಪಯೋಗವಾದವುಗಳು ಎಂಬುದನ್ನು ಕಾಲಕಾಲಕ್ಕೆ ಅನೇಕ ಮಹಾಪುರುಷರು ಭಾರತದಲ್ಲಿ ಅವತರಿಸಿ ದೃಢಪಡಿಸಿರುತ್ತಾರೆ. ಅವರ ಸಾಲಿನಲ್ಲಿ ಮೂಡಿಬಂದ ಗಣೇಶಪುರಿಯ ಸ್ವಾಮಿ ನಿತ್ಯಾನಂದ ಮಹಾರಾಜರು ಈ ಸಂದರ್ಭದಲ್ಲಿ ಸ್ಮರಣೀಯರು. ಸ್ವಾಮಿ ನಿತ್ಯಾನಂದರು ಮುಂಬಯಿ ಬಳಿಯ ವಜ್ರೇಶ್ವರಿಗೆ ಒತ್ತಾಗಿ ಗಣೇಶಪುರಿಯಲ್ಲಿ ತಮ್ಮ ಆಧ್ಯಾತ್ಮಿಕ ಅನುಗ್ರಹದ ಕೇಂದ್ರವನ್ನು ಮಾಡಿಕೊಂಡಿದ್ದರೂ ಅವರು ಜನ್ಮವೆತ್ತಿದ್ದು ಕೇರಳದ ವಡಕರ ಊರಿನ ಸಮೀಪದ ಪುತ್ತೂರು ಎಂಬಲ್ಲಿ. ೧೮೯೭ರಲ್ಲಿ ಅವತರಿಸಿದ ಸ್ವಾಮಿ ನಿತ್ಯಾನಂದರು ೧೯೬೧ರಲ್ಲಿ ಮಹಾಸಮಾಧಿಹೊಂದಿ ಲೋಕದಿಂದ ಕಣ್ಮರೆಯಾದರು.

ಸ್ವಾಮಿ ನಿತ್ಯಾನಂದರು ತಮ್ಮ ಮಹಾನ್ ಯೋಗಶಕ್ತಿಯಿಂದ ಅಸಂಖ್ಯಾತ ಮಂದಿಯ

ಜೀವನಕ್ಕೆ ಭರವಸೆಯ ನಂದಾದೀಪವಾಗಿ ಬೆಳಗಿದರು. ಧರ್ಮ, ಶ್ರದ್ಧೆ, ಭಕ್ತಿ, ಆತ್ಮ ವಿಶ್ವಾಸಗಳನ್ನು ಕಳಕೊಂಡು ಜೀವನದಲ್ಲಿ ಎಡವಿದ ಅದೆಷ್ಟೋ ಪತಿತರನ್ನು ಉದ್ಧಾರ ಮಾಡಿದರು. ನಿಮ್ನವರ್ಗದವರು ಎಂದು ಕಡೆಗಣಿಸಲ್ಪಟ್ಟವರು ಅಗಣಿತಮಂದಿ ಸ್ವಾಮಿಗಳ ಕರುಣಾದೃಷ್ಟಿಗೆ ಒಳಗಾಗಿ ಉನ್ನತಜೀವನ ನಡೆಸುವಂತಾಯಿತು. ಜಾತಿ-ಜಾತಿಗಳ ಭೇದ ವಿಲ್ಲದಿರುವಿಕೆ, ಆತ್ಮನ ದಿವ್ಯತೆ, ಅಂತರಂಗಸಾಮರ್ಥ್ಯ, ಭಕ್ತಿಶ್ರದ್ಧೆಗಳು ಇತ್ಯಾದಿ ಹಿಂದೂ ಧರ್ಮ ನಿತ್ಯನೂತನ ತತ್ತ್ವಗಳನ್ನು ಸ್ವಾಮಿ ನಿತ್ಯಾನಂದರು ತಮ್ಮ ದಿವ್ಯಜೀವನ, ಉಪ ದೇಶಗಳ ಮೂಲಕ ಜನಮನದಲ್ಲಿ ನೆಲೆಗೊಳಿಸಿದರು. ಅದೆಷ್ಟೋ ಸಹಸ್ರ ಮಂದಿ ಭಕ್ತರಿಗೆ ಸ್ವಾಮಿ ನಿತ್ಯಾನಂದರು ಪ್ರತ್ಯಕ್ಷ ಭಗವಂತ ಎಂದಾದರು. ಸ್ವಾಮಿಗಳು ಮೊದಲು ಕಾಞಂಗಾಡಿನಲ್ಲಿ ಗುಹೆಯೊಂದರಲ್ಲಿ ಕೆಲಕಾಲ ತಂಗಿ ತಮ್ಮ ಯೋಗಶಕ್ತಿಯ ಪ್ರಭಾವ ವನ್ನು ಬೀರಿ ಪಾವನಪ್ರಸಿದ್ಧರಾದರು. ಆಮೇಲೆ ಭಾರತದಲ್ಲೆಲ್ಲಾ ಪುಣ್ಯಕ್ಷೇತ್ರಗಳ ಸಂದ ರ್ಶನ ಮುಗಿಸಿ ಮುಂಬಯಿಯ ಬಳಿ ಗಣೇಶಪುರಿಯಲ್ಲಿ ನೆಲೆನಿಂತು ಅಸಂಖ್ಯಾತ ಮಂದಿಯ ಬದುಕಿಗೆ ಅಭಯ-ಆಶೀರ್ವಾದಗಳ ಮಹಾಶಕ್ತಿಯ ಮೂರ್ತಿಸ್ವರೂಪರಾಗಿ ಬೆಳಗಿದರು.

ಮಹಾಯೋಗಿಯಾಗಿದ್ದ ಸ್ವಾಮಿ ನಿತ್ಯಾನಂದರು ಬಹುಸಂಖ್ಯೆಯಲ್ಲಿ ತಮ್ಮ ಬಳಿ ಬರುತ್ತಿದ್ದ ಭಕ್ತರ ಪ್ರಾರ್ಥನೆಗಳನ್ನೆಲ್ಲ ನೆರವೇರಿಸುತ್ತಿದ್ದರು. ಸುವ್ಯವಸ್ಥಿತ ಸನ್ಯಾಸಶಿಷ್ಯ ಪರಂಪರೆಯನ್ನು ಲೋಕಸೇವೆಗಾಗಿ ಬಿಟ್ಟುಹೋಗಿರುವ ಸ್ವಾಮಿ ನಿತ್ಯಾನಂದರ ಜೀವನ-ಸಂದೇಶಗಳ ಬೆಳಕಿನಲ್ಲಿ ಇಂದು ಧಾರ್ಮಿಕ, ಶೈಕ್ಷಣಿಕ, ಸಾಮಾಜಿಕ ಪುರೋಗಮನಕ್ಕಾಗಿ ಅನೇಕ ಆಶ್ರಮಗಳು, ಮಂದಿರಗಳು, ವಿದ್ಯಾಸಂಸ್ಥೆಗಳು, ದೇಶದಲ್ಲಿಂದು ಸ್ಥಾಪನೆ ಗೊಂಡಿವೆ. ದೇಶವಿದೇಶಗಳಲ್ಲಿ ಸ್ವಾಮಿಗಳ ದಿವ್ಯಜೀವನ-ಸಂದೇಶಗಳ ಪ್ರಸರಣ ಕೇಂದ್ರಗಳಿದ್ದು ಅಗಣಿತ ಮಂದಿ ಭಕ್ತರು, ಆಸಕ್ತರು ಸ್ವಾಮಿ ನಿತ್ಯಾನಂದರ ಕೃಪೆಗೆ ಪಾತ್ರ ರಾಗುತ್ತಾ ಬಂದಿರುತ್ತಾರೆ. ಹೀಗೆ ಸ್ವಾಮಿ ನಿತ್ಯಾನಂದರ ಜೀವನ-ಸಂದೇಶಗಳಿಂದಾಗಿ ಹಿಂದೂಧರ್ಮದ ರಕ್ಷಣೆ ಮತ್ತು ಪೋಷಣೆಯ ಕಾರ್ಯವು ಗಣನೀಯವಾದ ರೀತಿಯಲ್ಲಿ ಇತ್ತೀಚಿನ ದಶಕಗಳಲ್ಲಿ ನಡೆದಿದೆ.

ಹಿಂದೂಧರ್ಮದ ರಕ್ಷಣೆ ಮತ್ತು ಪ್ರಚಾರಕ್ಕಾಗಿ ಇತ್ತೀಚಿನ ದಶಕಗಳಲ್ಲಿ ಮುಂಬ ಯಿಯ ಭಾರತೀಯ ವಿದ್ಯಾಭವನ ಸಂಸ್ಥೆಯು ಶ್ಲಾಘ್ಯವಾದ ರೀತಿಯಲ್ಲಿ ಗಣನೀಯ ವಾದ ಸೇವೆಯನ್ನು ಸಲ್ಲಿಸುತ್ತಾಬಂದಿದೆ. ಸಂಸ್ಥೆಯ ಸಂಸ್ಥಾಪಕರಾದ ಡಾ॥ ಕೆ. ಎಂ. ಮುನ್‌ಷಿಯವರು (ಕನ್ಹೈಲಾಲ್ ಮಾಣಿಕಲಾಲ್ ಮುನ್‌ಷಿ) ಹಿಂದೂಧರ್ಮದ ಮತ್ತು ಸಂಸ್ಕೃತಿಯ ಆಳವಾದ ಅಧ್ಯಯನ-ಅನುಷ್ಠಾನಗಳಿಂದ ಸಂಪನ್ನರಾದವರಾಗಿದ್ದರು. ಹಾಗಾಗಿ ಅವರ ನೇತೃತ್ವದಲ್ಲಿ ಸಂಸ್ಥೆಯು ಸ್ಥಾಪನೆಗೊಂಡ ಕೆಲವೇ ವರ್ಷಗಳಲ್ಲಿ ತುಂಬ ವ್ಯಾಪಕವಾಗಿ ಬೆಳೆಯಿತು. ಹಿಂದೂಧರ್ಮದ ವಿವಿಧ ಪಂಥದ ಜಗದ್ಗುರು ಸ್ವಾಮಿಗಳೂ, ಧರ್ಮಪ್ರಚಾರಕರೂ, ವಿದ್ವಾಂಸರೂ ಎಲ್ಲರಿಂದ ಸಂಸ್ಥೆಯು ಪ್ರೋತ್ಸಾಹವನ್ನು ಪಡೆದು ಬೆಳೆಯುತ್ತಾ ಬಂತು. ಭಾರತೀಯ ವಿದ್ಯಾಭವನ ಸಂಸ್ಥೆಯು ಹಿಂದೂಧರ್ಮ ಮತ್ತು ಸಂಸ್ಕೃತಿಯ ಪ್ರಚಾರಕ್ಕೆ ಧರ್ಮ, ಇತಿಹಾಸ, ಸಾಹಿತ್ಯವೆಂದು ಅನೇಕ ಉದ್ಗ್ರಂಥಗಳ ಪ್ರಕಟಣೆ, ಉಪನ್ಯಾಸ, ಸಂಗೀತ, ನೃತ್ಯ ಕಾರ್ಯಕ್ರಮಗಳು, ಶಾಲಾಕಾಲೇಜುಗಳ ಸ್ಥಾಪನೆ ಎಂದು ವಿವಿಧ ರೀತಿಯ ರಚನಾತ್ಮಕ ಕಾರ್ಯಕ್ರಮಗಳೊಡನೆ ದುಡಿಯುತ್ತಾ

ಬಂದಿವೆ. ದೇಶವಿದೇಶಗಳಲ್ಲಿ ಈ ಸಂಸ್ಥೆಯ ಶಾಖೆಗಳಿದ್ದು ಅವುಗಳ ಮೂಲಕ ಹಿಂದೂಧರ್ಮದ ಬಗ್ಗೆ, ಹಿಂದೂಧರ್ಮದ ಸರ್ವಧರ್ಮಸಮನ್ವಯ ತತ್ತ್ವದ ಅನುಷ್ಠಾನದ ಬಗ್ಗೆ, ವಿಶ್ವಕಲ್ಯಾಣದ ಬಗ್ಗೆ ಪರಿಣಾಮಕಾರಿಯಾಗಿ ಸಮರ್ಥರಿಂದ ಕಾರ್ಯಕ್ರಮಗಳು ನಿರ್ವಹಿಸಲ್ಪಡುತ್ತಿವೆ.

೧೯೩೮ರಲ್ಲಿ ಸ್ಥಾಪನೆಗೊಂಡ ಭಾರತೀಯ ವಿದ್ಯಾ ಭವನ ಸಂಸ್ಥೆಯು ಆಗಿಂದಾಗ್ಗೆ ಪ್ರಕಟಿಸುತ್ತಾ ಬಂದ ಹಿಂದೂ ಧರ್ಮ-ಇತಿಹಾಸ-ಸಂಸ್ಕೃತಿಯ ಕುರಿತಾದ ನೂರಾರು ಉದ್ಗ್ರಂಥಗಳು ಮತ್ತು ಭವನ್ಸ್ ಜರ್ನಲ್ ಎಂಬ ಇಂಗ್ಲಿಷ್ ಸಾಪ್ತಾಹಿಕ ಪತ್ರಿಕೆ ಹಾಗೂ ಇನ್ನಿತರ ಧಾರ್ಮಿಕ ಹಾಗೂ ಶೈಕ್ಷಣಿಕ ಕಾರ್ಯಕ್ರಮಗಳಿಂದಾಗಿ ದೇಶವಿದೇಶಗಳಲ್ಲಿ ಹಿಂದೂಧರ್ಮದ-ಹಿಂದೂ ಸಂಸ್ಕೃತಿಸಾಹಿತ್ಯಗಳ ಬಗ್ಗೆ ಜನಜೀವನದಲ್ಲಿ ಗಣನೀಯವಾದ ರೀತಿಯಲ್ಲಿ ನೂತನ ಜಾಗೃತಿ ಉಂಟಾಗಲು ಅವಕಾಶವಾಗಿರುತ್ತದೆ.

ಆಧುನಿಕ ಯುಗದಲ್ಲಿ ಹಿಂದೂಧರ್ಮದ ಉದ್ಧಾರಕ್ಕಾಗಿ ಶ್ರಮಿಸಿದ ಇನ್ನೊಬ್ಬ ಮಹಾಪುರುಷರೇ ಮಹರ್ಷಿ ಅರವಿಂದರು. ಇವರು ಪಾಂಡಿಚೇರಿಯಲ್ಲಿ ನೆಲೆನಿಂತು ವಿಶೇಷವಾದ ತಪಸ್ಸು, ಯೋಗಾಭ್ಯಾಸಗಳನ್ನು ನಡೆಸಿ ಸಿದ್ಧಿಯನ್ನು ಪಡೆದರು. ಪಾಶ್ಚಾತ್ಯ ವಿದ್ಯಾಭ್ಯಾಸ, ಪಾಶ್ಚಾತ್ಯ ಸಂಸ್ಕೃತಿಯ ರೀತಿಯನ್ನು ಅನುಸರಿಸಿ, ವಿಶೇಷವಾದ ರೀತಿಯಲ್ಲಿ ಬಾಳಿ ಬೆಳೆದು ಪಾಂಡಿತ್ಯವನ್ನು ಹೊಂದಿ ಉಚ್ಚಮಟ್ಟದ ವಿದೇಶೀ ಶಿಕ್ಷಣದ ಪದವೀಧರರಾಗಿದ್ದ ಶ್ರೀ ಅರವಿಂದರು ಹಿಂದೂಧರ್ಮದ ಆಧಾರಗ್ರಂಥಗಳ ಅಧ್ಯಯನ ನಡೆಸಿ, ಮೇಲಾಗಿ ವಿಶೇಷವಾಗಿ ತಪಸ್ಸನ್ನು ಮಾಡಿ, ಮಹಾಸಿದ್ಧಿಯನ್ನು ಹೊಂದಿ ಮಹರ್ಷಿಗಳಾದರು ಹಿಂದೂಧರ್ಮದ ಸನಾತನ ತತ್ತ್ವಗಳನ್ನು ಇಂಗ್ಲಿಷ್ ಭಾಷೆಯಲ್ಲಿ ತಮ್ಮ ವಿದ್ವತ್ಪೂರ್ಣವಾದ ಮತ್ತು ಸಾಧನಸಿದ್ಧಿಯ ಬಲದಿಂದ ಕೂಡಿದ ಅನೇಕ ಲೇಖನಗಳು, ಮಹಾನ್ ಸದ್ಗ್ರಂಥಗಳು—ಇವುಗಳ ಮೂಲಕ ಜಗತ್ತಿಗೆ ತಿಳಿಯಪಡಿಸಿ ಅದರ ಹಿರಿಮೆಯನ್ನು ಸಾರಿದರು. ಪಾಂಡಿಚೇರಿಯಲ್ಲಿ ಅವರು ಸ್ಥಾಪಿಸಿದ ಶ್ರೀಅರವಿಂದಆಶ್ರಮವು ಪಾಶ್ಚಾತ್ಯ–ಪೌರ್ವಾತ್ಯ ದೇಶಗಳ ಜನರ ಸಂಗಮಸ್ಥಾನವಾಗಿ ಅಧ್ಯಾತ್ಮಸಾಧನೆಯ ಕೇಂದ್ರವಾಯಿತು. ಪಾಂಡಿಚೇರಿಯಲ್ಲಿ ಇಂದು ದೊಡ್ಡ ಪ್ರಮಾಣದಲ್ಲಿ ಬೆಳೆದು ನೆಲೆನಿಂತಿರುವ ಶ್ರೀ ಅರವಿಂದಾಶ್ರಮದಲ್ಲಿ ಅಧ್ಯಾತ್ಮಜೀವನದ ಯಶಸ್ವೀಪಾಲಕರಾದ ಅನೇಕ ಸಾಧಕರಿದ್ದು ಶ್ರೀಅರವಿಂದರ ದಿವ್ಯ ಉಪದೇಶಗಳನ್ನು ತಮ್ಮ ಬಾಳಿನಲ್ಲಿ ಅಳವಡಿಸಿಕೊಂಡು ಜೀವನವನ್ನು ಮಾಡುತ್ತಿದ್ದಾರೆ. ಶ್ರೀ ಅರವಿಂದಮಹರ್ಷಿಗಳು ತಮ್ಮ ತಪಸ್ಸು ಮತ್ತು ಯೋಗಸಾಧನಾಸಾಕ್ಷಾತ್ಕಾರದ ಆಧಾರದಲ್ಲಿ ಹೇಳಿದ ಮತ್ತು ಬೋಧಿಸಿದ ಹಿಂದೂಧರ್ಮದ ತತ್ತ್ವಗಳನ್ನು ಶ್ರೀ ಅರವಿಂದಾಶ್ರಮದಿಂದ—ದೇಶವಿದೇಶಗಳಲ್ಲಿ ವಿವಿಧ ಎಡೆಗಳಿಗೆ ಆಶ್ರಮದ ಅನೇಕ ರೀತಿಯ ಆಧ್ಯಾತ್ಮಿಕವಾದ ರಚನಾತ್ಮಕವಾದ ಚಟುವಟಿಕೆಗಳ ಮೂಲಕ ಪ್ರಸಾರಮಾಡಲಾಗುತ್ತಿದೆ. ಮಹಾಯೋಗಿ ಮಹರ್ಷಿ ಶ್ರೀ ಅರವಿಂದರು ೧೮೭೨ರಲ್ಲಿ ಜನ್ಮತಳೆದು ಪವಿತ್ರಜೀವನ ನಡೆಸಿ, ಇಳೆಯಲ್ಲಿ ಅಧ್ಯಾತ್ಮದ ದಿವ್ಯಬೆಳಕಾಗಿ ಬೆಳಗಿ, ೧೯೫೦ರಲ್ಲಿ ಮಹಾಸಮಾಧಿಯನ್ನು ಹೊಂದಿದರು.

ಹಿಂದೂಧರ್ಮದ ಪುನರುಜ್ಜೀವನಕ್ಕೆ ಕಾರಣರಾದ ಇನ್ನೊಬ್ಬ ಮಹಾಪುರುಷರೇ ಮಹಾತ್ಮಾ ಗಾಂಧೀಜಿಯವರು. ಹಿಂದೂಧರ್ಮದಲ್ಲಿ ಇನ್ನೂ ಕೂಡ ಸೇರಿಕೊಂಡಿದ್ದ

ಮೂಢನಂಬಿಕೆ, ಜಾತೀಯ ದ್ವೇಷ, ಅಸ್ಪೃಶ್ಯತಾದೃಷ್ಟಿ, ಸಂಕುಚಿತ ಭಾವನೆ ಇವುಗಳನ್ನು ಗಾಂಧೀಜಿಯವರು ಹೋಗಲಾಡಿಸಲು ತುಂಬಾ ಶ್ರಮಿಸಿದರು. ವಿಜ್ಞಾನಯುಗದಲ್ಲಿ ವಿಶ್ವಕ್ಕೆ ಹಿಂದೂಧರ್ಮದ ದಿವ್ಯಸಂದೇಶಗಳನ್ನು ತಮ್ಮ ಹಿರಿದಾದ ಜೀವನ-ಸಾಧನೆಗಳ ಮೂಲಕ ಸಾರಿದರು. ದೇವರಲ್ಲಿ ಅಚಲವಾದ ಶ್ರದ್ಧೆಭಕ್ತಿಗಳು, ಹಿಂದೂಧರ್ಮದ ಸನಾತನತತ್ತ್ವಗಳಲ್ಲಿ ನಿಶ್ಚಯವಾದ ಪ್ರೀತಿ-ಭಕ್ತಿ-ನಂಬಿಕೆಗಳು ಗಾಂಧೀಜಿಯವರ ಜೀವನದ ಪ್ರತಿ ಚಟುವಟಿಕೆಗಳಲ್ಲೂ ಪ್ರಕಟಗೊಂಡವು. ಜೀವನವೆಂದರೆ ಧರ್ಮದ ಪ್ರಾಯೋಗಿಕವಾದ ಭಾಷ್ಯ ಎಂಬಂತಾಗಬೇಕು ಎನ್ನುವ ಹಿಂದೂಧರ್ಮದ ತತ್ತ್ವಗಳನ್ನು ಗಾಂಧೀಜಿಯವರು ಸ್ವತಃ ಜೀವನದಲ್ಲಿ ಅನುಷ್ಠಾನಮಾಡಿ ತೋರಿಸಿಕೊಟ್ಟರು. ಪರಕೀಯರ ಆಡಳಿತಕ್ಕೆ ಒಳಗಾಗಿ ರಾಜಕೀಯ ಸ್ವಾತಂತ್ರ್ಯ, ಸಾಂಸ್ಕೃತಿಕ ಸ್ವಾತಂತ್ರ್ಯಗಳನ್ನೆಲ್ಲ ಕಳೆದುಕೊಂಡಿದ್ದ ನಮ್ಮ ದೇಶಕ್ಕೆ ಗಾಂಧೀಜಿಯವರು ಸತ್ಯ ಮತ್ತು ಅಹಿಂಸೆ, ತ್ಯಾಗ ಮತ್ತು ಶ್ರದ್ಧೆ, ಧೈರ್ಯ ಮತ್ತು ಆತ್ಮವಿಶ್ವಾಸಗಳ ಬಲದಿಂದ ಸ್ವಾತಂತ್ರ್ಯವನ್ನು ಗಳಿಸುವುದರಲ್ಲಿ ಯಶಸ್ವಿಯಾದರು. ಧರ್ಮ ಎಂದರೆ ಜೀವನದ ಕೆಲವೇ ಕ್ಷೇತ್ರಗಳಿಗೆ, ಕೆಲವೇ ವಯೋಮಟ್ಟಕ್ಕೆ ಮೀಸಲು ಎಂದು ತಿಳಿದಿದ್ದವರಿಗೆ ಗಾಂಧೀಜಿಯವರು ಧರ್ಮ ಎಂಬುದು ಜೀವನದ ಎಲ್ಲಾ ರಂಗಕ್ಕೂ ಅನ್ವಯವಾಗಬೇಕು ಎಂದು ಹೇಳಿ, ಧರ್ಮವೇ ಜೀವನದ ಮೂಲಾಧಾರ ಎಂಬ ಸನಾತನಧರ್ಮದ ದಿವ್ಯತತ್ತ್ವವನ್ನು ದೃಢೀಕರಿಸಿದರು. ವೇದವೇದಾಂತಗಳ ಸಾರವನ್ನು ಒಳಗೊಂಡ ಶ್ರೀಮದ್ ಭಗವದ್ಗೀತಾ ಗ್ರಂಥವನ್ನು ಗಾಂಧೀಜಿಯವರು ತಮ್ಮ ಜೀವನದ ಆಧಾರ ಎಂದು ಹೇಳಿ ಅದರ ತತ್ತ್ವಗಳನ್ನು ಸರಿಯಾಗಿ ಪಾಲಿಸಿ ಜನರಲ್ಲಿ ತನ್ಮೂಲಕ ಹೊಸ ಉತ್ಸಾಹ-ಚೇತನಗಳನ್ನು ತುಂಬಿದರು. ಪ್ರಾರ್ಥನೆ, ದೇವರಲ್ಲಿ ಭಕ್ತಿ, ಸದ್ಗ್ರಂಥಗಳ ಪಠಣ, ಸರ್ವಧರ್ಮಸಮನ್ವಯತೆ ಇವುಗಳಿಗೆ ಹಿಂದೂಧರ್ಮವು ನೀಡಿದ ಉನ್ನತೋನ್ನತವಾದ ಸ್ಥಾನವನ್ನು ಗ್ರಹಿಸಿ ಗಾಂಧೀಜಿಯವರು ಮುಖ್ಯವಾಗಿ ತಮ್ಮ ಜೀವನದಲ್ಲಿ ಅವನ್ನೆಲ್ಲಾ ಅಳವಡಿಸಿಕೊಂಡು ಮತಸಹಿಷ್ಣುತೆ, ಜಾತಿಭೇದದ ದ್ವೇಷನಿವಾರಣೆ, ಜೀವನದಲ್ಲಿ ಧಾರ್ಮಿಕ ಹಾಗೂ ಆಧ್ಯಾತ್ಮಿಕವಾದ ಪ್ರಜ್ಞೆ ಇವುಗಳು ನೆಲೆನಿಲ್ಲುವಂತೆ ನಿರಂತರವಾಗಿ ಶ್ರಮಿಸಿದರು. ಧರ್ಮ ಎಂದರೆ ಸೋಮಾರಿತನವಾಗಲಿ, ಅಸಡ್ಡೆಯಾಗಲಿ ಅಲ್ಲ ; ಇವುಗಳಿಗೆ ಎಡೆ ನೀಡುವಂತಿಲ್ಲ. ಅದು ಅನಾಸಕ್ತಿಯಿಂದ ಕೂಡಿ ಕರ್ಮ ಮಾಡಿ ಜೀವನವನ್ನು ಯಶಸ್ವಿಯಾಗಿ ನಿರ್ವಹಿಸಲು ನೆರವಾಗುವ ಕ್ರತುಶಕ್ತಿ ಎಂದು ಹೇಳಿ ಅನಾಸಕ್ತಿಯಿಂದ ಜೀವನಕರ್ಮವನ್ನು ನಿರ್ವಹಿಸಿ ಧರ್ಮಸಮ್ಮತವಾಗಿ ಬಾಳಬೇಕೆಂದು ಹೇಳಿದರು. ಇದರಿಂದಾಗಿ ರಾಜಕೀಯ, ಸಾಮಾಜಿಕ ರಂಗಗಳಲ್ಲಿ ಧಾರ್ಮಿಕವಾದ ಹೊಸ ಚೇತನ ತುಂಬಿದಂತಾಯಿತು. ಹಿಂದೂಧರ್ಮದ ತತ್ತ್ವಗಳು ಸನಾತನವಾದುದು, ಜೀವನಕ್ಕೆ ಹಿತವನ್ನು ನೀಡುವಂತಹುದು ಎಂಬುದು ಆಧುನಿಕ ಕಾಲದಲ್ಲಿ ದೇಶವಿದೇಶಗಳಲ್ಲಿ ಮತ್ತೊಮ್ಮೆ ಮಹಾತ್ಮಾ ಗಾಂಧೀಜಿಯವರ ಋಷಿಸದೃಶವಾದ, ತ್ಯಾಗಮಯವಾದ, ಸತ್ಯ, ಅಹಿಂಸೆ, ಶಾಂತಿಗಳಿಂದ ಕೂಡಿದ ಸ್ಥಿತಪ್ರಜ್ಞನಂತಹ ಜೀವನದ ಆದರ್ಶ, ಉಪನ್ಯಾಸಗಳು, ಲೇಖನಗಳು ಇವುಗಳ ಮೂಲಕ ದೃಢೀಕೃತವಾದವು.

ಕಾಲವು ಸಾಗಿದಂತೆ ಪಾಶ್ಚಾತ್ಯ ಸಂಸ್ಕೃತಿ, ವಿದ್ಯಾಭ್ಯಾಸ ಇವುಗಳ ಪ್ರಭಾವ, ಮತ್ತು

ವೈಜ್ಞಾನಿಕವಾದ ಅನೇಕ ವಿಧದ ಜೀವನದ ಸುಖಸಲಕರಣೆಗಳು ಇವುಗಳಿಂದಾಗಿ ಹಿಂದೂಸ್ಥಾನವು ಜಗತ್ತಿನ ಇತರ ರಾಷ್ಟ್ರಗಳ ಮಧ್ಯೆ ಸಮರಸವಾಗಿ ಬೆರೆದು ಬಾಳುವಂತಾಯಿತು. ಹಾಗೆಯೇ ಹಿಂದೂ ಧರ್ಮದ ಕುರಿತಾಗಿ ಇಂಗ್ಲಿಷ್ ಭಾಷೆಯಲ್ಲೂ ವಿಪುಲವಾಗಿ ಭಾರತೀಯರು ಹಾಗೂ ವಿದೇಶೀಯರು ಗ್ರಂಥಗಳನ್ನು ಬರೆದು ಪ್ರಕಟಿಸಿದರು ಮತ್ತು ಮೂಲವಾಗಿ ಸಂಸ್ಕೃತದಲ್ಲಿದ್ದ ಹಿಂದೂಧರ್ಮದ ಗ್ರಂಥಗಳೆಲ್ಲಾ ಇಂಗ್ಲಿಷ್ ಮತ್ತು ಇತರ ವಿದೇಶೀಯ ಭಾಷೆಗಳಲ್ಲಿ ಪ್ರಕಟಗೊಂಡವು. ಇದರಿಂದಾಗಿ ಹಿಂದೂಧರ್ಮದ ವಿಚಾರ ತಿಳಿಯುವ ಆಸಕ್ತಿ ದೇಶವಿದೇಶಗಳಲ್ಲಿ ಹೆಚ್ಚಾಯಿತು. ಅನುಸಾರವಾಗಿ ಶ್ರೀ ರಾಮಕೃಷ್ಣಮಠದ ಅನೇಕ ಸಂನ್ಯಾಸಿಗಳೂ, ಇತರ ಅನೇಕ ಸಂಸ್ಥೆಗಳ ಸ್ವಾಮಿಗಳೂ, ಘನವಾದ ವಿದ್ವಾಂಸರೂ ದೇಶವಿದೇಶಗಳಲ್ಲಿ ಸಂಚರಿಸಿ ವಿಶೇಷವಾದ ರೀತಿಯಲ್ಲಿ ಹಿಂದೂಧರ್ಮದ ಪ್ರಚಾರಮಾಡಿದರು, ಅಲ್ಲದೆ ಹಿಂದೂಧರ್ಮವು ಆಧುನಿಕ ಯುಗದಲ್ಲೂ ಪ್ರಾಯೋಗಿಕ ಮಾತ್ರವಲ್ಲದೆ ಜಗತ್ತಿನ ಹಿತಕ್ಕೆ, ಶಾಂತಿಗೆ ಅಗತ್ಯ ಎಂಬುದನ್ನು ಸಮರ್ಥಿಸಿದರು.

ಹಿಂದೂಧರ್ಮದ ಸರಿಯಾದ ರಕ್ಷಣೆ ಹಾಗೂ ಪ್ರಭಾವಯುತವಾದ ಪ್ರಚಾರಕ್ಕಾಗಿ ಭಾರತದ ಅನೇಕ ಗಣ್ಯಮಹನೀಯರು ಆಧುನಿಕ ಕಾಲದಲ್ಲಿ ದೇಶವಿದೇಶಗಳಲ್ಲಿ ಸಂಚರಿಸಿ ಧರ್ಮಜಾಗೃತಿಯನ್ನು ಉಂಟುಮಾಡಿರುತ್ತಾರೆ. ಅವರಲ್ಲಿ ಭಾರತರತ್ನ ಡಾ॥ ಎಸ್. ರಾಧಾಕೃಷ್ಣನ್‌ರವರು ಅಗ್ರಗಣ್ಯರಾಗಿರುತ್ತಾರೆ. ಹಿಂದೂಧರ್ಮದ ಆಧ್ಯಾತ್ಮಿಕ ಅನುಭವ ಸಿದ್ಧಾಂತ, ವಿಶ್ವಕಲ್ಯಾಣದೃಷ್ಟಿ, ಮತೀಯಸೌಹಾರ್ದತೆ ಇತ್ಯಾದಿ ವಿಚಾರಗಳ ಕುರಿತು ಅವರು ದೇಶವಿದೇಶಗಳಲ್ಲಿ ವಿದ್ವತ್ಪೂರ್ಣವೂ ಉದ್ಬೋಧಕವೂ ಆದ ಉಪನ್ಯಾಸಗಳನ್ನು ನೀಡಿ ಕೋಟ್ಯಾನುಕೋಟಿ ಮಂದಿಯ ಬದುಕಿಗೆ ವಿಶೇಷವಾದ ಬೆಳಕನ್ನು ಬೀರಿರುತ್ತಾರೆ. ಹಿಂದೂಧರ್ಮದ ಪ್ರಸ್ಥಾನತ್ರಯ ಗ್ರಂಥಗಳಿಗೆ ಭಾಷ್ಯವನ್ನು ಬರೆದು ಪ್ರಾಚೀನ ಪರಂಪರೆ, ವಿಚಾರಧಾರೆಗಳು ಹೊಸ ಯುಗದಲ್ಲಿ ಹೇಗೆ ಪ್ರಸ್ತುತ ಎಂಬುದನ್ನು ವಿವರಿಸಿ ಹೇಳಿರುತ್ತಾರೆ.

ತಮ್ಮ ಅನುಭಾವದ ನೆಲೆಯಿಂದ ಅಭಿವ್ಯಕ್ತಗೊಂಡ ಸತ್ವಪೂರ್ಣವಾದ ಉಪನ್ಯಾಸಗಳಿಂದ, ಸನಾತನ ಹಿಂದೂಧರ್ಮಕ್ಕೆ ಸಂಬಂಧಿಸಿದಂತೆ ಪಾಂಡಿತ್ಯಪೂರ್ಣವೂ ಮಹತ್ವವೂ ಆದ ಮೂವತ್ತಕ್ಕೂ ಹೆಚ್ಚಿನ ಗ್ರಂಥಗಳ ಮೂಲಕ ಜಗತ್ತಿನಲ್ಲಿ ಅಸಂಖ್ಯಾತ ಮಂದಿ ಚಿಂತಕರ, ವಿದ್ವಾಂಸರ, ಧರ್ಮಾಭಿಮಾನಿಗಳ, ಜಿಜ್ಞಾಸುಗಳ ಮೇಲೆ ವಿಶೇಷವಾದ ಪ್ರಭಾವವನ್ನು ಬೀರಿರುವ ಡಾ॥ ರಾಧಾಕೃಷ್ಣನ್‌ರವರು ಪ್ರಾಚೀನ ಮಹರ್ಷಿಗಳ ಪರಂಪರೆಯಲ್ಲಿ ಮೂಡಿಬಂದ ಆಧುನಿಕ ಆಚಾರ್ಯರಾಗಿರುತ್ತಾರೆ. ೧೮೮೮ನೇ ಇಸವಿ ಸೆಪ್ಟೆಂಬರ್ ೫ರಂದು ಆಂಧ್ರಪ್ರದೇಶದ ತಿರುತ್ತಣಿ ಎಂಬಲ್ಲಿ ಜನ್ಮತಳೆದ ಡಾ॥ ರಾಧಾಕೃಷ್ಣನ್‌ರವರು ತತ್ತ್ವಶಾಸ್ತ್ರದ ಅಧ್ಯಾಪಕರಾಗಿ ಕ್ರಿಯಾಶೀಲಜೀವನವನ್ನು ಪ್ರಾರಂಭಿಸಿ ಮುಂದೆ ಪ್ರಾಧ್ಯಾಪಕರು, ವಿಶ್ವವಿದ್ಯಾನಿಲಯದ ಉಪಕುಲಪತಿಗಳು, ವಿಶ್ವದ ವಿವಿಧ ವಿಶ್ವವಿದ್ಯಾನಿಲಯಗಳಲ್ಲಿ ವಿಶೇಷ ಆಹ್ವಾನಿತ ಪ್ರಾಧ್ಯಾಪಕರು, ರಾಯಭಾರಿಗಳು ಎಂದು ವಿವಿಧ ನೆಲೆಗಳಲ್ಲಿ ಕಾರ್ಯನಿರತರಾದರು. ಕೊನೆಗೆ ಭಾರತದ ರಾಷ್ಟ್ರಪತಿಗಳಾಗಿ ತಮ್ಮದೇ ಆದ ವಿಶಿಷ್ಟ ಆಧ್ಯಾತ್ಮಿಕ ಯೋಗ್ಯತೆಯಿಂದ ಆಡಳಿತ ನಡೆಸಿ ರಾಷ್ಟ್ರದ ಇತಿಹಾಸದಲ್ಲಿ

ಹೊಸ್ಸಿನ ದಾಖಲೆಯನ್ನು ಉಂಟುಮಾಡಿದರು. ಅವರು ೧೯೭೫ನೇ ಇಸವಿ ಏಪ್ರಿಲ್ ೧೭ರಂದು ದೇಹತ್ಯಾಗಮಾಡಿ ಕೀರ್ತಿಶೇಷರಾದರು.

ಹಾಗೆಯೇ ಡಾ|| ಸಿ. ಪಿ. ರಾಮಸ್ವಾಮಿ ಅಯ್ಯರ್, ಡಾ|| ಕೆ. ಎಂ. ಮುನ್‌ಷಿಯವರು, ಮೈಸೂರಿನ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್‌ರವರು, ಚಕ್ರವರ್ತಿ ಶ್ರೀ ಸಿ. ರಾಜಗೋಪಾಲಾಚಾರಿಯವರು ಇಂಥ ಅನೇಕ ಮಹಾನ್ ವ್ಯಕ್ತಿಗಳು ಹಿಂದೂ ಧರ್ಮದ ಪುನರುದ್ಧಾರಕ್ಕಾಗಿ ಶ್ರಮಿಸಿ, ತಮ್ಮ ಭಾಷಣಗಳು, ಲೇಖನಗಳು, ಮಹಾನ್ ಗ್ರಂಥಗಳ ಮೂಲಕ ಮಹತ್ತರವಾದ ಕಾರ್ಯಕ್ರಮವನ್ನು ಕೈಗೊಂಡಿರುತ್ತಾರೆ.

ಆಧುನಿಕ ಯುಗದ ಧಾರ್ಮಿಕ ಚಲನವಲನಗಳಲ್ಲಿ ಹೊಸಹೊಸ ಸಂಸ್ಥೆಗಳ ಸ್ಥಾಪನೆ, ಸಾಮೂಹಿಕ ಭಾಷಣ, ಜ್ಞಾನಯಜ್ಞಗಳ ನಿರ್ವಹಣೆಗಳು ಹೆಚ್ಚುಹೆಚ್ಚಾಗಿ ನಡೆಯುತ್ತಾ ಬಂದಿವೆ. ಹೃಷೀಕೇಶದಲ್ಲಿ ಮಹಾತಪಸ್ವಿಯಾಗಿ, ಮಹಾನುಭಾವರಾಗಿ, ಮಹಾಪುರುಷ ರೆಂದು ಗೌರವಪೂಜೆಗಳಿಗೆ ಪಾತ್ರರಾಗಿ ಬಾಳಿಬೆಳಗಿದ ಸ್ವಾಮಿ ಶ್ರೀ ಶಿವಾನಂದಸರಸ್ವತಿ ಯವರು ೧೯೩೬ರಲ್ಲಿ ದಿವ್ಯಜೀವನ ಸಂಘ ಎಂಬ ಸಂಸ್ಥೆಯನ್ನು ಕಟ್ಟಿ ತನ್ಮೂಲಕ ಹಿಂದೂ ಧರ್ಮದ ಕುರಿತಾಗಿ ವಿಪುಲಸಂಖ್ಯೆಯಲ್ಲಿ ಗ್ರಂಥಗಳನ್ನು ಪ್ರಕಾಶಪಡಿಸಿ ಪ್ರಚಾರಕಾರ್ಯ ನಡೆಸಿರುತ್ತಾರೆ. ಅಷ್ಟೇ ಅಲ್ಲದೆ, ಮೂಡಣ ಮತ್ತು ಪಡುವಣ ದೇಶಗಳಲ್ಲಿನ ಅಸಂಖ್ಯಾತ ಸಾಧಕರಿಗೆ, ಭಕ್ತರಿಗೆ, ಜಿಜ್ಞಾಸುಗಳಿಗೆ ಆಧ್ಯಾತ್ಮಿಕ ಜೀವನದ ದೀಕ್ಷೆಯನ್ನು ಕೊಟ್ಟು ಪ್ರಾಯೋಗಿಕ ಮಾರ್ಗದರ್ಶನವನ್ನು ನೀಡಿರುತ್ತಾರೆ. ಹೀಗೆ ದಿವ್ಯಜೀವನದ ಪಥದಲ್ಲಿ ಅವರು ಮುನ್ನಡೆಯುವಂತೆ ಮಾಡಿ, 'ಗುರುದೇವ'ರಾಗಿ ಶಿಷ್ಯವೃಂದದವರ ಹೃನ್ಮಂದಿರ ಗಳಲ್ಲಿ ನೆಲೆನಿಂತು ಆರಾಧನೆ-ಪೂಜೆಗಳಿಗೆ ಪಾತ್ರರಾಗಿರುತ್ತಾರೆ. ಇವರು ೧೮೮೭ನೇ ಇಸವಿಯಲ್ಲಿ ತಮಿಳುನಾಡಿನ ಪಟ್ಟಮಡೈ ಎಂಬಲ್ಲಿ ಜನ್ಮತಳೆದರು. ೧೯೬೩ನೇ ಇಸವಿ ಯಲ್ಲಿ ಹೃಷೀಕೇಶದಲ್ಲಿ ಮಹಾಸಮಾಧಿಯನ್ನು ಹೊಂದಿದರು.

ಅವರ ಹಿರಿಯ ಆದರ್ಶಕ್ಕೆ ದೇಶವಿದೇಶಗಳಿಂದ ಸಹಸ್ರಸಂಖ್ಯೆಯಲ್ಲಿ ಜನರು ಆಕರ್ಷಿತ ರಾಗಿ ಬಂದಿರುತ್ತಾರೆ. ಹಿಂದೂಧರ್ಮದ ಕುರಿತಾದ ಸರಿಯಾದ ತಿಳಿವಳಿಕೆಯನ್ನು ನೀಡು ವುದರಲ್ಲಿ ಶ್ರೀ ಶಿವಾನಂದಸರಸ್ವತೀ ಸ್ವಾಮಿಗಳು ಬಹಳ ದೊಡ್ಡ ಪ್ರಮಾಣದಲ್ಲಿ ಯಶಸ್ವಿ ಯಾಗಿರುತ್ತಾರೆ. ಅವರ ದಿವ್ಯಜೀವನ ಸಂಘದ ಶಾಖೆಗಳು ಇಂದು ದೇಶವಿದೇಶಗಳಲ್ಲಿವೆ.

ಸ್ವಾಮಿ ವಿವೇಕಾನಂದರನಂತರ ಹಿಂದೂಧರ್ಮದ ವಿಶ್ವವ್ಯಾಪಕ ಸಂದೇಶಗಳನ್ನು ವಿಶ್ವದ ವಿವಿಧ ಎಡೆಗಳಲ್ಲಿ ಪರಿಣಾಮಕಾರಿಯಾದ ರೀತಿಯಲ್ಲಿ ಸಾರಿ ಜಗದ್ವಂದ್ಯ ವೀರ ವೇದಾಂತಿ ಎಂದು ಜನರ ಪ್ರೀತಿಗೌರವಗಳಿಗೆ ಪಾತ್ರರಾದ ಇನ್ನೊಬ್ಬ ಮಹಾಪುರುಷರು ಸ್ವಾಮಿ ರಾಮತೀರ್ಥರು. ಇವರು ಹಿಂದೂ ಸಮಾಜದ ಜಾಗೃತಿಗಾಗಿ, ಹಿಂದೂಧರ್ಮದ ಉದ್ಧಾರಕ್ಕಾಗಿ ದೇಶವಿದೇಶಗಳಿಲ್ಲಿ ಸಂಚಾರಮಾಡಿ ತಮ್ಮ ದಿವ್ಯ ಆದರ್ಶ ಜೀವನ, ಜೀವಂತವಾದ ವೇದಾಂತ ಉಪದೇಶಗಳು, ಚೈತನ್ಯಪೂರ್ಣವಾದ ವ್ಯಕ್ತಿತ್ವ ಇವುಗಳಿಂದ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಜನಮನಗಳಲ್ಲಿ ಜಾಗೃತಿಯನ್ನುಂಟುಮಾಡಿ ಜಗತ್ಸಂಸಾರದ ಕಲ್ಯಾಣಕ್ಕಾಗಿ ದುಡಿದು ಜಗನ್ಮಾನ್ಯರಾಗಿ ಅಮರರಾಗಿರುತ್ತಾರೆ. ಅವರು ೧೮೭೩ರಲ್ಲಿ ಜನ್ಮತಳೆದು ೧೯೦೬ನೇ ಇಸವಿಯಲ್ಲಿ ಜಗತ್ತಿನಿಂದ ಕಣ್ಮರೆಯಾದರು.

ಕಾಞಂಗಾಡಿನ ಆನಂದಾಶ್ರಮದ ಸ್ವಾಮಿ ರಾಮದಾಸರು ಹಿಂದೂಧರ್ಮದ ಉದ್ಧಾರ

ಕ್ಕಾಗಿ ಆಧುನಿಕ ಯುಗದಲ್ಲಿ ದುಡಿದ ಮಹಾನುಭಾವರಲ್ಲಿ ಮುತ್ತೊಬ್ಬರಾಗಿರುತ್ತಾರೆ. ಪೂರ್ವ-ಪಶ್ಚಿಮ ರಾಷ್ಟ್ರಗಳಲ್ಲೆಲ್ಲಾ ಸಂಚಾರಮಾಡಿ ಸಹಸ್ರಾರುಮಂದಿಯನ್ನು ನೂರಾರು ವೇದಿಕೆಗಳ ಮೂಲಕ ಭೇಟಿಮಾಡಿ ಹಿಂದೂಧರ್ಮದ ತತ್ತ್ವ, ಅನುಷ್ಠಾನ ಮತ್ತು ಆದರ್ಶಗಳ ಕುರಿತಾಗಿ ವಿವರ ಹಾಗೂ ಮಾರ್ಗದರ್ಶನಗಳನ್ನು ನೀಡಿ ವಿಶೇಷವಾದ ರೀತಿಯಲ್ಲಿ ಇವರು ದುಡಿದಿರುತ್ತಾರೆ. ಆಧುನಿಕ ಕಾಲದಲ್ಲಿ ಕೂಡ ಹಿಂದೂಧರ್ಮದ ಸನಾತನ ತತ್ತ್ವಗಳು ಅನುಷ್ಠಾನಸಾಧ್ಯ ಎಂದು ಶ್ರೀ ರಾಮದಾಸಸ್ವಾಮಿಗಳವರು ತಮ್ಮ ಸ್ವಂತ ಜೀವನದ ಆದರ್ಶದಿಂದ ಜನಕೋಟಿಗೆ ತೋರಿಸಿಕೊಟ್ಟಿರುತ್ತಾರೆ. ೧೮೮೪ರಲ್ಲಿ ಜನ್ಮವೆತ್ತಿದ ಸ್ವಾಮಿಗಳವರು ೧೯೬೩ನೇ ಇಸವಿಯಲ್ಲಿ ಇಹಲೋಕವನ್ನಗಲಿದರು. ಕಾಞಂಗಾಡಿನಲ್ಲಿರುವ ಅವರ ಆನಂದಾಶ್ರಮವು ಇಂದು ದೇಶವಿದೇಶಗಳ ಅಸಂಖ್ಯಾತ ಹಿಂದೂ ಧರ್ಮಾಭಿಮಾನಿಗಳಿಗೆ, ಭಕ್ತರಿಗೆ, ಸಾಧಕರಿಗೆ ಪುಣ್ಯಕ್ಷೇತ್ರ ಎಂದಾಗಿದೆ.

ಇತ್ತೀಚೆಗಿನ ದಶಕಗಳಲ್ಲಿ ಹಿಂದೂಧರ್ಮದ ಬಗ್ಗೆ ಆಧುನಿಕ ಜನಾಂಗಕ್ಕೆ ಆಕರ್ಷಣೀಯವಾದ ರೀತಿಯಲ್ಲಿ ಬೋಧನೆಯನ್ನು ನೀಡಿ ನವಜಾಗೃತಿಯನ್ನು ಉಂಟುಮಾಡಿ ಜನರಲ್ಲಿ ಹಿಂದೂಧರ್ಮದ ಕುರಿತಾಗಿ ಅರಿವು-ಅಭಿಮಾನಗಳು ತುಂಬಿಬರಲು ಸಮರ್ಥವಾಗಿ ದುಡಿಯುತ್ತಾ ಬಂದಿರುವ ಇನ್ನೊಂದು ಸಂಸ್ಥೆಯೇ ಚಿನ್ಮಯ ಮಿಶನ್. ಈ ಸಂಸ್ಥೆಯ ಸಂಸ್ಥಾಪಕರು ಶ್ರೀಮತ್ ಸ್ವಾಮಿ ಚಿನ್ಮಯಾನಂದಜೀ ಮಹಾರಾಜ್‌ರವರು. ಕೇರಳದ ಎರ್ನಾಕುಲಂನಲ್ಲಿ ೧೯೧೬ರಲ್ಲಿ ಜನ್ಮತಳೆದ ಸ್ವಾಮಿ ಚಿನ್ಮಯಾನಂದಜೀಯವರು ಹೃಷೀಕೇಶದ ದಿವ್ಯಜೀವನ ಸಂಘದ ಶ್ರೀಮತ್ ಸ್ವಾಮಿ ಶಿವಾನಂದಸರಸ್ವತಿಗಳ ಪದತಲದಲ್ಲಿ ಕುಳಿತು ಪಾವನಜೀವನದ ದೀಕ್ಷೆಯನ್ನು ಹೊಂದಿದರು. ಮುಂದೆ ಉತ್ತರಕಾಶಿಯಲ್ಲಿ ಮಹಾತಪಸ್ವಿಗಳಾದ ಶ್ರೀ ತಪೋವನಮಹಾರಾಜರವರಿಂದ ಸನಾತನಧರ್ಮದ ಸಾರಸರ್ವಸ್ವದ ಬಗ್ಗೆ ಆಳವಾದ ಅರಿವು-ಅನುಷ್ಠಾನಗಳನ್ನು ಅನುಗ್ರಹಪೂರ್ವಕವಾಗಿ ಪಡೆದು ಹಿಂದೂಧರ್ಮದ ಆಧುನಿಕ ಆಚಾರ್ಯರಾದರು. ಹಿಂದೂಧರ್ಮದ ರಕ್ಷಣೆ ಮತ್ತು ಪ್ರಚಾರಕ್ಕಾಗಿ ಕಂಕಣಬದ್ಧರಾಗಿ ಭಾರತಾದ್ಯಂತ ಸಂಚರಿಸಿ ಲಕ್ಷಾಂತರ ಮಂದಿ ಜನರಿಗೆ ಧರ್ಮೋಪದೇಶ ನೀಡಿದರು. ಮಾತ್ರವಲ್ಲದೆ, ವಿದೇಶಗಳಲ್ಲೂ ಗೀತಾಜ್ಞಾನಯಜ್ಞ ಎಂಬ ಧಾರ್ಮಿಕ ಸತ್ಸಂಗ ಹಾಗೂ ಶಿಕ್ಷಣದ ನೂತನ ಕಾರ್ಯಕ್ರಮವನ್ನು ಸುವ್ಯವಸ್ಥಿತವಾದ ರೂಪದಲ್ಲಿ ಜಾರಿಗೆ ತಂದರು. ಆಚಾರ್ಯಪೀಠದಲ್ಲಿ ಕುಳಿತು ಉಪನಿಷತ್ತು, ಭಗವದ್ಗೀತೆಗಳ ಬಗ್ಗೆ ತಮ್ಮ ಪಾಂಡಿತ್ಯಪೂರ್ಣವೂ, ಪ್ರಸನ್ನಗಂಭೀರವೂ, ಅನುಭವಸಂಪನ್ನವೂ ಆದ ಆಧ್ಯಾತ್ಮಿಕವಾಣಿಯಿಂದ ಅಸಂಖ್ಯಾತಮಂದಿ ಶ್ರೋತೃಗಳಿಗೆ ಸನಾತನ ಧರ್ಮದ ಹಿರಿಮೆಯನ್ನು ಸಾರಿ ಅರಿವು ಅಭಿಮಾನಗಳುಂಟಾಗುವಂತೆ ಮಾಡಿದರು. ಧರ್ಮಪ್ರಚಾರಕ್ಕಾಗಿ ಸಮರ್ಥರಾದ ಬ್ರಹ್ಮಚಾರಿ ಹಾಗೂ ಸಂನ್ಯಾಸಿಗಳ ತಂಡವನ್ನೇ ನಿರ್ಮಾಣಮಾಡಲು ಅನುಕೂಲವಾಗುವಂತೆ 'ಚಿನ್ಮಯ ಮಿಶನ್' ಎಂಬ ಸಂಸ್ಥೆಯನ್ನು ಮುಂಬಯಿಯಲ್ಲಿ ಸ್ಥಾಪಿಸಿದರು. ಅಲ್ಲಿರುವ 'ಸಾಂದೀಪನಿ ಸಾಧನಾಲಯ' ಎನ್ನುವ ಸಂಸ್ಥೆ ಬ್ರಹ್ಮಚಾರಿ ಹಾಗೂ ಸನ್ಯಾಸಿಗಳ ತರಬೇತುಕೇಂದ್ರವಾಯಿತು. ಧರ್ಮಪ್ರಚಾರ, ಶಿಕ್ಷಣ, ದೀನದಲಿತರ ಸೇವೆಗಳು ಚಿನ್ಮಯ ಮಿಶನ್ನಿನ ಧ್ಯೇಯಧೋರಣೆಗಳಾದವು. ಹಲವಾರು ಬ್ರಹ್ಮಚಾರಿಗಳು, ಸಂನ್ಯಾಸಿಗಳು ದೇಶವಿದೇಶಗಳಲ್ಲಿ ಸನಾತನಹಿಂದೂಧರ್ಮದ ಸಂದೇಶ

ಗಳನ್ನು ಪ್ರಚಾರಮಾಡುವಂತಾಯಿತು. ಶಾಲೆಗಳು, ಆಸ್ಪತ್ರೆಗಳು ಅಲ್ಲಲ್ಲಿ ಹುಟ್ಟಿಕೊಂಡವು. ಹಿಂದೂಧರ್ಮದ ಬಗ್ಗೆ ವಿವರಣೆ ನೀಡುವ ಉಪನಿಷತ್, ಭಗವದ್ಗೀತೆ, ವಿವೇಕಚೂಡಾಮಣಿ, ನಾರದಭಕ್ತಿಸೂತ್ರ ಇತ್ಯಾದಿ ಅನೇಕ ಅಮೂಲ್ಯ ಗ್ರಂಥಗಳನ್ನು ಶ್ರೀ ಸ್ವಾಮಿ ಚಿನ್ಮಯಾನಂದರ ವಿನೂತನ ಭಾಷ್ಯದೊಂದಿಗೆ ಪ್ರಕಟಪಡಿಸಿ, ದೇಶದ ವಿದ್ಯಾವಂತರು, ಹೊಸ ಕಾಲದ ಜೀವನಕ್ರಮ, ವಿಚಾರದೃಷ್ಟಿಗೆ ಒಳಗಾದವರು ಇವರೆಲ್ಲರ ಜೀವನಕ್ಕೆ ಸನಾತನ ಹಿಂದೂಧರ್ಮದ ಸರಿಯಾದ ಬೆಳಕು ತಲಪುವಂತೆ ಚಿನ್ಮಯ ಮಿಶನ್ನಿನಿಂದಾಗಿ ಅನುಕೂಲ ಒದಗಿಬರುವಂತಾಯಿತು.

ಮುಂಬಯಿಯ ಪವಾಯಿ ಎಂಬಲ್ಲಿ ತನ್ನ ಕೇಂದ್ರ ಕಛೇರಿಯನ್ನು ಹೊಂದಿರುವ ಚಿನ್ಮಯ ಮಿಶನ್ನಿನ ಶಾಖೆಗಳು ದೇಶವಿದೇಶಗಳಲ್ಲಿ ವ್ಯಾಪಕವಾಗಿ ಹಬ್ಬಿವೆ-ಹಬ್ಬುತ್ತಿವೆ. ಬಾಲವಿಹಾರ, ಸ್ವಾಸಂಗಗೋಷ್ಠಿ, ಮಹಿಳಾವಿಚಾರಗೋಷ್ಠಿ, ದರಿದ್ರನಾರಾಯಣಸೇವೆ, ಗೀತಾಪ್ರಚಾರ ಹೀಗೆ ವಿವಿಧ ರೀತಿಯ ಸುವ್ಯವಸ್ಥಿತ ಕಾರ್ಯಕ್ರಮಗಳನ್ನು ಒಳಗೊಂಡಿರುವ ಚಿನ್ಮಯ ಮಿಶನ್ನಿನ ಊರೂರಿನ ಒಂದೊಂದು ಕೇಂದ್ರವೂ ಹಿಂದೂಧರ್ಮದ ರಕ್ಷಣೆ ಮತ್ತು ಪೋಷಣೆಯ ಸಮರ್ಥ ಕೇಂದ್ರಗಳಾಗಿ ಬೆಳೆಯುತ್ತಿವೆ.

ಶ್ರೀ ಸ್ವಾಮಿ ಚಿನ್ಮಯಾನಂದಜಿಯವರ ವಿಜ್ಞಾನಪ್ರದವಾದ ಆಧ್ಯಾತ್ಮಿಕ ಪ್ರವಚನ, ಸೇವಾಸಂಸ್ಥೆ ಸ್ಥಾಪನೆ, ಗ್ರಂಥಪ್ರಕಟಣೆ, ಬ್ರಹ್ಮಚಾರಿ ಹಾಗೂ ಸಂನ್ಯಾಸಿಗಳ ತರಬೇತಿ ಇವುಗಳಿಂದಾಗಿ ಆಧುನಿಕ ಯುವಜನಾಂಗದಲ್ಲಿ, ವಿದ್ಯಾವಂತ ಜನರಲ್ಲಿ ಸನಾತನ ಹಿಂದೂಧರ್ಮದ ಬಗೆಗೆ ವಿಶೇಷವಾದ ಜಾಗೃತಿ ಉಂಟಾಗಲು ಅವಕಾಶವಾಯಿತು. ಅದರಿಂದಾಗಿ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಹಿಂದೂಗಳಲ್ಲಿ ಧರ್ಮಾಭಿಮಾನವುಂಟಾದಂತೆ ಭಾರತೀಯರಲ್ಲಿ ಹಾಗೂ ವಿದೇಶೀ ಭಕ್ತರಲ್ಲಿ ಧಾರ್ಮಿಕವಾದ ಸೌಹಾರ್ದತೆ ಬೆಳೆಯಲು ವಿಶೇಷವಾಗಿ ಅನುಕೂಲವಾಗಿರುತ್ತದೆ.

ಹೊಸ ಯುಗದಲ್ಲಿ ಸನಾತನಹಿಂದೂಧರ್ಮವು ಜನಜೀವನದ ಉತ್ಕರ್ಷಕ್ಕೆ ಏನನ್ನೂ ನೀಡಲಾರದು ಎಂದು ದೇಶವಿದೇಶಗಳಲ್ಲಿ ಭಾವಿಸುವವರಿಗೆ ಶ್ರೀ ಚಿನ್ಮಯಾನಂದಸ್ವಾಮಿಗಳ ಉದ್ಬೋಧಕ ಉಪನ್ಯಾಸಗಳು, ಗ್ರಂಥಗಳು, ವೇದಾಂತವಿಜ್ಞಾನಸಾಧನಾ ಶಿಬಿರಗಳು ಜೀವನದಲ್ಲಿ ಹೊಸ ಉತ್ಸಾಹ, ಭರವಸೆಗಳನ್ನು ತುಂಬಿರುತ್ತವೆ. ಶ್ರೀ ಸ್ವಾಮಿ ಚಿನ್ಮಯಾನಂದರು ೧೯೯೩ನೇ ಆಗಸ್ಟ್ ೪ರಂದು ಸಮಾಧಿಹೊಂದಿರುತ್ತಾರೆ.

ಸನಾತನ ಧರ್ಮದ ಶಕ್ತಿಪೂರ್ಣ ಪ್ರಚಾರವನ್ನು ಇತ್ತೀಚೆಗಿನ ಕಾಲಾವಧಿಯಲ್ಲಿ ವ್ಯಾಪಕವಾಗಿ ಎಸಗಲು ಮೂಡಿಬಂದ ಇನ್ನೋರ್ವ ಮಹಾಚೇತನವೇ ಸದ್ಗುರು ಮಾತೆ ಶ್ರೀ ರಮಾದೇವಿಯವರು. ಮಾತೆಯವರು ಮಂಗಳೂರಿನಲ್ಲಿ ೧೯೧೧ರಲ್ಲಿ ಜನ್ಮತಳೆದು ದಿವ್ಯತೆಯ ಸಾಕಾರಮೂರ್ತಿಯಾಗಿ ಬೆಳೆದು ಭಕ್ತಕೋಟಿಯ ಪಾಲಿಗೆ ಜಗದೀಶ್ವರಿಯಾಗಿ ಬೆಳಗಿ ೧೯೭೮ರಲ್ಲಿ ಪರಂಜ್ಯೋತಿಯಲ್ಲಿ ಐಕ್ಯವಾದರು.

ಹಿಂದೂಧರ್ಮದ ಋಷಿಮುನಿಗಳು, ಗೃಹಸ್ಥಸಂತರು, ಮಹಾಪುರುಷರ ಪರಂಪರೆಯಲ್ಲಿ ಓರ್ವರೆಂದಾಗಿ ಅರಳಿಬಂದ ಮಾತೆ ಶ್ರೀ ರಮಾದೇವಿಯವರು ಪರಿಶುದ್ಧವಾದ ಗೃಹಸ್ಥಜೀವನ ನಡೆಸಿ ಅದರ ಹಿರಿಮೆ-ಪಾವಿತ್ರ್ಯತೆಯನ್ನು ಲೋಕಕ್ಕೆ ಸಾರಿದರು. ಮಾತ್ರವಲ್ಲ, ಎಲ್ಲ ಆಶ್ರಮಗಳಿಗೆ ಆಶ್ರಯಸ್ಥಾನವಾದ ಗೃಹಸ್ಥಾಶ್ರಮವನ್ನು ಗೃಹಸ್ಥರು ಹೇಗೆ

ಪಾಲಿಸಿ ದೇವರ ಸಾಕ್ಷಾತ್ಕಾರವನ್ನು ಹೊಂದಬಹುದೆಂದು ಮಾರ್ಗದರ್ಶನ ನೀಡಿದರು. ಹಿಂದೂಧರ್ಮದ ರಕ್ಷಣೆ ಮತ್ತು ಪೋಷಣೆಗೆ ಶ್ರಮಿಸುವ ಜವಾಬ್ದಾರಿ ಗೃಹಸ್ಥರ ಮೇಲೆ ಬಹಳಷ್ಟಿದೆ ಎನ್ನುವುದನ್ನು ಮಾತೆಯವರು ಮತ್ತೆಮತ್ತೆ ತಮ್ಮ ದಿವ್ಯೋಪದೇಶಗಳ ಮೂಲಕ ಸ್ಪಷ್ಟಪಡಿಸಿದರು. ಹಿಂದೂಧರ್ಮ ಎಂದರೆ ಗ್ರಂಥದಲ್ಲಿ ಅಡಗಿರುವ ತತ್ತ್ವ ಅಲ್ಲ—ಅನುಷ್ಠಾನದಲ್ಲಿ ತುಂಬಿಬರುವ ದಿವ್ಯ ಅನುಭವ, ಜೀವನವಿಧಾನ ಎಂಬುದನ್ನು ಸದ್ಗುರು ಶ್ರೀ ರಮಾದೇವಿಯವರು ಅಸಂಖ್ಯಾತ ಸ್ತ್ರೀಪುರುಷರಿಗೆ ತಮ್ಮ ಅನುಪಮವಾದ ಮಾತೃವಾತ್ಸಲ್ಯದಿಂದ, ಪರಿಶುದ್ಧವಾದ ಜೀವನದರ್ಶನದಿಂದ ಬೋಧಿಸಿದರು. ಮಹಾಯೋಗಶಕ್ತಿಸ್ವರೂಪಿಣಿಯಾಗಿದ್ದ ಸದ್ಗುರು ಶ್ರೀ ರಮಾದೇವಿಯವರು ದೀನದಲಿತರ, ಭವರೋಗಿಗಳ, ಶರಣಾರ್ಥಿಗಳ ಜೀವನದ ಬೇನೆಬವಣೆಗಳನ್ನು ಅರಿತು ಅದಕ್ಕೆ ಪರಿಹಾರ ನೀಡಿ ಹರಸುತ್ತಿದ್ದರು. ಆತ್ಮಾನಂದ, ದಿವ್ಯಾನಂದ ಎಂಬುದರ ಉನ್ನತನಿದರ್ಶನವಾಗಿದ್ದ ಮಾತೆಯವರು ಅಗಣಿತವಮಂದಿ ಸ್ತ್ರೀಪುರುಷರಿಗೆ ದಿವ್ಯಚೇತನದ ಮಹಾಬೆಳಕಾಗಿ ಅನುಗ್ರಹಿಸಿದರು. ಧರ್ಮಪ್ರಚಾರ, ಧರ್ಮರಕ್ಷಣೆಗೆ ಅಗತ್ಯದ ಮೈತ್ರಿ, ಜಾತಿಮತಗಳ ತಾರತಮ್ಯವಿಲ್ಲದಿರುವಿಕೆ, ಇವನ್ನೆಲ್ಲ ಮಾತೆಯವರು ತಮ್ಮ ಭಕ್ತವೃಂದದಲ್ಲಿ ಶ್ರದ್ಧೆಯಿಂದ ಅನುಷ್ಠಾನಕ್ಕೆ ತರುವಂತೆ ಶಿಕ್ಷಣ ನೀಡಿ ಮಾರ್ಗದರ್ಶನ ಮಾಡಿದರು. ಶ್ರೀ ರಮಾಮಾತೆಯವರ ಮಹಿಮೆಯಿಂದ ಅಲ್ಲಲ್ಲಿ ಸದ್ಗುರು ಶ್ರೀ ರಮಾದೇವಿ ಭಕ್ತಮಂಡಳಿಗಳು ರೂಪುಗೊಂಡವು. ದೇಶವಿದೇಶಗಳಲ್ಲಿ ಭಕ್ತರು ಮಾತೆಯವರ ದಿವ್ಯಜೀವನೋಪದೇಶಗಳಿಂದ ಆಕರ್ಷಿಸಲ್ಪಟ್ಟರು.

೧೯೬೫ರಲ್ಲಿ ಲೋಕದಲ್ಲಿ ಧರ್ಮಸಂರಕ್ಷಣೆ-ಧರ್ಮಪ್ರಚಾರದ ದೃಷ್ಟಿಯಿಂದ ಮಾತೆಯವರ ಆಶೀರ್ವಾದದೊಡನೆ ಮಂಗಳೂರಿನಲ್ಲಿ ರಮಾಶಕ್ತಿ ಮಿಶನ್ ಎಂಬ ಸೇವಾಸಂಸ್ಥೆಯು ಸ್ಥಾಪನೆಗೊಂಡಿತು. ಮಂಗಳೂರಿನ ಶಕ್ತಿನಗರದಲ್ಲಿ ಅದರ ಕೇಂದ್ರ ಕಛೇರಿ ಇದ್ದು ಅದರ ಶಾಖೆಗಳು ಈಗ ದೇಶವಿದೇಶಗಳಲ್ಲಿ ಹಬ್ಬಿವೆ. ಶಕ್ತಿನಗರದಲ್ಲಿ ಸುಂದರ ಹಾಗೂ ಭವ್ಯವಾದ ಶ್ರೀ ರಮಾಂಬಿಕೆ ದೇವಸ್ಥಾನವಿದ್ದು ಅದು ಇಂದು ಅಸಂಖ್ಯಾತ ಭಕ್ತರ ಪಾಲಿಗೆ ಜಗನ್ಮಾತೆಯ ಕೃಪಾಶೀರ್ವಾದದ ಪುಣ್ಯಕ್ಷೇತ್ರವಾಗಿರುತ್ತದೆ.

ಆಧ್ಯಾತ್ಮಿಕ ಸತ್ಸಂಗ, ಭಜನೆ, ವ್ಯಾಸಂಗಗೋಷ್ಠಿ, ವೈದ್ಯಕೀಯ ಸೇವೆ, ಧಾರ್ಮಿಕ ಗ್ರಂಥಪ್ರಕಟಣೆ—ಪ್ರಚಾರ, ವಿದ್ಯಾಪ್ರಸಾರ ಇತ್ಯಾದಿ ವಿವಿಧ ರೀತಿಯ ಮಾನವಕಲ್ಯಾಣ ಸೇವಾಕಾರ್ಯಗಳು ಜಾತಿ-ಮತ-ಸ್ತ್ರೀಪುರುಷರೆಂಬ ಭೇದವಿಲ್ಲದೆ ರಮಾಶಕ್ತಿ ಮಿಶನ್ನಿನ ಆಶ್ರಯದಲ್ಲಿ ನಡೆಯುತ್ತಿವೆ. ಗೃಹಸ್ಥಭಕ್ತರು, ಆಧ್ಯಾತ್ಮಿಕ ಸಾಧಕರು ಆತ್ಮೋನ್ನತಿಗೆ ಅನುಕೂಲವಾಗುವಂತೆ ತಂಗಿ ಸಾಧನೆಯನ್ನು ಮಾಡಲು ಈ ಮಿಶನ್ನಿನ ಕೇಂದ್ರದಲ್ಲಿ ಅವಕಾಶವಿದೆ.

ಹೀಗೆ ಸದ್ಗುರು ಶ್ರೀ ರಮಾದೇವಿಯವರು ಆಧುನಿಕ ಕಾಲದಲ್ಲಿ ಅವತರಿಸಿ ಬಂದು ಹಿಂದೂಧರ್ಮದ ಬೆಳವಣಿಗೆ-ರಕ್ಷಣೆಗಳಿಗಾಗಿ ವಿಶೇಷವಾದ ರೀತಿಯಲ್ಲಿ ಕಾರಣರಾಗಿ ಸ್ಮೃತಿಪೂಜ್ಯರಾಗಿರುತ್ತಾರೆ.

ಹಿಂದೂಧರ್ಮದ ಪ್ರಚಾರ ಮತ್ತು ಸಂರಕ್ಷಣೆಯನ್ನು ಮಾಡಲು ಆಧುನಿಕ ಕಾಲದಲ್ಲಿ ಮೂಡಿಬಂದ ಇನ್ನೋರ್ವ ಮಹಾಪುರುಷರೇ ಪುಟ್ಟಪರ್ತಿಯ ಶ್ರೀ ಸತ್ಯಸಾಯಿಬಾಬಾ

ಅವರು. ಹಿಂದೂಧರ್ಮದಲ್ಲಿ ಶ್ರದ್ಧೆ ಕಳೆದುಕೊಂಡು ನಿತ್ಯಜೀವನದಲ್ಲಿ ಧರ್ಮದ ಬಗ್ಗೆ ಅರಿವು–ಆಚರಣೆಗಳು ಇಲ್ಲದೆ ಬಾಳಹೊರಟ ಹಿಂದುಗಳನ್ನು ಉದ್ಧರಿಸಿ ಮೇಲೆತ್ತಲು ಇವರು ವಿವಿಧ ರಚನಾತ್ಮಕ ಕಾರ್ಯಕ್ರಮಗಳ ಮೂಲಕ ಕೈಗೊಂಡ ಕ್ರಮಗಳು ನಿಜಕ್ಕೂ ಮಹತ್ವಪೂರ್ಣವಾದವುಗಳಾಗಿವೆ.

ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆಯ ಪುಟ್ಟಪರ್ತಿಯಲ್ಲಿ ೧೯೨೬ನೇ ಇಸವಿಯಲ್ಲಿ ನವೆಂಬರ ೨೩ರಲ್ಲಿ ಅವತರಿಸಿಬಂದ ಈ ಪುಣ್ಯಪುರುಷರು ಕೆಲವೇ ವರ್ಷಗಳಲ್ಲಿ ಅಸಂಖ್ಯಾತ ಮಂದಿ ಭಕ್ತರ ಪಾಲಿಗೆ ಭಗವಾನ್ ಆಗಿ ಬೆಳಗಿದರು. ಕಷ್ಟ, ನೋವು, ದುಃಖಗಳಿಂದ ತಪ್ತರಾದ ಅಗಣಿತಸಂಖ್ಯೆಯ ವಿವಿಧ ಮತಜನಾಂಗಗಳ ಭೇದವಿಲ್ಲದೆ ಭಕ್ತವೃಂದಕ್ಕೆ ಭಗವಾನ್ ಬಾಬಾರವರು ಅಭಯ, ಅನುಗ್ರಹ, ಶಾಂತಿಗಳ ದಿವ್ಯ ತ್ರಿವೇಣೀಸಂಗಮ ಎಂದಾದರು. ತಮ್ಮ ದೈವಿಕವಾದ ಪವಾಡಶಕ್ತಿಯಿಂದ ಭಗವಾನ್ ಬಾಬಾರವರು ಅದೆಷ್ಟೋ ಮಂದಿ ನಾಸ್ತಿಕರನ್ನು ಆಸ್ತಿಕರನ್ನಾಗಿ ಪರಿವರ್ತಿಸಿದ್ದಾರೆ, ಪತಿತರನ್ನು ಪಾವನರನ್ನಾಗಿಸಿದ್ದಾರೆ. ಭಕ್ತಿ, ಪ್ರೇಮ, ಶರಣಾಗತಿ, ನಿಷ್ಕಾಮಸೇವೆ, ದೀನಾನುಕಂಪ ಇವುಗಳನ್ನು ನಿತ್ಯಜೀವನದಲ್ಲಿ ಅನುಸರಿಸಲು ತಮ್ಮ ಅನುಯಾಯಿಗಳಿಗೆ ಮಾರ್ಗದರ್ಶನ ನೀಡಿ ಜನಕೋಟಿಗೆ ದಿವ್ಯೋಪದೇಶವನ್ನು ನೀಡಿರುವ ಭಗವಾನ್ ಬಾಬಾರವರು ಹಿಂದೂ ಧರ್ಮದ ಜೀವಂತಶಕ್ತಿಯ ಜ್ವಲಂತ ಉದಾಹರಣೆಯಾಗಿ ಬೆಳಗಿರುತ್ತಾರೆ. ಬಾಬಾರವರು ರಾಮಾಯಣ, ಮಹಾಭಾರತ, ಭಗವದ್ಗೀತೆಗಳ ಬಗ್ಗೆ, ಕರ್ಮ, ಭಕ್ತಿ, ಜ್ಞಾನಯೋಗಗಳ ಬಗ್ಗೆ ನೀಡಿರುವ ದಿವ್ಯೋಪನ್ಯಾಸಗಳು ಹಿಂದೂಧರ್ಮದ ಸನಾತನತತ್ತ್ವಗಳ ಕುರಿತಾಗಿ ಆಧುನಿಕ ಜನಾಂಗಕ್ಕೆ ನವಜಾಗೃತಿಯನ್ನು ಉಂಟುಮಾಡಿರುತ್ತದೆ.

ಸನಾತನಹಿಂದೂಧರ್ಮದ ಸಂಪ್ರದಾಯಬದ್ಧವಾದ, ನ್ಯಾಯಸಮ್ಮತವಾದ ಸಂಸ್ಕಾರಗಳು, ವಿಧಿನಿಯಮಗಳು, ಪರಂಪರೆಗಳು ಇವನ್ನೆಲ್ಲ ಬಾಬಾರವರು ಪ್ರೋತ್ಸಾಹಿಸಿರುತ್ತಾರೆ. ವೇದಾಧ್ಯಯನ, ಯಜ್ಞಯಾಗಾದಿಗಳು, ಉಪನಯನ, ವಿವಾಹ ಮೊದಲಾದ ಧಾರ್ಮಿಕ ಸಂಸ್ಕಾರಗಳು ಇವನ್ನೆಲ್ಲ ಬಾಬಾರವರು ಈ ಕಾಲಕ್ಕೂ ಅತ್ಯಂತ ಅಗತ್ಯ ಎಂದು ಸಾರಿ ಅವುಗಳು ಆಡಂಬರರಹಿತವೂ ಪವಿತ್ರವೂ ಆಗಿರಬೇಕೆಂದು ಹೇಳಿ ವಿಶೇಷವಾಗಿ ಅವನ್ನು ಪ್ರೋತ್ಸಾಹಿಸಿರುತ್ತಾರೆ. ಜಾತಿ–ಮತಭೇದಗಳು ಸನಾತನ ಹಿಂದೂಧರ್ಮಕ್ಕೆ ಅಂಟಿಕೊಂಡುಬಂದ ಕಪ್ಪುಮಸಿ-ಮಹಾಕಾಹಿಲೆ ಎಂಬುದನ್ನು ಎಲ್ಲಾ ಮಹಾಪುರುಷರಂತೆ ಬಾಬಾರವರೂ ಹೇಳಿ ತಮ್ಮ ಸನ್ನಿಧಿಯಲ್ಲಿ–ಸಂಸ್ಥೆಯಲ್ಲಿ–ವ್ಯವಹಾರದಲ್ಲಿ ಎಲ್ಲೂ ಅದಕ್ಕೆ ಸ್ಥಾನ ನೀಡಿರುವುದಿಲ್ಲ. ಸರ್ವತ್ರ ಸಮಭಾವ-ಸಮದೃಷ್ಟಿಯಿಂದ ಜನರು ಬಾಳುವಂತೆ ಬೋಧಿಸಿ ಅವಕಾಶ ಕಲ್ಪಿಸಿರುತ್ತಾರೆ.

ಪುಟ್ಟಪರ್ತಿಯ ಪ್ರಶಾಂತನಿಲಯದಲ್ಲಿ ವರ್ಷಂಪ್ರತಿ ನಡೆಯುವ ಮಕರಸಂಕ್ರಾಂತಿ, ಯುಗಾದಿ, ರಾಮನವಮಿ, ಗುರುಪೂರ್ಣಿಮೆ, ನವರಾತ್ರಿ, ದೀಪಾವಳಿ, ಬಾಬಾರವರ ಜನ್ಮೋತ್ಸವ ಇತ್ಯಾದಿ ಹಬ್ಬ-ಉತ್ಸವಗಳ ಸಂದರ್ಭದಲ್ಲಿ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಭಕ್ತರು ಜಾತಿ-ಮತ-ಜನಾಂಗಗಳ ಭೇದವಿಲ್ಲದೆ ಪಾಲ್ಗೊಳ್ಳುವ ವ್ಯವಸ್ಥೆ ಮಾಡಿರುತ್ತಾರೆ. ಇದರಿಂದಾಗಿ ಹಿಂದೂಧರ್ಮ ಎಂದರೆ ಸಮನ್ವಯ, ಅನೇಕದಲ್ಲಿ ಏಕತೆ, ಜಾತಿಮತಗಳ ಭೇದವಿಲ್ಲದ ವಿಶ್ವವ್ಯಾಪಕ ಧರ್ಮ ಎಂಬ ಸನಾತನ ತತ್ತ್ವವನ್ನು ಪ್ರಾಯೋಗಿಕವಾಗಿ

ಸಮಾಜರಂಗದಲ್ಲಿ ಅನುಸರಿಸಲು ಅವಕಾಶವಾಯಿತು.

ಬಾಬಾರವರ ಸಂದೇಶಗಳ ಬೆಳಕಿನಲ್ಲಿ ಸನಾತನ ಹಿಂದೂಧರ್ಮದ ಸೂತ್ರಗಳನ್ನು ಬಾಳಿಗೆ ಅಳವಡಿಸಿಕೊಂಡು ಬಾಳಲು ಅನುಕೂಲವಾಗುವಂತೆ ಭಗವಾನ್ ಶ್ರೀ ಸತ್ಯಸಾಯಿ ವರ್ಲ್ಡ್ ಕೌನ್ಸಿಲ್ ಟ್ರಸ್ಟ್ ಎಂಬ ಕೇಂದ್ರಸಂಸ್ಥೆಯು ಪ್ರಶಾಂತಿನಿಲಯದಲ್ಲಿ ಸಂಸ್ಥಾಪಿಸಲ್ಪಟ್ಟಿದೆ. ಅವರ ಆಶ್ರಯದಲ್ಲಿ ಶ್ರೀ ಸತ್ಯಸಾಯಿ ಪ್ರಾಂತೀಯ ಸೇವಾ ಸಮಿತಿ, ಅದಕ್ಕೆ ಹೊಂದಿ ವಿಭಾಗ ಸಮಿತಿ, ಅದಕ್ಕೆ ಸೇರಿದಂತೆ ಜಿಲ್ಲಾ ಸಮಿತಿಗಳು ಕೆಲಸ ಮಾಡುತ್ತವೆ. ಜಿಲ್ಲಾ ಸಮಿತಿ ಅಂಗವಾಗಿ ಬಾಲವಿಕಾಸ, ಸೇವಾದಳ, ಮಹಿಳಾವರ್ಗ, ಭಜನಾಮಂಡಳಿ, ವ್ಯಾಸಂಗಗೋಷ್ಠಿಗಳು ಆಯಾಯಾ ಊರುಗಳಲ್ಲಿ ಕಾರ್ಯಪ್ರವೃತ್ತವಾಗಿರುತ್ತವೆ.

ಶ್ರೀ ಸತ್ಯಸಾಯಿ ಸೇವಾ ಸಂಸ್ಥೆಯ ಆಶ್ರಯದಲ್ಲಿ ಭೋಪಾಲ, ಜಯಪುರ, ಅನಂತಪುರ, ಉದಕಮಂಡಲ, ಬೆಂಗಳೂರಿನ ವೈಟ್‌ಫೀಲ್ಡ್ (ಬೃಂದಾವನ), ಅಳಿಕೆ ಇತ್ಯಾದಿ ಅನೇಕ ಎಡೆಗಳಲ್ಲಿ ಸುವ್ಯವಸ್ಥಿತವಾದ ವಿದ್ಯಾಮಂದಿರಗಳು ನಡೆಯುತ್ತಿವೆ. ಅಲ್ಲೆಲ್ಲಾ ಗುರುಕುಲಸಂಪ್ರದಾಯವನ್ನು ಹೊಸ ಕಾಲಕ್ಕೆ ಹೊಂದಿಸಿಕೊಂಡು ವಿದ್ಯಾರ್ಥಿಗಳು ಬಾಳಿ ಧರ್ಮಪ್ರಜ್ಞರಾಗಿ ಬೆಳಗುವಂತೆ ಶಿಕ್ಷಣವನ್ನು ವಿದ್ಯಾರ್ಥಿವಿದ್ಯಾರ್ಥಿನಿಯರಿಗೆ ಪ್ರತ್ಯೇಕ ವ್ಯವಸ್ಥೆಯೊಡನೆ ನೀಡಲಾಗುತ್ತಿದೆ. ಶ್ರೀ ಸತ್ಯಸಾಯಿ ಸೇವಾ ಸಂಸ್ಥೆಗಳ ಆಶ್ರಯದಲ್ಲಿ ವೈದ್ಯಕೀಯ ಸೇವೆ, ದೀನದಲಿತರ ಸೇವೆ, ಆಧ್ಯಾತ್ಮಿಕ ಶಿಬಿರಗಳು, ಧಾರ್ಮಿಕ ಗ್ರಂಥ ಪ್ರಕಟಣೆ ಹೀಗೆ ವಿವಿಧ ರೀತಿಯಲ್ಲಿ ಹಿಂದೂಧರ್ಮದ ಸರ್ವಧರ್ಮಸಮನ್ವಯ ದೃಷ್ಟಿಯೊಡನೆ ಧರ್ಮಪ್ರಚಾರ ಹಾಗೂ ರಕ್ಷಣಾಕಾರ್ಯ ನಡೆಯುತ್ತಿದೆ. ದೇಶವಿದೇಶಗಳಲ್ಲಿ ಭಗವಾನ್ ಬಾಬಾರವರ ಸನಾತನಸಂದೇಶವು ಕೋಟ್ಯಂತರ ಜನರ ಬಾಳಿಗೆ ಸಂತೃಪ್ತಿಯನ್ನು ನೀಡುವಂತಾಗಿ ಅತ್ಯಂತ ವೈಜ್ಞಾನಿಕವಾದ ಈ ಕಾಲದಲ್ಲಿ ಧರ್ಮವು ಅನುಷ್ಠಾನ ಸಾಧ್ಯ ಅಷ್ಟೇ ಅಲ್ಲ ಶಾಂತಿಸೌಖ್ಯಕ್ಕೆ ಅತ್ಯಂತ ಅಗತ್ಯ ಎಂಬುದು ಜನರಿಗೆ ಮನವರಿಕೆಯಾಗಿರುತ್ತದೆ.

ಹೀಗೆ ಭಗವಾನ್ ಶ್ರೀ ಸತ್ಯಸಾಯಿಬಾಬಾರವರ ಅವತಾರಕಾರ್ಯಗಳಿಂದಾಗಿ ಹಿಂದೂಧರ್ಮದ ಏಳಿಗೆ ಹಾಗೂ ಬೆಳವಣಿಗೆಗೆ ಹೊಸ ಅನುಕೂಲ-ಅವಕಾಶಗಳು ಕೂಡಿಬರುವಂತಾಯಿತು.

ಒಂದೊಂದು ಕಾಲದಲ್ಲಿ ಹಿಂದೂ ಸಮಾಜದ ಒಂದೊಂದು ಪಂಥದಲ್ಲಿ ಮಹಾನ್ ವ್ಯಕ್ತಿಗಳು ಅವತರಿಸಿ ಹಿಂದೂಧರ್ಮ ಮತ್ತು ಸಮಾಜದ ಕಲ್ಯಾಣಕ್ಕಾಗಿ ದುಡಿದರು.

ಇತ್ತೀಚಿನ ಕಾಲಾವಧಿಯಲ್ಲಿ ಹಿಂದೂ ದೇಶದ ಪ್ರಾಚೀನ ಹಾಗೂ ಅರ್ವಾಚೀನ ಹಿಂದೂ ಗುರುಪೀಠಗಳ ಪೂಜ್ಯ ಸ್ವಾಮೀಜಿಯವರನೇಕರು, ಅನೇಕ ಹಿಂದೂ ಧಾರ್ಮಿಕ ಸಂಸ್ಥೆಗಳು, ಹಿಂದೂಧರ್ಮದ ಪುನರುದ್ಧಾರ ಮತ್ತು ಹಿಂದೂಸಮಾಜದ ಜಾಗೃತಿಗಾಗಿ ಶ್ರಮಿಸುತ್ತಾ ಬರುತ್ತಿರುವುದು ಅನುಭವಸತ್ಯವಾಗಿರುತ್ತದೆ. ಹೀಗೆ ಆಧುನಿಕ ಯುಗದ ಈ ಧಾರ್ಮಿಕವಾದ ಚಲನವಲನಗಳಿಂದ ಹಿಂದೂಧರ್ಮವು ಮತ್ತೆ ವಿಶೇಷವಾಗಿ ಉದ್ಧಾರವಾದಂತಾಗಿ ಭಾರತದಲ್ಲಿ ಮಾತ್ರವಲ್ಲದೆ ವಿದೇಶಗಳಲ್ಲೂ ದಿನೇ ದಿನೇ ಹೆಚ್ಚು ಪ್ರಚಾರಗೊಳ್ಳುತ್ತಾ ಬಲವಾಗಿ ನೆಲೆಗೊಳ್ಳತೊಡಗಿರುತ್ತದೆ. ಆದರೆ ಇನ್ನೊಂದೆಡೆಯಿಂದ ಧಾರ್ಮಿಕವಾದ, ಸಾಮಾಜಿಕವಾದ ಅನೇಕ ರೀತಿಯ ಸಮಸ್ಯೆ-ತೊಂದರೆಗಳನ್ನು ದೇಶ

ವಿದೇಶಗಳಲ್ಲಿ ಹಿಂದೂಧರ್ಮ ಹಾಗೂ ಸಮಾಜವು ಎದುರಿಸುವಂತೆಯೂ ಆಗಿರುತ್ತದೆ.

ಹಾಗಿದ್ದರೂ, ಸನಾತನ ತತ್ತ್ವಗಳ ತಳಹದಿಯಲ್ಲಿ ನಿಂತಿರುವ ಹಿಂದೂಧರ್ಮವು ಒಳ್ಳೆಯದನ್ನು ಎಲ್ಲೆಡೆಗಳಿಂದಲೂ ಸ್ವೀಕರಿಸಿ, ವಿರೋಧವನ್ನು ಎದುರಿಸಿ. ವಿವಿಧ ಮತ ಧರ್ಮಗಳನ್ನು ಮಾನ್ಯಮಾಡಿ ಎಲ್ಲರೊಡನೆ ಮೈತ್ರಿಯಿಂದ ಬಾಳುವ ಹಿರಿದಾದ ಯೋಗ್ಯತೆಯಿಂದ ಕೂಡಿದುದು ಮಾತ್ರವಲ್ಲದೆ, ವಿಶ್ವವ್ಯಾಪಕವಾದ, ಸದೃಢ ಸಬಲವಾದ ಸನಾತನಧರ್ಮವಾಗಿರುತ್ತದೆ. ಈ ಸತ್ಯಾಂಶವನ್ನು ಕಾಲಕಾಲಕ್ಕೆ ಹಿಂದೂಧರ್ಮವು ತನ್ನ ಬೆಳವಣಿಗೆಯ ಮೂಲಕ ಮತ್ತೆಮತ್ತೆ ರಾಮ, ಕೃಷ್ಣ, ಬುದ್ಧ, ರಾಮಕೃಷ್ಣ, ವಿವೇಕಾನಂದ, ಗಾಂಧೀಜಿ, ರವೀಂದ್ರನಾಥ ಠಾಕೂರ್, ಅರವಿಂದ ಮಹರ್ಷಿ ಇವರೇ ಮೊದಲಾದ ಮಹಾಪುರುಷರೂ ಹಿಂದೂಧರ್ಮದ ಜೀವಂತನಿದರ್ಶನಾತ್ಮಕ ಮಹಾನುಭಾವರೂ ಆದ ಶ್ರೇಷ್ಠ ಪುರುಷರಿಗೆ ಜನ್ಮವೀಯುವುದರ ಮೂಲಕ ಸ್ಪಷ್ಟಪಡಿಸಿರುವುದು ಮಾತ್ರವಲ್ಲದೆ ಆ ಸತ್ಯವನ್ನು ದೃಢೀಕರಿಸಿರುತ್ತದೆ.

ಹೀಗೆ ವೇದಕಾಲದಿಂದ ಆಧುನಿಕ ಕಾಲದ ತನಕ ಅದೆಷ್ಟೋ ಸಹಸ್ರಸಂವತ್ಸರಗಳ ಅಂತರವಿದ್ದು ಹಿಂದೂಧರ್ಮವು ವಿವಿಧ ರೀತಿಯ ಪರಿಸ್ಥಿತಿ-ಪ್ರಭಾವಗಳಿಗೆ ತುತ್ತಾಗಿ ಸಾಗಿಬಂದರೂ ಕೂಡ ವೈದಿಕಸತ್ಯಸಂದೇಶಗಳು ಯಾವುದೂ ಬದಲಾಗಲಿಲ್ಲ. ಅಷ್ಟೇ ಅಲ್ಲದೆ ಅವು ಹಳೆಯವೆಂದಾಗಲಿ, ಅರ್ಥಶೂನ್ಯವೆಂದಾಗಲಿ ಕಂಡುಬಂದಿರುವುದೂ ಇಲ್ಲ. ಸಹಸ್ರಾರು ಸಂವತ್ಸರಗಳ ಹಿಂದೆ ವೈದಿಕ ಋಷಿಗಳು ಘೋಷಿಸಿದ "ಏಕಂ ಸತ್ ವಿಪ್ರಾ ಬಹುಧಾ ವದಂತಿ", "ಈಶಾವಾಸ್ಯಮಿದಂ ಸರ್ವಂ", "ಸತ್ಯಮೇವ ಜಯತೇ ನಾನೃತಂ", "ಸತ್ಯಂ ವದ ಧರ್ಮಂ ಚರ", "ಸರ್ವೇ ಜನಾಃ ಸುಖಿನೋ ಭವಂತು", "ಶೃಣ್ವಂತು ವಿಶ್ವೇ ಅಮೃತಸ್ಯ ಪುತ್ರಾಃ" ಎಂಬುವೇ ಮೊದಲಾದ ಅಮರತತ್ತ್ವಗಳು ಆಧುನಿಕವೆಂದು ಹೇಳಲ್ಪಡುವ ಈ ಕಾಲದಲ್ಲಿ ಕೂಡ ಋಷಿಸದೃಶರಾದ ಗೃಹಸ್ಥರು, ಯೋಗಿಗಳು, ಗುರುಗಳು, ಸಂತಮಹಾತ್ಮರು ಇವರುಗಳ ಜೀವನದ ಮೂಲಕ ನಿತ್ಯನೂತನವೂ ಸತ್ಯಸನಾತನವೂ ಆದುದೆಂದು ಸ್ಪಷ್ಟೀಕೃತವಾಗುತ್ತಿದೆ. ಅದೇ ಹಿಂದೂಧರ್ಮದ ಅಳಿವಿಲ್ಲದ ಬಲವಾಗಿದ್ದು ಅದರ ಸನಾತನತ್ವದ ಸಂಕೇತವಾಗಿರುತ್ತದೆ.

೧೬

# ವಿಜ್ಞಾನಯುಗದಲ್ಲಿ ಹಿಂದೂಧರ್ಮದ ಸ್ಥಾನ

ನಾವಿಂದು ವಿಜ್ಞಾನಯುಗದಲ್ಲಿ ಬಾಳುತ್ತಿದ್ದೇವೆ. ಅಂದರೆ ನಾವಿಂದು ಭೌತಿಕ ಸುಖದ ಉದ್ದೇಶವನ್ನೇ ಹೆಚ್ಚಾಗಿ ಹೊಂದಿರುವ ಅರ್ವಾಚೀನ ಯುಗದಲ್ಲಿ ಜೀವಿಸುತ್ತಿದ್ದೇವೆ. ನಮ್ಮ ನಡೆನುಡಿಗಳೆಲ್ಲವೂ ವಿಜ್ಞಾನದಿಂದ ಪ್ರಭಾವವಿತವಾಗಿರುತ್ತವೆ, ಆಗುತ್ತಲೂ ಇವೆ. ಜೀವನದ ಆಗುಹೋಗುಗಳೆಲ್ಲವನ್ನೂ ವೈಜ್ಞಾನಿಕ ದೃಷ್ಟಿಯಿಂದ ತುಲನೆಮಾಡಿ ವಿಜ್ಞಾನ ವಿಲ್ಲದೆ ಜೀವನವಿಲ್ಲ ಎಂಬ ನಿರ್ಧಾರಕ್ಕೆ ಬಂದಂತಾಗಿರುತ್ತದೆ. ಪರಿಣಾಮವಾಗಿ, ಜೀವನವು ವಿಜ್ಞಾನಕ್ಕೇ ಸೀಮಿತವಾಗಿ, ವಿಜ್ಞಾನವೇ ಸರ್ವಸ್ವ ಎಂಬ ಮನೋಭಾವನೆಗೆ ಅವಕಾಶ ವಾಗಿರುತ್ತದೆ.

ವಿಜ್ಞಾನದ ಬೆಳವಣಿಗೆಯಿಂದಾಗಿ ಮಾನವನ ಜೀವನಸೌಕರ್ಯಗಳು ಬಹುಪಾಲು ಹೆಚ್ಚಿವೆ. ಶರೀರದ ಪರಿಶ್ರಮದ ಬದಲು ಯಾಂತ್ರಿಕ ಪರಿಶ್ರಮವಿಂದು ಮುಖ್ಯವಾಗುತ್ತ ಲಿದ್ದು ಮಾನವನು ವಿವಿಧ ರೀತಿಯ ಯಂತ್ರಗಳನ್ನು ಆವಿಷ್ಕರಿಸಿ ತನ್ನ ಇಹಲೋಕದ ಜೀವನಸುಖವನ್ನು ಹೆಚ್ಚಿಸಿಕೊಂಡಿರುತ್ತಾನೆ.

ಬಹುದೂರದ ರಾಷ್ಟ್ರಗಳು ಇಂದು ವೈಜ್ಞಾನಿಕವಾದ ಅನೇಕ ವಿಧದ ಸಂಶೋಧನೆ ಗಳಿಂದಾಗಿ ನೆರೆಮನೆಯ ರಾಷ್ಟ್ರಗಳಂತಾಗಿವೆ. ಜಗತ್ತು ಇಂದು ಒಂದೇ ಮನೆ, ಜಗದ ಜನರೆಲ್ಲರೂ ಒಂದೇ ಮನೆಯವರು, ಒಂದೇ ಕುಟುಂಬದವರು ಎಂಬಷ್ಟುಮಟ್ಟಿಗೆ ಪ್ರಪಂಚದಲ್ಲಿನ ಸಾರಿಗೆವ್ಯವಸ್ಥೆ, ಸುದ್ದಿಮಾಧ್ಯಮ, ವೈದ್ಯಕೀಯ ಚಿಕಿತ್ಸೆ, ಅಣು ವಿಜ್ಞಾನ ಇತ್ಯಾದಿಗಳಿಂದಾಗಿ ಸಾಧ್ಯವಾಗಿದೆ.

ವಿಜ್ಞಾನವೆಂದರೇನು ? ಜಗತ್ತಿನಲ್ಲಿರುವ ಭೌತಿಕವಾದ ವಿಚಾರಗಳ ಕುರಿತಾಗಿ ಪರಿ ಶೀಲನೆ–ಸಂಶೋಧನೆಗಳೇ ವಿಜ್ಞಾನ. ವಿಜ್ಞಾನವು ವಸ್ತುಗಳ ಹಾಗೂ ಜೀವ–ಜಗತ್ತುಗಳ ಕುರಿತಾದ ಬಾಹ್ಯಸ್ವರೂಪದ ವಿವರಣೆ ನೀಡಬಲ್ಲುದು. ಆದರೆ ಅವುಗಳ ಕುರಿತಾದ "ಹೇಗೆ ?" ಎಂಬ ಪ್ರಶ್ನೆಗಳಿಗೆ ಉತ್ತರ ನೀಡಬಲ್ಲುದು. ಆದರೆ ಅವುಗಳ ಬಗೆಗೆ "ಏಕೆ ?" ಎಂಬ ಪ್ರಶ್ನೆಗಳಿಗೆ ವಿಜ್ಞಾನದಿಂದ ಉತ್ತರ ನೀಡಲು ಸಾಧ್ಯವಿಲ್ಲ. ಉದಾಹರಣೆಗೆ ಹೇಳುವು ದಾದರೆ ಆಟಂ ಮತ್ತು ಇಲೆಕ್ಟ್ರಾನ್‌ಗಳ ಕುರಿತಾಗಿ ನಾಕಷ್ಟು ವಿವರ ನೀಡಬಲ್ಲ ವಿಜ್ಞಾನವು

ಆಟಂ ಮತ್ತು ಎಲೆಕ್ಟ್ರಾನ್‌ಗಳ ಸೃಷ್ಟಿಯು ವಿಚಾರವಾಗಿ ಏಕೆ ಹಾಗಾಯಿತು ಎಂದು ಸಮರ್ಪಕವಾದ ರೀತಿಯಲ್ಲಿ ವಿವರ ಕೊಡಲು ಅಸಮರ್ಥವಾಗಿರುತ್ತದೆ.

ವಿಜ್ಞಾನದ ಉದ್ದೇಶ ಮತ್ತು ಗುರಿಯಾದರೂ ಏನು? ಲೌಕಿಕ ಸುಖಸಂಪಾದನೆ ಮತ್ತು ಭೌತಿಕ ಸತ್ಯದ ಅನ್ವೇಷಣೆ. ಜೀವನದ ಲೌಕಿಕ ಸಲಕರಣೆಗಳು ದೊರಕಿ ಅವು ಗಳಿಂದ ಸುಖ ದೊರಕಿದಂತೆಯೇ ಅತೃಪ್ತಿಯೂ, ಸುಖದ ಬಗೆಗೆ ಹೆಚ್ಚಿನ ದಾಹವೂ ಕುತೂಹಲವೂ ಉಂಟಾದುದರಿಂದ ಹೊಸಹೊಸದಾದ ವೈಜ್ಞಾನಿಕ ಸಂಶೋಧನೆಗಳು ನಡೆದುವು. ಹಾಗೆಯೇ ಮಾನವನು ಒಂದೆಡೆಯಿಂದ ಲೌಕಿಕಸುಖಕ್ಕೆ ಹಾಗು ಸುಖವನ್ನು ನೀಡುವ ಸಲಕರಣೆಗಳಿಗೆ ಅಡಿಯಾಳು ಆದಂತೆಯೇ ಹೊಸ ಹೊಸ ಸಮಸ್ಯೆಗಳನ್ನೂ ಎದುರಿಸುವಂತಾಯಿತು. ತನ್ನ ಸುಖಕ್ಕೆ ಇತರರಿಂದ ತೊಂದರೆ, ಆತಂಕಗಳುಂಟಾಗುವಿಕೆ, ಅಥವಾ ತನಗಿಂತ ಇತರರು ಹೆಚ್ಚು ಸುಖದ ಪರಿಸ್ಥಿತಿಯಲ್ಲಿ ಇರುವುದನ್ನು ಕಂಡು ಮತ್ಸರ ಉಂಟಾಗುವಿಕೆ ಇತ್ಯಾದಿ ಮನೋವಿಕಾರಗಳುಂಟಾಗಿ ಅವುಗಳು ವ್ಯಕ್ತಿಯಲ್ಲಿ ಹಾಗೂ ಸಾಮಾಜಿಕವಾಗಿ, ಸಾಮೂಹಿಕವಾದ ಮಟ್ಟದಲ್ಲಿ ಪ್ರಕಟಗೊಳ್ಳುವಂತಾದವು. ಪರಿಣಾಮವಾಗಿಯೇ ವ್ಯಕ್ತಿಗತ ದ್ವೇಷ, ಜಗಳ, ಸಾಮೂಹಿಕ ಹಾಗೂ ರಾಷ್ಟ್ರೀಯವಾದ ಹಲವು ಕಲಹಗಳುಂಟಾಗಲು ಅವಕಾಶವಾಯಿತು. ಆ ಪರಿಣಾಮವಾಗಿ, ವಿಜ್ಞಾನವು ಮಾನವನ ಪ್ರಗತಿಗೆ ನೆರವಾದದ್ದು ಕೊನೆಗೆ ಅವನ ಸರ್ವಾಂಗೀಣ ಅಭಿವೃದ್ಧಿಗೆ ಘಾತುಕ ಪ್ರಾಯವಾಗುವಂತಾಯಿತು. ವಿಜ್ಞಾನದ ಹೊಸ ಹೊಸ ಸಂಶೋಧನೆಗಳಾದ ಅಣು ಬಾಂಬು, ವಿಮಾನ ಇತ್ಯಾದಿಗಳು ಮಾನವಮಾನವರೊಳಗಿನ ಸಮರಸಾಧನಗಳಾಗಿ ಬಳಸಲ್ಪಡುವಂತಾಯಿತು. ಕೋಟ್ಯಂತರ ಮಾನವರು ಸಾವು, ಕಷ್ಟನಷ್ಟಗಳಿಗೆ ಸಿಲುಕು ವಂತಾಯಿತು. ಮಾನವರೆಂದರೆ ಮೌಲ್ಯ ಇಲ್ಲದ ಒಂದು ವಸ್ತು, ಜೀವನ ಎಂದರೆ ಪರಸ್ಪರ ಹೋರಾಡಿ ಸುಖವನ್ನು ಸಂಪಾದಿಸುವ ಒಂದು ರಂಗ, ಅದರಲ್ಲಿ ಬದುಕಿ ಉಳಿದವರೇ ನಿಜವಾದ ಮಾನವರು ಎಂಬ ವಿಚಿತ್ರವಾದ ಮನೋಧರ್ಮವು ವಿಜ್ಞಾನದ ಈ ಸುಖದ ದಾಹದಿಂದಾಗಿ ಉತ್ಪತ್ತಿಯಾಗುವಂತಾಯಿತು.

ಜಗತ್ತಿನ ಇತ್ತೀಚಿನ ದಶಕಗಳ ಇತಿಹಾಸವನ್ನು ಅವಲೋಕಿಸಿದರೆ ಈ ವಿಚಾರಗಳಿಗೆ ಪುಷ್ಟಿಯೀಯುವ ಸಾಕ್ಷ್ಯ ಸಾಕಷ್ಟು ದೊರೆಯುತ್ತದೆ. ಮನುಷ್ಯನ ವೈಜ್ಞಾನಿಕ ಸಂಶೋ ಧನೆಗಳಲ್ಲಿ ಒಂದಾದ ಅಣುಬಾಂಬು ಮನುಕುಲದವರ ಸಾಮೂಹಿಕವಾದ ಆಹುತಿಯನ್ನು ಹಿರೋಷಿಮಾ, ನಾಗಸಾಕಿಗಳಲ್ಲಿ ತೆಗೆದುಕೊಂಡದ್ದು, ಅನಂತರದ ಅನೇಕ ಒಳಯುದ್ಧ ಗಳು, ಕಷ್ಟನಷ್ಟಗಳು, ಇವುಗಳು ವಿಜ್ಞಾನವು ಮಾನವನನ್ನು ಅದೆಂತಹ ದುಷ್ಟಮನೋ ಭಾವನೆಯಿಂದ ಕೂಡಿದ ಮಟ್ಟಕ್ಕೆ ಕೊಂಡೊಯ್ದಿರುತ್ತದೆ ಎಂಬುದಕ್ಕೆ ದೃಷ್ಟಾಂತವನ್ನು ನೀಡುತ್ತವೆ.

ಇತರರ ವಿನಾಶದಿಂದ, ಇತರರ ಕಣ್ಣೀರಿನಿಂದ ಬರುವ ಸುಖವು ಸುಖವಲ್ಲ ಎಂಬುದನ್ನು ವಿಜ್ಞಾನದ ಸಂಶೋಧನೆಗಳ ಶಕ್ತಿಯ ಪ್ರಭಾವಕ್ಕೆ ಒಳಗಾದ ವೈಜ್ಞಾನಿಕ ಮಾನವನು ತಿಳಿಯಲಾರದೆಹೋದುದೇ ಇಂದು ಜಗತ್ತಿನಲ್ಲಿ ಕಾಣಿಸುವ ಹಲವಾರು ಸಮರಪರಿಸ್ಥಿತಿಗಳು, ಈಗಾಗಲೇ ಆಗಿರುವ ಸಮರಗಳು ಮತ್ತು ಅವುಗಳ ದುಷ್ಟ ಪರಿಣಾಮಗಳಿಗೆ ಕಾರಣವಾಗಿರುತ್ತವೆ.

ವಿಜ್ಞಾನವು ಈ ರೀತಿ ಬೆಳೆಯಲು ಮತ್ತು ದುಷ್ಟರೀತಿಯಲ್ಲಿ ಪರಿಣಾಮಕಾರಿಯಾಗಲು ಕಾರಣವೇನು ? ಕಾರಣವಿಷ್ಟೆ : ವಿಜ್ಞಾನವು ವಸ್ತುನಿಷ್ಠವಾದ ಸುಖದ ಗುರಿಯನ್ನು ತಳೆದಿರುತ್ತದೆ. ಮಾತ್ರವಲ್ಲದೆ ವಿಜ್ಞಾನದ ಮಹತ್ವಪೂರ್ಣವಾದ ಶಕ್ತಿಯನ್ನು ತನ್ನ ಸುಖಕ್ಕೆ ಬಳಸುವಾಗ ಇತರರ ಸುಖವನ್ನು ಅಲಕ್ಷ್ಯಿಸಿರುತ್ತದೆ.

ಹೀಗೆ ವಿಜ್ಞಾನವು ಕೇವಲ ಇಂದ್ರಿಯಜನ್ಯವಾದ ವಸ್ತು-ಸುಖಗಳು, ಬಾಹ್ಯಪ್ರಪಂಚದ ವಿಚಾರಗಳ ಕುರಿತಾಗಿ ಮಾತ್ರ ಪರಿಶೀಲನೆ ಮತ್ತು ಪರಿಶ್ರಮಗಳನ್ನು ಪಡುವುದಾಗಿದೆ. ಹಾಗಾಗಿ ವಿಜ್ಞಾನದ ದೃಷ್ಟಿಯಲ್ಲಿ ಧರ್ಮದ, ನೀತಿನಿಯಮಗಳ ನಿಯಂತ್ರಣವಾಗಲಿ, ಮಾನವೀಯವಾದ ಉದಾತ್ತಭಾವನೆಯಾಗಲಿ ಇರದಂತಾಗಿರುತ್ತದೆ.

ಮನುಷ್ಯನೆಂದರೆ ಸ್ಥೂಲವಾಗಿ ಕಾಣುವ ಶರೀರ, ಆದುದರಿಂದ ಶಾರೀರಿಕವಾದ ಸುಖವನ್ನೆಲ್ಲಾ ಪಡೆಯಬೇಕೆಂಬುದೇ ವಿಜ್ಞಾನದ ಧೋರಣೆ—ಎಂದು ಈ ವೈಜ್ಞಾನಿಕ ಕಾಲದಲ್ಲಿ ಜನರು ತಿಳಿದುಕೊಂಡಂತಿದೆ. ಜಗತ್ತಿನಲ್ಲಿ ಜನ್ಮತಳೆದ ಮಾನವನು ಸುಖವನ್ನು ಪಡೆಯಬೇಕು. ಆದರೆ ಎಂತಹ ಸುಖವನ್ನು ಆತ ಪಡೆಯಬೇಕು ? ಅದರ ಇತಿಮಿತಿಗಳೇನೇನು ? ಎಂಬುದನ್ನು ವಿಜ್ಞಾನ ಹೇಳುವುದಿಲ್ಲ, ಬಯಸುವುದೂ ಇಲ್ಲ. ಜೀವನ ಎಂದರೇನು ? ಅದರ ಗುರಿಯೇನು ? ಅದರ ಸ್ವರೂಪವೇನು ? ಎಂಬ ಬಗೆಗೆ ವಿಜ್ಞಾನ ನೀಡುವ ಸಮಾಧಾನ ಮಾನವನನ್ನು ಪೂರ್ತಿಯಾಗಿ ತೃಪ್ತಿಪಡಿಸಲು ಸಾಧ್ಯವಿಲ್ಲವಾಗಿದೆ. ಮಾತ್ರವಲ್ಲದೆ ವಿಜ್ಞಾನದಿಂದ ಮಾನವನಿಗೆ ಪೂರ್ತಿಯಾದ ನೆಮ್ಮದಿ ಮತ್ತು ಸುಖಗಳು ದೊರೆತಿಲ್ಲ ಎನ್ನುವುದು ಕೂಡ ಸತ್ಯವೇ ಆಗಿದೆ.

ಭೌತಿಕವಾಗಿ ಸಕಲವಿಧದ ಸಂಪತ್ತು-ಸೌಭಾಗ್ಯವಿಶೇಷಗಳಿಂದ ಕೂಡಿ ಸುಖವಾಗಿರುವ ದೇಶಗಳಾದ ಅಮೆರಿಕಾ, ರಷ್ಯಾ, ಇಂಗ್ಲೆಂಡ್, ಫ್ರಾನ್ಸ್ ಇತ್ಯಾದಿ ರಾಷ್ಟ್ರಗಳಲ್ಲಿ ಇರುವ ಜನರು ಎಂತಹ ಮನಃಸ್ಥಿತಿಯನ್ನು ಉಳ್ಳವರಾಗಿರುತ್ತಾರೆ ಎಂಬುದನ್ನು ಪರ್ಯಾಲೋಚಿಸಿದರೆ ವಿಜ್ಞಾನದ ಇತಿಮಿತಿಗಳ ಬಗೆಗೆ ಸ್ಪಷ್ಟವಾದ ಚಿತ್ರಣ-ವಿವರಣೆ ನಮಗೆ ದೊರಕುತ್ತದೆ.

ಅತ್ಯಂತ ಅಚ್ಚುಕಟ್ಟಾದ ಮನೆ, ಸುಖಪ್ರಯಾಣಕ್ಕೆ ಕಾರು—ವಿಮಾನ, ಉತ್ತಮ ಆಹಾರ, ಕೆಲಸಕಾರ್ಯಗಳಿಗೆ ಯಂತ್ರಸೌಕರ್ಯಗಳು ಇವುಗಳಿಂದ ಕೂಡಿ ಆ ರಾಷ್ಟ್ರದಲ್ಲಿ ಜನರು ಬಾಳುತ್ತಿದ್ದಾರೆ. ಹಾಗಿದ್ದರೂ ಅವರು ಸುಖವಾಗಿರುತ್ತಾರೆಯೇ ? ಇಲ್ಲ ಎಂದು ಆ ರಾಷ್ಟ್ರದಲ್ಲಿ ಜನಜೀವನದ ಸಂಶೋಧನೆ ನಡೆಸಿರುವ ತಜ್ಞರೇ ಹೇಳುತ್ತಾರೆ. ಅಲ್ಲದೆ ನಮ್ಮ ದೃಷ್ಟಿಯಿಂದ ಇದನ್ನು ವಿಮರ್ಶಿಸಿದಾಗಲೂ ಹಾಗೆಯೇ ಕಾಣುತ್ತದೆ. ಏಕೆಂದರೆ :

(೧) ಆ ರಾಷ್ಟ್ರಗಳಲ್ಲಿ ಯುದ್ಧದ ಬಯಕೆ ಹೆಚ್ಚಿದ್ದು ದಿನದಿನವೂ ಅಲ್ಲಿನ ಜನರ ಮನದಲ್ಲಿ ಕಲಹಪ್ರವೃತ್ತಿ, ದ್ವೇಷ, ಅತೃಪ್ತಿ, ಸಮರಮನೋಭಾವ ಇತ್ಯಾದಿಗಳು ಹೆಚ್ಚಾಗುತ್ತಲಿವೆ.

(೨) ಒಂದು ರಾಷ್ಟ್ರವು ಇನ್ನೊಂದು ರಾಷ್ಟ್ರವನ್ನು ವಿನಾಶಮಾಡಲು ಏನೇನು ತಯಾರಿಸಬೇಕೋ ಅದರ ತಯಾರಿಕೆಯ ಬಗೆಗೆ ಸಾಧನಸಿದ್ಧತೆಗಳನ್ನು ಮಾಡುವುದರ ವಿಚಾರವಾಗಿ ನಿರ್ಧಾರಗಳು ಹೆಚ್ಚಾಗುತ್ತಿವೆ ; ಕಾರ್ಯ ರೂಪಗೊಳ್ಳಹತ್ತಿರುತ್ತವೆ.

(೩) ವ್ಯಕ್ತಿಗತವಾಗಿ ಜೀವನದಲ್ಲಿ ಮಾನಸಿಕವಾದ ಅಸ್ವಸ್ಥತೆ ದಿನೇ ದಿನೇ

ಹೆಚ್ಚಾಗುತ್ತಿದೆ. ಅದು ವ್ಯಕ್ತಿ ಹಾಗೂ ಸಾಮೂಹಿಕವಾಗಿ ಸಂದಿಗ್ಧತೆ, ಗೊಂದಲ ಮತ್ತು ಸಂಸ್ಕೃತಿಯ ಬಿಕ್ಕಟ್ಟಿನ ಸ್ವರೂಪವಾಗಿ ಮೈದಳೆಯುತ್ತಿದೆ. ಪರಿಣಾಮವಾಗಿ ಆತ್ಮಹತ್ಯೆ, ಹುಚ್ಚು ಇವುಗಳು ಹೆಚ್ಚಾಗುತ್ತಿವೆ. ನೈತಿಕ ಆರೋಗ್ಯ, ಜೀವನದ ಉದಾತ್ತದೃಷ್ಟಿಗಳೆಲ್ಲ ಅತಿಕಡಿಮೆ ಹಾಗೂ ಬಹುಮಟ್ಟಿಗೆ ಅವಶ್ಯವೇ ಇಲ್ಲ ಎಂಬಂತಾಗಹತ್ತಿವೆ.

ಅಮೇರಿಕಾದ ಸುಪ್ರಸಿದ್ಧ ಡಾಕ್ಟರ್ ಒಬ್ಬರು ಹೀಗೆ ಹೇಳಿರುತ್ತಾರೆ :[1]

"ಈ ದೇಶದ ಆಸ್ಪತ್ರೆಯಲ್ಲಿನ ರೋಗಿಗಳ ಹಸೆಗಳಲ್ಲಿ ಅರ್ಧಕ್ಕಿಂತಲೂ ಹೆಚ್ಚು ಹಸೆಗಳು ಮಾನಸಿಕ ಅಸ್ವಸ್ಥತೆಯಿಂದ ಕೂಡಿದ ರೋಗಿಗಳಿಂದಲೇ ಭರ್ತಿ ಆಗಿರುತ್ತವೆ."

ಹೀಗೆ ವಿಜ್ಞಾನದಿಂದ ದೊರೆಯುವ ಸುಖ ಮಾನವನಿಗೆ ಪೂರ್ಣ ಹಾಗೂ ಶಾಶ್ವತ ವಾದ ತೃಪ್ತಿಯನ್ನು ನೀಡವಾದುದು ಸ್ಪಷ್ಟವಾಗುತ್ತದೆ. ಅದರಂತೆಯೇ ಬರೇ ವಿಜ್ಞಾನ ದಿಂದ ದುಃಖ, ಕಷ್ಟ, ಅಪಾಯಗಳಿಗೆ ಸಾಕಷ್ಟು ಅವಕಾಶವಿದೆ ಎಂಬುದೂ ಸ್ಪಷ್ಟವಾಗು ತ್ತದೆ. ಮನುಷ್ಯನು ಆತ್ಮಸ್ವರೂಪನು ಮತ್ತು ಸತ್ವಶಃ ದಿವ್ಯನಾಗಿದ್ದು ಪರಿಪೂರ್ಣ ನಾಗಿರುತ್ತಾನೆ. ಅಜ್ಞಾನದಿಂದಾಗಿ, ತಾನು ಜೀವನೆಂದೂ ಸುಖವಿಲ್ಲದವನೆಂದೂ ತಿಳಿಯು ತ್ತಾನೆ. ಆತ್ಮಸ್ವರೂಪಿ ಮಾನವನು ಪೂರ್ಣವಾದ ಪರಮಾತ್ಮನಲ್ಲೇ ಪೂರ್ಣಸುಖ ಪಡೆ ಯಲು ಸಾಧ್ಯವೇ ವಿನಾ ಭೌತಿಕವಾದ ಯಾವ ವಸ್ತುವೂ ಪೂರ್ಣಸುಖ ನೀಡಲಾರದು. ಭೌತಿಕ ವಸ್ತುಗಳೆಲ್ಲವೂ ಅಪೂರ್ಣ, ಮಾನವನು ಪೂರ್ಣವಾದ ಆತ್ಮಸ್ವರೂಪನು. ಅಪೂರ್ಣತೆಯಿಂದ ಪೂರ್ಣ ತೃಪ್ತಿ ದೊರೆಯದು. ಪೂರ್ಣಕ್ಕೆ ಪೂರ್ಣದಿಂದಲೇ ತೃಪ್ತಿ ದೊರೆಯಬೇಕು. ಆಗಲೇ ಪೂರ್ಣಾನಂದ.

ವೈಜ್ಞಾನಿಕ ಸಂಶೋಧನೆ, ಸುಖಸಲಕರಣೆಗಳೇನೇ ಇದ್ದರೂ ಮನುಷ್ಯನಿಗೆ ಅಧ್ಯಾತ್ಮ ವಿಚಾರ, ಅಧ್ಯಾತ್ಮಸುಖತೃಪ್ತಿಗಳು ಇಲ್ಲದೆ ಬಾಳು ಪೂರ್ಣವಾಗದು. ಈ ವಿಚಾರವಾಗಿ ಅಮೇರಿಕಾದ ಸುಪ್ರಸಿದ್ಧ ಮನಶ್ಶಾಸ್ತ್ರಜ್ಞ ಡಾ|| ಸಿ. ಜಿ. ಯುಂಗ್ ಎನ್ನುವರು ತಮ್ಮ *Modern Man in Search of a Soul* ಎಂಬ ಪುಸ್ತಕದಲ್ಲಿ ಬರೆದ ಈ ಮಾತು ಗಳು ವಿಷಯವನ್ನು ಇನ್ನಷ್ಟು ಸ್ಪಷ್ಟಗೊಳಿಸುತ್ತದೆ. ಶ್ರೀಯುತರು ತಮ್ಮ ಪುಸ್ತಕದಲ್ಲಿ ಹೀಗೆ ಬರೆದಿರುತ್ತಾರೆ :[2]

"ಜೀವನದ ಉತ್ತರಾರ್ಧವಯೋಮಿತಿಗೆ ತಲಪಿದ ಅಂದರೆ ಮೂವತ್ತೈದು ವರ್ಷಗಳಿಗೆ ಮೇಲ್ಪಟ್ಟ ಪ್ರಾಯದ ನನ್ನ ರೋಗಿಗಳಲ್ಲಿ, ಸರಿಯಾಗಿ ಪರಿಶೀಲಿಸಿದಾಗ ಜೀವನದಲ್ಲಿ ಮತಧರ್ಮದ ದೃಷ್ಟಿ ಇಲ್ಲದಿರುವುದೇ ರೋಗಸಮಸ್ಯೆಯ ಕಾರಣ ಎಂದು ಕಂಡುಬರದ ಒಬ್ಬನೇ ಒಬ್ಬ ರೋಗಿಯೂ ಇರಲಿಲ್ಲ."

---

1. "More than half of the hospital beds of this country are filled with persons mentaly ill." —Dr. S. Bernad Walts

2. "Among all my patients in the second half of life that is to say over thirtyfive, there has not been one whose problem in the last resort was not that of finding a religious outlook on life."

—*Modern Man in Search of a Soul*, p. 264

ವಿಜ್ಞಾನದ ಸಂಶೋಧನೆ, ಸುಖಸಲಕರಣೆಗಳ ಇತಿಮಿತಿಗಳನ್ನು ಕಂಡುಕೊಂಡು ನಿಜವಾದ ಮತ್ತು ಪೂರ್ಣವಾದ ಸುಖ ಅದರಿಂದ ದೊರೆಯುವುದು ಅಸಾಧ್ಯ ಎಂಬುದನ್ನು ಸಹಸ್ರಾರು ಸಂವತ್ಸರಗಳ ಹಿಂದೆಯೇ ಉಪನಿಷತ್ತಿನ ಋಷಿಗಳು ಘೋಷಿಸಿರುತ್ತಾರೆ. ಹೊಸಹೊಸ ಸಂಶೋಧನ, ಸಲಕರಣೆಗಳು ಬೆಳೆದು ಕೊನೆಗೆ ಆಕಾಶವನ್ನೇ ಚರ್ಮದಂತೆ ಸುರುಳಿ ಮಾಡಬಹುದ ಸಾಮರ್ಥ್ಯವನ್ನು ಪಡೆದಾಗ ಮಾತ್ರ ಮನುಷ್ಯನು ದೇವರ ಜ್ಞಾನವಿಲ್ಲದೆ, ದುಃಖಗಳಿಂದ ನಿವೃತ್ತಿಯನ್ನು ಪಡೆಯಬಲ್ಲನು ಎಂದು ಶ್ವೇತಾಶ್ವತರೋಪನಿಷತ್ತಿನಲ್ಲಿ (೬–೨೦) ಹೇಳಿದೆ. ಆಕಾಶವನ್ನು ಸುರುಳಿಸುತ್ತುವುದು ಹೇಗೆ ಅಸಾಧ್ಯವೋ ಹಾಗೆಯೇ ದೇವರು ಅಂದರೆ ಅಧ್ಯಾತ್ಮವಿಚಾರವಿಲ್ಲದೆ, ಆ ಜ್ಞಾನ ಪಡೆಯದೆ ಜೀವನದ ದುಃಖಗಳ ಶಾಶ್ವತ ನಿವೃತ್ತಿಯೂ ಅಸಾಧ್ಯ ಎಂಬುದು ಈ ಮಾತಿನ ತಾತ್ಪರ್ಯವಾಗಿದೆ. ಶ್ವೇತಾಶ್ವತರ ಉಪನಿಷತ್ತಿನಲ್ಲಿ ಹೇಳಿರುವ ಶ್ಲೋಕದ ವಿವರ ಹೀಗಿದೆ :

**ಯದಾ ಚರ್ಮವದಾಕಾಶಂ ವೇಷ್ಟಯಿಷ್ಯಂತಿ ಮಾನವಾಃ ।**
**ತದಾ ದೇವಮವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ ॥**

"ಯಾವಾಗ ಮನುಷ್ಯರು ಚರ್ಮವನ್ನು ಸುತ್ತಿಡುವಂತೆ ಆಕಾಶವನ್ನು ಸುತ್ತಿಡಬಲ್ಲರೋ ಆಗ ಜ್ಯೋತಿರ್ಮಯನಾದ ಪರಮೇಶ್ವರನನ್ನು ಅರಿತುಕೊಳ್ಳದೆಯೇ ದುಃಖನಿವೃತ್ತಿಯನ್ನು ಮಾಡಿಕೊಳ್ಳಬಲ್ಲರು."

"ವಿಜ್ಞಾನವು ಹಾಗಾದರೆ ಮಾನವನ ಜೀವನಕ್ಕೆ ಆಗತ್ಯವಿಲ್ಲವೆ?" ನಿಶ್ಚಯವಾಗಿಯೂ ಅಗತ್ಯವಿದೆ. ವಿಜ್ಞಾನದಿಂದಾಗಿ ಮಾನವನಿಗೆ ದೊರೆತ ಸಹಸ್ರಾರು ರೀತಿಯ ಜೀವನಸಲಕರಣೆಗಳು ನಿಶ್ಚಯವಾಗಿ ಮನುಷ್ಯನ ಜೀವನಕ್ಕೆ ಹೊಸ ಚೇತನ, ಹೊಸ ಭರವಸೆಯನ್ನು ತುಂಬಿರುವುದು ಮಾತ್ರವಲ್ಲದೆ ಸುಖಸೌಲಭ್ಯಗಳನ್ನು ನೀಡಿರುತ್ತವೆ. ಹಾಗಾಗಿ ವಿಜ್ಞಾನ ಖಂಡಿತವಾಗಿಯೂ ಮಾನವನಿಗೆ ಬೇಕೇ ಬೇಕು. ಬೆಂಕಿಯು ಮನುಷ್ಯನಿಗೆ, ಅವನ ಜೀವನಕ್ಕೆ ಅತಿ ಅಗತ್ಯ. ಅದರಿಂದ ಅವನು ಆಹಾರ ತಯಾರಿಸಿಕೊಳ್ಳುತ್ತಾನೆ. ಆದರೆ ಆ ಬೆಂಕಿಯು ಅಡುಗೆಮನೆಯಲ್ಲಿ ಒಲೆಯಲ್ಲಿಯೇ ಸೀಮಿತವಾಗಬೇಕಲ್ಲದೆ ನೆರೆಯವನ ಮನೆಯನ್ನು ಸುಡಲು ಬಳಸಲ್ಪಡುವಂತಾಗಬಾರದು. ಬದಲು ಆ ಬೆಂಕಿಯು ನೆರೆಯವರನ್ನೆಲ್ಲ ಕರೆದು ಉತ್ತಮ ಹಾಗು ರುಚಿಕರವಾದ ಔತಣ ನೀಡಲು, ತನ್ಮೂಲಕ ಸ್ನೇಹಸೌಹಾರ್ದತೆಗಳನ್ನು ಬೆಳೆಸಲು ಸಹಕಾರಿಯಾಗಬೇಕು. ಹಾಗೆಯೇ ನೆರೆಯವನ ಮನೆಯಲ್ಲಿ ಬೆಂಕಿಯು ಆರಿಹೋದಾಗ ಅವನಿಗೆ ಬೇಕಾದಂತೆ ಬೆಂಕಿಯನ್ನು ನೀಡಲೂ ಉಪಯೋಗಕ್ಕೆ ಬರಬೇಕು. ವಿಜ್ಞಾನವೂ ಹೀಗೆಯೇ ಉಪಕಾರಿಯಾಗಬೇಕೆಂಬುದೇ ಹಿಂದೂಧರ್ಮದ ನಿಲವಾಗಿರುತ್ತದೆ.

ವಿಜ್ಞಾನವು ಯಾರಿಗಾಗಿ ? ಮನುಷ್ಯನಿಗಾಗಿ ಎಂಬುದು ಸರಿಯಾದ ಉತ್ತರವಾಗಿದೆ. ಮನುಷ್ಯನೆಂದರೆ ಯಾರು ? ಈ ಜಗತ್ತೆಂದರೆ ಏನು ? ಎಂಬ ಬಗ್ಗೆ ಸಾಕಷ್ಟು ಪರಿಶೋಧನೆ ನಡೆಸಿ ವಿಜ್ಞಾನವು ತನ್ನ ಭೌತಶಾಸ್ತ್ರ, ರಸಾಯನಶಾಸ್ತ್ರ, ದೇಹಶಾಸ್ತ್ರ ಎಲ್ಲವುಗಳ ಸಹಾಯದಿಂದ ಮನುಷ್ಯನೆಂದರೆ ಶಕ್ತಿಯಿಂದ ಕೂಡಿದವನು, ಈ ಜಗತ್ತು ಎಂದರೆ ಸೂಕ್ಷ್ಮವಾದ ಅಣುಶಕ್ತಿಯಿಂದ ಕೂಡಿದೆ, ಮಾನವನೂ ಅದೇ ಅಣುಶಕ್ತಿಯಿಂದ ಕೂಡಿ

ದವನಾಗಿದ್ದಾನೆ—ಎಂಬುದಾಗಿ ಹೇಳಿರುತ್ತದೆ ಜಗತ್ತಿನ ಚರಾಚರಜೀವಿಗಳೆಂದರೇನು? ಅವುಗಳ ಹಿನ್ನೆಲೆಯಲ್ಲಿ ಏನಿದೆ? ಎಂಬುದನ್ನು ವಿಜ್ಞಾನವು ಹೇಳುತ್ತಾ 'ಏನೂ ಇಲ್ಲ. ಈ ನಾಮರೂಪಗಳ ಹಿನ್ನೆಲೆಯಲ್ಲಿ ಅನಂತವಾದ ಅಣುಚೈತನ್ಯಸಾಗರವಿದೆ. ಈ ಅಣುಚೈತನ್ಯ ಸಾಗರದ ಒಂದೊಂದು ಅಲೆಗಳೇ ಈ ಚರಾಚರವಸ್ತುಗಳು' ಎಂದು ಹೇಳಿರುತ್ತದೆ.

ಹಿಂದೂಧರ್ಮವು ಈ ತತ್ತ್ವವನ್ನು ಒಪ್ಪಿಕೊಂಡು ಮುಂದೆ ಹೋಗಿ ಜಗತ್ತಿನ ಹಿನ್ನೆಲೆಯಲ್ಲಿರುವ ಈ ಅನಂತವಾದ ಅಣುಚೈತನ್ಯಸಾಗರದ ಅಧಿಷ್ಠಾನವಾಗಿ, ಅಂತಃ ಸತ್ತ್ವವಾಗಿ ಇರುವುದು ಯಾವುದೋ ಅದೇ ಪರಮಾತ್ಮ. ಅದೇ ಸಚ್ಚಿದಾನಂದ. ಅದೇ ನಾಮರೂಪಗಳಾಗಿ ಕಾಣುವುದು. ಪರಮಾತ್ಮ ಅಲ್ಲದೆ ಜಗತ್ತಿನಲ್ಲಿ ಬೇರೇನೂ ಇಲ್ಲ. ಪರಮಾತ್ಮನು ಜಗತ್ತಿನಲ್ಲಿರುವುದೆಲ್ಲವನ್ನೂ ಆವರಿಸಿರುತ್ತಾನೆ ಎಂದು ಘೋಷಿಸುತ್ತದೆ.

**ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ ।**

**—ಈಶೋಪನಿಷತ್, ೧**

"ಈ ಜಗತ್ತಿನಲ್ಲಿ ಏನೇನಿದೆಯೋ ಇದೆಲ್ಲವೂ ಈಶನಿಂದ (ಪರಮಾತ್ಮನಿಂದ) ಆವರಿಸಲ್ಪಟ್ಟಿದೆ."

ಆ ಈಶಶಕ್ತಿಯ ಸ್ವರೂಪವೇನು? ಎಂಬುದಕ್ಕೆ ಉತ್ತರವಾಗಿ ಹಿಂದೂಧರ್ಮವು "ಅಣೋರಣೀಯಾನ್ ಮಹತೋ ಮಹೀಯಾನ್"—ಅಣುವಿಗಿಂತ ಸೂಕ್ಷ್ಮ, ಮಹತ್ತಿಗಿಂತ ಮಹತ್ತು ಎಂಬುದಾಗಿ ಹೇಳಿರುತ್ತದೆ.

ಜಗತ್ತಿನ ಮಾನವರಲ್ಲಿ ಇದೇಕೆ ದೇಹ-ಬುದ್ಧಿ-ಮನಗಳ ಇಷ್ಟೊಂದು ವೈವಿಧ್ಯ? ಇದೇಕೆ ದುಃಖ, ಅಸಮಾಧಾನ, ಮಾನಸಿಕ ಅಸ್ವಸ್ಥತೆಗಳಿವೆ? ವಿಜ್ಞಾನದಿಂದ ಲೌಕಿಕವಾಗಿ ಸುಖ ದೊರೆತರೂ ಮಾನವ ಏಕೆ ತೃಪ್ತನಲ್ಲ? ಏಕೆ ಶಾಂತಿ ಇಲ್ಲ? ಆತ್ಮ ಎಂದರೇನು? ದೇವರೆಂದರೇನು? ಎಂಬ ಪ್ರಶ್ನೆಗಳಿಗೆ ವಿಜ್ಞಾನವು ಸಮರ್ಪಕವಾಗಿ ಉತ್ತರಿಸಲು ಅಸಮರ್ಥವಾಗಿದೆ. ಹಾಗೆಯೇ ಇವುಗಳಿಗೆಲ್ಲ ಸರಿಯಾದ ಪರಿಹಾರ ನೀಡಲೂ ಸಾಮರ್ಥ್ಯ ವಿಲ್ಲವಾಗಿದೆ. ಏಕೆಂದರೆ ವಿಜ್ಞಾನಕ್ಕೆ ಅದರ ಇತಿಮಿತಿಗಳು ಇದ್ದೇ ಇವೆ. ಹೇಗೆಂದರೆ, ವೈಜ್ಞಾನಿಕ ಶೋಧನೆಗಳನ್ನು ಮಾಡುತ್ತಾಹೋದಂತೆ ಅಂತಿಮಘಟ್ಟದಲ್ಲಿ ಸಂಶೋಧಕ, ಸಂಶೋಧನೆ, ಸಂಶೋಧನಾವಸ್ತು ಇವುಗಳೆಲ್ಲವೂ ಪ್ರಕೃತಿಯ ಭಾಗಗಳೇ ಆಗಿವೆ ಎಂಬುದು ಸ್ಪಷ್ಟವಾಗುತ್ತದೆ. ಯಾವ ಜಗತ್ತಿನ ನಿಗೂಢವಾದ ರಹಸ್ಯವನ್ನು ಭೇದಿಸಲು ಹೊರಟಿದ್ದಾಗಿದೆಯೋ ಆ ರಹಸ್ಯಕ್ಕೇ ಈ ಸಂಶೋಧಕ-ಸಂಶೋಧನೆಗಳು ಇತ್ಯಾದಿಗಳೆಲ್ಲ ಸೇರಿರುತ್ತವೆ! ಹಾಗಾಗಿ ವಿಜ್ಞಾನವು ತನ್ನ ಸಂಶೋಧನೆಯ ಕ್ಷೇತ್ರ ಹಾಗೂ ಶಕ್ತಿಗಳ ಇತಿಮಿತಿಯನ್ನು ಒಪ್ಪದೇ ಗತ್ಯಂತರವಿಲ್ಲ.

ಹೀಗೆ ವಿಜ್ಞಾನದ ಆವಿಷ್ಕರಣೆಗಳು, ವೈಜ್ಞಾನಿಕವಾದ ಸಂಶೋಧನಾಶಕ್ತಿ ಇವುಗಳ ಇತಿಮಿತಿಗಳನ್ನು ಗ್ರಹಿಸಿ ವಿಜ್ಞಾನದಿಂದ ಮಾನವನಿಗೆ ಪೂರ್ಣಸುಖ ದೊರೆಯದು. ವಿಜ್ಞಾನಕ್ಕಿಂತ ಮಿಗಿಲಾದುದು ಒಂದಿದೆ. ಅದನ್ನು ಪಡೆದಾಗಲೇ ಪೂರ್ಣಸುಖ, ಪೂರ್ಣ ತೃಪ್ತಿ, ಪೂರ್ಣಶಾಂತಿ ಎಂದು ವಿಜ್ಞಾನಿಗಳಲ್ಲಿಯೇ ಅಭಿಪ್ರಾಯ ವ್ಯಕ್ತಪಡಿಸಲ್ಪಟ್ಟಿದೆ. ಮಾನವನ ಬಾಳನ್ನು ಯಶಸ್ವಿಯಾಗಿ ಸಾಗಿಸಲು ಅಧ್ಯಾತ್ಮವಿದ್ಯೆ ಬೇಕು. ವಿಜ್ಞಾನಕ್ಕೆ ಇತಿ

ನೀತಿ ಇದೆ ಎಂಬುದನ್ನು ಸ್ಪಷ್ಟಪಡಿಸುತ್ತಾ ಸುಪ್ರಸಿದ್ಧ ಬರಹಗಾರರೂ ವೈಜ್ಞಾನಿಕ ದೃಷ್ಟಿಯನ್ನು ತಳೆದಿರುವವರೂ ಆದ ಶ್ರೀ ಆಲ್ಡಸ್ ಹಕ್ಸ್ಲೆಯವರು ಹೀಗೆ ಹೇಳಿರುತ್ತಾರೆ :[1]

> "ಮನುಷ್ಯನಿಗೆ ಅಧ್ಯಾತ್ಮವಿದ್ಯೆ ಇಲ್ಲದೆ ಜೀವಿಸಲು ಸಾಧ್ಯವೇ ಇಲ್ಲ. ಅಧ್ಯಾತ್ಮವಿದ್ಯೆ ಇಲ್ಲದಿರುವಿಕೆ ಅಥವಾ ಯಾವುದಾದರೂ ಒಂದು ತರಹದ ಅಧ್ಯಾತ್ಮವಿದ್ಯೆ ಎಂಬ ಈ ಎರಡರಲ್ಲಿ ಯಾವುದಾದರೂ ಒಂದರ ಆಯ್ಕೆ ಆಗಿರುವುದಿಲ್ಲ. ಆಯ್ಕೆಯು ಯಾವಾಗಲೂ ಉತ್ತಮ ಅಧ್ಯಾತ್ಮವಿದ್ಯೆ ಮತ್ತು ಅನುತ್ತಮ ಅಧ್ಯಾತ್ಮವಿದ್ಯೆ ಎಂಬ ಎರಡರ ಒಳಗೇ ಆಗಿರುತ್ತದೆ."

ಅಧ್ಯಾತ್ಮವಿದ್ಯೆಯು ಮಾನವನಿಗೆ ಹೇಗೆ, ಏಕೆ ಅಗತ್ಯ ಎನ್ನುತ್ತಾ ತತ್ತ್ವಜ್ಞಾನಿ ಬರ್ಟ್ರಾಂಡ್ ರಸ್ಸೆಲ್ಲರು ಹೇಳಿದ ಈ ಮಾತುಗಳು ಮನನೀಯವಾಗಿವೆ :[2]

> "ತತ್ತ್ವಶಾಸ್ತ್ರವು ಬಾಳಿನ ಮೂರು ದುಷ್ಟಶಕ್ತಿಗಳಾದ ತಪ್ಪು, ದ್ವೇಷ ಮತ್ತು ಕಲಹಗಳನ್ನು ಎದುರಿಸಲು, ಕಲಹಗಳೊಡನೆ ಪ್ರೇಮ ಮತ್ತು ಸೇವೆಯ ಮೂಲಕವಾಗಿ ಹೋರಾಡಲು ಸಾಧ್ಯವಾಗಿಸುತ್ತದೆ. ಯೋಚನಾವಲಯದಲ್ಲಿ ಅಧ್ಯಾತ್ಮವು (ತತ್ತ್ವಶಾಸ್ತ್ರ) ಮನುಷ್ಯನು ಇಂದ್ರಿಯಗಳ ಮಟ್ಟದಿಂದ ಮೇಲೇರಲು ಸಹಾಯಮಾಡುತ್ತಾ ಮನುಷ್ಯರಿಗೆ ಯಾವಾಗಲೂ ಸಾಮಾನ್ಯ ಹಾಗೂ ಮುಚ್ಚುಮರೆಯಿಲ್ಲದ ವಿಚಾರಗಳನ್ನು ಬಯಸಲು ಮತ್ತು ಪಡೆಯಲು ಸಹಾಯಮಾಡುತ್ತದೆ. ಬಯಕೆಗಳಲ್ಲಿ ಮತ್ತು ಇಚ್ಛೆಗಳಲ್ಲಿ ಅದು (ತತ್ತ್ವಶಾಸ್ತ್ರ) ಯಾವಾಗಲೂ ಒಳಿತಿನ ಎಡೆಗೇ ಗುರಿ ಇಡುತ್ತಾ ಒಳಿತನ್ನು ನನ್ನದು ಅಥವಾ ನಿನ್ನದು ಎಂದು ಪರಿಗಣಿಸುವುದಿಲ್ಲ. ತತ್ತ್ವಶಾಸ್ತ್ರವು ನಮ್ಮಲ್ಲಿ ಪ್ರೇರಣೆ ಮಾಡುವ ನಿಷ್ಪಕ್ಷಪಾತ ಭಾವನೆಯು ನಮ್ಮನ್ನು ಯೋಚನೆಯಲ್ಲಿ ಸತ್ಯದ ಎಡೆಗೂ ಕ್ರಿಯೆಯಲ್ಲಿ ಕಾರ್ಯದಲ್ಲಿ ನ್ಯಾಯದೆಡೆಗೂ ಮತ್ತು ಮನೋಭಾವನೆಯಲ್ಲಿ ವಿಶ್ವಪ್ರೇಮದ ಎಡೆಗೂ ಕೊಂಡೊಯ್ಯುತ್ತದೆ."

ವಸ್ತುನಿಯಮಗಳನ್ನು ದಾಟಿ ಮಾನವನ ನಿಯಂತ್ರಣಕ್ಕೆ ನಿಲುಕದ ಕ್ರಿಯಾಶಕ್ತಿ ಒಂದಿದೆ ಎಂಬುದನ್ನು ಇಂದು ವಿಜ್ಞಾನ ಒಪ್ಪುವ ಹಂತಕ್ಕೆ ಬಂದಿರುವುದು ಅಧ್ಯಾತ್ಮವಿದ್ಯೆಯ ಸತ್ವ, ಪ್ರಮುಖತೆಗಳಿಗೆ ಸಾಕ್ಷ್ಯವಾಗಿದೆ. ಸುಪ್ರಸಿದ್ಧ ಪ್ಯಾರಾಸೈಕಾಲಜಿಸ್ಟ್ (ಮನಶ್ಶಾಸ್ತ್ರಜ್ಞರಾದ) ಡಾ॥ ರ್‍ಯಾನ್‌ರವರು ತಮ್ಮ *New World of the Mind* ಎಂಬ ಗ್ರಂಥದಲ್ಲಿ ಹೀಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ :[3]

---

1. "It is impossible for man to live without a metaphysics. The choice is not between some kind of metaphysics and no metaphysics. It is always between a good metaphysic and a bad metaphysic."
—*Ends and Means*

2. "Philosophy enables us to fight the triple evils of life, error, hatred and strife, with knowledge, love and service. On thought philosophy enables man to rise above the life of senses, seeking what is always general and open to all men. In desire and will it aims simply at the good without regarding the good as mine or yours. The impartiality philosophy instils in us, leads us to truth in thought, justice in action and universal love in feeling."
—*Outlines of Philosophy*

3. "There is something operative in man that transcends the laws of matter. The universe differs, therefore, from what the prevailing materialistic concept indicates. It is one about which it is possible to be religious."
—*New World of the Mind*

'ಮಾನವನಲ್ಲಿ ಪರಿಣಾಮಕಾರಿಯಾಗುವ ಕೆಲವೊಂದು ಶಕ್ತಿ ಇದ್ದು ಅದು ಭೌತದ್ರವ್ಯಗಳ ನಿಯಮದಿಂದ ಅತೀತವಾಗಿರುತ್ತದೆ. ಆದುದರಿಂದ ವಿಶ್ವದ ಬಗೆಗೆ ಪ್ರಚಲಿತವಿರುವ ಭೌತಿಕವಾದ ಕಲ್ಪನೆ ಅಥವಾ ಸಾಮಾನ್ಯಜ್ಞಾನದಿಂದ ವಿಶ್ವವು ಭಿನ್ನವಾಗಿರುತ್ತದೆ. ಅದರ ಕುರಿತಾಗಿ ಮತಶ್ರದ್ಧೆಯಿಂದ ಕೂಡಿರಲು ಸಾಧ್ಯವಿದೆ.''

ವಿಜ್ಞಾನದಿಂದಾಗಿ ಮಾನವನ ಸುಖ ಹೆಚ್ಚಿದಂತೆ ಅವನ ಜೀವನಕ್ಕೆ ಅಪಾಯ-ಅಭದ್ರತೆಗಳೂ ಹೆಚ್ಚಾಗಿವೆ. ಯಾವ ನಿಮಿಷದಲ್ಲಿ ಜಗತ್ತು ಈ ವೈಜ್ಞಾನಿಕವಾದ ಮಾರಕಾಸ್ತ್ರ, ರಾಷ್ಟ್ರರಾಷ್ಟ್ರಗಳ ಒಳಗೆ ಇರುವ ವೈಜ್ಞಾನಿಕವಾದ ಸಂಶೋಧನೆಗಳ ಸ್ಪರ್ಧೆ, ಅವುಗಳ ದುಷ್ಟಪರಿಣಾಮಗಳಿಗೆ ತುತ್ತಾದೀತು ಎಂಬ ಭಯ-ಅಸ್ಥಿರತೆಗಳಿಂದ ಕೂಡಿದ ಸಂದಿಗ್ಧ ಪರಿಸ್ಥಿತಿಯಲ್ಲಿ ಜಗತ್ತಿಂದು ಸಿಲುಕಿರುತ್ತದೆ.

ಇಂದಿನ ವೈಜ್ಞಾನಿಕಸಂದಿಗ್ಧತೆಯ ಪರಿಸ್ಥಿತಿಯನ್ನು ಖ್ಯಾತ ತತ್ತ್ವಜ್ಞಾನಿ ಬರ್ಟ್ರಾಂಡ್ ರಸ್ಸೆಲ್‌ರವರು ಬಹಳ ಮಾರ್ಮಿಕವಾಗಿ ಚಿತ್ರಿಸಿ ಎಚ್ಚರದ ಮಾತುಗಳನ್ನು ಹೀಗೆ ನುಡಿದಿರುತ್ತಾರೆ :[1]

"ಮನುಷ್ಯನ ಕೌಶಲ್ಯ ಹಾಗೂ ತಿಳಿಗೇಡಿತನ ಇವುಗಳೆರಡರ ಪಂಥದ ಓಟದ ಮಧ್ಯದಲ್ಲಿ ನಾವಿದ್ದೇವೆ. ಮನುಷ್ಯರ ಜ್ಞಾನ ಹೆಚ್ಚಿದಂತೆ ವಿವೇಕವೂ ವೃದ್ಧಿಯಾಗದಿದ್ದರೆ ಜ್ಞಾನಾಭಿವೃದ್ಧಿಯು ದುಃಖಾಭಿವೃದ್ಧಿಯಾಗುವುದು."

ಇಪ್ಪತ್ತನೇ ಶತಮಾನದ ಈ ಕಾಲಘಟ್ಟದಲ್ಲಿ ವಿಜ್ಞಾನ ತನ್ನ ವೈಜ್ಞಾನಿಕ ಸಂಶೋಧನೆಯ ವಿಸ್ತರಣದಿಂದ ಸಾಧಿಸಿದ್ದಾದರೂ ಏನು ? ಎಂದರೆ ಈ ಜಗತ್ತಿನ ಗೂಢರಹಸ್ಯವನ್ನು ಮತ್ತಷ್ಟು ರಹಸ್ಯವಾಗಿ ಮಾಡಿದೆ ಎಂದು ಜಗತ್ಪ್ರಸಿದ್ಧ ವಿಜ್ಞಾನಿ ಸರ್ ಜೇಮ್ಸ್ ಜೀನ್ಸ್ ಹೇಳುತ್ತಾರೆ :[2]

"ಭೌತವಿಜ್ಞಾನವು ಭೌತಿಕ ವಸ್ತುಗಳು ಮತ್ತು ವಿಕಿರಣಗಳಿಂದ ಕೂಡಿದ ಜಗತ್ತನ್ನು ಪರಿಶೀಲಿಸಲು ಹೊರಟು ಅವುಗಳಲ್ಲಿ ಯಾವ ಒಂದನ್ನೂ ಕೂಡ ಚಿತ್ರಿಸುವುದಾಗಲಿ, ವಿವರಿಸುವುದಾಗಲಿ ಮಾಡಲು ಅಸಾಧ್ಯ ಎಂದು ಕಂಡುಕೊಂಡಿರುತ್ತದೆ. ಫೋಟಾನುಗಳು, ಎಲೆಕ್ಟ್ರಾನುಗಳು ಮತ್ತು ಪ್ರೋಟಾನುಗಳು ಇವೆಲ್ಲಾ ಆಲ್ಜೀಬ್ರ ಲೆಕ್ಕವನ್ನು ಕಲಿಯುವ ಮಗುವಿಗೆ

---

1. "We are in the middle of a race between human skill as to means and human folly as to ends...unless men increase in wisdom as much as in knowledge, increase of knowledge will be increase of sorrow."

—*The Impact of Science on Society*

2. "Physical science set out to study a world of matter and radiation and finds that it cannot describe or picture the nature of either even to itself. Photons, electrons and protons have become as meaningless to the physicist as XYZ are to a child on its first day of learning algebra. The most we hope for at the moment is to discover ways of manipulating XYZ without knowing what they are, with the result that the advance of knowledge is at present reduced to what Einstein has described as extracting one incomprehensible from another incomprehensible."

—*The New Backgorund of Science*

ಪ್ರಥಮ ದಿನ XYZಗಳು ಹೇಗೆ ಅರ್ಥಶೂನ್ಯವಾಗಿ ಕಂಡುಬರುತ್ತವೆಯೋ ಹಾಗೆ ಭೌತ ವಿಜ್ಞಾನಿಗೆ ಇವುಗಳು ಕಾಣುತ್ತಿವೆ. ಪ್ರಸ್ತುತ ಸಂದರ್ಭದಲ್ಲಿ ನಾವು ಅತ್ಯಂತವಾಗಿ ಬಯಸುವುದೇನೆಂದರೆ ಈ XYZಗಳ ಅರ್ಥ ತಿಳಿಯದೆ ಪರಸ್ಪರ ಕೌಶಲಪೂರ್ವವಾದ ನಿರ್ವಹಣೆ, ವ್ಯವಹಾರಗಳಾಗಿದ್ದು ಪರಿಣಾಮವಾಗಿ ಈ ಜ್ಞಾನದ ಪ್ರಗತಿಯು ಐನ್‌ಸ್ಟೈನ್‌ರವರು ವಿವರಿಸಿದಂತೆ ಒಂದು ಅರ್ಥ ಮಾಡಿಕೊಳ್ಳಲಾರದ ಸಂಗತಿಯನ್ನು ಹೊರತೆಗೆಯುವುದೇ ಆಗಿರುವಂತಹ ಮಟ್ಟಕ್ಕೆ ಇಳಿದಿರುತ್ತದೆ.''

ವಿಶ್ವವಿಖ್ಯಾತರಾದ ವಿಜ್ಞಾನಿ ಡಾ॥ ಐನ್‌ಸ್ಟೈನ್ ಮಹಾಶಯರು ವಿಜ್ಞಾನದ ಇತಿಮಿತಿ ಹಾಗೂ ಅಧ್ಯಾತ್ಮವಿದ್ಯೆಯ ಆವಶ್ಯಕತೆಯ ಕುರಿತಾಗಿ ಸ್ಪಷ್ಟವಾಗಿ ಹೀಗೆ ಹೇಳಿರುತ್ತಾರೆ :[1]

''ವೈಜ್ಞಾನಿಕ ಕ್ರಮವು ಸತ್ಯಸಂಗತಿಗಳು ಪರಸ್ಪರ ಹೇಗೆ ಸಂಬಂಧವುಳ್ಳವುಗಳಾಗಿದ್ದು ಒಂದರಿಂದ ಒಂದು ಅಂಕಿತಗೊಳಿಸಲ್ಪಟ್ಟಿರುತ್ತವೆ ಎನ್ನುವುದಕ್ಕಿಂತ ಆಚೆಗೆ ಏನನ್ನೂ ತಿಳಿಸಲು ಸಾಧ್ಯವಿಲ್ಲ. ಅಂತಹ ಉಚ್ಚಮಟ್ಟದ ವಿಚಾರಗಳ ಕುರಿತಾದ ತಿಳಿವಳಿಕೆಯ ಬಗೆಗೆ ಜ್ಞಾನ ಪಡೆಯಬೇಕೆಂಬ ಹಂಬಲವು ಮೇಲ್ಪಟ್ಟದವನಾದ ಮನುಷ್ಯನಿಗೇ ಸೇರಿದುದಾಗಿದೆ. ಹಾಗಿದ್ದರೂ 'ಏನಾಗಿದೆ' ಎಂಬುದರ ಜ್ಞಾನವು 'ಏನಾಗಿರಬೇಕು' ಎಂಬುದರ ತಿಳಿವಿಗೆ ನೇರವಾಗಿ ಕದ ತೆರೆದು ಅನುಕೂಲ ಮಾಡಿಕೊಡುವುದಿಲ್ಲ ಎಂಬುದು ಸ್ಪಷ್ಟವಾದ ಸಂಗತಿಯಾಗಿದೆ. 'ಏನಾಗಿದೆ' ಎಂಬುದರ ಬಗೆಗೆ ಒಬ್ಬರಲ್ಲಿ ಅತ್ಯಂತ ಸರಿಯಾದ ಮತ್ತು ಪೂರ್ಣವಾದ ಜ್ಞಾನವು ಇರಬಹುದು. ಹಾಗಿದ್ದರೂ ಮಾನವನ ಆಶೋತ್ತರಗಳ ಅಂತಿಮ ಗುರಿ ಏನಾಗಿರಬೇಕು ಎಂಬುದರ ಬಗೆಗೆ ತಿಳಿವು ಪಡೆಯಲು ಅಸಮರ್ಥನಾಗಿರಬಹುದು. ವಸ್ತುನಿಷ್ಠವಾದ ತಿಳಿವಳಿಕೆಯು ಕೆಲವು ಗುರಿಗಳನ್ನು ಸಾಧಿಸಲು ಬೇಕಾದ ಸುಲಭವಾದ ಸಾಧನಗಳನ್ನು ಒದಗಿಸುತ್ತದೆ. ಆದರೆ ಪರಮೋನ್ನತ ಗುರಿ ಮತ್ತು ಅದನ್ನು ಸೇರಲು ಬೇಕಾದ ವ್ಯಾಕುಲತೆ ಇವುಗಳು ಬೇರೊಂದು ಮೂಲದಿಂದಲೇ ಬರಬೇಕಷ್ಟೆ.

ಈ ಮೂಲಭೂತವಾದ ಗುರಿಗಳನ್ನು ಮತ್ತು ಮೌಲ್ಯಗಳನ್ನು ಸ್ಪಷ್ಟಪಡಿಸಲು ಮತ್ತು ಅವುಗಳನ್ನು ವ್ಯಕ್ತಿಯ ಭಾವಾತ್ಮಕ ಜೀವನದಲ್ಲಿ ಪರಿಣಾಮಕಾರಿಯಾಗಿ ಬೇಗನೆ ನೆಲೆಗೊಳಿಸುವುದೇ ಮತಧರ್ಮವು ಮನುಷ್ಯನ ಸಾಮಾಜಿಕ ಜೀವನದಲ್ಲಿ ನಿರ್ವಹಿಸಬೇಕಾದ ಮಹತ್ತರ ಪಾತ್ರವಾಗಿದೆ ಎಂದು ನನಗೆ ತೋರುತ್ತದೆ.''

---

1. "The scientific method can teach us nothing else beyond how facts are related to and conditioned by, each other. The aspirations towards such objective knowledge belongs to the highest of which man is capable ...yet it is equally clear that knowledge of what does not directly open the door to what *should be*. One can have the clearest and most complete knowledge of what is, yet not be able to deduct from that what should be the goal of our human aspirations. Objective knowledge provides us with the powerful instruments for the achievement of certain ends, but the ultimate goal itself and the longing to reach it must come from another source.

To make clear these fund a mental ends and valuations and to set them fast in the emotional life of the individual, seems to me preciously the most important function which religion has to perform in the social life of man."

—*Out of My Later Years*

ಭೌತಶಾಸ್ತ್ರದ ಬೆಳವಣಿಗೆಯ ದೃಷ್ಟಿಯಿಂದ ವಿಜ್ಞಾನದ ಸ್ಥಿತಿಗತಿ ಹೀಗಾದರೆ ಜೀವಶಾಸ್ತ್ರದ (Biology) ಬೆಳವಣಿಗೆಯ ದೃಷ್ಟಿಯಿಂದ ಡಾರ್ವಿನ್ನನ ನಂತರ ವಿಕಾಸವಾದವು ಬೆಳೆದು ಇದೀಗ ಒಂದು ಘಟ್ಟಕ್ಕೆ ತಲಪಿದೆ. ಮುಂದೆ ಏನಾಗಬೇಕು? ಎಂಬ ವಿಚಾರವಾಗಿ ಸುಪ್ರಸಿದ್ಧ ಜೀವಶಾಸ್ತ್ರಜ್ಞರಾದ ಜೂಲಿಯನ್ ಹಕ್ಸ್ಲೀ ಹೀಗೆ ಹೇಳಿರುತ್ತಾರೆ :[1]

"ಪ್ರಸ್ತುತದ ನಮ್ಮ ಜ್ಞಾನದ ಬೆಳಕಿನಲ್ಲಿ ಮಾನವನ ಅತಿಸ್ಪಷ್ಟವಾದ ಗುರಿಯು ಕೇವಲ ಬದುಕಿರುವುದು ಅಥವಾ ಅಳಿಯದೆ ಉಳಿದಿರುವುದಲ್ಲ, ಸಂಖ್ಯಾವೃದ್ಧಿ ಅಲ್ಲ, ಸಂಘಟನೆಯ ಸಂಕೀರ್ಣತೆ ಅಥವಾ ಜಟಿಲತೆಯನ್ನು ಹೆಚ್ಚು ಮಾಡುವುದೂ ಅಲ್ಲ ; ಅಥವಾ ಅವನ ಪರಿಸರಗಳ ಮೇಲೆ ಹತೋಟಿಯನ್ನು ಜಾಸ್ತಿಗೊಳಿಸುವುದೂ ಅಲ್ಲ; ಬದಲು ಹೆಚ್ಚಿನ ಸಫಲಗೊಳಿಸುವಿಕೆಯಾಗಿದ್ದು—ಸಾಂಘಿಕವಾಗಿ ಮಾನವಜಾತಿಯಿಂದ ನೈತಿಕ ಸಾಧ್ಯತೆಗಳ ಪೂರ್ಣತರವಾದ ಸಾಕ್ಷಾತ್ಕಾರ ಮತ್ತು ವ್ಯಕ್ತಿಗತವಾಗಿ ಅದರ ಘಟಕಗಳ ಸದಸ್ಯರ ಮೂಲಕ ಆಗುವುದೇ ಆಗಿರುತ್ತದೆ. ಹೆಚ್ಚಿನ ತರಹದ ಸಾಫಲ್ಯವು ಮಾನವನ ಅಂತಿಮ ಅಥವಾ ಪ್ರಮುಖವಾದ ಗುರಿ ಎಂದು ಒಮ್ಮೆ ಪರಿಗಣಿಸಲ್ಪಟ್ಟರೆ ಮುಂದಿರುವ ದೀರ್ಘವಾದ ಮಾನಸಿಕ ಹಾಗೂ ಸಾಮಾಜಿಕವಾದ ವಿಕಾಸದ ಪಥದಲ್ಲಿ ನಮಗೆ ಸಹಾಯ ಹಾಗೂ ಮಾರ್ಗದರ್ಶಕವಾಗಲು ಮಾನವೀಯ ಸಾಧ್ಯತೆಗಳ ವಿಜ್ಞಾನ ಬೇಕಾಗುತ್ತದೆ."

ವಿಜ್ಞಾನದ ಪ್ರಗತಿಯಿಂದಾಗಿ ಇಂದಿನ ಪ್ರಪಂಚದಲ್ಲಿ ಎಂತಹ ಬಿಕ್ಕಟ್ಟಿನ ಪರಿಸ್ಥಿತಿ ರೂಪುಗೊಂಡು ಅದೆಷ್ಟು ಅಪಾಯಕಾರಿಯಾಗಿದೆ ಎಂಬುದನ್ನು ಜನರಲ್ ಓಮರ್ ಬ್ರಾಡ್ಲೆಯವರು ಬಹಳ ಹೃದಯಸ್ಪರ್ಶಿಯಾದ ಹಾಗೂ ಸ್ಪಷ್ಟವಾದ ರೀತಿಯಲ್ಲಿ ಹೀಗೆ ವಿವರಿಸುತ್ತಾರೆ :[2]

"ನಮ್ಮಲ್ಲಿ ವಿಜ್ಞಾನಕ್ಕೆ ಸಂಬಂಧಿಸಿದ ಮನುಷ್ಯರು ಅತಿಹೆಚ್ಚಾಗಿದ್ದು ದಿವ್ಯಜೀವನಕ್ಕೆ ಸಂಬಂಧಿಸಿದವರು ಅತಿಕಡಿಮೆಯಾಗಿರುತ್ತಾರೆ. ನಾವು ಅಟಂನ ನಿಗೂಢತೆಯನ್ನು ಗ್ರಹಿಸಿರುತ್ತೇವಾಗಿದ್ದು 'ಪರ್ವತೋಪದೇಶ'ವನ್ನು ತಿರಸ್ಕರಿಸಿರುತ್ತೇವೆ. ಪ್ರಪಂಚವು ವಿವೇಕವಿಲ್ಲದೆ ಪ್ರಕಾಶವನ್ನು,

1. "In the light of our present knowledge man's most comprehensive aim is seen not as mere survival, not numarical increase, not as increased complexity of organization or increased control over his environment but as greater fulfilment–the fuller realization of moral possibilities by the human species collectively and more of its component members individually.

Once greater fulfilment is recognised as man's ultimate or dominant aim, we shall need a science of human possibilities to help guide the long course of psychological evolution that lies ahead."

—*Evolution after Darwin*

2. "We have too many men of science, too few men of god. We have grasped the mystery of the atom and rejected the Sermon on the Mount. The world has achieved brilliance without wisdom, power without conscience. Ours is world of nuclear giants and ethical infants. We know more about war than we do about peace, more about killing than we do about living."

—Quoted in *Facing the Atomic Future*
by E. W. Titteron, *Bhavan's Journal*, Oct. 1960

ಆತ್ಮಸಾಕ್ಷಿ ಇಲ್ಲದೆ ಶಕ್ತಿಯನ್ನು ಸಾಧಿಸಿರುತ್ತದೆ. ನಮ್ಮದು ಅಣುಶಕ್ತಿಯ ದೈತ್ಯರಿಂದಲೂ ನೈತಿಕ ಶಿಶುಗಳಿಂದಲೂ ಕೂಡಿದ ಪ್ರಪಂಚವಾಗಿದೆ. ನಮಗೆ ಶಾಂತಿಯ ಕುರಿತಾಗಿ ತಿಳಿದಿರುವು ದಕ್ಕಿಂತ ಹೆಚ್ಚಾಗಿ ಯುದ್ಧದ ಸಂಬಂಧವಾಗಿಯೂ, ಬದುಕುವುದರ ಬಗೆಗೆ ತಿಳಿದಿರುವುವಕ್ಕಿಂತ ಹೆಚ್ಚಾಗಿ ಕೊಲ್ಲುವುದರ ಕುರಿತಾಗಿಯೂ ತಿಳಿದಿರುತ್ತದೆ.''

ಇಂದು ವಿಜ್ಞಾನದ ಭೌತ ಹಾಗೂ ಜೀವಶಾಸ್ತ್ರ ವಿಭಾಗಗಳ ಸಂಶೋಧನಾ ವಿಕಾಸದ ಹಂತವೂ ಮುಂದಿನ ಬೆಳವಣಿಗೆಯೂ ಹೀಗಿವೆ. ಆದರದು ಈ ಎರಡು ಮಟ್ಟಕ್ಕಾಗಲಿ, ಕ್ಷೇತ್ರಕ್ಕಾಗಲಿ ಸಂಬಂಧವಾದುದಲ್ಲ ಎಂದು ಹೇಳುತ್ತದೆ. ಆ ಹೊಸ ನೆಲೆಯೇ ಅಧ್ಯಾತ್ಮ ವಿದ್ಯೆ ಅರ್ಥಾತ್ ಆತ್ಮವಿಜ್ಞಾನ ಎಂದು ಹಿಂದೂಧರ್ಮವು ಸಹಸ್ರಾರು ವರ್ಷಗಳ ಹಿಂದೆಯೇ ದೃಢೀಕರಿಸಿ ಸ್ಪಷ್ಟಪಡಿಸುತ್ತದೆ.

ಉಪನಿಷತ್ತಿನಲ್ಲಿ ಒಂದೆಡೆ ಹೀಗೆ ಪ್ರಶ್ನಿಸಲಾಗಿದೆ :

**ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ ?**

—ಮುಂಡಕ ಉಪನಿಷತ್, ೧-೧-೩

"ಯಾವುದನ್ನು ತಿಳಿಯುವುದರ ಮೂಲಕ ಈ ಜಗತ್ತಿನಲ್ಲಿರುವುದೆಲ್ಲವೂ ತಿಳಿದುಬರಲು ಸಾಧ್ಯವಾಗುತ್ತದೆ ?" ಯಥೋಚಿತ ಉತ್ತರ ಹೀಗಿದೆ :

**ಆತ್ಮನೋ ವಾ ಅರೇ ದರ್ಶನೇನ ಶ್ರವಣೇನ ಮತ್ಯಾ ವಿಜ್ಞಾನೇನೇದಂ ಸರ್ವಂ ವಿದಿತಮ್ ।**

—ಬೃಹದಾರಣ್ಯಕ ಉಪನಿಷತ್, ೨-೪-೫

"ಶ್ರವಣ, ಮನನ ಮತ್ತು ಧ್ಯಾನಗಳ ಮೂಲಕ ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳುವುದರಿಂದ ಇವೆಲ್ಲವೂ (ಈ ಜಗತ್ತಿನ ಅರ್ಥಾತ್ ಸಮಗ್ರ ವಿಶ್ವದ ಕುರಿತಾಗಿ) ತಿಳಿದುಬರುತ್ತವೆ."

"ಎಲ್ಲಿ ವಿಜ್ಞಾನವು ಉತ್ತರಿಸಲಾರದೋ ಅಥವಾ ನಿಲ್ಲುತ್ತದೆಯೋ ಅಲ್ಲಿಂದ ಅಧ್ಯಾತ್ಮ ವಿದ್ಯೆ ಆರಂಭವಾಗುತ್ತದೆ" ಎಂಬ ಪ್ರಸಿದ್ಧ ಹೇಳಿಕೆಯಂತೆ ವಿಜ್ಞಾನಕ್ಕೂ ಅಧ್ಯಾತ್ಮಕ್ಕೂ ವಿರೋಧ ಇಲ್ಲ. ವಿಜ್ಞಾನವು ನಿಜವಾದ ಜ್ಞಾನದ ಆರಂಭದ ಹಂತವಾದರೆ ಅಧ್ಯಾತ್ಮವು ಅದರ ನಿಶ್ಚಯದ ಪರಿಪೂರ್ಣವಾದ ಅಂತಿಮ ಸ್ಥಿತಿಯಾಗಿದೆ. ಅಧ್ಯಾತ್ಮವಿದ್ಯೆಯು ಸರ್ವವಿದ್ಯೆಗಳ ಪ್ರತಿಷ್ಠಾ ಅಥವಾ ಆಧಾರ ಎಂದು ಹಿಂದೂಧರ್ಮ ಘೋಷಿಸುತ್ತದೆ :

**ಬ್ರಹ್ಮವಿದ್ಯಾಂ ಸರ್ವವಿದ್ಯಾಪ್ರತಿಷ್ಠಾಮ್ ।**

—ಮುಂಡಕ ಉಪನಿಷತ್, ೧-೧-೧

"ಸರ್ವವಿದ್ಯೆಗಳ ಆಧಾರವಾದ ಬ್ರಹ್ಮವಿದ್ಯೆಯನ್ನು..."

ಅಧ್ಯಾತ್ಮವಿದ್ಯೆಯು ಅತ್ಯುನ್ನತವಾದ ತೀರ್ಮಾನಗಳನ್ನು ಒಳಗೊಂಡಿರುವ ಹಿಂದೂ ಧರ್ಮದ ಸಿದ್ಧಾಂತಗಳು ಅಧ್ಯಾತ್ಮವಿದ್ಯೆಯ ಜ್ಞಾನದ ಅಂತ್ಯಘಟ್ಟವನ್ನು ತಲಪಿದವುಗಳಾಗಿದ್ದು ಪರಮೋತ್ಕೃಷ್ಟವಾದ ಮತ್ತು ಸಂಶಯಗಳಿಗೆ ಎಡೆಯಿಲ್ಲದೆ ತೀರ್ಮಾನಕ್ಕೆ ಬಂದಿರುವುದರಿಂದ ಆ ಸಿದ್ಧಾಂತಗಳನ್ನು ವೇದಾಂತ ಅಂದರೆ ಜ್ಞಾನದ ಅಂತ್ಯ ಎಂದು

ಕರೆಯಲಾಗಿದೆ. ಹಿಂದೂಧರ್ಮದ ವಿಶ್ವವ್ಯಾಪಕತೆಯ ಸ್ವರೂಪಸಾಕ್ಷಿಯೇ ವೇದಾಂತ ತತ್ತ್ವವಾಗಿದೆ. ವೇದಾಂತದಲ್ಲಿ ತತ್ತ್ವ ಮತ್ತು ಮತ ಎರಡೂ ಸೇರಿದ್ದು ಒಂದು ವಿಚಾರವನ್ನೂ ಇನ್ನೊಂದು ಅನುಷ್ಠಾನವನ್ನೂ ಹೇಳುತ್ತದೆ. ಈ ಜಗತ್ತಿನಲ್ಲಿ ಯಾವುದನ್ನು ತಿಳಿಯುವುದರಿಂದ ಶಾಶ್ವತವಾದ ಶಾಂತಿ ಸಿಗುತ್ತದೆ ?—ಎನ್ನುವುದನ್ನು ವೇದಾಂತವು ಹೀಗೆ ಸ್ಪಷ್ಟಪಡಿಸಿರುತ್ತದೆ :

**ಸೂಕ್ಷ್ಮಾತಿಸೂಕ್ಷ್ಮಂ ಕಲಿಲಸ್ಯ ಮಧ್ಯೇ ವಿಶ್ವಸ್ಯ ಸ್ರಷ್ಟಾರಮನೇಕರೂಪಮ್ ।**
**ವಿಶ್ವಸ್ಯೈಕಂ ಪರಿವೇಷ್ಟಿತಾರಂ ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ ॥**

—ಶ್ವೇತಾಶ್ವರೋಪನಿಷತ್, ೪-೧೪

"ಯಾರು ಸೂಕ್ಷ್ಮಕ್ಕಿಂತಲೂ ಸೂಕ್ಷ್ಮನೋ, ಅವಿದ್ಯೆಯ ಮತ್ತು ಅದರ ಕಾರ್ಯಗಳ ನಡುವೆ ಇರುವನೋ ಸೃಷ್ಟಿಕರ್ತೃವೋ ಬಹುರೂಪನೋ ಎಲ್ಲವನ್ನೂ ಆವರಿಸಿರುತ್ತಾನೋ ಅವನನ್ನು (ಪರತತ್ತ್ವ, ಪರಮಾತ್ಮನನ್ನು) ತಿಳಿಯುವುದರಿಂದ ಮಾನವನು ಶಾಶ್ವತ ಶಾಂತಿಯನ್ನು ಪಡೆಯುತ್ತಾನೆ."

ಪರಮಾತ್ಮ, ದೇವರು, ಆತ್ಮ ಮತ್ತು ಜಗತ್ತು ಎಂಬ ಈ ವಿಚಾರವಾಗಿ ಜಗತ್ತಿನಲ್ಲಿ ಸಹಸ್ರಾರು ವರ್ಷಗಳಿಂದ ಸಾಕಷ್ಟು ವಿಧದಲ್ಲಿ ಮತಗಳು, ಮತಭೇದಗಳು ರೂಪುತಳೆದಿರುತ್ತವೆ. ದೇವರು ಬೇಕು, ಬದುಕು ದೇವರಿಂದಾಗಿ ಹಸನಾದೀತು, ದೇವರ ವಿನಾ ಆಗಲಾರದು ಎಂಬ ನಿಲವನ್ನು ತಳೆದ ಮಾನವನು ಭಗವಂತನ ಬಗ್ಗೆ ಅನೇಕ ವಿಧದ ಕಲ್ಪನೆ ವಾದಗಳು ಸಿದ್ಧಾಂತಗಳನ್ನು ಕಂಡುಕೊಂಡಿರುತ್ತಾನೆ. ಅನುಸಾರವಾಗಿ ಜಗತ್ತಿನಲ್ಲಿ ಸನಾತನ ಹಿಂದೂ ಧರ್ಮವಿರುವಂತೆ ಇತರ ಮತಗಳಾದ ಕ್ರೈಸ್ತ, ಮಹಮ್ಮದೀಯ, ಝರತುಷ್ಟ್ರ ಇತ್ಯಾದಿ ಪರಂಪರೆಯ ಮತಧರ್ಮಗಳೂ ನೆಲೆನಿಂತಿರುತ್ತವೆ. ಇಂದಿನ ವಿಜ್ಞಾನಯುಗದಲ್ಲಿ ಈ ಮತಗಳಿಂದಾಗಿ ವಿಜ್ಞಾನಶಕ್ತಿಯು ದುಷ್ಟವಾದ ದಾರಿಯಲ್ಲಿ ಪ್ರವಹಿಸುವುದನ್ನು ತಡೆಯುವುದಕ್ಕೆ ಸಹಾಯವಾಗಿದೆಯೇ ? ಜಗತ್ತಿನಲ್ಲಿ ಈ ತನಕ ಮಾನವನ ಸರ್ವಾಂಗೀಣವಾದ ಉದ್ಧಾರಕ್ಕೆ ಇವುಗಳಿಂದ ಅದೆಷ್ಟು ನೆರವು, ಮಾರ್ಗದರ್ಶನಗಳು ದೊರೆತಿವೆ? ಎಂಬುದನ್ನು ನಿಷ್ಪಕ್ಷಪಾತದೃಷ್ಟಿಯಿಂದ ಪರಿಶೀಲಿಸಿದರೆ ಉಪಕಾರವು ಆಗಿರುವುದು ಕಂಡುಬಂದರೂ ಉಪಕಾರಕ್ಕಿಂತ ಹೆಚ್ಚಾಗಿ ಅಪಕಾರವೇ ಆಗಿರುವುದು ಕಂಡುಬರುತ್ತದೆ.

ಜಗತ್ತಿನಲ್ಲಿ ಕ್ರೈಸ್ತ, ಮಹಮ್ಮದೀಯ, ಝರತುಷ್ಟ್ರ ಇತ್ಯಾದಿ ಮತಗಳ ಹೆಸರಿನಲ್ಲಿ ನಡೆದ ಅನೇಕ ಘೋರಯುದ್ಧಗಳು, ಶ್ರೇಷ್ಠತತ್ತ್ವಜ್ಞಾನಿ ಮೇಧಾವಿಗಳ ಮರಣದಂಡನೆ, ಕೋಟ್ಯಂತರ ಜನರ ಮರಣ, ಬಲವಂತದಿಂದ ಮತಪರಿವರ್ತನೆಗೊಳಿಸುವಿಕೆ, ಕಷ್ಟನಷ್ಟ ಇತ್ಯಾದಿಗಳು ಅತಿಹೆಚ್ಚಿನ ಪ್ರಮಾಣದಲ್ಲಿ ನಡೆದಿವೆ ಎನ್ನುವುದು ಐತಿಹಾಸಿಕ ಸತ್ಯ.

ಹೀಗಾಗಲು ಕಾರಣವೇನು ಎಂಬುದನ್ನು ಪರಿಶೀಲಿಸಿದರೆ ಆ ಸಂಬಂಧವಾಗಿ ಈ ಅಂಶಗಳು ಸ್ಪಷ್ಟವಾಗಿ ತಿಳಿದುಬರುತ್ತವೆ :

(೧) ಈ ಮತಗಳೆಲ್ಲಾ ಮತೀಯವಾದ ಸಂಕುಚಿತ ಭಾವನೆಯಿಂದ ಕೂಡಿದ್ದು ಆಯಾಯಾ ಮತ ಮಾತ್ರ ಸತ್ಯ ಮತ್ತು ಆ ಸತ್ಯಕ್ಕೆ ಒಳಗಾಗದವರಿಗೆ ಜಗತ್ತಿನಲ್ಲಿ ಸ್ಥಾನವಿಲ್ಲ ಎಂಬ ನಿಲವನ್ನು ತಳೆದುವು.

(೨) ಮಾನವನು ಹುಟ್ಟಿನಿಂದಲೇ ಪಾಪಿ. ಅವನು ನಿರ್ಬಲನು. ಅವನಿಗೆ ವ್ಯಕ್ತಿಗತ ಪಾದ, ಪವಿತ್ರವಾದ, ಶಾಶ್ವತವಾದ ಮೌಲ್ಯವೇ ಇಲ್ಲ ಎಂಬ ಧೋರಣೆಯನ್ನು ತಳೆದುವು.

(೩) ಭಗವಂತನು ಸರ್ವಶಕ್ತನೂ ಸರ್ವಾಧಿಕಾರಿಯೂ ಆಗಿದ್ದು ಜಗತ್ತಿನ ಜೀವಿಗಳು ಅವನ ಶಿಕ್ಷೆ ಅಥವಾ ದಯೆಗೆ ಪಾತ್ರರು ಎಂಬ ಅಭಿಪ್ರಾಯದ ನಿಲವನ್ನು ತಳೆದುವು.

(೪) ತಮ್ಮ ತಮ್ಮ ಮತವನ್ನು ಆಧರಿಸಿ ಅದನ್ನು ನಂಬಿ ಇರದವರು ತಮ್ಮ ಮತಕ್ಕೆ ಮತ್ತು ಜೀವನಕ್ಕೆ ಕಂಟಕಪ್ರಾಯರಾಗಿರುತ್ತಾರೆ. ಅವರನ್ನು ಒಂದೋ ತಮ್ಮ ಮತಕ್ಕೆ ಪರಿವರ್ತಿಸಬೇಕು, ಇಲ್ಲವೇ ಸಂಹರಿಸಬೇಕು ಎಂಬ ನಿಲವು ದೃಢಗೊಂಡಿತು.

(೫) ಇವುಗಳೆಲ್ಲಾ ಹೆಚ್ಚಾದಂತೆ ತಮ್ಮ ಮತಗಳಲ್ಲಿರುವ ಸತ್ಯಾಂಶ, ಭಗವಂತನ ಕುರಿತಾದ ಸ್ಪಷ್ಟ ನಿಲವು—ಈ ವಿಚಾರಗಳ ಕಡೆಗೆ ಜೀವನದ ಲಕ್ಷ್ಯಹರಿಯುವುದು ಕಡಿಮೆ ಯಾಯಿತು. ಹಾಗೆಯೇ ಜಗತ್ತು, ಮಾನವರು, ಭಗವಂತ ಇವರ ಒಳಗಿನ ಅನ್ಯೋನ್ಯ ಸಂಬಂಧ—ಬಂಧಗಳ ದೃಷ್ಟಿಯು ಮಂದವಾಯಿತು. ಪರಿಣಾಮವಾಗಿ ಮತಕಲಹಗಳು ಉಂಟಾದುವು.

ಹೀಗೆ ಈ ಪಂಚ ಅಂಶಗಳಿಂದಾಗಿ ಜಗತ್ತಿನಲ್ಲಿ ಮತದಿಂದ ಸಾಕಷ್ಟು ಅನ್ಯಾಯ—ಅನೈಕ್ಯಗಳು ಜೀವನದ ವಿವಿಧ ರಂಗಗಳಲ್ಲಿ ರೂಪುಗೊಂಡವು.

ವಿಜ್ಞಾನದ ಮುನ್ನಡೆ, ಪರಿಣಾಮವಾಗಿ ಜೀವನದ ಸುಖಸೌಲಭ್ಯಗಳು ಹೆಚ್ಚಾಗಿರುವ ಈ ಆಧುನಿಕ ಕಾಲಘಟ್ಟದಲ್ಲಿ ಜಗತ್ತಿನಲ್ಲಿ ಈ ಮೇಲಿನ ಐದು ಅಂಶಗಳ ವಿಚಾರವಾಗಿ ಮಾರ್ಪಾಡುಗಳು ಆಗಿವೆಯೇ? ಸುಖಶಾಂತಿಗಳು ಇವೆಯೇ ?—ಎಂದು ಪರಿಶೀಲಿಸಿದರೆ ಪರಿಸ್ಥಿತಿ-ಸಮಸ್ಯೆಗಳ ಸ್ವರೂಪ ಬದಲಾಯಿಸಿವೆಯೇ ವಿನಾ ಅದರ ಭೀಕರತೆ, ದೃಢತೆಗಳು ಎಣಿಸಿದಷ್ಟು ಕಡಿಮೆಯಾಗಿರುವುದಿಲ್ಲ ಎನ್ನಬಹುದು. ಜಗತ್ತು ಸುಖಶಾಂತಿಗಳಿಗಾಗಿ ಈಗಲೂ ಹಾತೊರೆಯುತ್ತಲೇ ಇದೆ.

ರಾಜಕೀಯವಾಗಿಯೂ, ಸಾಮಾಜಿಕವಾಯೂ, ಸಾಂಸ್ಕೃತಿಕವಾಗಿಯೂ ಜಗತ್ತಿನಲ್ಲಿ ಇಂದು ಸುಖಶಾಂತಿಗಳಿಗೆ ಆಸಕ್ತಿ-ಬಯಕೆಗಳು ಒಂದೆಡೆಯಿಂದ ಹೆಚ್ಚಾದಂತೆ, ಅದಕ್ಕೆ ಪ್ರತಿಕೂಲವಾದ ಪರಿಸ್ಥಿತಿಗಳಾದ ಯುದ್ಧ-ದ್ವೇಷ-ಅನೈಕ್ಯಗಳು ವ್ಯಕ್ತಿ ಹಾಗೂ ಸಮಷ್ಟಿ ಜೀವನದಲ್ಲಿ ಹೆಚ್ಚಾಗಿರುತ್ತವೆ. ಕಷ್ಟಸುಖಗಳಿಂದ ಕೂಡಿದ್ದು, ದುಷ್ಟರೂ ಶಿಷ್ಟರೂ ಸದಾ ಇರುವ ಈ ಜಗತ್ತಿನಲ್ಲಿ ಎಂದಿಗೂ ಎಲ್ಲವೂ ಸರಿಯಾಗಿರಲೂ ಇಲ್ಲವೇ ಸುಖಮಯವಾಗಿ ರಲೂ ಸಾಧ್ಯವಿಲ್ಲ ಎನ್ನುವುದು ನಿಜವೇ ಸರಿ. ಆದರೆ ಅವುಗಳ ವಿಚಾರವಾಗಿ ಪ್ರಮಾಣ ಭೇದವಿದ್ದೇ ಇದೆ ಎಂಬುದು ಮಾತ್ರ ನಿಶ್ಚಯ.

ವಿಜ್ಞಾನದ ಸಂಶೋಧನೆಗಳು, ವಿಜ್ಞಾನದ ಪ್ರಗತಿ ಇವುಗಳ ಪರಿಣಾಮದಿಂದಾಗಿ ಒಂದೆಡೆ ಜಗತ್ತಿನಲ್ಲಿ ಕಷ್ಟವಿದ್ದರೆ ಇನ್ನೊಂದೆಡೆ ಸುಖವಿದೆ. ಹಾಗೆಯೇ ಯುದ್ಧ, ನಾಶ ಗಳಿಗಾಗಿ ಯತ್ನ ನಡೆದಂತೆ ಶಾಂತಿ-ಸುಖಗಳ ಸಂಸ್ಥಾಪನೆಗಾಗಿಯೂ ಪ್ರಯತ್ನ ನಡೆಯು ತ್ತಿದೆ. ಹಾಗಾಗಿ ಇಂದು ಜಗತ್ತಿನಲ್ಲಿ ವಿಚಾರವಂತರು, ಉತ್ತಮ ಜೀವನವನ್ನು ಬಯಸು ವವರು ಎಲ್ಲರೂ ಆಶಿಸುವುದನ್ನೆಲ್ಲಾ ಸಂಗ್ರಹವಾಗಿ ಹೀಗೆ ಹೇಳಬಹುದು :

(೧) ರಾಜಕೀಯವಾಗಿ ಸಮಾನತೆ, ವ್ಯಕ್ತಿಸುಖಗಳ ಕಡೆಗೆ ಒಲವು ಹೆಚ್ಚಾಗುತ್ತಿದೆ.

(೨) ವ್ಯಕ್ತಿಯ ಸ್ವಾತಂತ್ರ್ಯ, ಗೌರವಗಳ ಬಗೆಗೆ ಹೆಚ್ಚಿನ ಪ್ರಾಶಸ್ತ್ಯ ನೀಡಬೇಕಾದುದು

ಅಗತ್ಯ ಎಂದು ಸ್ಪಷ್ಟವಾಗುತ್ತಿದೆ.

(೩) ಭೌತಿಕ ಸುಖದಿಂದ ಸರಿಯಾದ ತೃಪ್ತಿಯಿಲ್ಲದೆ ನಿಜವಾದ ತೃಪ್ತಿ ನೀಡಬಹು ದಾದ ಸುಖವೇ ಬೇಕೆಂಬ ಹಂಬಲ ಹೆಚ್ಚಾಗುತ್ತಿದೆ.

(೪) ಮತೀಯವಾದ ಭೇದಭಾವನೆ, ಸಂಕುಚಿತ ಮನಃಪ್ರವೃತ್ತಿ, ಮತಭ್ರಾಂತಿ ಇವು ಗಳಿಗೆ ವಿಜ್ಞಾನಪ್ರಪಂಚದಲ್ಲಿ ಸ್ಥಾನ ಕಡಿಮೆಯಾಗಹತ್ತಿದೆ. ಜಗತ್ತನ್ನೇ ತನ್ನ ಸಂಶೋ ಧನೆ, ಜೀವನಸಲಕರಣೆಗಳಿಂದ ಒಂದುಗೂಳಿಸಿದ ವಿಜ್ಞಾನ ಸಂಕುಚಿತತ್ವದ ಭೇದಗಳನ್ನು ಉಂಟುಮಾಡುವ ಮತವನ್ನು ಒಪ್ಪುವುದಿಲ್ಲವೆಂದಾಗಿದೆ.

(೫) ಮಾನವನ ಸಹಜವಾದ ಪ್ರವೃತ್ತಿಗಳನ್ನು ಉದಾತ್ತೀಕರಿಸಿ ಅವನ ಬೆಳವಣಿಗೆಗೆ ಮತ್ತು ವಿಕಾಸಕ್ಕೆ ಪೂರ್ಣಸ್ವಾತಂತ್ರ್ಯ ಬೇಕೆಂಬ ಮನೋಬಯಕೆ ಹೆಚ್ಚಾಗುತ್ತಿದೆ.

ಈ ಐದು ಅಂಶಗಳನ್ನು ಸಮರ್ಪಕವಾಗಿ ಪೂರೈಸುವುದರಲ್ಲಿ ಇತರ ಮತಗಳ ಸ್ಥಾನ ವಾದರೂ ಏನು ? ಈ ಕುರಿತಾಗಿ ಇತರ ಮತಗಳು ಶಕ್ತಿಹೀನ ಅಥವಾ ನಿಷ್ಪ್ರಯೋ ಜನವೆಂದಾಗಲಿ, ಇಲ್ಲವೇ ಕೀಳು ಎಂದಾಗಲಿ ಹೇಳಿದರೆ ತಪ್ಪಾದೀತು. ಆದರೆ ಜಗತ್ತಿನ ಇತರ ಮತಗಳಿಂದ, ಭೂಲೋಕದ ಇಂದಿನ ಧಾರ್ಮಿಕ ಜೀವನ ಪರಿಸ್ಥಿತಿಯನ್ನು ಪರಿಣಾಮಕಾರಿಯಾಗಿ ಸುಧಾರಿಸಿ ವೈಜ್ಞಾನಿಕ ದುಷ್ಟಶಕ್ತಿಗಳ ಪ್ರಯೋಗ ಪರಿಣಾಮ ಗಳನ್ನು ತಡೆಯುವುದಕ್ಕೆ ಸಾಕಷ್ಟು ಪ್ರಮಾಣದಲ್ಲಿ ಸಾಧ್ಯವಾಗಿರುವುದಿಲ್ಲ ಎನ್ನುವುದು ಮಾತ್ರ ಇಲ್ಲಿ ಸ್ಮರಣೀಯವಾದ ಅಂಶವಾಗಿರುತ್ತದೆ. ಈ ಕುರಿತಾದ ಸರಿಯಾದ ಕಾರಣ ವನ್ನು ಈಗಾಗಲೇ ವಿವರಿಸಿಯಾಗಿದೆ.

ಹಿಂದೂಧರ್ಮ ಒಂದು ಮತ ಮಾತ್ರವಾಗಿರದೆ ಅದೊಂದು ಜೀವನಕ್ರಮವೂ ಆಗಿರು ವುದರಿಂದ ಜಗತ್ತಿನ ಧಾರ್ಮಿಕ ಜೀವನದ ಸಫಲತೆಗೆ, ಭದ್ರತೆಗೆ ಸರಿಯಾದ ನೆರವನ್ನು ನೀಡಬಲ್ಲುದು. ಹೇಗೆ ನೀಡಬಲ್ಲುದು ಎಂದು ಪರ್ಯಾಲೋಚಿಸುವ ಮೊದಲು ಜಗತ್ತಿನಲ್ಲಿ ಹಿಂದೂಧರ್ಮದ ಕುರಿತಾಗಿ ಪೂರ್ವ–ಪಶ್ಚಿಮ ರಾಷ್ಟ್ರಗಳ ವಿಚಾರವಂತರು ಎಂತಹ ಮನೋದೃಷ್ಟಿ ತಳೆದಿರುತ್ತಾರೆ ಎಂಬುದನ್ನು ಸ್ವಲ್ಪ ವಿಚಾರಮಾಡೋಣ.

ಹಿಂದೂಧರ್ಮದ ವಿಚಾರವಾಗಿ ಮೊಟ್ಟಮೊದಲಿಗೆ ಜಗತ್ತಿನಲ್ಲಿ ಪ್ರಭಾವಯುತವಾದ ರೀತಿಯಲ್ಲಿ ಸರಿಯಾದ ಪರಿಚಯವನ್ನು ಪಸರಿಸಿದವರು ಸ್ವಾಮಿ ವಿವೇಕಾನಂದರು ಎಂಬುದು ಐತಿಹಾಸಿಕ ಸತ್ಯವಾಗಿದೆ. ಅವರ ಮುನ್ನ ಜಗತ್ತಿನಲ್ಲಿ ವಿವಿಧ ಎಡೆಗಳಲ್ಲಿ ಹಿಂದೂ ಧರ್ಮದ ಗ್ರಂಥಗಳ ಭಾಷಾಂತರ, ಕೆಲವು ಹಿಂದೂ ಮತ್ತು ಐರೋಪ್ಯ ವಿದ್ವಾಂಸರು, ಹಿಂದೂ ಸಮಾಜಸುಧಾರಕರು, ಮತಧರ್ಮಗಳ ಬಗೆಗೆ ಆಸಕ್ತಿ ಇರುವ ದೇಶವಿದೇಶಗಳ ವಿದ್ವಾಂಸರು—ಇವರ ಲೇಖನ, ಭಾಷಣ, ಗ್ರಂಥಪ್ರಕಟಣೆ ಇತ್ಯಾದಿಗಳಿಂದ ಹಿಂದೂ ಧರ್ಮದ ಕುರಿತಾಗಿ ಬಹಳ ಹಿಂದಿನಿಂದಲೇ ಪ್ರಚಾರ ಹಾಗೂ ತಿಳಿವಳಿಕೆಗಳು ಜಗತ್ತಿನ ವಿವಿಧ ಭಾಗಗಳಲ್ಲಿ ಹರಡಿರುತ್ತದೆ. ಆದರೆ ೧೮೯೩ನೇ ಸೆಪ್ಟೆಂಬರ್ ೧೧ರಂದು ಅಮೇರಿ ಕಾದ ಚಿಕಾಗೋ ನಗರದಲ್ಲಿ ಸಮಾವೇಶಗೊಂಡ ಪ್ರಪಂಚದ ಸರ್ವಧರ್ಮ ಸಮ್ಮೇಳನ ದಲ್ಲಿ ಸ್ವಾಮಿವಿವೇಕಾನಂದರು ಭಾಗವಹಿಸಿ ಹಿಂದೂಧರ್ಮದ ವಿಶ್ವವ್ಯಾಪಕ ಸಂದೇಶವನ್ನು ತಮ್ಮ ಸಿಂಹಸದೃಶವಾದ ವಾಣಿಯಲ್ಲಿ ಸಾರಿದಾಗ ಜಗತ್ತಿನ ಧಾರ್ಮಿಕ ಜೀವನರಂಗದಲ್ಲಿ ವಿನೂತನವಾದ ಜಾಗೃತಿ ಉಂಟಾಯಿತು. ಲೋಕಕ್ಕೆ ಹೊಸ ಬೆಳಕು ಬಂದಂತಾಯಿತು.

ಅಂದಿನಿಂದ ಇಂದಿನ ತನಕ ಅನೇಕ ಮಂದಿ ವಿದೇಶೀಯರು ಅನೇಕ ಕಡೆಗಳಿಂದ ಹಿಂದೂ ಧರ್ಮದ ಒಗೆಗೆ ಅತ್ಯಂತ ಆಸಕ್ತಿತಳೆದು, ಹಿಂದೂಧರ್ಮವನ್ನು ಅವರಲ್ಲಿ ಹಲವರು ಅಭ್ಯಸಿಸಿ, ಅದರ ಬಗ್ಗೆ ಗೌರವ-ಅಭಿಮಾನಗಳನ್ನು ಸಹ ವ್ಯಕ್ತಪಡಿಸುತ್ತಾ ಬಂದಿರುತ್ತಾರೆ.

ಪಾಶ್ಚಿಮಾತ್ಯ ರಾಷ್ಟ್ರದ ಪ್ರಸಿದ್ಧ ಬರಹಗಾರರೂ ಚಿಂತಕರೂ ಸಂಸ್ಕೃತಪಂಡಿತರೂ ಆದ ಪ್ರೊ॥ ಸರ್ ಮೋನಿಯರ್ ವಿಲಿಯಮ್ಸ್‌ರವರು ಹಿಂದೂಧರ್ಮದ ವಿಶ್ವವಾಪಕತೆಯನ್ನು ಬಹಳ ಸರಿಯಾಗಿ ಗ್ರಹಿಸಿ ಅದರ ಹಿರಿಮೆಯನ್ನು ಈ ರೀತಿ ಹೇಳಿರುತ್ತಾರೆ :[1]

> "ಹಿಂದೂಧರ್ಮದ ವೈಶಿಷ್ಟ್ಯಪೂರ್ಣ ಗುಣಯೋಗ್ಯತೆಯು ಅದರ ಆದರಣೀಯ ದೃಷ್ಟಿ ಮತ್ತು ಸರ್ವವ್ಯಾಪಕತ್ವವಾಗಿರುತ್ತದೆ. ಅದು ತಾನು ಸಮಗ್ರ ಜಗತ್ತಿನ, ಮಾನವಸ್ವಭಾವದ ಮತ್ತು ಮಾನವಸಮೂಹದ ಒಂದು ಮತವೆಂದು ಘೋಷಿಸಿರುತ್ತದೆ. ಅದು ಬೇರೆ ಯಾವುದೇ ಪಂಥದ ಪ್ರಗತಿಯನ್ನು ವಿರೋಧಿಸುವುದಿಲ್ಲ. ಏಕೆಂದರೆ ಸರ್ವ ಆದರಣೀಯವಾದ, ಆಲಿಂಗನ ಸಿದ್ಧವಾದ ಅದರ ತೋಳುಗಳಲ್ಲಿ ಮತ್ತು ಸದಾ ಅಗಲವಾಗುತ್ತಿರುವ ಅದರ ನೆಲೆಯಲ್ಲಿ ಇತರ ಎಲ್ಲಾ ಮತಗಳನ್ನು ಸೇರಿಸಿಕೊಳ್ಳಲು ಅದಕ್ಕೇನೂ ಕಷ್ಟವಿರುವುದಿಲ್ಲ. ನಿಜವಾಗಿ ಹೇಳುವುದಾದರೆ ಎಲ್ಲಾ ಮನಸ್ಸುಗಳಿಗೂ (ಎಲ್ಲರಿಗೂ) ಹೊಂದುವಂತೆ, ನೀಡಲು ಅನುಕೂಲವಾಗುವಂತೆ ಹಿಂದೂಧರ್ಮದಲ್ಲಿ ಸತ್ಯವಿಚಾರಗಳು ಇವೆ. ವೈವಿಧ್ಯಮಯವಾದ ಮಾನವೀಯ ಮನಸ್ಸು ಮತ್ತು ಆಕಾಂಕ್ಷೆಗಳನ್ನು ಈಡೇರಿಸಬಲ್ಲ, ಅವುಗಳಿಗೆ ಹೊಂದಿಕೊಳ್ಳಬಲ್ಲ, ಅನಂತಸಾಮರ್ಥ್ಯದಿಂದ ಕೂಡಿರುವುದರಲ್ಲಿ ಅದರ (ಹಿಂದೂಧರ್ಮದ) ಶಕ್ತಿ ಅಡಗಿರುತ್ತದೆ. ಅಧಾತ್ಮತತ್ತ್ವಜ್ಞಾನಿಗೆ ಬೇಕಾದ ಗಹನವಾದ ಮತ್ತು ಆಧ್ಯಾತ್ಮಿಕವಾದ ವಿಚಾರಗಳೂ, ಶಾಂತಿಪ್ರಿಯನಿಗೆ ಮತ್ತು ಏಕಾಂತಪ್ರಿಯನಿಗೆ ಬೇಕಾದ ಪ್ರಾಯೋಗಿಕ ಅಂಶಗಳೂ, ವಾಸ್ತವವಾದ ಅಂಶಗಳೂ, ಹಿಂದೂಧರ್ಮದಲ್ಲಿ ಅಡಕವಾಗಿರುತ್ತವೆ."

ಸುಪ್ರಸಿದ್ಧ ತತ್ತ್ವಜ್ಞಾನಿ, ಉದ್ದಾಮಸಂಸ್ಕೃತಪಂಡಿತ, ವೇದಶಾಸ್ತ್ರಪಾರಂಗತರಾದ ಪ್ರೊ॥ ಮ್ಯಾಕ್ಸ್‌ಮುಲ್ಲರ್ ಮಹಾಶಯರು ಹಿಂದೂಧರ್ಮದ ಕುರಿತಾದ ತಮ್ಮ ಪ್ರಶಂಸೆಯನ್ನು ವ್ಯಕ್ತಪಡಿಸುತ್ತಾ ಹಿಂದೂಧರ್ಮ ಮತ್ತು ಭಾರತದೇಶ ಇವುಗಳ ಬಗೆಗೆ ಅತ್ಯಂತ ಉತ್ತಮವಾದ ಅಭಿಪ್ರಾಯವನ್ನು ಪ್ರಕಟಪಡಿಸಿರುತ್ತಾರೆ :[2]

---

1. "A characteristic of Hinduism is its receptivity and all-comprehensiveness. It claims to be one religion of humanity, of human nature, of the entire world. It cares not to oppose the progress of any other system. For it has no difficulty in including all other religions within its all embracing arms and ever widening fold.

And in real truth, Hinduism has something to offer which is suited to all minds. Its very strength lies in its infinite diversity of human character and human tendencies. It has its likely spiritual and abstract side suited to the metaphysical philosopher, its practieal and concrete side suited to the man of peace and lover of seclusion."

—*Bhavan's Journal*, Dec. 1964

2. "If I were to look over the whole world to find out the country most richly endowed with all the wealth, power and beauty that nature can bestow—in some parts a very paradise on earth—I should point out to India. If I were asked under what sky the human mind has most fully developed

"ಪ್ರಕೃತಿಯಿಂದ ದೊರೆಯುವುದು ಸಾಧ್ಯವಿರುವ ಎಲ್ಲಾ ಸಾಧನಸಂಪತ್ತು, ಶಕ್ತಿ ಹಾಗೂ ಸೌಂದರ್ಯಗಳು ಅತಿಹೆಚ್ಚಾದ ಪ್ರಮಾಣದಲ್ಲಿ ಲಭಿಸಿರುವ ಮತ್ತು ಕೆಲವು ವಿಷಯಗಳಲ್ಲಿ, ಭೂಲೋಕದಲ್ಲೇ ಸ್ವರ್ಗದಂತಿರುವ ದೇಶವು ಇಡಿ ಜಗತ್ತಿನಲ್ಲಿ ಯಾವುದಿದೆ ? ಎಂದು ನಾನು ಹುಡುಕುವುದಾದರೆ ಆ ಬಗೆಗೆ ನಾನು ಭಾರತದ ಕಡೆ ತೋರಿಸಬೇಕಾಗುವುದು. ಮಾನವನ ಬುದ್ಧಿಗೆ ದೊರೆತಿರುವ ಅನರ್ಘ್ಯ ಶಕ್ತಿಸಾಮರ್ಥ್ಯಗಳನ್ನು ಪೂರ್ಣವಾಗಿ ವೃದ್ಧಿಪಡಿಸಿಕೊಂಡು ಇರುವ, ಜೀವನದ ಮಹತ್ತರವಾದ ಸಮಸ್ಯೆಗಳನ್ನು ಅತ್ಯಂತ ಗಾಢವಾಗಿ ಚಿಂತನೆ ಮಾಡಿರುವ ಮತ್ತು ಅವುಗಳಲ್ಲಿ ಕೆಲವದರ ಕುರಿತಾಗಿ ಪರಿಹಾರವನ್ನು ಕಂಡುಹಿಡಿಯಲಾಗಿದ್ದು ಪ್ಲೇಟೋ ಹಾಗೂ ಕ್ಯಾಂಟ್ ರಚಿಸಿರುವ ಗ್ರಂಥಗಳನ್ನು ವ್ಯಾಸಂಗ ಮಾಡಿರುವವರೂ ಕೂಡ ಆ ಬಗೆಗೆ ಗಮನ ಕೊಡಬೇಕಾದುದು ಯುಕ್ತವೆನಿಸುವಂತೆ ಬಗೆಹರಿಸಿರುವ ದೇಶವು ಯಾವುದು ಎಂದು ನನ್ನನ್ನು ಕೇಳಿದರೆ ನಾನು ಭಾರತದ ಕಡೆಗೆ ಕೈ ತೋರಿಸಬೇಕಾಗುವುದು.

ಈ ಯೂರೋಪ್‌ಖಂಡದಲ್ಲಿರುವ ನಾವು ಗ್ರೀಕರು ರೋಮನ್ನರು ಮತ್ತು ಯೆಹೂದಿಯರ ಆಲೋಚನಾಭಂಡಾರದ ಅವಲಂಬನದಿಂದ ಮಾತ್ರವೇ ಬುದ್ಧಿಯನ್ನು ಬೆಳೆಸಿಕೊಂಡಿರುವ ನಾವು ನಮ್ಮ ಆಂತರಿಕ ಜೀವನವು ಮತ್ತಷ್ಟು ಪೂರ್ಣವಾಗುವಂತೆ, ವ್ಯಾಪಕ ಆಗುವಂತೆ, ಮತ್ತಷ್ಟು ಸಾರ್ವತ್ರಿಕವಾಗುವಂತೆ ಕೇವಲ ಇಲ್ಲಿಯ ಜೀವನಕ್ಕೆ ಮಾತ್ರವೇ ಅಲ್ಲದೆ ಸ್ವರೂಪಾಂತರಗೊಂಡ ಶಾಶ್ವತಜೀವನಕ್ಕೂ ಸಂಬಂಧಪಟ್ಟಂತೆ, ಮತ್ತಷ್ಟು ನೈಜವಾದ ಮಾನ್ಯತೆಯನ್ನು ಪಡೆಯುವಂತೆ ಅದನ್ನು ತಿದ್ದಿಕೊಳ್ಳಲು ಅತ್ಯಾವಶ್ಯಕವಾಗಿರುವ ಸಾಮಗ್ರಿಯು ಯಾವ ಸಾಹಿತ್ಯದಿಂದ ದೊರೆಯುತ್ತವೆ ಎಂದು ನನಗೆ ನಾನೇ ಪ್ರಶ್ನೆ ಹಾಕಿಕೊಂಡರೆ ಆಗಲೂ ಮತ್ತೆ ನಾನು ಭಾರತದ ಕಡೆಗೇ ತೋರಿಸಬೇಕಾಗುವುದು."

ಅಮೇರಿಕಾದ ಸುಪ್ರಸಿದ್ಧ ಇತಿಹಾಸಜ್ಞ ಮತ್ತು ತತ್ತ್ವಜ್ಞಾನಿ ವಿಲ್‌ಡ್ಯೂರಾಂಟರು ಭಾರತದ ಬಗೆಗೆ ಹೇಳಿರುವ ಮಾತುಗಳು ಹಿಂದೂಧರ್ಮದ ಪ್ರಭಾವ ಹಾಗೂ ವಿಶ್ವ ವ್ಯಾಪಕತೆ ಮತ್ತು ಯೋಗ್ಯತೆಯನ್ನು ಸ್ಪಷ್ಟಪಡಿಸುತ್ತವೆ :[1]

"ಭಾರತವು ನಮ್ಮ ಜನಾಂಗದ ತೌರೂರಾಗಿತ್ತು. ನಮ್ಮ ತತ್ತ್ವಜ್ಞಾನಗಳ ತಾಯ್ನಾಡು ಅದೇ ಆಗಿತ್ತು. ಬುದ್ಧನ ಮೂಲಕ ತಾಯಿಯಾದಂತೆ, ಕ್ರೈಸ್ತ ಧರ್ಮದಲ್ಲಿ ಪ್ರತಿಪಾದಿತವಾಗಿರುವ ಆದರ್ಶಗಳ ಮೂಲಕ ಭಾರತವು ನಮ್ಮ ತಾಯಿ, ಹಾಗೆಯೇ ಗ್ರಾಮಸಮುದಾಯದ

---

some of its choicest gifts, has most deeply pondered on the greatest problems of life, and has found solutions of some of them which well deserve the attention even of those who have studied Plato and Kant—I should point to India.

And if I were to ask myself from what literature we here in Europe who have been nurtured almosl exclusively on the thoughts of Greeks and Romans and of one Semetic race the Jewish may draw that corrective which is most wanted in order to make our inner life more perfect more comprehensive more universal in fact more truly human, a life not for this life only, but a transfigured and eternal life—again I should point to India."

—*India : What Can It Teach Us ?*

1. India was the motherland of our race ; mother of our Philosophy, Mother, through the Badea, of the ideals embodied in Christianity. Mother, through the village community of self-government and democracy.

—*Kalyana Kalpatharu,* June 1957

ಸ್ಥಳೀಯ ಸರಕಾರ ಮತ್ತು ಪ್ರಜಾಪ್ರಭುತ್ವಗಳ ಮೂಲಕ ಭಾರತವು ನಮ್ಮ ತಾಯಿ ಆಗಿರುತ್ತಾಳೆ."

ಎಂ. ಎಸ್. ಎಲ್‌ಫಿನ್‌ಸ್ಟೋನರು ಹಿಂದೂಧರ್ಮವು ಅದೆಷ್ಟು ಪರಿಪೂರ್ಣವಾಗಿ ಬೆಳೆದು ಜಗತ್ತಿಗೆಲ್ಲಾ ಮಾದರಿಯಾಗಿದೆ ಎಂಬ ಅಭಿಪ್ರಾಯವನ್ನು ತಮ್ಮ ಈ ಮಾತುಗಳಲ್ಲಿ ಹೀಗೆ ಸ್ಪಷ್ಟಪಡಿಸಿರುತ್ತಾರೆ :[1]

"ಹಿಂದೂಗಳ ಲೌಕಿಕಸಾಮಾನ್ಯವಾದ ತಿಳಿವಳಿಕೆಯು ಹೆಚ್ಚು ಗಮನಾರ್ಹ ರೀತಿಯಾಗಿದ್ದು ಅಸ್ತಿತ್ವ ಮತ್ತು ದೇವರ ವಿಚಾರಗಳ ಕುರಿತಾಗಿ ಅವರಲ್ಲಿ ಅದು ಆಗಲೇ ಬೆಳೆದುಕೊಂಡಿದ್ದು ಅದು ಎಥೆನ್ಸ್‌ನ ಅತ್ಯಂತ ಮೇಧಾವಿಗಳಿಂದಲೇ ಅತಿಮಬ್ಬಾಗಿ ಗ್ರಹಿಸಿದಂತಾಗಿದ್ದಿತು."

ವಿದೇಶೀಯರೂ ಹಾಗೂ ಜಗದ್ವಿಖ್ಯಾತ ಬರಹಗಾರರೂ ಆದ ಅಲ್ಡಸ್ ಹಕ್ಸ್ಲೆಯವರು ಭಗವದ್ಗೀತೆ ಹಾಗೂ ತನ್ಮೂಲಕ ಪ್ರತಿಪಾದಿತವಾಗಿರುವ ಹಿಂದೂಧರ್ಮದ ಕುರಿತಾಗಿ ಪ್ರಸ್ತಾಪಿಸುತ್ತಾ ಹೇಳಿರುವ ಮಾತುಗಳು ಹಿಂದೂಧರ್ಮದ ಸನಾತನತೆ, ವಿಶ್ವವ್ಯಾಪಕತೆ ಹಾಗೂ ಮಾನವಕೋಟಿಗೆ ಅದರ ಉಪಯುಕ್ತತೆಗಳ ಬಗ್ಗೆ ದೃಢೀಕರಣೆಯನ್ನು ನೀಡುತ್ತವೆ.[2]

"ಗೀತೆಯು (ಶ್ರೀಮದ್‌ಭಗವದ್ಗೀತೆಯು) ಚಿರಸ್ಥಾಯಿವಾದ ತತ್ತ್ವಶಾಸ್ತ್ರದ ಸಂಗ್ರಹದ ನಿರೂಪಣೆಗಳಲ್ಲೆಲ್ಲಾ ಅತ್ಯಂತ ವ್ಯಾಪಕ ಹಾಗೂ ಸರ್ವಗ್ರಾಹಿಯಾದುದಾಗಿದ್ದು ಅನುಪಮವಾದುದಾಗಿದೆ. ಆದುದರಿಂದ ಅದರ ಸಾರ್ಥಕ ಮೌಲ್ಯವು ಭಾರತೀಯರಿಗೆ ಮಾತ್ರವಲ್ಲದೆ ಸಮಗ್ರ ಮಾನವಕೋಟಿಗೆ ಅನ್ವಯವಾದುದಾಗಿದೆ. ಗೀತೆಯು ಚಿರಸ್ಥಾಯಿಯಾದ ತತ್ತ್ವಶಾಸ್ತ್ರದ ಅತ್ಯಂತ ವ್ಯವಸ್ಥಾಬದ್ಧವಾದ ಆಧ್ಯಾತ್ಮಿಕ ಹೇಳಿಕೆಯಾಗಿರುತ್ತದೆ."

ಸುಪ್ರಸಿದ್ಧ ಇತಿಹಾಸತಜ್ಞ ಹಾಗು ಮಾನವತಾವಾದಿ ಡಾ|| ಆರ್ನಾಲ್ಡ್ ಟಾಯನ್‌ಬೀ ಅವರು ಹಿಂದೂಧರ್ಮದ ಕುರಿತಾಗಿ ಹೇಳಿದ ಮಾತುಗಳು, ವೈಜ್ಞಾನಿಕ ಜಗತ್ತು ಶ್ರೀ ಟಾಯನ್‌ಬೀಯವರ ಮೂಲಕ ಹಿಂದೂಧರ್ಮವನ್ನು ಹಾಗು ಅದರ ಯೋಗ್ಯತೆ ಮತ್ತು ವಿಶ್ವವ್ಯಾಪ್ತಿಯನ್ನು ಗೌರವಿಸಿದಂತಿದೆ :[3]

---

1. "Hindu's general learning was more considerable, and in the knowledge of being and nature of God, they were already in possession of a light which was but faintly perceived even by the loftiest intellectuals in the best days of Athens." —*Bhavan's Journal*, Dec. 6, 1960

2. "The Githa is one of the clearest and most comprehensive summaries of Perennial Philosophy ever to have been made. Hence its enduring value not only for Indians but for all mankind.It is the most systematic spiritual statement of Perennial Philosophy."

—*Introduction to Bhagavad Gita—The Song of God*

3. "The Indian religions are not exclusive minded. They are ready to allow that there may be alternative approaches to the mystery. I feel sure that in this they are right and that this Catholic-minded Indian religious spirit in an age in which we have to be born as a single family if we are not to destroy ourselves." —*Bhavan's Journal*, Dec. 6, 1964

"ಭಾರತೀಯ ಮತಗಳು ಸಂಕೀರ್ಣತಾದೃಷ್ಟಿ ಉಳ್ಳವುಗಳಲ್ಲ. ನಿಗೂಢರಹಸ್ಯಕ್ಕೆ ಬೇರೆ ಮಾರ್ಗಗಳೂ ಇವೆ ಎಂಬುದನ್ನು ಮಾನ್ಯಮಾಡಲು ಅವುಗಳು ಸಿದ್ಧವಿವೆ. ಈ ವಿಚಾರದಲ್ಲಿ ಅವುಗಳ ದೃಷ್ಟಿಯು ಸರಿ ಎಂದು ನಾನು ಭಾವಿಸುತ್ತೇನೆ. ಮತ್ತು ಈ ಸಾರ್ವತ್ರಿಕವಾದ, ವಿಶಾಲ ಹೃದಯದ ಮನೋಭಾವನೆಗಳಿಂದ ಕೂಡಿದ ಭಾರತೀಯ ಮತಗಳ ಮತೀಯವಾದ ಚೇತನವೇ, ನಾವು ಒಂದೇ ಕುಟುಂಬದವರಂತೆ ಹುಟ್ಟಿ ಪರಸ್ಪರ ನಾವು ನಮ್ಮನ್ನು ನಾಶಮಾಡದೇ ಇರಬೇಕಾಗಿರುವ ಈ ಕಾಲದ ಎಲ್ಲಾ ಮತಧರ್ಮಗಳಿಗೂ ಕಲ್ಯಾಣದೆಡೆಗೆ ಸಾಗಲು, ನೆರವಾಗುವ ಹಾದಿಯಾಗಿದೆ ಎಂದು ನಾನು ತಿಳಿಯುತ್ತೇನೆ."

ವಿಶ್ವವಿಖ್ಯಾತ ಸಾಹಿತಿ ಹಾಗೂ ವೇದಾಂತಿ ಶ್ರೀ ಕ್ರಿಸ್ಟೋಫರ್ ಇಷರ್‌ವುಡ್‌ರವರು ಹಿಂದೂಧರ್ಮದ ವೇದಾಂತದ ಬಗೆಗೆ ಹೇಳಿರುವ ಮಾತುಗಳು ಈ ವಿಜ್ಞಾನಯುಗದಲ್ಲಿ ಹಿಂದೂಧರ್ಮಕ್ಕೆ ಅದೆಷ್ಟು ಮಹತ್ತರವಾದ ಸ್ಥಾನವಿದೆ ಎಂಬುದನ್ನು ಸ್ಪಷ್ಟಪಡಿಸುತ್ತವೆ :[1]

"ನಾವು ಹೇಗೂ ವಿಜ್ಞಾನಗಳನ್ನು ಪರಿಶೀಲಿಸುವಾಗ ವೇದಾಂತದ ಉಜ್ವಲವಾದ ಪುರೋಭಿವೃದ್ಧಿಗಳು ಎಲ್ಲಕ್ಕಿಂತ ಹೆಚ್ಚಾಗಿ ನಮಗೆ ಉತ್ಸಾಹದಾಯಕ ಹಾಗೂ ಪ್ರೋತ್ಸಾಹದಾಯಕಗಳಾಗಿರುತ್ತವೆ. ವಿಜ್ಞಾನದ ಯೋಜನಾ ಹಾಗೂ ವಿಚಾರಗಳ ಆಶಯಗಳು ಭೌತಿಕವಾದ ನಿರೀಶ್ವರವಾದದ ಎಡೆಗೆ ಇರದೆ ಅತೀಂದ್ರಿಯವಾದ ಪ್ರಜ್ಞೆಯ ಕಲ್ಪನೆಯನ್ನು ಒಳಗೊಂಡಿರುವ ಪೂರ್ವಸಿದ್ಧಾಂತದ ಎಡೆಗೆ ಸಾಗುತ್ತಿವೆ ಎಂಬುದನ್ನು ಈಗ ಸಾಮಾನ್ಯವಾಗಿ ಒಪ್ಪಲಾಗಿದೆ. ಇದನ್ನು ಒಪ್ಪಿದರೆ ಸ್ವಲ್ಪ ಭರವಸೆಯಿಂದ ನಾವು ವೇದಾಂತತತ್ತ್ವಶಾಸ್ತ್ರವನ್ನು ಕ್ರೈಸ್ತತತ್ತ್ವಶಾಸ್ತ್ರಕ್ಕಿಂತ ಹೆಚ್ಚು ಶ್ರೇಷ್ಠವಾದುದು, ವಿಜ್ಞಾನ ಮತ್ತು ಮತಧರ್ಮಗಳ ನಡುವೆ ಸತ್ವಪೂರ್ಣವಾದ ಸೇತುವೆ ಎಂದು ಹಕ್ಕುಪೂರ್ಣವಾಗಿ ಹೇಳಬಹುದು. ಅನೇಕ ವಿಖ್ಯಾತ ವಿಜ್ಞಾನಿಗಳು ಈಗಾಗಲೇ ವೇದಾಂತವು ನೀಡುವ ಪ್ರಪಂಚದ ಚಿತ್ರವು ಅತ್ಯಾಧುನಿಕವಾದ ಖಗೋಳಶಾಸ್ತ್ರದೃಷ್ಟಿ, ಮತ್ತು ಅಣುಭೌತವಿಜ್ಞಾನದೃಷ್ಟಿಗೆ ಬಹುಪಾಲು ಒಪ್ಪಿಗೆ ಉಳ್ಳದ್ದಾಗಿದೆ ಎಂದು ಹೇಳಿರುವುದು ಮಹತ್ವಪೂರ್ಣವಾದ ಸತ್ಯವಾಗಿದೆ."

ಜಗತ್ತಿನ ವಿವಿಧ ಭಾಗಗಳಲ್ಲಿ ಸಂಚರಿಸಿ ತಮ್ಮ ಪ್ರತಿಭೆ, ಜೀವನದ ಆದರ್ಶಗಳಿಂದ ಹಿಂದೂಧರ್ಮದ ಕುರಿತಾಗಿ ಪ್ರಚಾರಮಾಡಿದ ವಿಶ್ವಮಾನ್ಯ ಶ್ರೀ ವಿವೇಕಾನಂದಸ್ವಾಮಿಗಳು ಹೇಳಿರುವ ಮಾತುಗಳು ಹಿಂದೂಧರ್ಮದ ವಿಶ್ವವ್ಯಾಪಕತೆ, ಅಂತಃಸತ್ವದ ಬಗೆಗೆ ಹೆಚ್ಚಿನ ದೃಢೀಕರಣೆಯನ್ನು ನೀಡುವವುಗಳಾಗಿವೆ :[2]

---

1. ' When, however we consider the Science, the propects of Vedanta are much more encouraging. It is now generally, if rather vaguely, admitted that the trend of scientific thinking is away from materialistic atheism and towards hypothesis which does not exclude the concept of a transcendent consciousness, If this is granted, we may claim with some assurance that Vedanta Philosophy is superior to Christian theology, a potential bridge between seientific religion.It is a striking fact alreday remarked on by several outstanding scientists—that the world picture presented by Vedenta is largely in accordance with the latest theoriss of astronomy and atomic physics." —*Introduction to Vedanata for Modern Man*

2. "From the highest spiritual flights of the Vedanta Philosophy, of which the latest discoveries of science seem like echoes,to the low ideas of idolatry with its multifarious mythology, the agnosticism of the Buddhists and the atheism of the Jains, each and all have a place in the Hindu's religion." —*Complete Works of S. V.*, Volume I

"ಯಾವ ವೇದಾಂತತತ್ತ್ವದ ಅತಿಗಹನವಾದ ಆಧ್ಯಾತ್ಮಿಕ ಭಾವನೆಗಳೆದುರಿಗೆ, ಆಧುನಿಕ ವೈಜ್ಞಾನಿಕ ಸಂಶೋಧನೆಗಳು ಮರುಧ್ವನಿಯಂತೆ ಇವೆಯೋ, ಅವುಗಳಿಂದ ಹಿಡಿದು ಅನೇಕ ಪುರಾಣಗಳನ್ನು ಒಳಗೊಂಡ ವಿಗ್ರಹಾರಾಧನೆಯ ಮೂಢಭಾವನೆಗಳು, ಬೌದ್ಧರ ಅನೀಶ್ವರ ವಾದ, ಜೈನರ ನಾಸ್ತಿಕವಾದ ಇವರಿಗೆಲ್ಲ ಹಿಂದೂಧರ್ಮದಲ್ಲಿ ಸ್ಥಳವಿದೆ."

ಭಾರತದ ರಾಷ್ಟ್ರಪಿತ, ವಿಶ್ವದ ಶಾಂತಿಜ್ಯೋತಿ ಮಹಾತ್ಮಾ ಗಾಂಧೀಜಿಯವರು ಹಿಂದೂಧರ್ಮದ ಕುರಿತಾಗಿ ಹೇಳಿದ ಮಾತುಗಳು ಚೈತನ್ಯದಾಯಿಯಾಗಿರುತ್ತವೆ :[1]

"ಹಿಂದೂಧರ್ಮವು ಪ್ರತ್ಯೇಕವಾದ ಒಂದು ಧರ್ಮವಲ್ಲ. ಅದರಲ್ಲಿ ಜಗತ್ತಿನ ಎಲ್ಲಾ ಧರ್ಮೋಪ ದೇಶಕರ ಆರಾಧನೆಗೆ ಅವಕಾಶವಿದೆ. ಸಾಮಾನ್ಯ ಅರ್ಥದಲ್ಲಿ ಹೇಳುವಂತೆ ಅದು (ಹಿಂದೂ ಧರ್ಮವು) ಧರ್ಮಪ್ರಚಾರಕವಾದ ಧರ್ಮವಲ್ಲ. ಅದು ಅನೇಕ ಬುಡಕಟ್ಟಿನವರನ್ನು ತನ್ನ ಆಶ್ರಯದಲ್ಲಿ ಅಳವಡಿಸಿಕೊಂಡಿರುತ್ತದೆ. ಆದರೆ ಆ ಅಳವಡಿಸೋಣ ಅಥವಾ ಹೀರಿಕೊಳ್ಳು ವಿಕೆಯು ವಿಕಾಸದ ರೀತಿಯಾಗಿದ್ದು ಅದು ಅಗೋಚರವೂ ಅತಿಸೂಕ್ಷ್ಮವೂ ಆದ ಕ್ರಮದಿಂದ ಆಗಿರುತ್ತದೆ. ಹಿಂದೂಧರ್ಮವು ಪ್ರತಿಯೊಬ್ಬರಿಗೂ ಅವನವನ ನಂಬಿಕೆ ಅಥವಾ ಧರ್ಮ ವನ್ನು ಅನುಸರಿಸಿ ದೇವರನ್ನು ಪೂಜಿಸಲು ಹೇಳುತ್ತದೆ. ಹಾಗೆ ಹಿಂದೂಧರ್ಮವು ಎಲ್ಲಾ ಮತಗಳೊಡನೆ ಶಾಂತಿಯಿಂದ ಕೂಡಿ ಒಡನಾಡಿ ಬಾಳುತ್ತದೆ."

ಈ ಶತಮಾನದ ವರ್ತಮಾನಕಾಲಘಟ್ಟದಲ್ಲಿ ಜಗತ್ತಿನಲ್ಲಿ ಹಿಂದೂಧರ್ಮದ ಅವಿನಾಶಿ ಯಾದ ಸತ್ಯಸಿದ್ಧಾಂತಗಳನ್ನು ತನ್ನ ವಿದ್ವತ್ತು, ಅನುಭವ ಹಾಗೂ ನಿರೂಪಣಾಸಾಮರ್ಥ್ಯ ಗಳಿಂದ ಪ್ರಚಾರಮಾಡಿದ ಅಂತಾರಾಷ್ಟ್ರೀಯ ಪ್ರಸಿದ್ಧ ತತ್ತ್ವಜ್ಞಾನಿ ಭಾರತರತ್ನ ಡಾ|| ರಾಧಾಕೃಷ್ಣನ್‌ರವರು ಹಿಂದೂಧರ್ಮದ ಕುರಿತಾಗಿ ಹೇಳಿದ ಮಾತುಗಳು ಸತ್ಯವನ್ನು ಆಕರ್ಷಣೀಯವಾಗಿ ಸಾರಿದಂತಿವೆ :[2]

---

1. "Hinduism is not an exclusive religion. In it there is room for the worship of all the prophets of the world. It is not a missionary religion in the ordinary sense of the term. It has no doubt absorbed many tribes in its fold, but this absorption has been of an evolutionary, imperceptible character. Hinduism tells every one to worship God according to his own faith or Dharma and so lives at peace with all the religions."
—*All Religions Are One*, *Young India*, Oct. 6, 1921

2. "Half the world moves on independent foundations which Hinduism supplied. The civilization itself has not been a short-lived one. Its historic records date back for over four thousand years and even then it had reached a stage of civilization which has continued its unbroken though at times slow and almost static course, until the present day. It has stood the stress and strain of more than four or five milleniums of spirtual thought and experience. Though people of different races and cultures have been pouring into India from the dawn of history, Hinduism has been able to maintain its supermacy and even in proselytising creeds backed by political power have not been able to coerce the large majority of Indians to their views. The Hindu culture possessed some vitality which seems to be denied to some other more forceful currents. It is no more necessary to dissect Hinduism than to open a tree to see whether the sap still runs."
—*Hindu View of Life*

"ಅರ್ಧಾಂಶ ಜಗತ್ತಿಂದು ಸ್ವತಂತ್ರವಾದ ಅಸ್ತಿಭಾರದ ಮೇಲೆ ಸಾಗುತ್ತಿದ್ದು ಅದು ಹಿಂದೂ ಧರ್ಮದಿಂದ ಪಡೆದದ್ದಾಗಿರುತ್ತದೆ. ಆ ನಾಗರಿಕತೆಯು ಅಲ್ಪಕಾಲ ಬಾಳಿದುದಾಗಿರುವುದಿಲ್ಲ. ಅದರ ಐತಿಹಾಸಿಕ ದಾಖಲೆಗಳು ನಾಲ್ಕು ಸಾವಿರ ವರ್ಷಗಳಿಗಿಂತಲೂ ಹಿಂದಿನ ತೇದಿಯನ್ನು ಸೂಚಿಸುತ್ತವೆ. ಹಾಗಿದ್ದರೂ ಆ ಕಾಲದಲ್ಲಿ ಅದು ನಾಗರಿಕತೆಯ ಒಂದು ಹಂತವನ್ನು ತಲುಪಿದ್ದು ಕೆಲವೊಮ್ಮೆ ಸ್ಥಗಿತವಾಗಿ ಅದು ಈ ಕಾಲದ ತನಕವೂ ಅವಿಚ್ಛಿನ್ನವಾಗಿ ಸಾಗಿಬಂದಿದೆ, ಅದು ಮೂರುನಾಲ್ಕು ಸಾವಿರ ವರ್ಷಗಳ ಅವಧಿಯ ಆಧ್ಯಾತ್ಮಿಕ ವಿಚಾರ ಮತ್ತು ಅನುಭಾವಗಳ ಒತ್ತಡ ಮತ್ತು ಪ್ರಯಾಸಗಳನ್ನು ತಡೆದು ಸಹಿಸಿಕೊಂಡು ಜೀವಂತವಾಗಿ ಉಳಿದಿರುತ್ತದೆ. ವಿವಿಧ ಜನಾಂಗಗಳ ಮತ್ತು ಸಂಸ್ಕೃತಿಗಳ ಜನರು ಭಾರತಕ್ಕೆ ಆಗಿಂದಾಗ್ಗೆ ಬರುತ್ತಾ ಇದ್ದರೂ ಹಿಂದೂಧರ್ಮವು ಅದರ ಮಹಿಮೆಯನ್ನು, ಶ್ರೇಷ್ಠತೆಯನ್ನು ಇದ್ದಂತೆ ಉಳಿಸಿ ರಕ್ಷಿಸಿಕೊಳ್ಳಲು ಸಮರ್ಥವಾಗಿರುತ್ತದೆ. ಮತ್ತು ರಾಜಕೀಯ ಶಕ್ತಿಗಳ ಬೆಂಬಲವಿದ್ದಂತಹ ಮತಾಂತರಗೊಳಿಸುವ ಪಂಥಗಳಿಂದಲೂ ಕೂಡ ಅವುಗಳ ದೃಷ್ಟಿಗೆ ಸರಿಯಾಗಿ ಬಹುಮಂದಿ ಭಾರತೀಯರನ್ನು ಬಲಾತ್ಕಾರವಾಗಿ ಸೇರಿಸಲು ಇಲ್ಲವೆ ಒಳಪಡಿಸಲು ಸಾಧ್ಯವಾಗಿರಲಿಲ್ಲ. ಹಿಂದೂ ಸಂಸ್ಕೃತಿಯು ಸ್ವಲ್ಪ ಚೇತನವನ್ನು ಹೊಂದಿದ್ದು ಇನ್ನೂ ಹೆಚ್ಚಾದ ಶಕ್ತಿಯಿಂದ ಕೂಡಿದ ಪ್ರವಾಹಗಳಿಗೆ ಅದು (ಹಿಂದೂಧರ್ಮದಲ್ಲಿನ ಚೇತನ) ಲಭ್ಯವಲ್ಲ ಎಂಬಂತಾಗಿದೆ. ಮರದಲ್ಲಿ ಸಸ್ಯಸತ್ತ್ವವು ಹರಿಯುತ್ತಿದೆಯೆ ಎಂದು ನೋಡಲು ಮರವನ್ನು ಹೇಗೆ ಭಾಗಮಾಡಿ ನೋಡುವ ಅಗತ್ಯವಿಲ್ಲವೋ ಹಾಗೆಯೇ ಹಿಂದೂಧರ್ಮವನ್ನು ಕೂಡ ಅದರ ಸತ್ವ ತಿಳಿಯಲು ಭಿನ್ನಭಿನ್ನವಾಗಿ ಪರೀಕ್ಷಿಸಬೇಕಾಗಿಲ್ಲ."

ಇನ್ನೊಂದೆಡೆ ಅವರು ಈ ವಿಚಾರವಾಗಿ ಪ್ರಸ್ತಾಪಿಸುತ್ತಾ ಹೇಳಿದ ಮಾತುಗಳು ಹೆಚ್ಚಿನ ಬೆಳಕನ್ನು ಚೆಲ್ಲುವಂತಿವೆ :[1]

"ನನಗೆ ಹಿಂದೂಧರ್ಮವೆಂದರೆ, ದೈವಿಕವಾದ ಸತ್ಯದ ಸಾಕ್ಷಾತ್ಕಾರಕ್ಕೆ, ಗಾಯತ್ರೀಮಂತ್ರವು ಬಲವತ್ತರವಾಗಿ ಹೇಳುವಂತೆ, ಎಡೆಬಿಡದ ಅನ್ವೇಷಣೆ ಆಗಿರುತ್ತದೆ. ಮತ್ತು ಮನುಷ್ಯ ಮನುಷ್ಯರನ್ನು ಬೇರ್ಪಡಿಸುವ ಅಡ್ಡಗೋಡೆಗಳನ್ನು ಒಡೆಯುವುದರ ಬಗೆಗೆ ಇರುವ ಸಹಾನುಭೂತಿಯನ್ನು ವಿಶಾಲಮಾಡುವುದೇ ಆಗಿರುತ್ತದೆ."

ಹಿಂದೂಧರ್ಮದ ಗುರಿ ಏನು ಎಂಬ ಬಗ್ಗೆ ಬರೆಯುತ್ತ ಡಾ|| ರಾಧಾಕೃಷ್ಣನ್‌ರವರು ಅದನ್ನು ಹೀಗೆ ಹೇಳಿರುತ್ತಾರೆ :[2]

"ಹಿಂದೂಧರ್ಮದ ಆದರ್ಶವು ಮಾನವರನ್ನೆಲ್ಲಾ ಬ್ರಾಹ್ಮಣರನ್ನಾಗಿಯೂ, ಜನಾಂಗಗಳನ್ನೆಲ್ಲಾ ಧರ್ಮೋಪದೇಶಕ ಪ್ರವಾದಿಗಳನ್ನಾಗಿಯೂ ಮಾಡುವುದೇ ಆಗಿರುತ್ತದೆ."

ಹಿಂದೂಧರ್ಮದ ಉತ್ತಮವಾದ ಹೆಸರು ವೇದಾಂತ ; ಅದು ಆದೆಷ್ಟೋ ರೀತಿಯ ಆಘಾತಗಳನ್ನು ಎದುರಿಸಿ ಬಾಳಿರುತ್ತದೆ, ಬಾಳಬಲ್ಲುದು—ಎಂದು ಹಿಂದೂಧರ್ಮದ

---

1. "To me Hinduism means an unceasing quest for the realization of Divine Truth as the Gayathri mantra insists, and a widening of sympathy breaking down the barriers that divide man from man."

—*Occassional Speechees & Writings*

2. "The ideal of the Hindu Dharma is to make all men Brahmins, all people Prophets." —*The Heart of Hindustan*

ಕುರಿತಾಗಿ ಸುಪ್ರಸಿದ್ಧ ವಿದ್ವನ್ಮಣಿಗಳಾದ ಚಕ್ರವರ್ತಿ ಸಿ. ರಾಜಗೋಪಾಲಾಚಾರಿಯವರು ಹೇಳಿರುತ್ತಾರೆ :[1]

"ಹಿಂದೂಧರ್ಮ ಎನ್ನುವುದು ಆಧುನಿಕ ಶಬ್ದವಾಗಿದೆ. ಹಿಂದೂಗಳ ಮತೀಯವಾದ ನಂಬಿಕೆಗಳಿಗೆ ನೀಡಿರುವ ಅನೇಕ ಹೆಸರುಗಳಲ್ಲಿ 'ವೇದಾಂತ'ವೆನ್ನುವುದು ಅತ್ಯಂತ ಉತ್ತಮವಾದುದಾಗಿದೆ. ಹೊರದೇಶೀಯವಾದ ನಾಗರಿಕತೆ ಮತ್ತು ಹಿರಿಯಾಸೆಗಳು ಭಾರತದ ಜನರ ಮೇಲೆ ಎಷ್ಟಾದರೂ ಪರಿಣಾಮ ಬೀರಿರಲಿ, ಹಾಗಿದ್ದರೂ ಈ ಆಧ್ಯಾತ್ಮಿಕವಾದ ಪೌಷ್ಟಿಕ ದ್ರವ್ಯವು ಬತ್ತಿರುವುದಿಲ್ಲ ಅಥವಾ ಹಾಳಾಗಿರುವುದಿಲ್ಲ."

ಜಗತ್ತಿಗೆ ಇಂದಿನ ಈ ವೈಜ್ಞಾನಿಕ ಸನ್ನಿವೇಶದಲ್ಲಿ ಹಿಂದೂಧರ್ಮದ ವೇದಾಂತ ತತ್ತ್ವಗಳು ಹೇಗೆ ಫಲಕಾರಿಯಾದ, ಪರಿಣಾಮಕಾರಿಯಾದ ರೀತಿಯಲ್ಲಿ ಮಾನವ ಕುಟುಂಬದ ಕಲ್ಯಾಣವನ್ನು ಸಾಧಿಸುವುದರಲ್ಲಿ ಸಹಾಯವಾದೀತು ಎಂಬುದನ್ನು ಇದೀಗ ವಿಚಾರಮಾಡಬೇಕಾಗಿದೆ. ಬದಲಾಗುತ್ತಿರುವ ಜೀವನಕ್ರಮ-ಪರಿಸ್ಥಿತಿಗಳ ಸನ್ನಿವೇಶದಲ್ಲಿ ಜಗತ್ತಿಗೆ ಎಂತಹ ಧರ್ಮ ಅನುಕೂಲವಾದೀತು ಎಂದು ವಿಚಾರ ಮಾಡುತ್ತಾ 'ವೇದಾಂತ ಧರ್ಮ' ಎಂದು ಸ್ವಾಮಿ ವಿವೇಕಾನಂದರು ಮತ್ತು ಇತರ ಮಹಾಪುರುಷರು ಅಭಿಪ್ರಾಯ ತಳೆದಿರುತ್ತಾರೆ. ಜಗತ್ತಿಗೆ ಎಂತಹ ಧರ್ಮದಿಂದ ಹಿತವಾದೀತು ಎನ್ನುತ್ತಾ ಸ್ವಾಮಿ ವಿವೇಕಾನಂದರು ಹೀಗೆ ಹೇಳಿರುತ್ತಾರೆ :[2]

"ವಿಶ್ವವ್ಯಾಪಕವಾದ ಧರ್ಮ ಎಂದಾದರೂ ರೂಪುಗೊಳ್ಳುವುದಾದರೆ ಅದಕ್ಕೆ ಕಾಲದೇಶಗಳಲ್ಲಿ ನೆಲೆ ಇರುವುದಿಲ್ಲ. ಅದು ಬೋಧಿಸುವ ದೇವರಂತೆ ಅನಂತವಾಗಿರುತ್ತದೆ. ಆದರೆ ಸೂರ್ಯನು ಕೃಷ್ಣ ಮತ್ತು ಕ್ರಿಸ್ತರ ಅನುಯಾಯಿಗಳ ಮೇಲೆ, ಸಂತರು ಮತ್ತು ಪಾಪಿಗಳ ಮೇಲೆ ಏಕರೀತಿಯಾಗಿ ಪ್ರಕಾಶವನ್ನು ಬೀರುವನು. ಈ ಮತವು ಬ್ರಾಹ್ಮಣ ಅಥವಾ ಬೌದ್ಧ,

---

1. "Hinduism is a modern word. Vedanta is the best among the numerous names given to the religious faith of the Hindus..."

"...However much foreign civilization and new aspirations might have affected the people of India this spiritual nutriment has not dried up or decayed or changed." —*Hinduism : Doctrine and Way of Life*

2. "...If there is ever to be a universal religion it must be one which will have no location in place or time; which will be infinite, like the God it will preach, and whose sun will shine upon the followers of Krishna and of Christ, on saints and sinners alike; which will not be Brahminic or Buddhistic, Christian or Mohammadan but the sum total of all these, and still have infinite space for development, which in its catholicity will embrance in its infinite arms, and find a place for every human being from the lowest grovelling savage not far removed from the brute, to the highest man towering by the virtues of his head and heart almost above humanity, making Society stand in awe of him and doubt his human nature. It will be a religion which will have no place for prosecution or intoleranee in its polity, which will resognise divinity in every man and woman and whose whole scope, whose whole force will be centered in aiding humanity to realise its own true divine nature."

—*Complete Works of S. V.*, Vol. I

ಕ್ರೈಸ್ತ ಅಥವಾ ಮಹಮ್ಮದೀಯವಾಗಿರದೆ ಇವುಗಳೆಲ್ಲದರ ಮೊತ್ತದಂತೆ ಇದ್ದು ಇನ್ನೂ ಕೂಡ ಬೆಳವಣಿಗೆಗೆ ಅನಂತವಾದ ಅವಕಾಶದಿಂದ ಕೂಡಿರುವುದು. ಅದು ತನ್ನ ಪರಮಸಹಿಷ್ಣುತೆಯಿಂದ ತನ್ನ ಅನಂತವಾದ ತೋಳುಗಳಲ್ಲಿ ಆಲಿಂಗಿಸುತ್ತಾ, ಅತಿಕೀಳುಮಟ್ಟದ ವಿಕಾಸಗೊಳ್ಳದ ಕ್ರೂರಮನುಷ್ಯನಿಂದ ತನ್ನ ಶಿರ ಮತ್ತು ಹೃದಯಗಳ ಸದ್ಗುಣಸಂಪತ್ತಿನಿಂದ ಗಂಭೀರವಾಗಿರುವ ಮತ್ತು ಮಾನವಜನಾಂಗದ ಬಹುಪಾಲು ಮೇಲಂತಸ್ತಿನಲ್ಲಿರುವಂತಿದ್ದು ಸಮಗ್ರ ಸಮಾಜವೇ ಅವನ ಮಾನವಸ್ವಭಾವ ಕುರಿತಾಗಿ ಸಂದೇಹವನ್ನು ವ್ಯಕ್ತಪಡಿಸುವಂತಿರುವ ವಿಕಾಸಹೊಂದಿದ ಮನುಷ್ಯನವರೆಗೆ ಪ್ರತಿಯೊಬ್ಬರಿಗೂ ಒಂದೊಂದು ಸ್ಥಾನವು ಅದರಲ್ಲಿ ಇರುತ್ತದೆ. ಅದೊಂದು ಮತವಾಗಿದ್ದು ಅದರಲ್ಲಿ ಹಿಂಸೆ-ಉಪದ್ರವಗಳಿಗೆ ಸ್ಥಳವಿರದೆ, ಅದರ ಸಮಾಜವ್ಯವಸ್ಥೆಯಲ್ಲಿ ಅಸಹಿಷ್ಣುತೆಗೆ ಅವಕಾಶವಿರದೆ, ಅದು ಪ್ರತಿಯೊಬ್ಬ ಸ್ತ್ರೀಪುರುಷರಲ್ಲೂ ಇರುವ ದೈವತ್ವವನ್ನು ಗುರುತಿಸಿ ಮಾನ್ಯಮಾಡುತ್ತದೆ. ಮತ್ತು ಅವರ ಇಡೀ ವ್ಯಾಪ್ತಿಯು, ಇಡೀ ಶಕ್ತಿಯು ಮಾನವಕುಟುಂಬವು ಅದರ ಸ್ವಯಂ ದೈವತ್ವದ ಸ್ವಭಾವವನ್ನು ಸಾಕ್ಷಾತ್ಕಾರ ಮಾಡುವುದಕ್ಕೆ ಸಹಾಯ ಕೇಂದ್ರೀಕರಣ ಮಾಡಲ್ಪಡುತ್ತದೆ.''

ಮೇಲೆ ವಿವರಿಸಿದ ತತ್ತ್ವಾಂಶಗಳಿಂದ ಕೂಡಿದ ಧರ್ಮವೇ ವೇದಾಂತಧರ್ಮ ಎಂದು ಸ್ವಾಮಿ ವಿವೇಕಾನಂದರು ವಿವರಿಸುತ್ತಾ ಅದು ಏಕೆ ವಿಶ್ವಧರ್ಮವಾಗಲು ಯೋಗ್ಯ ಎಂಬುದರ ಕುರಿತಾಗಿ ಹೀಗೆ ಸ್ಪಷ್ಟೀಕರಣೆಯನ್ನು ನೀಡಿರುತ್ತಾರೆ :[1]

``ವೇದಾಂತಕ್ಕೆ ಮಾತ್ರ ವಿಶ್ವಧರ್ಮವಾಗುವ ಹಕ್ಕಿದೆ. ಇದಾಗಲೇ ಪ್ರಪಂಚದಲ್ಲಿ ವಿಶ್ವಧರ್ಮವಾಗಿದೆ. ಏತಕ್ಕೆಂದರೆ ಇದು ವ್ಯಕ್ತಿಯನ್ನು ಬೋಧಿಸುವುದಿಲ್ಲ, ತತ್ತ್ವವನ್ನು ಬೋಧಿಸುವುದು.

``ಇದು ಎಲ್ಲವನ್ನೂ ಅಳವಡಿಸಿಕೊಳ್ಳುವಷ್ಟು ವಿಶಾಲವಾಗಿದೆ. ಇದುವರೆಗೆ ಪ್ರಪಂಚದಲ್ಲಿರುವ ಧಾರ್ಮಿಕ ಭಾವನೆಯನ್ನೆಲ್ಲಾ ಅದರಲ್ಲಿ ಸೇರಿಸಬಹುದು. ಭವಿಷ್ಯದಲ್ಲಿ ಬರುವ ವಿಭಿನ್ನ ಧರ್ಮಗಳಿಗೆಲ್ಲ ಹೀಗೆಯೇ ಸಾವಧಾನದಿಂದ ಕಾಯುವೆವು. ವೇದಾಂತ ತನ್ನ ವಿಶಾಲಬಾಹುಗಳಿಂದ ಇವುಗಳನ್ನೆಲ್ಲಾ ಪ್ರೀತಿಯಿಂದ ಆಲಿಂಗಿಸುವುದು.''

ವೇದಾಂತವು[2] ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ವಿಚಾರವಂತರ ಮನಸ್ಸನ್ನು ಆಕರ್ಷಿಸಿದೆ. ಅವರು ವೇದಾಂತಧರ್ಮದ ತತ್ತ್ವಗಳ ಅನುಷ್ಠಾನಕ್ಕಾಗಿ ಕಾತರರಾಗಿದ್ದಾರೆ ಎಂಬುದನ್ನು ಸುಮಾರು ಎಂಬತ್ತು ವರ್ಷಗಳ ಹಿಂದೆಯೇ ಸ್ವಾಮಿ ವಿವೇಕಾನಂದರು ಸ್ಪಷ್ಟವಾಗಿ ಗ್ರಹಿಸಿಕೊಂಡು ಹೇಳಿರುತ್ತಾರೆ. ಅವರು ಅಂದು ಹೇಳಿದ ಮಾತುಗಳು ಇಂದಿಗೂ ಹೊಸ

---

1. "Our claim is that the Vedanta only can be the Universal Religion, that it is already the existing universal religion in the world because it teaches principles and not persons .."

"...It is inclusive enough, it is broad enough to include all ideals. All the ideals of religion that already exist in the world can be immediately included and we can patiently wait for all the ideals that are to come in the future, to be taken in the same fashion, embraced in the infinite arms of the religion of the Vedanta."

—*Complete Works of S. V.*, Vol. III

2. ವೇದಾಂತ ಎಂದರೆ ಆತ್ಮಜ್ಞಾನದ ಪೂರ್ಣಸಿದ್ಧಿ, ವೇದದ ಅಂತ್ಯಭಾಗ ಅಂದರೆ ಉಪನಿಷತ್ತುಗಳಲ್ಲಿ ಪ್ರತಿಪಾದಿತವಾದ ಜ್ಞಾನ ಎಂದು ತಾತ್ಪರ್ಯ.

ದಾಗಿಯೇ ಇದ್ದು ಪರಿಸ್ಥಿತಿಗೆ ಸರಿಯಾಗಿ ಅನ್ವಯವಾಗುವಂತಿವೆ :[1]

> ಪಾಶ್ಚಾತ್ಯ ದೇಶದ ಚಿಂತನಶೀಲರಿಗೆ ಅವರು ಅತ್ಯಂತ ತೀವ್ರವಾಗಿ ಬಯಸುವ ಅಧ್ಯಾತ್ಮ ಭಾವನೆಗಳು ನಮ್ಮ ಪುರಾತನ ದರ್ಶನಗಳಲ್ಲಿ, ಅದರಲ್ಲೂ ವೇದಾಂತದಲ್ಲಿ ದೊರೆತಿವೆ. ಅದರಲ್ಲಿ ಏನೂ ಆಶ್ಚರ್ಯವಿಲ್ಲ."

ವಿಜ್ಞಾನ ಮತ್ತು ವೇದಾಂತ ಇವುಗಳು ಎಷ್ಟೊಂದು ಪರಸ್ಪರ ಸೌಂದರ್ಯ ಹೊಂದಾಣಿಕೆಯಿಂದ ಕೂಡಿವೆ ಎಂದು ಸ್ವಾಮಿ ವಿವೇಕಾನಂದರು ಹೇಳಿದ ಮಾತುಗಳು ಇಂದಿಗೂ ಅಷ್ಟೇ ಸತ್ಯವಾಗಿರುತ್ತವೆ. ಸ್ವಾಮೀಜಿಯವರು ಹೇಳಿದ ಮಾತುಗಳು ಹೀಗಿವೆ :[2]

> "ಆಧುನಿಕ ಸಿದ್ಧಾಂತಗಳನ್ನು, ವೇದಾಂತಿಗಳನ್ನು ಅಥವಾ ಹಿಂದೂಗಳೆಂದು ಕರೆಯಲ್ಪಡುವವರು ಮಾತ್ರ ತಮ್ಮ ಧರ್ಮಕ್ಕೆ ಅನುಗುಣವಾಗಿ ವಿರೋಧವಿಲ್ಲದೆ ಸ್ವೀಕರಿಸಬಲ್ಲರು. ಆಧುನಿಕ ವಿಜ್ಞಾನವೂ ಕೂಡ ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳದೆ ವೇದಾಂತಸಿದ್ಧಾಂತಗಳ ಮೂಲಕ ಆಧ್ಯಾತ್ಮವನ್ನು ಒಪ್ಪಿಕೊಳ್ಳಲು ಸಾಧ್ಯ. ನಮಗೆ ಮತ್ತು ಯಾರು ವಿಚಾರವಂತಿಗಳೋ ಅವರಿಗೂ ವೇದಾಂತ ಹಲವು ಸಹಸ್ರ ವರುಷಗಳ ಹಿಂದೆ ಯಾವ ಸಿದ್ಧಾಂತವನ್ನು ಸಾರಿತೋ ಅದನ್ನೇ ಈಗ ಆಧುನಿಕ ವಿಜ್ಞಾನ ಸಾರುತ್ತಿದೆ. ಆಧುನಿಕ ವಿಜ್ಞಾನ ವೈಜ್ಞಾನಿಕ ಪರಿಭಾಷೆಯ ಮೂಲಕ ಇದನ್ನು ವಿವರಿಸುವುದು.
>
> "ವರ್ತಮಾನ ಪಾಶ್ಚಾತ್ಯ ಜನಾಂಗಕ್ಕೆ ಮೆಚ್ಚುಗೆಯಾಗುವಂತಹ ಮತ್ತೊಂದು ವೇದಾಂತದ ಅಪೂರ್ವ ವಿಷಯವೇ. ಇದು ಅದ್ಭುತ ಯುಕ್ತಿಯುಕ್ತವಾಗಿರುವುದು. ಅವು ವೈಜ್ಞಾನಿಕವಾಗಿವೆ. ಇಂದು ಬರುತ್ತಿರುವ ಆಧುನಿಕ ವಿಜ್ಞಾನದ ನಿರ್ಣಯಗಳ ಮನೋಧರ್ಮಕ್ಕೆ ಸಮಂಜಸವಾಗಿದೆ.

ಈ ವೈಜ್ಞಾನಿಕ ಯುಗದಲ್ಲಿ ಎಂತಹ ಧರ್ಮ ಜಗತ್ತಿಗೆ ಹಿತಕಾರಿ ಆದೀತು ಎಂಬುದರ ಬಗ್ಗೆ ಈ ಕಾಲದ ದಾರ್ಶನಿಕ, ತತ್ತ್ವಜ್ಞಾನಿ ಡಾ. ರಾಧಾಕೃಷ್ಣನ್‌ರವರು ಚಿತ್ರಿಸಿರುವ ವಿವರಗಳು ಮತ್ತಷ್ಟು ಬೆಳಕನ್ನು ಚೆಲ್ಲುತ್ತವೆ :[3]

---

1. "The thoughtful men of the West find in our ancient Philosophy, especially in the Vedanta, the impulse of thought they are seeking, the very spiritual food and drink for which they are hungering and thirsting. And it is no wonder that this is so." —*Complete Works of S. V.*, Vol. III

2. "It seems clear that the conclusions of modern materialistic science can be acceptable, harmoniously with their religion, only to the Vedantists or to Hindus as they are called. It seems clear that modern materialism can hold its own at the same time approach spirituality by taking up the conclusions of Vedanta. It seems to us and to all who care to know that the conclusions of modern science are the very conclusions the Vedanta reached ages ago ; only in modern science they are written in the language of matter. This is another claim of the Vedanta upon modern western minds, its rationality, the wonderful rationalism of the Vedanta .. They are so scientific, they so exactly hormonise with the aspirations of the age and with the conclusion to which modern science is coming at the present time." —*Complete Works of S. V.*, Vol. III

3. "A religion...distinctive, universally valid sufficient and authoritative one that has an understanding of the fresh sense of truth and the awakened social passion...which does not mock the free spirit of man by arbitrary dogmas or hesitating negations, a new vision of God in whose name we can launch a crusade against the strange cults which are now competing for mastery over the souls of men," —*Recovery of Faith*

"ಯಾವ ಮತವು ವೈಶಿಷ್ಟ್ಯಪೂರ್ಣವಾದದ್ದೋ ಸರ್ವತ್ರ ಸಮಂಜಸವೋ ತೃಪ್ತಿಕರವೋ ಪ್ರಮಾಣಪೂರ್ವಕವೋ, ಸತ್ಯದ ನವ್ಯಪ್ರಜ್ಞೆಯೊಂದನ್ನು ನೀಡುವುದೋ, ಜಾಗ್ರತವಾದ, ಸಾಮಾಜಿಕ ಹಿತದ ಅರಿವನ್ನು ಉಂಟುಮಾಡುವುದೋ ಅಂತಹ ಮತ ನಮಗೆ ಬೇಕು. ಅದು ವಿಚಾರಕ್ಕೆಡೆಕೊಡದ, ಮಾನವ ಇಚ್ಛಾಸ್ವಾತಂತ್ರ್ಯವನ್ನು ಅಲ್ಲಗಳೆಯುವ ನಂಬಿಕೆ ಆಗ ಬಾರದು. ಬರೀ ಅನಿಶ್ಚಿತ ನಕಾರವಾಗಬಾರದು. ಅದೊಂದು ನವೀನ ದಿವ್ಯದರ್ಶನವಾಗಿರ ಬೇಕು. ಇಂದು ಅದರ ಹೆಸರಿನಲ್ಲಿ ಜೀವನದ ಮೇಲ್ಮೆಯನ್ನು ಬಯಸುತ್ತಿರುವ ಮನಸ್ಸಿನ ಮೇಲೆ ಆಧಿಪತ್ಯ ಸ್ಥಾಪಿಸಲು ಹೋರಾಟ ನಡೆಸುತ್ತಿರುವ ವಿಚಿತ್ರ ಪಂಥಗಳನ್ನು ಎದುರಿಸ ಬೇಕು. ಅವುಗಳೊಡನೆ ಹೋರಾಡಬೇಕು." —ಮತಧರ್ಮದ ಪುನರುಜ್ಜೀವನ

ಈ ಹಿಂದೆ ವಿವರಿಸಿದ ರೀತಿಯಲ್ಲಿ ಸನಾತನ ಹಿಂದೂವೇದಾಂತಧರ್ಮವು ಈ ಜಗತ್ತಿನಲ್ಲಿ ಇಂದಿನ ಕಾಲಘಟ್ಟದಲ್ಲಿ ಪ್ರಭಾವಯುತವಾಗಿ ತನ್ನ ಪಾತ್ರವನ್ನು ವಹಿಸಿ ಜಗತ್ತಿನ ಕಲ್ಯಾಣಕ್ಕೆ ಕಾರಣವಾಗಬಹುದು ಎಂದು ಸ್ಪಷ್ಟವಾಗಿ ತಿಳಿದಂತಾಯಿತು. ಇನ್ನೀಗ ಪ್ರಾಯೋಗಿಕವಾಗಿ ವೇದಾಂತವು ಹೇಗೆ ತನ್ನ ಪಾತ್ರವನ್ನು ವಹಿಸಬಲ್ಲುದು, ಅದರ ವ್ಯಾಪ್ತಿ, ವಿವರಗಳೇನು ಎಂಬುದನ್ನು ಸಂಗ್ರಹವಾಗಿ ತಿಳಿಯಹೊರಡೋಣ :

(೧) 'ಏಕಂ ಸತ್ ವಿಪ್ರಾ ಬಹುಧಾ ವದಂತಿ'—ಇರುವುದು ಒಂದೇ ಸತ್ಯ, ಅದನ್ನು ಜ್ಞಾನಿಗಳು ಬಹುವಿಧವಾದ ಹೆಸರುಗಳಿಂದ ಕರೆಯುತ್ತಾರೆ ಎಂಬುದಾಗಿ ಘೋಷಿಸಿರುವ ಸನಾತನ ಹಿಂದೂವೇದಾಂತಧರ್ಮವು ಜಗತ್ತಿನ ಯಾವ ಮತಧರ್ಮವನ್ನೂ ಉಪೇಕ್ಷಿಸದೆ ಅವುಗಳೆಲ್ಲವನ್ನೂ ಪ್ರೀತಿಯಿಂದ, ಸಹಕಾರಬುದ್ಧಿಯಿಂದ ಕಾಣುತ್ತದೆ. ಜಗತ್ತಿನಲ್ಲಿರುವ ವಿವಿಧ ಮತಗಳು ಒಬ್ಬನೇ ದೇವರನ್ನು ಸೇರಲು ವಿವಿಧ ಪಥಗಳು. ಆ ಪಥಗಳು ಬೇರೆಯಾದಮಾತ್ರಕ್ಕೆ ದೇವರು ಬೇರೆ ಅಲ್ಲ ಎಂದು ವೇದಾಂತವು ಹೇಳಿ ಭೇದದ ಬದಲು ಮೈತ್ರಿಯನ್ನು ತುಂಬುತ್ತದೆ. ಇದನ್ನು ಗೀತೆಯಲ್ಲಿ ಹೀಗೆ ಘೋಷಿಸಲಾಗಿದೆ :

**ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥**

"ಯಾರು ಹೇಗೆ ನನ್ನನ್ನು ಆಶ್ರಯಿಸುತ್ತಾರೋ, ಅವರನ್ನು ಹಾಗೆಯೇ ನಾನು ಅನುಗ್ರಹಿಸುತ್ತೇನೆ. ಮನುಷ್ಯರು ಸರ್ವಪ್ರಕಾರಗಳಿಂದಲೂ ನನ್ನ ಪಥವನ್ನೇ ಅನುಸರಿಸುತ್ತಾರೆ."

ಮಾತ್ರವಲ್ಲ, ವೇದಾಂತವು ಅವರವರ ಮತವನ್ನು ಬದಲಿಸಲಾಗಲಿ, ಬದಲಿಸದೆ ಇದ್ದರೆ ಮುಕ್ತಿ ಇಲ್ಲವೆಂದಾಗಲಿ ಹೇಳದೆ ಅವರವರು ಅವರವರ ಮತದ ಮೂಲಕ ಭಗವಂತನ ಮಂದಿರವನ್ನು ಸೇರಲು ಉತ್ಸಾಹ, ಪ್ರೋತ್ಸಾಹಗಳನ್ನು ನೀಡುತ್ತದೆ.

ಈ ಬಗ್ಗೆ ಗೀತೆಯ ಶ್ಲೋಕವೊಂದು ಹೆಚ್ಚಿನ ಸ್ಪಷ್ಟೀಕರಣವನ್ನು ನೀಡುತ್ತಲಿದ್ದು ಅದರ ವಿವರ ಹೀಗಿದೆ :

ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ ।
ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ॥
ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ ।
ಲಭತೇ ಚ ತತಃ ಕಾಮಾನ್ ಮಯೈವ ವಿಹಿತಾನ್ ಹಿ ತಾನ್ ॥
—ಗೀತಾ, ಅ, ೭, ಶ್ಲೋ. ೨೨

"ಯಾವ ಯಾವ ಭಕ್ತನು ಯಾವ ಯಾವ ರೀತಿಯಲ್ಲಿ ದೇವರನ್ನು ಶ್ರದ್ಧೆಯಿಂದ ಪೂಜಿಸಲು ಇಚ್ಛಿಸುವನೋ ಅವನವನಿಗೆ ಅದೇ ಅಚಲವಾದ ಶ್ರದ್ಧೆಯನ್ನು ನಾನು ಕೊಡುವೆನು."

"ಅವನು ಶ್ರದ್ಧೆಯಿಂದ ಕೂಡಿದವನಾಗಿ ಆಯಾಯಾ ದೇವರ ಸ್ವರೂಪಕಲ್ಪನೆಯನ್ನು ಅನುಸರಿಸಿ ಆರಾಧನೆಯನ್ನು ಮಾಡುತ್ತಾನೆ ಮತ್ತು ಅದರಿಂದ ನನ್ನಿಂದಲೇ ವಿಹಿತವಾದ ಆ ಇಷ್ಟಗಳನ್ನು, ಫಲಗಳನ್ನು ಪಡೆಯುತ್ತಾನೆ."

ಹೀಗೆ ವೇದಾಂತಧರ್ಮವು ಜಗತ್ತಿನಲ್ಲಿ ಮತೀಯಸ್ವಾತಂತ್ರ್ಯ, ಮತೀಯವಾದ ಸೌಹಾರ್ದತೆ, ಸಹಬಾಳ್ವೆ, ಆರಾಧನಾಸ್ವಾತಂತ್ರ್ಯ ಇವುಗಳನ್ನುಂಟುಮಾಡಲು ಸಹಕಾರಿಯಾಗುತ್ತದೆ.

(೨) ಮನುಷ್ಯನು ಪಾಪಿಯಲ್ಲ, ಅವನು ಅಮೃತಪುತ್ರ, ಆತ್ಮಸ್ವರೂಪಿಯಾಗಿದ್ದು ಸೂಕ್ತವಾದ ಸಾಧನೆಯ ಮೂಲಕ ಮುಕ್ತಿಯನ್ನು ಪಡೆದು ಶಾಶ್ವತವಾದ ಆನಂದವನ್ನು ಅನುಭವಿಸಲು ಅರ್ಹನಾಗಿರುತ್ತಾನೆ ಎಂದು ವೇದಾಂತವು ಮನುಷ್ಯನಿಗೆ ಅಭಯ–ಆಶ್ವಾಸನೆಗಳನ್ನು ನೀಡುತ್ತದೆ. ಈ ಜಗತ್ತಿನಲ್ಲಿ ಜನ್ಮತಳೆದ ಮಾನವನಿಗೆ ಬೇಕಾಗಿರುವುದು ಆತ್ಮವಿಶ್ವಾಸ ಮತ್ತು ಅಭಯ. ವೇದಾಂತವು ಮನುಷ್ಯನಿಗೆ ಇವೆರಡನ್ನೂ ನೀಡುತ್ತದೆ. ಇದರಿಂದ ವ್ಯಕ್ತಿಗಳಲ್ಲಿ, ವ್ಯಷ್ಟಿ ಮತ್ತು ಸಮಷ್ಟಿಜೀವನದಲ್ಲಿ ಆತ್ಮವಿಶ್ವಾಸವು ಹೆಚ್ಚಿ ಮಾನವೀಯ ಮೌಲ್ಯದ ವರ್ಧನೆಯಾಗುತ್ತದೆ. ಜೀವನ ಎಂದರೆ ಭೌತಿಕ ಸುಖಸಿದ್ಧಿ ಮಾತ್ರವಲ್ಲ ; ಪರಮಹಂತವಾಗಿ, ಆಧ್ಯಾತ್ಮಿಕವಾಗಿ, ಆತ್ಮಸಾಕ್ಷಾತ್ಕಾರದ ಸುಖ ಎಂಬುವ ನಂಬಿಕೆ ಹಾಗೂ ದೃಷ್ಟಿ ನೆಲೆಗೊಳ್ಳುತ್ತದೆ.

ಮಾನವನು ಅಮೃತಪುತ್ರ ಎಂದು ವೇದಾಂತವು ಹೀಗೆ ಘೋಷಿಸಿರುತ್ತದೆ :

ಶೃಣ್ವಂತು ವಿಶ್ವೇ ಅಮೃತಸ್ಯ ಪುತ್ರಾಃ ।
ಆಯೇ ಧಾಮಾನಿ ದಿವ್ಯಾನಿ ತಸ್ಥುಃ ॥
—ಶ್ವೇತಾಶ್ವತರ ಉಪನಿಷತ್, ೨-೫

"...ಯಾರು ದಿವ್ಯಧಾಮಗಳಲ್ಲಿ ಆಳುತ್ತಿರುವರೋ ಆ ಅಮೃತದ ಪುತ್ರರೆಲ್ಲರೂ ಕೇಳಲಿ !"

ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ ಸತ್ಯಂ ಸ ಆತ್ಮಾ
ತತ್ತ್ವಮಸಿ ಶ್ವೇತಕೇತೋ ॥ —ಛಾಂದೋಗ್ಯ ಉಪನಿಷತ್, ೬-೮-೭

"ಯಾವುದು ಸೂಕ್ಷ್ಮತಮವಾದ ಈ ಜಗನ್ಮೂಲವೋ ಅದರಿಂದಲೇ ಈ ಜಗತ್ತು ಎಲ್ಲವೂ ಆತ್ಮವಂತವಾಗಿದೆ. ಅದು ಸತ್ಯವು, ಅದು ಆತ್ಮನು. ಶ್ವೇತಕೇತು. ಅದುವೇ ನೀನಾಗಿರುವೆ."

(೩) ಗಂಡುಹೆಣ್ಣುಗಳೆಂಬ ಲಿಂಗಭೇದಗಳನ್ನು ಪಾರಮಾರ್ಥಿಕವಾಗಿ ಎಣಿಸದೆ ಎಲ್ಲರಲ್ಲೂ ಇರುವ ಆತ್ಮ ಒಂದೇ ಆಗಿದ್ದು ಅಧ್ಯಾತ್ಮದೃಷ್ಟಿಯಿಂದ ಸ್ತ್ರೀಯು ಪುರುಷನಷ್ಟೇ ಮಾನ್ಯಳು ಎಂದು ವೇದಾಂತವು ಸಾರುತ್ತದೆ :

> ನೈವ ಸ್ತ್ರೀ ನ ಪುಮಾನೇಷ ಚೈವಾಯಂ ನಪುಂಸಕಃ ।
> ಯದ್ಯಚ್ಛರೀರಮಾಧತ್ತೇ ತೇನ ಸ ಯುಜ್ಯತೇ ॥
>
> —ಶ್ವೇತಾಶ್ವತರೋಪನಿಷತ್, ೫-೧೦

"ಇವನು ಸ್ತ್ರೀಯಲ್ಲ, ಪುರುಷನಲ್ಲ, ನಪುಂಸಕನೂ ಅಲ್ಲ. ಯಾವ ಯಾವ ಶರೀರವನ್ನು ತೆಗೆದುಕೊಳ್ಳುತ್ತಾನೆಯೋ ಅದರಿಂದ ಕೂಡಿರುತ್ತಾನೆ."

ಇದರಿಂದ ಸ್ತ್ರೀವರ್ಗದ ಅಲಕ್ಷ್ಯೀಕರಣ ಹಾಗೂ ಅವ್ಯವಸ್ಥೆಗೆ ಅವಕಾಶವುಂಟಾಗುವುದಿಲ್ಲ. ಜಗತ್ತಿನ ಜೀವನದಲ್ಲಿ ಸ್ತ್ರೀಪುರುಷರು ಸಮಾನರು ಎಂಬ ಭಾವನೆ ಹೆಚ್ಚಾಗಿ, ಅದರಂತೆ ಜೀವನ ರೂಪುಗೊಳ್ಳುತ್ತದೆ. ವೇದಾಂತವು ಅಧ್ಯಾತ್ಮಪ್ರಪಂಚದಲ್ಲಿ ಸ್ತ್ರೀಯರು ಪುರುಷರಂತೆ ಸಮಾನರು ಎಂಬುದನ್ನು ಸ್ಪಷ್ಟಪಡಿಸಿ ಎಲ್ಲರಿಗೂ ಮುಕ್ತಿಯ ಮಾರ್ಗವನ್ನು ತೋರಿಸಿ ಭರವಸೆ-ಆಶ್ರಯಗಳನ್ನು ನೀಡುತ್ತದೆ.

(೪) ಅವರವರ ಸ್ವಭಾವಕ್ಕೆ ಅನುಗುಣವಾಗಿ ಉಪಾಸನಾಸ್ವಾತಂತ್ರ್ಯವನ್ನು ನೀಡುತ್ತದೆ. ಅಲ್ಲದೆ ಉಪಾಸನಾಮಾರ್ಗಗಳನ್ನೂ ಹೇಳುತ್ತದೆ. ಇರುವುದು ಒಂದೇ ಸತ್ಯವಾಗಿದ್ದು ಅದು ಅನೇಕವಾದ ರೀತಿಯಲ್ಲಿ ಕರೆಯಲ್ಪಡುತ್ತದೆ. ಇರುವ ಒಬ್ಬನೇ ದೇವರನ್ನು ಜ್ಞಾನಿಗಳು, ಕರ್ಮನಿಷ್ಠರು ಇತ್ಯಾದಿಯವರು ಹಲವು ವಿಧದಲ್ಲಿ ಕಲ್ಪಿಸುತ್ತಾರೆ, ಆರಾಧಿಸುತ್ತಾರೆ. ಹಾಗೆಯೇ ಸತ್ಯದ ಸಾಕ್ಷಾತ್ಕಾರಕ್ಕೆ ಹಲವು ಪಥಗಳಿವೆ ಎಂದು ಹೇಳುವ ವೇದಾಂತ, ಜನರ ಸ್ವಭಾವಕ್ಕೆ ಅನುಗುಣವಾಗಿ ಮುಕ್ತಿಯ ದಾರಿಯನ್ನು ನಿರ್ದೇಶಿಸುತ್ತದೆ. ಯಾವ ಒಂದು ಮಾರ್ಗವನ್ನು ಅನುಸರಿಸಿದರೂ ಮುಕ್ತಿಯು ಲಭ್ಯ, ಸಾಧ್ಯ ಎಂದು ವೇದಾಂತವು ಆಶ್ವಾಸನೆಯನ್ನು ನೀಡುತ್ತದೆ.

ಕೆಲಸದ ಕಡೆಗೇ ಒಲವು ಜಾಸ್ತಿಯಾಗಿ ಕರ್ತವ್ಯಗಳನ್ನು ನಿಷ್ಠೆಯಿಂದ ಮಾಡುವವರಿಗೆ ಕೆಲಸದ ಮೂಲಕವೇ ಜೀವನದಲ್ಲಿ ಸುಖ, ಜೀವನದ ಪರಮಗುರಿಯಾದ ಆತ್ಮಸಾಕ್ಷಾತ್ಕಾರ ಸಾಧ್ಯ ಎಂದು ಹೇಳಿ ಇದನ್ನು ಕರ್ಮಯೋಗ ಎಂದು ವೇದಾಂತವು ಕರೆದಿರುತ್ತದೆ.

ಭಾವುಕತೆಯ ಮನೋಧರ್ಮ ಇರುವವರಿಗೆ, ಪ್ರೀತಿಯ ಮೂಲಕ ಜೀವನದ ಕೆಲಸಕಾರ್ಯಗಳನ್ನು ನಿರ್ವಹಿಸುತ್ತಾ ಭಗವಂತನ ನೆಲೆಯನ್ನು ಸೇರಬಹುದು ಎಂದು ಹೇಳಿ ಆ ಮಾರ್ಗವನ್ನು ಭಕ್ತಿಯೋಗ ಎಂದು ಕರೆದಿರುತ್ತದೆ.

ಮನಸ್ಸನ್ನು ಕೇಂದ್ರೀಕರಿಸುವುದರ ಮೂಲಕ, ಮನಶ್ಶಕ್ತಿಯ ಉದಾತ್ತೀಕರಣದ ಮೂಲಕ ದೇವರ ಸಾಕ್ಷಾತ್ಕಾರಪಡೆಯಲು ಸಾಧ್ಯ ಎಂದು ಹೇಳಿ ಅದನ್ನು ರಾಜಯೋಗ ಎಂದು ಕರೆದಿರುತ್ತದೆ.

ಜೀವನವನ್ನು ವೈಜ್ಞಾನಿಕ ದೃಷ್ಟಿಯಿಂದ ನೋಡಿ ಜಗತ್ತಿನಲ್ಲಿ ಯಾವುದು ಸತ್ಯ, ಎಷ್ಟು ಸತ್ಯ ಎಂದು ತರ್ಕ-ವಿಚಾರಗಳಿಂದ ಪರಿಶೀಲನೆ ಮಾಡುತ್ತಾ ಸತ್ಯವನ್ನೇ ಆಧರಿಸಿ ಬಾಳುತ್ತಾ ಕೊನೆಗೆ ಸದ್‌ವಸ್ತುವಿನ ಸಾಕ್ಷಾತ್ಕಾರ ಸಾಧ್ಯ ಎಂದು ಹೇಳಿ ಅದನ್ನು ಜ್ಞಾನಯೋಗ ಎಂದು ಕರೆದಿರುತ್ತದೆ.

ಈ ನಾಲ್ಕು ಆಧ್ಯಾತ್ಮಿಕ ಸಾಧನಾಪಥಗಳು ವ್ಯಕ್ತಿಯ ಸ್ವಭಾವ, ಗುಣಧರ್ಮಗಳನ್ನು ಅನುಸರಿಸಿ ಆಚರಿಸಲು ಅನುಕೂಲವಾಗಿದ್ದು ಕಾಲ, ದೇಶ, ಜನಾಂಗ, ಮತಗಳ ಭೇದಗಳಿಲ್ಲದೆ ಅನುಷ್ಠಾನಕ್ಕೆ ತರಲು ಸಾಧ್ಯವಿರುತ್ತದೆ. ಅನುಸಾರವಾಗಿ ಅದು ಮಾನವನನ್ನು ಮತಭ್ರಾಂತಿ, ಅಂಧವಿಶ್ವಾಸ, ಸಂಕುಚಿತ ಭಾವನೆಯಿಂದ ಉದಾತ್ತ, ವಿಶಾಲ ಹಾಗೂ ಕಲ್ಯಾಣಕರವಾದ ನೆಲೆಗೆ ಕರೆದೊಯ್ಯಬಲ್ಲುದಾಗಿರುತ್ತದೆ. ಮತಸಂಬಂಧವಾದ ಮತ್ತು ಉಪಾಸನಾಸ್ವಾತಂತ್ರ್ಯವು ಒಂದು ಮತಕ್ಕಾಗಲಿ, ಒಂದು ಸಂಸ್ಥೆಗಾಗಲಿ, ಒಂದು ಕೋಮಿನವರಿಗಾಗಿಯಾಗಲಿ, ಸೀಮಿತವಾದರೆ ಅದರಿಂದ ಅನೇಕ ವಿಧದ ತೊಂದರೆಗಳು, ಘರ್ಷಣೆಗಳು ಉಂಟಾಗಿಯೇ ಆಗಿರುತ್ತದೆ. ಉಪಾಸನೆಗೆ ಮತವಾಗಲಿ ಬಾಹ್ಯಸಂಕೇತವಾಗಲಿ ಅಡ್ಡಬರುವಂತಾಗಬಾರದು. ಹಿಂದೂಧರ್ಮದ ಈ ನಾಲ್ಕು ಪಥಗಳನ್ನು ಯಾವ ಮತದವರು ಬೇಕಾದರೂ ತಮ್ಮ ಮತದ ಲಾಂಛನವನ್ನು ಉಳಿಸಿಕೊಂಡೇ ಅನುಸರಿಸಲು ಸಾಧ್ಯವಿದ್ದು ಈ ಪಥಗಳು ವ್ಯಕ್ತಿಯ ಗುಣಧರ್ಮಸ್ವಭಾವವನ್ನು ಅನುಸರಿಸಿಕೊಂಡಿರುವುದಾದ್ದರಿಂದ ಈ ನಾಲ್ಕು ಸಾಧನಾಮಾರ್ಗಗಳು ಲೋಕದ ಕಲ್ಯಾಣಕ್ಕೆ ಪೂರಕವಾಗಿವೆಯೇ ವಿನಾ ಅಶಾಂತಿ, ಅವ್ಯವಸ್ಥೆಗಳಿಗೆ ಅವಕಾಶಗಳಾಗಿರುವುದಿಲ್ಲ. ಮಾನವ, ಅವನ ಜೀವನ ಮತ್ತು ಗುರಿ, ಗುರಿಯ ಸಾಕ್ಷಾತ್ಕಾರ ಮತ್ತು ಸಾಧನಾವಿವರಗಳನ್ನು ವೇದಾಂತತತ್ತ್ವದ ದೃಷ್ಟಿಯಿಂದ ಕ್ರೋಢೀಕರಿಸಿ ಅದು ಎಲ್ಲರಿಗೂ, ಎಲ್ಲಾ ಕಾಲಕ್ಕೂ ಎಷ್ಟು ಸಮರ್ಪಕವಾಗಿ ಅನ್ವಯವಾಗಬಲ್ಲುದು ಎಂಬುದನ್ನು ಸ್ವಾಮಿ ವಿವೇಕಾನಂದರು ಸಂಗ್ರಹವಾಗಿ ಹೇಳಿರುವುದನ್ನು ಇಲ್ಲಿ ಉದಾಹರಿಸುವುದು ಸಂದರ್ಭೋಚಿತವಾಗಿ ಕಾಣುತ್ತದೆ."[1]

> "ಪ್ರತಿ ಜೀವವೂ ಸುಪ್ತದೈವವೇ. ಬಾಹ್ಯ ಮತ್ತು ಆಂತರಿಕ ಪ್ರಕೃತಿಯ ನಿಗ್ರಹದಿಂದ ಈ ಸುಪ್ತದೈವತ್ವವನ್ನು ವಿಕಾಸಗೊಳಿಸುವುದೇ ಮಾನವನ ಗುರಿ. ಕರ್ಮ, ಉಪಾಸನೆ, ಧ್ಯಾನ ಅಥವಾ ಜ್ಞಾನ—ಇವುಗಳಲ್ಲಿ ಒಂದು ಅಥವಾ ಎಲ್ಲಾ ಮಾರ್ಗಗಳನ್ನು ಅನುಸರಿಸಿ ಮುಕ್ತರಾಗುವುದೇ ಧರ್ಮದ ಸರ್ವಸ್ವ. ಮತಗಳು, ಪಂಥಗಳು, ಯಂತ್ರತಂತ್ರಗಳು, ಗ್ರಂಥಗಳು, ಮಂದಿರಗಳು, ವಿಗ್ರಹಗಳು—ಇವೆಲ್ಲವೂ ಗೌಣವಾದ ವಿವರಾಂಶಗಳಾಗಿವೆ."

---

1. "Each soul is potentially divine. The Goal is to manifest this divine within by controlling nature, external and internal.

Do this either by work, or worship, or psycyic control, or philosophy —by one, or more, or all of these and be free.

This is the whole of religion. Doctrines, or dogmas or rituals, or books, or temples or forms, are but secondary details."

—*Complete Works of S. V.*, Vol. I

(೫) ವೇದಾಂತವು ಜೀವನದ ನಿಜವಾದ ಗುರಿಯೇನು ಎಂಬುದನ್ನು ಸ್ಪಷ್ಟಪಡಿಸಿ ಅದರ ಸಾಧನೆಗೆ ಸರಿಯಾದ ಪಥವನ್ನು ಹೇಳಿರುತ್ತದೆ. ಜೀವನದ ಗುರಿ ಇಂದ್ರಿಯಸುಖ ವಷ್ಟೇ ಅಲ್ಲ, ಆತ್ಮಸಾಕ್ಷಾತ್ಕಾರವೇ ಬಾಳಿನ ಪರಮಗುರಿ ಎಂಬುದನ್ನು ಸ್ಪಷ್ಟಪಡಿಸುವ ಈ ವೇದಾಂತ, ಮನುಷ್ಯನು ಈ ಪ್ರಪಂಚದಲ್ಲಿ ಲೌಕಿಕಸುಖದ ಪ್ರಭಾವಕ್ಕೆ ತುತ್ತಾಗಿ ಅಪಾಯಕ್ಕೆ ಈಡಾಗದಂತೆ, ಬಾಳಿನ ಮಹೋನ್ನತಗುರಿಯ ಸಾಧನೆಯಿಂದ ಅವನು ತಪ್ಪದಂತೆ ಎಚ್ಚರಿಸುತ್ತದೆ. ಜಗತ್ತಿನಲ್ಲಿ ಜನ್ಮತಳೆದ ಮಾನವನು ಲೌಕಿಕಸುಖವನ್ನು ಒಂದಲ್ಲ ಒಂದು ರೀತಿಯಲ್ಲಿ ಅನುಭವಿಸದೆ ಗತ್ಯಂತರವಿಲ್ಲ. ಆದರೆ ಅದಕ್ಕೆ ಇತಿಮಿತಿ ಯನ್ನು ತೋರಿಸಿ ಮನುಷ್ಯನ ಗುಣ ಮತ್ತು ಕರ್ಮಗಳ ಆಧಾರದಲ್ಲಿ ನಾಲ್ಕು ವರ್ಣಗಳ ಆಶ್ರಮಧರ್ಮ, ಆಚಾರವಿಚಾರಗಳೂ ಇವುಗಳನ್ನು ಹೇಳಿ ತನ್ಮೂಲಕ ಮನುಷ್ಯನ ಲೌಕಿಕ ಸುಖಲಾಲಸೆಗಳನ್ನು ಉದಾತ್ತೀಕರಿಸಿ ಸಾಂಸಾರಿಕ ಜೀವನದ ಭದ್ರತೆ ಮತ್ತು ಜೀವನದ ಮಹೋನ್ನತಸಾಧನೆಗೆ ಸೂಕ್ತವಾದ ಸಾಧನಾಮಾರ್ಗವನ್ನು ತೋರಿಸುತ್ತದೆ.

ಮಾನವನಿಗೆ ಜೀವನದಲ್ಲಿ ಸುಖ ಬೇಕು ಎಂಬುದು ಎಲ್ಲಾ ಕಡೆಯಿಂದಲೂ ಹೊರ ಹೊಮ್ಮುವ ಒಕ್ಕೊರಲಿನ ಕೂಗಾಗಿದೆ. ಆದರೆ ಆ ಸುಖ ಯಾವುದು ಎಂಬುದರ ಅರಿವು ಸರಿಯಾಗಿ ಇಲ್ಲದಿರುವುದು ಒಂದಂಶವಾದರೆ ನಿಜವಾದ ಸುಖದ ಸಾಧನೆಗಾಗಿ ಸರಿಯಾಗಿ ಶ್ರಮಿಸದಿರುವುದು ಇನ್ನೊಂದು ಅಂಶವಾಗಿದೆ. ವೇದಾಂತಧರ್ಮವು ಜೀವನದಲ್ಲಿ ಭೌತಿಕ ಸುಖ ಎಷ್ಟಿದ್ದರೂ ಅದರಿಂದ ಮಾನವನಿಗೆ ತೃಪ್ತಿಯೇ ಇಲ್ಲ ; ಏಕೆಂದರೆ ಭೌತಿಕ ವಸ್ತು ಗಳೆಲ್ಲವೂ ನಾಶವಾಗತಕ್ಕವುಗಳು. "ಕ್ಷರಂ ಪ್ರಧಾನಮಮೃತಾಕ್ಷರಂ ಹರಃ" (ವಸ್ತುಗಳು ನಾಶವಾಗುವುವು, ಭಗವಂತ ಅಕ್ಷರ). ಭಗವಂತನ ಸಾಕ್ಷಾತ್ಕಾರವಾದಾಗ ಎಲ್ಲಾ ದುಃಖ ಗಳೂ ನಿವೃತ್ತಿಯಾಗಿ ಜನನಮರಣಗಳೆಂಬ ಬಂಧನದಿಂದ ಮಾನವ ಪಾರಾಗುತ್ತಾನೆ ಎಂದು ಘೋಷಿಸಿರುತ್ತದೆ.

**ಜ್ಞಾತ್ವಾ ದೇವಂ ಸರ್ವಪಾಶಾಪಹಾನಿಃ ಕ್ಷೀಣೈಃ**
**ಕ್ಲೇಶೈರ್ಜನ್ಮಮೃತ್ಯುಪ್ರಹಾಣಿಃ ॥** —ಶ್ವೇತಾಶ್ವತರ ಉಪನಿಷತ್, ೧-೧೧

"ದೇವರನ್ನು ಅರಿತುಕೊಂಡಾಗ ಸರ್ವಪಾಶಗಳೂ ನಾಶವಾಗುತ್ತವೆ. ಕ್ಲೇಶಗಳು ಕ್ಷೀಣವಾಗುವುದರ ಮೂಲಕ ಜನನಮರಣಗಳ ನಾಶವು ಆಗುತ್ತದೆ."

ದೇವರು ಎಲ್ಲೋ ಒಂದೆಡೆ ಮಾತ್ರ ಕುಳಿತುಕೊಂಡು ಜಗತ್ತನ್ನು ಆಳುತ್ತಿಲ್ಲ. ಅವನು ಅಂತರ್ಯಾಮಿಯಾಗಿ ಜಗತ್ತನ್ನು ಎಲ್ಲೆಡೆಗಳಲ್ಲೂ ಆವರಿಸಿದ್ದಾನೆ ಎಂದು ವೇದಾಂತವು ಬೋಧಿಸಿ ಜಗತ್ತೆಂದರೆ ಪಾಪಿಗಳ ಗೂಡೆಂದಾಗಲಿ, ಕಷ್ಟದ ಕೋಣೆ ಎಂದಾಗಲಿ ಹೇಳದೆ ಭಗವಂತನ ಸುಂದರ ಕೃತಿ ಎಂದು ಹೇಳಿ, ಜೀವನಕ್ಕೆ, ಜಗತ್ತಿಗೆ, ಪವಿತ್ರತೆ ಮತ್ತು ಮೌಲ್ಯಗಳನ್ನು ನೀಡಿರುತ್ತದೆ.

**ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ ।**
—ಈಶಾವಾಸ್ಯೋಪನಿಷತ್, ೧-೧

"ಈ ಜಗತ್ತಿನಲ್ಲಿರುವ ಎಲ್ಲಾ ಸ್ಥಾವರ-ಜಂಗಮ ವಸ್ತುಗಳೂ ಭಗವಂತನಿಂದ ಆವರಿಸಲ್ಪಟ್ಟಿವೆ."

**ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತ ।**
**ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ ॥**
—ಗೀತಾ, ಅ. ೧೦, ಶ್ಲೋ. ೨೦

"ನಾನು ಸಮಸ್ತ ಪ್ರಾಣಿಗಳ ಹೃದಯದಲ್ಲಿರುವ ಆತ್ಮ. ನಾನೇ ಸಮಸ್ತ ಭೂತಗಳ ಆದಿ, ಮಧ್ಯ ಮತ್ತು ಅಂತ್ಯವಾಗಿರುತ್ತೇನೆ."

**ಈಶ್ವರಃ ಸರ್ವಭೂತಾನಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥**
—ಗೀತಾ, ಅ. ೧೮, ಶ್ಲೋ. ೬೧

"ಸರ್ವಪ್ರಾಣಿಗಳನ್ನು ಯಂತ್ರಾರೂಢವಾದ ಬೊಂಬೆಗಳಂತೆ ಮಾಯೆಯಿಂದ ತಿರುಗಿಸುತ್ತಾ ಈಶ್ವರನು ಸರ್ವಜೀವರ ಹೃದಯಪ್ರದೇಶದಲ್ಲಿ ನೆಲೆಸಿರುತ್ತಾನೆ."

**ಯಃ ಸರ್ವೇಷು ಭೂತೇಷು ತಿಷ್ಠನ್ ಸರ್ವೇಭ್ಯೋ ಭೂತೇಭ್ಯೋಽಂತರಃ, ಯಂ ಸರ್ವಾಣಿ ಭೂತಾನಿ ನ ವಿದುಃ, ಯಸ್ಯ ಸರ್ವಾಣಿ ಭೂತಾನಿ ಶರೀರಂ, ಯಃ ಸರ್ವಾಣಿ, ಭೂತಾನ್ಯಂತರೋ ದಮಯತಿ, ಏಷ ಸ ಆತ್ಮಾಂತರ್ಯಾಮ್ಯಮೃತಃ ॥**
—ಬೃಹದಾರಣ್ಯಕ ಉಪನಿಷತ್, ೩-೭-೧೫

"ಯಾವನು ಸರ್ವಪ್ರಾಣಿಗಳಲ್ಲಿರುವವನಾಗಿ ಸರ್ವಪ್ರಾಣಿಗಳ ಒಳಗಿರುವನೋ, ಯಾವನನ್ನು ಸರ್ವಪ್ರಾಣಿಗಳು ತಿಳಿಯವೋ, ಯಾವನಿಗೆ ಸರ್ವಪ್ರಾಣಿಗಳು ಶರೀರವೋ, ಯಾವನು ಒಳಗಿದ್ದುಕೊಂಡು ಸರ್ವಪ್ರಾಣಿಗಳನ್ನು ನಿಯಮಿಸುವನೋ ಅವನೇ ಅಂತರ್ಯಾಮಿಯು, ನಿನ್ನ ಅಮೃತನಾದ ಆತ್ಮನು."

(೬) ಈ ಲೋಕದ ಜೀವನವನ್ನು ಕಡೆಗಣಿಸಬೇಕೆಂದು ಎಲ್ಲಿಯೂ ಹಿಂದೂಧರ್ಮವು ಹೇಳಿರುವುದಿಲ್ಲ. ಆದರೆ ಲೋಕದ ಸುಖವೇ ಜೀವನದ ಪರಮಗುರಿಯಾಗಬಾರದು. ಸುಖಭೋಗಗಳು ಬೇಕು. ಆದರೆ ಅದು ಧರ್ಮಕ್ಕೆ ವಿರುದ್ಧವಾಗಬಾರದು ಎಂದು ಸ್ಪಷ್ಟವಾಗಿ ಹೇಳುತ್ತದೆ.

**ಧರ್ಮಾವಿರುದ್ಧೋ ಕಾಮೋಽಸ್ಮಿ ಭರತರ್ಷಭ ।**
—ಗೀತಾ, ಅ. ೭, ಶ್ಲೋ. ೧೧

"ಧರ್ಮಕ್ಕೆ ವಿರುದ್ಧವಲ್ಲದ ಕಾಮ ನಾನಾಗಿರುತ್ತೇನೆ."

ಮಾನವನ ಬದುಕಿನ ಗುರಿ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬ ನಾಲ್ಕು ವಿಧದ ಪುರುಷಾರ್ಥಗಳ ಸಾಧನೆ ಎಂದು ಹೇಳಿ ಎಲ್ಲಕ್ಕೂ ಮೂಲಾಧಾರ ಧರ್ಮ ಎಂದು ಘೋಷಿಸಿ ಬಾಳಿನ ಕೊನೆಯ ಹಾಗೂ ಪರಮಗುರಿ ಮೋಕ್ಷ ಎಂದು ಹೇಳಿರುತ್ತದೆ. ಜೀವನದಲ್ಲಿ ತನ್ನ ಸ್ವಭಾವ, ಸ್ವಧರ್ಮಗಳಿಗೆ ಅನುಸಾರವಾಗಿ ತನಗೆ ದೊರೆತ ಸ್ಥಾನಮಾನಗಳಲ್ಲಿ ತನ್ನ ಕರ್ತವ್ಯವನ್ನು ಧರ್ಮಸಮ್ಮತವಾಗಿ, ಸಮನಾಗಿ ನಿರ್ವಹಿಸುವುದರಿಂದ ಮುಕ್ತಿ ನಿಶ್ಚಯವಾಗಿಯೂ ಲಭಿಸುತ್ತದೆ ಎಂದು ವೇದಾಂತವು ಘೋಷಿಸಿರುತ್ತದೆ. ಇದರಿಂದಾಗಿ ಜಗತ್ತಿನಲ್ಲಿ ಮನುಷ್ಯನಿಗೆ ಜೀವನದಲ್ಲಿ ಹೊಸ ಭರವಸೆ, ತೃಪ್ತಿಗಳು ದೊರೆಯುವಂತಾಗುತ್ತದೆ.

(೭) ವೇದಾಂತವು ಜಗತ್ತಿನ ಮಾನವಬಳಗದಲ್ಲಿ ಸಹೋದರತೆಯನ್ನು ಮಾತ್ರ ಉಂಟುಮಾಡುವುದಕ್ಕಿಂತ ಮುಂದೆ ಹೋಗಿ ಏಕೀಭಾವವನ್ನುಂಟುಮಾಡಲು ನೆರವಾಗುತ್ತದೆ. ಲೌಕಿಕವಾಗಿ ವೇದಾಂತದ ಗುರಿ ವಿಶ್ವಸಹೋದರತೆಯಾದರೆ ಆಧ್ಯಾತ್ಮಿಕವಾಗಿ ವಿಶ್ವ ಏಕತೆಯೇ ಜೀವನದ ಪರಮಗುರಿ ಎಂದು ಹೇಳುತ್ತದೆ.

ಜಗತ್ತೆಲ್ಲವೂ ಪರಮಾತ್ಮನಿಂದ ಆವೃತವಾಗಿದ್ದು ಚರಾಚರವಸ್ತುಗಳಲ್ಲಿ ಪರಮಾತ್ಮ ಇರುವಾಗ ಕಾಣುವ ಈ ನಾಮರೂಪಗಳ ಹಿನ್ನಲೆಯಲ್ಲಿ ಪರಮಾತ್ಮನ ಏಕತೆ ಇದೆ. ಇದನ್ನೇ ಗೀತೆಯಲ್ಲಿ ಹೀಗೆ ಸ್ಪಷ್ಟಪಡಿಸಲಾಗಿದೆ :

**ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥**
**ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥**

—ಗೀತಾ, ಅ. ೭, ಶ್ಲೋ. ೬, ೭

"ಸರ್ವಭೂತಗಳೂ ನನ್ನ ಪ್ರಕೃತಿದ್ವಯದಿಂದ ಉಂಟಾಗಿದೆಯೆಂದು ತಿಳಿದುಕೊ. ಆದುದರಿಂದ ನಾನು ಸಮಸ್ತ ಜಗತ್ತಿನ ಸೃಷ್ಟಿಲಯಗಳಿಗೆ ಕಾರಣನಾಗಿರುವೆನು."

"(ಎಲೈ ಅರ್ಜುನ) ನನಗಿಂತ ಶ್ರೇಷ್ಠತರವಾದ (ವಸ್ತುವು) ಬೇರೆ ಯಾವುದೂ ಇಲ್ಲ. ದಾರದಲ್ಲಿ ಮಣಿಗಳು ಪೋಣಿಸಲ್ಪಟ್ಟ ಹಾಗೆ ಇದೆಲ್ಲವೂ ನನ್ನಲ್ಲಿ ಪೋಣಿಸಲ್ಪಟ್ಟಿವೆ."

**ಸ ವಾ ಅಯಮಾತ್ಮಾ ಸರ್ವೇಷಾಂ ಭೂತಾನಾಮಧಿಪತಿಃ ಸರ್ವೇಷಾಂ**
**ಭೂತಾನಾಂ ರಾಜಾ ತದ್ಯಥಾ ರಥನಾಭೌ ಚ ರಥನೇಮೌ ಚಾರಾಃ ಸರ್ವೇ ।**
**ಸಮರ್ಪಿತಾ ಏವಮೇವಾಸ್ಮಿನ್ನಾತ್ಮನಿ ಸರ್ವಾಣಿ ಭೂತಾನಿ ಸರ್ವೇ ದೇವಾಃ**
**ಸರ್ವೇ ಲೋಕಾಃ ಸರ್ವೇ ಪ್ರಾಣಾಃ ಸರ್ವ ಏವ ಆತ್ಮನಃ ಸಮರ್ಪಿತಾಃ ॥**

—ಬೃಹದಾರಣ್ಯಕೋಪನಿಷತ್, ೨-೫-೧೫

"ಈ ಆತ್ಮನು ಎಲ್ಲ ಪ್ರಾಣಿಗಳಿಗೂ ಅಧಿಪತಿ ಮತ್ತು ಎಲ್ಲ ಪ್ರಾಣಿಗಳಿಗೂ ರಾಜನು. ಹೇಗೆ ಅರೆಕಾಲುಗಳು ಚಕ್ರದ ನಾಭಿಯಲ್ಲಿ ಮತ್ತು ಹೊರವಲಯದಲ್ಲಿ ನಿಲ್ಲಿಸಲ್ಪಟ್ಟಿವೆಯೋ ಹಾಗೆಯೇ ಈ ಆತ್ಮನಲ್ಲಿ ಎಲ್ಲ ಪ್ರಾಣಿಗಳೂ, ಎಲ್ಲ ದೇವತೆಗಳೂ, ಎಲ್ಲ ಲೋಕಗಳೂ, ಎಲ್ಲ ಇಂದ್ರಿಯಗಳೂ, ಎಲ್ಲ ಜೀವಾತ್ಮರೂ ನಿಲ್ಲಿಸಲ್ಪಟ್ಟಿರುವರು."

ಹಾಗಾಗಿ ಒಬ್ಬನು ಇನ್ನೊಬ್ಬನನ್ನು ಏಕೆ ಪ್ರೀತಿಸಬೇಕೆಂದರೆ ತನ್ನಲ್ಲಿರುವ ಅಂತರ್ಯಾಮಿಸತ್ವಕ್ಕೂ ಇತರರಲ್ಲಿರುವ ಅಂತರ್ಯಾಮಿಸತ್ವವಾದ ಪರಮಾತ್ಮನಿಗೂ ಯಾವ ವ್ಯತ್ಯಾಸವೂ ಇಲ್ಲದ್ದರಿಂದ, ಪಾರಮಾರ್ಥಿಕವಾಗಿ ಒಬ್ಬರಿಗೊಬ್ಬರು ಆತ್ಮಸಂಬಂಧವುಳ್ಳವರಾಗಿದ್ದು ಇತರರಿಗೆ ನಾವು ಮಾಡುವ ಸಹಾಯ, ನೀಡುವ ಪ್ರೀತಿ ನಮಗೆ ನಾವೇ ಮಾಡಿದಂತೆಯೇ ಆಗಿರುತ್ತದೆ. ಇತರರಲ್ಲಿ ಪರಮಾತ್ಮನಿದ್ದಾನೆ ಎಂಬುದನ್ನು ಆಧ್ಯಾತ್ಮಿಕ ಸಾಧನೆಯ ಮೂಲಕ ಗ್ರಹಿಸಿದಾಗ ನಮ್ಮ ಹೃದಯ ವಿಕಾಸವಾಗುತ್ತದೆ, ಭಾವನೆ ವಿಶಾಲವಾಗುತ್ತದೆ. ದ್ವೇಷ, ಅಸೂಯೆ ಇತ್ಯಾದಿಗಳಿಗೆ ಅವಕಾಶ ಇಲ್ಲದಂತೆ ಆಗುತ್ತದೆ.

ಮಾನವನಿಗೆ ಭೌತಿಕ ಸುಖ, ಭದ್ರತೆಗಳು ದೊರೆತರೆ ಮಾತ್ರ ಸಾಲದು. ಅನ್ನ, ವಸ್ತ್ರ, ಆಶ್ರಯಗಳ ಸಮಸ್ಯೆ ಬಗೆಹರಿದಮಾತ್ರಕ್ಕೆ ಮಾನವಜೀವನದ ಸಮಸ್ಯೆಗಳೆಲ್ಲಾ

ಮುಗಿದಂತಾಗುವುದಿಲ್ಲ. ಜನ್ಮ–ಮರಣ–ದುಃಖ–ನಷ್ಟಗಳ ಸಮಸ್ಯೆಯು ಬಗೆಹರಿಯ ಬೇಕು. ಇದಕ್ಕೆ ಪರಿಹಾರವು ಆಧ್ಯಾತ್ಮಿಕ ಸಾಧನೆ–ಸಿದ್ಧಿಗಳಾಗಿವೆ. ಆದ್ದರಿಂದ ಅವನಿಗೆ ಆಧ್ಯಾತ್ಮಿಕವಾದ ಸುಖ, ಭರವಸೆಗಳು ಬೇಕು. ವೇದಾಂತವು ಆಧ್ಯಾತ್ಮಿಕವಾದ ಸಮಾನತೆ, ಅದರ ಆಧಾರದಲ್ಲಿ ಸಾಮಾಜಿಕವಾದ ಜೀವನದ ಭದ್ರತೆ, ವ್ಯವಸ್ಥಿತವಾದ ಜೀವನನಿರ್ವಹಣೆಯ ದಾರಿ, ವ್ಯಷ್ಟಿ ಮತ್ತು ಸಮಷ್ಟಿಜೀವನದಲ್ಲಿ ಮನುಷ್ಯರ ಒಳಗೆ ಸಹಬಾಳ್ವೆ, ಸಮಾಧಾನಗಳನ್ನು ಸಾಧಿಸಲು ವಿಧಿನಿಯಮಗಳು—ಇತ್ಯಾದಿಗಳ ಬಗೆಗೆ ಸರಿಯಾದ ಮಾರ್ಗದರ್ಶನವನ್ನು ನೀಡುತ್ತದೆ. ಆದುದರಿಂದ ವೇದಾಂತದಿಂದಾಗಿ ಜಗತ್ತಿನಲ್ಲಿ ರಾಜಕೀಯ, ಸಾಮಾಜಿಕ, ಆಧ್ಯಾತ್ಮಿಕ—ಈ ಮೂರು ದೃಷ್ಟಿಗಳಿಂದಲೂ ಸುಖ, ಶಾಂತಿ, ಭದ್ರತೆಗಳನ್ನು ಸಾಧಿಸಲು ಸಾಧ್ಯವಿದೆ ಎಂಬುದು ಸ್ಪಷ್ಟವೇ ಆಗಿದೆ.

(೮) ವೇದಾಂತವು ವಿಜ್ಞಾನವನ್ನು ಅಧ್ಯಾತ್ಮದಿಂದಲೂ ಅಧ್ಯಾತ್ಮವನ್ನು ವೈಜ್ಞಾನಿಕವಾಗಿಯೂ ವ್ಯವಹರಿಸಲು ಸಾಧ್ಯಮಾಡುತ್ತದೆ. ವೇದಾಂತವೆಂದರೆ ಆತ್ಮವಿದ್ಯಾಶಾಸ್ತ್ರ ಎಂಬುದು ಎಷ್ಟು ಸತ್ಯವೋ, ಜೀವನಧರ್ಮಶಾಸ್ತ್ರವೂ ಅದರಲ್ಲಿ ಅಡಗಿದೆ ಎಂಬುದೂ ಅಷ್ಟೇ ಸತ್ಯ. 'ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್' ಎಂದು ಹೇಳುವ ವೇದಾಂತ ಜಗತ್ತಿನಲ್ಲಿ ಎಲ್ಲೆಲ್ಲೂ ಪ್ರತಿಯೊಂದು ವಿಚಾರದಲ್ಲೂ ಭಗವಂತನನ್ನೇ, ಪರವಸ್ತುವನ್ನೇ ಕಾಣಲು ಹೇಳುತ್ತದೆ. ವಿಜ್ಞಾನದ ಶಕ್ತಿ-ಸಂಶೋಧನೆಗಳು ಏನಿದ್ದರೂ ಅದಕ್ಕಿಂತ ಅವುಗಳನ್ನು ಕಂಡುಹಿಡಿದ ವಿಜ್ಞಾನಿಯು ಮೇಲಾಗಿರುತ್ತಾನೆ. ವಿಜ್ಞಾನಿಗಿಂತ ಮೇಲು ಅವನಲ್ಲಿ ಅಂತರ್ಗತವಾಗಿರುವ ವೈಜ್ಞಾನಿಕ ಪ್ರತಿಭೆ. ಅದಕ್ಕಿಂತ ಹಿರಿದು ಮತ್ತು ಶಾಶ್ವತವಾದುದು ಈ ಪ್ರತಿಭೆಗೆ ಕಾರಣವಾದ ಹಾಗೂ ಅವಿನಾಶಿಯಾದ, ಅಗೋಚರವಾದ ಆತ್ಮಶಕ್ತಿ. ವೈಜ್ಞಾನಿಕ ಶಕ್ತಿ-ಸಂಶೋಧನೆಗಳು, ಬಾಹ್ಯ ಜಗತ್ತಿನ ಕುರಿತಾದ ಸಂಶೋಧನೆಗಳು ಇವುಗಳೆಲ್ಲ ಜಗತ್ತು ಹಾಗೂ ಭಗವಂತನಿಂದ ಹೊರತಾಗಿರುವುದಿಲ್ಲ. ಈ ಅಧ್ಯಾತ್ಮಭಾವವನ್ನು ವಿಜ್ಞಾನಿಯು ಗ್ರಹಿಸಿ ಅದನ್ನು ಅನುಷ್ಠಾನಕ್ಕೆ ತಂದಾಗ ಜಗತ್ತಿನ ಯುದ್ಧ, ಅಶಾಂತಿ, ವಿಜ್ಞಾನದ ಶಕ್ತಿಗಳ ದುರುಪಯೋಗ ಇಲ್ಲದಂತಾಗುತ್ತದೆ. ಕಾಣುವ ಈ ಬಾಹ್ಯಜಗತ್ತೇ ಜಗತ್ತಲ್ಲ. ಆಂತರಿಕವಾದ ಸಂಶೋಧನೆಯಿಂದ ಈ ಜಗತ್ತಿನ ಹಿನ್ನೆಲೆಯಲ್ಲಿರುವ ಶಾಶ್ವತಸತ್ಯದ ಅರಿವು ಆಗುತ್ತದೆ ಎಂಬುದು ವೇದಾಂತದ ಆಶ್ವಾಸನೆಯಾಗಿರುತ್ತದೆ. ಬಾಹ್ಯಪ್ರಪಂಚದ ವಸ್ತುವಿಚಾರಗಳ ಕುರಿತಾದ ಸಂಶೋಧನೆಗೆ ಉಪಯೋಗಿಸಿದ ವೈಜ್ಞಾನಿಕ ದೃಷ್ಟಿಯನ್ನು ಆಂತರ್ಯದ ಪರಿಶೀಲನೆಗೆ ಬಳಸಿದಾಗ ವಿಜ್ಞಾನವು ಆತ್ಮಸಾಕ್ಷಾತ್ಕಾರಕ್ಕೆ ಮಾನವನಿಗೆ ನೆರವಾದಂತಾಗಿ ವಿಜ್ಞಾನ–ಅಧ್ಯಾತ್ಮಗಳ ಒಳಗಿನ ವಿರೋಧಾಭಾಸಗಳು ಅಳಿದು ಅವು ಪರಸ್ಪರ ಪೂರಕ ಎಂದಾಗುತ್ತದೆ.

(೯) ವಿಜ್ಞಾನವು ಯಾವಾಗ ಹಿರೋಷಿಮಾ-ನಾಗಸಾಕಿಗಳಲ್ಲಿ ಸಹಸ್ರಗಟ್ಟಲೆಯಲ್ಲಿ ಜನರನ್ನು, ಆಸ್ತಿಪಾಸ್ತಿಗಳನ್ನು ಸುಟ್ಟು ಭಸ್ಮಮಾಡುವ ಮಟ್ಟಕ್ಕೆ, ಮಾನವಕೋಟಿಯ ಸಂಹಾರಕ ಶಸ್ತ್ರಾಸ್ತ್ರಗಳ ದಾಸ್ತಾನುಮಾಡುವ ಗತಿಗೆ ತಲುಪಿತೋ ಆಗ ಅದು ವಿನಾಶದ ಎಡೆಗೆ ಜಗತ್ತನ್ನು ಕೊಂಡುಹೋಗಹೊರಟಿದೆ ಎಂಬುದು ಸ್ಪಷ್ಟವಾಗುತ್ತದೆ. ಈ ಎಲ್ಲಾ ವಿರುದ್ಧ ಹಾಗೂ ಮಾನವೀಯವಲ್ಲದ ಕೃತ್ಯಗಳು, ಅವುಗಳ ಕುರಿತಾದ ಆಸಕ್ತಿಗಳು

ಇವುಗಳ ಹಿನ್ನೆಲೆಯಲ್ಲಿ ಇರುವುದಾದರೂ ಏನು?—ಅಶುದ್ಧ, ದುಷ್ಟ ಹಾಗೂ ಹತೋಟಿಯಿಲ್ಲದ ಮಾನವನ ಮನಸ್ಸೇ ಆಗಿರುತ್ತದೆ. ಜಗತ್ತು, ಜೀವ, ಪರಮಾತ್ಮ, ಜೀವನ ಇದರ ಬಗ್ಗೆ ಆತ್ಮವಿದ್ಯೆಯ ದೃಷ್ಟಿಯಿಂದ ಜೀವನಧರ್ಮದ ದೃಷ್ಟಿಯಿಂದ ಸರಿಯಾದ ಕಲ್ಪನೆ, ನಿರ್ಧಾರಗಳು ಇಲ್ಲದಿರುವುದೇ ಮಾನವಮಾನವರೊಳಗಿನ ಈ ಸಂಘರ್ಷಣೆ-ಸಂಕುಚಿತ ಭಾವನೆಗಳಿಗೆ ಕಾರಣ. ಮನುಷ್ಯನ ಮನಸ್ಸಿನ ಶುದ್ಧಿಗೆ ಶಿಕ್ಷಣ ನೀಡಿ, ಶುದ್ಧಮನಸ್ಸಿನ ಮೂಲಕ ಶಾಶ್ವತಸತ್ಯದ ಅರಿವನ್ನುಂಟುಮಾಡಿ ಜೀವನಕ್ಕೆ ಹೊಸ ಅರ್ಥ, ಭರವಸೆ, ಮೌಲ್ಯಗಳನ್ನು ವೇದಾಂತವು ನೀಡುತ್ತದೆ.

(೧೦) ಅಂಧವಿಶ್ವಾಸ, ವ್ಯಕ್ತಿಪೂಜೆ, ಗ್ರಂಥವೊಂದರ ಆಧಾರ, ಕೋಮುವಾರು ಭಾವನೆ, ಮತೀಯವಾದ ಏಕಪಕ್ಷವಾದ, ಮತ ಅಧಿಕಾರದ ಚಲಾವಣೆಯ ಧೋರಣೆ ಇವುಗಳು ಯಾವುದನ್ನೂ ಆಧರಿಸಿರದೆ ವೇದಾಂತವು ಸರ್ವತಂತ್ರಸ್ವತಂತ್ರವಾಗಿರುತ್ತದೆ. ಆದುದರಿಂದ ವೇದಾಂತವು ಈ ವೈಜ್ಞಾನಿಕ ಮನೋಭಾವನೆಯಿಂದ ಕೂಡಿರುವ ಆಧುನಿಕ ಯುಗದಲ್ಲಿ ಮಾನವನ ವಿಚಾರಶಕ್ತಿಗೆ, ವಿಜ್ಞಾನದೃಷ್ಟಿಗೆ. ಉಪಯೋಗಸಾಧ್ಯತೆಗೆ ಯುಕ್ತವಾದ ಧರ್ಮವಾಗಿರುತ್ತದೆ. ಯಾವುದನ್ನೂ ಕೂಡ ಪರಿಶೀಲನೆ ಮಾಡದೆ, ತನ್ನಲ್ಲಿ ತಾನು ಅನುಭವಿಸದೆ ಕೊನೆಯ ತೀರ್ಮಾನಕ್ಕೆ ಬರಬಾರದು ಎಂದು ಹೇಳುವ ವೇದಾಂತವು ವಿಜ್ಞಾನದಂತೆಯೇ ಯುಕ್ತಿ, ನ್ಯಾಯಸಮ್ಮತವಾದುದಾಗಿದೆ. ವಿಜ್ಞಾನದ ಗುರಿಯು ಪ್ರಯೋಗಾನುಭವವಾದಂತೆ ವೇದಾಂತದ ಗುರಿಯೂ ಸಾಕ್ಷಾತ್ಕಾರ, ಸ್ವಾನುಭವ ಮತ್ತು ಅನುಭೂತಿಯಾಗಿರುತ್ತದೆ.

ವಿಜ್ಞಾನಕ್ಕೂ ವೇದಾಂತಕ್ಕೂ ತಾರತಮ್ಯವಿಷ್ಟೆ—ವಿಜ್ಞಾನ ಬಾಹ್ಯಜಗತ್ತಿದೆಯೆಂದು ತನ್ನ ಪರಿಶೋಧನೆಗಳಿಂದ ಸ್ಪಷ್ಟಪಡಿಸುತ್ತಾ ಬಾಹ್ಯಜಗತ್ತಿನ ವಸ್ತುವಿಚಾರಗಳ ಕುರಿತಾಗಿ ಅನೇಕ ವಿಧದ ವಿವರಗಳನ್ನು ನೀಡಿರುತ್ತದೆ. ಅದರಂತೆ ವೇದಾಂತವು ಆಂತರಿಕವಾದ ಪರಿಶೋಧನೆಗಳಿಂದ ಜಗತ್ತಿನ ಹಿನ್ನೆಲೆಯಲ್ಲಿರುವ ಅಖಂಡಚೇತನದ ಬಗೆಗೆ ಸ್ಪಷ್ಟವಾದ ವಿವರವನ್ನು ನೀಡಿ, ಇರುವುದು ಒಂದೇ ಸತ್ಯ, ಅದು ಅನಂತವೂ ಅವಿನಾಶಿಯೂ ಆಗಿರುತ್ತದೆ ; ಜಗತ್ತು-ಜೀವ-ಪರವಸ್ತು ಮೂರೂ ಭಗವಂತನಿಂದ ಆವೃತವಾಗಿದ್ದು ಒಂದೇ ಸತ್ಯದ ವಿವಿಧ ಪ್ರಕಾರದ ಪ್ರಕಟಣೆಯಾಗಿದ್ದು ಒಂದಕ್ಕೊಂದು ಸಂಬಂಧವಿರುವುದು ಮಾತ್ರವಲ್ಲದೆ ಏಕನೂ ಅಜನೂ ಅಚಲನೂ ಆದ ಪರಮಾತ್ಮನನ್ನು ಆಧರಿಸಿ ನಿಂತಿರುತ್ತವೆ ಎಂದು ಹೇಳಿರುತ್ತದೆ. ಹೀಗಾಗಿ ವಿಜ್ಞಾನವು ಸತ್ಯಾನ್ವೇಷಣೆಯ ಪ್ರಥಮ ಸೋಪಾನವಾದರೆ ವೇದಾಂತವು ಅದರ ಅಂತಿಮಘಟ್ಟ, ಸಾಕ್ಷಾತ್ಕಾರದ ನೆಲೆ ಎಂದು ಸ್ಪಷ್ಟವಾಗುತ್ತದೆ. ಹೀಗೆ ಜಗತ್ತಿನ ಈ ವೈಚಿತ್ರ್ಯವೈವಿಧ್ಯಗಳು ಹಾಗೂ ಶಕ್ತಿಗಳ ಬಗೆಗೆ ಮಾನವನು ವಿಜ್ಞಾನಿಯಾಗಿ ಕಾರಣವನ್ನು ಹೇಳಬಲ್ಲವನಾದರೆ ಮಾನವನ ಈ ವೈಜ್ಞಾನಿಕ ಸಾಮರ್ಥ್ಯಕ್ಕೆ ಕಾರಣವನ್ನು ವೇದಾಂತವು ಹೇಳುತ್ತಾ ಈ ಜಗತ್ತಿನ ಶಕ್ತಿಯ ಕೇಂದ್ರಬಿಂದು ಮಾನವನಲ್ಲಿದೆ ಎಂದು ಸ್ಪಷ್ಟಪಡಿಸಿದೆ. ಈ ಕೇಂದ್ರಶಕ್ತಿಯನ್ನು ಆತ್ಮ ಎಂದು ವೇದಾಂತವು ಕರೆದು ಆತ್ಮದ ಮೂಲಕ ಜಗತ್ತಿನ ವೈಚಿತ್ರ್ಯವೈವಿಧ್ಯ, ಸುಖದುಃಖಗಳ ಇತಿಮಿತಿಗಳನ್ನು ಅಳೆದು ಕಂಡುಕೊಂಡು, ಮಾನವನು ಆತ್ಮದ ಸಾಕ್ಷಾತ್ಕಾರ ಮಾಡಿಕೊಂಡಾಗ ಎಲ್ಲಾ ಕಷ್ಟಗಳಿಂದಲೂ ಪಾರಾಗುತ್ತಾನೆ ಎಂದು ಘೋಷಿಸಿರುತ್ತದೆ :

ಯದಾತ್ಮತತ್ತ್ವೇನ ತು ಬ್ರಹ್ಮತತ್ತ್ವಂ
ದೀಪೋಪಮೇನೇಹ ಯುಕ್ತಃ ಪ್ರಪಶ್ಯೇತ್
ಅಜಂ ಧ್ರುವಂ ಸರ್ವತತ್ತ್ವೈರ್ವಿಶುದ್ಧಂ
ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ ॥

—ಶ್ವೇತಾಶ್ವತರೋಪನಿಷತ್, ೨-೧೫

"ಜೀವಿಯು ತನ್ನ ಹೃದಯಕಮಲದಲ್ಲಿ ಪ್ರಕಾಶಸ್ವರೂಪನಾದ ಆತ್ಮನಿಂದ ಬ್ರಹ್ಮ ತತ್ತ್ವವನ್ನೂ ಯಾವಾಗ ನೋಡುತ್ತಾನೆಯೋ ಆಗ ಜನ್ಮರಹಿತನೂ ಅಚ್ಯುತಸ್ವರೂಪನೂ ಅವಿದ್ಯೆಯಿಂದ ಮತ್ತು ಕಾರ್ಯಗಳಿಂದ ಅಸ್ಪೃಷ್ಟನೂ ಆದ ದೇವನನ್ನು ಅರಿತುಕೊಂಡು ಸರ್ವಪಾಶಗಳಿಂದಲೂ ಮುಕ್ತನಾಗುತ್ತಾನೆ."

ಜೀವನದ ಪರಮಗುರಿಯು ಆತ್ಮಸಾಕ್ಷಾತ್ಕಾರ ಎಂದೂ, ಅದರ ಸಾಧನೆಗೆ ಹೇಗೆ ಈ ಜಗತ್ತಿನಲ್ಲಿ ಪರಿಣಾಮಕಾರಿಯಾದ ರೀತಿಯಲ್ಲಿ ಜೀವನವನ್ನು ನಿರ್ವಹಿಸಬೇಕೆಂದೂ ಹೇಳಿರುವ ವೇದಾಂತವು ಅದರ ಸಿದ್ಧಾಂತವನ್ನು ವ್ಯಕ್ತಿಗತ ಎಂದು ಹೇಳದೆ ವಿಜ್ಞಾನ ತತ್ತ್ವದ ಆಧಾರವನ್ನು ಹೊಂದಿದೆಯೆಂದೂ ಅದರ ಪ್ರಾಯೋಗಿಕಸಾಧ್ಯತೆಯು ವಿಶ್ವ ವ್ಯಾಪಕವಾದುದು ಎಂದೂ ಹೇಳಿರುತ್ತದೆ.

ಹೀಗೆ ವಿಜ್ಞಾನಯುಗದಲ್ಲಿ ಹಿಂದೂಧರ್ಮವು ತನ್ನ ವಿಶ್ವವ್ಯಾಪಕವಾದ ಪಾತ್ರವನ್ನು ಪರಿಣಾಮಕಾರಿಯಾದ ರೀತಿಯಲ್ಲಿ ನಿರ್ವಹಿಸಬಲ್ಲುದಾಗಿದೆ. ಅನುಸಾರವಾಗಿ ವಿಜ್ಞಾನ ಯುಗದಲ್ಲಿ ಅದರ ಸ್ಥಾನ ಗುರುತರವಾದುದಾಗಿದ್ದು, ಜಗತ್ತಿನ ಆಧ್ಯಾತ್ಮಿಕ ಬಗೆಗೆ, ಆರೋಗ್ಯರಕ್ಷಣೆ-ಪೋಷಣೆ ಬಗೆಗೆ ನೆರವಾಗುವ ಸಾಮರ್ಥ್ಯವನ್ನು ಒಳಗೊಂಡಿರುತ್ತದೆ.

## ೧೭

# ಹಿಂದೂಧರ್ಮದ ಕುರಿತಾದ ಮುಖ್ಯವಾದ ಆಕ್ಷೇಪಗಳು ಮತ್ತು ಸಮಸ್ಯೆಗಳು

ಹಿಂದೂ ಧರ್ಮದ ನಿತ್ಯನೂತನವೂ, ಸತ್ಯಸನಾತನವೂ ಆದ ತತ್ತ್ವಸಂದೇಶಗಳನ್ನು ಸರಿಯಾಗಿ ಗ್ರಹಿಸದೆ ಕೆಲವು ಆಕ್ಷೇಪಗಳನ್ನು ಆಗಿಂದಾಗ್ಗೆ ಹಲವರು ಮಾಡಿರುತ್ತಾರೆ. ಹಿಂದೂಧರ್ಮದ ಕ್ರಮವಾದ ಪರಿಚಯ, ಅಭಿಮಾನಸಂಪನ್ನತೆ, ಗೌರವರಕ್ಷಣೆಯ ದೃಷ್ಟಿಯಿಂದ ಈ ಆಕ್ಷೇಪ ಹಾಗೂ ಸಮಸ್ಯೆಗಳ ಬಗ್ಗೆ ಸರಿಯಾದ ಅರಿವು ಅಗತ್ಯವಿದೆ. ಅದರಂತೆ ಮುಖ್ಯವಾದ ಕೆಲವು ಆಕ್ಷೇಪ ಹಾಗೂ ಸಮಸ್ಯೆಗಳ ಕುರಿತು ಇಲ್ಲಿ ಪ್ರಸ್ತಾವ ಮಾಡಿ ನಿಷ್ಪಕ್ಷಪಾತದೃಷ್ಟಿಯಿಂದ ಸಮಾಧಾನ, ಪರಿಹಾರಗಳನ್ನು ವ್ಯಕ್ತಪಡಿಸುವ ಯತ್ನವನ್ನು ಮಾಡಲಾಗಿದೆ.

ಆಕ್ಷೇಪ (೧) : ಹಿಂದೂಧರ್ಮದ ಅನುಯಾಯಿಗಳಲ್ಲಿ ಹಲವಾರು ಆರಾಧನಾ ವಿಧಾನಗಳೂ, ಒಳಮತೀಯ ಪಂಗಡಗಳೂ ಸೇರಿರುತ್ತವೆ.

ಸಮಾಧಾನ : ಮನುಷ್ಯರಲ್ಲಿ ಬುದ್ಧಿ, ಜೀವನದ ದೃಷ್ಟಿ, ವೃತ್ತಿ, ಗುಣ ಇವುಗಳ ಕುರಿತಾದ ಭೇದವಿರುವುದರಿಂದಲೇ ಒಂದೇ ವೃತ್ತಿಯನ್ನಾಗಲೀ, ಚಿಂತನಾಕ್ರಮವನ್ನಾಗಲೀ, ಆರಾಧನಾವಿಧಿಯನ್ನಾಗಲೀ ಮಾನವರು ಅನುಸರಿಸದೇ ಇರಲು ಕಾರಣವಾಗಿದೆ. ಇದು ಹಿಂದೂಧರ್ಮದ ಅನುಯಾಯಿಗಳಿಗೆ ಸಹಜವಾಗಿ ಅನ್ವಯಿಸುವ ಸತ್ಯಾಂಶವಾಗಿದೆ. ಆಯಾಯ ಮತೀಯವಾದ ತತ್ತ್ವವಿಚಾರದಲ್ಲಿ ಶ್ರದ್ಧೆ, ಆರಾಧನಾ ವಿಧಾನಗಳು, ಅದಕ್ಕೆ ಅನುಗುಣವಾಗಿ ಬಾಳುವ ಜನಸಮೂಹದವರು ಒಂದೊಂದು ಒಳಮತಕ್ಕೆ ಸೇರಿದವರು ಎಂಬುದಾಗಿ ಹಿಂದೂಧರ್ಮದ ವಿಶಾಲಚೌಕಟ್ಟಿನಲ್ಲಿ ಒಳಪಟ್ಟಿರುತ್ತದೆ. ಹಿಂದೂಧರ್ಮ ಎಂಬ ವಿಸ್ತಾರವೂ ಸುಂದರವೂ ಆದ ಮಹಾಸೌಧದಲ್ಲಿ ಈ ಒಳಪಂಥಗಳು ಎಂಬುದು ಕೊಠಡಿಗಳಂತಿವೆಯಷ್ಟೇ ವಿನಾ ಒಂದೊಂದು ಕೊಠಡಿಯೂ ಒಂದೊಂದು ಸೌಧ ಎಂದಾಗಿರುವುದಿಲ್ಲ. ಕಾಣಲು ವಿವಿಧತೆ ಇದ್ದರೂ ಈ ವೈವಿಧ್ಯತೆಯ ಹಿನ್ನೆಲೆಯಲ್ಲಿ ಏಕತೆ ಆಧಾರವಾಗಿ ಇದ್ದೇ ಇದೆ. ಒಬ್ಬನೇ ಭಗವಂತನನ್ನು ವಿವಿಧ ರೀತಿಗಳಿಂದ, ವಿಧವಿಧದ ನಾಮರೂಪದ ಮೂಲಕ ಆರಾಧಿಸಿ ದೇವರ ಕುರಿತಾದ ತಮ್ಮ ತಮ್ಮ

ಇಷ್ಟದೇವರನ್ನು ಹಿಂದುವು ಕಾಣುತ್ತಾ ಧಾರ್ಮಿಕ ಜೀವನವನ್ನು ನಡೆಸುತ್ತಾನೆ. ಹಾಗಾಗಿ ವೃತ್ತಿಪರವಾದ, ಆರಾಧನಾಪರವಾದ, ಒಳಪಂಗಡೀಯವಾದ ಪಂಗಡಗಳಿಂದ ಹಿಂದೂ ಧರ್ಮದ ಮೂಲತತ್ತ್ವಕ್ಕಾಗಲಿ, ಯೋಗ್ಯತೆಗಾಗಲಿ ಯಾವ ತೊಂದರೆ ಹಾಗೂ ವಿರೋಧ ಗಳು ಉಂಟಾಗುವಂತಿಲ್ಲ. ಮನುಷ್ಯರು ಸಾಮಾಜಿಕವಾಗಿ ವೃತ್ತಿಪರವಾದ, ಸಾಂಸ್ಕೃತಿಕ ವಾದ, ರಾಜಕೀಯವಾದ ಹಲವು ರೀತಿಯ ಸಂಘಸಂಸ್ಥೆಗಳನ್ನು ಪಂಗಡಗಳನ್ನು ಕಟ್ಟಿ ಬಾಳುತ್ತಿರುವುದಾದರೂ ಏಕೆ ? ಮಾನವೀಯವಾದ ಗುಣಕರ್ಮ, ಜೀವನದ ದೃಷ್ಟಿಗಳ ವಿವಿಧತೆಯೇ ಅದಕ್ಕೆ ಕಾರಣ. ಅದೇ ಕಾರಣವು ಧಾರ್ಮಿಕ ಜೀವನದಲ್ಲಿ ಏಕತೆಯ ಹಿನ್ನೆಲೆಯೊಡನೆ ಅನೇಕತೆಯನ್ನು ಅಥವಾ ವಿವಿಧತೆಯನ್ನು ಉತ್ಪತ್ತಿಮಾಡಲು ಕಾರಣ ವಾಗಿದ್ದು ಅದು ಸಹಜವೂ ಅನಿವಾರ್ಯವೂ ಆಗಿರುತ್ತದೆ.

ವೃತ್ತಿ, ಆರಾಧನೆಯ ಕ್ರಮ, ಪಂಗಡದಲ್ಲಿ ಬಾಳುವಿಕೆ ಇವುಗಳೆಲ್ಲ ವ್ಯಕ್ತಿಯ ಆಧ್ಯಾ ತ್ಮಿಕ ಮತ್ತು ಸಾಂಸ್ಕೃತಿಕ ವಿಕಾಸಕ್ಕೆ ಸಹಕಾರಿಯಾಗುತ್ತವೆ. ಪ್ರತಿಯೊಬ್ಬ ವ್ಯಕ್ತಿಯೂ ವಿಕಾಸದ ಬೇರೇಬೇರೆ ಹಂತದಲ್ಲಿದ್ದು ಅವನು ಆಯಾಯ ಪಂಗಡಗಳಲ್ಲಿ ಸೇರಿ ಬಾಳು ವುದರಿಂದ ಅವನ ವಿಕಾಸ ಸುಗಮವಾಗುತ್ತದೆ. ನಾವು ನಮ್ಮ ನಮ್ಮ ಕುಟುಂಬ, ಮನೆ ಎಂದು ಸಮಾಜದಲ್ಲಿ ಬೇರೆಬೇರೆಯಾಗಿ ನೆಲೆನಿಂತು ಬಾಳುವುದಾದರೂ ಏಕೆ ? ಎಲ್ಲರೂ ಒಂದೇ ಶಿಬಿರದಲ್ಲಿ ಸೇರಿ ಏಕೆ ಬಾಳಬಾರದು ? ವೈವಿಧ್ಯತೆಯಿಂದ ಕೂಡಿರುವ ಈ ಜಗತ್ತಿನಲ್ಲಿ ನಮ್ಮ ಬದುಕು ವಿವಿಧ ರೀತಿಯ ಅನುಭವ-ವಿಕಾಸದ ಅವಕಾಶಗಳಿಂದ ಕೂಡಿರದಿದ್ದರೆ ಜೀವನ ಸಾಗಲಾರದು, ಗುರಿ ಸೇರಲಾರದು. ಜೀವನದಲ್ಲಿ ವಿಕಾಸಕ್ಕೆ ಎಲ್ಲರಿಗೂ ಅವಕಾಶ ನೀಡಬೇಕು, ಅವಕಾಶ ಬೇಕು ಎಂಬುದರಲ್ಲಿ ಸಮಾನತೆ ಇರಬೇಕು ವಿನಾ ವಿಕಾಸಕ್ಕಾಗಿ ಇರುವ ಅವಕಾಶದ ಸ್ವರೂಪದಲ್ಲಿ ಸಮಾನತೆ ಇರಬಾರದು, ಇರುವ ಅಗತ್ಯವಿಲ್ಲ. ಅದು ಪ್ರಾಯೋಗಿಕವಾಗಿ ಸಾಧ್ಯವೂ ಅಲ್ಲ. ನಾವು ಜಗತ್ತಿನಲ್ಲಿ ವಿವಿಧ ರೀತಿಯ ಮರಗಳನ್ನು ಕಾಣುತ್ತೇವೆ. ಅವುಗಳಲ್ಲಿ ಬೇರೆ ಬೇರೆ ಆಕಾರದ ಎಲೆಗಳನ್ನು ನೋಡುತ್ತೇವೆ. ಎಲ್ಲ ಎಲೆಗಳೂ ಒಂದೇ ಆಕಾರವಿರಬೇಕು, ಎಲ್ಲಾ ಮರಗಳೂ ಒಂದೇ ಜಾತಿಯದಾಗಿರಬೇಕು ಎಂದು ಹೇಳಿದರೆ ಸಾಧ್ಯವಾದೀತೇ ? ಹಾಗೆಯೇ ಲೋಕದಲ್ಲಿ ಒಂದೇ ಜಾತಿ, ಒಂದೇ ಆರಾಧನಾ ಕ್ರಮ, ಒಂದೇ ಪಂಗಡ ಎಂದು ಪರಿವರ್ತನೆಗೊಳ್ಳಲು ಸಾಧ್ಯವೇ ಇಲ್ಲ, ಅದರ ಅಗತ್ಯವೂ ಇಲ್ಲ. ವೈವಿಧ್ಯತೆ ಇಲ್ಲದೆ ಏಕತೆಯುಂಟಾದರೆ ಅದ ರಿಂದ ಮಾನವಬಳಗಕ್ಕೆ ಅಪಾಯ ಉಂಟಾದೀತು. ಈ ಬಗ್ಗೆ ಸ್ವಾಮಿ ವಿವೇಕಾನಂದರು ಹೇಳಿದ ಮಾತುಗಳು ಇಲ್ಲಿ ಸ್ಮರಣೀಯ :

"ನಾನಾತ್ವದಲ್ಲಿ ಏಕತ್ವವು ಪ್ರಪಂಚದ ವ್ಯವಸ್ಥೆಯಾಗಿದೆ. ನಾವೆಲ್ಲರೂ ಮನುಷ್ಯ ರಾದರೂ ಕೂಡ ಪರಸ್ಪರ ವ್ಯತ್ಯಾಸವುಳ್ಳವರಾಗಿದ್ದೇವೆ. ಮನುಷ್ಯರಾಶಿಯ ಅಂಶವೆಂಬ ನೆಲೆಯಲ್ಲಿ ನಾನೂ ನೀವೂ ಒಂದೇ. ಆದರೆ ಶ್ರೀಮಾನ್ ಇಂಥವರು ಎಂಬ ದೃಷ್ಟಿಯಿಂದ ನಾವು ಪರಸ್ಪರ ಬೇರೆ ಪುರುಷ ಎನ್ನುವ ಭಾವದಲ್ಲಿ ನೀವು ಸ್ತ್ರೀಯರಿಂದ ಪ್ರತ್ಯೇಕ ವಾಗಿದ್ದೀರಿ. ಮನುಷ್ಯರೆಂಬ ಭಾವದಲ್ಲಿ ಸ್ತ್ರೀ-ಪುರುಷರು ಒಂದೇ ಪಂಗಡಕ್ಕೆ ಸೇರಿರು ತ್ತಾರೆ. ಮನುಷ್ಯರೆಂಬ ಭಾವದಲ್ಲಿ ನೀವು ಮೃಗಗಳಿಗಿಂತ ಬೇರೆಯಾಗಿರುತ್ತೀರಿ. ಆದರೆ ಪ್ರಾಣಿಭಾವದಲ್ಲಿ ಮೃಗಗಳು, ಸಸ್ಯಗಳು, ಮನುಷ್ಯರು ಎಲ್ಲರೂ ಒಂದೇ. ಸತ್ ಎನ್ನುವ

ಭಾವದಲ್ಲಿ—ಇರುವಿಕೆ ಎನ್ನುವ ಭಾವದಲ್ಲಿ ಇಡೀ ಪ್ರಪಂಚದೊಡನೆ ನೀವು ಒಂದಾಗಿರುತ್ತೀರಿ. ಆ ವಿಶ್ವವ್ಯಾಪಕ ಸತ್ಯವೇ ಈ ಪ್ರಪಂಚದ ಮಹೋನ್ನತ ಐಕ್ಯತೆಯಾಗಿದ್ದು ಅದೇ ಈಶ್ವರ, ಭಗವಂತ. ನಾವೆಲ್ಲಾ ಆ ಈಶ್ವರನಲ್ಲಿ ಒಂದಾಗಿ ಇರುತ್ತೇವೆ. ಹಾಗೆಂದು ದೃಶ್ಯಾವಸ್ಥೆಯಲ್ಲಿ ಈ ನಾನಾರೂಪಭೇದಗಳು ಯಾವಾಗಲೂ ಇರಬೇಕಾದದ್ದೇ. ಹೊರಗೆ ಕಾಣುವ ನಮ್ಮ ಕರ್ಮಗಳಲ್ಲಿಯೂ ಶಕ್ತಿಪ್ರಕಾಶಗಳಲ್ಲಿಯೂ ಈ ವ್ಯತ್ಯಾಸ ಯಾವಾಗಲೂ ಇರಬೇಕಾದದ್ದೆ...ಎಲ್ಲಾ ಮುಖಗಳೂ ಒಂದೇ ರೀತಿ ಇರುವ ಒಂದು ಕಾಲವೂ ಇರಲಾರದು. ಹಾಗೆಯೇ ಸಕಲ ಮಾನವರಿಗೆ ಸ್ವೀಕಾರ್ಯವಾದ ಪುರಾಣಕಥೆಗಳು ಇರಲೂ ಸಾಧ್ಯವಿಲ್ಲ. ಸರ್ವಸಮಾನವಾದ ಆರಾಧನಾಕ್ರಮವೂ ರೂಪುಗೊಂಡು ಇರುವುದು ಅಸಾಧ್ಯ. ಅಂತಹ ಒಂದು ಅವಸ್ಥೆ ಯಾವ ಕಾಲಕ್ಕೂ ಬರಲು ಸಾಧ್ಯವಿಲ್ಲ. ಹಾಗೇನಾದರೂ ಬಂದರೆ ಲೋಕವಿನಾಶವಾದೀತು. ಏಕೆಂದರೆ ವೈವಿಧ್ಯತೆಯೇ ಜೀವನದ ಪ್ರಥಮ ತತ್ತ್ವ. ನಾವು ರೂಪವುಳ್ಳವರಾಗಿರುವುದು ಹೇಗೆ ? ವೈವಿಧ್ಯತೆಯ ನಿಮಿತ್ತದಿಂದ. ಪೂರ್ಣಸಮತ್ವವು ನಮ್ಮನ್ನು ನಾಶಮಾಡೀತು...ನಾವೆಲ್ಲರೂ ಒಂದೇ ರೀತಿ ವಿಚಾರಮಾಡಬೇಕು ಎಂದು ಆಗ್ರಹಮಾಡುವುದು ಬೇಡ. ಹಾಗೆ ಆದರೆ ನಮಗೆ ವಿಚಾರಿಸಲು ಏನೂ ಇರಲಾರದು. ನಾವು ಪ್ರದರ್ಶನಶಾಲೆಯಲ್ಲಿ ಕಾಣುವ ಈಜಿಪ್ಟ್ ದೇಶದ ಸುರಕ್ಷಿತ ಶವಗಳಂತೆ (ಮುಮ್ಮಿಗಳಂತೆ) ಅನ್ಯೋನ್ಯ ನೋಡಿಕೊಂಡು ಸುಮ್ಮನೆ ಚಿಂತಿಸಲು ಏನೂ ಇಲ್ಲದೆ ಇರುವಂತೆ ಆದೀತು. ಈ ವ್ಯತ್ಯಾಸ, ಈ ಭಿನ್ನತೆ, ಈ ಸಮತಾಭಂಗವೇ ನಮ್ಮ ಆಲೋಚನೆಗಳ ಪ್ರಗತಿಯ ಜೀವಾಳವಾಗಿದೆ. ಇದು ಹೀಗೆಯೇ ಇರಬೇಕು."

—ಸ್ವಾಮಿ ವಿವೇಕಾನಂದರ ಕೃತಿಸರ್ವಸ್ವ, ಸಂಪುಟ-೨ (ಇಂಗ್ಲಿಷ್)

ಆಕ್ಷೇಪ (೨) : ಹಿಂದೂಧರ್ಮಕ್ಕೆ ಸೇರಿದವರೊಳಗೆ ಸಹಸ್ರಾರು ಜಾತಿಗಳಿವೆ, ಅವರೊಳಗೆ ಆಚಾರ-ವ್ಯವಹಾರಗಳಲ್ಲಿ ಭೇದವಿದೆ, ಮಾತ್ರವಲ್ಲ, ದ್ವೇಷ-ಅಸೂಯೆಗಳೂ ಇವೆ. ಇದರಿಂದ ಸಾಮಾಜಿಕ ಜೀವನದಲ್ಲಿ ಅಶಾಂತಿ, ಅವ್ಯವಸ್ಥೆ, ಅಪಾಯಗಳು ಎಂದೂ ತಪ್ಪಿದ್ದಲ್ಲ.

ಸಮಾಧಾನ : ಜಗತ್ತಿನ ಯಾವುದೇ ಧರ್ಮವನ್ನು ತೆಗೆದುಕೊಂಡರೂ ಅದರ ಹೆಸರಿನಲ್ಲಿ ಬಾಳುವವರೊಳಗೆ ಅನೇಕ ಒಳಪಂಗಡಗಳು-ಜಾತಿಗಳಿವೆ. ಅದು ಅನಿವಾರ್ಯ. ಈಗಾಗಲೇ ವಿವರಿಸಿದಂತೆ ಜಗತ್ತಿನ ಜೀವನ-ವ್ಯವಹಾರಗಳಲ್ಲಿ ವಿವಿಧತೆಗೆ ಪ್ರಕೃತಿಸಹಜವಾದದ್ದೇ ಸರಿ ಎಂಬಂತಿದೆ. ಹಿಂದೂಧರ್ಮದ ಹೆಸರಿನಲ್ಲಿ ಜೀವಿಸುವವರ ಒಳಗೆ ಒಳಪಂಗಡಗಳು-ಜಾತಿಗಳು ಸಂಖ್ಯೆಯಲ್ಲಿ ಹೆಚ್ಚಿರಬಹುದು. ಆಚಾರ-ವ್ಯವಹಾರಗಳಲ್ಲಿ ಸ್ವಾಭಾವಿಕವಾಗಿ ವ್ಯತ್ಯಾಸಗಳಿರಬಹುದು. ಆದರೆ ಪರಸ್ಪರ ಪಂಗಡದ್ವೇಷ, ಜಾತಿಮತ್ಸರ ಇವುಗಳಿಗೆ ಕಾರಣ ಆಯಾಯ ಪಂಗಡದವರ ಹೃದಯಸಂಸ್ಕಾರದ ಬಡತನವೇ ವಿನಾ ವಿಭಿನ್ನ ಜಾತಿಪದ್ಧತಿಗಳದಲ್ಲ. ಎಲ್ಲರೂ ಮಾನವ ಬಳಗಕ್ಕೆ ಸೇರಿದವರು, ಒಬ್ಬನೇ ದೇವರ ಸೃಷ್ಟಿಗೆ ಸೇರಿದವರು ಎಂಬ ವಿಶಾಲದೃಷ್ಟಿಯಿಂದ ವ್ಯವಹರಿಸದಿರುವುದೇ ಕಾರಣ. ವ್ಯಕ್ತಿಗಳ ರೂಪ, ಉಡುಪುಗಳ ವ್ಯತ್ಯಾಸವನ್ನು ಗಣನೆಗೆ ತೆಗೆದುಕೊಳ್ಳದೆ ನಾವು ಸಮಾಜದಲ್ಲಿ ಪ್ರತಿನಿತ್ಯ ಸಮಾಜದ ಪ್ರಜೆಯಾಗಿ ನಿಶ್ಚಿತ ನೀತಿನಿಯಮಗಳಿಗೆ ಒಳಗಾಗಿ ವ್ಯವಹರಿಸುವಂತೆ ವಿಭಿನ್ನ ಪಂಗಡ, ಜಾತಿಗಳ ಮಂದಿಯೊಡನೆ ನಾವೆಲ್ಲ

ಮೂಲತಃ ಒಂದೇ ಮನುಕುಲದವರು ಎಂಬ ಭಾವನೆಯಿಂದ ಅನೇಕದಲ್ಲಿ ಏಕತೆಯನ್ನು ಕಾಣುತ್ತಾ, ವೈವಿಧ್ಯತೆಯು ಪ್ರಕೃತಿಯ ನಿಯಮವೆಂದು ಅನುಸರಿಸುತ್ತಾ, ಒಡನಾಡಬೇಕಾಗುತ್ತದೆ. ಆಗ ಸಾಮಾಜಿಕ ಅಶಾಂತಿ, ಅವ್ಯವಸ್ಥೆ, ಅಪಾಯಗಳಿಗೆ ಅವಕಾಶ ಉಂಟಾಗುವುದಿಲ್ಲ.

ಇದಕ್ಕೆ ಸಹಾಯಕವಾಗಿ ಸರಕಾರ ಹಾಗೂ ಸಾರ್ವಜನಿಕ ವಲಯಗಳಲ್ಲಿ ಶಿಕ್ಷಣ, ಉದ್ಯೋಗ, ವ್ಯವಹಾರಗಳಿಗೆ ಜಾತಿಯ ಹಾಗೂ ಪಂಗಡದ ಆಧಾರದಿಂದ ಪ್ರವೇಶ, ಅವಕಾಶಗಳು ಎಂಬುದನ್ನು ಪೂರ್ತಿಯಾಗಿ ರದ್ದುಗೊಳಿಸಬೇಕು. ಅದರಿಂದ ಪಂಗಡ ದ್ವೇಷ, ಅಸೂಯೆಗಳಿಗೆ, ಮೇಲು-ಕೀಳೆಂಬ ಭೇದಭಾವನೆ ಹಾಗೂ ಅನ್ಯಾಯದ ವ್ಯವಹಾರಗಳಿಗೆ ಅವಕಾಶವಾಗುವುದಿಲ್ಲ. ವಿಭಿನ್ನಪಂಗಡದವರಲ್ಲಿ ಜೀವನವಿಕಾಸದ ವಿವಿಧ ಹಂತದಲ್ಲಿ ಜನರು ಇದ್ದು ವಿಕಾಸದ ಹಾದಿಯಲ್ಲಿ ಮುಂದುವರಿದವರು ಇನ್ನೂ ಮುಂದುವರಿಯದವರ ಬಗೆಗೆ ಅವರು ಯಾವ ಪಂಗಡ, ಜಾತಿಯವರೇ ಆಗಿದ್ದರೂ, ಪರಸ್ಪರ ಸಹನೆ, ಸಹಾನುಭೂತಿ ಹಾಗೂ ಶುಭಹಾರೈಕೆಗಳ ಮನೋಭಾವನೆಯಿಂದ ವ್ಯವಹರಿಸುವುದು ಪ್ರತಿಯೊಬ್ಬ ಹಿಂದುವಿನ ಶಾಸ್ತ್ರೋಕ್ತ ಕರ್ತವ್ಯವೂ ಹೌದು, ಯೋಗ್ಯತೆಯ ಲಕ್ಷಣವೂ ಹೌದು.

ಜಾತಿಪಂಗಡಗಳಿಂದ ವ್ಯಕ್ತಿಗಳ ಮಾನಸಿಕ, ಬೌದ್ಧಿಕ ಹಾಗೂ ಆರ್ಥಿಕ ವಿಕಾಸಕ್ಕೆ ಅನುಕೂಲವುಂಟಾಗುತ್ತದೆ. ಸಮಾನದೃಷ್ಟಿ, ಗುಣಕರ್ಮಗಳ ಸಮಾನ ಆಸಕ್ತಿ-ಅನುಷ್ಠಾನಗಳು, ಧಾರ್ಮಿಕ ವಿಧಿವಿಚಾರಗಳ ಪಾಲನೆ-ಪೋಷಣೆಗಳು ಇವುಗಳು ವ್ಯಕ್ತಿಗಳನ್ನು ಪಂಗಡದಲ್ಲಿ ಒಂದಾಗಿಸಿ ಜಾತಿಯ ಹೆಸರಿನಲ್ಲಿ ಒಂದಾಗಿ ಬಾಳಲು ಪ್ರೇರೇಪಿಸುತ್ತವೆ. ಜಾತಿ ಬೇರೆಯಾದಮಾತ್ರಕ್ಕೆ ವಿಭಿನ್ನಜಾತಿಯವರು ಪರಸ್ಪರ ದ್ವೇಷ, ಅಸೂಯೆಗಳನ್ನು ಪಡುತ್ತಾ ಒಬ್ಬರಿಗೊಬ್ಬರು ಕಂಟಕಪ್ರಾಯರಾಗಿ ಬಾಳುವ ಅಗತ್ಯವಿರುವುದಿಲ್ಲ. ಜಾತೀಯತೆಯ ದುಷ್ಟವಾದ ಮೇಲು-ಕೀಳೆಂಬ ಭಾವನೆಯನ್ನು, ಅದಕ್ಕೆ ಅನುಗುಣವಾದ ವರ್ತನೆಯನ್ನು ಪ್ರಜ್ಞಾವಂತರೆಲ್ಲರೂ ಖಂಡಿಸಬೇಕು, ಪ್ರತಿಭಟಿಸಬೇಕು. ಆದರೆ ಎಲ್ಲರೂ ಒಂದೇ ಜಾತಿ, ಒಂದೇ ಪಂಗಡ ಎಂದು ಬಾಳಬೇಕು ಎನ್ನುವುದು ಪ್ರಯೋಗಸಾಧ್ಯವಲ್ಲ, ಪ್ರಗತಿದಾಯಕವೂ ಅಲ್ಲ.

ಆಕ್ಷೇಪ (೩) : ಹಿಂದೂಧರ್ಮದಲ್ಲಿ ಅಸ್ಪೃಶ್ಯತೆ ಪರಂಪರೆಯ ಆಚರಣೆ ಎಂಬಂತೆ ಸೇರಿಕೊಂಡಿದೆ. ಆದರಿಂದಾಗಿ ಒಂದು ಪಂಗಡದವರ ಅಭಿವೃದ್ಧಿ ತೀರಾ ಕುಂಠಿವಾದಂತಾಗಿ ಹಿಂದೂಧರ್ಮದ ಪವಿತ್ರ ವಿಶಾಲಭಾವನೆಯ ತತ್ತ್ವಗಳ ಯೋಗ್ಯತೆ ಹಾಗೂ ಆಚರಣೆಗಳ ಬಗ್ಗೆ ಅಡ್ಡಿ ಉಂಟಾಗುತ್ತದೆ.

ಸಮಾಧಾನ : ಅಸ್ಪೃಶ್ಯತೆ ಎನ್ನುವುದು ಸಾಮಾಜಿಕ ನಡವಳಿಕೆಯ ಅಂಶವಷ್ಟೇ ವಿನಾ ಅದು ಹಿಂದೂಧರ್ಮದ ಪಾವನ ಹಾಗೂ ಸನಾತನತತ್ತ್ವಗಳಿಗೆ ಒಳಗಾದ ಸಂಗತಿಯಲ್ಲ. ಹಿಂದೂಧರ್ಮದ ಪವಿತ್ರ ಪ್ರಸ್ಥಾನತ್ರಯ ಆಧಾರಗ್ರಂಥಗಳಲ್ಲಿ ಅಸ್ಪೃಶ್ಯತೆಯ ತತ್ತ್ವ-ಆಚರಣೆಗಳಿಗೆ ಆಧಾರವಾಗಲಿ ಒಪ್ಪಿಗೆಯಾಗಲಿ ಕಂಡುಬರುವುದಿಲ್ಲ. ಹಿಂದೂಧರ್ಮದ ಸನಾತನತತ್ತ್ವಗಳನ್ನು ತಮ್ಮ ಪವಿತ್ರ ಜೀವನದಲ್ಲಿ ಪ್ರಾಯೋಗಿಕವಾಗಿ ಬಾಳಿ ಪ್ರಾತಃಸ್ಮರಣೀಯರೆಂದು ಪ್ರಖ್ಯಾತರಾಗಿರುವ ಮಹಾತ್ಮರ, ಪುಣ್ಯಪುರುಷರ, ಸಾಧು

ಸಂತರ, ಆಚಾರ್ಯ ಸ್ವಾಮಿಗಳ ಜೀವನಸಂದೇಶಗಳಲ್ಲಿ ಅಸ್ಪೃಶ್ಯತೆಯ ಪಾಲನೆ, ಪ್ರೋತ್ಸಾಹಗಳ ಬಗ್ಗೆ ಸಮ್ಮತಿಯಾಗಲಿ, ನಿದರ್ಶನವಾಗಲಿ ಕಂಡುಬರುವುದಿಲ್ಲ. ಸಾಮಾಜಿಕವಾದ ಕೆಲವೊಂದು ವ್ಯವಹಾರ, ನೀತಿನಿಯಮಗಳಿಂದ, ಪರಿಸರದ ಪ್ರಭಾವದಿಂದ ಅಸ್ಪೃಶ್ಯತೆ ಒಂದು ಮಹಾಕಾಹಿಲೆಯಂತೆ ಹಿಂದೂ ಸಮಾಜವನ್ನು ಪ್ರವೇಶಿಸಿ ಬೆಳೆಯಿತು. ಕಾಹಿಲೆ ಕೆಟ್ಟದಿರಬಹುದು, ಅತ್ಯಂತ ಅಪಾಯಕಾರಿಯಾಗಿರಬಹುದು. ಹಾಗೆಂದು ಕಾಹಿಲಸ್ಥನನ್ನು ನಾವು ಕೆಟ್ಟವನೆಂದು ಹೇಳಲು ಸಾಧ್ಯವಿಲ್ಲ. ಒಂದು ಮರದ ಎಲ್ಲ ಹಣ್ಣುಗಳೂ ಚೆನ್ನಾಗಿರದೆ ಕೆಲವು ಕೊಳೆತಿರಬಹುದು. ಮರಕ್ಕೆ ಸ್ವಲ್ಪ ರೋಗವೂ ತಗಲಿರಬಹುದು. ಹಾಗೆಂದು ಮರದ ಯೋಗ್ಯತೆಯನ್ನು ಕೊಳೆತಹಣ್ಣಿನಿಂದ ಅಳೆಯುವುದಾಗಲಿ, ರೋಗಗ್ರಸ್ತ್ಯವಾದಮಾತ್ರಕ್ಕೆ ಮರವೇ ಹಾಳೆಂದು ಪರಿಗಣನೆ ಮಾಡಲಾಗಲಿ ಸಾಧ್ಯವಿಲ್ಲ.

ಅಸ್ಪೃಶ್ಯರು ಸಾಮಾಜಿಕವಾಗಿ ತುಂಬ ಹಿಂದುಳಿದವರು ಎಂಬ ಸತ್ಯದ ಅರಿವು ಸಮಾಜದ ಉನ್ನತವರ್ಗದವರಲ್ಲಿ ಪ್ರಾಮಾಣಿಕವಾಗಿ ಮೂಡಬೇಕು. ಅಸ್ಪೃಶ್ಯರು ಶುದ್ಧವಾದ ವಸತಿ, ಉಡುಪು, ಆಹಾರವಿಹಾರಗಳ ಮಟ್ಟಿಗೆ ಕ್ರಮವಾಗಿ ವ್ಯವಹಾರ ಮಾಡುವಂತೆ ಸಮಾಜದ ಉನ್ನತವರ್ಗದವರು ಪ್ರೇರಣೆ, ಪ್ರೋತ್ಸಾಹ, ಮಾರ್ಗದರ್ಶನಗಳನ್ನು ನೀಡಲು ಮುಂದಾಗಬೇಕು. ಆಯಾಯ ಗ್ರಾಮ, ಊರುಗಳಲ್ಲಿ, ನಗರದ ವಿಭಾಗಗಳಲ್ಲಿ ಇರುವ ಅಸ್ಪೃಶ್ಯರನ್ನು ಶುದ್ಧೀಕರಿಸಲು ಅಲ್ಲಲ್ಲಿನ ಉನ್ನತವರ್ಗದವರು ನಿಶ್ಚಿತ ಯೋಜನೆಯೊಡನೆ ಕಾರ್ಯತತ್ಪರರಾಗಿ ಸಾಮಾಜಿಕ ಅಸಮಾನತೆಗಳನ್ನು ಹೋಗಲಾಡಿಸಲು ಯತ್ನಶೀಲರಾಗಬೇಕು. ಅಸ್ಪೃಶ್ಯರೆಂದು ಪರಿಗಣಿಸಲ್ಪಟ್ಟವರಿಗೆ ಮೊದಲು ವಿದ್ಯೆ, ಶುದ್ಧವಾದ ವಸತಿ–ಉಡುಪು, ಆಹಾರವಿಹಾರಗಳನ್ನು ಅನುಭವಿಸುವ ಬಗ್ಗೆ ಯೋಗ್ಯ ಶಿಕ್ಷಣ ದೊರಕುವಂತಾಗಬೇಕು. ಈ ದಿಸೆಯಲ್ಲಿ ಪರಿಣಾಮಕಾರಿಯಾದ ರೀತಿಯಲ್ಲಿ ಉನ್ನತವರ್ಗದವರು ಹಾಗೂ ಸರಕಾರದ ಇಲಾಖೆಗಳ ಸಂಯುಕ್ತ ಪ್ರಯತ್ನದಿಂದ ಕೆಲಸ ನಡೆಯುತ್ತಾಬಂದಂತೆ ಅಸ್ಪೃಶ್ಯರು ಗುಣನಡತೆಗಳಲ್ಲಿ ಪರಿಶುದ್ಧರಾಗುತ್ತಾರೆ. ಅವರಲ್ಲಿ ಆತ್ಮವಿಶ್ವಾಸ ವರ್ಧಿಸುತ್ತದೆ. ಆಗ ಸಮಾಜದಲ್ಲಿ ಎಲ್ಲರೊಡನೆ ಬೆರೆತು ಬಾಳಲು ಸಮರ್ಥರಾಗುತ್ತಾರೆ.

ಅದೆಷ್ಟೋ ಮಂದಿ ಮೂಲತಃ ಹರಿಜನರಾಗಿದ್ದು ತಮ್ಮ ನಿರ್ಮಲ ಹಾಗೂ ಪವಿತ್ರ ಧಾರ್ಮಿಕ ಜೀವನದಿಂದ ಪುಣ್ಯಪುರುಷರಾಗಿ ಬೆಳೆದು ಬೆಳಗಿ ಹಿಂದೂಸಮಾಜದಲ್ಲಿ ಸರ್ವರ ಪಾಲಿಗೆ ಗೌರವಾದರಣೀಯ ಸಾಧುಸಂತ ಮಹಾತ್ಮರು ಆಗಿ ಪ್ರಖ್ಯಾತರಾಗಿರುವುದರ ಬಗೆಗೆ ಹಿಂದೂಧರ್ಮದ ಇತಿಹಾಸದಲ್ಲಿ ಅನೇಕ ನಿದರ್ಶನಗಳು ಲಭಿಸುತ್ತವೆ. ಇದರಿಂದ ಅಸ್ಪೃಶ್ಯತೆಗೆ ಹಿಂದೂಧರ್ಮವು ಕಾರಣವೂ ಅಲ್ಲ—ಮಾತ್ರವಲ್ಲ, ಅದರಲ್ಲಿ ಅಸ್ಪೃಶ್ಯತೆಗೆ ನ್ಯಾಯವಾಗಿ ಸ್ಥಾನವೂ ಇಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಆಕ್ಷೇಪ (೪) : ಅಸ್ಪೃಶ್ಯರು ಅಥವಾ ಹರಿಜನರ ಏಳಿಗೆಗೆ ಸರಕಾರ ಪ್ರಯತ್ನಿಸುತ್ತಿದೆ. ಆದರೆ ಹಿಂದೂಧರ್ಮದವರೆನ್ನುವ ಹಿಂದೂ ಸಮಾಜದ ಉನ್ನತವರ್ಗದವರು ಏನೇನೂ ಸಹಕಾರ ನೀಡುತ್ತಿಲ್ಲ.

ಸಮಾಧಾನ : ಅಸ್ಪೃಶ್ಯರು ಅಥವಾ ಹರಿಜನರ ಕಲ್ಯಾಣಕ್ಕಾಗಿ ಸರಕಾರವು ವಿವಿಧ ರೀತಿಯ ಯೋಜನಾ ಕಾರ್ಯಕ್ರಮಗಳ ಮೂಲಕ ಯತ್ನಿಸುತ್ತಿರುವುದು ಸ್ತುತ್ಯರ್ಹವಾದ

ಸಂಗತಿಯೇ ಸರಿ. ಆದರೆ ಕೆಲವೊಂದು ಸಂದರ್ಭಗಳಲ್ಲಿ, ಕೆಲವು ದೃಷ್ಟಿಗಳಿಂದ ಸರಕಾರದ ಹರಿಜನೋದ್ಧಾರ ಯೋಜನೆಗಳು ಯೋಜಿಸಿದಂತೆ ಫಲಪ್ರದವಾಗುವುದಿಲ್ಲ. ಹರಿಜನರ ಸಮಸ್ಯೆ ಪರಿಹಾರವಾಗುವುದರ ಬದಲು ಸಮಸ್ಯೆ ಇನ್ನಷ್ಟು ಜಟಿಲವಾಗುವುದು ಕಂಡು ಬರುತ್ತಿದೆ. ಹೇಗೆಂದರೆ—

೧. ಹರಿಜನರಿಗೆ ಬೇರೆ ವಸತಿಗಳನ್ನು ಮಾಡಿಕೊಟ್ಟು ಅವರು ಊರಿನ ಹೊರಗೆ ಇಲ್ಲವೇ ಜನಸಮುದಾಯದಿಂದ ಪ್ರತ್ಯೇಕವಾಗಿ ವಾಸಿಸುವಂತೆ ಅವಕಾಶ ಮಾಡಿರುವುದ ರಿಂದ ಅಸ್ಪೃಶ್ಯತೆ ಹಾಗೆಯೇ ಉಳಿಯುವಂತಾಗಿದೆ. ಹರಿಜನರು ಒಂದು ಬೇರೆಯೇ ಜಾತಿ, ಪಂಗಡಗಳಿಗೆ ಸೇರಿದವರು ಎಂಬಂತಾಗಿದೆ.

೨. ಹರಿಜನರಿಗೆ ಸರಕಾರಿ ಉದ್ಯೋಗ ಸಿಗಲು ಶೈಕ್ಷಣಿಕ ಅರ್ಹತೆ ಮಟ್ಟಿಗೆ ತೀರಾ ಕಡಮೆ ಅಂಕಗಳನ್ನು ಗಳಿಸಿದವರು ಅರ್ಹರು ಎಂದು ಸರಕಾರ ಸೌಲಭ್ಯಗಳನ್ನು ನೀಡಿರು ತ್ತದೆ. ಇದರಿಂದಾಗಿ ಹರಿಜನರಿಗೆ ಶಿಕ್ಷಣ-ಉದ್ಯೋಗಕ್ಷೇತ್ರಗಳಲ್ಲಿ ತುಂಬ ಸಮರ್ಥವಾದ ರೀತಿಯಲ್ಲಿ ವಿಕಾಸಹೊಂದಿ ಅರಳಿ ಬೆಳಗಲು ಅವಕಾಶ ತಪ್ಪಿದಂತಾಯಿತು. ಹಾಗೆಯೇ ದೇಶದ ಶಿಕ್ಷಣ ಹಾಗೂ ಆಡಳಿತರಂಗದಲ್ಲಿ ಅಧಿಕಾರಕ್ಕೆ ಬರುವ ಹರಿಜನರು ಸಮರ್ಥ ವಾದ ರೀತಿಯಲ್ಲಿ ವ್ಯವಹರಿಸಲು ಅಸಮರ್ಥರಾಗಲು ಅವಕಾಶವಾಯಿತು.

೩. ಹರಿಜನರೆಂದು ಒಂದು ಬೇರೆ ಪಂಗಡವಾಗಿಯೇ ಅವರನ್ನು ವಿಂಗಡಿಸಿ ಅವರಿಗೆ ಮಾತ್ರ ಸರಕಾರದ ಪತಿಯಿಂದ ವಿವಿಧ ರೀತಿಯ: ಆರ್ಥಿಕ, ಸಾಮಾಜಿಕ, ರಾಜಕೀಯ ಸೌಲಭ್ಯಗಳನ್ನು ಒದಗಿಸಿಕೊಡುವುದರಿಂದ ಹರಿಜನರು ಸರಕಾರದ ಕೃಪಾಪೋಷಿತರು ಎಂದು ಇತರ ಜನಮನದಲ್ಲಿ ಮೂಡಲು ಅವಕಾಶವಾಯಿತು, ಹರಿಜನರಿಗಿಂತಲೂ ಕೀಳು ಇಲ್ಲವೇ ಹರಿಜನರಷ್ಟೇ ಕೆಳಮಟ್ಟದ ಜೀವನಪರಿಸ್ಥಿತಿಯ ಸಮಾಜದ ಇತರ ವರ್ಗದವರು ತಮಗೆ ಸರಕಾರದಿಂದ ಹರಿಜನರಿಗೆ ದೊರೆತಂತಹ ಸೌಲಭ್ಯ ಸಿಗಲಿಲ್ಲ ಎಂದು ಮರುಗಲು ಅವಕಾಶವಾಗಿರುತ್ತದೆ. ಹಾಗೆಯೇ ಹರಿಜನರ ಮೇಲೆ ಅಂತರಾಳದಿಂದ ಒಂದು ರೀತಿಯ ದ್ವೇಷ, ಅಸೂಯೆ, ತಾತ್ಸಾರಭಾವನೆಗಳು ಇತರ ವರ್ಗದವರಲ್ಲಿ ಮೂಡಲು ಆಸ್ಪದ ವಾಗುತ್ತದೆ. ಅಲ್ಲದೆ ಹರಿಜನರ ಮಟ್ಟಿಗೆ ಹೇಳುವುದಾದರೆ ಸರಕಾರದ ಬೆಂಬಲ ತಮಗಿದೆ ಎಂದೂ, ತಮ್ಮ ನಡೆನುಡಿ ವ್ಯವಹಾರಗಳಲ್ಲಿ ಪ್ರಗತಿ ಆದರೂ ಆಗದಿದ್ದರೂ ತಾವೆಲ್ಲ ಸರ್ಕಾರದ ರಕ್ಷಣೆ-ಪ್ರೋತ್ಸಾಹಗಳಿಗೆ ಒಳಗಾದವರೆಂದೂ ಭಾವನೆ ತುಂಬಿ ಅವರಲ್ಲಿ ಪ್ರಗತಿಯ ಬಗ್ಗೆ ಆಸಕ್ತಿ, ಉತ್ಸಾಹದ ದುಡಿಮೆ, ಆತ್ಮಾಭಿಮಾನ ಇವುಗಳು ವೃದ್ಧಿ ಆಗಲು ಅಡ್ಡಿಬರುತ್ತದೆ.

ಇನ್ನೀಗ ಹಿಂದೂಧರ್ಮದವರಾದ ಸವರ್ಣೀಯರು, ಉನ್ನತವರ್ಗದವರು ಹರಿಜನರ ಏಳಿಗೆ ಬಗ್ಗೆ ಸಹಕಾರ ನೀಡುತ್ತಿಲ್ಲ ಎಂಬ ವಿಚಾರವಾಗಿ ಪರ್ಯಾಲೋಚಿಸೋಣ.

ಸಮಾಜದ ಉನ್ನತವರ್ಗದವರು, ಸವರ್ಣೀಯರು ಎನ್ನುವವರಲ್ಲಿ ಮೂಲತಃ ಕೆಳವರ್ಗದವರನ್ನು ಪ್ರೀತಿಸಿ ಪ್ರೋತ್ಸಾಹಿಸಿ ಅವರ ಏಳಿಗೆಗೆ ನೆರವಾಗಬೇಕಾದುದು ತಮ್ಮ ಕರ್ತವ್ಯ ಎಂಬ ಪ್ರಜ್ಞೆ ಇಲ್ಲದಿದ್ದರೆ ಅವರು ಉನ್ನತವರ್ಗದವರು, ಸವರ್ಣೀಯರು ಎಂದು ಕರೆಸಿಕೊಳ್ಳಲು ಹಿಂದೂಧರ್ಮದ ತತ್ತ್ವದಂತೆ ಅರ್ಹರಾಗುವುದಿಲ್ಲ.

ಹರಿಜನರ ಉದ್ಧಾರಕ್ಕೆ ಸರಕಾರದ ಹಾಗೂ ಸವರ್ಣೀಯರ ಪ್ರಾಮಾಣಿಕ ಪ್ರಯತ್ನ

ಅತ್ಯಂತ ಆಗತ್ಯ. ಹರಿಜನರಿಗೆ ಶುದ್ಧ ಜೀವನದ ಬಗ್ಗೆ, ಧಾರ್ಮಿಕ ವಿಚಾರವಾಗಿ ಭಗವಂತನ ಸ್ಮರಣೆ, ಪ್ರಾರ್ಥನೆ, ಆರಾಧನೆಗಳ ಬಗ್ಗೆ ಯುಕ್ತವಾದ ಶಿಕ್ಷಣ ನೀಡುವುದಕ್ಕೆ ಅಲ್ಲಲ್ಲಿ ಸಂಸ್ಕಾರಶಿಬಿರಗಳನ್ನು ಆಗಾಗ್ಗೆ ಸರಕಾರದ ಅಧಿಕಾರಿಗಳು ಹಾಗೂ ಸಮಾಜದ ಮುಖಂಡರು ಸೇರಿ ವ್ಯವಸ್ಥೆ ಮಾಡಬೇಕು. ಈ ಶಿಬಿರಗಳಲ್ಲಿ ಗುರುಪೀಠದ ಮಹಾಸ್ವಾಮಿಗಳೂ, ಧಾರ್ಮಿಕ ವಿದ್ವಾಂಸರೂ, ಸೇವಾಕಾಂಕ್ಷಿಗಳೂ ಸೇರಿ ಹರಿಜನರಿಗೆ ಯಥೋಚಿತ ಶಿಕ್ಷಣ ನೀಡಬೇಕು. ಆಯಾಯ ಕ್ಷೇತ್ರ, ಪರಿಸರಕ್ಕೆ ತಕ್ಕಂತೆ ದೇವಾಲಯಗಳಲ್ಲಿ, ಗುರುಪೀಠಗಳಲ್ಲಿ ಇಂತಹ ಶಿಕ್ಷಣಶಿಬಿರಗಳ, ಸಂಸ್ಕಾರಶಿಬಿರಗಳ ವ್ಯವಸ್ಥೆಯನ್ನು ಮಾಡಬಹುದು. ಆ ಶಿಬಿರಕ್ಕೆ ಮೂಲ ಅನುಗ್ರಹಶಕ್ತಿಯಾಗಿ, ಮಾರ್ಗದರ್ಶಕ ಗುರುವಾಗಿ ಆಗಮಿಸಿದ ಮಹಾಸ್ವಾಮಿಗಳ ಧಾರ್ಮಿಕಪರಂಪರೆಗೆ ಅನುಗುಣವಾಗಿ ಶಿಕ್ಷಣ-ಸಂಸ್ಕಾರಗಳನ್ನು ನೀಡಬಹುದು. ಹಾಗಾಗಿ ಹರಿಜನರು ಸಂಸ್ಕಾರವಂತರಾಗಿ ಶೈವ, ವೈಷ್ಣವ, ಶಾಕ್ತ ಎಂಬಿತ್ಯಾದಿ ಹಿಂದೂಧರ್ಮದ ಯಾವುದೇ ಒಂದು ಪಂಗಡಕ್ಕೆ ಒಳಗಾದರೂ ಆದರಿಂದ ಅವರ ಏಳಿಗೆಗೆ ತೊಂದರೆಯಾಗದು. ಏಕೆಂದರೆ ಅನೇಕರಲ್ಲಿ ಏಕತೆ ಕಾಣಬೇಕಾದುದು ಹಿಂದೂಧರ್ಮದ ತತ್ತ್ವೋಪದೇಶದ ಸಾರ. ಏಕತೆ ಅನೇಕವಾಗಿ ಕಾಣುವುದು, ಅರಳಿ ಬೆಳಗುವುದು ಹಿಂದೂಧರ್ಮದ ವೈಶಿಷ್ಟ್ಯ ಹಾಗೂ ಸೌಂದರ್ಯ. ಹಿಂದೂಧರ್ಮದಲ್ಲಿ ಪಂಥ ಯಾವುದೇ ಇರಲಿ, ಎಲ್ಲರೂ ಹಿಂದೂಬಂಧುಗಳು ಎಂದು ವ್ಯವಹರಿಸುವಂತೆ ಹರಿಜನರಿಗೆ ಸಂಸ್ಕಾರ ನೀಡಿ ಅವರು ಹಿಂದೂಸಮಾಜದ ಒಂದು ಪಂಥಕ್ಕೆ ಸೇರಿದನಂತರ ಹಿಂದೂ ಬಂಧುಗಳೇ ಸರಿ. ಹರಿಜನ ಹಿಂದೂಬಂಧುಗಳು—ಎಂಬ ದೃಷ್ಟಿಯಿಂದ ಎಲ್ಲರೂ ವ್ಯವಹರಿಸಬೇಕಾಗುವುದು ಅಗತ್ಯವಾಗುತ್ತದೆ. ಹಾಗೆಯೇ ಸಂಸ್ಕಾರಶಿಬಿರಕ್ಕೆ ತೆರಳಿಬಂದ ಹರಿಜನರನ್ನು ಮುಂದೆ ಎಂದೂ ಹರಿಜನರೆಂದು ಸಮಾಜದಲ್ಲಿ ಯಾರೂ ಕರೆಯದಿರಬೇಕು. ಬದಲು ಯಾವ ಯಾವ ಪಂಥಕ್ಕೆ ಸೇರಿದರೋ ಆ ಪಂಥದವರೆಂದು ಪರಿಗಣಿತರಾಗಬೇಕು.

ನಡೆನುಡಿ, ಆಚಾರವ್ಯವಹಾರಗಳಲ್ಲಿ ತೀರಾ ಕೆಳಮಟ್ಟದ ಆದರ್ಶ, ಯೋಗ್ಯತೆಗಳಿಂದ ಕೂಡಿ ಬಾಳುವ ಹರಿಜನರನ್ನು ಅವರು ಹರಿಜನರು ಆಗಿದ್ದಾರೆ ಎಂದಮಾತ್ರಕ್ಕೆ ಅವರು ಮಾಡಿದ್ದೆಲ್ಲಾ ಸರಿ, ಅವರು ಹೇಗಿದ್ದರೂ ನಮ್ಮವರು ಎಂದು ಸವರ್ಣೀಯರು ಹರಿಜನರನ್ನು ತಮ್ಮೊಡನೆ ಸಮಾನರಂತೆ ಕೌಟುಂಬಿಕ, ಸಾಮಾಜಿಕ, ಧಾರ್ಮಿಕ ಸಭೆ—ಸಮಾರಂಭ ಒಡನಾಟಗಳ ಸಂದರ್ಭಗಳಲ್ಲಿ ಸೇರಿಸಿಕೊಳ್ಳಬೇಕು ಎನ್ನುವುದು ನ್ಯಾಯಸಮ್ಮತವಾಗುವುದಿಲ್ಲ, ಪ್ರಯೋಗಸಾಧ್ಯವೂ ಅಲ್ಲ, ಸಾಮಾಜಿಕ ಶಾಂತಿಸೌಹಾರ್ದತೆಗಳ ವೃದ್ಧಿದಾಯಕವೂ ಆಗುವುದಿಲ್ಲ. ಪ್ರಗತಿಯ ಪಥದಲ್ಲಿ ಮುನ್ನಡೆಯಲು ಹಿಂದುಳಿದವರಿಗೆಲ್ಲ ಸಮಾನ ಅವಕಾಶವಿರಬೇಕು ಎನ್ನುವುದು ನ್ಯಾಯ. ಅವಕಾಶ ಸಿಗಬೇಕಾದುದು ಅಗತ್ಯ, ಧರ್ಮಸಮ್ಮತ. ಆದರೆ ಪ್ರಗತಿಹೊಂದಲು ಯತ್ನಶೀಲರಾಗದವರು, ಪ್ರಗತಿಹೊಂದದವರು ತಾವು ಹಿಂದುಳಿದವರು ಎಂಬ ಒಂದೇ ಒಂದು ಯೋಗ್ಯತೆಯಿಂದ ಮುಂದುವರಿದವರ ಒಡನೆ ಸಮಾನರಾಗಿ ಸೇರಿ ವ್ಯವಹರಿಸಬೇಕು ಎಂದು ಬಯಸುವುದು ನ್ಯಾಯಸಮ್ಮತವಾಗುವುದಿಲ್ಲ. ಹಾಗಾದರೆ ಪ್ರಗತಿಗೆ, ಪ್ರಗತಿಹೊಂದಿದವರಿಗೆ ಬೆಲೆಯೇ ಇಲ್ಲ ಎಂಬಂತೆ ಆಯಿತು. ಆಗ ಪ್ರಗತಿಹೊಂದಿದವರೂ ಒಂದೇ, ಹೊಂದದವರೂ ಒಂದೇ ಎಂದಾಗು

ತ್ತದೆ. ಅಷ್ಟಾದರೆ ಮತ್ತೆ ಹಿಂದುಳಿದವರ ಏಳಿಗೆಯ ಪ್ರಶ್ನೆಯೇ ಇಲ್ಲವೆಂದಾಗುತ್ತದೆ.

ಆದುದರಿಂದ ಹರಿಜನರಲ್ಲಿ ತಾವು ಪ್ರಗತಿಹೊಂದಬೇಕೆಂಬ ಪ್ರಜ್ಞೆಯನ್ನು ಅವರಲ್ಲಿ ಪ್ರಗತಿಹೊಂದಿದವರು ಮೊದಲು ಮೂಡಿಸಬೇಕು. ಹಾಗೆಯೇ ಹಿಂದೂಸಮಾಜದ ಹಿರಿಯರು ಹರಿಜನರ ಏಳಿಗೆಗಾಗಿ ತಮ್ಮಿಂದಾದ ಎಲ್ಲ ನೆರವು-ಸಹಕಾರಗಳನ್ನು ಸಮಾಜ ಸೇವೆಯೇ ಸರ್ವೇಶ್ವರನ ಸೇವೆ ಎಂಬ ದೃಷ್ಟಿಯಿಂದ ಪ್ರೀತಿ, ಕರ್ತವ್ಯಗಳ ಪ್ರಜ್ಞೆಯೊಡನೆ ಯಥೋಚಿತವಾದ ರೀತಿಯಲ್ಲಿ ನೀಡುವಂತಾಗಬೇಕು. ಈ ದಿಸೆಯಲ್ಲಿ ಇಂದು ನಮ್ಮ ಹಿಂದೂಸಮಾಜದಲ್ಲಿ ಸೂಕ್ತವಾದ ಕಾರ್ಯಕ್ರಮ ಪರಿಣಾಮಕಾರಿಯಾಗಿ ಆಗುತ್ತಿಲ್ಲ ಎಂದರೆ ಅದಕ್ಕೆ ಸಾಕಷ್ಟು ಕಾರಣ ಸರಕಾರ, ಹರಿಜನಸಮೂಹ, ಸವರ್ಣೀಯರು ಇವರೆಲ್ಲರಲ್ಲೂ ಇದ್ದು ಈ ದೋಷದ ನಿವಾರಣೆಗೆ ಮೂರೆಡೆಗಳಿಂದಲೂ ಪ್ರಾಮಾಣಿಕವಾದ, ಧರ್ಮಪ್ರಜ್ಞಾಪೂರ್ಣವಾದ ಸಹಕಾರ, ಪ್ರಯತ್ನ, ಅನುಷ್ಠಾನಗಳು ಕೂಡಿಬರಬೇಕಾಗಿದೆ.

ಆಕ್ಷೇಪ (೫) : ಹರಿಜನರಿಗೆ ಸವರ್ಣೀಯರ ಒಡನೆ ಸಹಪಂಕ್ತಿಭೋಜನ, ದೇವಾಲಯ, ಸಭೆಸಮಾರಂಭಗಳಲ್ಲಿ ಸಮಾನ ಸ್ಥಾನಮಾನಗಳು ಸಿಗುತ್ತಿಲ್ಲ.

ಸಮಾಧಾನ : ದೇವರ ದೃಷ್ಟಿಯಲ್ಲಿ ಹರಿಜನರು—ಸವರ್ಣೀಯರು ಇವರೆಲ್ಲ ಒಂದೇ. ಎಲ್ಲರೂ ಸಮಾನರು. ಹಿಂದೂಧರ್ಮದ ಮೂಲಸಿದ್ಧಾಂತದೃಷ್ಟಿಯಲ್ಲಿ ಎಲ್ಲರೂ ಅಂತರ್ಯದಲ್ಲಿ ದಿವ್ಯಶಕ್ತಿಯನ್ನು ಹೊಂದಿರುವವರು ಎಂಬ ತತ್ತ್ವದಂತೆ ಸಮಾನರೇ ಸರಿ. ಸ್ವಾಮಿ ವಿವೇಕಾನಂದರು ಹೇಳಿರುವಂತೆ ಮನುಷ್ಯರೊಳಗೆ ವ್ಯತ್ಯಾಸವಿರುವುದು "ಈ ದಿವ್ಯತೆಯ ಪ್ರಕಾಶದ ಪ್ರಮಾಣದಲ್ಲಿ." ಜಗದ ಜನಕೋಟಿ ಎಲ್ಲ ಮಾನವ ಬಳಗಕ್ಕೇ ಸೇರಿದವರು. ಹಾಗೆಂದು ಬಡವ-ಶ್ರೀಮಂತ, ವಿದ್ಯಾವಂತ-ಅವಿದ್ಯಾವಂತ, ಅಧಿಕಾರಿ-ಸೇವಕ, ಪರಿಶುದ್ಧ-ಕೊಳಕ ಎಂಬ ಹಲವಾರು ರೀತಿಯ ವ್ಯತ್ಯಾಸಗಳು ವ್ಯವಹಾರದಲ್ಲಿ ಇಲ್ಲವೇ ? ಪ್ರಜಾಪ್ರಭುತ್ವದಲ್ಲಿ ಮತದಾನ ನೀಡಲು ಮತದಾರರೆಲ್ಲರೂ ಸಮಾನಹಕ್ಕಿನವರು. ಅಭ್ಯರ್ಥಿಗಳು ಮತದಾರರ ಮತದಿಂದ ಆಯ್ಕೆಯಾಗಿ ಆಡಳಿತಗದ್ದುಗೆ ಏರಿ ಮಂತ್ರಿಗಳಾಗುತ್ತಾರೆ. ಆಡಳಿತವ್ಯವಸ್ಥೆಯ ಒಡೆಯರಾಗುತ್ತಾರೆ. ಹಾಗೆಂದು ಪಂಚಾಯ್ತಿ ಸದಸ್ಯರು, ತಾಲ್ಲೂಕು ಬೋರ್ಡು ಸದಸ್ಯರು, ಶಾಸನಾಸಭಾಸದಸ್ಯರು, ಲೋಕಸಭಾ ಸದಸ್ಯರು, ರಾಜ್ಯದ ಮಂತ್ರಿಗಳು, ಕೇಂದ್ರದ ಮಂತ್ರಿಗಳು, ರಾಷ್ಟ್ರಾಧ್ಯಕ್ಷರು, ವಿಧಾನ ಸಭಾಧ್ಯಕ್ಷರು, ಪಂಚಾಯ್ತಿ ಅಧ್ಯಕ್ಷರು, ಸಹಕಾರ ಸಂಘದ ಅಧ್ಯಕ್ಷರು ಇವರೆಲ್ಲ ಸಮಾನರು ಎಂದು ಅವರೊಳಗೆ ಅವರವರು ಇಲ್ಲವೆ ಮತದಾರರು ಭಾವಿಸಿ ವ್ಯವಹರಿಸಲು ಸಾಧ್ಯವೆ? ಹಾಗಾಗಿ ಧಾರ್ಮಿಕವಾಗಿಯೇ ಆಗಲಿ, ರಾಜಕೀಯವಾಗಿಯೇ ಆಗಲಿ ಮೂಲಭೂತವಾದ ಭಾವನೆಯ ದೃಷ್ಟಿಯಿಂದ ಎಲ್ಲರೂ ಸಮಾನರು. ಆದರೆ ಪ್ರಾಯೋಗಿಕವಾದ ಆಡಳಿತ, ವ್ಯಾವಹಾರಿಕ ದೃಷ್ಟಿಯಿಂದ ಜನಸಮೂಹದಲ್ಲಿ ಒಡನಾಟದ ಮಟ್ಟಿಗೆ ಮೇಲೆ-ಕೆಳಗೆ, ಒಳಗೆ-ಹೊರಗೆ ಎಂಬ ವರ್ತನೆ ಮೂಡಿಬರುವುದು ಅನಿವಾರ್ಯವೂ ಹೌದು, ಅಗತ್ಯವೂ ಹೌದು. ವ್ಯಕ್ತಿಯ ಹಾಗೂ ಸಮಾಜದ ವಿಕಾಸದ ದೃಷ್ಟಿಯಿಂದ ಇದು ನಿಜಕ್ಕೂ ಸ್ವಾಗತಾರ್ಹ ಹಾಗೂ ಅರ್ಥಪೂರ್ಣ. ಹಾಗೆಯೇ ಎಲ್ಲರೂ ಸಮಾನರು, ಎಲ್ಲರಿಗೂ ಸಮಾನ ಗೌರವ ಎನ್ನುವುದು ಪ್ರಯೋಗಸಾಧ್ಯವೂ ಅಲ್ಲ—ಪ್ರಗತಿದಾಯಕವೂ ಅಲ್ಲ.

ಹಿಂದೂಸಮಾಜ ಎಂದರೆ ಹಲವು ಪಂಗಡಗಳು ಅದರಲ್ಲಿ ಸೇರಿರುತ್ತವೆ. ಪ್ರತಿಯೊಂದು ಪಂಗಡಕ್ಕೂ ಅದರವೇ ಆದ ಧಾರ್ಮಿಕ ಹಾಗೂ ಸಾಮಾಜಿಕ ನೀತಿನಿಯಮಗಳ ಕಟ್ಟು ಕಟ್ಟಲೆಗಳಿರುತ್ತವೆ. ಅವುಗಳನ್ನು ಪಾಲಿಸಿ ತುಂಬ ಪ್ರಗತಿಹೊಂದಿದವರು–ಹೊಂದದ ವರು ಎಂಬ ವ್ಯತ್ಯಾಸ ಎಲ್ಲಾ ಕಾಲದಲ್ಲೂ ಎಲ್ಲಾ ಸಮಾಜದಲ್ಲೂ ಇದ್ದೇ ಇರುತ್ತದೆ. ಹಾಗೆಯೇ ಸ್ಥಾನಮಾನ. ಅರಿವು, ಅಧಿಕಾರ, ಒಳ್ಳೆಯ ಗುಣಕರ್ಮಗಳ ಆಚರಣೆಯಿಂದ ಗಳಿಸಿಕೊಂಡ ಬಲ ಮತ್ತು ಬೆಲೆ, ಕೆಟ್ಟ ನಡತೆ, ಕೀಳು ಆದರ್ಶ, ದುಷ್ಟದೃಷ್ಟಿ ಇವುಗಳ ಆಧಾರದಿಂದ ಸಮಾಜದ ಜನರಲ್ಲಿ ಸ್ಥಾನಮಾನದ ವ್ಯತ್ಯಾಸ ಕಂಡುಬರುವುದು ಹೇಗೆ ಅನಿವಾರ್ಯವೋ ಅದನ್ನು ಪಾಲಿಸಬೇಕಾದುದೂ ಅಷ್ಟೇ ಅನಿವಾರ್ಯವಾಗುತ್ತದೆ. ಅನೇಕ ವರ್ಷಗಳ ತನಕ ಸತತ ಪ್ರಯತ್ನಪಟ್ಟು ಪದವೀಧರನಾದವನೂ ಒಂದೇ, ಕೆಳಗಿನ ಹಂತಗಳಲ್ಲಿ ಇರುವವರೆಲ್ಲರೂ ಒಂದೇ ಎಂದು ಹೇಳಲು ಹೇಗೆ ಸಾಧ್ಯ ? ಹಾಗೆಯೇ ಅಕ್ಷರಮಾಲೆಯ ಅಕ್ಷರ ಚೆನ್ನಾಗಿ ಗೊತ್ತಿದೆ ಎಂದಮಾತ್ರಕ್ಕೆ ಅಷ್ಟೇ ಅಕ್ಷರಗಳ ಬಳಕೆ ಅತಿ ಉನ್ನತಮಟ್ಟದ ವಿದ್ಯಾಪದವಿಯ ವ್ಯಾಸಂಗದಲ್ಲಿ ಇರುವುದಷ್ಟೇ ಎಂದು ಹೇಳುತ್ತಾ ಅಕ್ಷರವಂತನೂ ಪದವೀಧರನೂ ಒಂದೇ ಎನ್ನಲು ಸಾಧ್ಯವೇ ?

ಹಾಗೆಯೇ ಸಹಪಂಕ್ತಿಭೋಜನದ ವಿಚಾರವೂ ಕೂಡ. ದೇವಾಲಯಗಳಲ್ಲಿ, ಇತರ ಸಭೆ–ಸಮಾರಂಭಗಳಲ್ಲಿ ಹರಿಜನರನ್ನು ಸವರ್ಣೀಯರ ಜೊತೆಗೇ ಕೂರಿಸಿ ಭೋಜನ ಸಂತರ್ಪಣೆ ನಡೆಸಬೇಕು ಎನ್ನುವುದು ನ್ಯಾಯಸಮ್ಮತ ಆಗುವುದಿಲ್ಲ. ಹಾಗೆಂದು ಸವರ್ಣೀಯರಾಗಲು ಹರಿಜನರಿಗೆ ಅಧಿಕಾರವಿಲ್ಲ ಎನ್ನುವುದು ಧರ್ಮಸಮ್ಮತವೂ ಅಲ್ಲ, ನ್ಯಾಯಸಮ್ಮತವೂ ಅಲ್ಲ. ಪದವೀಧರನಾಗಲು ಕೆಲವರಿಗೆ ಮಾತ್ರ ಹಕ್ಕು ಎಂದು ವಿಶ್ವವಿದ್ಯಾಲಯದಲ್ಲಿ ಘೋಷಿಸಿದರೆ ಎಷ್ಟು ಅನ್ಯಾಯ, ಹಾಸ್ಯಾಸ್ಪದ ಆಗುತ್ತದೋ ಹಾಗೆಯೇ ದೇವಾಲಯದ ಹಾಗೂ ಇತರ ಸಮಾರಂಭಗಳಲ್ಲಿ ಭಾಗಿಗಳಾಗಿ ದೇವರ ಪ್ರಸಾದ ಸ್ವೀಕರಿಸಲು ಹರಿಜನರು ಇತರರಂತೆ ಪ್ರಬುದ್ಧರಾಗಿ ಮುಂದೆ ಬರಲು ಅರ್ಹರಲ್ಲ ಎಂದು ಹೇಳಿದರೆ ತಪ್ಪಾಗುತ್ತದೆ.

ಹಿಂದೂಧರ್ಮದ ಆಚಾರವಿಚಾರಗಳನ್ನು ನ್ಯಾಯಸಮ್ಮತವಾಗಿ ಅನುಸರಿಸಿಕೊಂಡು ಧಾರ್ಮಿಕವಾಗಿ ಗುಣಕರ್ಮಗಳಿಗನುಗುಣವಾಗಿ ವಿಕಾಸಹೊಂದಿದವರು ಸಾಂಪ್ರದಾಯಿಕವಾಗಿ ಇತರರಿಗೆ ತೊಂದರೆಯಾಗದಂತಹ ರೀತಿಯಲ್ಲಿ ಆಚಾರವಿಚಾರಗಳನ್ನು ಆಚರಿಸಿಕೊಂಡು ಬಂದವರು, ಭೋಜನವಿಚಾರದಲ್ಲಿಯಾಗಲಿ, ಸಭೆ-ಸಮಾರಂಭಗಳಲ್ಲಿ ಕುಳಿತುಕೊಳ್ಳುವುದರಲ್ಲಿಯಾಗಲಿ ಸಹಜವಾಗಿ ಕೆಲವೊಂದು ನಿಷ್ಠೆ, ನಿಯಮಗಳನ್ನು ಬಯಸುತ್ತಾರೆ, ಅನುಸರಿಸುತ್ತಾರೆ. ಹಾಗೆಯೇ ತಮ್ಮಂತೆ ಸಮಾನದೃಷ್ಟಿ, ಆಸಕ್ತಿ, ಮನೋಧರ್ಮ ಇರುವವರ ಒಡನೆ ಸೇರಿ ವ್ಯವಹರಿಸಲು ಅಪೇಕ್ಷಿಸುತ್ತಾರೆ, ಪ್ರೀತಿಸುತ್ತಾರೆ. ಈ ಮನೋಧರ್ಮ, ಸಮಾಜದ ದಿನನಿತ್ಯದ ವ್ಯವಹಾರದಲ್ಲಿ ನಾವು ಕಾಣುತ್ತೇವೆ. ವೈದ್ಯರು, ವಕೀಲರು, ಎಂಜಿನಿಯರುಗಳು, ಸರಕಾರಿ ಅಧಿಕಾರಿಗಳು, ಕೃಷಿಕರು, ವಣಿಕರು, ರಾಜಕಾರಣಿಗಳು, ಸಾಹಿತಿಗಳು, ಅಧ್ಯಾತ್ಮಸಾಧಕರು, ಧಾರ್ಮಿಕ ಮುಖಂಡರು, ಅರ್ಚಕರು, ಪುರೋಹಿತರು—ಹೀಗೆ ಇವರೆಲ್ಲ ಒಂದೆಡೆ ಸೇರಿದಾಗ ಸಾಮೂಹಿಕವಾಗಿ ವ್ಯವಹರಿಸುವಾಗ ಸಮಾನಶೀಲ–ಸಮಾನದೃಷ್ಟಿ ಇರುವವರು ಒಟ್ಟಿಗೇ ಕಲೆತು ಒಡನಾಡಲು ಅಪೇಕ್ಷಿ

ಸುವುದು ಮಾನವಸಹಜವಾದ ಧರ್ಮ. ಹಾಗೆ ಬೆರೆತು ಬೆಳೆಯಲು ಅನುಕೂಲಮಾಡಿಕೊಳ್ಳಬೇಕಾದುದು ಸುಸಂಸ್ಕೃತ ಜೀವನದ ಧರ್ಮ.

ಆದರಂತೆಯೇ ಹರಿಜನರು ಗುಣಕರ್ಮಗಳಿಂದ ಪರಿಶುದ್ಧರಾಗಿ ವಿಕಾಸಹೊಂದಿ ಸವರ್ಣೀಯರಾದಂತೆ ಅವರಿಗೆ ಅವಕಾಶ ಸಹಜವಾಗಿ ಬಂದೇ ಬರುತ್ತದೆ. ಹರಿಜನರು ಸವರ್ಣೀಯರಾಗಬಾರದು ಎಂದು ಹೇಳುವ, ಹಾರೈಸುವ ಹಕ್ಕು ಯಾರಿಗೂ ಇಲ್ಲ. ಹಾಗೆನ್ನುವುದು ಹಿಂದೂಧರ್ಮಸಮ್ಮತವೂ ಅಲ್ಲ. ಹರಿಜನರು ಗುಣಕರ್ಮಗಳಿಂದ ಸುಸಂಸ್ಕೃತರಾದಾಗ ಅವರಿಗೆ ಸಹಪಂಕ್ತಿಭೋಜನ-ಸಮಾನತೆಗಳ ಮರ್ಯಾದೆ ನೀಡುವುದಿಲ್ಲ ಎನ್ನುವುದು ಅಕ್ಷಮ್ಯ ಅಪರಾಧವಾಗುತ್ತದೆ. ಈ ದಿಸೆಯಲ್ಲಿ ಗ್ರಾಮ, ನಗರಗಳಲ್ಲಿ ಅಲ್ಲಲ್ಲಿ ಸಂಸ್ಕಾರಶಿಬಿರಗಳಾಗಿ ಹರಿಜನರು ಶೀಘ್ರಗತಿಯಲ್ಲಿ ಸುಸಂಸ್ಕೃತರಾಗುವಂತೆ ವ್ಯವಸ್ಥೆ ಆಗಬೇಕಾದುದು ಹರಿಜನರ ಏಳಿಗೆ, ಗೌರವ, ಅಭಿವೃದ್ಧಿಯ ಬಗ್ಗೆ ಸರಿಯಾದ ಪರಿಹಾರದ ಹಾದಿ. ಬದಲು, ಹರಿಜನರೆಂದಮಾತ್ರಕ್ಕೆ ಅವರು ಎಲ್ಲೆಲ್ಲೂ ಎಲ್ಲರೊಡನೆಯೂ ಸಮಾನತೆಯಿಂದ ಒಡನಾಡಲು ಅರ್ಹರು ಎಂದು ಬಲಾತ್ಕಾರವಾಗಿ ಅದನ್ನು ಅನುಸರಿಸುವಂತೆ ಸವರ್ಣೀಯರ ಮೇಲೆ ಒತ್ತಡ ಹೇರುವುದು ಹರಿಜನರ ಏಳಿಗೆಯ ದೃಷ್ಟಿಯಿಂದಲೂ ಸಹಕಾರಿಯಲ್ಲ, ಸಮಾಜದಲ್ಲಿನ ಮುಂದುವರಿದರ ಕಲ್ಯಾಣದೃಷ್ಟಿಯಿಂದಲೂ ಕ್ಷೇಮಂಕರವಲ್ಲ. ಅಷ್ಟೇ ಅಲ್ಲ, ಸೂಕ್ತವಾದ ದುಡಿಮೆ, ಆಚಾರವಿಚಾರಗಳ ಅನುಸರಣೆ ಇಲ್ಲದೆ ಹರಿಜನರಿಗೆ ಸವರ್ಣೀಯರ ಜೊತೆಗೆ ಆಚಾರವಿಚಾರಗಳಲ್ಲಿ ಸಮಾನತೆಯ ಸ್ಥಾನಮಾನವನ್ನು ಕಾನೂನು ಇಲ್ಲವೇ ಯಾವುದೇ ಒತ್ತಡದಿಂದ ಒದಗಿಸಿಕೊಡುವುದು ಎಂದಾದರೆ ಹರಿಜನರ ದೇಹ, ಮನ, ಬುದ್ಧಿಗಳ ಸುಸಂಸ್ಕಾರ, ಶಿಕ್ಷಣ ದೊರಕಲು ಹೇಗೆ ಸಾಧ್ಯ ? ಹರಿಜನರಿಗೆ ಹಿರಿ ಆದರ್ಶ, ಪವಿತ್ರ ಜೀವನ, ಅದಕ್ಕಾಗಿ ಪ್ರಯತ್ನಿಸಬೇಕು ಎಂಬ ಪ್ರಜ್ಞೆ ಮೂಡಿ ಅವುಗಳ ಬಗ್ಗೆ ಆದರ, ಅಭಿಮಾನ ಮೂಡಲು ಹೇಗೆ ಸಾಧ್ಯ ? ಯಥೋಚಿತವಾದ ಸಂಸ್ಕಾರ–ಶಿಕ್ಷಣಗಳನ್ನು ನೀಡಿ ಹರಿಜನರನ್ನು ಸಾಮೂಹಿಕವಾಗಿ ಪರಿಶುದ್ಧಗೊಳಿಸಿ ಸವರ್ಣೀಯರೊಡನೆ ಬಾಳುವಂತೆ ಅವಕಾಶ ಮಾಡದಿದ್ದರೆ ಸಮಾಜಜೀವನದಲ್ಲಿ ಸುಸಂಸ್ಕೃತರು ಹಾಗೂ ಹಿರಿ ಆದರ್ಶಗಳು, ಉನ್ನತ ಮೌಲ್ಯಗಳಿಗೆ ಹರಿಜನರೇ ಅಪಚಾರವೆಸಗುವವರು, ಆತಂಕಕಾರಿಗಳು ಎಂಬ ಅಪಾಯದ ಪರಿಸ್ಥಿತಿ ಬೆಳೆದುಬರಲು ಸಾಧ್ಯವಿದೆ.

ಸತ್‌ಸಂಸ್ಕಾರ, ಶಿಕ್ಷಣಗಳಿಂದ ಹಿಂದೂಸಮಾಜದಲ್ಲಿ ಹಿಂದೆ ಅದೆಷ್ಟೋ ಹರಿಜನರು ನಿಜವಾದ ಪವಿತ್ರ ಜೀವಿಗಳು, ಪುಣ್ಯಪುರುಷರಾಗಿ, ಸಮಾಜದ ಎಲ್ಲ ವರ್ಗದವರಿಂದ ಪ್ರೀತಿ-ಗೌರವಗಳಿಗೆ ಪಾತ್ರರಾಗಿರುತ್ತಾರೆ. ಉನ್ನತನೆಲೆಯಲ್ಲಿ ಎಲ್ಲರೊಡನೆ ಕಲೆತು ಬಾಳಿಬೆಳಗಿರುತ್ತಾರೆ. ಹಾಗಾಗಿ ಹಿಂದೂಧರ್ಮವು ಹರಿಜನರನ್ನು ಕಡೆಗಣಿಸುವ ಧರ್ಮವಲ್ಲ. ಹಾಗೆಯೇ ಹಿಂದೂಧರ್ಮದ ತತ್ತ್ವಗಳನ್ನು ಪ್ರಾಮಾಣಿಕವಾಗಿ ಪಾಲಿಸುತ್ತಾ ಸವರ್ಣೀಯರೆಂದು ಕರೆಸಿಕೊಳ್ಳುವವರು ಹರಿಜನರ ವಿರೋಧಿಗಳಲ್ಲ—ಬದಲು ಅವರ ಬಂಧುಗಳೇ ಆಗಿದ್ದಾರೆ.

ಈ ದಿಸೆಯಲ್ಲಿ ಹೇಳುವುದಾದರೆ ಹಿಂದೂ ದೇವಾಲಯಗಳಲ್ಲಿ, ಸಾರ್ವಜನಿಕ ಸಭೆಸಮಾರಂಭಗಳಲ್ಲಿ ಭಾಗಿಗಳಾಗಿರುವವರಿಗೆ ಹಿತ ಹಾಗೂ ಅನುಕೂಲವಾಗುವಂತೆ

ಊಟೋಪಚಾರ, ತಿಂಡಿತೀರ್ಥಗಳ ವಿಚಾರಗಳಲ್ಲಿ ವಿಭಿನ್ನಪಂಥದವರೂ, ವರ್ಗದವರು ಕುಳಿತುಕೊಂಡು ವ್ಯವಹರಿಸುವುದು ಅಗತ್ಯ ಹಾಗೂ ಧರ್ಮಸಮ್ಮತ. ದೇವರ ಪ್ರಸಾದ ವಿತರಣೆ, ಭಕ್ಷ್ಯಭೋಜ್ಯಗಳ ಬಳಸುವಿಕೆಗಳ ಮಟ್ಟಿಗೆ ಸರ್ವರಿಗೂ ಒಂದೇ ರೀತಿ, ಒಂದಿಷ್ಟೂ ಹೆಚ್ಚುಕಡಿಮೆ ಮಾಡದೆ ವ್ಯವಹರಿಸಬೇಕು ಎನ್ನುವ ಮಟ್ಟಿಗೆ ಎಲ್ಲರೂ ಸಮಾನರು, ಅರ್ಹರು ಎನ್ನುವುದು ಅದರಂತೆ ವ್ಯವಹರಿಸುವುದು ಅಗತ್ಯ ಹಾಗೂ ಧರ್ಮ ಸಮ್ಮತ. ಇದು ಇಂದಿನ ಪರಿಸ್ಥಿತಿಯಲ್ಲಿ ಯಾರಿಗೂ ಅನ್ಯಾಯ, ನೋವು ಆಗದೇ ಇರಲು ಅನುಸರಿಸಬೇಕಾದ ಧರ್ಮಮಾರ್ಗವಾಗಿರುತ್ತದೆ,

ಆಕ್ಷೇಪ (೬): ಹರಿಜನರು ಹಿಂದೂ ಸಮಾಜದ ಆದರಣೀಯ ಬಂಧುಗಳು ಎಂಬುದನ್ನು ಸ್ಪಷ್ಟಪಡಿಸಲು ಇದೀಗ ಅಲ್ಲಲ್ಲಿ ಅವರನ್ನು ಗುಂಪಾಗಿ ದೇವಾಲಯಕ್ಕೋ ಸಾರ್ವಜನಿಕ ಗೌರವದ ತಾಣಕ್ಕೋ ಕರೆತಂದು ಸವರ್ಣೀಯರು ಅನೇಕರು ಸೇರಿ ಒಟ್ಟಾಗಿ ಕುಳಿತು ಸಹಪಂಕ್ತಿಭೋಜನ ಕಾರ್ಯಕ್ರಮ ನಡೆಯುತ್ತಿದೆ. ಹಾಗೆಯೇ ಅವರಿಗಾಗಿ ಸಾಮೂಹಿಕ ಸತ್ಯನಾರಾಯಣಪೂಜಾ ಕಾರ್ಯಕ್ರಮಗಳೂ ನಡೆಯುತ್ತಿವೆ. ಇದರಿಂದ ಹಿಂದೂಧರ್ಮದ ಎಲ್ಲ ಪಂಗಡದವರಿಗೂ ಸಮಾಧಾನವಾಗುತ್ತಿಲ್ಲ. ಇವರ ನಿಲವು ನಿಜ ವಾಗಿ ಹಿಂದೂಧರ್ಮದ ಸಿದ್ಧಾಂತಕ್ಕೆ ವಿರೋಧವೇ ಸರಿ.

ಸಮಾಧಾನ: ಹರಿಜನರು ನಮ್ಮ ಆದರಣೀಯ ಬಂಧುಗಳು ಎಂಬುದನ್ನು ಕಾರ್ಯತಃ ಸ್ಪಷ್ಟಪಡಿಸುವ ಜವಾಬ್ದಾರಿ ಹಾಗೂ ಕರ್ತವ್ಯ ಪ್ರತಿಯೊಬ್ಬ ಪ್ರಜ್ಞಾವಂತ ಪ್ರಬುದ್ಧ ಹಿಂದೂವಿಗೂ ಸೇರಿರುತ್ತದೆ. ತಾನು ವಿಶ್ವವಿದ್ಯಾಲಯದ ಪದವಿ ಪಡೆದಿದ್ದೇನೆಂದು ಕೊಂಡು ಇನ್ನೂ ಪ್ರಾಥಮಿಕವೋ ಮಾಧ್ಯಮಿಕವೋ ಶಿಕ್ಷಣ ಹಂತದಲ್ಲಿರುವವರನ್ನು ತಾತ್ಸಾರವಾಗಿ ಕಾಣುವುದಾಗಲಿ, ಅವರಿಗೆ ಅಭಿವೃದ್ಧಿಹೊಂದಲು ಅವಕಾಶ ಇಲ್ಲವೆಂದಾ ಗಲಿ ಹೇಳಲು ಪದವೀಧರನಿಗೆ ಹಕ್ಕಿಲ್ಲ. ಹಾಗೆನ್ನುವುದು ಅವನಿಗೆ ಗೌರವಸಮ್ಮತವೂ ಅಲ್ಲ. ಹಾಗೆಂದು ಹಠಾತ್ತನೆ ಅವರನ್ನೆಲ್ಲ ಸೇರಿಸಿ ನೀವೆಲ್ಲ ಪದವೀಧರರಿಗೆ ಸಮಾನರು ಎಂದು ಪರಸ್ಪರ ಒಡನಾಡಿ ಹೇಳಿದರೂ ಪ್ರಯೋಜನವಿಲ್ಲ.

ಹಾಗೆಯೇ ಹರಿಜನರನ್ನು ಅವರು ಒಳ್ಳೆಯ ಸಂಸ್ಕಾರಪಡೆಯದೆ ಇದ್ದ ಪರಿಸ್ಥಿತಿ ಯಿಂದಲೇ ಕರೆದುಕೊಂಡು ಬಂದು ಅವರೊಡನೆ ಕುಳಿತು ಭೋಜನ ಮಾಡಿ ನಾವೆಲ್ಲ ಒಂದು, ನಾವೆಲ್ಲ ಹಿಂದೂ ಬಂಧುಗಳು ಎಂದು ಒಂದು ದಿನ ಹೇಳಿಕಳುಹಿಸಿದರೆ ಅವರಿಗೆ ಧಾರ್ಮಿಕ ಸಂಸ್ಕಾರ ದೊರೆತಂತೆ ಆಗುವುದಿಲ್ಲ. ಅದರ ಬದಲು ವಿಕಾಸಹೊಂದದವರ ನೆಲೆಗೆ ಇಳಿದು ಸುಸಂಸ್ಕಾರ, ವಿಕಾಸಗಳು ನಿಜಕ್ಕೂ ಬೇಕಾದ ಅವರಿಗೆ ಅವುಗಳ ಅಗತ್ಯವೇ ಇಲ್ಲ ಎಂದು ಪರೋಕ್ಷವಾಗಿ ಸಾರಿದಂತಾಗುತ್ತದೆ. ಅಲ್ಲದೆ ಉನ್ನತ ಆದರ್ಶವನ್ನು ಅತಿಸುಲಭವಾಗಿ ಎತ್ತರದಿಂದ ತಗ್ಗಿಗೆ ಇಳಿಸಿದಂತಾಗುತ್ತದೆ. ಒಂದು ದಿನ ಸಾಮೂಹಿಕ ಭೋಜನ, ಹರಿಜನರಿಗೆ ಹಣ್ಣುಹಂಪಲು, ಬಟ್ಟೆಬರೆಗಳ ಹಂಚುವಿಕೆ, ಇವುಗಳಿಂದ ಹರಿಜನ ರಿಗೆ ತಾತ್ಕಾಲಿಕ ಹರ್ಷವಾದಂತೆ, ತಾವು ಹೇಗಿದ್ದರೂ ಸವರ್ಣೀಯರಿಂದ ಆದರಣೀಯರು ಎಂಬ ತಪ್ಪುಕಲ್ಪನೆ ಕೆಲವರಿಗೆ ಅಹಂಕಾರಕ್ಕೂ ಅವಕಾಶವಾಗುವ ಸಂಭವ ಇದೆ. ಹಾಗೆಯೇ ಕಾಲ ಪಕ್ವವಾಗುವ ಮುನ್ನವೇ ನಡೆಸುವ ಈ ಕಡ್ಡಾಯ ಅಥವಾ ಬಲಾತ್ಕಾರ ಎನ್ನುವ ಪ್ರಯೋಗದಿಂದ ಸವರ್ಣೀಯರ ಮನಸ್ಸಿಗೆ ಆಘಾತ, ಸುಸ್ಸಂಸ್ಕೃತಿಪೂರ್ಣ ಜೀವನಕ್ರಮಕ್ಕೆ

ಆಘಾತ ಉಂಟಾಗಲು ಅವಕಾಶವಾಗುತ್ತದೆ. ಅಷ್ಟೇ ಅಲ್ಲ, ಇಂತಹ ತಾತ್ಕಾಲಿಕ ಹರಿಜನೋದ್ಧಾರ ಕ್ರಮಗಳಿಂದ ಹರಿಜನರು ಹರಿಜನರೆಂಬ ಪಂಗಡದವರಾಗಿಯೇ ಉಳಿಯುವಂತಾಗುತ್ತದೆ. ಕ್ರಮೇಣ ಹರಿಜನರು ತಾವು ವಿಕಾಸಹೊಂದದೆ, ಸುಸಂಸ್ಕೃತರು ಆಗದೆ ಉಳಿದರೆ ತಮ್ಮ ಬದುಕಿಗೆ ಅದರಿಂದ ನಷ್ಟವೇನಿಲ್ಲ ಎಂಬ 'ಆಲಸ್ಯಮನೋಭಾವ ಅವರಲ್ಲಿ ಬೆಳೆಯಲು ಅನುಕೂಲ ಆದೀತು.

ಹಾಗಾಗಿ ಹಿಂದೂಧರ್ಮದ ಎಲ್ಲ ಪಂಗಡದವರಿಗೂ ಇದು ಒಪ್ಪಿಗೆಯಿಲ್ಲ ಎಂದಾಗಿರುವುದರಲ್ಲಿ ತಾತ್ವಿಕವಾಗಿ ಅಸಂಗತವೇನೂ ಇಲ್ಲ. ಹಿಂದೂಧರ್ಮದ ಸಿದ್ಧಾಂತಕ್ಕೆ ವಿರೋಧವಾದ ವಿಚಾರವೂ ಆಗಿರುವುದಿಲ್ಲ.

ಈ ವಿಚಾರವಾಗಿ ಎಲ್ಲರಿಗೂ ಸಮ್ಮತವಾಗುವ ರೀತಿಯಲ್ಲಿ ಕಾರ್ಯಕ್ರಮ ಕೈಗೊಂಡು ಹಿಂದೂಸಮಾಜದಲ್ಲಿನ ಅಸ್ಪೃಶ್ಯತೆ, ಹರಿಜನ ಸಮಸ್ಯೆಯನ್ನು ನಿವಾರಣೆಮಾಡಲು ಸಾಧ್ಯವಿದೆ.

ಹೇಗೆಂದರೆ : ಹರಿಜನರನ್ನು ಇದ್ದಕ್ಕಿದ್ದಂತೆ ಗುಂಪುಗುಂಪಾಗಿ ಕರೆತಂದು ಸವರ್ಣೀಯರೊಡನೆ ಸಾಮೂಹಿಕ ಭೋಜನ-ಒಡನಾಟಗಳಲ್ಲಿ ಭಾಗಿಯಾಗುವಂತೆ ಮಾಡುವ ಮೊದಲು ಗ್ರಾಮಗ್ರಾಮಗಳಲ್ಲಿ-ಊರುಕೇರಿಗಳಲ್ಲಿ ಹರಿಜನರಿಗೆ ಸತ್ ಸಂಸ್ಕಾರ ನೀಡುವ ಶಿಬಿರಗಳ ವ್ಯವಸ್ಥೆ ಆಗಬೇಕು, ಆ ಶಿಬಿರದಲ್ಲಿ ಭಾಗಿಯಾದವರಿಗೆ ಒಂದು ರೀತಿಯ ವಿಶೇಷ ಗೌರವ-ಸಂಭಾವನೆ ಸಿಗುತ್ತದೆ ಎಂದು ಮೊದಮೊದಲು ತಿಳಿಸಬೇಕು. ಶಿಬಿರಕ್ಕೆ ಬಂದು ಸಂಸ್ಕಾರಹೊಂದಬೇಕಾದುದು ಪ್ರತಿಯೊಬ್ಬನಿಗೂ ಅಗತ್ಯ ಎಂದು ಪ್ರಚುರಪಡಿಸಬೇಕು.

ಸಂಸ್ಕಾರಶಿಬಿರವು ಸರಕಾರದ ಬೆಂಬಲದ ಹಿನ್ನೆಲೆಯಲ್ಲಿ ಧರ್ಮಪೀಠಾಧಿಪತಿಗಳಿಂದ ಇಲ್ಲವೇ ಅವರಿಂದ ಅಧಿಕೃತವಾಗಿ ಮಾನ್ಯಪಡೆದವರಿಂದ ನಡೆಸಲ್ಪಡಬೇಕು. ಶಿಬಿರಕಾರ್ಯ ನಡೆಯುವ ಮುನ್ನ ಇಲ್ಲವೇ ಮುಕ್ತಾಯದ ಸಂದರ್ಭಗಳಲ್ಲಿ ಧಾರ್ಮಿಕ ಪೀಠಾಧಿಪತಿಗಳು ಬರುವಂತಿರಬೇಕು, ಸಾಧ್ಯವಾಗದಿದ್ದರೆ ಶಿಬಿರದಲ್ಲಿ ಪಾಲ್ಗೊಂಡವರು ಸಂಬಂಧಿಸಿದ ಧರ್ಮಪೀಠಾಧಿಪತಿಗಳ ದರ್ಶನಕ್ಕೆ ಶಿಬಿರಾಂತ್ಯವಾದಮೇಲೆ ಸಾಮೂಹಿಕವಾಗಿ ತೆರಳಿ ಗುರುಗಳ ಆಶೀರ್ವಾದ ಕಡ್ಡಾಯವಾಗಿ ಪಡೆದು ಬರುವಂತಿರಬೇಕು.

ಸಂಸ್ಕಾರಶಿಬಿರದಲ್ಲಿ ಶಿಬಿರಾರ್ಥಿಗಳಿಗೆ ದೀಕ್ಷಾಸ್ನಾನಮಾಡಿಸಿ ನಿಶ್ಚಿತವಾದ ದೇವರ ನಾಮಸ್ಮರಣೆಗೆ ಶಿಕ್ಷಣಸಂಸ್ಕಾರ ನೀಡಬೇಕು, ಆಮೇಲೆ ಹರಿಜನ ಎಂಬ ಪಂಗಡದ ಹೆಸರನ್ನು ಅಳಿಸಿ ಹಿಂದೂಧರ್ಮದ ಶೈವ, ವೈಷ್ಣವ, ಶಾಕ್ತ ಇತ್ಯಾದಿ ಪಂಗಡಗಳಲ್ಲಿ ಯಾವ ಪಂಗಡಕ್ಕೆ ದೀಕ್ಷಾನುಸಾರವಾಗಿ ಸೇರಿದವರು ಎಂದು ಘೋಷಿಸಿ ಯಥೋಚಿತವಾದ ಹೆಸರನ್ನು ನೀಡಬೇಕು. ಎಲ್ಲೆಡೆಯಲ್ಲೂ ಮಾನ್ಯವಾಗುವ, ಅವರಿಂದ ಆಚರಿಸಲು ಸಾಧ್ಯವಾಗುವಂತಹ ರೀತಿಯ ಭಜನೆ, ಪ್ರಾರ್ಥನೆ, ಜಪ, ಧ್ಯಾನ, ದೇವತಾಮಂದಿರಗಳಲ್ಲಿ ಸಮಾಜಕೇಂದ್ರಗಳಲ್ಲಿ ನಡಕೊಳ್ಳುವ ಕ್ರಮ, ಸಂತರ ಚರಿತೆ, ಸದಾಚಾರದ ಮಹಿಮೆ, ಶುಚಿತ್ವದ ಹಿರಿಮೆ ಇವುಗಳ ಬಗ್ಗೆ ಶಿಕ್ಷಣವು ಶಿಬಿರದಲ್ಲಿ ನೀಡುವಂತಾಗಬೇಕು. ಶಿಬಿರದ ಶಿಕ್ಷಣದ ಅವಧಿಯನ್ನು ಎರಡು ವಾರಗಳಿಂದ ಏಳು ವಾರಗಳವರೆಗೆ ಯಥೋಚಿತವಾಗಿ ವಿಸ್ತರಿಸಬಹುದು. ಶಿಕ್ಷಣ ಮುಗಿದಂದು ಅವರಿಗೆ ವಿಶೇಷವಾಗಿ ದೇವಾಲಯದ ಪುಣ್ಯ

ತೀರ್ಥ, ಗಂಗಾದಿ ಪಾವನ ನದಿಗಳ ತೀರ್ಥವನ್ನು ಶಿಬಿರದ ಪ್ರಮುಖ ಆಚಾರ್ಯರು ನೀಡಿ ಹರಸಬೇಕು. ಅಲ್ಲದೇ ಸಮರ್ಥರೂ ಗೌರವಾನಿತ್ವರೂ ಆದ ಪುರೋಹಿತರು, ಧರ್ಮಪ್ರಚಾರಕರು, ಸಮಾಜಸೇವಾಪ್ರಮುಖರು, ದೇಗುಲದ ಪ್ರಮುಖರು ಸಮಾಜದ ಗಣ್ಯರು, ಸರಕಾರದ ಅಧಿಕಾರಿಗಳು ಅವರಿಂದ ಯಥೋಚಿತವಾಗಿ ಹಿತೋಪದೇಶವನ್ನು ಶಿಬಿರಾರ್ಥಿಗಳಿಗೆ ಕೊಡಿಸಬೇಕು. ಶಿಬಿರದ ಮುಕ್ತಾಯ ಸಮಾರಂಭಕ್ಕೆ ಊರಿನ ಇಲ್ಲವೇ ಗ್ರಾಮದ ಗಣ್ಯರನೇಕರನ್ನು ಆಹ್ವಾನಿಸಿ ಅವರು ಉಪಸ್ಥಿತರಿರುವಂತೆ ವ್ಯವಸ್ಥೆ ಮಾಡಬೇಕು. ಶಿಬಿರದ ಮುಕ್ತಾಯ ಸಮಾರಂಭದಲ್ಲಿ ಶಿಬಿರಾರ್ಥಿಗಳೆಲ್ಲ ಸವರ್ಣೀಯ ರೆಂದು ಶಿಬಿರದ ಪ್ರಮುಖ ಆಚಾರ್ಯರಿಂದ ಘೋಷಿಸಲ್ಪಡಬೇಕು. ಆಗಲೇ ಅವರ ಹೆಸರುಗಳನ್ನು ಸಂಬಂಧಪಟ್ಟ ಗುರುಮಠದ ಶಿಷ್ಯವರ್ಗದ ಪಟ್ಟಿಯಲ್ಲಿ ದಾಖಲೆ ಮಾಡಿ ಮಠಕ್ಕೆ ಕಳುಹಿಸಿಕೊಡುವಂತಾಗಬೇಕು. ಹೀಗೆ ಅವರಿಗೂ ಮಠಕ್ಕೂ ಆಧ್ಯಾತ್ಮಿಕ ಸಂಬಂಧವೇರ್ಪಡುವಂತಾಗಿ ಅದು ಬಾಳಿನಲ್ಲಿ ಬೇರೂರಬೇಕು. ಸಂಸ್ಕಾರದೀಕ್ಷಾಶಿಬಿರದ ಮುಕ್ತಾಯ ದಿನದಂದು ಶಿಬಿರಾರ್ಥಿಗಳನ್ನು ಸವರ್ಣೀಯರು ಎಂದು ಘೋಷಿಸಿದನಂತರ ಅವರೊಡನೆ ಅಲ್ಲಿ ನೆರೆದವರು ಎಲ್ಲರೂ ಕುಳಿತು ಸಹಪಂಕ್ತಿಭೋಜನವನ್ನು ಮಾಡ ಬೇಕು. ಶಿಬಿರದಲ್ಲಿ ಸಂಸ್ಕಾರಹೊಂದಿದವರು ಮನೆಗೆ ತೆರಳಿ ತಮ್ಮ ಹಿಂದಿನ ಹೀನ ನಡತೆ, ಆಚಾರವಿಚಾರಗಳನ್ನು ಅನುಸರಿಸದಂತೆ ಆರ್ಥಿಕವಾಗಿ, ಸಾಂಸ್ಕೃತಿಕವಾಗಿ, ಸಾಮಾ ಜಿಕವಾಗಿ ಅವರಿಗೆ ಸಮಾಜದ ಪ್ರಮುಖರು, ಶ್ರೀಮಂತರು, ಸಂಘಸಂಸ್ಥೆ, ದೇವಾಲಯದ ಕಡೆಯುವರು ಆಯಾಯ ಗ್ರಾಮ, ಊರುಕೇರಿಗಳಲ್ಲಿ ಹಿತಮಿತವಾದ ರೀತಿಯ ನೆರವನ್ನು ಅಗತ್ಯದಂತೆ ನೀಡಿ ಅವರು ಹೊಸ ಜೀವನಕ್ರಮದಲ್ಲಿ ಪ್ರಗತಿಹೊಂದುವಂತೆ ಶಾಲಾ ಶಿಕ್ಷಣ, ಗುಡಿಕೈಗಾರಿಕೆ, ಕೃಷಿವಿದ್ಯೆ ಇತ್ಯಾದಿ ಹಾದಿಗಳಲ್ಲಿ ಅವರು ಮುಂದುವರಿಯಲು ಸಹಕಾರ ಹಾಗೂ ಸಮಾಜವು ಪ್ರೋತ್ಸಾಹಗಳನ್ನು ನೀಡುವಂತಾಗಬೇಕು. ಅಲ್ಲದೆ ಸಂಸ್ಕಾರಹೊಂದಿದ ನೂತನ ಹಿಂದೂ ಬಂಧುಗಳನ್ನು ಊರಿನ ಬಾವಿ, ದೇಗುಲ, ಅಂಗಡಿ, ಕಛೇರಿ ಎಲ್ಲೂ ಕೂಡ ಕೀಳಾಗಿ ಕಾಣದೆ ಧರ್ಮಸಮ್ಮತವಾದ ರೀತಿಯಲ್ಲಿ ಸಾಮಾಜಿಕ ಸ್ಥಾನಮಾನಕ್ಕೆ ತಕ್ಕಂತೆ ಸಮಾನಗೌರವದಿಂದ ಕಾಣಬೇಕು. ಸಂಸ್ಕಾರಪಡೆಯುದೇ ಉಳಿದ ವರು ನಿಜಕ್ಕೂ ಸಮಾಜದಲ್ಲಿ ಕಷ್ಟಕ್ಕೆ ಒಳಗಾಗುತ್ತಾರೆ ಎಂಬ ಬಗ್ಗೆ ಎಚ್ಚರ ನೀಡುವುದು ಮಾತ್ರವಲ್ಲದೆ ಅಂತಹವರು ಕಾನೂನಿನ ರೀತಿಯಲ್ಲಿ ಶಿಕ್ಷಾರ್ಹರು ಎಂಬುದಾಗಿ ಸರಕಾರದ ಮತಿಯಿಂದ ವಿಶೇಷವಾದ ಕಾನೂನಿನ ಒತ್ತಡ ಮೂಡಿಬರಬೇಕು.

ಸಹಸ್ರಾರು ವರ್ಷಗಳಿಂದ ಹಿಂದೂಧರ್ಮದ ಹೆಸರಿನಲ್ಲಿ ದೌರ್ಭಾಗ್ಯವಶಾತ್ ಬೆಳೆದು ಕೊಂಡು ಬಂದ ಈ ಅಸ್ಪೃಶ್ಯತಾ ಸಮಸ್ಯೆಯ ಮೂಲೋತ್ಪಾಟನೆ ನೆನೆಸಿದಷ್ಟು ಸುಲಭ ದಲ್ಲಿ ಸಾಧ್ಯವಾಗುವಂತಿಲ್ಲ ಎಂಬುದು ಸುಸ್ಪಷ್ಟ. ಸರಕಾರ, ಮುಂದುವರಿದ ಸಮಾಜ ದವರು ಮತ್ತು ಧರ್ಮಪೀಠದ ಗುರುಗಳು ಎಂದು ಮೂರು ಶಕ್ತಿಗಳು ಕ್ರಮವಾಗಿ ಸೇರಿ ಈ ಅಸ್ಪೃಶ್ಯತಾಮಹಾಕಳಂಕದ ನಿವಾರಣೆಗೆ ವ್ಯವಸ್ಥಿತ ಕಾರ್ಯಕ್ರಮವು ಹಲವು ದಶಕಗಳ ತನಕ ಕೈಗೊಳ್ಳಲೇಬೇಕಾಗಿದೆ.

ಹಿಂದೂಧರ್ಮದ ಹೆಸರಿನಲ್ಲಿರುವ ವಿಭಿನ್ನ ಪಂಗಡಗಳು ಹೇಗೆ ಅನೇಕದಲ್ಲಿ ಏಕವನ್ನು ಕಾಣುತ್ತಾ ಸೌಹಾರ್ದಭಾವದಿಂದ ಬಾಳುತ್ತವೆಯೋ ಹಾಗೆಯೇ ಹರಿಜನರೆಂದು ಇಂದು

ಕರೆಯಲ್ಪಡುವ ವಂಗಡದ ಹಿಂದುಗಳು ಸತ್‌ಸಂಸ್ಕಾರದಿಂದ ಪರಿಶುದ್ಧರಾಗಿ ಸಮಾಜದಲ್ಲಿ ಗೌರವದ ವಂಗಡ ಎಂದು ಪರಿಗಣಿತವಾಗಿ ಹಿಂದೂಸಮಾಜದಲ್ಲಿ ಸುಯೋಗ್ಯಸ್ಥಾನ ಬಲದಿಂದ ಬಾಳುವಂತಾಗಬೇಕು. ಸಂಸ್ಕಾರಶಿಬಿರಗಳ ಮೂಲಕ ಒಳ್ಳೆಯ ಜೀವನಕ್ಕೆ ಶಿಕ್ಷಣ–ಸಂಸ್ಕಾರಗಳನ್ನು ಪಡೆಯದೆ ಹರಿಜನರೆಂದೇ ಉಳಿದು ಬಾಳುವಂತಾದರೆ ಅದರಿಂದ ಅವರ ಏಳಿಗೆಯೂ ಆಗದು, ಹಿಂದೂ ಸಮಾಜಕ್ಕೆ ಆದರಿಂದಾಗಿ ಅನೇಕ ರೀತಿಯಲ್ಲಿ ತೀವ್ರ ಅಪಾಯ ಎಂದಿಗೂ ತಪ್ಪದು.

ಆಕ್ಷೇಪ (೭) : ಹಿಂದೂಧರ್ಮದಲ್ಲಿ ಬ್ರಾಹ್ಮಣರು-ಬ್ರಾಹ್ಮಣೇತರರು ಎಂಬ ಭೇದ ತುಂಬಾ ಇದೆ. ಬ್ರಾಹ್ಮಣರು ಮಾತ್ರ ಶ್ರೇಷ್ಠರು, ಇತರರು ಕೀಳು ಎಂಬ ತಾರತಮ್ಯ ತುಂಬಿಹೋದಿದೆ. ವೇದಾದಿಶಾಸ್ತ್ರಗ್ರಂಥಗಳು ಬ್ರಾಹ್ಮಣೇತರರಿಗೆ ಅಧ್ಯಯನ-ಅಧ್ಯಾಪನಕ್ಕೆ ತಕ್ಕುದಲ್ಲ ಎಂಬ ಹೇಳಿಕೆ ಪ್ರಚಲಿತವಿದೆ. ಬ್ರಾಹ್ಮಣರು ಮಾತ್ರ ದೇವಾಲಯಗಳಲ್ಲಿ ಪೂಜೆ ಮಾಡಲು ಅರ್ಹರು, ಪೌರೋಹಿತ್ಯವೃತ್ತಿ ನಡೆಸಲು ಸಮರ್ಥರು ಎಂಬ ನಂಬಿಕೆ ಆಚರಣೆ ಬೇರೂರಿರುತ್ತದೆ. ಹಿಂದೂ ಸಮಾಜದಲ್ಲಿನ ಅನೇಕ ರೀತಿಯ ಭೇದಭಾವಗಳಿಗೆ, ಜಾತೀಯ ದ್ವೇಷಾಸೂಯೆಗಳಿಗೆ ಬ್ರಾಹ್ಮಣರೇ ಮುಖ್ಯ ಕಾರಣ.

ಸಮಾಧಾನ : ಹಿಂದೂಧರ್ಮದ ತತ್ತ್ವ–ಸಂದೇಶಗಳಂತೆ ಬ್ರಾಹ್ಮಣರು ನಿಜವಾಗಿ ಎಲ್ಲರಿಗಿಂತಲೂ ಶ್ರೇಷ್ಠರು. ಆದರೆ ಆ ಬ್ರಾಹ್ಮಣರು ಹುಟ್ಟಿನಿಂದ ಮಾತ್ರ ಬ್ರಾಹ್ಮಣರೆಂದಾದವರಲ್ಲ, ಗುಣಕರ್ಮಗಳಿಂದ ಬ್ರಾಹ್ಮಣರಾದವರು. ದಿವ್ಯವಾದ ತಪಸ್ಸಿನ ಶಕ್ತಿ ಹೊಂದಿರುವವರು. ಸಮಸ್ತ ಚರಾಚರವಸ್ತುಗಳಲ್ಲಿರುವ ದಿವ್ಯಚೇತನ ಬ್ರಹ್ಮದ ಬಗ್ಗೆ ಆಧ್ಯಾತ್ಮಿಕ ಜ್ಞಾನವಿರುವವರು, ನಡೆನುಡಿಗಳಲ್ಲಿ ಭಗವನ್ನಿಷ್ಠೆ, ಇಂದ್ರಿಯಗಳ ಮೇಲಿನ ಹತೋಟಿ, ತಪಸ್ಸು, ಬಾಹ್ಯಾಂತರಶುದ್ಧಿ, ಕ್ಷಮೆ, ಸರಳತೆ, ಸಾಮಾನ್ಯಜ್ಞಾನ, ಆಧ್ಯಾತ್ಮಜ್ಞಾನ, ಆಸ್ತಿಕ್ಯಬುದ್ಧಿ ಇವುಗಳಿಂದ ಕೂಡಿರುವವರು ಬ್ರಾಹ್ಮಣರು. ಹಿಂದೂಧರ್ಮದ ಪ್ರಕಾರವಾಗಿ ವ್ಯಕ್ತಿಯ ಜೀವನದ ಗುಣಯೋಗ್ಯತೆಗಳ ವಿಕಾಸದ ದೃಷ್ಟಿಯಿಂದ ಈ ಗುಣಶಕ್ತಿಯನ್ನು ಪಡೆಯುವುದು ಅತ್ಯಂತ ಉನ್ನತವಾದ ಗುರಿ, ಆದರ್ಶದ ಗಿರಿ ಆಗಿದೆ. ಹಾಗಾಗಿ ಬ್ರಾಹ್ಮಣ ಪದವಿ ಉನ್ನತೋನ್ನತವಾದುದು. ಬ್ರಾಹ್ಮಣ ಪದವೀಧರರು, ಬ್ರಾಹ್ಮಣರು ನಿಜಕ್ಕೂ ಶ್ರೇಷ್ಠರು. ವಿಕಾಸದ ದೃಷ್ಟಿಯಿಂದ ಜನರು ಇರುವ ಹಂತಗಳ ನೆಲೆಯಿಂದ ಮೇಲು–ಕೀಳೆಂದು ಅಳತೆಗೋಲಿನಲ್ಲಿ ಅಳೆದಾಗ ಬ್ರಾಹ್ಮಣರು . ಮೇಲು ಇತರರು ಕೆಳಗಿನವರು ಎಂದು ಕಂಡುಬರುವುದು ಸಹಜ. ಉನ್ನತ ಆದರ್ಶಗಿರಿಯನ್ನೇರಲು ಸಮರ್ಥರಾದವರು ಏರಿನಿಂತಾಗ ಅವರ ಬಗ್ಗೆ ಗಿರಿಯ ಶಿಖರದ ಹಾದಿಯ ಬೇರೆ ಬೇರೆ ಹಂತದಲ್ಲಿರುವವರು ಅಭಿಮಾನಪಡಬೇಕಾದುದು ಪ್ರಗತಿಯ ದೃಷ್ಟಿಯಿಂದ ಅಗತ್ಯ.

ಹಿಂದೂಸಮಾಜದಲ್ಲಿ ಹುಟ್ಟಿನಿಂದ ಮಾತ್ರ ಬ್ರಾಹ್ಮಣರೆಂದಾಗದೆ ಗುಣಕರ್ಮಗಳಿಂ ಕೂಡಿ ಬ್ರಾಹ್ಮಣರಾಗುವುದು ಎಂಬ ನಿಶ್ಚಯದ ಸೂತ್ರ, ಆಚರಣೆಗಳು ಪರಂಪರೆಯಿಂದ ನಡೆದುಬಂದಿದೆ. ಹಾಗಿದ್ದರೂ ಬ್ರಾಹ್ಮಣರ ವಂಶದಲ್ಲಿ ಕಾಲವು ಸರಿದಂತೆ ಬ್ರಾಹ್ಮಣ್ಯದ ಎಲ್ಲ ಗುಣಶಕ್ತಿಗಳನ್ನು ಸಂಪಾದಿಸಿ ಮೈಗೂಡಿಸಿಕೊಂಡು ಬಾಳುವ ಮಂದಿ ಮೂಡಿ ಬೆಳಗುವುದು ಕಠಿಣವಾಯಿತು. ಆದರೆ ಬ್ರಾಹ್ಮಣ ಮನೆತನದಲ್ಲಿ ಹುಟ್ಟಿದುದರಿಂದ ಆ ವ್ಯಕ್ತಿಗೆ ಬ್ರಾಹ್ಮಣ್ಯದ ಸಂಪಾದನೆಗೆ ದುಡಿಯಲು, ಬ್ರಾಹ್ಮಣ್ಯದ ಗುಣಶಕ್ತಿಗಳನ್ನು

ಅಷ್ಟಿಷ್ಟು ಪ್ರಕಾಶಪಡಿಸಲು ಇತರರಿಗಿಂತ ಉತ್ತಮವಾದ ಪರಿಸರ, ಅನುಕೂಲಗಳು ಪರಂಪರೆಯಿಂದ ಬಂದ ಸಂಸ್ಕಾರಬಲದಿಂದ ಲಭಿಸುವುದಕ್ಕೆ ಅವಕಾಶವಾಯಿತು. ಅಷ್ಟರ ಮಟ್ಟಿಗೆ ಇತರರಿಗಿಂತ ಬ್ರಾಹ್ಮಣನು ಶ್ರೇಷ್ಠ ಎಂದಾಗುವಂತಾಯಿತು. ಕಾಲಾನುಭಾಗದಲ್ಲಿ ಈ ತಾರತಮ್ಯದ ಗುಣಯೋಗ್ಯತೆ, ಸ್ಥಾನಮಾನಗಳ ಮಟ್ಟಿಗೆ ಸಾಕಷ್ಟು ಸಾಮಾಜಿಕ ನಡವಳಿಕೆ, ಕಾರ್ಯಾಚರಣೆಗಳಲ್ಲಿ ದುರುಪಯೋಗ ಕೂಡಿಬಂತು. ಬ್ರಾಹ್ಮಣನು ಹುಟ್ಟಿ ನಿಂದಲೇ ಬ್ರಾಹ್ಮಣ—ಬ್ರಾಹ್ಮಣತ್ವದ ಉನ್ನತಸಿದ್ಧಿಯ ಗಿರಿ ಏರಲೂ ಅವನಿಗೆ ಇರುವ ಪರಿಸರದ ಸಹಾಯ, ಪರಂಪರೆಯ ಬೆಂಬಲ ಇತರರಿಗೆ ಇಲ್ಲ. ಹಾಗಾಗಿ ಅವನು ಶ್ರೇಷ್ಠ ಎಂದು ಹೇಳುವಂತಾಯಿತು. ಇದೆಲ್ಲ ಸಮಾಜದ ನಡವಳಿಕೆಗಳೇ ವಿನಾ ಇವಕ್ಕೆಲ್ಲ ಹಿಂದೂ ಧರ್ಮದ ಸನಾತನತತ್ತ್ವಗಳಲ್ಲಿ ಸ್ಥಾನವಿಲ್ಲ. ಹಿಂದೂಸಮಾಜದ ಸಹಸ್ರಾರು ವರ್ಷಗಳ ಜೀವನಪ್ರವಾಹದಲ್ಲಿ ಅದೆಷ್ಟೋ ಕೊಳಕು–ಕಸಕಡ್ಡಿಗಳು ತುಂಬಿ ಹರಿದಿವೆ, ತಪ್ಪುಗಳು ನಡೆದಿವೆ. ಆಧುನಿಕ ಕಾಲದಲ್ಲಿ ನಾವು ಅದನ್ನು ಸರಿಪಡಿಸಹೊರಡುವಾಗ ನಮ್ಮ ಹಿಂದೂ ಸಮಾಜದ ಮಹಾಶರೀರದ ವಿಭಿನ್ನ ಭಾಗಗಳಾದ ವಿವಿಧ ವರ್ಗದವರನ್ನು ಪರಸ್ಪರ ಹಿಂದಿನ ಹಿರಿಯರ ತಪ್ಪಿಗೆ ಇಂದು ದ್ವೇಷಿಸುವುದರಿಂದಾಗಲಿ ಉಪಯೋಗವಾಗದು. ಹಿಂದೂಧರ್ಮದ ತತ್ತ್ವಗಳು ನಿತ್ಯನೂತನವಾಗಿವೆ. ಅವುಗಳ ಅನುಷ್ಠಾನದಲ್ಲಿ ತಪ್ಪು ಗಳು ಬಂದಿದ್ದರೆ, ಪರಿಣಾಮವಾಗಿ ತೊಂದರೆ ಉಂಟಾಗಿದ್ದರೆ ಅದಕ್ಕೆ ಹಿಂದೂಧರ್ಮ ವನ್ನಾಗಲಿ, ಒಂದು ಪಂಗಡವನ್ನಾಗಲಿ ದ್ವೇಷಿಸಿ ದೂಷಿಸುವುದರಿಂದ ಪರಿಸ್ಥಿತಿ ಸುಧಾರಿಸ ಲಾರದು. ಬದಲು ಹಿಂದೂಸಮಾಜದವರು ಎಲ್ಲರೂ ಹಿಂದೂಧರ್ಮದ ಸನಾತನತತ್ತ್ವ ಗಳ ಬೆಳಕಿನಲ್ಲಿ ತಪ್ಪುಗಳನ್ನು ಸರಿಪಡಿಸಿಕೊಂಡು ಬಾಳಲು ಸಂಯುಕ್ತಪ್ರಯತ್ನ ಮಾಡ ಬೇಕು. ಬ್ರಾಹ್ಮಣರು ಹಾಗೂ ಬ್ರಾಹ್ಮಣೇತರರು ಎಲ್ಲರೂ ಹಿಂದುಗಳು ಹೌದಷ್ಟೆ ?

ಹಿಂದೂಧರ್ಮದಲ್ಲಿ ಬ್ರಾಹ್ಮಣ ಮಾತ್ರ ವೇದಾಧಿಕಾರಿ, ಇತರ ವರ್ಗದವರು ವರ್ಣ ದವರು ಅದಕ್ಕೆ ಅರ್ಹರಲ್ಲ ಎಂದು ಹೇಳಿರುವುದಿಲ್ಲ. ಹಿಂದೂಧರ್ಮದ ಹೆಸರಿನಲ್ಲಿ ಅತಿ ಪ್ರಾಚೀನಕಾಲದಿಂದ ಆಧುನಿಕ ಕಾಲದವರೆಗೆ ಅರಳಿಬಂದ ಅಸಂಖ್ಯಾತ ಮಹರ್ಷಿಗಳು, ಆಚಾರ್ಯಸ್ವಾಮಿಗಳು, ಸಾಧುಸಂತರು, ಭಕ್ತಮಹಾತ್ಮರು ಯಾರೂ ಅಧ್ಯಾತ್ಮವಿದ್ಯೆ ಬ್ರಾಹ್ಮಣಪಂಗಡಕ್ಕೆ ಮಾತ್ರ ಮೀಸಲಾದುದು ಎಂದಿರುವುದಿಲ್ಲ. ಬ್ರಾಹ್ಮಣೇತರರು ಆಧ್ಯಾತ್ಮಿಕವಿದ್ಯಾಸಂಪನ್ನರಾಗಿ ಶ್ರೇಷ್ಠಪದವಿಯನ್ನೇರಿ ಎಲ್ಲ ವರ್ಗದಿಂದಲೂ ಗೌರವ–ಪೂಜ್ಯತೆಗಳಿಗೆ ಒಳಗಾಗಿರುವ ನಿದರ್ಶನ ಬಹಳಷ್ಟು ಇದೆ. ಬ್ರಾಹ್ಮಣರು ವೇದಾದಿ ಶಾಸ್ತ್ರಗಳನ್ನು ತಮ್ಮ ಸ್ವಾರ್ಥಕ್ಕೆ ಬೇಕಾದಂತೆ ಬರೆಕೊಂಡರು, ಪ್ರಚಾರಮಾಡಿದರು ಎಂಬ ಭಾವನೆ ಎಷ್ಟುಕ್ಕೂ ಸರಿ ಅಲ್ಲ. ಪ್ರಾಚೀನ ಮಹರ್ಷಿಗಳು ಮೂಲತಃ ಅನೇಕರು ಕ್ಷತ್ರಿ ಯರು, ಇನ್ನೂ ಇತರ ವರ್ಗದವರು ಆಗಿರುತ್ತಾರೆ. ಅತ್ಯಂತ ಶ್ರೇಷ್ಠವಾದ, ಸರ್ವಮಾ ನ್ಯವೂ, ಪವಿತ್ರವೂ ಆದ ಗಾಯತ್ರಿಮಂತ್ರದ ದ್ರಷ್ಟಾರರಾದ ಮಹರ್ಷಿ ವಿಶ್ವಾಮಿತ್ರರು ಮೂಲತಃ ಕ್ಷತ್ರಿಯರು! ಆದರೆ ಅವರು ಸದ್ಗುಣ, ಸತ್ಕರ್ಮಗಳಿಂದ, ತಪಸ್ಸಿನ ಬಲ ದಿಂದ ಬ್ರಾಹ್ಮರಾದರು. ಬ್ರಹ್ಮರ್ಷಿಗಳೆಂದು ವಿಖ್ಯಾತರಾದರು. ವೇದವಾಙ್ಮಯವನ್ನು ಯುಕ್ತವಾದ ರೀತಿಯಲ್ಲಿ ಸಂಪಾದಿಸಿ ಹದಿನೆಂಟುಪುರಾಣಗಳನ್ನು ವ್ಯವಸ್ಥೀಕರಿಸಿ ಪಂಚಮ ವೇದವೆಂದು ಪ್ರಸಿದ್ಧವಾದ ಮಹಾಭಾರತ ಮೊದಲಾದ ಗ್ರಂಥಗಳನ್ನು ರಚಿಸಿ ಲೋಕಕ್ಕೆ

ಮಹದನುಗ್ರಹ ನೀಡಿ ಪ್ರಾತಃಸ್ಮರಣೀಯರಾಗಿರುವ ಶ್ರೀ ವೇದವ್ಯಾಸರು ಪರಮ ಬ್ರಾಹ್ಮಣಮೂರ್ತಿಗಳು. ಆದರೆ ಅವರು ಮೂಲತಃ ಬ್ರಾಹ್ಮಣರಲ್ಲ! ಹಿಂದೂಧರ್ಮದ ದಿವ್ಯತತ್ತ್ವಗಳ ಬಗ್ಗೆ ಉಜ್ವಲ ನಿದರ್ಶನವಾಗಿ ಬಾಳಿ ಬೆಳಗಿ ತಲತಲಾಂತರಗಳಿಂದ ಕೋಟಿಕೋಟಿ ಜನರ ಭಕ್ತಿ-ಗೌರವಗಳಿಗೆ ಪಾತ್ರರಾಗಿ ಇಂದಿಗೂ ದಿನದಿನವೂ ಜಗದ ಜನಕೋಟಿಯಿಂದ ಪೂಜಿಸಲ್ಪಡುವ ಶ್ರೀರಾಮಚಂದ್ರ ಭಗವಂತ, ಶ್ರೀಕೃಷ್ಣ ಪರಮಾತ್ಮ ಇವರು ಜನ್ಮದಿಂದ ಬ್ರಾಹ್ಮಣ ವಂಶದವರಲ್ಲ! ಹಿಂದೂಧರ್ಮದ ಮುಖ್ಯವಾದ ಆಧಾರಗ್ರಂಥಗಳ ರಚನೆಯನ್ನು ಮಾಡಿದವರು ಮೂಲತಃ ಬ್ರಾಹ್ಮಣರಲ್ಲ!

ಹಾಗೆಯೇ ವೇದಾದಿಶಾಸ್ತ್ರಗಳನ್ನು ಬ್ರಾಹ್ಮಣೇತರರು ಓದಬಾರದೆಂದು, ತಿಳಿಯಬಾರದೆಂದು ವೇದಗಳಲ್ಲಿ ಎಲ್ಲೂ ಇಲ್ಲ. ಎಲ್ಲೋ ಕೆಲವು ಆಚಾರಸಂಹಿತೆ, ಇನ್ನಿತರಗಳಲ್ಲಿದ್ದರೆ ಹಿಂದೂಧರ್ಮದ ಮಹೋನ್ನತ ಆಧಾರವಾದ ವೇದಗ್ರಂಥಗಳಲ್ಲಿ ಎಲ್ಲೂ ಅದರ ಪ್ರಸ್ತಾಪವಿರದ್ದರಿಂದ ಅದಕ್ಕೆ ಬೆಲೆಯೇನೂ ಇರುವುದಿಲ್ಲ. ಅಲ್ಲದೆ ಹಿಂದೂಧರ್ಮದ ಪರಂಪರೆಯಲ್ಲಿ ಅಸಂಖ್ಯಾತ ಮಂದಿ ಬ್ರಾಹ್ಮಣೇತರರು ಸತ್ಕರ್ಮ, ತಪಸ್ಸು, ಸಾಧನೆಗಳಿಂದ ದಿವ್ಯಜ್ಞಾನಪಡೆದು ಪುಣ್ಯಪುರುಷರಾಗಿ ಬೆಳಗಿರುವುದರಿಂದ ಈ ಆರೋಪಕ್ಕೆ ಏನೂ ಬಲವಿರುವುದಿಲ್ಲ. ಆಧುನಿಕ ಕಾಲದಲ್ಲಿ ಹಿಂದೂಧರ್ಮದ ವಿಶೇಷ ಪ್ರಸಾರ ಮಾಡಿದ ಸ್ವಾಮಿ ವಿವೇಕಾನಂದರು ಈ ಬಗ್ಗೆ ಹೇಳುತ್ತಾ "ವೇದವೇ ನಮ್ಮ ಪ್ರಮಾಣ. ಅದನ್ನು ಓದುವುದಕ್ಕೆ ಎಲ್ಲರಿಗೂ ಅಧಿಕಾರವಿದೆ" ಎಂದು ಸ್ಪಷ್ಟಪಡಿಸಿರುತ್ತಾರೆ. ಶುಕ್ಲ ಯಜುರ್ವೇದದ ಮಾಧ್ಯಂದಿನ ಶಾಖೆಯ ಇಪ್ಪತ್ತಾರನೇ ಅಧ್ಯಾಯದಿಂದ ವೇದಮಂತ್ರವೊಂದನ್ನು ಉದ್ಧರಿಸುತ್ತಾ ಈ ಬಗ್ಗೆ ವಿವರವಾಗಿ ಸ್ವಾಮಿ ವಿವೇಕಾನಂದರು ಹೇಳಿರುವುದು ನಮಗಿಲ್ಲಿ ಸ್ಮರಣೀಯವಾಗಿದೆ :

**ಯಥೇಮಾಂ ವಾಚಂ ಕಲ್ಯಾಣೀಮಾವದಾನಿ ಜನೇಭ್ಯಃ ।**
**ಬ್ರಹ್ಮರಾಜನ್ಯಾಭ್ಯಾಂ ಶೂದ್ರಾಯ ಚಾರ್ಯಾಯ ಚ ಸ್ವಾಯ ಚರಣಾಯ ॥***

"ವೇದಗಳಿಂದ ಅದನ್ನು ಓದಲು ಎಲ್ಲರಿಗೂ ಅಧಿಕಾರವಿಲ್ಲ ಎಂಬ ಯಾವುದಾದರೂ ಪ್ರಮಾಣವನ್ನು ತೋರಬಲ್ಲಿರಾ? ಪುರಾಣಗಳೇನೋ, ವೇದಗಳ ಕೆಲವು ಭಾಗಗಳಿಗೆ ಕೆಲವರಿಗೆ ಅಧಿಕಾರವಿದೆ, ಮತ್ತೆ ಕೆಲವು ಪಂಗಡದವರಿಗೆ ಅಧಿಕಾರವಿಲ್ಲ ಎಂದು ಹೇಳಿರಬಹುದು. ವೇದಗಳ ಈ ಭಾಗ ಸತ್ಯಯುಗಕ್ಕೆ ಸೇರಿದ್ದು, ಆ ಭಾಗ ಕಲಿಯುಗಕ್ಕೆ ಸೇರಿದ್ದು ಎಂದು ಹೇಳಬಹುದು. ಆದರೆ ಇದನ್ನು ನೆನಪಿನಲ್ಲಿಡಿ. ವೇದಗಳು ಇದನ್ನು ಹೇಳುವುದಿಲ್ಲ; ಪುರಾಣಗಳು ಹೇಳುವುವು. ಸೇವಕ ಸ್ವಾಮಿಗೆ ಆಜ್ಞೆ ಮಾಡಬಲ್ಲನೆ? ಸ್ಮೃತಿ, ಪುರಾಣ, ತಂತ್ರ—ಇವೆಲ್ಲ ಎಲ್ಲಿಯವರೆಗೆ ವೇದಕ್ಕೆ ಅಧೀನವಾಗಿರುವುವೋ ಅಲ್ಲಿಯವರೆಗೆ ಇದನ್ನು ಒಪ್ಪಿಕೊಳ್ಳಬಹುದು. ಎಲ್ಲಿ ಅವು ವೇದವನ್ನು ವಿರೋಧಿಸುವುವೋ ಅಲ್ಲಿ ಅವನ್ನು ನಿರಾಕರಿಸಬಹುದು."

—ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ,
ಕೊಲೊಂಬೋ ಇಂದ ಆಲ್ಮೊರಕ್ಕೆ ಉಪನ್ಯಾಸಗಳು, ಪು. ೩೩೦

* ಈ ವೇದವಾಣಿಯನ್ನು ನಾನು ಜನಸಮುದಾಯಕ್ಕೆ, ಬ್ರಾಹ್ಮಣರಿಗೆ, ಕ್ಷತ್ರಿಯರಿಗೆ, ವೈಶ್ಯರಿಗೆ, ಶೂದ್ರರಿಗೆ, ನನ್ನವರಿಗೆ ಮತ್ತು ಹೊರಗಿನವರಿಗೆ ಎಲ್ಲರ ಉನ್ನತಿಗಾಗಿ ಪ್ರಕಾಶಪಡಿಸುವಂತಾಗಲಿ.

ದೇಗುಲಗಳಲ್ಲಿ ಅರ್ಚನೆಗೆ ಬ್ರಾಹ್ಮಣರು ಮಾತ್ರ ಅರ್ಹರು ಎಂಬ ನಂಬಿಕೆಯಲ್ಲಿ ತಪ್ಪೇನಿಲ್ಲ. ಇಲ್ಲಿ ಬ್ರಾಹ್ಮಣರೆಂದರೆ ಹುಟ್ಟಿನಿಂದ ಮಾತ್ರವಲ್ಲ, ಗುಣಕರ್ಮದಿಂದಲೂ ಬ್ರಾಹ್ಮಣರು ಎಂಬುದನ್ನು ನೆನಪಿಡಬೇಕು. ವಿಧಿಯುಕ್ತವಾಗಿ ಸಮರ್ಥರಿಂದ ಗಾಯತ್ರಿ ಮಂತ್ರೋಪದೇಶಪಡೆದು ಸತ್‌ಸಂಸ್ಕಾರಹೊಂದಿ ದೇಗುಲದಲ್ಲಿ ಪೂಜೆಮಾಡುವ ಬಗ್ಗೆ, ಪೌರೋಹಿತ್ಯ ನಡೆಸುವ ಬಗ್ಗೆ ವಿಧಿವಿಧಾನಗಳನ್ನು ಶಾಸ್ತ್ರೋಕ್ತವಾಗಿ ಕಲಿತು ನೈಪುಣ್ಯ ಹೊಂದಿದವರು ದೇವಾಲಯಗಳಲ್ಲಿ ಪೂಜೆಯ ಕಾರ್ಯನಿರ್ವಹಿಸಲು, ಪೌರೋಹಿತ್ಯ ನಡೆಸಲು ಅರ್ಹರಾಗುತ್ತಾರೆ. ಬ್ರಾಹ್ಮಣಪರಂಪರೆಯ ಕುಟುಂಬದಲ್ಲಿ ಹುಟ್ಟಿ ಅದರಂತೆ ಬ್ರಾಹ್ಮಣನೆಂದು ಕರೆಸಿಕೊಳ್ಳುವವರು ಈ ವಿಧಿವಿಧಾನಗಳನ್ನು ಕಲಿಯಲು ಹೆಚ್ಚು ಶ್ರಮಪಡಬೇಕಾಗಿ ಬರುವುದಿಲ್ಲ. ಆ ಮಟ್ಟಿಗೆ ಅವರು ಇತರರಿಗಿಂತ ಅನುಕೂಲದ ಉತ್ತಮ ಮಟ್ಟದಲ್ಲಿ ಇದ್ದಾರೆ ಎಂಬುದರಿಂದ ಬ್ರಾಹ್ಮಣಕುಲದಲ್ಲಿ ಹುಟ್ಟಿದವರು ಮೇಲು ಎಂಬ ಸಾಮಾಜಿಕ ಭಾವನೆಗೆ ಅವಕಾಶವಾಯಿತು. ಅಲ್ಲದೆ ಬ್ರಾಹ್ಮಣರ ವೃತ್ತಿಯೇ ವೇದಾಧ್ಯಯನ, ಅಧ್ಯಾಪನ, ದೇಗುಲದಲ್ಲಿ ಅರ್ಚನೆಮಾಡುವುದು, ಪೌರೋಹಿತ್ಯ ಕೆಲಸಗಳನ್ನು ನಿರ್ವಹಿಸುವುದು ಎಂಬುದು ಪರಂಪರೆಯಿಂದ ನಡೆದುಬಂದ ಧರ್ಮಸಮ್ಮತವಾದ ಸಂಗತಿಯಾಗಿದೆ. ಹಾಗಾಗಿ ವೇದಾಧ್ಯಯನಕ್ಕೆ, ಅರ್ಚಕರ ವೃತ್ತಿಗೆ, ಪುರೋಹಿತ ವೃತ್ತಿಗೆ ಬ್ರಾಹ್ಮಣನು ಇತರರಿಗಿಂತ ಹೆಚ್ಚು ಸುಲಭದಲ್ಲಿ ಪಾರಂಗತನಾಗುತ್ತಾನೆಯಾದ್ದರಿಂದ ಅವನಿಗೆ ಪರಂಪರಾಗತವಾಗಿ ವಿಶಿಷ್ಟವಾದ ಮನ್ನಣೆ ದೊರಕಲು ಕಾರಣವಾಗಿದೆ. ಆದರೆ ಹಿಂದೂಧರ್ಮದಲ್ಲಿ ಬ್ರಾಹ್ಮಣೇತರರು ಬ್ರಾಹ್ಮಣನ ಸ್ಥಾನಕ್ಕೆ ಸಾಧನೆಯಿಂದ, ಸಂಸ್ಕಾರದಿಂದ ಏರಬಾರದು ಎಂದು ಎಲ್ಲಿಯೂ ಹೇಳಿಲ್ಲವಾದ್ದರಿಂದ ಬ್ರಾಹ್ಮಣತ್ವ, ಬ್ರಾಹ್ಮಣರು ನಡೆಸುವ ವೃತ್ತಿ ಒಂದು ಪಂಗಡದವರಿಗೇ ಸೀಮಿತವಾದುದು ಎಂದು ಹೇಳುವುದಾಗಲಿ, ಆರೋಪಿಸುವುದಾಗಲಿ, ಆಕ್ಷೇಪಿಸುವುದಾಗಲಿ ನ್ಯಾಯಸಮ್ಮತವಾಗುವುದಿಲ್ಲ.

ಹಿಂದೂಸಮಾಜದಲ್ಲಿನ ಅನೇಕ ಜಾತೀಯ ಭೇದಭಾವನೆಗಳಿಗೆ ಬ್ರಾಹ್ಮಣರೇ ಕಾರಣರು ಎನ್ನುವುದು ಸತ್ಯಸಮ್ಮತವಲ್ಲ. ಏಕೆಂದರೆ ಜಾತಿವಿಂಗಡಣೆ ಮಾಡಿದವರು ಬ್ರಾಹ್ಮಣರಲ್ಲ. ಗುಣಕರ್ಮಕ್ಕೆ ಅನುಸಾರವಾಗಿ ವರ್ಣವಿಂಗಡಣೆ ಪ್ರಕೃತಿದತ್ತವಾದ ನಿಯಮಕ್ಕೆ ಅನುಗುಣವಾಗಿ ಮೂಡಿಬಂದಿದೆ. ವೃತ್ತಿಯನ್ನು ಅನುಸರಿಸಿ ಸಾಮಾಜಿಕವಾಗಿ ಪಂಗಡಗಳು ಹುಟ್ಟಿಕೊಂಡು ಜಾತಿ ಎಂದು ಹೆಸರುಪಡೆದು ವಿವಿಧ ರೀತಿಯ ವಿಂಗಡಣೆಗೆ ಸಾಮಾಜಿಕವಾದ ಪರಿಸರ, ಪ್ರೇರಣೆಗಳಿಂದ ಅವಕಾಶವಾಯಿತು. ಬ್ರಾಹ್ಮಣರು ಜಾತಿವಿಂಗಡಣೆ ಮಾಡಿ, ಬ್ರಾಹ್ಮಣೇತರರು ಬ್ರಾಹ್ಮಣರಾಗಕೂಡದು ಎಂದು ಸಾಮೂಹಿಕರಂಗದಲ್ಲಿ ಬೋಧನೆ, ಕಾರ್ಯಕ್ರಮ ಅನುಷ್ಠಾನ ಮಾಡಿದ್ದರೆ ಅವರು ಆರೋಪಣೆಗೆ ಅರ್ಹರು. ಇಲ್ಲಿ ವ್ಯಕ್ತಿಗತವಾಗಿ, ಇಲ್ಲವೇ ಸಣ್ಣ ಪಂಗಡಗಳಾಗಿ ಬ್ರಾಹ್ಮಣರಿಂದ ತಪ್ಪು ಬೋಧನೆ-ಆಚಾರ-ನಡವಳಿಕೆಗಳು ಆಗಿದ್ದರೆ ಅದು ಗೌಣ. ಏಕೆಂದರೆ ಎಲ್ಲ ಪಂಗಡದವರಲ್ಲೂ ಕೆಟ್ಟವರು, ದುಷ್ಟದೃಷ್ಟಿಯವರು ಅಷ್ಟಿಷ್ಟು ಸಂಖ್ಯೆಯಲ್ಲಿ ಎಲ್ಲ ಕಾಲಗಳಲ್ಲೂ ಇರುತ್ತಾರೆ. ಅದು ಅನಿವಾರ್ಯ ; ಆದರೆ ಗೌಣವಿಚಾರ. ಜಾತಿಮತಗಳ ವೈಮನಸ್ಸು, ಧಾರ್ಮಿಕ ಅಜ್ಞಾನ, ಉತ್ತಮ ಧಾರ್ಮಿಕ ಜೀವನದ ಅನುಷ್ಠಾನದ ಅಭಾವ ಇವುಗಳು ಸಮಾಜದಲ್ಲಿ ಪ್ರಭಾವ ಬೀರದಂತೆ ಎಲ್ಲರೂ ಸಹಕರಿಸಿ ದುಡಿಯಲು ಪ್ರೇರಣೆ-ಪ್ರೋತ್ಸಾಹಗಳು

ಬ್ರಾಹ್ಮಣರಿಂದ ಎಲ್ಲ ಕಾಲದಲ್ಲೂ ಸಮಾಜಕ್ಕೆ ಬೇಕಷ್ಟು ದೊರಕಿವೆ. ಹಾಗೆಯೇ ಸನಾತನಧರ್ಮದ ನಿತ್ಯನೂತನ ತತ್ತ್ವಗಳ ರಕ್ಷಣೆ ಮತ್ತು ಪೋಷಣೆಗೆ ಬ್ರಾಹ್ಮಣರು ಸಾಕಷ್ಟು ದುಡಿದು ಹಿಂದೂ ಸಮಾಜಕ್ಕೆ ಹಾಗೂ ದೇಶಕ್ಕೆ ಎಲ್ಲ ಕಾಲಗಳಲ್ಲೂ ವಿಶೇಷವಾಗಿ ಸೇವೆಸಲ್ಲಿಸಿರುತ್ತಾರೆ.

ಹಿಂದೂಧರ್ಮದ ತತ್ತ್ವಸಂದೇಶಗಳ ಪ್ರಕಾರವಾಗಿ ಬ್ರಾಹ್ಮಣ್ಯ ಎನ್ನುವುದು ಒಂದು ಮಹೋನ್ನತ ಆದರ್ಶ. ಜೀವಿಯ ಆತ್ಮವಿಕಾಸದ ಹಾದಿಯ ಉನ್ನತೋನ್ನತಪೂರ್ಣ ವಿಕಾಸದ ಗುರಿ ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ ಎನ್ನುವ ವೇದೋಕ್ತ ವರ್ಣವಿಭಜನೆ ಗುಣಕರ್ಮಗಳ ಆಧಾರದಿಂದ ಆಗಿದ್ದು ಈ ನಾಲ್ಕು ಹಂತಗಳು ಜೀವಿಯ ವಿಕಾಸದ ವಿವಿಧ ಹಂತಗಳು ಎಂಬುದು ಸುಸ್ಪಷ್ಟವಾಗಿದೆ. ಹಿಂದೂಧರ್ಮವು ಎಲ್ಲರೂ ಬ್ರಾಹ್ಮಣಪದವಿಯೇರಿ ಅಂದರೆ ಬ್ರಹ್ಮಜ್ಞಾನವಂತರಾಗಿ ಪೂರ್ಣವಿಕಾಸವನ್ನು ಹೊಂದಬೇಕು ಎನ್ನುತ್ತದೆ ವಿನಾ ಬ್ರಾಹ್ಮಣರು ಮಾತ್ರ ಬ್ರಹ್ಮಜ್ಞಾನಿಗಳಾಗಬೇಕು ಎಂದು ಸಾರುವುದಿಲ್ಲ. ವರ್ಣ ಯಾವುದೇ ಇರಲಿ, ಎಲ್ಲ ವರ್ಣದವರೂ ಒಂದೇ ಸಮಾಜದ ವಿರಾಟಪುರುಷನ ಮಹಾ ಶರೀರಕ್ಕೆ ಸೇರಿದ ವಿವಿಧ ಅಂಗಗಳಂತೆ ಸ್ವರೂಪ ಮತ್ತು ಕಾರ್ಯಗಳು ಬೇರೆಬೇರೆಯಾದರೂ ಪರಸ್ಪರ ಸಂಬಂಧ ಇರುವವರು ಎಂಬುದು ಬ್ರಾಹ್ಮಣರೂ, ಬ್ರಾಹ್ಮಣೇತರರೂ, ಎಲ್ಲರೂ ಅಭಿಮಾನದಿಂದ, ಆದರದಿಂದ ಅರಿತಿರಬೇಕಾದ ಆಧ್ಯಾತ್ಮಿಕ ಸತ್ಯ ; ಸಾಮಾಜಿಕ ಸಾಮರಸ್ಯ ಸಾಧಿಸಲು ಬಳಸಬೇಕಾದ ಸಾಧನಸೂತ್ರ.

ಆಕ್ಷೇಪ (೮) : ಹಿಂದೂ ಸಮಾಜಕ್ಕೆ ಸೇರಿದ ಮಠಮಂದಿರಗಳಲ್ಲಿ ಪೂಜಾಸಂದರ್ಭಗಳಲ್ಲಿ ಸಂಸ್ಕಾರಗಳ ಅನುಷ್ಠಾನಸಂದರ್ಭದಲ್ಲಿ ಮಂತ್ರಗಳನ್ನು ಸಂಸ್ಕೃತಭಾಷೆಯಲ್ಲಿಯೇ ಹೇಳುವ ಸಂಪ್ರದಾಯವಿದೆ. ಇತರ ಭಾಷೆಯಲ್ಲಿ ಹೇಳಿದರೆ ಅಪಚಾರವಾಗುತ್ತದೆ ಎಂಬ ಹೇಳಿಕೆ ಪ್ರಚಲಿತವಿದೆ.

ಸಮಾಧಾನ : ಗುರುದೇವತಾಪ್ರಾರ್ಥನೆ–ಆರಾಧನೆಗಳು ಹಾಗೂ ಜೀವಿಯ ಜೀವನ ಯಾತ್ರೆಯಲ್ಲಿನ ವಿವಿಧ ಸಂಸ್ಕಾರಗಳ ಅನುಷ್ಠಾನದ ಸಂದರ್ಭಗಳಲ್ಲಿ ಬಳಸುವ ಮಂತ್ರಗಳ ರಚಯಿತರು ಆಧುನಿಕರಲ್ಲ, ಪ್ರಾಚೀನ ಮಹರ್ಷಿಗಳು. ಮಹರ್ಷಿಗಳೆಂದರೆ ಅವರು ತಮ್ಮ ಪಾವನತಪಸ್ಸಿನ ಬಲದಿಂದ ಮಂತ್ರಗಳ ದರ್ಶನಹೊಂದಿದ ಮಹಾನುಭಾವರು. ಮಂತ್ರದ್ರಷ್ಟಾರರಾದ ಮಹರ್ಷಿಗಳಿಗೆ ಕಂಡು ಕೇಳಿಬಂದ ದಿವ್ಯಮಂತ್ರಗಳ ಭಾಷೆ ಸಂಸ್ಕೃತ —ಅದರ ಶಬ್ದ ಉಚ್ಚಾರಣೆ, ಅದರಿಂದ ಉತ್ಪತ್ತಿಯಾಗುವ ನಾದಸಂಪತ್ತು, ಅದರಲ್ಲಿ ಅಡಗಿರುವ ಆಧ್ಯಾತ್ಮಿಕ ಶಕ್ತಿ, ಅದರಿಂದಾಗಿ ಮಾನವರ ದೇಹ-ಮನಗಳ ಮೇಲೆ ಆಗುವ ಪವಿತ್ರ ಪರಿಣಾಮದ ವೈಶಿಷ್ಟ್ಯದ ಬಗ್ಗೆ ಪ್ರತ್ಯಕ್ಷಾನುಭವದ ಮೂಲಕ ಮಹರ್ಷಿಗಳು ಕಂಡುಕೊಂಡು ಸಂಸ್ಕೃತಭಾಷೆಯ ಸಂಸ್ಕಾರಶಕ್ತಿಯ ಹಿರಿಮೆ ಹಾಗೂ ವೈಶಿಷ್ಟ್ಯವನ್ನು ಮನಗಂಡರು. ಅದನ್ನು ತಮ್ಮ ಬದುಕು-ಬೋಧನೆಗಳ ಮೂಲಕ ಲೋಕಕ್ಕೆ ಸಾರಿದರು. ಕಾಲವು ಸರಿದಂತೆ ಅಸಂಖ್ಯಾತ ಮಹಾಪುರುಷರ, ಸಾಧುಸಂತರ, ಭಕ್ತರ ಜೀವನಸಂದೇಶಗಳ ಮೂಲಕ ಸಂಸ್ಕೃತಭಾಷೆಯಲ್ಲಿ ರೂಪುಗೊಂಡಿರುವ ಮಂತ್ರಸ್ತೋತ್ರಗಳ ಆಧ್ಯಾತ್ಮಿಕ ಮಹಿಮೆಯು ಸತ್ಯವೆಂದು ಅಭಿವ್ಯಕ್ತಗೊಂಡಿತು. ಈ ಸನಾತನಸತ್ಯ ಇಂದಿಗೂ ಅನುಭವ ಸತ್ಯ. ಹಾಗಾಗಿ ಸಂಸ್ಕೃತಭಾಷೆ ಪರಂಪರಾಗತವಾಗಿ ದೇವಭಾಷೆ, ದಿವ್ಯಭಾಷೆ ಎಂದು

ಪ್ರಖ್ಯಾತಿಹೊಂದಿತು. ಅವರ್ಣನೀಯವಾದ ಶಬ್ದಸೌಂದರ್ಯ, ಅಂತರ್ಗತವಾದ ಆಧ್ಯಾತ್ಮಿಕಶಕ್ತಿ, ಅನುಪಮವಾದ ಪವಿತ್ರಪ್ರಭಾವ ಸಂಸ್ಕೃತ ಮಂತ್ರಗಳಲ್ಲಿ ಅಡಗಿದೆ. ಗುರುದೇವತಾಪೂಜಾರಾಧನೆಗಳಲ್ಲಿ ಸಂಸ್ಕೃತಮಂತ್ರಗಳನ್ನು ವಿಧಿಪೂರ್ವಕವಾಗಿ ಬಳಸುವುದರಿಂದ ಮಂತ್ರೋಪಾಸನೆಗಳಲ್ಲಿ ಭಕ್ತರಿಗೆ, ಉಪಾಸಕರಿಗೆ ನಿಶ್ಚಯವಾಗಿ ಪುರುಷಾರ್ಥ ಸಿದ್ಧಿ ಆಗುತ್ತದೆ. ಸಂಸ್ಕೃತಮಂತ್ರದ ನಾದಶಕ್ತಿ, ಪ್ರಯೋಗದಿಂದ ಪವಿತ್ರಪ್ರಭಾವ ಬೀರುವ ಸಾಮರ್ಥ್ಯ ಇವುಗಳ ಬಗ್ಗೆ ಆಗಿರುವಷ್ಟು ಪ್ರಯೋಗ, ಫಲಿಸಿದ ಸಿದ್ಧಿ, ಅದರ ಹಿನ್ನೆಲೆಯಲ್ಲಿರುವ ಅತಿಪ್ರಾಚೀನವಾದ ಮಹಾಮಹಿಮರ ಅನುಭವದ ಆಧಾರದ ಪರಂಪರೆ, ಸರ್ವಕಾಲದಲ್ಲೂ ಪ್ರಯೋಗಸಾಧ್ಯ ಎಂಬ ಭರವಸೆ ಜಗತ್ತಿನ ಯಾವ ಭಾಷೆಯಲ್ಲೂ ಕಂಡುಬರುವುದಿಲ್ಲ. ಇತರ ಭಾಷೆಗಳಲ್ಲಿ ಹೊಸ ಪ್ರಯೋಗಗಳನ್ನು ಮಾಡಿ ದಿವ್ಯ ಮಂತ್ರದರ್ಶನವಾಗಿ ಅದು ಸಂಸ್ಕೃತದಷ್ಟೇ ಉಪಯುಕ್ತ, ಫಲಕಾರಿ ಎಂದು ದೃಢವಾಗುವ ತನಕ ಆಗಲೇ ಪವಿತ್ರ ಹಾಗೂ ದಿವ್ಯಶಕ್ತಿಶಾಲಿಯಾದ ಸಂಸ್ಕೃತಮಂತ್ರಗಳನ್ನು ಬಳಸುವುದು ಅನಿವಾರ್ಯವಾಗುತ್ತದೆ. ಅಷ್ಟೇ ಅಲ್ಲ, ಅಗತ್ಯವೂ ಅನುಕೂಲವೂ ಆಗುತ್ತದೆ. ಈ ದೃಷ್ಟಿಯಿಂದ ಇತರ ಭಾಷೆಗಳನ್ನು ಬಳಸಿ ಪೂಜಾರಾಧನೆ-ಮಂತ್ರೋಪಾಸನೆ ಮಾಡಿದರೆ ಪ್ರಯೋಜನಕರವಲ್ಲ ಎಂದು ಹೇಳುವುದಾಗಿದೆಯಷ್ಟೆ.

ಆಕ್ಷೇಪ (೯) : ಹಿಂದೂಧರ್ಮದವರಲ್ಲಿ ಆಚರಣೆಯಲ್ಲಿರುವ ಧಾರ್ಮಿಕ ವಿಧಿವಿಧಾನಗಳಿಗೆ ಪ್ರಾಚೀನ ಸ್ಮೃತಿಗಳು ಆಧಾರವಾಗಿವೆ. ಹಳೆಯ ಇನ್ನಿತರ ಗ್ರಂಥಗಳು ಅವಲಂಬಿತವಾಗಿವೆ. ಆಧುನಿಕ ಕಾಲದಲ್ಲಿ ಯುಗಪರಿಸ್ಥಿತಿಗೆ ಬದಲಾದ ಸನ್ನಿವೇಶಕ್ಕೆ ತಕ್ಕಂತೆ ಸ್ಮೃತಿಗಳು ಪ್ರಾಚೀನ ಗ್ರಂಥಗಳಲ್ಲಿನ ವಿಧಿವಿಧಾನಗಳ ಮಟ್ಟಿಗೆ ಬದಲಾವಣೆಯೇನೂ ಆಗಿರುವುದಿಲ್ಲ. ಹಾಗೆ ಬದಲಾವಣೆ ಮಾಡದೆ ಹಿಂದಿನದನ್ನೇ ಅನುಸರಿಸಿಕೊಂಡು ಬರಬೇಕು ಎನ್ನುವುದು ಸಂಪ್ರದಾಯದ ಮೌಢ್ಯತೆ ಎಂದಾಗುತ್ತದೆ.

ಸಮಾಧಾನ : ಸ್ಮೃತಿಗಳು ವೇದಗಳಂತೆ ಅಪೌರುಷೇಯವಲ್ಲ. ಕಾಲಕಾಲಕ್ಕೆ ಮಹರ್ಷಿಗಳು ಸಮಾಜ ಜೀವನದ ಸುಗಮತೆಗೆ ಅನುಕೂಲ ಆಗುವಂತೆ ನಿಶ್ಚಯಿಸಿ ಬೋಧಿಸಿದ ಜೀವನ ನೀತಿ-ನಿಯಮ, ಸಂಸ್ಕಾರ-ವಿವರಗಳೇ ಸ್ಮೃತಿಗಳು. ಸ್ಮೃತಿಯಲ್ಲಿನ ತತ್ತ್ವವಿಚಾರಗಳು, ಉಪದೇಶದ ಅಂಶಗಳಿಗೆ ಸ್ಮೃತಿಯ ರಚಯಿತರ ಬದುಕು-ಅನುಭವಗಳು ಆಧಾರ. ಹಾಗೆಯೇ ಆಯಾಯಾ ಕಾಲದ ಜನಜೀವನದ ಸನ್ನಿವೇಶ, ಬೇಕುಬೇಡಿಕೆಗಳ ಪರಿಣಾಮವಾಗಿ ಧರ್ಮದ ಚೌಕಟ್ಟಿನಲ್ಲಿ ರೂಪಿಸಿ ಅಳವಡಿಸಿರುವ ತತ್ತ್ವಸೂತ್ರಗಳೇ ಸ್ಮೃತಿಗಳು.

ಕಾಲವು ಬದಲಾದಂತೆ, ಜೀವನ ಪರಿಸ್ಥಿತಿ ವ್ಯತ್ಯಾಸವಾದಂತೆ ಸಂದರ್ಭಕ್ಕೆ ಸರಿಯಾಗಿ ಲೋಕಕಲ್ಯಾಣಕ್ಕಾಗಿ ಹಿಂದೂಧರ್ಮದ ಪರಂಪರೆಯನ್ನು ಅನುಸರಿಸಿ ಆಗಿಂದಾಗ್ಗೆ ಮಹಾಪುರುಷರು ಜನ್ಮತಳೆದು ಧಾರ್ಮಿಕ ಸಂದೇಶವನ್ನು ನೀಡುತ್ತಾ ಬಂದಿರುತ್ತಾರೆ. ನೂತನ ಕಾಲದ ಮಠಾಚಾರ್ಯರು, ಧಾರ್ಮಿಕ ಮಹಾಪುರುಷರ ಬದುಕು-ಬೋಧನೆಗಳನ್ನು ಅನುಸರಿಸಿ ಸ್ಮೃತಿಗಳಿಗೆ ನೂತನ ಸ್ವರೂಪ ನೀಡಬಹುದು. ಇಲ್ಲವೆ ಹೊಸ ಸ್ಮೃತಿಗಳನ್ನು ರಚನೆಮಾಡಬಹುದು—ಯಾವ ಕಾಲಕ್ಕೂ ಬದಲಾಗದ, ಬೇಡವೆಂದಾಗದ ಸನಾತನಧರ್ಮದ ನಿತ್ಯನೂತನ ತತ್ತ್ವಗಳನ್ನು ಅನುಸರಿಸಿ ಸಾಮಾಜಿಕ ಆವಶ್ಯಕತೆಗಳನ್ನು ಗಮನದಲ್ಲಿ ಇಟ್ಟುಕೊಂಡು ಧರ್ಮಪೀಠಾಧಿಪತಿಗಳು, ಧಾರ್ಮಿಕ ವಿದ್ವಾಂಸರು, ಸೇವಾ

ಪ್ರಮುಖರು ಇವರೆಲ್ಲರ ಮೂಲಕ ಸ್ಮೃತಿಗಳಿಗೆ ನೂತನ ಸ್ವರೂಪ ಇಲ್ಲವೇ ಹೊಸ ಸ್ಮೃತಿಗಳ ರಚನೆಯನ್ನು ಮಾಡಬಹುದು.

ಈ ದಿಸೆಯಲ್ಲಿ ಕಾರ್ಯನಿರ್ವಹಿಸಲು ಸ್ವಾಮಿ ದಯಾನಂದ ಸರಸ್ವತಿ, ಶ್ರೀರಾಮ ಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರು, ಶ್ರೀಮಾತೆ ಶಾರದಾದೇವಿಯವರು, ಮಹರ್ಷಿ ಶ್ರೀ ಅರವಿಂದರು, ಮಹಾತ್ಮಾ ಗಾಂಧೀಜಿಯವರು ಇತ್ಯಾದಿ ಅನೇಕ ಮಹಾ ಮಹಿಮರ ಬದುಕು-ಬೋಧನೆಗಳು ತುಂಬ ಸಹಕಾರಿಯಾಗಿವೆ.

ಆಕ್ಷೇಪ (೧೦) : ಹಿಂದೂಧರ್ಮದಲ್ಲಿ ಅನೇಕವಾದ ಮತ್ತು ಬಹುವಿಧದ ಧರ್ಮ ಗ್ರಂಥಗಳೂ ಕಥೆಗಳೂ ಸಿದ್ಧಾಂತಗಳೂ ಇವೆ. ಸಹಸ್ರಾರು ರೀತಿಯ ಈ ಕಥೆಗಳು, ಸಿದ್ಧಾಂತಗ್ರಂಥಗಳು ಸಾಕಷ್ಟು ಗೊಂದಲವನ್ನು ಜೀವಿಯ ಮನದಲ್ಲಿ ಉಂಟುಮಾಡು ವಂತಿವೆ.

ಸಮಾಧಾನ : ಇರುವುದು ಒಂದೇ ಸತ್ಯ. ಅದನ್ನು ಗುಣಕರ್ಮ-ಬುದ್ಧಿ-ಯೋಗ್ಯತೆ-ವಿಚಾರಶಕ್ತಿ, ಧಾರ್ಮಿಕವಾದ ದೃಷ್ಟಿಯಿಂದ ಅಧ್ಯಾತ್ಮತತ್ತ್ವಗಳನ್ನು ಅರ್ಥಮಾಡಿ ಕೊಳ್ಳುವ ಸಾಮರ್ಥ್ಯ—ಈ ದೃಷ್ಟಿಯಿಂದ ಬೇರೆ ಬೇರೆ ಮಟ್ಟದಲ್ಲಿ ಇರುವ ಬೇರೆ ಬೇರೆ ಜೀವಿಗಳಿಗೆ ಸತ್ಯದ ಅರಿವಾಗಿ, ತನ್ಮೂಲಕ ಆಯಾಯಾ ಹಂತದಿಂದ ಮೇಲಿನ ಹಂತಕ್ಕೆ ಅವರು ಸಾಗಿ ಅಭಿವೃದ್ಧಿಪಡೆಯುತ್ತಾ ಬೇಗನೆ ಗುರಿ ಸೇರಲು ನೆರವಾಗುವಂತಾಗಲಿ ಎಂಬ ದೃಷ್ಟಿಯಿಂದಲೇ ಹಿಂದೂಧರ್ಮದಲ್ಲಿ ಹಲವು ರೀತಿಯಲ್ಲಿ ಧಾರ್ಮಿಕ ತತ್ತ್ವ ಗಳನ್ನು ಹಾಗೂ ಅಧ್ಯಾತ್ಮಸತ್ಯವನ್ನು ವೇದ, ಉಪನಿಷತ್ತು, ಗೀತೆ, ಪುರಾಣ, ಇತಿ ಹಾಸ ಇತ್ಯಾದಿಗಳ ಮೂಲಕ ಪ್ರಕಟಪಡಿಸಲಾಗಿದೆ. ಪ್ರಕಟಣೆಯ ಸ್ವರೂಪ, ಧಾಟಿಗಳು ಬೇರೆಬೇರೆಯಾದರೂ ಅಂತರ್ಗತವಾಗಿರುವ ತತ್ತ್ವ-ಉದ್ದೇಶಗಳು ಒಂದೇ ಆಗಿರುವುದು ಮಾತ್ರವಲ್ಲದೆ ಹಿಂದೂಧರ್ಮದ ಮೂಲವಾದ, ಶಾಶ್ವತವಾದ ತತ್ತ್ವಗಳನ್ನೇ ಬೇರೆ ಬೇರೆ ಮಾತುಗಳ ಮೂಲಕ ಈ ಪುರಾಣ, ಇತಿಹಾಸ ಇತ್ಯಾದಿಗಳಲ್ಲಿ ಸ್ಪಷ್ಟಪಡಿಸಲಾಗಿರು ವುದಷ್ಟೇ. ಹಾಗಾಗಿ ಇದರಿಂದ ಯಾವ ರೀತಿಯ ಗೊಂದಲ ಉಂಟಾಗಲೂ ಕೂಡ ತಾತ್ತ್ವಿಕವಾದ, ಸಹಜವಾದ ಕಾರಣವಾಗಲಿ ಅವಕಾಶವಾಗಲಿ ಇರುವುದಿಲ್ಲ. ಯಾರು ಯಾರಿಗೆ ಯಾವ ಯಾವ ಗ್ರಂಥ, ಪಂಥಗಳು ಅನುಕೂಲವೆಂದು ತೋರುವುದೋ ಅವನ್ನು ಅನುಸರಿಸಿ ಕೃತಾರ್ಥರಾಗಲು ಈ ರೀತಿ ಸ್ವಾತಂತ್ರ್ಯ, ಅವಕಾಶಗಳನ್ನು ಹಿಂದೂ ಧರ್ಮದಲ್ಲಿ ನೀಡಲಾಗಿದೆ.

ಆಕ್ಷೇಪ (೧೧) : ಹಿಂದೂಧರ್ಮದವರಲ್ಲಿ ವ್ಯವಸ್ಥಿತವಾದ ಒಂದು ಒಕ್ಕೂಟದ ಧಾರ್ಮಿಕ ಸಂಘಟನೆ, ಧಾರ್ಮಿಕವಾಗಿ ಎಲ್ಲರೂ ವಾರಕ್ಕೊಮ್ಮೆ ದೇವಾಲಯಗಳಲ್ಲಿ ಸೇರಬೇಕೆಂಬ ಶಿಸ್ತು-ನಿಯಮಗಳು ಇರುವುದಿಲ್ಲ. ಇದರಿಂದಾಗಿ ಸಮಾಜದಲ್ಲಿ ಧಾರ್ಮಿಕ ಅವ್ಯವಸ್ಥೆ, ಅಶಿಸ್ತು, ಅಸ್ಥಿರತೆಗಳಿಗೆ ಕಾರಣವಾಗಿದೆ.

ಸಮಾಧಾನ : ಹಿಂದೂಧರ್ಮದ ಪ್ರಕಾರವಾಗಿ ಜೀವನವೆಂದರೆ ಮೌಲ್ಯವಿಲ್ಲದ ಅಥವಾ ಹಗುರವಾದ ಸಂಗತಿಯಲ್ಲ. ಹಾಗೆಯೇ ಧರ್ಮ ಎಂದರೆ ಜೀವನದ ದೈನಂದಿನ ಆಗುಹೋಗುಗಳಿಂದ ಹೊರತಾದ ಸಂಗತಿಯೂ ಅಲ್ಲ. ಜೀವಿಯ ಜೀವನದ ಪ್ರತಿಯೊಂದು ವಿಚಾರ ಹಾಗೂ ಹೆಜ್ಜೆಗಳಲ್ಲೂ ಧರ್ಮವು ಅನುಷ್ಠಾನಕ್ಕೆ ಬರಬೇಕು, ಮಾತ್ರವಲ್ಲದೆ

ಜೀವನದ ಎಲ್ಲಾ ಆಗುಹೋಗುಗಳಿಗೂ ಧರ್ಮವೇ ಆಧಾರವಾಗಿರಬೇಕು ಎಂಬುದು ಹಿಂದೂಧರ್ಮದ ಸ್ಪಷ್ಟವಾದ ಮತ್ತು ನಿಶ್ಚಯವಾದ ನಿಲುವು ಆಗಿರುತ್ತದೆ. ತದನುಸಾರ ವಾಗಿ ಜೀವನದ ಪ್ರತಿಯೊಂದು ಆಗುಹೋಗುಗಳಿಗೂ ಅನ್ವಯವಾಗುವಂತೆ ನೀತಿಧರ್ಮ ಗಳು, ಆಚಾರಧರ್ಮಗಳು, ವ್ಯವಹಾರಕ್ರಮಗಳು, ಧಾರ್ಮಿಕವಾದ ನಿಬಂಧನೆಗಳನ್ನು ಹೇಳಲಾಗಿದ್ದು ಅವೆಲ್ಲವೂ ವ್ಯಕ್ತಿಯ ಜೀವನದ ವೈಯಕ್ತಿಕ ಪ್ರಗತಿಗೂ, ಭದ್ರತೆಗೂ ಮತ್ತು ಸಾಮೂಹಿಕ ಜೀವನದ ಹಿತದ ಪೋಷಣೆ ಹಾಗು ರಕ್ಷಣೆಗೂ ಸಹಕಾರಿಯಾಗು ವಂತೆ ರೂಪಿಸಲ್ಪಟ್ಟಿವೆ. ಹಿಂದೂಧರ್ಮದ ಪ್ರಕಾರ ಶಿಸ್ತು, ನೀತಿ ಇತ್ಯಾದಿಗಳೆಲ್ಲ ಸಾಮೂಹಿಕವಾಗಿ ಅನುಷ್ಠಾನಕ್ಕೆ ಬರುವ ಮೊದಲು ವ್ಯಕ್ತಿಗತವಾಗಿ ಜೀವನದಲ್ಲಿ ಬೆರೆಯಬೇಕು. ವ್ಯಕ್ತಿಗಳೆಲ್ಲ ಉತ್ತಮರೂ ಸುಸಂಸ್ಕೃತರೂ ಆದಾಗ ಸಮಾಜವೂ ಉತ್ತಮ ವಾಗುತ್ತದೆ. ಎಲ್ಲಾ ವ್ಯಕ್ತಿಗಳೂ ಒಂದೇ ಬುದ್ಧಿ-ಗುಣಕರ್ಮಗಳಿಂದ ಕೂಡಿದವರಾಗಿರು ವುದಿಲ್ಲವಾದ್ದರಿಂದ ಎಲ್ಲರಿಗೂ ಒಂದೇ ಶಿಸ್ತನ್ನು ಏಕಕಾಲದಲ್ಲಿ ಜಾರಿಗೆ ತರಲು ಹೊರಟರೆ ಎಲ್ಲರಿಗೂ ಒಂದೇ ಅಳತೆಯ ಷರಟನ್ನು ಧರಿಸಲು ನೀಡಿದಂತೆಯೇ ಆಗುತ್ತದೆ ಷರಟಿನ ಅಳತೆ ವ್ಯತ್ಯಾಸವಾದರೆ ಷರಟಾಗಲಿ, ಷರಟಿಗೆ ಉಪಯೋಗಿಸುವ ಬಟ್ಟೆ ಎಂಬ ಸಾಧನ ವಾಗಲಿ ಮೂಲದಲ್ಲಿ ಹೇಗೆ ವ್ಯತ್ಯಾಸವಾಗುವುದಿಲ್ಲವೋ ಹಾಗೆಯೇ ನೀತಿ-ಧರ್ಮ-ಶಿಸ್ತು ಎಂಬವುಗಳೂ ಕೂಡ ಮೂಲತಃ ವ್ಯತ್ಯಾಸವಾಗುವುದಿಲ್ಲ ಆದರೆ ಷರಟಿನ ಬಟ್ಟೆಯ ಬಣ್ಣ, ಅಳತೆಗಳೂ ವ್ಯತ್ಯಾಸವಾದಂತೆ ವ್ಯಕ್ತಿಗಳನ್ನು ಹೊಂದಿಕೊಂಡು ಗುಣ-ಕರ್ಮಗಳಿಗೆ ಅನುಗುಣವಾಗಿ ಶಿಸ್ತು–ಧರ್ಮ–ನೀತಿಗಳ ಪ್ರಯೋಗ ಹಾಗೂ ವ್ಯಾಪ್ತಿಗಳ ಮಟ್ಟಿಗೆ ಅಲ್ಪಸ್ವಲ್ಪ ವ್ಯತ್ಯಾಸ ಕಂಡುಬರಬಹುದು. ಆದುದರಿಂದ ಹಿಂದೂಧರ್ಮದಲ್ಲಿ ನೀತಿ-ಧರ್ಮಗಳು ಸಾಮೂಹಿಕವಾಗಿ ಇಲ್ಲ ಎನ್ನುವುದರಲ್ಲಿ ಸತ್ಯಾಂಶವಿರುವುದಿಲ್ಲ. ವ್ಯಕ್ತಿಗತ ವಾದ ನೀತಿ-ಧರ್ಮ-ಶಿಸ್ತುಗಳನ್ನು ಜೀವನದಲ್ಲಿ ಅದನ್ನು ಪೋಷಿಸಿ ರಕ್ಷಿಸಲೂ ಸಾಧ್ಯ ವಾಗುವಂತೆ ಹಿಂದೂಧರ್ಮದಲ್ಲಿ ಅನೇಕ ರೀತಿಯ ಸಾಮಾಜಿಕವಾದ ಕಟ್ಟುಪಾಡುಗಳೂ ಆಚಾರವಿಧಿವಿಧಾನಗಳೂ ಹೇಳಲ್ಪಟ್ಟಿವೆ. ಒಂದು ವಾರಕ್ಕೊಮ್ಮೆ ಮಂದಿರಗಳಲ್ಲಿ ಸಾಮೂಹಿಕವಾಗಿ ಸೇರಿ ಎಲ್ಲರೂ ಒಂದೇ ವಿಧದ ಆರಾಧನೆ, ಧಾರ್ಮಿಕ ಚಿಂತನೆಗಳಲ್ಲಿ ಭಾಗಿಗಳಾಗುವುದರಲ್ಲಿ ಆರಾಧನಾಸ್ವಾತಂತ್ರ್ಯವಾಗಲಿ, ಗುಣಸ್ವಭಾವಗಳನ್ನು ಅನುಸರಿಸಿ ಅಧ್ಯಾತ್ಮಪಥದಲ್ಲಿ ಮುನ್ನಡೆಯಲು ಅವಕಾಶವಾಗಲಿ ಇರುವುದಿಲ್ಲ. ದಿನದ ಪ್ರತಿ ಸಂಧಿ ಕಾಲಗಳಲ್ಲಿ, ಅಷ್ಟೇ ಅಲ್ಲದೆ ನಿಮಿಷನಿಮಿಷಕ್ಕೂ ಎಂಬಂತೆ ಹಿಂದುವು ಭಗವಂತನ ಚಿಂತನೆ, ಆತ್ಮಚಿಂತನೆಗಳಲ್ಲಿ ಮಗ್ನನಾಗಿರಬೇಕು. ತಾನು ಮಾಡುವ ಎಲ್ಲಾ ಕೆಲಸಗಳನ್ನೂ ಯೋಗಯುಕ್ತವಾದ ದೃಷ್ಟಿಯಿಂದ, ಭಗವದರ್ಪಣಭಾವದಿಂದ ಕೌಶಲ್ಯಪೂರ್ಣವಾಗಿ ನಿರ್ವಹಿಸಬೇಕು. ಆದುದರಿಂದ ಹಿಂದೂವಿಗೆ ವಾರದ ಒಂದು ದಿನದ ಆರಾಧನಾವಿಧಿ ಯಾಗಲಿ, ಸಾಮೂಹಿಕವಾಗಿ ಸೇರುವಿಕೆಯಾಗಲಿ ಪ್ರಯೋಜನಕ್ಕೆ ಬರುವಂತಿಲ್ಲ ಅಲ್ಲದೆ, ಅವರವರ ಆರಾಧನಾದೃಷ್ಟಿ, ಇಚ್ಛೆಗಳಿಗೆ ಅನುಗುಣವಾಗಿ ಅವರವರು ತಮ್ಮ ಮನೆಗಳಲ್ಲೇ ಪ್ರಾರ್ಥನಾಮಂದಿರಗಳನ್ನು ಏರ್ಪಡಿಸಿಕೊಳ್ಳುತ್ತಾರೆ. ಹಿಂದೂವಿನ ಜೀವನದಲ್ಲಿ ಪ್ರಾರ್ಥನೆಯ ನಿಜವಾದ ಮಂದಿರ ಮನೆಯಲ್ಲೂ ಅಲ್ಲ, ಹೊರಗೆ ದೇಗುಲದಲ್ಲೂ ಅಲ್ಲ. ಛಮಾನವನ ದೇಹವೇ ದೇವಾಲಯ, ಹೃದಯವೇ ಭಗವಂತನ ಪವಿತ್ರವಾದ ವಾಸಸ್ಥಾನ

ಅಥವಾ ಗರ್ಭಗುಡಿ. ಭಗವಂತನು ಮಂದಿರದಲ್ಲಿ ವಿಗ್ರಹಗಳಲ್ಲಿ ಮಾತ್ರ ಅಷ್ಟಕ್ಕೇ ಸೀಮಿತನಾಗಿರುವುದಿಲ್ಲ. ಅವನು ಸರ್ವಶಕ್ತನೂ ಸರ್ವಾಂತರ್ಯಾಮಿಯೂ ಆಗಿದ್ದು ಸರ್ವರ ಹೃದಯಗಳಲ್ಲಿ ಆತ್ಮಸ್ವರೂಪಿಯಾಗಿ ನೆಲೆಸಿರುತ್ತಾನೆ ಎಂಬುದು ಹಿಂದೂವಿನ ಅಚಲವಾದ ನಂಬಿಕೆ, ನಿರ್ಧಾರವಾಗಿದ್ದು ಅದನ್ನು ಸರಿಯಾದ ಸಾಧನೆಯ ಮೂಲಕ ಸಾಕ್ಷಾತ್ಕರಿಸಲು ಸಾಧ್ಯವಿದೆ ಎಂಬ ಭರವಸೆಯನ್ನು ಹಿಂದೂಧರ್ಮಗ್ರಂಥಗಳಲ್ಲಿ ಸ್ಪಷ್ಟವಾಗಿ ನೀಡಲಾಗಿದೆ. ಆದುದರಿಂದ ಹಿಂದುವು ಆರಾಧನೆಗೆಂದು ಶಿಸ್ತಿನಿಂದ ಸಾಮೂಹಿಕವಾಗಿ ವಾರಕ್ಕೊಮ್ಮೆ ಹೋಗಬೇಕಾಗಿರುವುದಿಲ್ಲ. ಹಿಂದೂಧರ್ಮದಲ್ಲಿ ವ್ಯಕ್ತಿಗತವಾದ ಶಿಸ್ತು, ಆರಾಧನಾ ಸ್ವಾತಂತ್ರ್ಯಗಳೆಂದೂ ಸಾಮೂಹಿಕವಾಗಿ ಧಾರ್ಮಿಕ ಜೀವನವನ್ನು ಅಲ್ಲಗಳೆದಿರುವುದಿಲ್ಲ. ಹಲವು ರೀತಿಯ ಪರ್ವಗಳು, ಹಬ್ಬಗಳು, ರಥೋತ್ಸವ, ಜಾತ್ರೆ ಇತ್ಯಾದಿಗಳ ವೇಳೆಗಳಲ್ಲಿ ಹಿಂದುಗಳು ಊರಿನ ಮಂದಿರ, ತೀರ್ಥಕ್ಷೇತ್ರ ಇತ್ಯಾದಿಗಳಲ್ಲಿ ಸಾಮೂಹಿಕವಾಗಿ ಸೇರಿ ಧಾರ್ಮಿಕವಾದ ಜೀವನ-ಆರಾಧನೆಗಳಲ್ಲಿ ಭಾಗಿಗಳಾಗಿರುತ್ತಾರೆ. ಅಷ್ಟೇ ಅಲ್ಲದೆ, ಹಿಂದುವಿನ ಜೀವನದಲ್ಲಿ ಸಾಮಾನ್ಯವಾಗಿ ತನ್ನ ದೇಶದಲ್ಲಿರುವ ಅನೇಕ ಪ್ರಮುಖವಾದ ಮತ್ತು ಪ್ರಸಿದ್ಧವಾದ ಕ್ಷೇತ್ರಗಳಿಗೆ ತೀರ್ಥಯಾತ್ರೆ ಕೈಗೊಳ್ಳುವ ಸಂಕಲ್ಪವು ಇದ್ದು ಅದರಂತೆ ಅವನು ನಡೆದುಕೊಳ್ಳಲು ಯತ್ನಿಸುತ್ತಾನೆ. ಆಯಾಯಾ ಪಂಥಗಳಿಗೆ ಅನುಸರಿಸಿದಂತೆ ಗುರುಪೀಠಗಳು, ಮಠಾಧಿಪತಿಗಳು, ಧರ್ಮಶಾಸ್ತ್ರ, ಆಗಮಗಳು ಇವುಗಳ ವಿಧಿವಿವರಗಳು ಪ್ರತಿಯೊಬ್ಬ ಹಿಂದುವಿಗೂ ಸಂಬಂಧಿಸಿದಂತೆ ಇವೆ. ಆದುದರಿಂದ ಹಿಂದೂ ಸಮಾಜದಲ್ಲಿ ಧಾರ್ಮಿಕವಾದ ಶಿಸ್ತು, ನಡವಳಿಕೆಗಳು ಇಲ್ಲ ಎಂಬುದರಲ್ಲಿ ಸತ್ಯವಾಗಲಿ, ನ್ಯಾಯವಾಗಲಿ ಇರುವುದಿಲ್ಲ.

ಆಕ್ಷೇಪ (೧೨) : ಹಿಂದೂ ಧರ್ಮದವರಲ್ಲಿ ಅನೇಕ ರೀತಿಯ ಮೂಢನಂಬಿಕೆಗಳು, ಆಚರಣೆಗಳು, ಮೂರ್ತಿಪೂಜೆ ವಿಧಿಗಳು ಸೇರಿರುತ್ತವೆ. ಮಾತ್ರವಲ್ಲದೆ ಆರಾಧನೆಯ ವಿವರಗಳಲ್ಲೂ ವಿಪುಲವಾದ ವ್ಯತ್ಯಾಸಗಳೂ ವಿವಿಧತೆಗಳೂ ಇವೆ.

ಸಮಾಧಾನ : ವಿಷಯದ ಸರಿಯಾದ ಪರಿಜ್ಞಾನವಿಲ್ಲದೆ ನಂಬುವ ಎಲ್ಲಾ ನಂಬಿಕೆಗಳೂ ಮೂಢನಂಬಿಕೆಗಳೇ ಸರಿ. ಮಾನವಸಮಾಜದಲ್ಲಿ ಎಲ್ಲರೂ ಎಲ್ಲಿಯ ತನಕ ಏಕರೀತಿಯಲ್ಲಿ ಜ್ಞಾನಿಗಳೂ ವಿವೇಕಿಗಳೂ ಆಗಿರುವುದಿಲ್ಲವೋ ಅಲ್ಲಿಯ ತನಕ ಬುದ್ಧಿಶಕ್ತಿ, ವಿಚಾರಶಕ್ತಿ, ಇವುಗಳ ಪ್ರಕಾಶಗಳಲ್ಲಿ ಪ್ರಮಾಣಭೇದ ಇದ್ದೇ ಇರುತ್ತದೆ ಆಗ ಒಬ್ಬರಿಗೆ ಸರಿಯಾಗಿ ಅರ್ಥವಾದ ವಿಚಾರ ಅಷ್ಟೇ ತಿಳಿವಳಿಕೆ ಇಲ್ಲದ ಇನ್ನೊಬ್ಬರಿಗೆ ಸರಿಯಾಗಿ ಅರ್ಥವಾಗದೆ ಈ ವಿಷಯದ ಕುರಿತಾಗಿ ಅರ್ಥ ಸರಿಯಾಗಿ ತಿಳಿಯದವರ ನಂಬಿಕೆ, ದೃಷ್ಟಿಗಳು ಅಸಂಪೂರ್ಣವಾಗಿ ಮೂಢವೇ ಆಗುತ್ತದೆ. ಇದೇ ತತ್ತ್ವ ಸಾಮಾಜಿಕ, ಧಾರ್ಮಿಕ ಹಾಗೂ ಜೀವನದ ವಿವಿಧ ರಂಗಗಳಿಗೆ ಅನ್ವಯವಾಗುತ್ತದೆ. ಒಂದು ಸಮಾಜದಲ್ಲಿ ಮೂಢನಂಬಿಕೆ ಇದೆ ಎಂದರೆ ಅದಕ್ಕೆ ಆ ಸಮಾಜದ ಜನರ ಬೌದ್ಧಿಕಮಟ್ಟ, ಆಧ್ಯಾತ್ಮಿಕವಾದ ತಿಳಿವಳಿಕೆ ವಿಕಾಸಗೊಳ್ಳಲಿಲ್ಲ ಎಂದು ಅರ್ಥವೇ ವಿನಾ ಆ ಸಮಾಜಕ್ಕೆ ಸಂಬಂಧಿಸಿದ ಧರ್ಮ ಅದಕ್ಕೆ ಹೊಣೆ ಅಥವಾ ಕಾರಣ ಎಂದರ್ಥವಲ್ಲ. ಆದುದರಿಂದ ಹಿಂದೂಧರ್ಮವು ಮೂಢನಂಬಿಕೆಯಿಂದ ಕೂಡಿದೆ ಎನ್ನುವುದರಲ್ಲಿ ಎಳ್ಳಷ್ಟೂ ನ್ಯಾಯವಿಲ್ಲ. ಹಿಂದೂ ಧರ್ಮದ ಯಾವ ಗ್ರಂಥಗಳಲ್ಲಿಯೂ ಮೂಢನಂಬಿಕೆಗಳನ್ನು ಪ್ರತಿಪಾದಿಸಿರುವುದಾಗಲಿ,

ಬೋಧಿಸಿರುವುದಾಗಲಿ ಕಂಡುಬರುವುದಿಲ್ಲ. ಹಿಂದೂಧರ್ಮದವರಲ್ಲಿ ವಿವಿಧ ರೀತಿಯ ಆರಾಧನಾವಿಧಾನಗಳು, ಆಚರಣೆಗಳು ಸೇರಿರುವುದು ವೈವಿಧ್ಯದ ದೃಷ್ಟಿಯಿಂದ ಹಾಗೂ ವ್ಯಕ್ತಿಗಳ ಗುಣ–ಸ್ವಭಾವಗಳಿಗೆ ಅನುಗುಣವಾಗಿಯೇ ವಿನಾ ಇನ್ನಾವ ಅರ್ಥಶೂನ್ಯವೂ ವಿವೇಕಬಾಹಿರವೂ ಆದ ದೃಷ್ಟಿಯಿಂದಲ್ಲ. ವಿವಿಧ ರೀತಿಯ ಆರಾಧನಾಕ್ರಮಗಳೂ, ಆಚರಣೆಗಳೂ, ಇವುಗಳ ಕ್ರಮವಾದ ಆಚರಣೆ ಅನುಷ್ಠಾನಗಳಿಂದಲೂ ಹಿಂದುವಿನ ವ್ಯಕ್ತಿಗತ ಹಾಗೂ ಸಾಮೂಹಿಕವಾದ ಜೀವನಕ್ಕೆ ತಾತ್ತ್ವಿಕವಾಗಿ ಯಾವ ದೃಷ್ಟಿಯಿಂದಲೂ ಆತಂಕ ಉಂಟಾಗಿರುವುದಿಲ್ಲ, ಉಂಟಾಗುವಂತಿಲ್ಲ. ಯಾವ ತತ್ತ್ವವೇ ಆಗಲಿ ಅದರ ಕ್ರಮಬದ್ಧವಾದ ಪಾಲನೆಯಿಂದ ಅದಕ್ಕನುಗುಣವಾದ ಹಿತ ಹಾಗೂ ಸುಖಗಳೂ, ಕ್ರಮವಿರದ ತಪ್ಪು ಅನುಷ್ಠಾನದಿಂದ ಅದಕ್ಕೆ ಫಲವಾದ ಅಹಿತ ಹಾಗೂ ಅಸೌಖ್ಯಗಳೂ ಉಂಟಾಗುತ್ತವೆ. ಹಾಗೆಂದಮಾತ್ರಕ್ಕೆ ಆಚರಣೆಯನ್ನು ತಪ್ಪುರೀತಿಯಲ್ಲಿ ಅನುಷ್ಠಾನ ಮಾಡಿದುದೇ ಕಾರಣವೆನ್ನಬೇಕಲ್ಲದೆ ಮೂಲವಾದ ತತ್ತ್ವವನ್ನು ಹಾಳೆಂದು ಹಳಿದರೆ ಸಮಂಜಸವಾಗಲಾರದು. ಮೂರ್ತಿಪೂಜೆಯು ಕೂಡ ಮಾನವನು ದೇವರನ್ನು ಆರಾಧಿಸಲು ಅನುಕೂಲವಾಗುವ ಒಂದು ಸಾಧನವಾಗಿ ಉಪಯೋಗಿಸಲ್ಪಡುತ್ತಿದೆಯೇ ವಿನಾ ಅದಕ್ಕಿಂತ ಹೆಚ್ಚಾಗಿ ಹಿಂದುವು ಅದನ್ನು ಪರಿಗಣಿಸುವುದಿಲ್ಲ. ವಿದ್ಯುಚ್ಛಕ್ತಿಯ ಬೆಳಕು ಪಡೆಯಲು ಬಲ್ಬನ್ನು ಉಪಯೋಗಿಸುವುದು ಬೆಳಕಿನ ಅನುಕೂಲಕ್ಕಾಗಿಯೇ ವಿನಾ ಬಲ್ಬಿನ ಆರಾಧನೆಗಾಗಿ ಅಲ್ಲ. ಬಲ್ಬನ್ನು ಯಾರೂ ವಿದ್ಯುತ್ತೆಂದು ಆರಾಧಿಸುವುದೂ ಇಲ್ಲ. ಇದೇ ತತ್ತ್ವವು ಮೂರ್ತಿಪೂಜೆಯಲ್ಲಿಯೂ ಅಡಗಿದ್ದು ಹಿಂದುವು ಅದನ್ನು ಚೆನ್ನಾಗಿ ತಿಳಿದಿರುತ್ತಾನೆ. ಮೂರ್ತಿಪೂಜೆಯೂ ಹಿಂದೂ ಸಮಾಜಕ್ಕೆ ಮಾತ್ರ ಸೀಮಿತವಾದ ಸಂಗತಿಯಲ್ಲ. ಮಾನವಸಮೂಹದಲ್ಲಿ ಅದು ದೇಶ-ಕುಲ-ಮತ-ಧರ್ಮದ ನಂಬಿಕೆಗಳಿಗೆ ಅನುಕೂಲವಾಗಿ ಎಲ್ಲೆಡೆಯಲ್ಲೂ ಒಂದಲ್ಲ ಒಂದು ವಿಧದಲ್ಲಿ ಸೇರಿರುತ್ತದೆ ಎಂಬುದು ಸರಿಯಾದ ರೀತಿಯ ಪರಿಶೀಲನೆಯಿಂದ ಪ್ರಕಾಶಕ್ಕೆ ಬರುವ ಸತ್ಯಾಂಶವಾಗಿರುತ್ತದೆ. ಹಾಗಾಗಿ ಹಿಂದೂ ಸಮಾಜವೊಂದನ್ನೇ ಗುರಿಯಾಗಿಟ್ಟು ಈ ವಿಚಾರವಾಗಿ ಆರೋಪಿಸುವುದು ಅರ್ಥಹೀನವೆಂದಾಗುವುದು ಮಾತ್ರವಲ್ಲದೆ ಸತ್ಯಕ್ಕೆ ಅಪಚಾರ ಮಾಡಿದಂತೆಯೂ ಆಗುತ್ತದೆ.

**ಸಮಸ್ಯೆ – ೧**

ಹಿಂದೂಧರ್ಮದವರನ್ನು ಇತರ ಮತಕ್ಕೆ ಮತಾಂತರಗೊಳಿಸುವ ಪ್ರಯತ್ನ ಸಾಕಷ್ಟು ನಡೆಯುತ್ತಿದೆ. ಅದರಲ್ಲೂ ನಿಮ್ನವರ್ಗದವರನ್ನು ಗುಂಪುಗುಂಪಾಗಿ ಅನ್ಯಮತಕ್ಕೆ ಪರಿವರ್ತಿಸಲಾಗುತ್ತಿದೆ. ಇದರಿಂದ ಹಿಂದೂಧರ್ಮದ ಅಸ್ತಿತ್ವಕ್ಕೆ ತುಂಬಾ ಅಪಾಯ ಉಂಟಾಗುವುದಕ್ಕೆ ಅವಕಾಶ ಆಗುವಂತಿದೆ.

**ಪರಿಹಾರ :** ಹಿಂದೂ ಸಮಾಜದಲ್ಲಿ ಯಾರಿಗೆ ಹಿಂದೂಧರ್ಮದ ಬಗ್ಗೆ ಸರಿಯಾದ ಅರಿವು-ಅಭಿಮಾನ ಇಲ್ಲವೋ ಅವರನ್ನು ಮಾತ್ರ ಮತಾಂತರಗೊಳಿಸಲು ಅನ್ಯಮತೀಯರಿಗೆ ಸಾಧ್ಯವಾಗುತ್ತದೆ. ಇಂದು ಹಿಂದೂ ಸಮಾಜದ ನಿಮ್ನವರ್ಗದವರನ್ನು ಹೆಚ್ಚಾಗಿ ಮತಾಂತರಗೊಳಿಸುವುದರಲ್ಲಿ ಅನ್ಯಮತೀಯರು ಯಶಸ್ವಿ ಆಗುತ್ತಿರಲು ಮುಖ್ಯವಾದ

ಕಾರಣ ನಿಮ್ನವರ್ಗದವರಲ್ಲಿ ಹಿಂದೂಧರ್ಮದ ಬಗ್ಗೆ ಅರಿವು, ಅಭಿಮಾನಗಳು ಇಲ್ಲದಿರುವುದೇ ಆಗಿದೆ. ಜೊತೆಗೆ ಆರ್ಥಿಕವಾಗಿ ಬಡತನವೂ, ಸಾಮಾಜಿಕವಾದ ಸ್ಥಾನಗೌರವಗಳ ನ್ಯೂನತೆಯೂ, ಉನ್ನತವರ್ಗದವರಿಂದ ದಬ್ಬಾಳಿಕೆಯೂ ಕಾರಣವಾಗಿರುತ್ತದೆ.

ಇವುಗಳ ನಿವಾರಣೆಗಾಗಿ ನಿಮ್ನವರ್ಗದವರಿಗೆ ವಿಶೇಷವಾದ, ಸುವ್ಯವಸ್ಥಿತವಾದ ರೀತಿಯಲ್ಲಿ ವಿದ್ಯಾಭ್ಯಾಸ ಕಡ್ಡಾಯವಾಗಿ ನೀಡುವಂತಾಗಬೇಕು. ಶುದ್ಧವಾದ ಜೀವನ ನಡೆಸುವಂತೆ ಅವರಿಗೆ ಆರ್ಥಿಕವಾಗಿ ಅನುಕೂಲ-ಪ್ರೋತ್ಸಾಹಗಳನ್ನು ಕೊಡುವಂತಾಗಬೇಕು. ಅಲ್ಲದೆ ಧಾರ್ಮಿಕ ಶಿಕ್ಷಣವನ್ನು ಹಿರಿಯರಿಗೆ ಕಿರಿಯರಿಗೆ ಯಥೋಚಿತವಾದ ರೀತಿಯಲ್ಲಿ ಶಿಬಿರಗಳನ್ನು ನಡೆಸಿ ನೀಡುವಂತಾಗಬೇಕು. ಗುರುಪೀಠದವರ ನೇತೃತ್ವದಲ್ಲಿ ಧಾರ್ಮಿಕ ಜೀವನಕ್ಕೆ ದೀಕ್ಷೆನೀಡಿ ನಿಮ್ನವರ್ಗದವರಲ್ಲಿ ತಾವು ಹಿಂದುಗಳೆಂಬ ಅರಿವು, ಅಭಿಮಾನ ಮೂಡುವಂತೆ ಮಾಡಬೇಕು. ಹಿಂದೂ ಸಮಾಜದ ಉನ್ನತವರ್ಗದವರು ನಿಮ್ನವರ್ಗದವರೊಡನೆ ಹಿಂದೂ ಬಂಧುಗಳು ಎಂಬ ಪ್ರೀತಿ-ಸಹಾನುಭೂತಿಯ ವರ್ತನೆ, ಒಡನಾಟಗಳನ್ನೂ ಧಾರ್ಮಿಕ ಕೇಂದ್ರಗಳಾದ ಮಠಮಂದಿರಗಳಲ್ಲಿ, ಸಾಮಾಜಿಕ ಕೇಂದ್ರಗಳಾದ ಸಂಘಸಂಸ್ಥೆಗಳಲ್ಲಿ ಅನುಷ್ಠಾನಕ್ಕೆ ತರಬೇಕು.

ಹಿಂದೂಧರ್ಮದ ತತ್ತ್ವಗಳಿಗೆ ಅನುಸಾರವಾಗಿ ಭಗವಂತನ ಸಾಕ್ಷಾತ್ಕಾರಕ್ಕೆ ಸಹಾಯವಾಗುವ ಯಾವುದೇ ಪಥವನ್ನು ಯಾರು ಬೇಕಾದರೂ ಅನುಸರಿಸಬಹುದು ಎಂಬುದು ಸ್ಪಷ್ಟವಿದೆ. ಆದರಂತೆ ಮತೀಯವಾದ ಅನುಷ್ಠಾನಸ್ವಾತಂತ್ರ್ಯ ಎಲ್ಲರಿಗೂ ಇದೆ. ಈ ದೃಷ್ಟಿಯಿಂದ ಪ್ರಾಮಾಣಿಕವಾದ ತನ್ನ ಆಧ್ಯಾತ್ಮಿಕ ಸಾಧನೆಗೆ ಸಹಾಯವಾಗುವುದೆಂಬ ಕಾರಣದಿಂದ ಹಿಂದುವು ಮತಾಂತರಗೊಳ್ಳಬಹುದು. ಅದರಲ್ಲಿ ತಪ್ಪೇನಿಲ್ಲ. ಆದರೆ ಇಂದು ನಾವು ಕಾಣುವ, ಕೇಳುವ ಮತಾಂತರಗಳೆಲ್ಲ ವ್ಯಕ್ತಿಯ ಅಥವಾ ಸಮೂಹದವರ ಆಧ್ಯಾತ್ಮಿಕ ಉನ್ನತಿಸಾಧನೆಗಾಗಿ ಆಗುವ ಮತಾಂತರಗಳಲ್ಲ. ಯಾವುದೋ ರಾಜಕೀಯ, ಆರ್ಥಿಕವಾದ ಇಲ್ಲವೇ ಮತೀಯವಾದ ದುರುದ್ದೇಶದಿಂದ ಮತಾಂತರದ ಕಾರ್ಯ ನಡೆಯುತ್ತಿದೆ.

ಹಿಂದೂ ಸಮಾಜದಿಂದ ಜನರು ಮತಾಂತರಗೊಂಡರೆ ಹಿಂದೂ ಸಮಾಜದವರ ಸಂಖ್ಯೆ ಕಡಿಮೆ ಆಗುತ್ತದೆ. ಮಾತ್ರವಲ್ಲ ಹಿಂದೂ ಸಮಾಜದ ಆರ್ಥಿಕ, ಸಾಮಾಜಿಕ ಹಾಗೂ ನೈತಿಕಬಲ ಕಡಿಮೆ ಆಗುವುದಲ್ಲದೆ ಅದರಿಂದ ಹಿಂದೂ ಸಮಾಜಕ್ಕೆ ಹೆಚ್ಚಿನ ಅಪಾಯಕ್ಕೆ ಅವಕಾಶವಾಗುವಂತಾಗುತ್ತದೆ ಹಿಂದೂ ಸಮಾಜದಿಂದ ಮತಾಂತರಗೊಂಡವರ ರಾಷ್ಟ್ರನಿಷ್ಠೆಯೂ ಬದಲಾಗುತ್ತದೆ. ಹಾಗಾಗಿ ಮತಾಂತರದಿಂದ ರಾಷ್ಟ್ರಾಂತರಕ್ಕೆ ಅವಕಾಶವಾಗುತ್ತದೆ. ಅದರಿಂದ ದೇಶದ ರಾಜಕೀಯ ಭದ್ರತೆ, ಸಾಂಸ್ಕೃತಿಕ ರಕ್ಷಣೆ, ಸಾಮಾಜಿಕ ಶಾಂತಿಗಳಿಗೆ ವಿಶೇಷವಾದ ರೀತಿಯಲ್ಲಿ ಕುಂದುಂಟಾಗಿ ಅಪಾಯ ಕೊಡಿಬರಲು ಸುಲಭದ ಅವಕಾಶವಾಗುತ್ತದೆ. ಹಾಗಾಗಿ ಹಿಂದೂ ಸಮಾಜದವರೆಲ್ಲರೂ ತಮ್ಮ ತಮ್ಮ ನೆಲೆಯಲ್ಲಿ ಹಿಂದೂಧರ್ಮದ ತತ್ತ್ವಗಳ ಅರಿವು, ಆಚರಣೆ, ರಕ್ಷಣೆಗಳ ಬಗ್ಗೆ ವಿಶೇಷ ಜವಾಬ್ದಾರಿಯಿಂದ ಕಾರ್ಯತತ್ಪರರಾಗಬೇಕು. ಈ ದಿಸೆಯಲ್ಲಿ ಗುರುಪೀಠಗಳು, ದೇವಾಲಯಗಳು, ಧಾರ್ಮಿಕ ಸಂಘಸಂಸ್ಥೆಗಳು ರಚನಾತ್ಮಕವಾದ ಶಿಕ್ಷಣ, ಪ್ರಸಾರ ಹಾಗೂ ಧಾರ್ಮಿಕ ಸಂರಕ್ಷಣಾಕಾರ್ಯಕ್ರಮಗಳನ್ನು ಹಳ್ಳಿ-ಪಟ್ಟಣಗಳಲ್ಲಿ ಹಬ್ಬ, ಉತ್ಸವ ಮೊದಲಾದ

ವಿವಿಧ ಸಂದರ್ಭಗಳಲ್ಲಿ ವ್ಯಾಪಕವಾಗಿ ನಡೆಸುವಂತಾಗಬೇಕು.

ಈ ನಿಟ್ಟಿನಲ್ಲಿ ಹಿಂದೂ ಸಮಾಜದವರಲ್ಲಿ ನೂತನವಾದ ಜಾಗೃತಿ, ಮಹತ್ತರವಾದ ಜವಾಬ್ದಾರಿಯ ಅರಿವು ಉಂಟಾಗಬೇಕು. ಅಷ್ಟೇ ಅಲ್ಲ, ಸ್ವಧರ್ಮ ಅಭಿಮಾನ ಹೆಚ್ಚಾಗಬೇಕು. ಮೇಲಾಗಿ ಅನ್ಯಮತೀಯರು ಯಾವುಯಾವುದೋ ಶಕ್ತಿಪ್ರಭಾವಗಳನ್ನು ಬೀರಿ ಹಿಂದುಗಳನ್ನು ಮತಾಂತರಗೊಳಿಸುವುದನ್ನು ಹಿಂದುಗಳೆಲ್ಲರೂ ಧರ್ಮರಕ್ಷಣೆ, ಧರ್ಮ ಅಭಿವೃದ್ಧಿ ಬಗ್ಗೆ ಒಂದು ಮಹತ್ತರವಾದ ಸವಾಲು ಎಂದು ಪರಿಗಣಿಸಬೇಕು. ಅದರಂತೆ ಎಲ್ಲ ನೆಲೆಗಳಲ್ಲೂ ಹಿಂದುಗಳ ಮತಾಂತರವನ್ನು ತಡೆಗಟ್ಟಲು ಧೈರ್ಯಸಾಹಸಗಳಿಂದ ಕಾರ್ಯತತ್ಪರನಾಗಬೇಕು.

ಈ ದೃಷ್ಟಿಯಿಂದ ಪ್ರತಿಯೊಬ್ಬ ಹಿಂದುವೂ ತನ್ನ ಧರ್ಮದ ಬಗ್ಗೆ ಅಭಿಮಾನ ತಳೆದು ಧರ್ಮದ ತತ್ತ್ವಗಳನ್ನು ಆಚರಿಸುತ್ತಾ ತನ್ನ ನೆಲೆಯಲ್ಲಿ ಧರ್ಮರಕ್ಷಕನೂ ಪ್ರಚಾರಕನೂ ಆಗಬೇಕಾಗಿದೆ. ಹಿಂದೂಸಮಾಜದಲ್ಲಿ ಹಿಂದೂಧರ್ಮದ ತತ್ತ್ವಸೂತ್ರಗಳ ಅನುಷ್ಠಾನ ಪ್ರಾಮಾಣಿಕವಾಗಿ ನಡೆದಂತೆ, ಹಿಂದುವಿನ ಅಂತರ್ಯದಲ್ಲಿ ದಿವ್ಯತೆಯ ಪ್ರಕಾಶ ಹೆಚ್ಚಿದಂತೆ ಹಿಂದೂಧರ್ಮದ ರಕ್ಷಣೆ ವ್ಯಾಪಕವಾಗಿ ಸಾಧ್ಯವಾಗುತ್ತದೆ. ಅದರಿಂದ ಮತಾಂತರದ ತೊಂದರೆ ನಿವಾರಣೆ ಆಗಲು ಅನುಕೂಲವಾಗುತ್ತದೆ.

ಸಮಸ್ಯೆ – ೨

ಹಿಂದೂ ಸಮಾಜದಲ್ಲಿ ಸಹಸ್ರಾರು ಜಾತಿ ಹಾಗೂ ಜಾತಿಭೇದಭಾವನೆಗಳಿವೆ, ಮೇಲು ಕೀಳೆಂಬ ಭೇದಭಾವಗಳಿವೆ. ಅವನ್ನು ಹೋಗಲಾಡಿಸಲು ಅಂತರ್ಜಾತೀಯ ವಿವಾಹ ಒಂದು ಪರಿಹಾರಮಾರ್ಗ. ಆದರೆ ಅದರ ಕಾರ್ಯಾನುಷ್ಠಾನ ಒಂದು ಸಮಸ್ಯೆ ಆಗಿದೆ.

**ಪರಿಹಾರ:** ಹಿಂದೂಧರ್ಮದವರಿಗೆ ಅಂತರ್ಜಾತೀಯ ವಿವಾಹ ಒಂದು ಹೊಸ ವಿಚಾರವೂ ಅಲ್ಲ, ಸಮಸ್ಯೆಯೂ ಅಲ್ಲ. ವೈದಿಕ ಕಾಲದಿಂದ ಆಧುನಿಕ ಕಾಲದವರೆಗೆ ಅಂತರ್ಜಾತೀಯ ವಿವಾಹದ ಬಗ್ಗೆ ಹಿಂದೂ ಸಮಾಜದಲ್ಲಿ ಅನೇಕ ರೀತಿಯ ಪ್ರಯೋಗ, ಆಚರಣೆಗಳು ನಡೆದಿವೆ. ಅಂತರ್ಜಾತೀಯ ವಿವಾಹದಿಂದ ದೊರಕುವ ಸುಖಶಾಂತಿ ಹಾಗೂ ಭದ್ರತೆಗಳಿಗಿಂತ ಅಸೌಖ್ಯ, ಅಶಾಂತಿ, ಅಪಾಯಗಳ ಪ್ರಮಾಣವೇ ಹೆಚ್ಚು ಎನ್ನುವುದು ಅನುಭವಸತ್ಯ.

ಈ ದಿಸೆಯಲ್ಲಿ ಆಳವಾಗಿ ಚಿಂತಿಸಿದರೆ ಅಂತರ್ಜಾತೀಯ ವಿವಾಹದಿಂದ ಜಾತಿಸಮಸ್ಯೆ ನಿವಾರಣೆ ಆಗುವುದರ ಬದಲು ಹೆಚ್ಚೇ ಆಗುತ್ತದೆ ಎಂಬುದು ಸುಸ್ಪಷ್ಟ. ಬೇರೆಬೇರೆ ಸಂಪ್ರದಾಯ, ನಂಬಿಕೆಗಳಿಗೆ ಸೇರಿದ ವಧೂವರರು ವಿವಾಹವಾದರೆ ಅವರು ಜೀವನದಲ್ಲಿ ನಿಶ್ಚಿತವಾದ ಒಂದು ಸಂಪ್ರದಾಯ ಅನುಸರಿಸುವುದು ಕಷ್ಟವಾಗುತ್ತದೆ. ಅದರಿಂದಾಗಿ ಅವರಲ್ಲಿ ಹಬ್ಬಹುಣ್ಣಿಮೆ, ವ್ರತೋಪವಾಸದ ಆಚರಣೆಯ ವೈಯಕ್ತಿಕ ಹಾಗೂ ಸಾಮಾಜಿಕವಾದ ಸಂದರ್ಭಗಳಲ್ಲಿ, ಸಂಸ್ಕಾರಗಳ ಅನುಷ್ಠಾನದ ಸಂದರ್ಭಗಳಲ್ಲಿ ಮಾನಸಿಕ ಗೊಂದಲ, ಸಾಂಸ್ಕೃತಿಕ ಹಾಗೂ ಧಾರ್ಮಿಕ ನಡೆನುಡಿಗಳ ಸಂಘರ್ಷ ಉಂಟಾಗುತ್ತದೆ. ಅಷ್ಟೇ ಅಲ್ಲ, ಮುಂದೆ ದಂಪತಿಗಳಿಗೆ ಮಕ್ಕಳಾದನಂತರ ಮಕ್ಕಳ ಬೆಳವಣಿಗೆಯ ಕಾಲದಲ್ಲಿ ಅವರ ಪರಂಪರೆಯ ನಿರ್ಧಾರ, ಅದಕ್ಕನುಗುಣವಾಗಿ ಶಿಕ್ಷಣ ನೀಡುವಿಕೆ ಇತ್ಯಾದಿ ಸಂದರ್ಭ

ಗಳಲ್ಲಿ ತುಂಬ ಗೊಂದಲ ಉಂಟಾಗುತ್ತದೆ. ಅನೇಕ ಸಂದರ್ಭಗಳಲ್ಲಿ ಅದರಿಂದಾಗಿ ಮಕ್ಕಳ ಮನಸ್ಸಿನ ಮೇಲೆ ದುಷ್ಪರಿಣಾಮ ಉಂಟಾಗಿ ಅವರ ಬೆಳವಣಿಗೆ ಕುಂಠಿತವಾಗುವುದು. ಅವರಿಗೆ ಧರ್ಮ, ಸಂಸ್ಕೃತಿಗಳ ಪರಂಪರೆ ಬಗ್ಗೆ ಅಭಿಮಾನ, ಗೌರವಗಳು ಇಲ್ಲದಂತಾಗುವುದು ಇತ್ಯಾದಿ ಅಶುಭಪರಿಣಾಮಗಳಿಗೆ ಅವಕಾಶ ಉಂಟಾಗುತ್ತದೆ.

ಹಾಗಾಗಿ ಅಂತರ್ಜಾತೀಯ ವಿವಾಹದಿಂದ ಸಾಮಾಜಿಕ ಸೌಹಾರ್ದ, ಸಾಂಸ್ಕೃತಿಕ ಪ್ರಗತಿ, ಧಾರ್ಮಿಕ ಬೆಳವಣಿಗೆ ಆಗುತ್ತದೆ ಎನ್ನುವುದು ಆಶಾದಾಯಕ ಎಂದು ತೋರಿದರೂ ಪ್ರಾಯೋಗಿಕವಾಗಿ ಪ್ರಯೋಜನಕಾರಿ ಅಲ್ಲ ಎಂಬುದಾಗಿ ಹೇಳಬಹುದು.

ಹಾಗೆಂದು ಹಿತಮಿತವಾದ ರೀತಿಯಲ್ಲಿ ಆಚಾರವಿಚಾರಗಳು ಹೊಂದಿ ಬರುತ್ತವೆ ಎಂದಾಗ, ಸಾಮಾಜಿಕ ಹಾಗೂ ವೈಯಕ್ತಿಕ ಜೀವನದ ಪ್ರಗತಿಗೆ ತೊಂದರೆ ಆಗುವುದಿಲ್ಲ ಎಂದು ಸ್ಪಷ್ಟವಾದಾಗ ಅನುಕೂಲದಂತೆ ಆಯಾಯ ವರ್ಣದಲ್ಲಿರುವ ಅನೇಕ ಒಳಪಂಗಡಗಳು ತಮ್ಮೊಳಗೆ ಪರಸ್ಪರ ಅಂತರ್ಜಾತೀಯ ವಿವಾಹಸಂಬಂಧವನ್ನು ಬೆಳೆಸಬಹುದು. ಈ ಬಗ್ಗೆ ಸ್ವಾಮಿ ವಿವೇಕಾನಂದರು ಅಂದು ಹೇಳಿರುವ ಮಾತುಗಳು ಇಂದಿಗೂ ಸಂದರ್ಭೋಚಿತವಾಗಿದ್ದು ಇಲ್ಲಿ ಸ್ಮರಣೀಯವಾಗಿವೆ.

ಅಂತರ್ಜಾತೀಯ ವಿವಾಹಗಳು ವಿಭಿನ್ನ ಜಾತಿಪಂಗಡದವರೊಳಗೆ ಆಗುವುದರ ಸಾಧಕಬಾಧಕಗಳನ್ನು ವಿವರಿಸುತ್ತಾ ಸ್ವಾಮಿಗಳು ತಮ್ಮ ಶಿಷ್ಯರೊಡನೆ ಹೀಗೆಂದರು :

"...ಅಂತಹ ರೀತಿಯ ವಿವಾಹಗಳು ವ್ಯಾಪಕವಾಗಿ ಅನುಷ್ಠಾನಕ್ಕೆ ಬರುವ ಕಾಲವು ಇನ್ನೂ ಬಹುದೂರದಲ್ಲಿದೆ. ಅಲ್ಲದೆ ಹಠಾತ್ತನೆ ಅಂತಹದನ್ನು ಆಚರಿಸಲು ಮುಂದೆ ಸಾಗುವುದು ನ್ಯಾಯಸಮ್ಮತವಲ್ಲ. ಅತ್ಯಂತ ಕಡಿಮೆ ಪ್ರತಿಭಟನೆಯ ಹಾದಿಯಲ್ಲಿ ಮುಂದುವರಿಯುವುದು ಕೆಲಸದ ರಹಸ್ಯಗಳಲ್ಲಿ ಒಂದು. ಹಾಗಾಗಿ, ಮೊದಲು ಒಂದು ಜಾತಿಯ ಪರಿಧಿಯಲ್ಲಿನ ಪಂಗಡದ ಜನರೊಳಗೆ ಪರಸ್ಪರ ವಿವಾಹ ನಡೆಯಲಿ...ಹಾಗೆ ನಾವು ಆಗಲೇ ಇರುವ ವ್ಯವಸ್ಥೆಯೊಡನೆ ನಮ್ಮ ಕೈಯಲ್ಲಿ ಅನುಷ್ಠಾನಕ್ಕೆ ತರಲು ಸಾಧ್ಯವಾದುದನ್ನು ಮಾಡುತ್ತಾ ಬಲಪಡಿಸುತ್ತಾ ಕಟ್ಟಬೇಕಾಗಿದೆ. ಸುಧಾರಣೆಯೆಂದರೆ ಇರುವ ಸಮಸ್ಯೆಯನ್ನು ಪೂರ್ತಿಯಾಗಿ ಮುರಿಯುವುದೆಂದು ಅರ್ಥವಲ್ಲ."[1]

**ಸಮಸ್ಯೆ – ೩**

ಹಿಂದೂಧರ್ಮದಿಂದ ಮತಾಂತರಹೊಂದಿದವರನ್ನು ಮರಳಿ ಮಾತೃಧರ್ಮಕ್ಕೆ ಶುದ್ಧೀಕರಣ ಮೂಲಕ ಸೇರಿಸಿಕೊಳ್ಳುವುದು.

---

1. "The time is yet very long in coming when marriages of that kind will be widely possible. Besides, it is not judicious now to go in for that all of a sudden. One of the secrets of work is to go by the way of the least possible resistance. So, first of all, let there be marriages within the sphere of one's own caste-people.....Thus we are to build up that which is already existing and which is in our hands to reduce into practice—reform does not mean wholesale breaking down."

—*Complete Works of Swamy Vivekananda*
Vol. VI (Conversations)

ಪರಿಹಾರ : ಹಿಂದೂಧರ್ಮಕ್ಕೆ ಮರಳಿ ಬರುವವರನ್ನು ಗುರುಪೀಠದ ಗುರುಗಳು ಒಬ್ಬರ ನೇತೃತ್ವದಲ್ಲಿ ಅಲ್ಲವೇ ಅವರಿಂದ ಅಧಿಕಾರಮಾನ್ಯತೆಪಡೆದ ಧಾರ್ಮಿಕ ಸಂಘ ಸಂಸ್ಥೆಯ ಪ್ರಮುಖರ ಮೂಲಕ ಶುದ್ಧೀಕರಣ ಸಂಸ್ಕಾರವನ್ನು ವಿಧಿಯುಕ್ತವಾಗಿ ಪಡೆಯಬೇಕು. ಮಾತೃಧರ್ಮದಿಂದ ಮತಾಂತರಗೊಳ್ಳುವ ಸಂದರ್ಭದಲ್ಲಿ ಯಾವ ಪಂಗಡಕ್ಕೆ ಸೇರಿದ್ದರೋ (ಉದಾ : ಶೈವ, ವೈಷ್ಣವ, ಶಾಕ್ತ ಇತ್ಯಾದಿ) ಅದರ ನೆನಪಿದ್ದರೆ ಶುದ್ಧೀಕರಣದನಂತರ ಅದೇ ಪಂಗಡಕ್ಕೆ ನೂತನ ಹಿಂದೂ ಬಂಧುಗಳು ಸೇರುವಂತಾಗ ಬೇಕು. ಹಿಂದೆ ಯಾವ ಪಂಗಡಕ್ಕೆ ಸೇರಿದ್ದರು ಎಂಬ ಪರಂಪರೆಯ ನೆನಪು ಇಲ್ಲದಿದ್ದರೆ ಯಾವ ಶಾಖೆಗೆ ಸೇರುವ ಬಯಕೆ ಇದೆಯೋ ಅದಕ್ಕೆ ಸೇರುವಂತಾಗಬೇಕು. ಹೀಗೆ ಶುದ್ಧೀಕರಣ ಆದನಂತರ ಹಿಂದೂ ಬಂಧುಗಳು ಹೊಸ ಸಮಾಜದಲ್ಲಿ ಗೌರವಾನ್ವಿತರಾಗಿ ವ್ಯವಹರಿಸುತ್ತಾ ಬಾಳಲು ಧಾರ್ಮಿಕ ಚೌಕಟ್ಟಿನಲ್ಲಿ ಅನುಕೂಲವಾದ ಅವಕಾಶ ಕಲ್ಪಿಸಿ ಕೊಡುವುದು ಅಗತ್ಯವಾಗಿರುತ್ತದೆ. ಹಾಗೆ ಮಾಡುವುದರಿಂದ ಮಾತ್ರ ನೂತನ ಹಿಂದೂ ಬಂಧುಗಳ ಸಾಮಾಜಿಕ ವ್ಯವಹಾರದ ಮಟ್ಟಿಗೆ ಸೌಖ್ಯ–ಭದ್ರತೆಗಳು ಕೂಡಿಬರಲು ಅವಕಾಶವಾಗುತ್ತದೆ. ಆದಿಲ್ಲದೆ ಶುದ್ಧೀಕೃತ ಹಿಂದುಗಳು ಎಂದು ಮಾತ್ರ ಮಾಡಿಬಿಟ್ಟರೆ ಅವರದೇ ಒಂದು ಪಂಗಡ ಎಂದಾಗಿ ಅವರ ಪ್ರಗತಿಗೆ ತೀರಾ ಅಡ್ಡಿ ಉಂಟಾಗಲು ಕಾರಣವಾಗುತ್ತದೆ.

೧೮

# ಹಿಂದೂಧರ್ಮ ಮತ್ತು ಆಧುನಿಕ ಭಾರತ

ಅನೇಕ ಸಹಸ್ರ ಸಂವತ್ಸರಗಳಿಂದ ಅವಿಚ್ಛಿನ್ನವಾಗಿ ಸಾಗಿಬಂದ ಭವ್ಯವಾದ ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕ ಪರಂಪರೆ, ಉಜ್ವಲವಾದ ಇತಿಹಾಸ ಮತ್ತು ಪ್ರಭಾವಯುತವಾದ ಆರ್ಥಿಕ ಹಾಗೂ ವಾಣಿಜ್ಯ ಉದ್ಯಮಗಳ ಸಾಧನೆ—ಇವುಗಳ ಹಿನ್ನೆಲೆಯಿರುವ ನಮ್ಮ ಹಿಂದೂಸ್ಥಾನ ಜಗತ್ತಿನ ರಾಷ್ಟ್ರಗಳ ಮಧ್ಯೆ ತನ್ನದೇ ಆದ ವಿಶಿಷ್ಟ ಗಾಂಭೀರ್ಯ, ಸೌಂದರ್ಯ, ಪ್ರತಿಭೆ ಮತ್ತು ತೇಜಸ್ಸುಗಳಿಂದ ಕೂಡಿ ಬೆಳಗಿರುವ ದೇಶವಾಗಿರುತ್ತದೆ. ವಿಶ್ವದ ಯಾವ ರಾಷ್ಟ್ರಗಳಿಗೂ ಇಲ್ಲದ ಅತಿಪ್ರಾಚೀನ ಹಾಗೂ ಪ್ರಭಾವಯುತವಾದ ಧರ್ಮ ಮತ್ತು ಸಂಸ್ಕೃತಿಯ ಬಲ ಭಾರತದೇಶಕ್ಕಿದ್ದು ಆಸೇತುಹಿಮಾಚಲಪರ್ಯಂತ ವಿಸ್ತಾರವಾಗಿ ಹಬ್ಬಿರುವ ಈ ಭೂಭಾಗ ಸುಖ, ಶಾಂತಿ, ಸಮೃದ್ಧಿಗಳ ನೆಲೆವೀಡಾಗಿ ಜಗತ್ತಿನಲ್ಲಿ ವೈಶಿಷ್ಟ್ಯಪೂರ್ಣವಾದ ಹಿರಿಮೆಯ ಸ್ಥಾನವನ್ನು ಪಡೆದುಕೊಂಡಿರುತ್ತದೆ.

ಜಗತ್ತಿನ ವಾಙ್ಮಯದಲ್ಲಿ ಕಾಣುವ ಪ್ರಥಮ ಪ್ರಾಚೀನ ಗ್ರಂಥವಾದ 'ಋಗ್ವೇದ'ವು ಮಾನವಕುಲಕ್ಕೆ ಭಾರತವು ಇತ್ತಿರುವ ವಿಶಿಷ್ಟವಾದ ಮೊದಲ ಕೊಡುಗೆಯಾಗಿದೆ. ಜಾತಿ ಮತ, ಪಂಥಗಳು, ದೇಶ, ಕಾಲ, ಜನಾಂಗಗಳು—ಇವುಗಳ ಭೇದವಿಲ್ಲದೆ ಜಗತ್ತೆಲ್ಲವೂ ತನ್ನ ಮನೆ, ಜಗದ ಜನಾಂಗವೆಂದರೆ ತನ್ನ ಕುಟುಂಬ ಎಂದು ಪರಿಗಣಿಸಿ "ಸರ್ವೇ ಜನಾಃ ಸುಖಿನೋ ಭವಂತು" (ಎಲ್ಲರೂ ಸುಖವಾಗಿರಲಿ) ಎಂದು ತ್ರಿಕರಣಪೂರ್ವಕವಾಗಿ ಹಾರೈಸಿ ಪ್ರಾರ್ಥಿಸಿದ ವಿಶ್ವವಿಶಾಲದೃಷ್ಟಿಯ ವೈದಿಕ ಋಷಿಗಳು ಬಾಳಿಬೆಳಗಿದ ಪವಿತ್ರ ಭೂಮಿ ಭಾರತ ಆಗಿರುತ್ತದೆ. 'ಏಕಂ ಸತ್ ವಿಪ್ರಾ ಬಹುಧಾ ವದಂತಿ'—ದೇವನೊಬ್ಬನೆ, ಆದರೆ ಅವನಿಗೆ ನಾಮಗಳು ಹಲವು ಎಂಬ ಸರ್ವಧರ್ಮಸಮನ್ವಯಸಂದೇಶವು ಲೋಕಕ್ಕೆ ಮೊದಲ ಬಾರಿಗೆ ವೈದಿಕಮಹರ್ಷಿಗಳ ಮೂಲಕ ಈ ನಮ್ಮ ಪುಣ್ಯಭೂಮಿ ಭಾರತದಿಂದ ಹೊಮ್ಮಿರುತ್ತದೆ.

ಜೀವನವೆಂದರೇನು ? ಜಗತ್ತಿಗೂ ಜೀವನಕ್ಕೂ ಸಂಬಂಧವೇನು ? ಹುಟ್ಟುಸಾವುಗಳ ಈ ಅನಂತಚಕ್ರವ್ಯೂಹದಿಂದ ಮಾನವನಿಗೆ ಬಿಡುಗಡೆ ಇಲ್ಲವೆ ? ಜೀವನದ ಗುರಿಯೇನು ?

ನೆಲೆಯೇನು ? ಎಂಬುದರ ಬಗೆಗೆ ಆಳವಾಗಿ ಚಿಂತಿಸಿ ಪ್ರಾಯೋಗಿಕವಾದ ಹಾಗೂ ರಚನಾತ್ಮಕವಾದ ಪರಿಹಾರವನ್ನು ಕಂಡುಹಿಡಿದು ಜಗತ್ತಿಗೆ ಪ್ರಥಮಂತಃ ಬೆಳಕನ್ನು ನೀಡಿದ ವೈದಿಕಋಷಿ ಮತ್ತು ವೇದಸಾಹಿತ್ಯವು ಭಾರತದ ಹಿರಿಮೆ ಹಾಗೂ ವಿಶಿಷ್ಟತೆಗಳಿಗೆ ಉಜ್ವಲವಾದ ನಿದರ್ಶನವಾಗಿರುತ್ತದೆ. ಜೀವನದ ಕುರಿತಾಗಿ ಅತ್ಯಂತ ಕಿರಿದಾದ ವಿಚಾರದಿಂದ ಗಹನವಾದ ಸಂಗತಿಗಳವರೆಗೆ ಲೌಕಿಕ ಮತ್ತು ಪಾರಮಾರ್ಥಿಕ ಎಂಬ ಈ ಎರಡು ದೃಷ್ಟಿಕೋನಗಳಿಂದ ಆಮೂಲಾಗ್ರವಾಗಿ ಪರ್ಯಾಲೋಚಿಸಿ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳ ಸಾಧನೆಗೆ ಪೂರಕವೂ ಆಗಬೇಕು ಎಂದು ನಿಶ್ಚಯಿಸಿ, ಇಳೆಯಲ್ಲಿನ ಮಾನವನ ಬಾಳು ಸರ್ವಾಂಗಸೌಖ್ಯಪ್ರದವೂ ಆಗಬೇಕು ಎಂದು ನಿರ್ಧರಿಸಿ ಘೋಷಿಸಿರುವ ಹಿಂದೂ ವಿಚಾರಧಾರೆ-ಸಂಸ್ಕೃತಿಗಳು ಅತ್ಯಂತ ಪ್ರಾಚೀನವೂ ಹೌದು—ನಿತ್ಯನೂತನವೂ ಹೌದು.

ನಾವಿಂದು ಭಾರತ ಎಂದು ಕರೆಯುವ ನಮ್ಮ ದೇಶದ ಇಂದಿನ ಭೌಗೋಳಿಕ ಗಡಿ ಹಾಗೂ ವಿಸ್ತಾರವಾದವೂ ಹಿಂದಿನ ಕಾಲದಲ್ಲಿದ್ದ ಭಾರತ ದೇಶದ ವ್ಯಾಪ್ತಿಯ ಅರ್ಧ ಅಂಶಕ್ಕೂ ಕಡಿಮೆ ಆಗಿರುತ್ತದೆ. ಬಹಳ ವಿಸ್ತಾರವಾಗಿ ಹಬ್ಬಿದ್ದ ಆ ಕಾಲದ ಬೃಹದ್ ಭಾರತಕ್ಕೆ ಇಂದಿನ ಅಫ್ಘಾನಿಸ್ತಾನ, ಅರೇಬಿಯಾ, ಇರಾನ್, ಇಂಡೋಚೀಣಾ, ಟಿಬೆಟ್, ಸಿಂಹಳ, ಕ್ಯಾಂಬೋಡಿಯಾ, ಬರ್ಮಾ ಇವುಗಳೆಲ್ಲವೂ ಸೇರಿದ್ದುವು. ರಾಮಾಯಣ, ಮಹಾಭಾರತಗಳ ಕಾಲದಲ್ಲಿ ಬೃಹದ್ ಭಾರತ ಹೇಗಿತ್ತು ಎಂಬುದರ ಕುರಿತಾಗಿ ವಿವರಗಳು ರಾಮಾಯಣ, ಮಹಾಭಾರತ ಗ್ರಂಥಗಳಿಂದ ನಮಗೆ ತಿಳಿದುಬರುತ್ತದೆ. ಹಾಗೆಯೇ ನಮ್ಮ ಪುರಾಣಗ್ರಂಥಗಳಿಂದಲೂ ಬೃಹದ್ ಭಾರತದ ವಿವರಗಳು ನಮಗೆ ದೊರೆಯುತ್ತವೆ. ಶ್ರೀರಾಮಚಂದ್ರನು ಲಂಕೆಗೆ ತೆರಳಿ ರಾವಣನನ್ನು ಸಂಹಾರಮಾಡಿ ಲಂಕೆಯನ್ನು ಗೆದ್ದುಕೊಂಡದ್ದು, ಗಾಂಧಾರ (ಈಗಿನ ಕಾಂದಹಾರ) ದೇಶದವಳಾದ ರಾಣಿ ಗಾಂಧಾರೀ ದೇವಿಯು ಕುರುವಂಶದ ಧೃತರಾಷ್ಟ್ರರಾಜನ ಪತ್ನಿಯಾದುದು, ಅನೇಕ ರಾಜರುಗಳು ಪಾಂಡುವಂಶದ ರಾಜ ಧರ್ಮರಾಯನ ಅಧೀನ ಅರಸರಾಗಿ ಬಾಳಿದುದು—ಇವುಗಳೆಲ್ಲಾ ಈ ಇತಿಹಾಸಗ್ರಂಥಗಳಲ್ಲಿ ವಿವರಿಸಲ್ಪಟ್ಟಿದ್ದು ಬೃಹದ್ ಭಾರತದ ಕುರಿತಾದ ವಿವರಣೆಯನ್ನು ನೀಡುವವುಗಳಾಗಿವೆ. ಹೀಗೆ ಪಶ್ಚಿಮದಲ್ಲಿ ಇರಾನಿನ ತನಕ ಪೂರ್ವದಲ್ಲಿ ಇಂದು ಸಿಂಗಾಪುರ ಎಂದು ಕರೆಯಲ್ಪಡುವ ಶೃಂಗಪುರದ ತನಕ, ಉತ್ತರದಲ್ಲಿ ಹಿಮಾಲಯದ ತನಕ, ದಕ್ಷಿಣದಲ್ಲಿ ಲಂಕೆಯ (ಸಿಂಹಳದ್ವೀಪ) ತನಕ ಬೃಹದ್ ಭಾರತ ಹರಡಿತ್ತು ಎಂದು ಇತಿಹಾಸ-ಪುರಾಣಗಳಿಂದ ತಿಳಿದುಬರುತ್ತದೆ.

ಭಾರತದಿಂದ ಧರ್ಮಪ್ರಚಾರಕರು, ಸಂಸ್ಕೃತಿಯ ಪ್ರಸಾರಕರು, ದೂರದ ಅಮೇರಿಕಾ ದೇಶದ ವಿವಿಧ ಭಾಗಗಳಿಗೆ ತೆರಳಿ ಅಲ್ಲಿ ತಮ್ಮ ವಸಾಹತುಗಳನ್ನು ಸ್ಥಾಪಿಸಿರುತ್ತಾರೆ, ಹಾಗೆಯೇ ಚೀಣಾ, ಜಪಾನ್, ಕೊರಿಯಾ, ಫಿಲಿಪೈನ್ಸ್, ಫಾರ್ಮೋಸಾ, ಜಾವಾ, ಬಾಲಿ. ಸುಮಾತ್ರಾ ಮುಂತಾದ ಭೂಭಾಗಗಳಲ್ಲಿ, ದಕ್ಷಿಣ ಆಫ್ರಿಕಾ, ಈಜಿಪ್ಟ್, ಗ್ರೀಸ್, ಮೆಸಪೊಟೇಮಿಯಾ, ಅರೇಬಿಯಾ, ಸಿರಿಯಾ, ತುರ್ಕಿಸ್ತಾನ ರಾಜ್ಯಗಳಲ್ಲೂ ಹಿಂದೂ ಧರ್ಮದ, ಸಂಸ್ಕೃತಿಗಳ ವಿಶೇಷವಾದ ಪ್ರಸಾರ ನಡೆದಿದ್ದು ಅವುಗಳಿಂದಾಗಿ ಅಲ್ಲೆಲ್ಲಾ ವಿಶೇಷವಾದ ಪ್ರಭಾವ ಉಂಟಾಗಿರುತ್ತದೆ.

ಪ್ರಾಚೀನಕಾಲದಲ್ಲಿ ಭಾರತೀಯರು ವ್ಯಾಪಾರ, ಶಿಲ್ಪ, ಸಂಗೀತ, ಸಾಹಿತ್ಯ, ನಾಟ್ಯ, ಚಿತ್ರ, ಆಯುರ್ವೇದ ಇತ್ಯಾದಿ ಜೀವನಕ್ಕೆ ಸಂಬಂಧಿಸಿದ ವಿಚಾರಗಳಲ್ಲಿ ಅನುಪಮವಾದ ಪರಿಣತಿಯನ್ನು ಪಡೆದಿದ್ದರು ಎಂಬುದು ಸಾಧಾರವಾಗಿ ತಿಳಿದುಬಂದಿರುತ್ತದೆ. ಪುಟ್ಟದಾದ ಮಾವಿನ ಗೊರಟೆನೊಳಗೆ ನಯವಾದ ರೇಶ್ಮೆ ಸೀರೆಯನ್ನು ತುಂಬಿಸಿಕೊಡುತ್ತಿದ್ದ ಕುಶಲ ನೇಯ್ಗೆಗಾರರಿದ್ದರೆ, ಹೊರದೇಶಗಳಿಗೆ ತೆರಳಿ ಭಾರತದ ವ್ಯಾಪಾರಸಾಮಗ್ರಿಗಳನ್ನು ಮಾರಿ ಹೇರಳ ಸಂಪತ್ತನ್ನು ಗಳಿಸುತ್ತಿದ್ದ ವಣಿಜರೂ ಇದ್ದರು.

ತಲೆಕೂದಲನ್ನು ವಿಭಾಗಮಾಡುವ ಅತಿಸೂಕ್ಷ್ಮವಾದ ಆಯುರ್ವೇದೀಯ ಶಸ್ತ್ರಸಾಧನಗಳನ್ನು ಉಪಯೋಗಿಸಿ ಚಿಕಿತ್ಸೆ ನಡೆಸುವ ಸಮರ್ಥ ವೈದ್ಯರು ಭಾರತದಲ್ಲಿ ಇದ್ದರು. ಶಾಸ್ತ್ರಶುದ್ಧವಾದ ರೀತಿಯಲ್ಲಿ ಸಂಗೀತನಾದವನ್ನು ಉತ್ಪತ್ತಿಮಾಡಿ ಹಾಡನ್ನು ಹಾಡಿ ಅದರ ಬಲದಿಂದಲೇ ದೀಪವನ್ನು ಬೆಳಗಿಸಬಲ್ಲ, ಮಳೆಯನ್ನು ಬರಿಸಬಲ್ಲ ಸಂಗೀತಜ್ಞರು ಭಾರತದಲ್ಲಿ ಇದ್ದರು. ಹಾಗೆಯೇ ಕಲ್ಲಿನ ಕಂಬವನ್ನು ಮಿಡಿದಾಗ ಸಪ್ತಸ್ವರಗಳು ಹೊರಹೊಮ್ಮುವಂತೆ ಶಿಲಾಸ್ತಂಭಗಳನ್ನು ರಚಿಸುವ ಮಹಾಶಿಲ್ಪಿಗಳೂ ಈ ದೇಶದಲ್ಲಿ ಇದ್ದರು ಒಂದು ಲಕ್ಷ ಶ್ಲೋಕಗಳಿಂದ ಕೂಡಿರುವ ಮಹಾಭಾರತ ಗ್ರಂಥವು ಜಗತ್ತಿನಲ್ಲಿಯೇ ಅತ್ಯಂತ ದೊಡ್ಡದಾಗಿದ್ದು ಈ ಗ್ರಂಥವು ಭಾರತದಲ್ಲಿ ರೂಪುಗೊಂಡಿತು ಎಂಬುದು ಭಾರತದ ಹಿರಿಮೆಗೆ ಮೆರುಗನ್ನು ನೀಡುವ ಸತ್ಯಾಂಶವಾಗಿರುತ್ತದೆ. ಪಂಚಮವೇದವೆಂದು ಪ್ರಸಿದ್ಧವಾಗಿರುವ ಮಹಾಭಾರತದ ವಿಸ್ತಾರ, ವಿಷಯಸಂಪತ್ತು, ವಿಚಾರಯೋಗ್ಯತೆಗಳಿಗೆ ಸರಿದೂಗುವ ಗ್ರಂಥ ಜಗತ್ತಿನಲ್ಲಿ ಇನ್ನೊಂದಿಲ್ಲ. ಹಾಗೆಯೇ ರಾಮಾಯಣದಲ್ಲಿ ಚಿತ್ರಿಸಲ್ಪಟ್ಟಿರುವ ರಘುವಂಶಕುಲದೀಪನಾದ ಭಗವಾನ್ ಶ್ರೀರಾಮಚಂದ್ರ, ಮಹಾಸಾಧ್ವಿ ಶ್ರೀ ಸೀತಾದೇವಿ, ಸ್ವಾಮಿಭಕ್ತ ವೀರ ಆಂಜನೇಯಸ್ವಾಮಿ, ಆದರ್ಶ ತಮ್ಮಂದಿರಾದ ಭರತ-ಲಕ್ಷ್ಮಣ-ಶತ್ರುಘ್ನರು, ಮಹರ್ಷಿ ವಸಿಷ್ಠ, ಮಹಾಮಾತೆ ಕೌಸಲ್ಯೆ, ಮಹಾಭಾರತದಲ್ಲಿ ಕಂಡುಬರುವ ಯೋಗೀಶ್ವರ ಗೀತಾಚಾರ್ಯ ಭಗವಾನ್ ಶ್ರೀಕೃಷ್ಣ, ಆದರ್ಶ ಬ್ರಹ್ಮಚಾರಿ ಮಹಾಜ್ಞಾನಿ ಭೀಷ್ಮ, ತ್ಯಾಗಚಕ್ರವರ್ತಿ ಕರ್ಣ, ವೀರನಾದ ಅರ್ಜುನ, ಧರ್ಮದ ಆದರ್ಶಜೀವಿ ಧರ್ಮರಾಯ—ಇಂತಹ ಅತ್ಯಂತ ಶ್ರೇಷ್ಠರಾದ ವ್ಯಕ್ತಿಗಳು ಜಗತ್ತಿನ ಇತರ ಯಾವ ಸಂಸ್ಕೃತಿ-ಇತಿಹಾಸಗಳಲ್ಲಿಯೂ ಕಂಡುಬರುತ್ತಿಲ್ಲ. ಶ್ರೀರಾಮ-ಶ್ರೀಕೃಷ್ಣ—ಶ್ರೀಬುದ್ಧ, ಶ್ರೀಶಂಕರ, ಶ್ರೀರಾಮಕೃಷ್ಣ, ಮಹಾತ್ಮಾ ಗಾಂಧಿ—ಇವರೆಲ್ಲ ವಿಶ್ವದಲ್ಲಿ ಅನುಪಮರು ಹಾಗೂ ಏಕವೇವಾದ್ವಿತೀಯರು. ಹೀಗೆ ಲೌಕಿಕ ಮತ್ತು ಪಾರಮಾರ್ಥಿಕ ಎಂಬ ಎರಡು ದೃಷ್ಟಿಗಳಿಂದಲೂ ಭಾರತವು ಸಬಲ, ಸಮರ್ಥ ಹಾಗೂ ಸಂಪನ್ನರಾಷ್ಟ್ರವಾಗಿ ಬೆಳೆದು ಬೆಳಗಿದೆ ಎಂಬುದು ಅದರ ಇತಿಹಾಸ—ಪುರಾಣಗಳಿಂದ, ಧರ್ಮ—ಸಾಹಿತ್ಯ—ಸಂಸ್ಕೃತಿಯ ಚರಿತ್ರೆಯಿಂದ ತಿಳಿದುಬರುತ್ತದೆ.

ವೇದಗಳ ಕಾಲದಿಂದಲೇ ಪ್ರಪಂಚದ ರಾಷ್ಟ್ರಗಳ ಮಧ್ಯೆ ತನ್ನದೇ ಆದ ಪ್ರತಿಭೆ, ವೈಶಿಷ್ಟ್ಯಗಳಿಂದ ಬೆಳಗಿದ ಭಾರತ ಇತ್ತೀಚಿನ ಇತಿಹಾಸಕಾಲದಲ್ಲಿ ಅನೇಕ ವಿಧವಾದ ರಾಜಕೀಯ, ಸಾಂಸ್ಕೃತಿಕ ಹಾಗೂ ಸಾಮಾಜಿಕವಾದ ಪರಕೀಯ ದಾಳಿ, ಆಘಾತಗಳಿಗೆ ಸಿಲುಕಿತು. ಜಗತ್ತಿನಲ್ಲಿ ಪ್ರಾಚೀನವಾದವುಗಳೆಂದು ಗಣ್ಯವಾಗಿ ತಮ್ಮ ಸಂಸ್ಕೃತಿ-ನಾಗರಿಕತೆಗಳಿಂದ ಜಗತ್ಪ್ರಸಿದ್ಧಿಯನ್ನು ಪಡೆದ ರಾಷ್ಟ್ರಗಳಾದ ಗ್ರೀಸ್, ಬ್ಯಾಬಿಲೋನಿಯಾ,

ಈಜಿಪ್ಟ್, ರೋಮ್, ಅಸ್ಸೀರಿಯಾ, ಸುಮೇರಿಯಾ ಇತ್ಯಾದಿ ದೇಶಗಳ ಭವ್ಯಸಂಸ್ಕೃತಿಗಳೆಲ್ಲ ಇಂದು ನಾಮಾವಶೇಷವಾಗಿಹೋಗಿರುವುದು ಐತಿಹಾಸಿಕ ಸತ್ಯವಾಗಿರುತ್ತದೆ. ಆ ರಾಷ್ಟ್ರಗಳಿಗಿಂತ ಹಿರಿದಾಗಿದ್ದು ಸಮಕಾಲೀನವಾಗಿದ್ದ ಹಿಂದೂಸ್ಥಾನ ಮಾತ್ರ ಇಂದಿಗೂ ಕೂಡ ತನ್ನತನವನ್ನು ಕಳೆದುಕೊಳ್ಳದೇ ಉಳಿದಿರುತ್ತದೆ. ಹಲವು ರಾಜರುಗಳ ಆಳ್ವಿಕೆ, ಸಾಮ್ರಾಜ್ಯಗಳ ಉತ್ಥಾನ ಮತ್ತು ಪತನ, ಹೊರದೇಶಗಳಿಂದ ಮತೀಯವಾದ ಮತ್ತು ರಾಜಕೀಯವಾದ ಆಘಾತ—ಇವುಗಳನ್ನೆಲ್ಲಾ ಎದುರಿಸಿ, ಸಹಿಸಿಕೊಂಡು, ಇನ್ನೂ ಕೂಡ ಈ ಹಿಂದೂಧರ್ಮ ನಿತ್ಯನೂತನವಾಗಿ ಉಳಿದಿರುವುದು ಭಾರತೀಯ ಆಧ್ಯಾತ್ಮಿಕಶಕ್ತಿ, ಸಾಂಸ್ಕೃತಿಕ ಸಾಮರ್ಥ್ಯಗಳ ಪರಿಣಾಮವಾಗಿದ್ದು ಅದೇ ಹಿಂದೂಧರ್ಮದ ಹಾಗೂ ಭಾರತದ ಗಣ್ಯವಾದ ಯೋಗ್ಯತೆ ಮತ್ತು ವೈಶಿಷ್ಟ್ಯವಾಗಿರುತ್ತದೆ.

ಭಾರತದ ಬದುಕಿನ ಕಥೆಗಳನ್ನು ಪರಿಶೀಲಿಸುತ್ತಾ ವೇದಗಳ ಕಾಲದ ತನಕ ಸಾಗಿದರೆ ಅಂದಿನಿಂದಲೇ ಈ ಪುಣ್ಯಭೂಮಿಯು ಆಧ್ಯಾತ್ಮಿಕ ಪ್ರಧಾನವಾದ ರಾಷ್ಟ್ರವಾಗಿ ಬೆಳಗುತ್ತಾಬಂದಿದೆ ಎಂಬುದು ಸ್ಪಷ್ಟವಾಗುವುದು. ಈ ಸತ್ಯವನ್ನು ಕಾಲಕಾಲಕ್ಕೆ ಪುನಃಪುನಃ ದೃಢೀಕರಿಸಲು ಭಾರತದಲ್ಲಿ ಅದೆಷ್ಟೋ ಸಾಧುಸಂತರು, ಋಷಿಪುಂಗವರು, ಅವತಾರಪುರುಷರು, ಮತಾಚಾರ್ಯರು ಮತ್ತು ಯೋಗಿಗಳು ಜನ್ಮವೆತ್ತಿ ತಮ್ಮ ಆದರ್ಶ ಜೀವನ ಮತ್ತು ಸಂದೇಶಗಳ ಮೂಲಕ ಜಗತ್ತಿಗೆ ಈ ದೇಶದ ಆಧ್ಯಾತ್ಮಿಕ ಸತ್ವ-ಯೋಗ್ಯತೆಗಳನ್ನು ಮತ್ತೆ ಮತ್ತೆ ಸಾರುತ್ತಾ ಬಂದಿರುತ್ತಾರೆ.

ಹಿಂದೂಸ್ಥಾನವು ಭೌಗೋಳಿಕವಾಗಿ ಒಂದು ಭೂಭಾಗ ಎನ್ನುವುದು ಎಷ್ಟು ಸತ್ಯವೋ ಅಷ್ಟೇ ಸತ್ಯ ಅದು ಆಧ್ಯಾತ್ಮಿಕವಾದ ಸತ್ಯವೇ ಮೈವೆತ್ತುಮೂಡಿಬಂದ ಶಕ್ತಿಯುತವಾದ ಪವಿತ್ರಭೂಮಿ ಎನ್ನುವುದು.

ಸ್ವಾಮಿ ವಿವೇಕಾನಂದರು ಪ್ರಪಂಚದ ಬಹುಭಾಗಗಳಲ್ಲೆಲ್ಲ ಸಂಚರಿಸಿ ಹಿಂದೂಧರ್ಮದ ದಿವ್ಯಸಂದೇಶಗಳನ್ನು ಪಸರಿಸಿ ಭಾರತಕ್ಕೆ ಮರಳಿ ಬಂದಾಗ ಹೇಳಿದ ಮುತ್ತಿನಂತಹ ಮಾತುಗಳು ಈ ಸಂದರ್ಭದಲ್ಲಿ ಸ್ಮರಣೀಯವಾಗಿರುತ್ತವೆ :[1]

> "ಪ್ರಪಂಚದಲ್ಲಿ ಯಾವುದಾದರೂ ಪುಣ್ಯಭೂಮಿ ಎಂದು ಕರೆಯಿಸಿಕೊಳ್ಳಲು ಅರ್ಹವಾಗಿದ್ದರೆ, ಜೀವಿಗಳು ತಮ್ಮ ಜೀವನದ ಕೊನೆಯ ಕರ್ಮವನ್ನು ಸವೆಸಲು ಬರಬೇಕಾದ ಸ್ಥಳವೊಂದಿದ್ದರೆ, ಭಗವಂತನ ಎಡೆಗೆ ಸಂಚರಿಸುತ್ತಿರುವ ಪ್ರತಿಯೊಂದು ಜೀವಿಯೂ ತನ್ನ ಕೊನೆಯ ಯಾತ್ರೆಯನ್ನು ಪೂರೈಸುವುದಕ್ಕೆ ಒಂದು ಕರ್ಮಭೂಮಿಗೆ ಬರಬೇಕಾದರೆ, ಯಾವುದಾದರೂ ದೇಶದಲ್ಲಿ ಮಾನವಕೋಟಿ, ಮಾಧುರ್ಯತೆ ಔದಾರ್ಯತೆ ಪವಿತ್ರತೆ ಶಾಂತಿ, ಎಲ್ಲಕ್ಕಿಂತ ಹೆಚ್ಚಾಗಿ ಧ್ಯಾನ ಮತ್ತು ಅಂತರ್ಮುಖಿ ಜೀವನದಲ್ಲಿ ತನ್ನ ಪರಾಕಾಷ್ಠತೆಯನ್ನು ಮುಟ್ಟಿದ್ದರೆ ಅದು ಈ ಭಾರತದೇಶವೊಂದೇ ಆಗಿರುತ್ತದೆ."

---

1. "If there is any land on this earth that can lay claim to be the blessed *Punyabhoomi*, to be the land to which souls on this earth must come to account for *Karma*, the land to which every soul that is wending its way Godward must come to attain its last home, the land where humanity has attained its highest towards gentleness, towards generosity, towards purity towards calmness, above all, the land of introspection and spirituality—it is India."
—*Complete Works of S. V.*, Vol. III

ಹೀಗೆ ಪವಿತ್ರವೂ ಶಕ್ತಿಪೂರ್ಣವೂ ಆದ ಭಾರತದೇಶದಲ್ಲಿ ಹಿಂದಿನ ಕಾಲದಲ್ಲಿದ್ದ ಪರಿಸ್ಥಿತಿಗೂ, ಇಂದಿನ ಸ್ಥಿತಿಗಳಿಗೂ ಸಾಕಷ್ಟು ವ್ಯತ್ಯಾಸಗಳು ಕಂಡುಬರುತ್ತಿವೆ. ರಾಜಕೀಯವಾಗಿ ಈಗ ಕೆಲವು ದಶಕಗಳ ಪೂರ್ವದಲ್ಲಿ ಸ್ವತಂತ್ರವಾಗಿರುವ ದೇಶದ ಸರ್ವಾಂಗೀಣ ಅಭಿವೃದ್ಧಿಗಾಗಿ ಸಾಕಷ್ಟು ಕಾರ್ಯಕ್ರಮಗಳನ್ನು ರೂಪಿಸಿ ಆದರ ಅನ್ವಯವಾಗಿ ಕೆಲಸಕಾರ್ಯಗಳು ಭರದಿಂದ ನೆರವೇರಹೊರಟಿವೆ. ಹಾಗಿದ್ದರೂ ಕೂಡ ದೇಶದ ಅಭಿವೃದ್ಧಿ, ಭದ್ರತೆಗಳ ಬಗೆಗೆ ಸಾಕಷ್ಟು ವ್ಯವಸ್ಥೆ, ಭರವಸೆಗಳುಂಟಾಗಿರುವುದಿಲ್ಲ. ಒಂದೆಡೆ ಅನುಕೂಲದ ಪರಿಸ್ಥಿತಿಗಳು ರೂಪುಗೊಂಡಂತೆ ಅವುಗಳಿಗೆ ವಿರೋಧವಾಗಿ ಪ್ರತಿಕೂಲದ ಪರಿಸ್ಥಿತಿಗಳೂ ಸಮಸ್ಯೆಗಳೂ ವಿಪುಲವಾಗಿ ಹುಟ್ಟಿಕೊಳ್ಳುತ್ತಲೂ ಇವೆ. ಹೀಗೆಲ್ಲಾ ಆಗಲು ಸಾಕಷ್ಟು ಕಾರಣಗಳು ಇವೆಯಾದರೂ ಜೀವನದಲ್ಲಿ ಧರ್ಮವನ್ನು ಕ್ರಮವಾಗಿ ಅನುಸರಿಸದಿರುವುದೇ ಪ್ರಬಲ ಕಾರಣ ಎಂಬುದು ಪರಿಸ್ಥಿತಿಗಳ ಸರಿಯಾದ ಪರಿಶೀಲನೆಯಿಂದ ಸ್ಪಷ್ಟವಾಗುವುದು.

ಈ ಬಗ್ಗೆ ಮಹರ್ಷಿ ಶ್ರೀ ಅರವಿಂದರ ದಿವ್ಯನುಡಿಗಳು ನಮಗೆ ಹೆಚ್ಚಿನ ಬೆಳಕನ್ನು ಚೆಲ್ಲುತ್ತವೆ :[1]

> “ಮತಧರ್ಮವು ಭಾರತೀಯ ಮನಸ್ಸಿನ ಪ್ರಮುಖವಾದ ಚಿತ್ತೈಕಾಗ್ರತಾವಿಷಯವಾಗಿದ್ದಿತು. ಮತಧರ್ಮದ ಕುರಿತಾದ ವಿಪರೀತವಾದ ಪ್ರಾಮುಖ್ಯವು ಭಾರತವನ್ನು ಹಾಳುಗೆಡವಿರುತ್ತದೆ ಎಂದು ಕೆಲವರು ನಮ್ಮಲ್ಲಿ ಹೇಳಿರುತ್ತಾರೆ. ಭಾರತದ ಹೆಚ್ಚಿನಂಶದ ಜನರು ಮತಧರ್ಮವನ್ನು ಅದರ ಯಥಾರ್ಥವಾದ ಅರ್ಥದಲ್ಲಿ ತಮ್ಮ ಜೀವನದಲ್ಲಿ ಪೂರ್ತಿಯಾಗಿ ಅಳವಡಿಸಿಕೊಂಡಿದ್ದರೆ ನಾವಿಂದು ಎಲ್ಲಿದ್ದೇವೆಯೋ ಅಲ್ಲಿ ಇರಬೇಕಾಗಿರುತ್ತಿರಲಿಲ್ಲ, ನಮ್ಮ ಸಾರ್ವಜನಿಕ ಜೀವನವು ಅಧರ್ಮಯುತ, ಅಹಂಕಾರಯುತ, ಸ್ವಾರ್ಥಸಾಧನಾದೃಷ್ಟಿಯಿಂದ ಕೂಡಿಬಂದದ್ದರಿಂದ ಅವರು (ಭಾರತೀಯರು) ಲೌಕಿಕರಾಗುವಂತಾಯಿತು.”

ಹಿಂದೂಸ್ಥಾನದಲ್ಲಿ ಹಿಂದೂಸಮಾಜದಲ್ಲಿ ಕಾಣುವ ಇಂದಿನ ಜನಜೀವನದ ಪರಿಸ್ಥಿತಿಗಳನ್ನು ಅನುಸರಿಸಿ ಹಿಂದೂಜನರನ್ನು ಸ್ಥೂಲವಾಗಿ ಸಂಗ್ರಹಿಸಿ ಹೀಗೆ ವರ್ಗೀಕರಿಸಬಹುದು :

(೧) ಜೀವನ ಎಂದರೆ ಭೌತಿಕ ಸುಖಸಲಕರಣೆಗಳ ಸಂಗ್ರಹಣ ಮತ್ತು ಅವುಗಳನ್ನು ಹೆಚ್ಚು ಹೆಚ್ಚು ಪ್ರಮಾಣದಲ್ಲಿ ಅನುಭವಿಸುವುದು ಎಂದು ಪರಿಗಣಿಸಿ ಪರಕೀಯ ಸಂಸ್ಕೃತಿ-ಜೀವನಕ್ರಮ—ಇವುಗಳನ್ನು ಅನುಕರಣೆ ಮಾಡಿ ಜೀವನ ಮಾಡುವವರು. ಇವರ ಜೀವನದಲ್ಲಿ ಆಧ್ಯಾತ್ಮವಿಚಾರಗಳಿಗೆ ಎಡೆಯಿರುವುದಿಲ್ಲ.

(೨) ಅಧ್ಯಾತ್ಮವಿಚಾರಗಳೆಂದರೆ, ಮನೆಯಲ್ಲಿ ಮೇಜಿನ ಮೇಲೆ ಹೂವಿನ ದಾನಿಯನ್ನು (Flower vase) ಅಲಂಕಾರಕ್ಕಾಗಿ ಇಟ್ಟಂತೆ, ತಮ್ಮ ಜೀವನಕ್ಕೆ ಎಷ್ಟರಮಟ್ಟಿಗೆ ಮಾತ್ರ

---

1. “Religion has been a central preoccupation of the Indian mind; some have told us that too much religion ruined India...If the majority of Indians had indeed made the whole of their lives religious in the true sense of the word, we should not be where we are now; it is because their public life became most irreligious, egoistic, self-seeking, materialistic that they fell.”

—*Sri Aurobindo, Quoted in Bhavan's Journal,* Vol, IV, No. 3

ಬೇಕು ಎಂದು ನಿಶ್ಚಯಿಸಿ ಅದರಂತೆ ಅಧ್ಯಾತ್ಮವಿಚಾರಗಳನ್ನು ಅತಿಕಡಿಮೆ ಹಾಗೂ ಹಗುರವಾದ ಪ್ರಮಾಣದಲ್ಲಿ ಜೀವನದಲ್ಲಿ ಅಳವಡಿಸಿಕೊಂಡವರು. ಇವರಲ್ಲಿ ಅಧ್ಯಾತ್ಮ ವಿಚಾರವಾಗಿ ಅತಿಕಡಿಮೆ ಮಟ್ಟದ ಜ್ಞಾನ, ಒಲವು ಮತ್ತು ತೃಪ್ತಿಗಳು ಇರುತ್ತವೆ.

(೩) ಅಧ್ಯಾತ್ಮವಿಚಾರವು ಈ ಕಾಲಕ್ಕೆ ಪ್ರಾಯೋಗಿಕವಲ್ಲ ಎಂಬ ಭಾವನೆಯನ್ನು ತಳೆದು ಅನುಸಾರವಾಗಿ ಅಧ್ಯಾತ್ಮವನ್ನು ಜೀವನದಲ್ಲಿ ಕಡೆಗಣಿಸಿರುವವರು. ಇವರು ವಿಚಾರ ತಿಳಿದುಕೊಳ್ಳದೆ ಅಧ್ಯಾತ್ಮವಿಚಾರ, ದೇಶದ ಭವ್ಯವಾದ ಅಧ್ಯಾತ್ಮಪರಂಪರೆ ಇವುಗಳನ್ನು ಅರ್ಥಶೂನ್ಯ, ಅಪ್ರಾಯೋಗಿಕ ಎಂದು ಟೀಕೆಮಾಡುತ್ತಾರೆ.

(೪) ಅಧ್ಯಾತ್ಮಜೀವಿಗಳೆಂಬ ಸೋಗನ್ನು ತಳೆದು ತಾವು ಎಸಗುವ ಅನ್ಯಾಯ, ಅನಾಚಾರ ಹಾಗೂ ಆಲಸ್ಯಜೀವನಕ್ಕೆ ಸಾಮಾಜಿಕ ಮಾನ್ಯತೆ, ರಕ್ಷಣೆ ಹಾಗೂ ಸಹಾಯಕ ಸಾಧನವಾಗಿ ಅಧ್ಯಾತ್ಮವನ್ನು ಉಪಯೋಗಿಸುವವರು. ಇವರಲ್ಲಿ ಬಾಹ್ಯದ ತೋರಿಕೆಯ ಜೀವನ—ಅಂತರ್ಯದಲ್ಲಿ ಬೇರೆಯೇ ಇನ್ನೊಂದು ಜೀವನ—ಎಂಬ ಎರಡು ತರಹದ ಜೀವನವು ಕಾರ್ಯಾಚರಣೆಯಲ್ಲಿರುತ್ತದೆ.

(೫) ಅಧ್ಯಾತ್ಮವಿಚಾರಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಪ್ರಯತ್ನದಿಂದ, ವಿಶ್ವಾಸದಿಂದ ದಿವ್ಯಜೀವನ ನಡೆಸುವವರು. ಇವರಲ್ಲಿ ಇನ್ನು ಎರಡು ವರ್ಗಗಳನ್ನು ಮಾಡಬಹುದು. ಒಂದನೆಯ ವರ್ಗದವರು ತಮ್ಮ ತಮ್ಮ ಮತಪಂಥಗಳಿಗೆ ಮಾತ್ರ ಒಳಗಾದವರಾಗಿ ಅವುಗಳ ಸಂಪ್ರದಾಯಗಳನ್ನು ಕಟ್ಟುನಿಟ್ಟಾಗಿ ಅನುಸರಿಸುವರು. ಇವರು ಸಂಪ್ರದಾಯಬದ್ಧರು. ಎರಡನೆಯ ವರ್ಗದವರು ಸಂಪ್ರದಾಯಬದ್ಧರಾಗಿರದೆ ಆಧುನಿಕ ಕಾಲಕ್ಕೆ ಅನುಸಾರವಾಗಿ ಆಚಾರವಿಚಾರಗಳನ್ನು ಹೊಂದಿಸಿಕೊಂಡು ಅಧ್ಯಾತ್ಮವಿಚಾರ ಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಅನುಷ್ಠಾನಮಾಡುವವರು.

(೬) ಆಧ್ಯಾತ್ಮಿಕವಾದ ತಿಳಿವಳಿಕೆ, ಹಿರಿಜೀವನದ ಬಯಕೆ, ಉದಾತ್ತ ಆದರ್ಶ ಯಾವುದೂ ಇರದವರು.

(೭) ವಿದ್ಯೆ, ಸಂಸ್ಕೃತಿ, ಅಧ್ಯಾತ್ಮ ತಿಳುವಳಿಕೆ ಯಾವುದೂ ಇರದ ಹಿಂದುಳಿದ ಜನರು.

ಹೀಗೆ ಧರ್ಮ, ಅಧ್ಯಾತ್ಮಗಳ ವಿಚಾರವಾಗಿ ವಿವಿಧ ಮನೋಭಾವನೆಯನ್ನು ತಳೆದ ಜನರ ಜೀವನವು ಹಿಂದೂಸಮಾಜದಲ್ಲಿ ಸಾಕಷ್ಟು ಅಹಿತಕರವಾದ ಪರಿಣಾಮಗಳಿಗೆ ಕಾರಣವಾಗಿರುತ್ತದೆ. ದಿನನಿತ್ಯದ ಜೀವನದಲ್ಲಿ ಕರ್ತವ್ಯವೆಲ್ಲಿ ನೆರವೇರಬೇಕೋ ಅಲ್ಲಿ ಉದಾಸೀನತೆ ನೆಲೆನಿಲ್ಲಹೊರಟಿದೆ. ಡಾಂಭಿಕತನ, ಅಹಂಕಾರಮನೋಭಾವ, ಇವುಗಳು ಹೆಚ್ಚಾಗತೊಡಗಿವೆ ; ದೇಶಭಕ್ತಿ, ದೇಶಾಭಿಮಾನ ಇವುಗಳು ಕಡಿಮೆಯಾಗಹತ್ತಿವೆ. ಜವಾಬ್ದಾರಿಯ ಬದಲು ಜೀವನದಲ್ಲಿ ಬೇಜವಾಬ್ದಾರಿ ತಲೆಹಾಕಿರುತ್ತದೆ. ಕಾನೂನು, ಶಿಸ್ತು ಇವುಗಳೆಲ್ಲ ಕಾರ್ಯಾಚರಣೆಯಲ್ಲಿ ಬಹಳ ಸಡಿಲವಾಗಹತ್ತಿವೆ. ತನ್ನಿಂದಾದ ಅನ್ಯಾಯ-ಅನಾಚಾರಗಳು, ಅವ್ಯವಸ್ಥೆ ಇವುಗಳಿಗೆಲ್ಲಾ ಕಾರಣ ತಾನಲ್ಲ, ತಾನಲ್ಲ ಎಂದು ಅದರ ಜವಾಬ್ದಾರಿಯನ್ನು ಇತರರ ಮೇಲೆ ಹೊರಿಸುವ ಉಪಾಯ ಜೀವನಕ್ರಮ ಹೆಚ್ಚಾಗಹತ್ತಿದೆ. ಕರ್ತವ್ಯವನ್ನು ಸರಿಯಾಗಿ ಮಾಡದೆ ಹಕ್ಕುಗಳಿಗಾಗಿ ಮಾತ್ರ ಹೋರಾ ಡುವ ಮನೋಭಾವನೆ ಹೆಚ್ಚಾಗುತ್ತಿದೆ. ಎಲ್ಲಿ ಪರೋಪಕಾರಬುದ್ಧಿ ಇರಬೇಕೋ ಅಲ್ಲಿ ವಂಚನೆ, ಸ್ವಾರ್ಥಗಳು ದಿನೇದಿನೇ ಹೆಚ್ಚಾಗಿ ಸೇರಹತ್ತಿವೆ. ಇದರ ಜೊತೆಗೆ ಸಮಾನತೆಯ

ಕೂಗು (Equality) ಹೆಚ್ಚುಹೆಚ್ಚಾಗಿ ಕೇಳಿಬರುತ್ತಿದೆ. ವೈವಿಧ್ಯತೆ ಮತ್ತು ಅಸಮಾನತೆ ಕೂಡಿರುವ ಈ ಜಗತ್ತಿನಲ್ಲಿ ಮತ್ತು ಮಾನವ ಬಳಗದಲ್ಲಿ ಮೂಡಿರುವ ಸಮಾನತೆಯ ಕೂಗು ಹಿಂದೂಸಮಾಜದ ಜೀವನದ ಮೇಲೆ ಸಾಕಷ್ಟು ಪ್ರಭಾವ ಬೀರುತ್ತಿದೆ. ವರ್ಣ ವರ್ಗ, ವರ್ಣಾಶ್ರಮಧರ್ಮ, ನೀತಿತತ್ತ್ವಗಳು, ಇವುಗಳು ಹಿಂದೂವಿನ ಸಾಮಾಜಿಕ ಜೀವನದ ಭದ್ರವಾದ ಆಧಾರಸ್ತಂಭಗಳಾಗಿದ್ದವು. ಇದೀಗ ಸಮಾನತೆಯ ಹೆಸರಿನಲ್ಲಿ ಈ ಸ್ತಂಭಗಳು ನಿರ್ಬಲವಾಗಿ ಕುಸಿದುಬೀಳುವಂತಾಗಿದೆ. ಸಮಾನತೆಯ ಹೆಸರಿನಲ್ಲಿ ಸಮಾಜ-ನೀತಿ ಅಳಿದುಹೋಗುತ್ತಿದೆ. ಶಾರೀರಿಕವಾದ ಸಮತೆಯನ್ನೂ, ಸುಖಸಂಪತ್ತುಗಳನ್ನೂ ದೃಷ್ಟಿಯಲ್ಲಿಟ್ಟುಕೊಂಡಿರುವ ಈ ಸಮಾನತೆಯ ಕೂಗಿನಿಂದಾಗಿ ಆಧ್ಯಾತ್ಮಮೌಲ್ಯಗಳು, ಗುಣಧರ್ಮ, ಸಂಪತ್ತಿನ ತಾರತಮ್ಯ ಇವುಗಳು ವಿವೇಕಿಗೆ ಬರದಂತಾಗಿ ಒಂದೇ ತಾಯಿ ತನ್ನ ಬೇರೆ ಬೇರೆ ವಯಸ್ಸಿನ ಮಕ್ಕಳಿಗೆಲ್ಲಾ ಒಂದೇ ಪ್ರಮಾಣದಷ್ಟು ಹಾಲನ್ನು ಕೊಡಹೊರಟಂತಾಗಿದೆ. ಸಮತೆ ಎಂದರೆ ವ್ಯಕ್ತಿ ಹಾಗೂ ವಸ್ತುಗಳ ಯೋಗ್ಯತಾ ತಾರತಮ್ಯವನ್ನು ಅನುಸರಿಸಿ ತಾಯಿಯು ತನ್ನ ಬೇರೆ ಬೇರೆ ಪ್ರಾಯದ ಮಕ್ಕಳನ್ನು ಒಂದೇ ರೀತಿ ಪ್ರೀತಿಸಿದರೂ ಅವರವರಿಗೆ ಯೋಗ್ಯವಾದ ರೀತಿಯಲ್ಲಿ ಅವರೊಡನೆ ವ್ಯವಹರಿಸುವಂತೆ ತಾರತಮ್ಯದೃಷ್ಟಿಯನ್ನು ತಳೆದಿರುವುದಾಗಿದೆ. ಪ್ರತಿಯೊಬ್ಬನಿಗೂ ಅವನ ಯೋಗ್ಯತೆಗೆ ತಕ್ಕ ಕರ್ತವ್ಯವನ್ನು ವಹಿಸುವುದಕ್ಕೆ ಮತ್ತು ಅವನು ಪ್ರಗತಿಹೊಂದಲು ಉಚಿತವಾದ ಅವಕಾಶ ಕಲ್ಪಿಸಿಕೊಡುವುದು ಸಮತೆ ಎಂದು ಎನಿಸುತ್ತದೆ. ಆದರೆ ಈ ಸತ್ಯಾಂಶವಿಂದು ಜನಜೀವನದಲ್ಲಿ ಮರೆತುಹೋದಂತಾಗಿದೆ.

ಈ ಸ್ಥಿತಿಗಳ ನಿವಾರಣೆಯಾಗಲು ಮೊಟ್ಟಮೊದಲು ಹಿಂದೂಗಳೆಲ್ಲರೂ ಸಂಘಟಿತರಾಗಬೇಕು. ಸಂಘಟನೆಯು ಮೊದಲು ಆಧ್ಯಾತ್ಮಿಕವಾಗಿ ಆಗಬೇಕು. ಮತಪಂಥಗಳ ಹೆಸರಿನಲ್ಲಿ ಚದುರಿಹೋಗಿರುವ ಅನೇಕ ಒಳಪಂಗಡಗಳ ಸಂಘಟನೆಯಾಗಬೇಕು. ಧಾರ್ಮಿಕವಾದ ಒಳಪಂಥಗಳ ಜಗಳ-ವೈಷಮ್ಯಗಳು ನಿರ್ನಾಮವಾಗಬೇಕು. ಅನೇಕದಲ್ಲಿ ಇರುವ ಏಕವನ್ನು ಗ್ರಹಿಸಿ, ಅನುಸಾರವಾಗಿ ಒಗ್ಗಟ್ಟು, ಸಹನೆ, ಪರಸ್ಪರ ಸಹಾನುಭೂತಿಗಳಿಂದ ಕೂಡಿ ಬಾಳಲು ಹಿಂದೂ ಸಮಾಜದವರೆಲ್ಲರೂ ಕಾರ್ಯತತ್ಪರರಾಗಬೇಕು.

ಮನುಷ್ಯನ ಕಾರ್ಯಚಟುವಟಿಕೆಗಳು ಶುದ್ಧವೂ ಸುಗಮವೂ ಹಿತಕಾರಿಯೂ ಆಗಬೇಕಾದರೆ ಭಾವಸಂಶುದ್ಧಿ ಮತ್ತು ಕ್ರಿಯಾಸಂಶುದ್ಧಿಗಳಿಂದ ಅವುಗಳು ಕೂಡಿರಬೇಕು ಎಂಬುದು ಸರ್ವವಿದಿತವಾದ ವಿಚಾರವಾಗಿದೆ. ಈ ಶುದ್ಧಿದ್ವಯಗಳಿಗೆ ಆಧಾರವೇ ಮತಧರ್ಮಗಳು. ಮತಧರ್ಮಗಳ ಬಲದಿಂದ ಸತ್ವದ ಸತ್ವದಿಂದ ಆಧ್ಯಾತ್ಮಿಕವಾಗಿ ಸಾಂಸ್ಕೃತಿಕವಾಗಿ ರಾಜಕೀಯವಾಗಿ ಎಸಗುವ ಕೆಲಸಗಳೆಲ್ಲವೂ ಹಿತ ಹಾಗು ಅರ್ಥಪೂರ್ಣವಾಗುತ್ತವೆ.

ಭಾರತವು ಸೆಕ್ಯುಲರ್ ರಾಜ್ಯ. ಈ ದೇಶದಲ್ಲಿ ಇಂದು ಸೆಕ್ಯುಲರ್ ಶಬ್ದದ ಹೆಸರಿನಲ್ಲಿ ಬೇಕಷ್ಟು ತಪ್ಪು ಅಭಿಪ್ರಾಯಗಳು ಜನರಲ್ಲಿವೆ. ಸೆಕ್ಯುಲರ್ ರಾಷ್ಟ್ರವಾದ ಭಾರತದಲ್ಲಿ ಮತಪರವಾದ, ಧರ್ಮಸಹಿತವಾದ ಚಿಂತನೆಗೆ, ದೃಷ್ಟಿಗೆ ಅವಕಾಶವಿಲ್ಲ ಎಂಬ ಒಂದು ಅಭಿಪ್ರಾಯ ದೇಶದಲ್ಲಿ ಇಂದು ಸಾಕಷ್ಟು ಪ್ರಬಲವಾಗಿ ಹಬ್ಬಿರುತ್ತದೆ.

ಆಧ್ಯಾತ್ಮಭೂಮಿಯಾದ ಈ ಪುಣ್ಯದೇಶವು ಋಗ್ವೇದದ ಕಾಲದಿಂದ ಈ ಆಧುನಿಕ ಕಾಲದ ತನಕವೂ ವಿಪುಲಸಂಖ್ಯೆಯಲ್ಲಿ ದಾರ್ಶನಿಕರು, ಮತಾಚಾರ್ಯರು, ಯೋಗಿಗಳು,

ಸಾಧುಸಂತರುಗಳಿಗೆ ಜನ್ಮವಿತ್ತಿದೆ. ಮತೀಯವಾದ ಸಹಿಷ್ಣುತೆ, ಧಾರ್ಮಿಕವಾದ ಒಗ್ಗಟ್ಟು, ಸಾಂಸ್ಕೃತಿಕವಾದ ಐಕಮತ್ಯಕ್ಕೆ ಈ ದೇಶವು ಹೆಸರಾಂತವಾದುದಾಗಿದೆ. ಇಂತಹ ಪವಿತ್ರ ಹಾಗೂ ಸತ್ವಪೂರ್ಣವಾದ ಭೂಮಿಯನ್ನು ಮತದೂರವಾದ, ಧರ್ಮಬಾಹಿರವಾದ, ಲೌಕಿಕವಾದ ರಾಷ್ಟ್ರ ಎಂದರೆ ಅರ್ಥಶೂನ್ಯವಾಗುವುದರ ಜೊತೆಗೆ ಅಸತ್ಯವೂ ಆಗುತ್ತದೆ. ಅಷ್ಟು ಮಾತ್ರವಲ್ಲದೆ ಸತ್ಯಕ್ಕೆ ಅಪಚಾರವೆಸಗಿದಂತಾಗುತ್ತದೆ. ಹಾಗಾಗಿ 'ಸೆಕ್ಯುಲರ್ ರಾಷ್ಟ್ರ' ಎಂದರೆ ಧರ್ಮಸಮನ್ವಯದ ಮತದ ಒಗ್ಗೆ ನಿಷ್ಪಕ್ಷಪಾತದೃಷ್ಟಿ ತಳೆದಿರುವ ರಾಷ್ಟ್ರ ಎಂದೇ ಹೇಳಬೇಕಾಗಿರುವುದು ಅಗತ್ಯ, ಸಮಂಜಸ ಹಾಗೂ ಸಮಯೋಚಿತ ವಾಗಿರುತ್ತದೆ. ಈ ವಿಚಾರವಾಗಿ ಭಾರತದ ಸುಪ್ರಸಿದ್ಧ ತತ್ತ್ವಜ್ಞಾನಿ ಡಾ|| ರಾಧಾಕೃಷ್ಣನ್ ಅವರು ಹೇಳಿದ ಮಾತಗಳು ವಿಷಯವನ್ನು ಹೆಚ್ಚು ವಿವರವಾಗಿ ಸ್ಪಷ್ಟಪಡಿಸುತ್ತವೆ :[1]

> "ಭಾರತವು ಲೋಕಾಯತ ರಾಜ್ಯ ಎಂದಾಗ ಅದರರ್ಥ ಭಾರತವು ಭೌತಿಕವಾದ ಸುಖಭೋಗ ಗಳನ್ನು ಪೂಜಿಸುತ್ತದೆ ಎಂದಾಗಿರುವುದಿಲ್ಲ. ಅಥವಾ ಅದರರ್ಥವು ಭಾರತವು ಕಾಲದೇಶಗಳಿಗೆ ಸಂಬಂಧಿಸಿದ ಬಾಹ್ಯಪ್ರಪಂಚವನ್ನು ಆಳುವ ನಿಯಮಗಳಿಗಿಂತ ಮೇಲಾದ ವಿಶ್ವನಿಯಮ ಗಳಿವೆ ಎಂಬುದನ್ನು ಮಾನ್ಯಮಾಡುವುದಿಲ್ಲವೆಂದಾಗಿರುವುದಿಲ್ಲ.
>
> ಅದು ನಿಶ್ಚಿತವಾದ ಯಾವ ಒಂದು ಮತಧರ್ಮಕ್ಕೂ ಒತ್ತಾಸೆಯಾಗಿ ಇಲ್ಲವೇ ಪ್ರತಿನಿಧಿ ಯಾಗಿ ನಿಲ್ಲದೆ ನಿಷ್ಪಕ್ಷಪಾತವಾಗಿ ಎಲ್ಲಾ ಮತಧರ್ಮಗಳ ಒಡನೆ ವ್ಯವಹರಿಸುತ್ತದೆ, ಅಂಗೀ ಕರಿಸುತ್ತದೆ ಎಂದು ಮಾತ್ರ ಅರ್ಥ. ಇದೇ ಲೋಕಾಯತ ರಾಜ್ಯ ಎನ್ನುವುದರ (ಸೆಕ್ಯೂಲರ್ ಸ್ಟೇಟ್) ಅರ್ಥವಾಗುತ್ತದೆ."

ಹಿಂದೂದೇಶದ ಧಾರ್ಮಿಕರಂಗದಲ್ಲಿ ಸಾಕಷ್ಟು ಸುಧಾರಣೆಗಳು ಈಗ ಅತ್ಯಗತ್ಯ ಎಂದು ಕಂಡುಬಂದಿರುತ್ತದೆ. ಹಿಂದೂಸ್ಥಾನದಲ್ಲಿ ಇತರ ಮತದವರೂ ಕೂಡ ಇರುವುದರಿಂದ ಅವರೊಡನೆ ಸಹಬಾಳ್ವೆಯನ್ನು ಹಿಂದೂಗಳು ನಡೆಸಬೇಕಾಗಿದೆ. ಅಲ್ಲದೆ ಇತರ ಮತಕ್ಕೆ ಸೇರಿದವರು, ಹಿಂದೂಮತಕ್ಕೆ ಸೇರಲು ಬಯಸಿದರೆ, ಅಥವಾ ಕಾರಣಾಂತರದಿಂದ ಹಿಂದೂಮತವನ್ನು ಬಿಟ್ಟು ಹೊರಹೋದವರು ಈಗ ಮತ್ತೆ ಮರಳಿ ತಮ್ಮ ಮೂಲ ಧರ್ಮಕ್ಕೆ ಬಂದು ಸೇರಲು ಇಚ್ಛಿಸಿದರೆ—ಬರುವಂತಿದ್ದರೆ ಅವರನ್ನು ಸ್ವಾಗತಿಸಿ ಹಿಂದೂ ಮತಸಂಸ್ಕಾರದೀಕ್ಷೆಯನ್ನು ಅವರಿಗೆ ನೀಡಲು ಹಿಂದೂಗಳು ಸದಾ ಸಿದ್ಧವಿರಬೇಕು. ನಮ್ಮ ಸಮಾಜದಲ್ಲಿ ಅದಕ್ಕೆ ಅನುಕೂಲದ ವ್ಯವಸ್ಥೆ ಇರಬೇಕು. ಹಿಂದುವಾಗಿ ಮತಾಂತರ ಗೊಂಡು ಹಿಂದೂಸಮಾಜಕ್ಕೆ ಸೇರುವವರಿಗೆ ಸೂಕ್ತವಾದ ಮನ್ನಣೆ, ಧಾರ್ಮಿಕ ಸ್ಥಾನ ಮಾನಗಳು ಸಮರ್ಪಕವಾಗಿ ದೊರೆಯುವಂತಾಗಬೇಕು. ಈ ಕುರಿತಾಗಿ ಧಾರ್ಮಿಕ

---

1. "When it is said that India is a secular state, it does not mean that India worships material comfo ts and luxuries or does not recognize that there are higher laws of the universe than those which govern the Physical World of space and time."

"It only means it does not stand for any particular religion but deals impartially with all religions; that it adopts the philosophy of active co-existence among the religions of the world. That is the meaning of a secular state." —*Occasional Speeches & Writings*, Vol. II

ಮಠಾಧಿಪತಿಗಳು, ಸಮಾಜದ ಧಾರ್ಮಿಕ ಸಂಸ್ಥೆಗಳು, ಹಿರಿಯ ಪ್ರತಿಷ್ಠಿತ ಮಹನೀಯರು ಯಥೋಚಿತವಾದ ತೀರ್ಮಾನ ಕೈಕೊಂಡು ಸರ್ವಮಾನ್ಯವಾದ ಅನುಕೂಲದ ವ್ಯವಸ್ಥೆಯನ್ನು ರೂಪಿಸಬೇಕಾಗಿದೆ ಈ ದಿಸೆಯಲ್ಲಿ ಮುಖ್ಯವಾಗಿ ಆರ್ಯಸಮಾಜ, ಶ್ರೀರಾಮಕೃಷ್ಣ ಮಿಷನ್ ಸಂಸ್ಥೆಗಳು ಯಥೋಚಿತವಾದ, ರಚನಾತ್ಮಕವಾದ ಕಾರ್ಯಕ್ರಮಗಳನ್ನು ಕೈಗೊಂಡಿರುವುದು ಶ್ಲಾಘನೀಯ ಹಾಗೂ ಅಭಿನಂದನೀಯವಾಗಿರುತ್ತದೆ. ಹಿಂದೂಧರ್ಮಕ್ಕೆ ಬರುವವರನ್ನು ಸ್ವಾಗತಿಸಿ ಅವರಿಗೆ ಹಿಂದೂಮತದೀಕ್ಷೆ ಕೊಡುವ ವ್ಯವಸ್ಥೆಯಂತೆ ಹಲವಾರು ಸಾಮಾಜಿಕ-ಆರ್ಥಿಕ ಇತ್ಯಾದಿ ಕಾರಣಗಳಿಂದ ಹಿಂದೂಮತದಿಂದ ಹೊರಹೋಗುವ ಹಿಂದೂಗಳು ಹಾಗೆ ನಿಸ್ಸಹಾಯಕರಾಗಿ ಸ್ವಧರ್ಮವನ್ನು ತ್ಯಜಿಸದಂತೆ ಭದ್ರವಾದ ರಕ್ಷಣೆ, ಅನುಕೂಲದ ವ್ಯವಸ್ಥೆಯೂ ಕೂಡ ಇಂದು ಆಗಬೇಕಾಗಿರುವುದು ಅಗತ್ಯವಾಗಿದೆ. ಹಿಂದೂಧರ್ಮಕ್ಕೆ, ಹಿಂದೂಸಮಾಜಕ್ಕೆ ಇತರ ಮತಗಳ ಮಿಷನರಿಗಳು, ಅವರ ಪ್ರಚಾರಗಳು ಇವುಗಳಿಂದಾಗಿ ಸಾಕಷ್ಟು ಧಾರ್ಮಿಕ ಹಾಗೂ ಸಾಮಾಜಿಕವಾದ ತೊಂದರೆಗಳು ಉಂಟಾಗುತ್ತಿವೆ ಎಂದಮಾತ್ರಕ್ಕೆ ಹಿಂದೂಗಳು ಅಧೀರರಾಗಬೇಕಾಗಿಲ್ಲ.

ಹಿಂದುತ್ವ ಹಾಗೂ ಅದರ ಸ್ಫೂರ್ತಿ, ಚೇತನಗಳನ್ನು ನಡೆನುಡಿಗಳಲ್ಲಿ ಸರಿಯಾಗಿ ಪ್ರತಿಯೊಬ್ಬನೂ ಅನುಸರಿಸುವಂತೆ ಹಿಂದೂಸಮಾಜದಲ್ಲಿ ಆಯಾಯಾ ಪಂಥದವರು ಜಾಗರೂಕತೆ ವಹಿಸಿದಾಗ ಇತರ ಮತಗಳ ಪ್ರಚಾರವಾಗಲಿ, ತಮ್ಮ ಮತಕ್ಕೆ ಸೇರಬೇಕೆಂಬ ಪ್ರಚೋದನೆಯಾಗಲಿ ಹಿಂದೂ ಮತಕ್ಕೆ ಪ್ರತಿಕೂಲವಾಗಿ ಪರಿಣಮಿಸಲಾರದು. ಮಾತ್ರವಲ್ಲದೆ ದೇಶದಲ್ಲಿ ಮತೀಯವಾದ ದ್ವೇಷ, ಸಂಘರ್ಷಣೆಗಳಿಗೆ ಅವಕಾಶವೂ ಉಂಟಾಗಲಾರದು.

ಹಿಂದೂ ಸೇವಾಸಂಸ್ಥೆಗಳು, ಧರ್ಮಪೀಠಗಳು, ದೇವಾಲಯಗಳು ಇವುಗಳು ಯಾವ ಸದುದ್ದೇಶದಿಂದ ಸಂಸ್ಥಾಪಿಸಲ್ಪಟ್ಟಿವೆಯೋ ಅವುಗಳ ಸುಗಮವಾದ ಪಾಲನೆ ಇಂದು ಕಾರ್ಯಾಚರಣೆಯಲ್ಲಿ ಇಂದಿನ ಪರಿಸ್ಥಿತಿಯ ಅಗತ್ಯಕ್ಕೆ ಸರಿಯಾಗಿ ನೆರವೇರುತ್ತಿಲ್ಲ ಎನ್ನುವುದು ಸರ್ವವಿದಿತವಾದ ಸಂಗತಿಯಾಗಿದೆ. ಹಿಂದೂಸಮಾಜದ ಸರ್ವಾಂಗೀಣ ಬಲ ಹಾಗು ಬೆಳವಣಿಗೆ ಆಗಬೇಕಾದರೆ ಈ ಕ್ಷೇತ್ರದಲ್ಲಿ ಹೆಚ್ಚುಹೆಚ್ಚು ಕ್ರಿಯಾಶುದ್ಧಿ, ಕಾರ್ಯದಕ್ಷತೆ, ಸತ್ಯಪೂರ್ಣವೂ ಸದಾಚಾರಯುಕ್ತವೂ ಆದ ಸಹಾನುಭೂತಿ, ಸಹಕಾರಗಳು ನೆಲೆಗೊಂಡು ಅನುಸಾರವಾಗಿ ಹಿಂದೂಧರ್ಮದ ರಕ್ಷಣೆ ಮತ್ತು ಪ್ರಸಾರದ ಕೆಲಸಕಾರ್ಯಗಳು ನಿರ್ವಹಿಸಲ್ಪಡಬೇಕು.

ಸಂಸ್ಕೃತಭಾಷೆಯು ಸನಾತನಧರ್ಮದ ಬೊಕ್ಕಸದ ಬೀಗದಕೈ ಎಂದರೆ ಅತಿಶಯೋಕ್ತಿಯಾಗಲಾರದು. ಸಂಸ್ಕೃತಭಾಷೆಯಿಂದಾಗಿ ದೇಶದಲ್ಲಿ ಆಧ್ಯಾತ್ಮಿಕವಾದ, ಸಾಂಸ್ಕೃತಿಕವಾದ ಐಕಮತ್ಯವು ನೆಲೆಗೊಳ್ಳಲು ಸಾಧ್ಯವಾಗಿರುತ್ತದೆ. ಇಂದು ಹಿಂದೂ ಸಮಾಜದಲ್ಲಿ ಕಂಡುಬರುವ ಅನೈಕ್ಯ-ಅಸಹಕಾರ ಭಾವನೆಗಳಿಗೆ ಹಿಂದೂಗಳಲ್ಲಿ ಸಂಸ್ಕೃತಭಾಷೆಯ ಅರಿವು, ಮಮತೆಗಳು ಕಡಿಮೆಯಾಗಿರುವುದೂ ಕೂಡ ಪ್ರಬಲವಾದ ಕಾರಣಗಳಲ್ಲಿ ಒಂದು ಎಂದರೆ ಸತ್ಯಕ್ಕೆ ದೂರವಾದ ಮಾತಾಗಲಾರದು. ಆದುದರಿಂದ ಹಿಂದೂಸಮಾಜದ ಹಿತಕ್ಕಾಗಿ, ಅದರ ಭದ್ರತೆಗಾಗಿ, ಹಿಂದೂಧರ್ಮದ ಸರಿಯಾದ ತಿಳುವಳಿಕೆಗಾಗಿ ಸಂಸ್ಕೃತಭಾಷೆಯೂ, ಶಿಕ್ಷಣ, ಪ್ರಚಾರಗಳಿಗಾಗಿ ಯುಕ್ತವಾದ ರೀತಿಯ ಕಾರ್ಯಕ್ರಮವೂ ಕೈಗೊಳ್ಳಬೇಕಾಗಿರು

ವುದು ಇಂದಿನ ಪರಿಸ್ಥಿತಿಯು ಕರೆಯಾಗಿರುತ್ತದೆ. ಅದರಂತೆಯೇ ಮತ್ತೆ ಹಿಂದೂ ಸಮಾಜದಲ್ಲಿ ವೇದೋಪನಿಷತ್ತುಗಳಲ್ಲಿ ಪ್ರತಿಪಾದ್ಯವಾಗಿರುವ ಸನಾತನ ಸತ್ಯವಿಚಾರಗಳ ಚೇತನವು ಜನರ ನರನಾಡಿಗಳಲ್ಲಿ ತುಂಬಿ ಹರಿಯುವಂತೆ ಧಾರ್ಮಿಕ ಹಾಗೂ ಸಾಂಸ್ಕೃತಿಕ ರಂಗಗಳಲ್ಲಿ ಕಾರ್ಯಕ್ರಮ ಕೈಗೊಳ್ಳುವಂತಾಗಬೇಕು. ಈ ಸುಧಾರಣೆಗಳೆಲ್ಲ ವ್ಯಕ್ತಿಯಿಂದಲೇ ಆರಂಭವಾಗಿ ಸಮಾಜರಂಗದಲ್ಲಿ ಬಲವಾಗಿ ಅದು ರಾಷ್ಟ್ರೀಯ ಮಟ್ಟದಲ್ಲಿ ಪ್ರಭಾವಯುತವಾಗಿ ನೆಲೆನಿಂತು ಫಲಕಾರಿಯಾಗುವಂತೆ ಹಿಂದೂ ಸಮಾಜದವರೆಲ್ಲರೂ ತಮ್ಮ ತಮ್ಮ ಸ್ಥಾನ, ಸ್ಥಿತಿಗತಿಗಳಿಗ ಅನುಸರಿಸಿ ದುಡಿಯಬೇಕಾದುದು ಇಂದಿನ ಅತಿ ಅಗತ್ಯದ ಆವಶ್ಯಕತೆಯಾಗಿರುತ್ತದೆ. ಆದುದರಿಂದ ಮೂಲವಾಗಿ ಈ ಕೆಲಸದ ಜವಾಬ್ದಾರಿ ಇಂದು ವೈಯಕ್ತಿಕವಾಗಿ ಒಬ್ಬ ಹಿಂದೂವಿನ ಮೇಲೆ, ಒಂದು ಕುಟುಂಬದ ಮೇಲೆ ನಿಂತಿರುವುದು ಎಷ್ಟು ಸತ್ಯವೋ ಹಾಗೆಯೇ ಸಾಮೂಹಿಕವಾಗಿ ಧರ್ಮಪೀಠಗಳು ಹಾಗೂ ಸಂಘ-ಸಂಸ್ಥೆಗಳ ಮೇಲೆ ಸಹ ನಿಂತಿರುತ್ತದೆ ಎನ್ನುವುದೂ ಅಷ್ಟೇ ಸತ್ಯವಾಗಿರುತ್ತದೆ.

ಇಂದಿನ ಕಿರಿಯರು ನಾಳಿನ ಹಿರಿಯರಾಗಿ ಅವರೇ ದೇಶದ ಆಗುಹೋಗುಗಳನ್ನು ನಿಯಂತ್ರಿಸುವವರೂ ರಕ್ಷಕರೂ ಸಂಸ್ಕೃತಿ-ಧರ್ಮಗಳ ಪೋಷಕರೂ ಆಗುತ್ತಾರೆ— ಎನ್ನುವುದು ಸರ್ವಸಮ್ಮತವಾದ ವಿಚಾರವಾಗಿದೆ. ಹಾಗಾಗಿ ಶಿಕ್ಷಣಕ್ಷೇತ್ರದಲ್ಲಿ, ಅನೇಕದಲ್ಲಿ ಏಕವನ್ನು ಕಾಣುವ ಹಿತಮಿತವಾದ, ಸ್ನೇಹಸಹಕಾರಗಳನ್ನು ವರ್ಧಿಸುವಂತಹ ಮತ ಧರ್ಮಕ್ಕೆ ಸಂಬಂಧಿಸಿದ ವಿಚಾರದ ಬೋಧನೆಯನ್ನು ಕ್ರಮವಾಗಿ ನೀಡಲ್ಪಡಬೇಕಾಗಿರುವುದು ಬಹಳ ಅಗತ್ಯವಾಗಿರುತ್ತದೆ. ಮನುಷ್ಯನ ನೈತಿಕ ಬೆಳವಣಿಗೆ ಮತ್ತು ಬಲಗಳಿಂದಾಗಿ ಅವನವನ ಜೀವನದ ಸ್ಥಿತಿಗತಿಗಳು ಹಿತ ಹಾಗೂ ಅಹಿತವಾಗಿ ರೂಪುಗೊಂಡು ಆಯಾಯಾ ಪರಿಣಾಮವನ್ನು ಬೀರುತ್ತವೆ. ನೀತಿಯ ಬೆಳವಣಿಗೆಗೆ ಮತಧರ್ಮವು ಸಹಕಾರಿ, ಮತಧರ್ಮವು ವ್ಯಕ್ತಿ ಹಾಗೂ ರಾಷ್ಟ್ರೀಯ ಜೀವನದ ಅಭಿವೃದ್ಧಿಗೆ ಕಾರಣವಾಗುತ್ತದೆ. ಮಾತ್ರವಲ್ಲದೆ, ಭದ್ರತೆಯ ಬಲವೂ ಆಗಿರುತ್ತದೆ ಎಂಬುದು ಇಲ್ಲಿ ಸ್ಮರಣೀಯವಾದ ಅಂಶವಾಗಿರುತ್ತದೆ.

ವಿಜ್ಞಾನಯುಗದಲ್ಲಿ ಬಾಳುತ್ತಿರುವ ನಾವು ಇಂದು ಜಗತ್ತಿನ ಇತರ ರಾಷ್ಟ್ರಗಳಿಂದ ಬೇರೆಯಾಗಿಯೇ ಉಳಿಯಲಾಗಲಿ, ಬಾಳಲಾಗಲಿ ಸಾಧ್ಯವಿಲ್ಲ. ಹಾಗೆಯೇ ವಿಜ್ಞಾನದ ಅನೇಕ ವಿಧದ ಹೊಸ ಹೊಸ ಸಂಶೋಧನೆಗಳು, ಅವುಗಳ ಉಪಯೋಗಗಳು ನಮ್ಮ ಬಾಳಿನಲ್ಲಿ ಸೇರಿಕೊಳ್ಳದೆ ಗತ್ಯಂತರವಿಲ್ಲ. ನವನಾಗರಿಕತೆಯ ಜೀವನಪರಿಸ್ಥಿತಿಗಳಿಂದಾಗಿ ವರ್ತಮಾನ ಕಾಲದಲ್ಲಿ ವರ್ಣಾಶ್ರಮಧರ್ಮ, ವರ್ಣವಿಭಾಗಗಳು ಇತ್ಯಾದಿ ಹಿಂದೂಧರ್ಮದ ವಿಚಾರಗಳನ್ನೆಲ್ಲ ಕಟ್ಟುನಿಟ್ಟಾಗಿ ಪಾಲಿಸಲು ಸಾಧ್ಯವಾಗದೇ ಹೋಗುವ ಪರಿಸ್ಥಿತಿ ದಿನೇ ದಿನೇ ಬಲವಾಗತೊಡಗಿರುತ್ತದೆ. ಹೊರದೇಶದ ಸಂಸ್ಕೃತಿ-ವಿಚಾರಧಾರೆ ಇವುಗಳು ಹಿಂದೂದೇಶದ ಹಾಗೂ ಹಿಂದೂಸಮಾಜದ ಮೇಲೆ ಸಾಕಷ್ಟು ಪ್ರಭಾವವನ್ನು ಬೀರುತ್ತಿವೆ. ಹಾಗಾಗಿ ಹಿಂದೂಸಮಾಜದವರು ಅವುಗಳನ್ನು ಕಡೆಗಣಿಸದೆ, ಬದಲು ಅವುಗಳಲ್ಲಿರುವ ಒಳಿತನ್ನು ಗ್ರಹಿಸಿ, ನಮಗೆಷ್ಟು ಹಿತಕಾರಿ ಮತ್ತು ಅಗತ್ಯ ಎಂಬುದನ್ನು ವಿವೇಕದಿಂದ ನಿಶ್ಚಯಿಸಿ, ಅನುಸಾರವಾಗಿ ಅವುಗಳನ್ನು ನಮ್ಮ ಬಾಳಿನಲ್ಲಿ ಅಳವಡಿಸಿಕೊಂಡು ಹಿಂದೂಗಳಾಗಿಯೇ ಬದುಕಬೇಕಾಗಿರುವುದು ಪ್ರಸ್ತುತದ ಕರ್ತವ್ಯವಾಗಿರುತ್ತದೆ. ಈ ಸಂದರ್ಭ

ದಲ್ಲಿ ಹಿಂದೂಧರ್ಮದ ಮೂಲಭೂತವಾದ ತತ್ತ್ವಶಕ್ತಿಗಳಾದ ಸತ್ಯ, ಅಹಿಂಸೆ, ತ್ಯಾಗ, ಸರ್ವಧರ್ಮಸಮನ್ವಯಭಾವನೆ, ಧೈರ್ಯ, ಶ್ರದ್ಧೆ, ಸೇವೆ, ಶಾಂತಿ ಇವುಗಳು ಈ ಹೊಸ ವಾತಾವರಣ, ಪರಿಸ್ಥಿತಿಗಳಲ್ಲಿಯೂ ಕೂಡ ಹಿಂದೂವಿನ ಜೀವನಕ್ಕೆ ಅಗತ್ಯ ಮಾತ್ರವಲ್ಲದೆ ಜೀವನವನ್ನು ಸಬಲ, ಸಫಲ ಹಾಗೂ ಸುಗಮವಾಗಿಸಲು ಸಹಕಾರಿ ಯಾಗುವ ಸಾಧನವಿಶೇಷಗಳು ಎಂಬುದನ್ನು ಪ್ರತಿಯೊಬ್ಬ ಹಿಂದುವೂ ಗ್ರಹಿಸಬೇಕಾಗಿದೆ. ಅಷ್ಟುಮಾತ್ರವಲ್ಲದೆ ಜೀವನದಲ್ಲಿ ಇವುಗಳನ್ನು ಅನುಷ್ಠಾನಕ್ಕೆ ತರಬೇಕಾಗಿದೆ. ಅನುಸಾರ ವಾಗಿ ಬಾಹ್ಯವಾದ ಸಾಮಾಜಿಕ ಆಚರಣೆಗಳ ಬದಲಾವಣೆಗಳು ಏನೇ ಇದ್ದರೂ ಆಂತರಿಕ ವಾದ ಜೀವನಕ್ಕೆ ಮೇಲೆ ಹೇಳಿದ ಎಂಟು ಗುಣಾಂಶಗಳನ್ನು ಉಪಯೋಗಿಸಿಕೊಂಡು ಜೀವನವನ್ನು ಯಶಸ್ವಿಯಾಗಿ, ಪರಿಣಾಮಕಾರಿಯಾಗಿ ಬಾಳಲು ಸಾಧ್ಯ. ಹಾಗೆ ಬಾಳ ಬೇಕಾದುದು ಅಗತ್ಯ ಮಾತ್ರವಲ್ಲದೆ ಪ್ರಸ್ತುತದ ರಾಷ್ಟ್ರೀಯವಾದ ಪರಿಸ್ಥಿತಿಯ ಕರೆಯು ಸಹ ಅದೇ ಆಗಿರುತ್ತದೆ. ಈ ಮೇಲ್ಕಾಣಿಸಿದ ಎಂಟು ಅಂಶಗಳನ್ನು ಜೀವನದಲ್ಲಿ ಅನುಷ್ಠಾನಕ್ಕೆ ತಂದರೆ ಅದು ಪ್ರಾಯೋಗಿಕ ಹಿಂದೂಧರ್ಮವಾಗಿ ಆಗ ಹಿಂದೂವಿನ ಜೀವನ ತನ್ನ ಹಿತ, ತನ್ಮೂಲಕ ಲೋಕದ ಹಿತ ಎಂಬ ವಿಶಾಲವಾದ ತತ್ತ್ವದ ಜೀವಂತ ಅನುಷ್ಠಾನವಾಗುತ್ತದೆ.

ಭಾರತ ದೇಶವು ಧಾರ್ಮಿಕವಾದ ಪವಿತ್ರಭೂಮಿಯಾಗಿರುವುದರಿಂದ ಇಲ್ಲಿಯ ವಿಶಿಷ್ಟ ಆಗುಹೋಗುಗಳು, ಜೀವನಸ್ಥಿತಿಗತಿಗಳು ಎಲ್ಲವೂ ಧರ್ಮದ ಆಧಾರದಲ್ಲಿಯೇ ನಡೆಯ ಬೇಕಾಗಿದೆ. ಈ ಕುರಿತಾಗಿ ಸ್ವಾಮಿ ವಿವೇಕಾನಂದರು ಹೇಳಿದ ಮಾತುಗಳು ನಮಗೆ ಇಂದೂ ಕೂಡ ಮಾರ್ಗದರ್ಶಕಗಳಾಗಿರುತ್ತವೆ :[1]

> "ತ್ಯಾಗ ಮತ್ತು ಸೇವೆಯೇ ಭಾರತದ ಆದರ್ಶ . ಧರ್ಮವೊಂದೇ ಭಾರತದ ಜೀವನಸತ್ತ್ವ. ಅದಿಲ್ಲದೆ ಬದಲಿಗೆ ಎಷ್ಟೇ ರಾಜಕೀಯವಿರಲಿ, ಸಾಮಾಜಿಕ ಸುಧಾರಣೆಗಳಿರಲಿ, ಕುಬೇರನ ಸಂಪತ್ತನ್ನೇ ಭಾರತದ ಪ್ರತಿಯೊಂದು ಮಗುವಿನ ತಲೆಯ ಮೇಲೆ ಸುರಿದರೂ ಭಾರತವು ನಾಶಹೊಂದುವುದು ಖಂಡಿತ."

ಪ್ರತಿಯೊಂದು ರಾಷ್ಟ್ರಕ್ಕೂ ತನ್ನದೇ ಆದ ಜೀವನ ಗುರಿ-ಉದ್ದೇಶಗಳು ಇರುವಂತೆ ಭಾರತಕ್ಕೂ ಇದ್ದು ಅದು ಜಗತ್ತಿನಲ್ಲಿ ಆಧ್ಯಾತ್ಮಿಕವಾದ ಜಾಗ್ರತಿಯನ್ನು ಉಂಟು ಮಾಡುವುದೇ ಆಗಿರುತ್ತದೆ. ಎಂದರೆ ಪ್ರಪಂಚದ ರಾಷ್ಟ್ರಗಳಲ್ಲಿ ಇತರ ಎಲ್ಲಾ ರಾಷ್ಟ್ರ ಗಳೂ ಇಂದು ಯಾವ ವೈಜ್ಞಾನಿಕ ಮುನ್ನಡೆಗಾಗಿ ತೀವ್ರತರವಾಗಿ ಸ್ಪರ್ಧಿಸುತ್ತಿವೆಯೋ ಆ ಸ್ಪರ್ಧೆಯ ಫಲವಾದ ವೈಜ್ಞಾನಿಕ ಮುನ್ನಡೆ, ಸುಖಸೌಕರ್ಯಗಳೆಲ್ಲವನ್ನೂ ಧರ್ಮದ ತಳಹದಿಯ ಮೇಲೆ ನಿಲ್ಲಿಸಿ, ಆಧ್ಯಾತ್ಮಿಕ ಗುರಿಗೆ ಅಧೀನವೆಂದಾಗಿ ಮಾಡಿ, ಅಧ್ಯಾತ್ಮ ಸಾಧನೆಯ ಪರಮಗುರಿಯ ಒಳಗೇ ಮಿತಿಗೊಳಿಸಿ, ಜೀವನವನ್ನು ಆತ್ಮದ ಹಿತ ಮತ್ತು ಜಗತ್ತಿನ ಕಲ್ಯಾಣ ಎಂಬ ಸೂತ್ರಕ್ಕೆ ಅನುಸಾರವಾಗಿ ಸಾಗಿಸುವುದೇ ಭಾರತದ ಅಧ್ಯಾತ್ಮ

1. "Religion alone is the life of India. and when that goes India will die, in spite of politics, in spite of social reforms. in spite of Kubera's wealth poured upon the head of every one of her children."

—*Complete Works of S. V*, Vol. III

ಜೀವನ-ಜಾಗೃತಿಗಳ ತಾತ್ಪರ್ಯವಾಗಿದೆ. ಈ ಸತ್ಯಾಂಶವು ವೈದಿಕ ಋಷಿಯಿಂದ ಆಧುನಿಕ ಕಾಲದಲ್ಲಿ ಮಹಾತ್ಮಾ ಗಾಂಧೀಜಿಯವರೆಗೆ ಈ ದೇಶದಲ್ಲಿ ಜನ್ಮತಳೆದ, ವಿಶ್ವಬಂಧುಗಳೂ ಮಹಾತ್ಮರೂ ಆಗಿ ಬಾಳಿ ಬೆಳಗಿದ, ಅದೆಷ್ಟೋ ಪುಣ್ಯಪುರುಷರೂ ಅವತಾರಪುರುಷರುಗಳ ಮೂಲಕ ಆಗಿಂದಾಗ್ಗೆ ಸ್ಪಷ್ಟವಾಗಿ ಪ್ರಕಟಗೊಂಡಿರುತ್ತದೆ. ಸ್ವಾಮಿ ವಿವೇಕಾನಂದರು ಭಾರತದ ಜೀವನದ ಗುರಿ ಅಧ್ಯಾತ್ಮ ಎಂದು ಹೀಗೆ ಹೇಳಿರುತ್ತಾರೆ :[1]

> "ನಿರ್ಜೀವರಾಗಿ ನಶಿಸಿಹೋಗುತ್ತಿರುವ ಮಾನವ ಜನಾಂಗಕ್ಕೆ ಪುನಃ ಇಲ್ಲಿಂದಲೇ (ಭಾರತದಿಂದಲೇ) ಆಧ್ಯಾತ್ಮಿಕತೆ ಮತ್ತು ತತ್ತ್ವಶಾಸ್ತ್ರಗಳ ವಿಚಾರಗಳ ಪ್ರವಾಹದ ತೆರೆಗಳೆದ್ದು ಹರಿದು ಶಕ್ತಿ-ಉತ್ಸಾಹಗಳನ್ನು ತುಂಬಬೇಕಾಗಿದೆ."

ಇದೇ ಅಭಿಪ್ರಾಯವನ್ನು ಮಹಾತ್ಮಾ ಗಾಂಧೀಜಿಯವರು ಹೀಗೆ ಈ ಮಾತುಗಳಲ್ಲಿ ವ್ಯಕ್ತಪಡಿಸಿರುತ್ತಾರೆ :[2]

> "ಬೇರೆ ರಾಷ್ಟ್ರಗಳಿಗಿಂತ ಹಿಂದೂಸ್ಥಾನದ ಜೀವನೋದ್ದೇಶ ಇಲ್ಲವೇ ಅವತಾರಕಾರ್ಯ ಬೇರೆಯೇ ಎಂದು ನನಗನಿಸುವುದು. ಜಗತ್ತಿನ ಧರ್ಮಕ್ಷೇತ್ರದಲ್ಲಿ ಗುರುಸ್ಥಾನದಲ್ಲಿರಲು ಹಿಂದೂಸ್ಥಾನವು ವಿಶೇಷ ಯೋಗ್ಯವಾಗಿರುತ್ತದೆ. ಭಾರತವು ಜಗತ್ತಿನ ನೈತಿಕ ಮುಖಂಡತ್ವವನ್ನು ವಹಿಸಿಕೊಳ್ಳಬೇಕು. ತನ್ಮೂಲಕ, ಗೋಳು ದಬ್ಬಾಳಿಕೆಗೆ ಒಳಗಾದವರಿಗೆ, ಸ್ವಪ್ರಯೋಜನಕ್ಕಾಗಿ ಇತರರಿಂದ ಉಪಯೋಗಿಸಿಕೊಂಡಂಥವರಾಗಿ ತೊಂದರೆಗೆ ಈಡಾದವರಿಗೆ ಭರವಸೆ ಮತ್ತು ಬಿಡುಗಡೆಯ ಸಂದೇಶವನ್ನು ಭಾರತವು ನೀಡುವಂತಾಗಬೇಕು."

ಇಂದೂ ಕೂಡ ಜಗತ್ತಿನ ವಿವಿಧ ಭಾಗಗಳಿಂದ ಜನರು ಭಾರತದ ಕಡೆಗೇ ಧರ್ಮದ ಬೆಳಕಿಗಾಗಿ, ಅಧ್ಯಾತ್ಮಸ್ಫೂರ್ತಿ-ಮಾರ್ಗದರ್ಶನಗಳಿಗಾಗಿ ನೋಡುತ್ತಿದ್ದಾರೆ. ಮಾನವ ಜನಾಂಗವನ್ನು ನಾಮಾವಶೇಷ ಮಾಡಬಲ್ಲ ವೈಜ್ಞಾನಿಕವಾದ ರಾಕ್ಷಸೀ ಅಸ್ತ್ರಗಳಾದ ಆಟಂ-ಹೈಡ್ರೋಜನ್ ಬಾಂಬುಗಳು, ಭಯಂಕರವಾದ ಯುದ್ಧಗಳು, ಇವುಗಳಿಂದೆಲ್ಲ ಜಗತ್ತನ್ನು ಪಾರುಮಾಡಲು ಸತ್ಯ, ಶಾಂತಿ ಮತ್ತು ಅಹಿಂಸೆಗಳಿಂದ ಮಾತ್ರ ಸಾಧ್ಯ. ಈ ದಿವ್ಯವಾದ ಬೆಳಕು, ಚೇತನಗಳನ್ನು ಮಾನವಕುಲದ ಜೀವನಾಡಿಗಳಲ್ಲಿ ಯಶಸ್ವಿಯಾಗಿ ತುಂಬಲು ಹಿಂದೂಸ್ಥಾನದ ಸನಾತನಧರ್ಮವು ಸಮರ್ಥವಾಗಿದೆ ಎನ್ನುವುದು ಸತ್ಯಕ್ಕೆ ದೂರವಾದ ಮಾತಲ್ಲ.

ಭಾರತವು ಜಗತ್ತಿನ ಪ್ರಗತಿಪರ ರಾಷ್ಟ್ರಗಳ ಮಧ್ಯೆ ತನ್ನ ಶಕ್ತಿಗಳನ್ನು ಕಳೆದುಕೊಂಡು

---

1. " ..In this land are, still religion and spirituality the functions of which will have to overflow and flood the world, to briug in new life and new vitality to the western and other nations, which are now almost borne down, half killed and degraded by political ambitions and social scheming."
—*Complete Works of S. V.*, Vol. III

2. "I feel that India's mission is different from that of others. India is fitted for the religious supremacy of the World... India should take up the moral leadership of the world, bringing a message of hope and deliverance to the oppressed and exploited ones."
—*India's Mission (Bhavan's Journal*, Vol, XIV, No, 1)

ನಶಿಸಿಹೋದೀತೇ ಎಂಬ ಶಂಕೆಗೆ ಸ್ವಾಮಿ ವಿವೇಕಾನಂದರು ನೀಡಿದ ಉತ್ತರ ಇಂದಿಗೂ ಹೊಸದಾಗಿದ್ದು ಸ್ಫೂರ್ತಿಯುತವಾಗಿದೆ :[1]

> "ಭಾರತ ರಾಷ್ಟ್ರವನ್ನು ನಿರ್ನಾಮ ಮಾಡಲು ಸಾಧ್ಯವಿಲ್ಲ ಅದು ಅಮರವಾಗಿ ನಿಂತಿದ್ದು ಎಂದಿನತನಕ ಅವರ ಜನತೆ ಆಧ್ಯಾತ್ಮವನ್ನು ಬಿಡುವುದಿಲ್ಲವೋ ಅಂದಿನತನಕ ಅಮರ ವಾಗಿಯೇ ಉಳಿಯುತ್ತದೆ."

ಮಾನವಕುಲದ ಕಲ್ಯಾಣಕ್ಕಾಗಿ ಹಿಂದೂಧರ್ಮವು ಏನೇನು ನೀಡಬಲ್ಲುದು ಎಂಬು ದನ್ನು ವಿವರವಾಗಿ ಅಮೆರಿಕಾದ ವಿಲ್ ಡ್ಯೂರಾಂಟರು ತಮ್ಮ ಪ್ರಸಿದ್ಧ ಗ್ರಂಥವಾದ *Story of Civilization* ಎಂಬುದರಲ್ಲಿ ಬರೆದಿರುವ ಮಾತುಗಳು ಇಲ್ಲಿ ಸ್ಮರಣೀಯ ವಾಗಿವೆ :[2]

> "ಭಾರತವು ಹಿಮಾಲಯದ ಮಹತ್ತಾದ ಗಡಿಯ ಆಚೆಗೆ ವಿಶೇಷವಾದ ಕೊಡುಗೆಗಳಾದ ವ್ಯಾಕರಣ ಮತ್ತು ತರ್ಕ, ತತ್ತ್ವಶಾಸ್ತ್ರ ಮತ್ತು ದಂತಕಥೆಗಳು, ಸಮ್ಮೋಹಿನೀವಿದ್ಯೆ ಮತ್ತು ಚದುರಂಗದಾಟ, ಮತ್ತು ಎಲ್ಲದಕ್ಕಿಂತ ಮೇಲಾಗಿ ನಮ್ಮ ಸಂಖ್ಯಾಶಾಸ್ತ್ರ ಮತ್ತು ದಶಮಾಂಶ ಪದ್ಧತಿಗಳನ್ನು ನಮಗೆ ಕಳುಹಿಸಿಕೊಟ್ಟಿರುತ್ತದೆ. ಆದರೆ ಇವುಗಳೆಲ್ಲ ಅವಳ ಚೇತನದ ಸಾರ ಸರ್ವಸ್ವವಲ್ಲ. ನಾವು ಅವಳಿಂದ ಭವಿಷ್ಯದಲ್ಲಿ ಏನನ್ನು ಕಲಿಯಬಲ್ಲೆವೋ ಎಂಬುದರ ಮುಂದೆ ಹೋಲಿಸಿದರೆ ಇವುಗಳೆಲ್ಲ ಕ್ಷುಲ್ಲಕ ಎಂದು ತೋರುತ್ತವೆ. ಯುದ್ಧದ ಜಯ, ಅಹಂಕಾರ ಮತ್ತು ಸುಲಿಗೆಮಾಡುವಿಕೆ ಇವುಗಳಿಗೆ ಪ್ರತಿಯಾಗಿ ಭಾರತವು ನಮಗೆ ಸಹನೆ ಮತ್ತು ಪ್ರಬುದ್ಧ ಮನಸ್ಸಿನ ಸೌಮ್ಯ, ಆತ್ಮಜ್ಞಾನದ ಪ್ರಶಾಂತತೆ ಮತ್ತು ಜೀವಂತವಾದ ಜೀವಿಗಳಿಗೆಲ್ಲಾ ಸಂಯೋಜಿಸುವ, ಸಮಾಧಾನವನ್ನುಂಟುಮಾಡುವ ಪ್ರೀತಿ—ಇವನ್ನು ಕಲಿಸಿಕೊಡುತ್ತದೆ."

**ಉಪಸಂಹಾರ**

ಹೊರದೇಶಗಳಾದ ಅಮೆರಿಕಾ, ಇಂಗ್ಲೆಂಡ್, ಯೂರೋಪು ಖಂಡದ ಇತರ ಹಲವು ಭಾಗಗಳಲ್ಲಿ ಹಿಂದೂಧರ್ಮ-ಹಿಂದೂಸಂಸ್ಕೃತಿಗಳ ವಿಚಾರದಲ್ಲಿ ಜನರಲ್ಲಿ ಇಂದು ಆಸಕ್ತಿ, ಒಲವುಗಳು ಹೆಚ್ಚಾಗುತ್ತಿವೆ. ಮಾತ್ರವಲ್ಲದೆ ಅಲ್ಲಿನ ಜನರು ತಮ್ಮ ಜೀವನಕ್ಕೆ ಹಿಂದೂ ಧರ್ಮದಿಂದ ಸಾಕಷ್ಟು ಸ್ಫೂರ್ತಿಯನ್ನು ಪಡೆಯುತ್ತಿದ್ದಾರೆ. ವೇದ, ಉಪನಿಷತ್ತು, ಭಗ ವದ್ಗೀತೆಗಳ ಅಧ್ಯಯನ, ತತ್ತ್ವಾನುಷ್ಠಾನ, ಹಿಂದೂಧರ್ಮದ ನಿಯಮಗಳಿಗೆ ಅನುಸಾರ

---

1. "The Indian nation cannot be killed. Deathless it stands and it will stand so long as that spirit shall remain as the background, so long as her people do not give up their spirituality."

—*Swami Vivekananda on India and Her Problems*, page 13

2. "It is true that even across the Himalayan barrier India has sent to us such questionable gifts as grammar and logic, philosophy and fables, hypnotism and chess and above all our numerals and our decimal system. But these are not the essence of her spirit They are trifles compared to what we may learn from her in the future...Perhaps in return for conquest, arrogance and spoilation, India will teach us the tolerance and gentleness of the mature mind, the calm of the understanding spirit and, a unifying love for all living things." —*Story of Civilization*

ವಾಗಿ ಜೀವನದಲ್ಲಿ ಬ್ರಹ್ಮಚರ್ಯ, ಗೃಹಸ್ಥ, ಸಂನ್ಯಾಸ ಆಶ್ರಮಗಳ ಸ್ವೀಕಾರ ಇವುಗಳೆಲ್ಲ ವಿದೇಶಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಾರ್ಯರೂಪಕ್ಕೆ ಬರತೊಡಗಿವೆ. ಈ ಸಂದರ್ಭ ದಲ್ಲಿ ಧರ್ಮಭೂಮಿಯಾದ ಹಿಂದೂಸ್ಥಾನವು ಇತರರಿಗೆ ಬೆಳಕು, ಮಾರ್ಗದರ್ಶನ ಗಳನ್ನು ತನ್ನ ಆದರ್ಶ-ಚರಿತನಗಳಿಂದ ನೀಡಬೇಕಾಗಿರುವುದು ಅಗತ್ಯ ಹಾಗೂ ಅನಿವಾರ್ಯವಾಗಿದೆ. ಆದುದರಿಂದ ಅದಕ್ಕೆ ಬೇಕಾದ ಸರ್ವಾಂಗೀಣ ಯೋಗ್ಯತೆ, ಶಕ್ತಿ ಗಳನ್ನು ಹಿಂದೂಸಮಾಜವು ತುಂಬಿಕೊಂಡು ಜೀವನದಲ್ಲಿ ಅವನ್ನು ಅಳವಡಿಸಿಕೊಳ್ಳ ಬೇಕಾಗಿದೆ. ನಾವು ಇತರರಿಗೆ ತಿಳಿವಳಿಕೆಯನ್ನು ನೀಡುವುದಕ್ಕೆ ಬೇಕಾದ ವಿಚಾರಜ್ಞಾನ ವನ್ನು ಪಡೆದಿದ್ದೇವೆ ಎಂದಮಾತ್ರಕ್ಕೆ ನಮಗೆ ವಿಶ್ವರಾಷ್ಟ್ರಗಳ ಮಧ್ಯೆ ಗೌರವವಾಗಲಿ, ಸ್ಥಾನವಾಗಲಿ ದೊರೆಯದು. ವಿಚಾರದ ಬೆಳಕನ್ನು ನೀಡಬಲ್ಲ ಸಾಮರ್ಥ್ಯ, ಅನುಭವ, ಯೋಗ್ಯತೆಗಳೂ ನಮ್ಮಲ್ಲಿರಬೇಕು. ಜೊತೆಗೆ ನಮ್ಮ ಸಾಮಾಜಿಕ, ಆರ್ಥಿಕ ಪರಿಸ್ಥಿತಿಗಳು ಶುದ್ಧವೂ ಭದ್ರವೂ ಆಗಿರಬೇಕು. ನಾವು ಇತರರಿಗೆ ಕೈಚಾಚಿ ಅದು ಕೊಡಿ, ಇದು ಕೊಡಿ ಎಂದು ಕೇಳುವುದೇ ಆಗಿಬಿಟ್ಟರೆ ಅವರ ದೃಷ್ಟಿಯಲ್ಲಿ ನಾವು ತೀರಾ ಕಡಿಮೆ ಯೋಗ್ಯತೆ ಯವರು ಆಗುತ್ತೇವೆ. ಅಷ್ಟೇ ಅಲ್ಲದೆ ಸಮಾನತೆಯು ಅಳಿದು ಸ್ನೇಹ ವಿಶ್ವಾಸಗಳಾಗಲಿ, ಗೌರವ-ಗಂಭೀರ ಭಾವನೆಗಳಾಗಲಿ ಪರಸ್ಪರ ಬೆಳೆಯಲು ಸಾಧ್ಯವಿಲ್ಲ. ಹಾಗಾಗಿ ಹಿಂದೂ ಸಮಾಜವು ಸರ್ವಾಂಗೀಣ ಬಲಯುತವಾಗಿ ಬೆಳೆದುಬರಬೇಕಾಗಿರುವುದು ಮಾತ್ರವಲ್ಲದೆ ಸ್ವಾವಲಂಬನೆಯ ವಿಚಾರದಲ್ಲಿ ವಿಶೇಷವಾಗಿ ಅಭಿವೃದ್ಧಿಹೊಂದಿದ ಹಾಗೂ ಪುಷ್ಟಿವಂತ ಸಮಾಜ ಎಂದಾಗಬೇಕು. ಸ್ವಾವಲಂಬನೆ ಎಂದುಕೊಂಡು ನಾವು ಇತರರಿಂದ ಏನನ್ನೂ ಪಡೆದುಕೊಳ್ಳುವುದಿಲ್ಲ, ಇತರರೊಡನೆ ಏನನ್ನೂ ಕೇಳುವುದಿಲ್ಲ ಎಂದು ಇಂದಿನ ಪರಿಸ್ಥಿತಿ ಯಲ್ಲಿ ಇರಲು ಸಾಧ್ಯವಿಲ್ಲ. ಏಕೆಂದರೆ ನಾವು ಎಲ್ಲವನ್ನೂ ಬಲ್ಲ ಸರ್ವಜ್ಞರಲ್ಲ. ಹಾಗೆಯೇ ಸರ್ವಸಂಪತ್ತುಗಳನ್ನು, ಸೌಕರ್ಯಗಳನ್ನು ಪಡೆದವರೂ ಆಗಿರುವುದಿಲ್ಲ. ಭೌತಿಕಪ್ರಪಂಚದ ಅನೇಕ ಸುಖ-ಸಲಕರಣೆಗಳು, ವೈಜ್ಞಾನಿಕವಾದ ವಿವಿಧ ರೀತಿಯ ತಿಳಿವಳಿಕೆಗಳು ನಮಗೆ ಹೊರದೇಶದಿಂದ ಬರಬೇಕಾಗಿವೆ. ಉದಾಹರಣೆಗೆ ಹೇಳುವುದಾದರೆ ಇತ್ತೀಚೆಗಿನ ಕಾಲಾ ವಧಿಯಲ್ಲಿ ನೆಲಸಮವಾಗಿ ಇದೀಗ ಅಲ್ಪಾವಧಿಯಲ್ಲೇ ಅದ್ಭುತವಾದ ರೀತಿಯಲ್ಲಿ ಅಭಿ ವೃದ್ಧಿಹೊಂದಿ ಸಬಲ, ಸಮರ್ಥ ರಾಷ್ಟ್ರವಾಗಿ ಬೆಳೆದುನಿಂತಿರುವ ಜರ್ಮನಿ, ಜಪಾನು ಇತ್ಯಾದಿ ದೇಶಗಳಿಂದ ನಾವು ತಿಳಿದುಕೊಳ್ಳಬೇಕಾದ ತುಂಬಾ ವಿಚಾರಗಳಿವೆ. ಇತರರಿಂದ ನಾವು ವಿಚಾರಗಳನ್ನಾಗಲಿ, ವಸ್ತುಗಳನ್ನಾಗಲಿ ಪಡೆದರೆ ನಾವು ಅವರಿಗೂ ಒಂದಲ್ಲ ಒಂದು ರೀತಿಯಲ್ಲಿ ನಮ್ಮ ಕಡೆಯಿಂದಲೂ ವಿಚಾರ-ವಸ್ತುಗಳನ್ನು ನೀಡಲು ಸಮರ್ಥರಾಗಿರ ಬೇಕು. ಹಿಂದೂಧರ್ಮವು ಲೌಕಿಕ ಜೀವನವನ್ನು ಎಂದಿಗೂ ಕಡೆಗಣಿಸುವುದಿಲ್ಲ. ಅರ್ಥ, ಕಾಮಗಳು ಜೀವನದಲ್ಲಿ ಅನಿವಾರ್ಯ, ಅಗತ್ಯ ಎಂದು ಹಿಂದೂಧರ್ಮ ಹೇಳುತ್ತದೆ. ಆದರೆ ಅವುಗಳೆಲ್ಲ ಧರ್ಮದ ಆಧಾರದಲ್ಲಿಯೇ ಸಂಪಾದಿತವಾಗಿ, ಧರ್ಮಕ್ಕನುಸಾರ ವಾಗಿಯೇ ವಿನಿಯೋಗಿಸಲ್ಪಡುವಂತಾಗಿ ಜೀವನದ ಪರಮಗುರಿಯಾದ ಮೋಕ್ಷದ ಸಿದ್ಧಿಗೆ ಸಾಧಕವೂ ಪೂರಕವೂ ಆಗುವಂತಾಗಬೇಕು ಎಂಬುದೇ ಹಿಂದೂಧರ್ಮದ ಜೀವನದೃಷ್ಟಿ ಯಾಗಿದೆ. ವೈಜ್ಞಾನಿಕವಾದ ಮತ್ತು ತಾಂತ್ರಿಕವಾದ ಅನೇಕ ಸಂಶೋಧನೆ-ಸೌಲಭ್ಯಗಳಿಂದ ಕೂಡಿದ ನವನಾಗರಿಕತೆಯ ಕಾಲಭಾಗದಲ್ಲಿ ಹಿಂದೂಸ್ಥಾನವು ಅವುಗಳನ್ನು ತನ್ನ ಬಾಳಿನಲ್ಲಿ

ಇದೀಗ ಮೇಳವಿಸಿಕೊಳ್ಳಬಾರದು ಎಂದರೆ ಅತ್ಯಂತ ಅವಿವೇಕದ ಮಾತಾದೀತು.

ವಿಜ್ಞಾನದ ವಿಶೇಷವಾದ ಸಂಶೋಧನೆಗಳಿಂದ ಉತ್ಪನ್ನವಾದ ಹಲವಾರು ಮಾರಕ ಅಸ್ತ್ರಗಳು-ಸಮರಸಾಧನಗಳು ಇಂದು ಜಗತ್ತಿನಲ್ಲಿ ಜನಜೀವನವನ್ನು ನಿಮಿಷಮಾತ್ರದಲ್ಲಿ ನಿರ್ನಾಮ ಮಾಡಬಲ್ಲ ಸಾಧ್ಯತೆಯನ್ನು ಪಡೆದಿದೆ. ವಿಜ್ಞಾನದ ಶಕ್ತಿಯ ಉಪಯೋಗವು ಧರ್ಮದ ಆಧಾರದಲ್ಲಿ ನಡೆಯದೇ ಇದ್ದರೆ ಮನುಕುಲಕ್ಕೆ ವಿಜ್ಞಾನದಿಂದಾಗಿ ಮೃತ್ಯುವು ಒಂದಲ್ಲ ಒಂದು ದಿನ ನಿಶ್ಚಯವಾಗಿಯೂ ಬಂದೊದಗುತ್ತದೆ ಎಂಬುದರಲ್ಲಿ ಸಂದೇಹಕ್ಕೆ ಆಸ್ಪದವಿಲ್ಲ. ಹಿಂದೂಸ್ಥಾನವು ವಿಜ್ಞಾನವನ್ನು ಧರ್ಮದ ಆಧಾರದಲ್ಲಿ ಹೇಗೆ ಬಾಳಿನಲ್ಲಿ ಮೇಳವಿಸಿಕೊಂಡು ಜಗತ್ತಿನ ಹಿತಸಾಧಿಸುವ ತೆರದಲ್ಲಿ ವ್ಯಷ್ಟಿ ಮತ್ತು ಸಮಷ್ಟಿಜೀವನವನ್ನು ರೂಪಿಸಿಕೊಂಡು ನಡೆಸಬಹುದು ಎಂಬ ವಿಚಾರದಲ್ಲಿ ತನ್ನ ಹಿರಿಯ ಆದರ್ಶದಿಂದ ಜಗತ್ತಿನ ಇತರ ರಾಷ್ಟ್ರಗಳಿಗೆ ಬೆಳಕು ಮತ್ತು ಮಾರ್ಗದರ್ಶನಗಳನ್ನು ನೀಡಬೇಕಾಗಿದೆ. ಆದುದರಿಂದ ಹಿಂದೂಸಮಾಜ ಇದೀಗ ಪುನಃ ಜಾಗೃತವಾಗಬೇಕಾಗಿರುವುದಷ್ಟೇ ಅಲ್ಲದೆ ಹಿಂದೂಧರ್ಮದ ಸನಾತನವಾದ ತತ್ತ್ವಗಳನ್ನು ಪ್ರಾಯೋಗಿಕವಾಗಿ ತನ್ನ ಜೀವನದಲ್ಲಿ ಅಳವಡಿಸಿಕೊಂಡು ಬಾಳುತ್ತಾ ಸಬಲ, ಸದೃಢ, ಸಮರ್ಥವಾಗಿ ಬೆಳಗುವಂತಾಗಬೇಕು. ಭಾರತೀಯರಲ್ಲಿ ಬರೇ ಯೋಗಶಕ್ತಿ ವರ್ಧಿಸಿದರೆ ಮಾತ್ರ ಅದರಿಂದ ಪೂರ್ಣಸಾರ್ಥಕತೆ ದೊರೆಯಲಾರದು. ಹಾಗೆಯೇ ಬರೇ ಭೌತಿಕವಾದ ಸುಖಸಂಪತ್ತುಗಳು ತುಂಬಿಬಂದರೂ ಅದರಿಂದ ಸಂಪೂರ್ಣ ಸುಖಶಾಂತಿಗಳು ದೊರೆಯಲಾರದು. ಗೀತೆಯಲ್ಲಿ ಹೇಳಿದಂತೆ ಯೋಗೀಶ್ವರನಾದ ಕೃಷ್ಣ, ಧನುರ್ಧಾರಿಯಾದ ಅರ್ಜುನ ಇಬ್ಬರೂ ಹಿಂದೂಸಮಾಜದಲ್ಲಿ ಸರಿಯಾಗಿ ಕೂಡಿಬಂದರೆ, ಅಧ್ಯಾತ್ಮಶಕ್ತಿ ಮತ್ತು ಭೌತಿಕಶಕ್ತಿ ಇವೆರಡು ವೃದ್ಧಿಗೊಂಡು ನೆಲೆನಿಂತರೆ ಆಗ ಮಾತ್ರ ಗೀತೆಯಲ್ಲಿ ಹೇಳಿದಂತೆ ಇಲ್ಲಿ ಶ್ರೀ, ವಿಜಯ, ಐಶ್ವರ್ಯ, ಶಾಂತಿ ಸೌಖ್ಯಗಳು ತುಂಬಿಬರುತ್ತವೆ.

**ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।**
**ತತ್ರ ಶ್ರೀರ್ವಿಜಯೋಭೂತಿರ್ಧ್ರುವಾನೀತಿರ್ಮತಿರ್ಮಮ ॥** —ಗೀತೆ, ೧೮-೭೮

"ಎಲ್ಲಿ ಯೋಗೇಶ್ವರನಾದ ಕೃಷ್ಣನಿರುವನೋ, ಎಲ್ಲಿ ಧನುರ್ಧಾರಿಯಾದ ಪಾರ್ಥನು ಇರುವನೋ ಅಲ್ಲಿ ಶ್ರೀ, ವಿಜಯ, ಐಶ್ವರ್ಯ, ಶಾಶ್ವತವಾದ ನೀತಿ ಇವುಗಳು ಇರುವುವೆಂದು ನನ್ನ ಮತ."

ಜಗತ್ತಿನಲ್ಲಿ ಪ್ರತಿಯೊಬ್ಬನೂ ಬಯಸುವ ಸುಖ-ಶಾಂತಿಗಳ ಬಗೆಗೆ ಸರಿಯಾದ ಕಲ್ಪನೆ, ಮಾರ್ಗದರ್ಶನ ಮತ್ತು ಆದರ್ಶಗಳನ್ನು ಅಧ್ಯಾತ್ಮಭೂಮಿಯಾದ ಈ ಭರತಖಂಡದಿಂದ ಎಂದಿಗಿಂತಲೂ ಹೆಚ್ಚಾಗಿ ಇಂದು ಇತರರು ಪಡೆಯಬೇಕಾಗಿರುವ ಪರಿಸ್ಥಿತಿ ಒದಗಿ ಬಂದಿರುತ್ತದೆ. ಹಾಗಾಗಿ ಹಿಂದೂಗಳು ತಾವು ಸ್ವತಃ ಪ್ರಬುದ್ಧರಾಗುವುದು ಆತ್ಮದ ಮೋಕ್ಷದ ಹಿತದಿಂದ, ಸ್ವಕಲ್ಯಾಣದ ದೃಷ್ಟಿಯಿಂದ ಎಷ್ಟು ಅಗತ್ಯ ಮತ್ತು ಕರ್ತವ್ಯ ಆಗಿದೆಯೋ ಹಾಗೆಯೇ ಜಗದ ಹಿತಕ್ಕಾಗಿ ಸರ್ವಾಂಗೀಣವಾದ ಶುದ್ಧವೂ ಬಲಪ್ರದವೂ ಆದ ಸಮಾಜವಾಗಿ ಬೆಳಗಬೇಕಾಗಿರುವುದೂ ಕರ್ತವ್ಯವಾಗಿರುತ್ತದೆ. ಮಾತ್ರವಲ್ಲದೆ ಅದು ಇಂದಿನ ಜಾಗತಿಕ ಪರಿಸ್ಥಿತಿಯ ಕರೆಯೂ ಆಗಿರುತ್ತದೆ.

ಹಿಂದೂದೇಶವಿಂದು ರಾಜಕೀಯವಾಗಿ ಸ್ವತಂತ್ರವಾಗಿದೆ. ವಿವಿಧ ಮತದವರು, ಪಂಥದವರು, ಸಂಸ್ಕೃತಿಗಳಿಗೆ ಸೇರಿದವರು ಎಂಬ ಬೇರೆ ಬೇರೆ ರೀತಿಯ ಜನರಿಂದ ಕೂಡಿರುವ ಭಾರತ ದೇಶವು ಸುಂದರವಾದ ಪುಷ್ಪಗಳಿಂದ ಕೂಡಿದ ಉದ್ಯಾನದಂತಿದೆ. ಇಲ್ಲಿರುವ ಸುಂದರವಾದ, ಪರಿಮಳಭರಿತವಾದ ಪುಷ್ಪಗಳು ಅನೇಕ ವಿಧಗಳಾಗಿವೆ. ಅಂದಚೆಂದದ ಹೂಗಿಡಗಳು ತೋಟದಲ್ಲಿರುವಂತೆ, ಸಾಕಷ್ಟು ಅನಗತ್ಯದ, ಉಪಯುಕ್ತವಲ್ಲದ ಕಳೆಗಳೂ ತೋಟದಲ್ಲಿ ಬೆಳೆದು ಇನ್ನೂ ಬೆಳೆಯಹತ್ತಿವೆ. ತೋಟದ ರಕ್ಷಣೆಯ ಬೇಲಿ, ಅಲ್ಲಲ್ಲಿರುವ ಸುಂದರ ಕೊಳ, ಲತಾಮಂಟಪ, ವಿಹಾರಮಂಟಪ, ಹೂಗಿಡಗಳು ಇವುಗಳೆಲ್ಲ ಅಷ್ಟಿಷ್ಟು ಹಾಳಾಗಿವೆ ; ಅಂದಚೆಂದಗಳನ್ನು ಕಳೆದುಕೊಂಡಿವೆ. ಹಾಗೆಂದು ನಿರಾಶೆಗೆ, ನಿರುತ್ಸಾಹಕ್ಕೆ ಅವಕಾಶವಿಲ್ಲ. ಕಳೆಗಳು ಹಾಗೂ ಪ್ರತಿಕೂಲಪರಿಸ್ಥಿತಿಗಳು ತುಂಬಿದ್ದರೂ ಅವು ಸುಂದರವಾದ ಉದ್ಯಾನವನ್ನು ಹಾಳುಮಾಡುವಷ್ಟು ಇನ್ನೂ ಬೆಳೆದಿಲ್ಲ. ಹಾಳಾದ ಪರಿಸ್ಥಿತಿಯನ್ನು ಸರಿಪಡಿಸಲು ಸಾಧ್ಯವೇ ಇಲ್ಲ ಎಂಬುವಷ್ಟು ಅವ್ಯವಸ್ಥೆಗೊಂಡಿರುವುದಿಲ್ಲ. ದೇಶದ ಹಿತಕ್ಕೆ, ಹಿಂದೂಸಮಾಜದ ಬೆಳವಣಿಗೆಗೆ ಪ್ರತಿಕೂಲವಾದ ಶಕ್ತಿಗಳು ಒಂದೆಡೆಯಿಂದ ಹೆಚ್ಚಾಗಹತ್ತಿದರೆ ಅನುಕೂಲವಾದ ಶಕ್ತಿಗಳೂ ಸಾಕಷ್ಟು ಪ್ರಬಲವಾಗುತ್ತಾ ಬರುತ್ತಿರುತ್ತವೆ.

ಹಿಂದೂಧರ್ಮ, ಸಂಸ್ಕೃತಿಗಳ ವಿಚಾರವಾಗಿ ಅಭಿಮಾನ, ಪ್ರಜ್ಞೆ ಇವುಗಳು ನಮ್ಮ ಜನಜೀವನದಲ್ಲಿ ಬಲಗೊಳ್ಳಹತ್ತಿವೆ. ಮತಧರ್ಮಗಳ ವಿಚಾರವಾಗಿ ವೈಜ್ಞಾನಿಕ ದೃಷ್ಟಿಯಿಂದ ಪರ್ಯಾಲೋಚನೆ ಮಾಡುವಿಕೆ, ಹಳೆಯ ಕಾಲದ ಸತ್ಯವಿಚಾರಗಳನ್ನೇ ಹೊಸ ಭಾಷೆಯಲ್ಲಿ, ಹೊಸ ವಿಧಾನದಲ್ಲಿ ಅರ್ಥಮಾಡಿಕೊಳ್ಳುವ, ಕಲಿಯುವ, ಜೀವನದಲ್ಲಿ ರೂಢಿಸಿಕೊಳ್ಳುವ ಮನೋಭಾವ–ಪರಿಪಾಠಗಳು ವೃದ್ಧಿಯಾಗಹತ್ತಿವೆ, ಗುರುಪೀಠಗಳು, ಭಜನಸಂಘಗಳು, ಅಧ್ಯಾತ್ಮವಿಚಾರಪ್ರಚಾರಸಂಸ್ಥೆಗಳು. ಸದ್ಗೃಹಸ್ಥರ ಮನೆಗಳು, ಸತ್ಕಾರ್ಯನಿಷ್ಠವಾದ ಸಂಘ-ಸಂಸ್ಥೆಗಳು, ಸಾಮೂಹಿಕವಾದ ಯಜ್ಞಯಾಗಾದಿಗಳು, ಧರ್ಮಪ್ರಚಾರಾತ್ಮಕವಾದ ಜ್ಞಾನಯಜ್ಞಗಳು, ಹಿಂದೂಧರ್ಮದ ಕುರಿತಾಗಿ ದೇಶದಲ್ಲಿ ಮಾತ್ರವಲ್ಲದೆ ವಿದೇಶಗಳಲ್ಲಿಯೂ ಪ್ರಚಾರಕಾರ್ಯಗಳೂ, ಇವುಗಳೆಲ್ಲಾ ವಿಶೇಷಪ್ರಮಾಣದಲ್ಲಿ. ಕಾರ್ಯಾಚರಣೆಗೆ ಬರುತ್ತಾ ಇವೆ. ಈ ಎಲ್ಲಾ ಉತ್ತಮವಾದ ಕೆಲಸಕಾರ್ಯಗಳಲ್ಲಿ ಅಡಕವಾಗಿರುವ ಒಳಿತನ್ನು ಗ್ರಹಿಸಿ ಹಿಂದೂಗಳೆಲ್ಲರೂ ಇವುಗಳ ಯಶಸ್ವಿಯಾದ ಬೆಳವಣಿಗೆ ಮತ್ತು ರಕ್ಷಣೆಗಾಗಿ ತಮ್ಮ ತಮ್ಮ ವ್ಯಷ್ಟಿಜೀವನವನ್ನು ಪರಿಶುದ್ಧವೂ ಶಕ್ತಿಪೂರ್ಣವೂ ಸಾರ್ಥಕಯುಕ್ತವೂ ಆದ ರೀತಿಯಲ್ಲಿ ನಿರ್ವಹಿಸಿದರೆ, ಸರ್ವಾಂಗೀಣವಾದ ಕ್ಷೇಮವುಂಟಾಗಿ ದೇಶದಲ್ಲಿ ಸುಖಶಾಂತಿಗಳು ನೆಲೆಗೊಂಡು ತನ್ಮೂಲಕ ಜಗತ್ತಿಗೆ ಕಲ್ಯಾಣ ಉಂಟಾಗುವುದಕ್ಕೆ ಸಾಧ್ಯವಾಗುತ್ತದೆ.

ನಮ್ಮ ದೇಶದ ಹಾಗೂ ದೇಶವಾಸಿಗಳೆಲ್ಲರ ಸರ್ವತೋಮುಖವಾದ ಕಲ್ಯಾಣಕ್ಕಾಗಿ ಈ ಪುಣ್ಯಭೂಮಿಯಲ್ಲಿ ಪ್ರಾಚೀನಕಾಲದಲ್ಲಿ ನಮ್ಮ ಹಿರಿಯರಾದ ವೈದಿಕಮಹರ್ಷಿಗಳು ಪ್ರಾರ್ಥಿಸಿದ ಉದಾತ್ತವಾದ ಈ ಪ್ರಾರ್ಥನೆಯು ನಮ್ಮೆಲ್ಲರ ಅನುದಿನದ ಪ್ರಾರ್ಥನಾಮಂತ್ರವಾಗಿ ಅಂತರಂಗದಿಂದ ಹೊರಹೊಮ್ಮಿ ನಾಲ್ದೆಸೆಗಳಲ್ಲಿ ಪ್ರತಿಧ್ವನಿಗೊಳ್ಳುವಂತಾಗಲಿ ! ನಮ್ಮೆಲ್ಲರ ಬದುಕಿನ ತೇರು ಸತ್ಯದಿಂದ ಅಸತ್ಯದೆಡೆಗೆ, ತಮಸ್ಸಿನಿಂದ ಜ್ಯೋತಿ

ಯೆಡೆಗೆ, ಮೃತ್ಯುವಿನಿಂದ ಅಮೃತತ್ವದ ಎಡೆಗೆ ಸಾಗುವಂತಾಗಿ ಸಾರ್ಥಕತೆಯನ್ನು ಹೊಂದುವಂತಾಗಲಿ !

ಆಬ್ರಹ್ಮನ್ ಬ್ರಹ್ಮಣೋ ಬ್ರಹ್ಮವರ್ಚಸೀ ಜಾಯತಾಮ್ |
ಆರಾಷ್ಟ್ರೇ ರಾಜನ್ಯ ಇಷವ್ಯಃ ಶೂರೋ ಮಹಾರಥೋಽಜಾಯತಾಮ್ |
ದೋಗ್ಧ್ರೀ ಧೇನುರ್ವೋಢಾಽನಡ್ವಾನ್ ಆಶುಃ ಸಪ್ತಿಃ—
ಪುರಂಧಿರ್ಯೋಷಾ ಜಿಷ್ಣೂ ರಥೇಷ್ಠಾಃ ಸಭೇಯೋ ಯುವಾಽಸ್ಯ
ಯಜಮಾನಸ್ಯ ವೀರೋ ಜಾಯತಾಮ್ |
ನಿಕಾಮೇ ನಿಕಾಮೇ ನಃ ಪರ್ಜನ್ಯೋ ವರ್ಷತು ಫಲಿನ್ಯೋ ನ ಓಷಧಯಃ
ಪಚ್ಯನ್ತಾಮ್ |
ಯೋಗಕ್ಷೇಮೋ ನಃ ಕಲ್ಪತಾಮ್ ॥ —ಯಜುರ್ವೇದ

"ನಮ್ಮ ರಾಷ್ಟ್ರದಲ್ಲಿ ಆಧ್ಯಾತ್ಮಿಕಪರರಾದವರು ಬ್ರಹ್ಮಸಿದ್ಧಿಯನ್ನು ಪಡೆಯಲಿ. ರಾಜಕೀಯ ಪದ್ಧತಿಗಳು ಯಾವಾಗಲೂ ಧರ್ಮರಕ್ಷಣೆ ಮಾಡಲು ಎಚ್ಚರಿಕೆಯಿಂದ ಇರಲಿ. ಸಸ್ಯಸಂಪತ್ತು, ಪಶುಸಂಪತ್ತು ಇತೋಪ್ಯಧಿಕವಾಗಲಿ. ನಮ್ಮ ದೇಶದ ಯುವತಿಯರು ಉತ್ತಮ ಗೃಹಿಣಿಯರಾಗಲಿ. ನಮ್ಮ ವೀರಯುವಕರು ಸಭೆಗಳಲ್ಲಿ ಬುದ್ಧಿಶಕ್ತಿಯನ್ನೂ ಯುದ್ಧದಲ್ಲಿ ದೇಹಶಕ್ತಿಯನ್ನೂ ಪ್ರದರ್ಶಿಸುವಂತಾಗಲಿ. ಕ್ಷಾಮಡಾಮರಗಳಿಲ್ಲದಂತೆ ದೇಶದಲ್ಲಿ ಸುಭಿಕ್ಷೆ ಉಂಟಾಗಲಿ. ನಮಗೆ ಯೋಗಕ್ಷೇಮಗಳು ಉಂಟಾಗಲಿ."

ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾನ್ತಿನೋ
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ |
ಅರ್ಹನ್ನಿತ್ಯಥ ಜೈನಶಾಸನರತಾಃ ಕರ್ಮೇತಿ ಮೀಮಾಂಸಕಾಃ
ಸೋಽಯಂ ನೋ ವಿದಧಾತು ವಾಂಛಿತಫಲಂ ತ್ರೈಲೋಕ್ಯನಾಥೋ ಹರಿಃ ॥
—ಹನೂಮನ್ನಾಟಕ

"ಯಾವ ತ್ರಿಲೋಕಪ್ರಭುವನ್ನು ಶೈವರು ಶಿವನೆಂದೂ, ವೇದಾಂತಿಗಳು ಬ್ರಹ್ಮವೆಂದೂ, ಬೌದ್ಧರು ಬುದ್ಧನೆಂದೂ, ಪ್ರಮಾಣಪಟುಗಳಾದ ನೈಯಾಯಿಕರು ಕರ್ತನೆಂದೂ, ಜೈನರು ಅರ್ಹತ್ ಎಂದೂ, ಮೀಮಾಂಸಕರು ಕರ್ಮವೆಂದೂ ಉಪಾಸಿಸುವರೋ, ಆತನು ನಮ್ಮ ಆಕಾಂಕ್ಷೆಗಳನ್ನು ನೆರವೇರಿಸಿಕೊಡಲಿ."

ಯ ಏಕೋಽವರ್ಣೋ ಬಹುಧಾ ಶಕ್ತಿಯೋಗಾ-
ದ್ವರ್ಣಾನನೇಕಾನ್ನಿಹಿತಾರ್ಥೋ ದಧಾತಿ |
ವಿ ಚೈತಿ ಚಾಂತೇ ವಿಶ್ವಮಾದೌ ಸ ದೇವಃ
ಸ ನೋ ಬುದ್ಧ್ಯಾ ಶುಭಯಾ ಸಂಯುನಕ್ತು ॥ —ಶ್ವೇತಾಶ್ವತರೋಪನಿಷತ್

"ಯಾವನು ಅದ್ವಿತೀಯನೂ ಅವರ್ಣನೂ ಆಗಿದ್ದರೂ ತನ್ನ ಶಕ್ತಿಯ ಮಹಿಮೆಯಿಂದ ಸ್ವಾರ್ಥಾಪೇಕ್ಷೆ ಇಲ್ಲದೆ ಅನೇಕ ವರ್ಣಗಳನ್ನು ಸೃಷ್ಟಿಕಾಲದಲ್ಲಿ ನಾನಾಪ್ರಕಾರವಾಗಿ ಸೃಷ್ಟಿಸುವನೋ ಯಾವನಲ್ಲಿ ವಿಶ್ವವು ಪ್ರಳಯಕಾಲದಲ್ಲಿ ಲಯಹೊಂದುವುದೋ ಅಂಥ ದೇವನು ನಮಗೆ ಶುಭಬುದ್ಧಿಯನ್ನು ಕೊಡಲಿ."

ಯಂ ಬ್ರಹ್ಮಾವರುಣೇಂದ್ರರುದ್ರಮರುತಃ ಸ್ತುನ್ವಂತಿ
ದಿವ್ಯೈಸ್ತವೈರ್ವೇದೈಃ ಸಾಂಗಪದಕ್ರಮೋಪ-
ನಿಷದೈರ್ಗಾಯಂತಿ ಯಂ ಸಾಮಗಾಃ ।
ಧ್ಯಾನಾವಸ್ಥಿತ ತದ್ಗತೇನ ಮನಸಾ ಪಶ್ಯಂತಿ ಯಂ
ಯೋಗಿನೋ ಯಸ್ಯಾಂತಂ ನ ವಿದುಃ
ಸುರಾಸುರಗಣಾ ದೇವಾಯ ತಸ್ಮೈ ನಮಃ ॥ —ಶ್ರೀಮದ್ಭಾಗವತ

"ಯಾರನ್ನು ಬ್ರಹ್ಮಾದಿದೇವತೆಗಳು ದಿವ್ಯಸ್ತೋತ್ರಗಳಿಂದ ಸ್ತುತಿಸುತ್ತಾರೋ ಯಾರ ಕೀರ್ತಿಯನ್ನು ಸಾಮಗಾಯಕರು ವೇದಾಂಗ, ಪದಕ್ರಮ ಮತ್ತು ಉಪನಿಷತ್ತುಗಳಿಂದ ಕೂಡಿದ ವೇದಗಳ ಮೂಲಕ ಹಾಡುತ್ತಾರೆಯೋ, ಯಾರನ್ನು ಧ್ಯಾನದಲ್ಲಿ ತಲ್ಲೀನವಾದ ಮನಸ್ಸಿನಿಂದ ಯೋಗಿಗಳು ಸಾಕ್ಷಾತ್ಕರಿಸಿಕೊಳ್ಳುತ್ತಾರೋ, ಯಾರ ಪರಿಮಿತಿಯನ್ನು ಸುರಾಸುರರೂ ಅರಿಯರೋ ಅಂತಹ ದೇವನಿಗೆ ನಮಸ್ಕಾರ."

ಓಂ ಅಸತೋ ಮಾ ಸದ್ಗಮಯ
ತಮಸೋ ಮಾ ಜ್ಯೋತಿರ್ಗಮಯ
ಮೃತ್ಯೋರ್ಮಾಮೃತಂಗಮಯ ॥

ಓಂ ಪೂರ್ಣಮದಃ ಪೂರ್ಣಮಿದಂ
ಪೂರ್ಣಾತ್ ಪೂರ್ಣಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ
ಪೂರ್ಣಮೇವಾವಶಿಷ್ಯತೇ ॥

ಓಂ ಶಾಂತಿಃ । ಶಾಂತಿಃ । ಶಾಂತಿಃ । —ಬೃಹದಾರಣ್ಯಕ ಉಪನಿಷತ್ತು

"ಓ ದೇವಾ! ಅಸತ್ಯದಿಂದ ಸತ್ಯಕ್ಕೆ ನನ್ನನ್ನು ಕರೆದುಕೊಂಡು ಹೋಗು! ತಮಸ್ಸಿನಿಂದ ಜ್ಯೋತಿಗೆ ನನ್ನನ್ನು ಕರೆದುಕೊಂಡು ಹೋಗು! ಮೃತ್ಯುವಿನಿಂದ ಅಮೃತತ್ವಕ್ಕೆ ನನ್ನನ್ನು ಕರೆದುಕೊಂಡು ಹೋಗು!"

"ಅದು (ಪರಬ್ರಹ್ಮವು) ಪೂರ್ಣವು; ಇದು (ವ್ಯಕ್ತವಾದ ಜಗತ್ತು) ಪೂರ್ಣವು; ಪೂರ್ಣದಿಂದ ಪೂರ್ಣವೇ ಉಳಿಯುತ್ತದೆ."

॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

॥ ಹರಿಃ ಓಂ ತತ್ಸತ್ ॥

# ಹಿಂದೂಧರ್ಮದ ಕೆಲವು ಪ್ರಮುಖ ಒಳಪಂಥಗಳು ಮತ್ತು ಸಂಘಸಂಸ್ಥೆಗಳು

## ೧. ಶ್ರೀ ರಾಘವೇಂದ್ರ ಸ್ವಾಮಿಗಳ ಪಂಥ

ಭಕ್ತಕೋಟಿಯ ಹೃನ್ಮಂದಿರದಲ್ಲಿ ಗುರುರಾಯರು ಎಂದು ವಿರಾಜಮಾನರಾಗಿರುವ ಮಂತ್ರಾಲಯದ ಮಹಾಪ್ರಭು ಜಗದ್ಗುರು ಶ್ರೀ ರಾಘವೇಂದ್ರ ಮಹಾಸ್ವಾಮಿಗಳವರ ಜೀವನ–ಸಂದೇಶಗಳನ್ನು ಅವಲಂಬಿಸಿರುವ ಮಥವೇ ಶ್ರೀ ರಾಘವೇಂದ್ರ ಸ್ವಾಮಿಗಳ ಪಂಥ

ಶ್ರೀಮದ್ ರಾಘವೇಂದ್ರ ಸ್ವಾಮಿಗಳು ಜಗದ್ಗುರು ಶ್ರೀ ಮಧ್ವಾಚಾರ್ಯರ ಪರಂಪರೆಯವರು. ಮಾಧ್ವಸಂಪ್ರದಾಯದ ವೈಷ್ಣವಪಂಥದ ಗುರುಗಳಾದ ಶ್ರೀ ರಾಘವೇಂದ್ರ ಯತಿಸಾರ್ವಭೌಮರು ಮಹಾನ್ ಯೋಗಿಗಳು-ಸಿದ್ಧಮಹಾಪುರುಷರು. ಭಕ್ತಿಯೋಗದ ಸಾಕ್ಷಾತ್ಕಾರದ ಸಾಕಾರಮೂರ್ತಿಗಳಾಗಿ ಬಾಳಿ ಬೆಳಗಿದ ಶ್ರೀ ರಾಘವೇಂದ್ರ ಸ್ವಾಮಿಗಳು ಭೌತಿಕ ಕಣ್ಣುಗಳಿಗೆ ಇಂದು ಕಾಣುತ್ತಿಲ್ಲವಾದರೂ ಅಂತರಂಗನೇತ್ರಕ್ಕೆ ನಿತ್ಯಗೋಚರರು. ಅಸಂಖ್ಯಾತಭಕ್ತರ ಪಾಲಿಗೆ ಪ್ರಾತಃಸ್ಮರಣೀಯರು. ಜಾತಿ, ಮತ, ಪಂಗಡಗಳ ಭೇದವಿಲ್ಲದೆ ಕೋಟ್ಯಂತರ ಮಂದಿಯ ಪಾಲಿಗೆ ಶ್ರೀ ರಾಘವೇಂದ್ರ ಸ್ವಾಮಿಗಳು ಇಂದಿಗೂ ಜೀವಂತಪ್ರಭಾವದ ಪಾವನಪುರುಷರು. ಇಂದು ದೇಶದಲ್ಲೆಲ್ಲಾ ಅವರ ಹೆಸರಿನಲ್ಲಿ ಮಠಗಳು ಬಹುಸಂಖ್ಯೆಯಲ್ಲಿ ನೆಲೆಗೊಂಡಿವೆ. ಮಾಧ್ವಸಂಪ್ರದಾಯದ ವೈಷ್ಣವಧರ್ಮ, ಭಕ್ತಿಯೋಗದ ಅನುಷ್ಠಾನ ವಿವರಗಳನ ಒಳಗೊಂಡಿರುವ ಈ ಮಠದ ಸಂಪ್ರದಾಯವನ್ನು ಅನುಸರಿಸುವವರದೇ ಒಂದು ಪಂಥ ಎಂಬಷ್ಟರಮಟ್ಟಿಗೆ ಇಂದು ದೇಶದಲ್ಲಿ ರಾಯರ ಭಕ್ತವೃಂದ ಬೆಳೆದು ಬೆಳಗುತ್ತಿದೆ.

೧೫೯೮ರಲ್ಲಿ ಕುಂಭಕೋಣಂನಲ್ಲಿ ಜನ್ಮತಳೆದ ವೀಣೆ ವೆಂಕಣ್ಣಭಟ್ಟನು ತನ್ನ ೨೫ನೇ ವಯಸ್ಸಿನಲ್ಲಿ ಸಂನ್ಯಾಸ ಸ್ವೀಕರಿಸಿ ಶ್ರೀಮದ್ ಜಗದ್ಗುರು ರಾಘವೇಂದ್ರಸ್ವಾಮಿಗಳಾದರು. ಆಮೇಲೆ ಸ್ವಾಮಿಗಳು ಧರ್ಮಪ್ರಚಾರ ಹಾಗೂ ತೀರ್ಥಯಾತ್ರಾಸಂಚಾರಗಳನ್ನು ಕೈಗೊಂಡರು. ತಂಜಾವೂರು, ಮಧುರೆ, ಉಡುಪಿ, ಮೈಸೂರು, ಬಿಜಾಪುರ, ಆದವಾನಿ,

ಕೊಲ್ಹಾಪುರ, ಪಂಡರಾಪುರ ಹೀಗೆ ಭಾರತದ ವಿವಿಧ ಎಡೆಗಳಿಗೆ ಸಂದರ್ಶನ ನೀಡಿ ದಿವ್ಯ ಸಂದೇಶವನ್ನು ಬೀರಿದರು ಪರಮಯೋಗಸಿದ್ಧರೂ, ಅಪ್ರತಿಮವೇದಪುರಾಣಾದಿಶಾಸ್ತ್ರ ವಿದ್ಯಾಸಂಪನ್ನರೂ ಆಗಿದ್ದ ಶ್ರೀ ರಾಘವೇಂದ್ರ ಸ್ವಾಮಿಗಳು ತಾವು ಹೋದಲ್ಲೆಲ್ಲಾ ಭಗವಂತನ ಮಹಿಮೆಯನ್ನು ತಮ್ಮ ಪಾವನಸಂದೇಶ ಹಾಗೂ ಪವಾಡಗಳ ಮೂಲಕ ಬೀರಿದರು. ಕೊಲ್ಹಾಪುರದಲ್ಲಿ ಹಿಂದೂ ಸಮ್ರಾಟ ಛತ್ರಪತಿ ಶಿವಾಜಿ ಮಹಾರಾಜನು ಸ್ವಾಮಿಗಳ ದರ್ಶನಪಡೆಯಲು ಬಂದು ವಿಶೇಷವಾಗಿ ಅವರಿಂದ ಉಪದೇಶಪಡೆದು ಅನುಗ್ರಹೀತನಾದನು. ಬಿಜಾಪುರದ ಇಮ್ಮಡಿ ಇಬ್ರಾಹಿಮ್ ಆದಿಲ್‌ಶಾಹನು ಶ್ರೀಗಳವರ ಪುಣ್ಯಪ್ರಭಾವಕ್ಕೆ ಮಣಿದು 'ಜಗದ್ಗುರು' ಎಂಬ ಗೌರವ ಪ್ರಶಸ್ತಿಯನ್ನೂ ಪ್ರಕಟಿಸಿ ರಾಜಚಿಹ್ನೆಯಾಗಿ ಶ್ವೇತಚ್ಛತ್ರಗಳನ್ನು ಅರ್ಪಿಸಿದನು. ಆದವಾನಿ ನವಾಬನು ಸ್ವಾಮಿಗಳ ವರಿಗೆ ತುಂಗಭದ್ರಾನದೀತೀರದ ಮಂಚಾಲೆ ಗ್ರಾಮವನ್ನು ಕಾಣಿಕೆಯಾಗಿ ಅರ್ಪಿಸಿದನು.

ಸ್ವಾಮಿಗಳು ತಮ್ಮ ತೀರ್ಥಯಾತ್ರಾಸಂಬಂಧವಾಗಿ ಸಂಚಾರವನ್ನು ಮುಗಿಸಿ ತುಂಗ ಭದ್ರಾನದೀತೀರದ ಮಂಚಾಲೆ ಗ್ರಾಮಕ್ಕೆ ಬಂದರು. ಅಲ್ಲಿನ ಗ್ರಾಮದೇವತೆ ಮಂಚಾ ಲಮ್ಮ ಮಹಾತಾಯಿಯನ್ನು ಪೂಜಿಸಿದರು. ಜಗನ್ಮಯಿ ದುರ್ಗಾಮಾತೆ ಮಂಚಾಲಮ್ಮ ಸ್ವಾಮಿಗಳವರಿಗೆ ಅಲ್ಲೇ ನೆಲೆನಿಲ್ಲಲು ಆಣತಿಯನ್ನು ಇತ್ತಳು. ಜಗನ್ಮಾತೆಯಿಂದ ಅನು ಗ್ರಹೀತರಾದ ಗುರುರಾಘವೇಂದ್ರ ಸ್ವಾಮಿಗಳು ಮಂಚಾಲೆ ಗ್ರಾಮದಲ್ಲಿ ತಮ್ಮ ತಪಃಪೀಠ ವನ್ನು ಸ್ಥಾಪಿಸಿ ನೆಲೆನಿಂತರು.

ಶ್ರೀ ರಾಘವೇಂದ್ರ ಸ್ವಾಮಿಗಳು ವೇದಾದಿಶಾಸ್ತ್ರಗಳ ಕುರಿತಾಗಿ ಶ್ರೀ ಜಗದ್ಗುರು ಮಧ್ವಾಚಾರ್ಯರ ಗ್ರಂಥಗಳ ವಿಚಾರವಾಗಿ ವೇದತ್ರಯನಿವೃತ್ತಿ, ಗೀತಾರ್ಥಸಂಗ್ರಹ, ಅಣುಮಧ್ವವಿಜಯವ್ಯಾಖ್ಯಾ, ತಂತ್ರದೀಪಿಕಾ, ಪರಿಮಳ ಎಂಬಿತ್ಯಾದಿ ಒಟ್ಟು ೪೮ ಉದ್ಗ್ರಂಥಗಳನ್ನು ರಚಿಸಿ ಲೋಕಕ್ಕೆ ಅನುಗ್ರಹರೂಪವಾಗಿ ನೀಡಿರುತ್ತಾರೆ.

ಶ್ರೀ ರಾಘವೇಂದ್ರ ಸ್ವಾಮಿಗಳು ತಮ್ಮ ದಿವ್ಯತೆಯ ಪ್ರಭಾವವನ್ನು ಮಂಚಾಲೆ ಗ್ರಾಮದಿಂದ ಲೋಕಹಿತಕ್ಕಾಗಿ ವಿಧವಿಧವಾದ ರೀತಿಯಲ್ಲಿ ಬೀರತೊಡಗಿದರು. ಅವರ ಸ್ವಯಂಪವಿತ್ರವಾದ ದಿವ್ಯಸಾನ್ನಿಧ್ಯ, ಆಧ್ಯಾತ್ಮಿಕ ಗ್ರಂಥಗಳು, ಉಪದೇಶಗಳು, ಭಕ್ತಿ ಕೀರ್ತನೆಗಳು ಇವುಗಳ ಜೊತೆಗೆ ಅವರು ದೂರದೂರದ ಊರುಗಳಲ್ಲಿನ ಅವರ ಅನೇಕ ಭಕ್ತರಿಗೆ ಕನಸಿನಲ್ಲಿ ದರ್ಶನವಿತ್ತು ಅನುಗ್ರಹ ನೀಡಿದರು. ಅಸಂಖ್ಯಾತ ಭಕ್ತರು ಮಂಚಾ ಲೆಗೆ ಬಂದು ಅವರ ದರ್ಶನಪಡೆದು ಧನ್ಯರಾಗುವಂತಾಯಿತು.

ಸ್ವಾಮಿಗಳು ತಮ್ಮ ಪೀಠಕ್ಕೆ ಉತ್ತರಾಧಿಕಾರಿಯನ್ನು ನೇಮಿಸಿದರು. ತಾವು ಮಂಚಾಲೆ ಯಲ್ಲೇ ದೇಹಸಹಿತವಾಗಿ ಬೃಂದಾವನಸ್ಥರಾಗಿ ಸಚೇತನರಾಗಿ ಉಳಿದು ಲೋಕಕಲ್ಯಾಣ ಕ್ಕಾಗಿ ಒಟ್ಟು ೭೦೦ ವರ್ಷ ನೆಲೆನಿಲ್ಲುತ್ತೇನೆ ಎಂದು ಆಶ್ವಾಸನೆ ನೀಡಿದರು. ಅದರಂತೆ ಗುರುರಾಯರು ತಮ್ಮ ೭೫ನೇ ವಯಸ್ಸಿನಲ್ಲಿ (೧೬೭೧ರಲ್ಲಿ) ಸ್ವಯಂ ನಿರ್ಧಾರದಿಂದ ಬೃಂದಾವನ (ಸಮಾಧಿಮಂದಿರವನ್ನು) ಪ್ರವೇಶಿಸಿ ಅಲ್ಲಿ ದಿವ್ಯಶಕ್ತಿಯಾಗಿ ನೆಲೆನಿಂತರು.

ಸ್ವಾಮಿಗಳು ಮಂಚಾಲೆ ಗ್ರಾಮದಲ್ಲಿ ಬೃಂದಾವನಸ್ಥರಾದರೂ ಭಕ್ತಕೋಟಿಯ ಪಾಲಿಗೆ ನಿತ್ಯಾನುಗ್ರಹಕಾರಕ ಗುರುಗಳಾಗಿ ಬೆಳಗಿದರು. ಕನಸಿನಲ್ಲಿ ಅವರನ್ನು ಕಂಡವರು ಅನೇಕ ರಾದರೆ ದಿವ್ಯಧ್ಯಾನದಲ್ಲಿ ದರ್ಶನಪಡೆದವರು ಅದೆಷ್ಟೋ ಮಂದಿ ! ಅವರ ಪುಣ್ಯ

ಬೃಂದಾವನಮಂದಿರದ ಬಳಿ ಪ್ರಾರ್ಥಿಸಿ ಅವರ ಅನುಗ್ರಹಪಡೆದವರ ಸಂಖ್ಯೆ ಅಪಾರ.

ಗುರು ರಾಘವೇಂದ್ರರು ಭಕ್ತಕೋಟಿಯ ಪಾಲಿಗೆ ಗುರುರಾಯರಾದರು. ವರದಾತ ಮಹಾಯೋಗಿ, ಕಲಿಯುಗದ ಕಲ್ಪತರು ಎಂದಾದರು. ಮಂಚಾಲೆ ಗ್ರಾಮದಲ್ಲಿನ ಅವರ ಪುಣ್ಯಪೀಠ 'ಮಂತ್ರಾಲಯ' ಎಂದು ಪ್ರಸಿದ್ಧವಾಯಿತು. ಶ್ರೀ ರಾಘವೇಂದ್ರ ಗುರು ಸಾರ್ವಭೌಮರು ಮಂತ್ರಾಲಯದಲ್ಲಿ ಪರಮಯೋಗಿ, ಭಕ್ತಬಂಧು, ಶರಣಾಗತರಕ್ಷಕ ದೇವರಾಗಿ, ಭಗವತ್ಕೃಪೆಯ ಜ್ವಲಂತಪ್ರತೀಕವಾಗಿ ಬೆಳಗತೊಡಗಿದರು. ಮಂತ್ರಾಲಯ ಭಕ್ತಕೋಟಿಗೆ ಪುಣ್ಯಯಾತ್ರಾಸ್ಥಳವಾಯಿತು.

ಶ್ರೀ ರಾಘವೇಂದ್ರಸ್ವಾಮಿಗಳ ಸೇವೆ ಎನ್ನುವುದು ಈ ಪಂಥದಲ್ಲಿ ರಾಯರ ಅನುಗ್ರಹಕ್ಕಾಗಿ ಮಾಡುವ ಮುಖ್ಯವಾದ ಒಂದು ಆಧ್ಯಾತ್ಮಿಕ ಸಾಧನವಿಶೇಷವಾಗಿದೆ. ಇದನ್ನು ರಾಯರ ಸೇವೆ, ಬೃಂದಾವನ ಸೇವೆ ಎಂದೂ ಕರೆಯುತ್ತಾರೆ. ಈ ಸೇವೆಯನ್ನು ಜಾತಿ-ಮತ-ಜನಾಂಗಗಳ ಭೇದವಿಲ್ಲದೆ ಯಾರು ಬೇಕಾದರೂ ವಿಧಿಪ್ರಕಾರವಾಗಿ ನಡೆಸಬಹುದು ಎನ್ನುವುದು ಗಮನಾರ್ಹವಾದ ವೈಶಿಷ್ಟ್ಯವಾಗಿದೆ. ಆಹಾರವಿಹಾರಗಳಲ್ಲಿ ಪವಿತ್ರತೆ ಮತ್ತು ಸಂಯಮಗಳಿಂದ ಕೂಡಿ ಭಗವನ್ನಾಮಜಪಮಾಡುತ್ತಾ ರಾಯರ ಬೃಂದಾವನಕ್ಕೆ ಅನುಕೂಲದಂತೆ ೭, ೧೨, ೨೧, ೪೮ ಪ್ರದಕ್ಷಿಣೆಯನ್ನು ಮಾಡಿ ಸಾಷ್ಟಾಂಗ ನಮಸ್ಕಾರ ಮಾಡುವುದು, ಹಾಗೆ ದಿನಸಂಪ್ರತಿ ಮಾಡುತ್ತಾ ೭, ೧೨, ೨೧, ೪೮ ದಿವಸ ಸೇವೆ ನಡೆಸುವುದು ರಾಯರ ಸೇವೆಯ ಆಚರಣೆಯ ಮುಖ್ಯಾಂಶವಾಗಿದೆ. ಈ ಸೇವಾ ಸಂದರ್ಭದಲ್ಲಿ ದಿವಸಕ್ಕೆ ಮಧ್ಯಾಹ್ನ ಒಂದು ಹೊತ್ತು ಊಟ ಮಾಡಿಕೊಂಡು ಬ್ರಹ್ಮಚರ್ಯದ ನಿಷ್ಠಾಪೂರ್ಣ ಪಾಲನೆ, ಲೌಕಿಕ ವ್ಯವಹಾರ-ವಿಹಾರಗಳ ವರ್ಜನೆ, ಭಗವನ್ನಾಮಸ್ಮರಣೆ-ಗುರುಸ್ಮರಣೆ-ಸಂಕೀರ್ತನೆಗಳಿಂದ ಸೇವಾರ್ಥಿ ಕೂಡಿರಬೇಕು. ರಾಯರ ಸೇವೆಯನ್ನು ತನ್ನ ಮನೆಯಲ್ಲಿ ಶ್ರೀ ರಾಯರ ಭಾವಚಿತ್ರವನ್ನು ವಿಧಿಯುಕ್ತವಾಗಿ ಒಂದೆಡೆ ಪ್ರತಿಷ್ಠೆಮಾಡಿ ನಡೆಸಬಹುದು. ನೇರವಾಗಿ ಮಂತ್ರಾಲಯಕ್ಕೆ ತೆರಳಿ ಅಲ್ಲಿ ನೆಲೆನಿಂತು ನಡೆಸಬಹುದು. ಇಲ್ಲವೇ ತಮಗನುಕೂಲವಾದ ಶ್ರೀ ರಾಯರ ಬೃಂದಾವನ ಇರುವ ರಾಘವೇಂದ್ರ ಮಠದ ಯಾವುದೇ ಶಾಖೆಯಲ್ಲಿ ಸೇವೆಯನ್ನು ನಡೆಸಬಹುದು. ರಾಯರ ಸೇವೆಯ ಕುರಿತಾದ ಹೆಚ್ಚಿನ ತಾಂತ್ರಿಕ ವಿವರ-ವಿಧಿವಿಚಾರಗಳನ್ನು ರಾಯರ ಮಠದಿಂದ ಸೇವಾರ್ಥಿಗಳು ಸ್ವತಃ ಪಡೆದುಕೊಂಡು ಸೇವೆ ನಡೆಸುವುದು ಸಂಪ್ರದಾಯ ಕ್ರಮವಾಗಿರುತ್ತದೆ.

ಮಂತ್ರಾಲಯ ಯಾತ್ರೆ, ಮಂತ್ರಾಲಯ ವಾಸ, ಮಂತ್ರಾಲಯದಲ್ಲಿ ರಾಯರ ಸೇವೆ ಶ್ರೀ ರಾಘವೇಂದ್ರ ಪಂಥದಲ್ಲಿ ಅತ್ಯಂತ ಶ್ರೇಷ್ಠವಾದ, ಪರಿಣಾಮಕಾರಿಯಾದ ಭಕ್ತಿ ಸಾಧನೆಯಾಗಿರುತ್ತದೆ.

ಮೂಲತಃ ಜಗದ್ಗುರು ಶ್ರೀ ಮಧ್ವಾಚಾರ್ಯರ ಪರಂಪರೆಯಲ್ಲಿ ಪೀಠಾಧಿಪತಿಗಳಾಗಿ ಬೆಳಗಿದ ಶ್ರೀ ರಾಘವೇಂದ್ರಸ್ವಾಮಿಗಳು ಬರೇ ಮಾಧ್ವಮತಾನುಯಾಯಿಗಳಿಗೆ ಆರಾಧ್ಯರೆಂದಾಗಲಿಲ್ಲ ಎನ್ನುವುದು ಸ್ವಾಮಿಗಳ ಹಿರಿಮೆ ಹಾಗೂ ವೈಶಿಷ್ಟ್ಯವಾಗಿದೆ. ಅವರ ದೈವಿಕ ಪವಾಡಗಳು, ವೈಶಿಷ್ಟ್ಯ ರೀತಿಯ ಅನುಗ್ರಹವಿಧಾನಗಳು, ಅದ್ಭುತವಾದ ಯೋಗ ಶಕ್ತಿಪ್ರಕಾಶ ಇವುಗಳಿಂದಾಗಿ ಹಿಂದೂಧರ್ಮದ ಎಲ್ಲ ಪಂಗಡದವರೆಲ್ಲೂ ಶ್ರೀ ಗುರು

ರಾಘವೇಂದ್ರರು ಭಕ್ತಿ-ಗೌರವಗಳಿಗೆ ಪಾತ್ರರಾಗಿರುತ್ತಾರೆ. ಹಾಗಾಗಿ ಹಿಂದೂಧರ್ಮದ ವಿಭಿನ್ನ ಪಂಥಗಳ ಅನುಯಾಯಿಗಳಲ್ಲಿ ಪರಸ್ಪರ ವಿಶೇಷವಾದ ಪ್ರೇಮ-ಸೌಹಾರ್ದ ಭಾವನೆಗಳು ಕೂಡಿಬರಲು ಅವಕಾಶವಾಗಿರುತ್ತದೆ.

## ೨. ನಾಥಪಂಥ

ನಾಥಪಂಥದವರು ಭಾರತದಲ್ಲಿ ಬಂಗಾಳ, ಬಿಹಾರ, ಉತ್ತರ ಪ್ರದೇಶ, ಪಂಜಾಬ, ಮಹಾರಾಷ್ಟ್ರ, ಕರ್ನಾಟಕ, ತಮಿಳುನಾಡು ರಾಜ್ಯಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಇದ್ದಾರೆ. ಅಲ್ಲದೆ ನೆರೆರಾಜ್ಯವಾದ ನೇಪಾಳದಲ್ಲೂ ನಾಥಪಂಥೀಯರಿದ್ದಾರೆ. ಕರ್ನಾಟಕದಲ್ಲಿ ಮುಖ್ಯವಾಗಿ ಒಕ್ಕಲಿಗ ಜನಾಂಗದವರು ನಾಥಪಂಥಕ್ಕೆ ಒಳಪಟ್ಟವರಾಗಿರುತ್ತಾರೆ.

ನಾಥ ಎಂದರೆ ಗುರು, ಒಡೆಯ ಎಂದು ತಾತ್ಪರ್ಯ. ನಾಥಪಂಥ ಎಂದರೆ ಗುರುವಿನ ಪಂಥದವರು ಎಂದು ಸಾರಾರ್ಥ. ಶ್ರೀ ಗೋರಖನಾಥ ಮಹಾಸಿದ್ಧಯೋಗಿಗಳಿಂದ ಅತಿಪ್ರಾಚೀನಕಾಲದಲ್ಲಿ ಸ್ಥಾಪಿಸಲ್ಪಟ್ಟ ಪಂಥದವರೇ ನಾಥಪಂಥೀಯರು. ನಾಥಪಂಥದವರು ಶೈವಸಂಪ್ರದಾಯಕ್ಕೆ ಸೇರಿದವರು. ಶಿವ-ಶಕ್ತಿಯರನ್ನು ಆರಾಧನಾದ್ಯವಾಗಿ ಪರಿಗಣಿಸುವ ಈ ಪಂಥವು ಶೈವಮತದ ಮೂಲತತ್ತ್ವಗಳನ್ನು ಒಳಗೊಂಡಿರುತ್ತದೆ. ಶೈವಸಂಪ್ರದಾಯದಲ್ಲಿ ಹಲವಾರು ಒಳಪಂಗಡಗಳು ಇದ್ದು ಅವನ್ನು ಸ್ಥೂಲವಾಗಿ ಸೌಮ್ಯ ಮತ್ತು ರುದ್ರ ಎಂದು ಎರಡು ವರ್ಗಗಳಾಗಿ ವಿಂಗಡಿಸಲಾಗಿದೆ. ಸೌಮ್ಯಪಂಥದವರು ಸಸ್ಯಾಹಾರಿಗಳು, ರುದ್ರಪಂಥದವರು ಮಾಂಸಾಹಾರಿಗಳು. ಇವರೆಲ್ಲ ಶಿವನನ್ನು ಇಷ್ಟತ್ತೈದು ಬೇರೆ ಬೇರೆ ರೂಪಗಳಿಂದ ಆರಾಧಿಸುತ್ತಾರೆ. ರುದ್ರಪಂಥಕ್ಕೆ ಮುಖ್ಯವಾಗಿ ವಾಮ, ಭೈರವ, ಮಹಾವ್ರತ, ಕಾಳಾಮುಖ, ಕಾಪಾಲಿಕ, ಪಾಶುಪತ ಎಂಬ ಆರು ಪಂಗಡಗಳು ಸೇರಿವೆ.

ನಾಥಪಂಥದ ಮೂಲಪುರುಷರು ಐದು ಜನ ಸಿದ್ಧಯೋಗಿಗಳು. ಅವರಲ್ಲಿ ಹಿರಿಯವರು ಗೋರಖನಾಥರು (ಗೋರಕ್ಷನಾಥರು). ಶ್ರೀ ಮೀನನಾಥ, ಹಾದಿಪಾನಾಥ (ಜಾಲಂಧರ ನಾಥ), ಕಾಣುಪಾನಾಥ, ಚಾರಂಗೀನಾಥ ಎನ್ನುವವರು ಈ ಐವರಲ್ಲಿ ಉಳಿದ ನಾಲ್ವರು. ಇನ್ನೊಂದು ಸಾಂಪ್ರದಾಯಿಕ ಹೇಳಿಕೆಯಂತೆ ಮತ್ಸ್ಯೇಂದ್ರನಾಥ, ಗೋರಖನಾಥ, ಆದಿನಾಥ, ವಿರೂಪಾಕ್ಷನಾಥ, ನಾಗಾರ್ಜುನನಾಥ, ಮೇಘನಾಥ, ರೇವಣನಾಥ, ಕಣೇರಿನಾಥ, ಜಾಲಂಧರನಾಥ ಎಂಬ ಒಂಬತ್ತು ಮಂದಿ ಸಿದ್ಧಯೋಗಿಗಳು ಈ ನಾಥಸಂಪ್ರದಾಯವನ್ನು ಪ್ರಾರಂಭಿಸಿದರು ಎಂದು ತಿಳಿದುಬರುತ್ತದೆ. ಇವರನ್ನು ನವನಾಥರು ಎಂದು ಹೇಳಿ ಈ ಪಂಥದವರನ್ನು ನವನಾಥ ಪಂಥದವರು ಎಂದೂ ಹೇಳುತ್ತಾರೆ.

ನಾಥಪಂಥವು ಹಠಯೋಗಸಾಧನೆಗೆ ವಿಶೇಷವಾಗಿ ಪ್ರಾಮುಖ್ಯತೆಯನ್ನು ನೀಡಿರುತ್ತದೆ. ದೇಹವನ್ನು ಯೋಗಾಭ್ಯಾಸದಿಂದ ದೃಢಪಡಿಸಿ, ಇಂದ್ರಿಯಗಳನ್ನು ಜಯಿಸಿ, ಶಿವಶಕ್ತಿಯ ದಿವ್ಯಸಾನ್ನಿಧ್ಯವನ್ನು ಪಡೆಯಬೇಕು ಎನ್ನುವುದು ಈ ಪಂಥದವರ ನಿಲವು. ಈ ದೃಷ್ಟಿಯಲ್ಲಿ ಸಾಧಕನಿಗೆ ನೆರವಾಗುವಂತೆ ತತ್ತ್ವ, ಅನುಷ್ಠಾನಗಳ ಬಗ್ಗೆ ಮಾರ್ಗ

ದರ್ಶನ ಮಾಡುವಂತಹ ವಿಪುಲವಾದ ಶಾಸ್ತ್ರಗ್ರಂಥಗಳು ಈ ನಾಥಪಂಥದಲ್ಲಿ ಮೂಡಿ ಬಂದಿರುತ್ತವೆ.

ಶಿವನೇ ಸರ್ವಸ್ವ. ಅವನು ಸವಶಕ್ತ. ಅವನಲ್ಲಿ ಅಡಗಿರುವ ಚಾಲನ, ಸೃಷ್ಟಿಯು ಚೈತನ್ಯವೇ ಶಕ್ತಿ. ಶಿವ-ಶಕ್ತಿಯರಲ್ಲಿ ಭೇದವಿಲ್ಲ.

> ಶಿವಸ್ಯಾಭ್ಯಂತರೇ ಶಕ್ತಿಃ ಶಕ್ತಿರಭ್ಯಂತರೇ ಶಿವಃ ।
> ಅಂತರವತ್ ನೈವ ಪಶ್ಯಾಮಿ ಚಂದ್ರಚಂದ್ರಿಕಾಯೋರಿವ ॥
>
> —ಸಿದ್ಧಸಿದ್ಧಾಂತಸಂಗ್ರಹ, ೪-೩೭

(ಶಿವನಲ್ಲಿ ಶಕ್ತಿ ಇದೆ. ಶಕ್ತಿಯಲ್ಲಿ ಶಿವನಿದ್ದಾನೆ. ಅವರೀರ್ವರಲ್ಲಿ ವ್ಯತ್ಯಾಸ ಕಾಣುತ್ತಿಲ್ಲ. ಶಿವಶಕ್ತಿಯರು ಚಂದ್ರ ಮತ್ತು ಚಂದ್ರನ ಬೆಳಕಿನಂತೆ ಅನ್ಯೋನ್ಯ-ಅವಿಭಾಜ್ಯ.)

ಜಗದ ಸೃಷ್ಟಿಸ್ಥಿತಿಸಂಹಾರಗಳಿಗೆ, ಜನಕೋಟಿಯ ಆಗುಹೋಗುಗಳಿಗೆಲ್ಲ ಶಿವ-ಶಕ್ತಿಯರೇ ಆಧಾರ. ಶಿವಶಕ್ತಿಯರು ಪುರುಷಪ್ರಕೃತಿರೂಪದಲ್ಲಿ—ಪುರುಷ-ಸ್ತ್ರೀರೂಪದಲ್ಲಿ, ಪರಮೇಶ್ವರ ಪರಮೇಶ್ವರಿ ರೂಪದಲ್ಲಿ ಭಕ್ತರ ಪಾಲಿಗೆ ಪ್ರಕಟಗೊಳ್ಳುತ್ತಾರೆ. ಗುರುವಿನ ಮಾರ್ಗದರ್ಶನದಂತೆ ಹಠಯೋಗ, ಮಂತ್ರಯೋಗ, ಭಕ್ತಿಯೋಗ ಇವುಗಳ ಮೂಲಕ ಶಿವ-ಶಕ್ತಿಯರ ಸಾಕ್ಷಾತ್ಕಾರ ಸಾಧ್ಯವಾಗುತ್ತದೆ. ಸಾಧಕರಿಗೆ ದೇಹವೆಂಬ ದೇಗುಲದಲ್ಲಿ, ಜಗತ್ತೆಂಬ ವಿಶಾಲಮಂದಿರದಲ್ಲಿ ಶಿವ-ಶಕ್ತಿಯರ ದರ್ಶನ ಲಭಿಸುತ್ತದೆ. ಅದರಿಂದ ಜೀವನ ಬಂಧನ ಹರಿದು ಮೋಕ್ಷಪ್ರಾಪ್ತಿಗೆ ಅನುಕೂಲವಾಗುತ್ತದೆ. ಇದು ನಾಥಪಂಥದ ಸಂದೇಶಸಾರ.

ನಾಥ ಸಂಪ್ರದಾಯದವರಿಗೆ ಕಾಲಭೈರವ, ಕಾಳಭೈರವ ಪಂಥದವರು ಎಂದೂ ಹೇಳುತ್ತಾರೆ. ಕಾಳಿ ಎಂದರೆ ಶಕ್ತಿ. ಭೈರವ ಎಂದರೆ ಶಿವ. ಒಟ್ಟಿನಲ್ಲಿ ಶಿವಶಕ್ತಿಯರ ಪೂಜಕರು ಎಂದು ತಾತ್ಪರ್ಯ. ನಾಥಸಂಪ್ರದಾಯದ ಗುರುಗಳಲ್ಲಿ ಮುಖ್ಯವಾಗಿ ಮಠಾಧಿಪತಿಗಳು ಮತ್ತು ಜೋಗಿಸ್ವಾಮಿಗಳು ಎಂದು ಎರಡು ವರ್ಗದವರಿರುತ್ತಾರೆ. ಮಠಾಧಿಪತಿಗಳು ಎಂದರೆ ನಾಥಸಂಪ್ರದಾಯದಂತೆ ಸನ್ಯಾಸದೀಕ್ಷೆಪಡೆದು ಗುರುಪೀಠಾಧಿಪತಿಗಳಾಗಿ ಮಠವಾಸಿಗಳಾಗಿರುತ್ತಾರೆ. ಅವರು ತಮ್ಮ ಕಿವಿಗಳನ್ನು ಅಗಲವಾಗಿ ತೂತು ಮಾಡಿಕೊಂಡು ದರ್ಶನ ಎಂಬ ಹೆಸರುಳ್ಳ ಭಾರವಾದ ಉಂಗುರವನ್ನು ತೊಟ್ಟುಕೊಂಡಿರುತ್ತಾರೆ. ಜೋಗಿಗಳೆಂದರೆ ಪೀಠಾಧಿಪತಿಗಳಲ್ಲ. ವಿಭೂತಿ ಧರಿಸಿ, ತ್ರಿಶೂಲಧಾರಿಗಳಾಗಿ, ಜಿಂಕೆ ಚರ್ಮವನ್ನು ಹೊದೆದು ಊರಿಂದೂರಿಗೆ ಸಂಚರಿಸುತ್ತಾ, ನಾಥಸಂಪ್ರದಾಯದ ಗುರುಮಠಗಳಿಗೆ ಜನರಿಂದ ಕಾಣಿಕೆ ವಸೂಲು ಮಾಡುವುದು, ಭಕ್ತರ ಮನೆಗಳಲ್ಲಿ ನಡೆಯುವ ಧಾರ್ಮಿಕ ಸಮಾರಂಭಗಳಲ್ಲಿ ಪೌರೋಹಿತ್ಯ ವಹಿಸುವುದು ಇವರ ಮುಖ್ಯಕೆಲಸಗಳಾಗಿವೆ. ಇವರು ಪೀಠಾಧಿಪತಿಗಳು ಅಲ್ಲದಿದ್ದರೂ ವಿರಕ್ತರೇ ಆಗಿರುತ್ತಾರೆ. ಇವರನ್ನು ಭೈರವ ಪಂಥದ ಯೋಗಿಗಳು, ಭೈರವಯೋಗಿಗಳು ಎಂದು ಕರೆಯುತ್ತಾರೆ. ಅದು ಜನಬಳಕೆಯಲ್ಲಿ ಭೈರಾಗಿ ಎಂದು ಪ್ರಸಿದ್ಧವಾಗಿರುತ್ತದೆ. ಭೈರವಯೋಗಿಗಳು ನಾಥಸಂಪ್ರದಾಯದ ಮಠ, ಮಂದಿರಗಳಲ್ಲಿ ನೆಲಸುತ್ತಾರೆ.

ಕಾಶಿಯಲ್ಲಿನ ಭೈರವನಾಥ, ಬಿಹಾರದ ಸೋನೇಪುರದಲ್ಲಿರುವ ಹರಿಹರನಾಥ, ಉತ್ತರ

ಪ್ರದೇಶದ ಗೋರಖಪುರದಲ್ಲಿರುವ ಗೋರಖನಾಥ, ಪಂಜಾಬಿನ ತಿಲ್ಲನಾಥ ಈ ಮಂದಿರಗಳು ನಾಥಪಂಥದವರ ಪ್ರಮುಖ ಪುಣ್ಯಕೇಂದ್ರಗಳು ಎಂದು ಪ್ರಖ್ಯಾತವಾಗಿವೆ. ಪುರಿಯ ಜಗನ್ನಾಥ, ಹಿಮಾಲಯದ ಕೇದಾರನಾಥ, ಚಿತ್ರಗಾಂಗಿನ ಪಾರ್ಶ್ವನಾಥ, ನೇಪಾಳದ ಪಶುಪತಿನಾಥ ದೇವಾಲಯಗಳು ಒಂದು ಕಾಲದಲ್ಲಿ ನಾಥಸಂಪ್ರದಾಯದ ಚಟುವಟಿಕೆಯ ಮಹಾಕೇಂದ್ರಗಳು ಆಗಿದ್ದು ಇಂದಿಗೂ ನಾಥಸಂಪ್ರದಾಯದವರಿಗೆ ಪಾವನಪ್ರಸಿದ್ಧಿಯ ಪುಣ್ಯತಾಣಗಳು ಆಗಿವೆ.*

## ೩. ಶ್ರೀ ವಾಸವೀ ಪಂಥ

ಆರ್ಯವೈಶ್ಯ ಕುಲದವರ ಅಧಿಷ್ಠಾತ್ರಿದೇವಿ ಶ್ರೀ ವಾಸವಾಂಬಾ. ಶ್ರೀಕನ್ಯಕಾಪರಮೇಶ್ವರಿ ಎಂಬುದು ಆಕೆಯ ಪರ್ಯಾಯ ಹೆಸರು. ಶ್ರೀವಾಸವಾಂಬೆಯ ಅನುಯಾಯಿಗಳೇ ವಾಸವೀ ಪಂಥದವರು. ವೈದಿಕ ಚಾತುರ್ವರ್ಣ್ಯ ವಿಭಾಗದಲ್ಲಿ ಮೂರನೇ ವರ್ಗದವರಾದ ವೈಶ್ಯಕುಲದವರು ವೃತ್ತಿಯಿಂದ ವಣಿಜರು. ಸಿರಿಸಂಪತ್ತಿನ ಅಧಿದೇವತೆ ವೈಶ್ಯರ ಮನೆಯಲ್ಲಿ ನೆಲೆನಿಂತಿದ್ದಾಳೆ ಎಂಬಷ್ಟರಮಟ್ಟಿಗೆ ಸಾಮಾನ್ಯವಾಗಿ ವೈಶ್ಯರೆಲ್ಲರೂ ಶ್ರೀಮಂತರಾಗಿರುತ್ತಾರೆ. ಹೀಗೆ ಲಕ್ಷ್ಮೀಕಟಾಕ್ಷಕ್ಕೆ ವಿಶೇಷವಾಗಿ ಒಳಗಾಗಿರುವ ವೈಶ್ಯರ ವೃತ್ತಿ, ಧಾರ್ಮಿಕ ಆಚರಣೆಗಳಿಂದ ಆರ್ಯಧರ್ಮಸಂಪನ್ನರು, ಆರ್ಯಜನಾಂಗದವರು ಆಗಿರುತ್ತಾರೆ. ಗಣೇಶ, ಪರಮೇಶ್ವರ ಪಾರ್ವತಿ, ಮಹಾವಿಷ್ಣು, ಮಹಾಲಕ್ಷ್ಮಿ, ವೆಂಕಟೇಶ, ಸುಬ್ರಹ್ಮಣ್ಯ, ನವಗ್ರಹ ದೇವತೆಗಳು ಎಂಬುದಾಗಿ, ವೇದೋಕ್ತ ಏಕದೇವನ ವಿವಿಧ ರೂಪಗಳನ್ನು ಆರಾಧಿಸುವ ಆರ್ಯವೈಶ್ಯರಿಗೆ ಈಗ್ಗೆ ಎಂಟು ಶತಮಾನಗಳಿಂದ ಈಚೆಗೆ ಆದಿಶಕ್ತಿ ಶ್ರೀ ಕನ್ಯಕಾಪರಮೇಶ್ವರಿ–ಮಹಾಮಾಯಿ ಶ್ರೀ ವಾಸವಾಂಬೆ ಕುಲದೇವತೆ ಆಗಿರುತ್ತಾಳೆ. ಶ್ರೀ ವಾಸವೀದೇವಿಯ ದಿವ್ಯಮಂದಿರಗಳು ದೇಶದ ವಿಭಿನ್ನ ಭಾಗಗಳಲ್ಲಿ ಸ್ಥಾಪನೆಗೊಂಡಿದ್ದು ಶ್ರೀ ದೇವಿಯ ಪೂಜೆ–ಆರಾಧನೆಗಳು 'ತುಂಬ ಕಟ್ಟುನಿಟ್ಟಾಗಿ ಅಲ್ಲಲ್ಲಾ ವೈಭವದಿಂದ ನಡೆಯುತ್ತಿವೆ.

ಶ್ರೀ ಕನ್ಯಕಾಪರಮೇಶ್ವರಿ ಆದಿಶಕ್ತಿ ಮಹಾದೇವಿಯ ಅವತಾರವೆಂಬುದು ಆರ್ಯವೈಶ್ಯ ಜನಾಂಗದವರಲ್ಲಿ ನಡೆದುಕೊಂಡು ಬಂದ ಶ್ರದ್ಧೆ. ಪೀಳಿಗೆಯಿಂದ ಪೀಳಿಗೆಗೆ ಸಾಗಿ ಬಂದ ಧಾರ್ಮಿಕ ಅನುಭವಸತ್ಯ. ಶ್ರೀ ವಾಸವೀದೇವಿ ಪೌರಾಣಿಕ ಹಿನ್ನೆಲೆಯ ಚಾರಿತ್ರಿಕ ಅವತಾರ. ಶ್ರೀ ವಾಸವೀದೇವಿಯ ಇಹಲೋಕದ ಅವತಾರ ಜೀವನದಲ್ಲಿ ನಡೆದ ಘಟನೆಗಳ ಬಗ್ಗೆ ಐತಿಹಾಸಿಕ ಉಲ್ಲೇಖಗಳಿವೆ. ಲೋಕಹಿತಕ್ಕಾಗಿ, ಧರ್ಮರಕ್ಷಣೆಗಾಗಿ ತನ್ನನ್ನೇ ಅಗ್ನಿಕುಂಡದಲ್ಲಿ ಬಲಿದಾನವಾಗಿ ಅರ್ಪಿಸಿಕೊಂಡ ಮಹಾಶಕ್ತಿದೇವತೆ ಶ್ರೀ ಕನ್ಯಕಾಪರಮೇಶ್ವರಿ. ಕನ್ನೆಯಾಗಿಯೇ ಮರ್ತ್ಯಲೋಕದಲ್ಲಿ ತನ್ನ ಅವತಾರಲೀಲೆಯನ್ನು

---

* ಕನ್ನಡ ನಾಡಿನ ಮಂಡ್ಯ ಜಿಲ್ಲೆಯ ನಾಗಮಂಗಲ ಊರಿನ ಬಳಿ ಇರುವ ಆದಿಚುಂಚನಗಿರಿ ಜಗದ್ಗುರು ಮಠವು ನಾಥಪಂಥಕ್ಕೆ ಸೇರಿದ ಭೈರವ ಸಂಪ್ರದಾಯದ ಪ್ರಮುಖ ಮಠವಾಗಿರುತ್ತದೆ.

ಪರಿಸಮಾಪ್ತಿಗೊಳಿಸಿದ ಪ್ರಾತಃಸ್ಮರಣೀಯಳಾದ ಪುಣ್ಯದೇವಿ ಅವಳು.

ಆರ್ಯ ವೈಶ್ಯ ಜನಾಂಗದವರು ವೇದಕಾಲದಿಂದಲೇ ಬೆಳೆದುಬಂದವರು. ಕಾಲವು ಸರಿದಂತೆ ಇವರನ್ನು ಧನಧಾನ್ಯಸಂಪನ್ನ ವರ್ಗದವರು, ವ್ಯಾಪಾರ, ಕೃಷಿ, ಪಶುಪಾಲನೆ ವೃತ್ತಿಯಲ್ಲಿ ಕುಶಲರು ಎಂದು ಸಮಾಜವು ಗೌರವಿಸುವಂತಾಯಿತು. ಸಮಾಜದಲ್ಲಿ ಸಿರಿಸಂಪನ್ನರಾದ ಈ ಜನಾಂಗದವರು ಶ್ರೇಷ್ಠರು ಎಂದು ಮಾನ್ಯತೆಪಡೆಯುವಂತಾಯಿತು. ಆರ್ಯ ಎಂದರೆ ಶ್ರೇಷ್ಠ ಎಂದು ತಾತ್ಪರ್ಯ. ಹಿಂದೆ 'ಖಟ್ಟಿ' ಎನ್ನುವ ಜನಾಂಗವು ಭಾರತದಲ್ಲಿ ರಾಜ್ಯಭಾರ ಮಾಡುತ್ತಿದ್ದು ಅವರು ಉತ್ತರ ಭಾರತದಿಂದ ಅಲ್ಲಿ ಹಲವಾರು ಪ್ರಬಲ ಶತ್ರುಗಳ ದಾಳಿಗಳಿಂದಾಗಿ ಕಂಗೆಟ್ಟು ದಕ್ಷಿಣ ಭಾರತಕ್ಕೆ ಬರುವಂತಾಯಿತು. ಬಂದವರು ಆಂಧ್ರ ಪ್ರದೇಶದಲ್ಲಿ ನೆಲೆನಿಂತರು. ಅವರಿಗೆ 'ಖಟ್ಟಿ' ಎಂಬುದರ ಬದಲು ಜನಬಳಕೆಯಲ್ಲಿ ಶ್ರೇಷ್ಠಿ, ಚೆಟ್ಟಿ ಎಂಬ ಹೆಸರು ಕೂಡಿಬಂತು. ಮುಂದೆ ಅದು ಭಾಷಾಭೇದದಿಂದ ಶೆಟ್ಟಿ ಎಂದೂ ಪರಿವರ್ತನೆಗೊಂಡು ಬಳಕೆಯಲ್ಲಿ ಸೇರಿಬಂತು. ಆರ್ಯ ವೈಶ್ಯ ಕುಲದವರ ಹೆಸರಿನ ಮುಂದೆ ಶೆಟ್ಟಿ, ಚೆಟ್ಟಿ, ಶ್ರೇಷ್ಠಿ ಎಂದು ಕುಲಸಂಕೇತನಾಮ ಕೂಡಿಬರುವಂತಾಯಿತು.

ಆರ್ಯ ವೈಶ್ಯರು ಭಾರತದಲ್ಲಿ ರಾಜ್ಯಭಾರ ಮಾಡಿದುದಕ್ಕೆ ಐತಿಹ್ಯವಿದೆ. ಇತಿಹಾಸ ಪ್ರಸಿದ್ಧವಾದ ಗುಪ್ತವಂಶದ ಅರಸರು ವೈಶ್ಯಕುಲೋದ್ಭವರು. ಮುಂದೆ ಗುಪ್ತವಂಶದಿಂದ ಕವಲೊಡೆದುಹೋಗಿ ಅನೇಕ ಎಡೆ ನಾಯಕರು, ಚಿಕ್ಕರಾಜರು ರಾಜ್ಯಭಾರ ಮಾಡುವಂತಾಯಿತು. ಹಾಗೆ ಆಳಿದವರಲ್ಲಿ ಆಂಧ್ರ ಪ್ರದೇಶದ ಪೆನುಗೊಂಡೆಯ ಕುಸುಮಶ್ರೇಷ್ಠಿ ಎಂಬವನು ಪ್ರಖ್ಯಾತನು. ಈತನು ವಿಶಾಖಪಟ್ಟಣ, ನರಸಾಪುರ, ಏಲೂರು, ಭೀಮಾವರ, ಶಿವಪುರ ಮೊದಲಾದ ಹದಿನೆಂಟು ಪಟ್ಟಣಗಳ ಅಧಿಪತಿಯಾಗಿದ್ದನು. ಅಲ್ಲದೆ ಏಳುನೂರ ಹದಿನಾಲ್ಕು ವೈಶ್ಯ ವಂಶಗಳ ಗೋತ್ರನಾಯಕನಾಗಿದ್ದನು. ರಾಜಾ ಕುಸುಮಶ್ರೇಷ್ಠಿಗೆ ಪುತ್ರಸಂತಾನವಿಲ್ಲದಿದ್ದುದರಿಂದ ಸಂತಾನಪ್ರಾಪ್ತಿಗಾಗಿ ಪುತ್ರಕಾಮೇಷ್ಟಿ ಯಾಗವನ್ನು ಮಾಡಿದನು. ಅದರ ಫಲವಾಗಿ ಭಗವತ್ಕೃಪೆಯಿಂದ ಒಂದು ಗಂಡುಮಗು ಹಾಗೂ ಹೆಣ್ಣುಮಗುವನ್ನು ಪಡೆದನು. ಗಂಡುಮಗುವಿಗೆ ವಿರೂಪಾಕ್ಷ ಎಂದೂ ಹೆಣ್ಣುಮಗುವಿಗೆ ವಾಸವಿ ಎಂದೂ ಹರ್ಷೋತ್ಸಾಹದಿಂದ ನಾಮಕರಣ ಮಾಡಲಾಯಿತು.

ವಾಸವಿ ಆರ್ಯ ವೈಶ್ಯ ಜನಾಂಗದ ಆರಾಧ್ಯದೇವಿಯಾಗಿ ಅರಳಿಬಂದ ಕಥೆ ತುಂಬ ಅದ್ಭುತರಮ್ಯವಾಗಿದೆ :

ವಾಸವಿ ಎಳೆಯ ಹರೆಯದಲ್ಲಿ ಪರಶಿವನ ಪ್ರಾರ್ಥನೆ ಮಾಡುತ್ತಿದ್ದಳು. ದಿನದ ಹೆಚ್ಚಿನ ಭಾಗಗಳಲ್ಲಿ ಶಿವಧ್ಯಾನತತ್ಪರಳಾಗಿರುತ್ತಿದ್ದಳು. ಲೌಕಿಕ ವಿದ್ಯಾಭ್ಯಾಸದಲ್ಲಿ ಅವಳಿಗೆ ಹೆಚ್ಚಿನ ಆಸಕ್ತಿ ಇರಲಿಲ್ಲ. ಹಾಗಿದ್ದರೂ ಕುಶಾಗ್ರಮತಿಯಾಗಿದ್ದ ಬಾಲಕಿ ವಾಸವಿಯು ವಿಚಾರಗಳನ್ನು ತುಂಬ ಶೀಘ್ರವಾಗಿ ಗ್ರಹಿಸಿಕೊಳ್ಳುತ್ತಿದ್ದಳು. ವಾಸವಿ ಬೆಳೆದು ದೊಡ್ಡವಳಾದಂತೆ ಭಗವಂತನ ಚಿಂತನೆಯಲ್ಲಿ ತಲ್ಲೀನಳಾಗಲು ಹೆಚ್ಚು ಉತ್ಸುಕಳಾದಳು. ಶಿವಪರಮಾತ್ಮನಲ್ಲದೆ ತನಗೆ ಬೇರಿನ್ನಾರೂ ಪತಿ ಇಲ್ಲ—ಪತಿಯಾಗಲಾರರು ಎಂದು ತನ್ನ ಮನದ ಇಂಗಿತವನ್ನು ತಾಯಿಯೊಡನೆ ಸ್ಪಷ್ಟಪಡಿಸಿದಳು. ತನ್ನ

ಮನೋಭೀಷ್ಟಸಿದ್ಧಿಗಾಗಿ ಪರಮೇಶ್ವರನನ್ನು ಕುರಿತು ತಪಸ್ಸುಮಾಡಬೇಕೆಂದು ವಾಸವಿ ನಿರ್ಧರಿಸಿದಳು.

ವಾಸವಿಯ ಈ ಅಸಾಧಾರಣವಾದ ಇಚ್ಛೆ ಅವಳ ತಾಯಿತಂದೆಯರಿಗೆ ತುಂಬ ಆಶ್ಚರ್ಯ—ಆತಂಕಗಳನ್ನು ಉಂಟುಮಾಡಿತು. ವಾಸವಿಯ ವಿದ್ಯಾಗುರುಗಳಾದ ಭಾಸ್ಕರಾಚಾರ್ಯರಲ್ಲಿ ಕುಸುಮಶ್ರೇಷ್ಠಿ ದಂಪತಿಗಳು ಒದಗಿಬಂದಿರುವ ಮಹತ್ತರವಾದ ಸಮಸ್ಯೆ ಬಗ್ಗೆ ವಿಚಾರಮಾಡಿದರು. ಭಾಸ್ಕರಾಚಾರ್ಯರು ವಾಸವಿಯೆಂದರೆ ಸಾಮಾನ್ಯ ಕನ್ಯೆಯಲ್ಲ, ಪರಾಶಕ್ತಿ ಪಾರ್ವತೀದೇವಿಯೇ ವ್ಯಕ್ತಳೆದು ಭೂಮಿಗಿಳಿದು ಬಂದ ಅಪರೂಪ ದಿವ್ಯಕನ್ಯೆ ಎಂದರು. ಹಾಗಾಗಿ ಅವಳಿಗೆ ಶಿವಧ್ಯಾನಕ್ಕೆ, ತಪೋಜೀವನಕ್ಕೆ ಬೇಕಾದ ವ್ಯವಸ್ಥೆಮಾಡಬೇಕೆಂದು ಸೂಚಿಸಿದರು. ಅದರಂತೆ ರಾಜಾ ಕುಸುಮಶ್ರೇಷ್ಠಿಯು ಪುರೋಪವನ ಎಂಬಲ್ಲಿ ವಾಸವಿಯು ತಪೋನಿರತಳಾಗಿ ಶಿವಲಿಂಗಸಾನ್ನಿಧ್ಯದಲ್ಲಿ ವಾಸಿಸಲು ರಾಜೋಚಿತ ಗೌರವಗಾಂಭೀರ್ಯಗಳಿಗೆ ಒಪ್ಪುವಂತೆ ವ್ಯವಸ್ಥೆಮಾಡಿದನು.

ರಾಜಾ ಕುಸುಮಶ್ರೇಷ್ಠಿಯು ಪೂರ್ವಚಾಲುಕ್ಯ ವಂಶದ ಏಳನೆಯ ವಿಷ್ಣುವರ್ಧನನ ಆಶ್ರಿತ ಸಾಮಂತರಾಜನಾಗಿದ್ದನು. ವಿಷ್ಣುವರ್ಧನನು ತನ್ನ ಆಶ್ರಿತರಾಜರನ್ನು ಭೇಟಿಯಾಗಲು ಸಂಚಾರ ಕೈಗೊಂಡಂತೆ ಕುಸುಮಶ್ರೇಷ್ಠಿಯ ರಾಜ್ಯಕ್ಕೂ ಬಂದನು. ಬಂದವನು ಪುರದ ಉಪವನದಲ್ಲಿ ತಪೋನಿರತಳಾಗಿದ್ದ ರಾಜಕನ್ಯೆ ವಾಸವಿಯನ್ನು ಕಂಡು ಆಕೆಯಲ್ಲಿ ಅನುರಾಗ ಉಂಟಾಗಿ ಅವಳನ್ನು ವಿವಾಹವಾಗಲು ಬಯಸಿದನು. ವಿವಾಹಕ್ಕೆ ಒಪ್ಪಿ ಕನ್ಯೆ ಕೈಸೇರದಿದ್ದರೆ ಬಲಪ್ರಯೋಗದಿಂದ ವಶಪಡಿಸಿಕೊಂಡು ಹೋಗುವೆನು ಎಂದು ವಿಷ್ಣುವರ್ಧನನು ಬೆದರಿಸಿದನು. ಆದರೆ ವಾಸವಿಯು ವಿಷ್ಣುವರ್ಧನನನ್ನು ವರಿಸಲು ಒಪ್ಪಲಿಲ್ಲ. ವಾಸವಿ ತಾಯಿತಂದೆಯರು ಸಮ್ಮತಿಸಲಿಲ್ಲ. ಕುಸುಮಶ್ರೇಷ್ಠಿಯ ಮುಖಂಡತ್ವದಲ್ಲಿದ್ದ ೭೫೦ ಗೋತ್ರವಂಶದವರಲ್ಲಿ ೬೧೨ ಗೋತ್ರವಂಶದವರು ಈ ವಿವಾಹವಾದರೆ ಒಳಿತೆಂದು ಅಭಿಪ್ರಾಯಪಟ್ಟು ವಿಷ್ಣುವರ್ಧನನ ಕಡೆಗೆ ಬೆಂಬಲವಿತ್ತರು. ಆದರೆ ಉಳಿದ ೧೦೨ ಗೋತ್ರವಂಶದವರು ಧರ್ಮವಿರುದ್ಧವಾದ ಈ ಲಗ್ನಸಂಬಂಧಕ್ಕೆ ಒಪ್ಪಲಿಲ್ಲ.

ಆಗ ರಾಜಕನ್ಯೆ ವಾಸವಿಯು ಈ ರೀತಿ ಪರಸ್ಪರ ಒಪ್ಪಿಗೆ ಇಲ್ಲದೆ ವಿವಾಹ ನಡೆಯುವುದು ಇತ್ತಂಡದವರಿಗೂ ಶ್ರೇಯಸ್ಕರವಲ್ಲ. ಕನ್ಯೆಯನ್ನು ಒಪ್ಪಿಗೆ ಇಲ್ಲದಿದ್ದರೂ ಲಗ್ನಕ್ಕಾಗಿ ಬಲಾತ್ಕಾರ ಮಾಡುವುದು ಯಾರಿಗೂ ಒಳಿತಲ್ಲ—ಯೋಗ್ಯವಲ್ಲ. ಅದು ಮಹಾಪಾಪವೇ ಸರಿ. ಹಿಂದೆ ರಾವಣ-ಕೀಚಕಾದಿಗಳಿಗೆ ಸ್ತ್ರೀಯರನ್ನು ಕೆಣಕಲು ಹೋಗಿ ಯಾವ ಗತಿಯಾಯಿತೋ ಅದೇ ಗತಿ ಮಹಾರಾಜಾ ವಿಷ್ಣುವರ್ಧನನಿಗೂ ಕಾದಿದೆ ಎಂದು ಹೇಳಿದಳು. ಮಹಾರಾಜಾ ವಿಷ್ಣುವರ್ಧನನು ಸೈನ್ಯಸಹಿತನಾಗಿ ಮುಂಬರಲಿ. ಅವನನ್ನು ಎಲ್ಲರೂ ಸನ್ನದ್ಧರಾಗಿ ಸಮರದಲ್ಲಿ ಎದುರಿಸಿ ಎಂದು ತನ್ನವರಿಗೆ ಹೇಳಿ ಅವರಲ್ಲಿ ಧೈರ್ಯೋತ್ಸಾಹಗಳನ್ನು ತುಂಬಿದಳು. ವಾಸವಿಯ ಅಣ್ಣ ವಿರೂಪಾಕ್ಷ, ತಂದೆ ಕುಸುಮಶ್ರೇಷ್ಠಿ ಇವರ ನೇತೃತ್ವದಲ್ಲಿ ಸೈನ್ಯವು ಮಹಾರಾಜಾ ವಿಷ್ಣುವರ್ಧನನನ್ನು ಎದುರಿಸಲು ವೀರಾವೇಶದಿಂದ ಕೂಡಿ ಮುನ್ನುಗ್ಗಿ ಹೋಯಿತು. ಇತ್ತ ಕಡೆ ವಾಸವೀದೇವಿಯು ತನ್ನ ಅವತಾರಲೀಲೆ ಮುಗಿಯಿತು, ಶಿಷ್ಟಪರಿಪಾಲನೆ-ದುಷ್ಟಸಂಹಾರಕಾರ್ಯ ನಡೆಯಿತು ಎಂದು ತನ್ನ ತಾಯ ಬಳಿ ಹೇಳಿ ವಂಶಜರು ಸುಖಸಮೃದ್ಧಿಯಿಂದ ಕೂಡಿ ಬಾಳಲಿ,

ಲೋಕಕ್ಕೆ ಒಳಿತಾಗಲಿ ಎಂದು ಹಾರೈಸಿ ಅಗ್ನಿಪ್ರವೇಶ ಮಾಡಿ ಕಣ್ಮರೆಯಾದಳು. ಅಷ್ಟರಲ್ಲಿ ಕುಸುಮಶ್ರೇಷ್ಠಿಯು ರಾಜಾ ವಿಷ್ಣುವರ್ಧನನನ್ನು ಸಂಹರಿಸಿ ವಿಜಯಶ್ರೀಯನ್ನು ಒಲಿಸಿಕೊಂಡು ತನ್ನ ಪುರಪ್ರವೇಶ ಮಾಡಿದನು. ಪುತ್ರಿ ವಾಸವಿಯ ಬಲಿದಾನದ ದಾರುಣವಾರ್ತೆ ತಿಳಿದು ಅತ್ಯಂತ ಶೋಕಗೊಂಡನು. ಕುಸುಮಶ್ರೇಷ್ಠಿ ದಂಪತಿಗಳು ಹಾಗೂ ಅವರ ನೇತೃತ್ವದಲ್ಲಿ ನಂಬಿಕೆ ಇಟ್ಟಿದ್ದ ೧೦೨ ಗೋತ್ರವಂಶಜರು ರಾಜಕನ್ಯೆ ವಾಸವಿಯು ಇಳೆಯಿಂದ ಕಣ್ಮರೆಯಾದಬಳಿಕ ದೇಹಧಾರಿಗಳಾಗಿ ತಾವು ಭೂಮಿಯಲ್ಲಿ ಉಳಿದು ಪ್ರಯೋಜನವಿಲ್ಲವೆಂದು ನಿಶ್ಚಯಿಸಿ ಅವರೆಲ್ಲರೂ ವಾಸವಿ ಧುಮುಕಿದ ಅಗ್ನಿ ಕುಂಡಕ್ಕೆ ಇಳಿದು ಪ್ರಾಣಾರ್ಪಣೆ ಮಾಡಿದರು.

ರಾಜಕನ್ಯೆ ವಾಸವಿಯು ಧರ್ಮಕ್ಕಾಗಿ, ಸತ್ಯಕ್ಕಾಗಿ ಮಾಡಿದ ಬಲಿದಾನ, ಅವಳ ಹಾದಿಯಲ್ಲೇ ಪ್ರಾಣಾರ್ಪಣ ಮಾಡಿ ಮುನ್ನಡೆದ ಕುಸುಮಶ್ರೇಷ್ಠಿ ಹಾಗೂ ೧೦೨ ಗೋತ್ರದ ವೈಶ್ಯ ವಂಶದವರ ಆದರ್ಶ ತ್ಯಾಗ ಇವುಗಳಿಂದ ವೈಶ್ಯ ಸಮಾಜದಲ್ಲಿ ಮಹತ್ತರವಾದ ಆಧ್ಯಾತ್ಮಿಕ ಜಾಗೃತಿ ಉಂಟಾಯಿತು. ರಾಜಕುಮರಿ ವಾಸವಿ ಆರ್ಯ ವೈಶ್ಯ ಕುಲದೇವತೆಯಾಗಿ, ಶ್ರೀ ಕನ್ಯಕಾಪರಮೇಶ್ವರಿ, ಶ್ರೀ ವಾಸವಾಂಬಾ ಎಂದು ಪೂಜೆಗೌರವಗಳಿಗೆ ಪಾತ್ರಳಾದಳು. ಆರ್ಯ ವೈಶ್ಯ ಜನಾಂಗದವರಿಗೆ ವಾಸವಾಂಬಾ ಆದಿಶಕ್ತಿ ಪರಮೇಶ್ವರಿಯ ದಿವ್ಯ ಅವತಾರ ಎನ್ನುವುದು ಸ್ಪಷ್ಟವಾಯಿತು. ಬದುಕಿಗೆ ಬೆಳಕು-ಬಲ-ರಕ್ಷಣೆಗಳು ಶ್ರೀ ವಾಸವಾಂಬಾ ದೇವಿಯಿಂದ ಆರ್ಯ ವೈಶ್ಯ ಜನಾಂಗ ದವರಿಗೆ ದೊರಕುವಂತೆ ಆಯಿತು.

ಸತ್ಯಕ್ಕಾಗಿ, ಧರ್ಮಕ್ಕಾಗಿ ಎಂತಹ ತ್ಯಾಗಕ್ಕೂ ಸಿದ್ಧರಿರಬೇಕು. ಸತ್ಯಕ್ಕೆ, ಧರ್ಮಕ್ಕೆ ಜಯ ಇದ್ದೇ ಇದೆ. ಸತ್ಯಸಂಪನ್ನವಾದ ನಿರ್ಮಲ ಬದುಕಿನಿಂದ ಬರುವ ಸುಖ-ಆನಂದಗಳೇ ಜೀವನದ ನಿಜವಾದ ಬಲ ಮತ್ತು ಗುರಿ ಎಂಬುದನ್ನು ಶ್ರೀ ವಾಸ ವಾಂಬೆಯು ತನ್ನ ದಿವ್ಯಜೀವನದ ಆದರ್ಶದಿಂದ ಇಳೆಗೆ ಸಾರಿರುತ್ತಾಳೆ. ಅದನ್ನು ತಮ್ಮ ಬಾಳಿನಲ್ಲಿ ಅಳವಡಿಸಿಕೊಂಡು ಬಾಳುವುದನ್ನು ಗುರಿಯಾಗಿ ಇಟ್ಟುಕೊಂಡಿರುವ ಆರ್ಯ ವೈಶ್ಯ ಜನಾಂಗದ ಕುಲದೇವತೆ ಶ್ರೀ ಕನ್ಯಕಾಪರಮೇಶ್ವರಿಯ ಪೂಜೆ, ಆರಾಧನೆಗಳೆಲ್ಲ ಸನಾತನ ಧರ್ಮದ ಆಗಮೋಕ್ತ ಪರಂಪರೆಯಂತೆ ನಡೆಯುತ್ತಿದೆ. ಶ್ರೀ ವಾಸವಾಂಬಾ ಮಹಾದೇವಿಯನ್ನು ಕುಲದೇವತೆ ಎಂದು ನಂಬಿ ಆರಾಧಿಸುವುದು ಆರ್ಯ ವೈಶ್ಯ ಜನಾಂಗದ ವೈಶಿಷ್ಟ್ಯವಾಗಿದ್ದು ಅವರು ಶ್ರೀ ವಾಸವಾಂಬಾ ಪಂಥ ದವರು ಎಂದು ಮತೀಯವಾದ ಒಳಪಂಗಡದ ಪ್ರಸ್ತಾಪ ಬರುವಾಗ ಮಾತ್ರ ಗುರುತಿನ ಅನುಕೂಲಕ್ಕಾಗಿ ಕರೆಯಲ್ಪಡುತ್ತಿದ್ದಾರೆ. ಆದರೆ ವಾಸವಾಂಬಾ ಪಂಥವೆಂದರೆ ಆದಿ ಶಕ್ತಿಯ ಆರಾಧಕರ ಪಂಥ ಎಂಬುದು ಪೂರ್ತಿ ಸ್ಪಷ್ಟವೇ ಇದೆ.

## ೪. ಸ್ವಾಮಿ ಅಯ್ಯಪ್ಪ ಪಂಥ

ಕೇರಳ ರಾಜ್ಯದ ಶಬರಿಮಲೆ ಶ್ರೀ ಅಯ್ಯಪ್ಪಸ್ವಾಮಿಯ ಅನುಯಾಯಿಗಳೇ ಅಯ್ಯಪ್ಪ ಪಂಥದವರು. ಕೋಟ್ಯಂತರ ಮಂದಿಯ ಪಾಲಿಗೆ ಇಂದು ಶಬರಿಮಲೆ ಶ್ರೀ ಅಯ್ಯಪ್ಪ

ಸ್ವಾಮಿ ಆರಾಧ್ಯದೇವನಾಗಿರುತ್ತಾನೆ. ಹರಿಹರಪುತ್ರನೆಂದು ಭಕ್ತಕೋಟಿಯ ಪಾಲಿಗೆ ಪವಿತ್ರ ಪ್ರಸಿದ್ಧನಾಗಿರುವ ಶ್ರೀ ಅಯ್ಯಪ್ಪಸ್ವಾಮಿ ಹಿಂದೂಧರ್ಮದ ವಿಭಿನ್ನ ಪಂಥದವರಿಂದ ಪೂಜಾರಾಧನೆಗಳನ್ನು ಪಡೆಯುತ್ತಿರುವ ವೈಶಿಷ್ಟ್ಯಪೂರ್ಣ ದೇವಸ್ವರೂಪನಾಗಿದ್ದಾನೆ. ಹಿಂದೂಗಳಲ್ಲದವರಿಂದಲೂ ಭಕ್ತಿಪ್ರಾರ್ಥನೆಗಳಿಗೆ ಪಾತ್ರನಾಗಿರುವ ಪಾವನಮೂರ್ತಿ ಶ್ರೀ ಶಬರಿಗಿರೀಶ ಇತ್ತೀಚಿನ ದಶಕಗಳಲ್ಲಿ ಭಕ್ತಿಮುಕ್ತಿಪ್ರದಾಯಕನೆಂದು ಮಹತ್ಪ್ರಸಿದ್ಧಿಯನ್ನು ಹೊಂದಿರುತ್ತಾನೆ.

ಮಾಲಾಧಾರಣೆ, ಮಂಡಲವ್ರತ, ಶಬರಿಮಲೆಯಾತ್ರೆ, ಸ್ವಾಮಿ ಅಯ್ಯಪ್ಪನ ದರ್ಶನ, ಆರಾಧನೆ, ಮಕರಜ್ಯೋತಿ ದರ್ಶನ, ಮಕರವಿಳಕು ಉತ್ಸವದಲ್ಲಿ ಪಾಲ್ಗೊಳ್ಳುವಿಕೆ ಇವೆಲ್ಲ ಇಂದು ಬಹುಮಂದಿ ಭಕ್ತರ ಪಾಲಿಗೆ ಆನಂದದ ಆಧ್ಯಾತ್ಮಿಕ ತಪಸ್ಸಾಧನೆಗಳಾಗಿವೆ. ಜಾತಿ, ಮತ, ಪಂಥಗಳ ಭೇದಭಾವವಿಲ್ಲದೆ ಅಯ್ಯಪ್ಪಸ್ವಾಮಿಯ ಹೆಸರಿನಲ್ಲಿ ಭಕ್ತರೆಲ್ಲ ಒಂದಾಗಿ ಒಡನಾಡಿ ಶಬರಿಗಿರಿಯಾತ್ರೆ ಮಾಡಿ ಸ್ವಾಮಿದರ್ಶನ ಹೊಂದಿ ಹಿಂದಿರುಗುವುದು ಇಂದು ವರ್ಷಂಪ್ರತಿ ದೇಶದಾದ್ಯಂತ ಕಾಣುತ್ತಿರುವ ವೈಶಿಷ್ಟ್ಯಪೂರ್ಣವಾದ ಧಾರ್ಮಿಕ ವಿಧಿ ಆಗಿರುತ್ತದೆ. ಲಕ್ಷಾಂತರ ಮಂದಿ ಶಬರಿಮಲೈಯಲ್ಲಿ ಶ್ರೀ ಅಯ್ಯಪ್ಪಸ್ವಾಮಿ ಸನ್ನಿಧಿಯಲ್ಲಿ ಮುಖ್ಯವಾಗಿ ಮಕರಸಂಕ್ರಾಂತಿಯ ವಾರ್ಷಿಕ ಮಹಾಪುಣ್ಯಕಾಲದಲ್ಲಿ ಸೇರಿ ಭಗವದ್ದರ್ಶನದಿಂದ ಪುನೀತರಾಗಿ ಬರುತ್ತಿರುವುದು ಜನಜೀವನದಲ್ಲಿ ಹಿಂದೂಧರ್ಮದ ಅಂತಃಸತ್ವದ ಅಭಿವ್ಯಕ್ತಿಯ ಜ್ವಲಂತ ನಿದರ್ಶನ ಆಗಿರುತ್ತದೆ.

'ಸ್ವಾಮಿಯೇ ಶರಣಂ ಅಯ್ಯಪ್ಪ' ಎಂಬ ಅಯ್ಯಪ್ಪ ಪಂಥದ ಮಹಾಗಾಯತ್ರಿ ಮಂತ್ರದಲ್ಲಿ ಜಾತಿ-ಮತ-ಪಂಥಗಳ ಭೇದಭಾವವನ್ನು ಅಳಿಸಿ ಜನಕೋಟಿಯನ್ನು ಒಂದು ದೈವಿಕವಾದ ಆದರ್ಶಸಾಧನೆಗಾಗಿ ಬದುಕಿನಲ್ಲಿ ಒಂದುಗೂಡಿಸುವ ದಿವ್ಯಶಕ್ತಿ ಅಡಗಿದೆ ಎನ್ನುವುದು ಸ್ಪಷ್ಟವಾಗಿದೆ.

ಅಯ್ಯಪ್ಪಸ್ವಾಮಿಯ ಕುರಿತಾಗಿ ಪ್ರಚಲಿತವಿರುವ ಪೌರಾಣಿಕ ಕಥೆ ಅದ್ಭುತರಮ್ಯವಾದುದು. ಐತಿಹಾಸಿಕವಾಗಿ ಅಯ್ಯಪ್ಪಸ್ವಾಮಿ ಬಗ್ಗೆ ಅನೇಕ ವಿಚಾರಗಳ ಉಲ್ಲೇಖವಿದ್ದು ಅವು ತುಂಬಾ ವಿಸ್ಮಯಕಾರಿಯಾಗಿದೆ. ಜಾನಪದ ಗೀತೆಯಲ್ಲಿ ಅಯ್ಯಪ್ಪಸ್ವಾಮಿಯ ಕುರಿತಾಗಿ ಸಾಕಷ್ಟು ಮಾಹಿತಿ ಸಿಗುತ್ತದೆ. ಆದರೆ ಈ ಎಲ್ಲಾ ವಿವರಗಳನ್ನು ಪರಿಶೀಲಿಸಿದಾಗ ಪುರಾಣ-ಇತಿಹಾಸ-ಜಾನಪದ ಪರಂಪರೆ ವಿಚಾರಗಳೆಲ್ಲ ಒಂದಕ್ಕೊಂದು ಸೇರಿದ್ದು ಯಾವುದು ಪುರಾಣ–ಯಾವುದು ಇತಿಹಾಸ ಎಂದು ನಿಖರವಾಗಿ ಹೇಳುವುದಕ್ಕೆ ಸಾಧ್ಯವಿಲ್ಲ ಎಂದು ಕಂಡುಬರುತ್ತದೆ.

ಪ್ರಾಚೀನ ಗ್ರಂಥವಾದ ಭೂತನಾಥೋಪಖ್ಯಾನದಲ್ಲಿ ವಿವರಿಸಿರುವಂತೆ ಪೌರಾಣಿಕವಾಗಿ ಶ್ರೀ ಅಯ್ಯಪ್ಪ ಸ್ವಾಮಿಯ ಕಥೆ ಹೀಗಿದೆ :

ದೇವಾಸುರರು ಸೇರಿ ಸಮುದ್ರಮಥನ ಮಾಡಿದ ಸಂದರ್ಭದಲ್ಲಿ ಲಭಿಸಿದ ಅಮೃತ ಮತ್ತು ಹಾಲಾಹಲದ ವಿತರಣೆಗೆ ದೇವತೆಗಳಿಗೆ ನೆರವಾಗಲು ಶ್ರೀ ಮಹಾವಿಷ್ಣು ಮೋಹಿನೀರೂಪ ತಾಳಿ ಅವತರಿಸುತ್ತಾನೆ. ಮೋಹಿನಿಯ ರೂಪದಿಂದ ಶಿವನು ಆಕರ್ಷಿತನಾಗುತ್ತಾನೆ. ಶಿವ–ಮೋಹಿನಿಯರ ಸಂಯೋಗದಿಂದ ದಿವ್ಯಜನ್ಮತಾಳಿದ ಶಿಶುವೇ

ಅಯ್ಯಪ್ಪ ಸ್ವಾಮಿ. ಹಾಗಾಗಿ ಅಯ್ಯಪ್ಪನು ಹರಿಹರಪುತ್ರನೆಂದು ಪ್ರಸಿದ್ಧ. ಅವನು ಶಿವ ವಿಷ್ಣುಶಕ್ತಿಗಳ ಮೂರ್ತಸ್ವರೂಪನೂ ಹೌದು.

ಭೂಲೋಕದಲ್ಲಿ ಮಹಿಷಿ ಎಂಬ ದುಷ್ಟ ರಾಕ್ಷಸಿಯನ್ನು ಸಂಹಾರಮಾಡಿ ಧರ್ಮ ಸ್ಥಾಪನೆ ಮಾಡಬೇಕು ಎಂದು ಮಹಾದೇವ ಶಿವನು ಅಯ್ಯಪ್ಪನಿಗೆ ಆಜ್ಞಾಪಿಸುತ್ತಾನೆ. ಹೀಗೆ ಪರಮೇಶ್ವರನಿಂದ ಅನುಗ್ರಹಪಡೆದು ಅಯ್ಯಪ್ಪನು ಪುಟ್ಟ ಶಿಶುರೂಪ ತಾಳಿ ಶಬರಿಮಲೆಯ ಪಂಪಾ ಅರಣ್ಯದಲ್ಲಿ ಪಂಪಾನದೀತೀರದಲ್ಲಿ ಅಳುತ್ತಾ ಇಳೆಯಲ್ಲಿ ಕಾಣಿಸಿಕೊಳ್ಳುತ್ತಾನೆ. ಆ ಸಂದರ್ಭದಲ್ಲಿ ತನಗೆ ಮಕ್ಕಳಿಲ್ಲವೆಂಬ ಚಿಂತೆಯಿಂದ ಅವ್ಯತನಾಗಿದ್ದ ಪಂದಾಳ ರಾಜವಂಶತನದ ಅರಸು ರಾಜಶೇಖರನು ಅಲ್ಲಿಗೆ ಬೇಟೆಗೆ ಬಂದನು. ಮಗುವಿನ ರೋದನವನ್ನು ಕೇಳುತ್ತಾನೆ. ಆಕಸ್ಮಿಕವಾಗಿ ಅರಣ್ಯದಲ್ಲಿ ಕಾಣಸಿಕ್ಕಿದ ಮಗುವು ತನಗೆ ಮಹಾದೇವನು ಇತ್ತ ವರವೇ ಸರಿ ಎಂದು ಹರ್ಷದಿಂದ ಮಗುವನ್ನು ಎತ್ತಿಕೊಂಡು ಅರಮನೆಗೆ ತೆರಳುತ್ತಾನೆ. ದೈವಿಕವಾದ ತೇಜಸ್ಸು-ಸೌಂದರ್ಯಗಳಿಂದ ಕೂಡಿದ ಮುದ್ದು ಮಗುವನ್ನು ಕಂಡು ರಾಣಿಗೆ ಅತ್ಯಂತ ಆನಂದವಾಗುತ್ತದೆ. ಮಗುವಿನ ಕೊರಳಲ್ಲಿ ಸ್ವರ್ಣ ಘಂಟಾಮಣಿಯೊಂದು ಇತ್ತು. ಅದರಿಂದಾಗಿ ಮಗುವಿಗೆ ಮಣಿಕಂಠ ಎಂದು ನಾಮಕರಣ ಮಾಡುತ್ತಾರೆ.

ಮಣಿಕಂಠನು ಅರಳಿ ಬೆಳಗಿದಂತೆ ರಾಜಯೋಗ್ಯತೆಗೆ ತಕ್ಕಾಗಿ ಎಲ್ಲ ವಿದ್ಯೆಗಳಲ್ಲಿ ಪಾರಂಗತನಾಗುತ್ತಾನೆ. ಅಷ್ಟರಲ್ಲಿ ರಾಜನಿಗೆ ತನ್ನ ರಾಣಿಯಲ್ಲಿ ಒಂದು ಗಂಡುಮಗು ಪ್ರಾಪ್ತಿಯಾಗುತ್ತದೆ. ಮಕ್ಕಳು ಬೆಳೆದು ಪ್ರಾಯಕ್ಕೆ ಬಂದಂತೆ ರಾಜನು ಮಣಿಕಂಠನಿಗೆ ಯುವರಾಜಪಟ್ಟಾಭಿಷೇಕ ನಡೆಸುವ ಬಗ್ಗೆ ತೀರ್ಮಾನಿಸುತ್ತಾನೆ. ಆಗ ಮೊದಲಿನಿಂದಲೇ ಮಣಿಕಂಠನನ್ನು ದ್ವೇಷಿಸುತ್ತಿದ್ದ ರಾಜ್ಯದ ದಿವಾನನು ಮಣಿಕಂಠನಿಗೆ ಯುವರಾಜಪಟ್ಟ ದೊರಕುವುದನ್ನು ತಪ್ಪಿಸಲು ಕುಟಿಲತಂತ್ರ ಹೂಡುತ್ತಾನೆ. ಅದರಂತೆ ರಾಣಿಯ ಮನಸ್ಸನ್ನು ಕದಡಿಸಿ ಆಕೆಯ ಮೂಲಕ ರಾಜನಿಗೆ ಪ್ರತಿಭಟನೆ ವ್ಯಕ್ತಪಡಿಸುತ್ತಾನೆ. ರಾಣಿ ತನಗೆ ತೀವ್ರವಾದ ಅಸ್ವಸ್ಥತೆ ಎಂದು ನಟನೆ ಮಾಡಿದಳು. ರಾಜವೈದ್ಯರು ಲಂಚದ ಪ್ರಭಾವಕ್ಕೆ ಒಳಗಾಗಿ ರಾಣಿಯ ಅಸ್ವಸ್ಥತೆ ಪರಿಹಾರವಾಗಲು ಔಷಧ ತಯಾರಿಸಲು ಹುಲಿಯ ಹಾಲು ಅಗತ್ಯವೆಂದೂ ಅದಿಲ್ಲದಿದ್ದರೆ ರಾಣಿಯ ದೇಹಸ್ಥಿತಿ ಸುಧಾರಿಸುವಂತಿಲ್ಲ ಎಂದೂ ಹೇಳಿದರು. ಆಗ ಅಯ್ಯಪ್ಪನು ತಾನು ನಿಶ್ಚಯವಾಗಿ ಹುಲಿಯ ಹಾಲನ್ನು ತರುತ್ತೇನೆ ಎಂದು ಹೊರಡುತ್ತಾನೆ. ಅಯ್ಯಪ್ಪನು ಅರಣ್ಯಕ್ಕೆ ತೆರಳಿದರೆ ಅಲ್ಲಿ ಕ್ರೂರ ಜಂತುಗಳ ಕೈಗೆ ಸಿಕ್ಕಿ ಸಾಯುತ್ತಾನೆ ಎನ್ನುವುದು ಅರಮನೆಯಲ್ಲಿನ ಕುಹಕಿಗಳ ಎಣಿಕೆಯಾಗಿತ್ತು. ಅರಣ್ಯಕ್ಕೆ ತೆರಳಿದ ಅಯ್ಯಪ್ಪಸ್ವಾಮಿಗೆ ಶಿವಗಣಗಳ ನೆರವು ಲಭಿಸಿತು. ಋಷಿ ಮುನಿಗಳು ತಮ್ಮ ಯೋಗಶಕ್ತಿಯಿಂದ ಸ್ವರ್ಣಮಂದಿರವನ್ನು ರಚಿಸಿ ಅದರಲ್ಲಿ ಅಯ್ಯಪ್ಪನನ್ನು ಕುಳ್ಳಿರಿಸಿ ಪೂಜಿಸುತ್ತಾರೆ. (ಆ ಸ್ಥಳವು ಇಂದಿಗೂ ಪೊನ್ನಂಬಲಮೇಡು ಎಂದು ಪ್ರಸಿದ್ಧವಾಗಿದೆ.) ಮಣಿಕಂಠನು ಅರಣ್ಯದಲ್ಲಿ ಮಹಿಷಿ ಎಂಬ ಲೋಕಕಂಟಕಿ ರಾಕ್ಷಸಿಯನ್ನು ಸಂಹರಿಸುತ್ತಾನೆ. ಹಿಂದೆ ಶಾಪಗ್ರಸ್ತಳಾಗಿದ್ದ ಮಹಿಷಿಯ ಶಾಪವಿಮೋಚನೆ ಆಗುತ್ತದೆ. ಆವಳು ಅಯ್ಯಪ್ಪಸ್ವಾಮಿಯನ್ನು ವರಿಸಲು ಇಚ್ಛಿಸುತ್ತಾಳೆ. ಆದರೆ ಅಯ್ಯಪ್ಪಸ್ವಾಮಿಯು ಬ್ರಹ್ಮಚಾರಿಯಾದುದರಿಂದ ವಿವಾಹಕ್ಕೆ ಒಪ್ಪದೆ ತನ್ನ ಶಕ್ತಿಕಲೆಯಾಗಿ

ಎಡಭಾಗದಲ್ಲಿ ನೆಲೆನಿಲ್ಲುವಂತೆ ಅಪ್ಪಣೆ ನೀಡುತ್ತಾನೆ. ಹಾಗೆ ಆಕೆ ಶಬರಿಗಿರಿಯಲ್ಲಿ ಮಾಳಿಕಾಪುರತಮ್ಮ ಎಂಬ ಹೆಸರಿನಲ್ಲಿ ಮಹಾದೇವಿಯಾಗಿ ನೆಲೆನಿಲ್ಲುವಂತಾಯಿತು.

ಅರಣ್ಯದಲ್ಲಿ ಮಹಾದೇವ ಶಿವನಿಂದ ವಿಶೇಷವಾಗಿ ದಿವ್ಯಾನುಗ್ರಹವನ್ನು ಹೊಂದಿ ಅಯ್ಯಪ್ಪಸ್ವಾಮಿಯು ವ್ಯಾಘ್ರಾರೂಢನಾಗಿ ಪಂದಾಲಮ್ ಅರಮನೆಗೆ ಹೊರಡುತ್ತಾನೆ. ಜೊತೆಯಲ್ಲಿ ಚಿರತೆಗಳ ತಂಡವನ್ನೇ ತರುತ್ತಾನೆ. ಆ ದಿವ್ಯದೃಶ್ಯವನ್ನು ಕಂಡು ಅರ ಮನೆಯ ಜನರೆಲ್ಲ ಮೂಕವಿಸ್ಮಿತರಾಗಿರುತ್ತಾರೆ. ರಾಣಿಗೆ ಮಣಿಕಂಠನ ದಿವ್ಯಮಹಿಮೆಯು ಅರಿವಾಗುತ್ತದೆ. ರಾಜದಂಪತಿಗಳು ಭಗವದವತಾರಿ ಮಣಿಕಂಠನಿಗೆ ಮಣಿದು ಕ್ಷಮೆ ಯಾಚಿಸಿ ಅನುಗ್ರಹಕ್ಕಾಗಿ ಪ್ರಾರ್ಥಿಸುತ್ತಾರೆ. ಮಣಿಕಂಠನನ್ನು ಅಯ್ಯಪ್ಪ (ಶ್ರೇಷ್ಠರಿಗೆ ಒಡೆಯ) ಎಂದು ಸ್ತುತಿಸಿ ಕೊಂಡಾಡುತ್ತಾರೆ.

ಆಗ ಅಯ್ಯಪ್ಪಸ್ವಾಮಿಯು ಅಲ್ಲಿ ನೆರೆದವರನ್ನೆಲ್ಲ ಉದ್ದೇಶಿಸಿ ತನ್ನ ಅವತಾರದ ಅವಧಿ ಮುಗಿಯಿತೆಂದೂ ತಾನಿನ್ನು ಹೊರಡುತ್ತೇನೆ ಎಂದೂ ಹೇಳುತ್ತಾನೆ. ಆಗ ಅರಸನು ಸ್ವಾಮಿಯು ತನ್ನ ರಾಜ್ಯದಲ್ಲಿ ನೆಲೆನಿಲ್ಲಬೇಕೆಂದೂ ಸ್ವಾಮಿಗಾಗಿ ತಾನು ಒಂದು ಮಂದಿರ ಕಟ್ಟಿಸುವೆನೆಂದೂ ಕೇಳಿಕೊಳ್ಳುತ್ತಾನೆ. ಅದಕ್ಕೆ ಅಯ್ಯಪ್ಪಸ್ವಾಮಿಯು ಒಪ್ಪಿ ಪಂಪಾ ನದಿಯ ಉತ್ತರಕ್ಕೆ ಇರುವ ನೀಲಿ ಪರ್ವತದಲ್ಲಿ ಭಕ್ತೆ ಶಬರಿ ಇದ್ದ ನೆಲೆಯಲ್ಲಿ ತನ್ನ ಮಂದಿರ ಕಟ್ಟಿಸಬೇಕೆಂದು ಹೇಳಿ ಅಲ್ಲಿ ತಾನು ನೆಲೆನಿಂತು ಭಕ್ತಕೋಟಿಗೆ ಸಾನ್ನಿಧ್ಯಪೂರ್ಣ ವಾಗಿ ಅನುಗ್ರಹಿಸುತ್ತೇನೆ ಎಂದು ಆಶ್ವಾಸನೆಯನ್ನು ನೀಡಿದನು. ಶಬರಿಗಿರಿಯಲ್ಲಿ ತನ್ನ ಮಂದಿರ ನೆಲೆಗೊಳ್ಳಬೇಕಾದ ಸ್ಥಳವನ್ನು ಪ್ರತ್ಯೇಕವಾಗಿ ಗುರುತಿಸಲು ನೆರವಾಗುವಂತೆ ಒಂದು ಬಾಣವನ್ನು ಅಲ್ಲಿಂದ ಹೊಡೆದು ತೋರಿಸಿದನು. ಬಾಣ ನಿಂತ ಜಾಗದಲ್ಲಿ ಮಂದಿರವನ್ನು ಹೇಗೆ ಕಟ್ಟಿಸಬೇಕೆಂದು ಸಲಹೆಗಳನ್ನು ನೀಡಿ ದೇವಾಲಯಕ್ಕೆ ತಲಪಲು ಆವರಣದಲ್ಲಿ ಹದಿನೆಂಟು ಮೆಟ್ಟಲುಗಳು ಇರಬೇಕೆಂದೂ ದೇವಾಲಯದ ಬದಿಯಲ್ಲಿ ದೇವಿ ಮಾಳಿಕಾಪುರದಮ್ಮನಿಗೆ ಮಂದಿರವಿರಬೇಕೆಂದೂ ಸೂಚಿಸಿದನು. ತಾನು ನೆಲೆನಿಲ್ಲುವ ಶಬರಿಗಿರಿ ಕಲಿಕಾಲದಲ್ಲಿ ಅತ್ಯಂತ ಪ್ರಭಾವಶಾಲಿ ಪುಣ್ಯಕ್ಷೇತ್ರವಾಗುವುದೆಂದೂ, ಶಬರಿಗಿರಿ ಯಾತ್ರೆ ಮಾಡಿ ತನ್ನ ದರ್ಶನ ಪಡೆಯಲು ಮಕರಸಂಕ್ರಾಂತಿ ದಿವಸವು ಅತ್ಯಂತ ಶ್ರೇಷ್ಠ ವೆಂದೂ ಹೇಳಿದನು. ತನ್ನ ದರ್ಶನಕ್ಕೆ ಬರುವವರು ಸರಿಯಾದ ಇಂದ್ರಿಯನಿಗ್ರಹ ವ್ರತೋಪವಾಸಾದಿಗಳಿಂದ ಕೂಡಿ ಬರದಿದ್ದರೆ ಅವರ ಯಾತ್ರೆಯು ಫಲಕಾರಿ ಆಗಲಾರ ದೆಂದೂ ಹಾಗೆ ಬರುವುದು ಅಂಗಡಿ ವಸ್ತುಗಳನ್ನು ಕೊಳ್ಳಲು ಹಣವಿಲ್ಲದೆ ಬರೆ ಕೈಯಲ್ಲಿ ಹೋದಂತೆ ಸರಿ ಎಂದೂ ತಿಳಿಸಿದನು. ಇಷ್ಟು ಹೇಳಿ ಅಲ್ಲಿರುವವರನ್ನು ಅನುಗ್ರಹಿಸಿ ಅಯ್ಯಪ್ಪಸ್ವಾಮಿಯು ಅಂತರ್ಧಾನನಾಗುತ್ತಾನೆ. ರಾಜದಂಪತಿಗಳಿಗೆ ಅತೀವ ದುಃಖ ವಾಗುತ್ತದೆ. ಆಗ ಮಹರ್ಷಿ ಅಗಸ್ತ್ಯರು ಅಲ್ಲಿಗೆ ಬರುತ್ತಾರೆ. ಎಲ್ಲರಿಗೂ ಸಮಾಧಾನ ಹೇಳುತ್ತಾರೆ. ಅಯ್ಯಪ್ಪಸ್ವಾಮಿ ದೇಗುಲ ಕಟ್ಟಿಸುವ ಬಗ್ಗೆ ವಿವರವಾದ ಸಲಹೆ-ಸೂಚನೆ ಗಳನ್ನು ನೀಡಿ ಹರಸುತ್ತಾರೆ. ಆದರಂತೆ ರಾಜನು ಮುಂದೆ ಶ್ರೀ ಅಯ್ಯಪ್ಪಸ್ವಾಮಿಗೆ ದೇಗುಲ ಕಟ್ಟಿಸುತ್ತಾನೆ. ಮಹರ್ಷಿ ಪರಶುರಾಮರೇ ಸ್ವತಃ ಬಂದು ಮಂದಿರದಲ್ಲಿ ಶ್ರೀ ಅಯ್ಯಪ್ಪಸ್ವಾಮಿಯ ದಿವ್ಯಮಂಗಳ ವಿಗ್ರಹದ ಪ್ರತಿಷ್ಠೆಯನ್ನು ವೃಶ್ಚಿಕಮಾಸ ೧೧ರಂದು ಪುಣ್ಯಮುಹೂರ್ತದಲ್ಲಿ ನೆರವೇರಿಸುತ್ತಾರೆ.

ಅಯ್ಯಪ್ಪ ಸ್ವಾಮಿ ಬಗ್ಗೆ ಪರಂಪರಾಗತವಾಗಿ ಕೇಳಿಬಂದಿರುವ ಐತಿಹಾಸಿಕ ವಿವರಗಳನ್ನು ಒಳಗೊಂಡ ಕತೆ ಹೀಗಿದೆ :

ಕೇರಳ ರಾಜ್ಯದಲ್ಲಿ ಹಿಂದೆ ಸುಮಾರು ಕ್ರಿ.ಶ. ೧೧೦೦ರ ವೇಳೆಯಲ್ಲಿ ಹಲವು ಭಾಗಗಳಲ್ಲಿ ದರೋಡೆಕಾರರೂ, ತುಂಡು ಪಾಳೆಯಗಾರರು ತುಂಬಿದ್ದರು, ಅವರಿಂದಾಗಿ ಜನರು ತುಂಬ ಭಯಭೀತರಾಗಿದ್ದರು.ಆ ಸಂದರ್ಭದಲ್ಲಿ ಪುರಾಣಪ್ರಸಿದ್ಧವಾದ ಶಬರಿಗಿರಿಯ ಶ್ರೀ ಧರ್ಮಶಾಸ್ತ ದೇವರ ದೇಗುಲ ಜನಜೀವನದಲ್ಲಿ ಸಾಕಷ್ಟು ಪ್ರಭಾವ ಬೀರುತ್ತಿತ್ತು. ಆ ಕಾಲದಲ್ಲಿ ಉದಯನ ಎಂಬುವನೊಬ್ಬ ಪ್ರಸಿದ್ಧ ದರೋಡೆಕಾರ ಮುಖಂಡನಿದ್ದ. ತುಂಡು ಅರಸನಂತಿದ್ದ ಅವನು ಎಲ್ಲರಿಗೂ ತನ್ನ ದುಷ್ಟತನದಿಂದಾಗಿ ಭಯಹುಟ್ಟಿಸುವಂತಿದ್ದ. ಅವನು ಪುರಾಣಪ್ರಸಿದ್ಧನಾದ ಶಬರಿಮಲೆ ಧರ್ಮಶಾಸ್ತ ದೇವಾಲಯವನ್ನು ಲೂಟಿ ಮಾಡಿದ್ದಲ್ಲದೆ ದೇವಮೂರ್ತಿಯನ್ನು ಹಾಳುಗೆಡವಿ ಅಲ್ಲಿನ ಪ್ರಧಾನ ಅರ್ಚಕರನ್ನು ಕೂಡ ಕೊಲೆ ಮಾಡಿದ. ಅರ್ಚಕರ ಒಬ್ಬನೇ ಮಗನಾದ ಜಯಂತ ಎನ್ನುವವನು ಹೇಗೋ ಈ ದುರಂತದಿಂದ ಪಾರಾದನು. ತನ್ನ ತಂದೆಯ ಕೊಲೆಯ ವಿರುದ್ಧ ಉದಯನನ ಮೇಲೆ ಸೇಡನ್ನು ತೀರಿಸಿಕೊಳ್ಳಬೇಕೆಂದು ನಿಶ್ಚಯಿಸಿದ. ಉದಯನನು ಈ ಸಂದರ್ಭದಲ್ಲಿ ಪಾಂದಾಳಮ್ ರಾಜಕನ್ಯೆಯನ್ನು ವರಿಸಲು ಕೇಳಿದಾಗ ರಾಜನು ಅದನ್ನು ನಿರಾಕರಿಸುತ್ತಾನೆ. ಆದರೆ ಉದಯನನು ರಾಜಕನ್ಯೆಯನ್ನು ಅಪಹರಿಸಿಕೊಂಡು ಹೋಗುತ್ತಾನೆ.

ಮಂತ್ರತಂತ್ರಶಾಸ್ತ್ರಗಳಲ್ಲಿ ಪಾರಂಗತನಾಗಿದ್ದ ಜಯಂತನು ಪರಮದೈವಭಕ್ತನಾಗಿದ್ದನು. ಅವನು ಪೊನ್ನಂಬಲಮೇಡುವಿನಲ್ಲಿ ಶ್ರೀ ಧರ್ಮಶಾಸ್ತ ದೇವನನ್ನು ಕುರಿತು ಧ್ಯಾನಿಸುತ್ತಿದ್ದನು. ಒಂದು ದಿನ ಶ್ರೀ ಧರ್ಮಶಾಸ್ತ ದೇವನು ಜಯಂತನಿಗೆ ಕನಸಿನಲ್ಲಿ ಕಾಣಿಸಿಕೊಂಡು ಉದಯನನ ಬಳಿ ಸಾರಿ ರಾಜಕನ್ಯೆಯನ್ನು ಬಿಡಿಸಿ ಅವಳನ್ನು ವರಿಸಬೇಕೆಂದೂ ತಾನು ಜಯಂತ ದಂಪತಿಗಳ ಪುತ್ರನಾಗಿ ಜನಿಸುವೆನೆಂದೂ ಅಪ್ಪಣೆ ಮಾಡಿದನು. ಜಯಂತನು ಉದಯನನ ಬಳಿ ತೆರಳಿ ಮಂತ್ರತಂತ್ರಶಕ್ತಿಯಿಂದ ಅವನಿಗೆ ಒಳಿತನ್ನು ಮಾಡಬಲ್ಲೆನೆಂದೂ ಹೇಳಿ ಜೊತೆ ಸೇರಿದನು. ಆ ಸಂದರ್ಭದಲ್ಲಿ ರಾಜಕನ್ಯೆಯನ್ನೂ ಕಂಡು ಪರಸ್ಪರ ಮಾತನಾಡಿ ದಂಪತಿಗಳಾಗಲು ಒಪ್ಪಿಕೊಂಡರು. ಒಂದು ದಿನ ಅರ್ಧ ರಾತ್ರಿಯಲ್ಲಿ ಉದಯನನ ಶಿಬಿರದಿಂದ ಹೊರಟು ಪೊನ್ನಂಬಲಮೇಡುವಿನ ಬಳಿ ಬಂದು ಅಲ್ಲಿ ನೆಲೆಸಿದರು.

ಸ್ವಾಮಿ ಧರ್ಮಶಾಸ್ತನ ಹೇಳಿಕೆಯಂತೆ ಜಯಂತ ದಂಪತಿಗಳಿಗೆ ಗಂಡುಮಗು ವಾಯಿತು. ಹೆಸರು ಅಯ್ಯಪ್ಪ (ಆರ್ಯ = ಶ್ರೇಷ್ಠ, ಅಪ್ಪ = ಒಡೆಯ, ತಂದೆ, ಆರ್ಯ = ಅಪ್ಪ = ಆರ್ಯಪ್ಪ = ಅಯ್ಯಪ್ಪ) ಎಂದು ಹರ್ಷದಿಂದ ಇಟ್ಟು ಕೊಂಡಾಡಿದರು. ಸಕಲ ದಿವ್ಯತೇಜದಿಂದ ಕೂಡಿ ಗುಣಸಿರಿಯಿಂದ ಸಂಪನ್ನವಾಗಿದ್ದ ಮಗು ಮುಂದೆ ಬೆಳೆದು ಎಲ್ಲರ ಪ್ರೀತಿ–ಭಕ್ತಿ–ಗೌರವಗಳಿಗೆ ಪಾತ್ರವಾಯಿತು. ಸಕಲಶಕ್ತಿಸಂಪತ್ತುಗಳಿಂದ ಕೂಡಿ ಬೆಳೆದ ಅಯ್ಯಪ್ಪಸ್ವಾಮಿಯನ್ನು ನೋಡಿದ ಮಾತ್ರದಿಂದಲೇ ದರೋಡೆಗಾರರು, ದುಷ್ಟರು ದೂರ ಸರಿಯುವಂತೆ ಆಯಿತು. ದರೋಡೆಗಾರರ ಗುಂಪನ್ನು ಸ್ವಾಮಿಯು ಸದೆಬಡಿದು ದೇಶಕ್ಕೆ ಸುಖಶಾಂತಿಯನ್ನು ತಂದನು. ಒಮ್ಮೆ ಪೂಂಜಾರಿನ ನಾಯಕನನ್ನು ದರೋಡೆಗಾರರ ಗುಂಪು ದಾಳಿಮಾಡಿತು. ಆಗ ಅವನು ತನ್ನ ಕುಲದೇವತೆ ಮಧುರೆ

ಮೀನಾಕ್ಷಿದೇವಿಯನ್ನು ಪ್ರಾರ್ಥಿಸುತ್ತಾನೆ. ಅಷ್ಟರಲ್ಲಿ ಅವನ ಬಳಿ ಆನೆಯ ಮೇಲೆ ಏರಿ ಅಯ್ಯಪ್ಪಸ್ವಾಮಿ ಆಗಮಿಸಿ ರಕ್ಷಿಸುತ್ತಾನೆ. ಅಂದಿನ ಅನುಗ್ರಹದ ನೆನಪಿಗಾಗಿ ಸ್ವಾಮಿಯು ಪೊಂಜಾರದ ನಾಯಕನಿಗೆ ಒಂದು ಕಠಾರಿ ಮತ್ತು ದೋಣಿಯನ್ನು ನೀಡಿ ಆಶೀರ್ವದಿಸಿದನು. ಅದು ಇಂದಿಗೂ ಆ ಮನೆತನದವರ ವಶದಲ್ಲಿ ಪವಿತ್ರ ಸೊತ್ತಾಗಿ ಉಳಿದಿದೆ ಎಂದು ಹೇಳಲಾಗಿದೆ.

ಮುಂದೆ ಅಯ್ಯಪ್ಪ ಸ್ವಾಮಿಯು ಪಂದಾಲಮ್ ಅರಮನೆಗೆ ತೆರಳಿ ರಾಜನನ್ನು ಭೇಟಿಯಾಗುತ್ತಾನೆ. ಉದಯನನು ರಾಜ್ಯಕ್ಕೆಲ್ಲ ಕಂಟಕಪ್ರಾಯನಾಗಿ ಬಾಳುತ್ತಿರುತ್ತಾನೆ. ಜೊತೆಗೆ ಕರಾವಳಿ ಎಡೆಯಲ್ಲಿ ಅರೆಬಿಯಾದಿಂದ ಬಂದ ಮುಸ್ಲಿಮರ ಮುಖಂಡ ವಾವರ್ ಎನ್ನುವವನು ರಾಜ್ಯದಲ್ಲೆಲ್ಲಾ ಕೊಲೆ-ದರೋಡೆಗೆ ಕಾರಣನಾಗಿ ಕಂಡುಬರುತ್ತಾನೆ. ವಾವರ್ ಅಯ್ಯಪ್ಪಸ್ವಾಮಿಯೊಡನೆ ಯುದ್ಧಮಾಡಬಂದು ಕೊನೆಗೆ ಶರಣಾಗುತ್ತಾನೆ. ಅಯ್ಯಪ್ಪಸ್ವಾಮಿಯು ವಾವರನನ್ನು ತನ್ನ ಗುಂಪಿನ ಸೈನ್ಯದ ಅಧಿಪತಿಯಾಗಿ ನೇಮಿಸುತ್ತಾನೆ. ಹಾಗೆಯೇ ಕೋಚುಕುಡುತ, ತಲಪ್ಪರದ ವಿಲ್ಲನ್ ಮತ್ತು ಮಲ್ಲನ್ ಎಂಬ ಸಮಾಜಕಂಟಕ ದುಷ್ಟರು ಅಯ್ಯಪ್ಪಸ್ವಾಮಿಯ ಪ್ರಭಾವಕ್ಕೆ ಸೋತು ಶರಣಾಗುತ್ತಾರೆ. ಆಮೇಲೆ ಸ್ವಾಮಿಯ ನಿಷ್ಠಾವಂತ ಅನುವರ್ತಿಗಳಾಗುತ್ತಾರೆ. ಆದರೆ ಉದಯನನ ದುಷ್ಟನೀತಿ-ಚಟುವಟಿಕೆಗಳು ದಿನೇದಿನೇ ಹೆಚ್ಚಾಗುತ್ತವೆ. ಪಂದಾಳಮ್ ಅರಸನು ಅಯ್ಯಪ್ಪಸ್ವಾಮಿಗೆ ಶರಣಾಗಿ ದಂಗೆಕೋರರನ್ನು ಹತ್ತಿಕ್ಕಲು ನೆರವನ್ನು ಬೇಡುತ್ತಾನೆ. ಅಯ್ಯಪ್ಪಸ್ವಾಮಿಯು ತನ್ನ ಯೋಗಶಕ್ತಿಯಿಂದ ಸೈನಿಕರನ್ನು ಸೃಷ್ಟಿಸಿ ಉದಯನನ ಸೈನ್ಯವನ್ನು ಹಿಮ್ಮೆಟ್ಟಿಸುತ್ತಾನೆ.

ಅಯ್ಯಪ್ಪಸ್ವಾಮಿಯು ಪಂದಾಳಮ್ ಅರಸನೊಡನೆ ಕೆಲಕಾಲ ನೆಲಸಿ ರಾಜ್ಯರಕ್ಷೆಗೆ ನೆರವಾಗುತ್ತಾನೆ.

ಕಾಲ ಕಳೆದಂತೆ ಅಯ್ಯಪ್ಪಸ್ವಾಮಿಯ ವಿರುದ್ಧ ದ್ವೇಷದ ಗುಂಪೊಂದು ಅರಮನೆಯಲ್ಲಿ ಬೆಳೆಯುತ್ತದೆ. ರಾಣಿಯೊಡನೆ ಪಿತೂರಿ ನಡೆಸಿ ಅವಳು ತನಗೆ ಭಯಂಕರ ಅಸ್ವಸ್ಥತೆಯೆಂದು ನಟಿಸುವಂತೆ ಮನ ಒಲಿಸುತ್ತಾರೆ. ರಾಜವೈದ್ಯನು ರಾಣಿಯ ಕಾಹಿಲೆಗೆ ಚಿಕಿತ್ಸೆ ಮಾಡಲು ಹುಲಿಯ ಹಾಲನ್ನು ಒದಗಿಸಬೇಕೆಂದು ಕೇಳುತ್ತಾನೆ. ಅಯ್ಯಪ್ಪಸ್ವಾಮಿಯು ಹುಲಿಯ ಹಾಲನ್ನು ತರಲು ಕಾಡಿಗೆ ತೆರಳಿ ಅರಣ್ಯವಾಸಿಗಳ ನೆರವಿನಿಂದ ಹುಲಿಗಳ ತಂಡವನ್ನೇ ಒಟ್ಟುಹಾಕಿ ಅರಮನೆಗೆ ಕರೆತರುತ್ತಾನೆ. ಅಯ್ಯಪ್ಪಸ್ವಾಮಿ ದೈವಿಕ ಮಹಾಪುರುಷನೆಂದು ಪ್ರಕಾಶಗೊಂಡು ಎಲ್ಲರ ಭಕ್ತಿಗೌರವಗಳಿಗೆ ಪಾತ್ರನಾಗುತ್ತಾನೆ.

ಅಯ್ಯಪ್ಪನು ತನ್ನ ಅವತಾರದ ಉದ್ದೇಶವನ್ನು ಮನಗಂಡು ಶಕ್ತಿಶಾಲಿ ದರೋಡೆಗಾರ ಉದಯನನ ಹಾಗೂ ಅವನ ಗುಂಪಿನವರನ್ನು ಸಂಹಾರಮಾಡಲು ಏರ್ಪಾಡುಮಾಡುತ್ತಾನೆ. ಬೇರೆಬೇರೆಡೆಗಳಿಂದ ಸೈನಿಕರನ್ನು ಸಂಗ್ರಹಿಸುತ್ತಾನೆ. ಏರುಮಲೆ ಎಂಬಲ್ಲಿಗೆ ಸೈನಿಕರೆಲ್ಲ ಬಂದು ಸೇರುತ್ತಾರೆ. ಶೈವರು, ಶಾಕ್ತರು, ಯವನರು ಎಂಬ ವಿವಿಧ ಪಂಗಡದವರು ಬಂದು ಸೇರುತ್ತಾರೆ. ಅವರೆಲ್ಲ ಯಾವುದೇ ರೀತಿಯ ಭೇದಭಾವವಿಲ್ಲದೆ ಒಟ್ಟಾಗಿ ಒಂದೆಡೆ ಒಮ್ಮತದಿಂದ ಕೂಡಿ ಅಯ್ಯಪ್ಪಸ್ವಾಮಿಯ ಮಹಾಸಮರಕಾರ್ಯದಲ್ಲಿ ಪಾಲ್ಗೊಳ್ಳುತ್ತಾರೆ.

ವಿಶೇಷವಾದ ತಯಾರಿ, ಉತ್ಸಾಹಗಳಿಂದ ಕೂಡಿದ ದೊಡ್ಡ ಸೈನ್ಯದ ಮಹಾದಂಡನಾಯಕನಾಗಿ ಅಯ್ಯಪ್ಪಸ್ವಾಮಿ ಅಭಿಷಿಕ್ತನಾಗುತ್ತಾನೆ. ಉದಯನನ ಸಂಹಾರಕ್ಕೆ ಮುಂದಾಗುತ್ತಾನೆ. ಶಬರಿಗಿರಿಯ ದಟ್ಟವಾದ ಕಾನನದಲ್ಲಿ ಭದ್ರವಾಗಿ ನೆಲೆ ಊರಿದ್ದ ಉದಯನನ ವಿರುದ್ಧ ಸಮರ ಎಸಗಲು ಎತ್ತೊಂದರ ಮೇಲೆ ಏರಿ ಸಮರಕ್ಕೆ ಸಿದ್ಧನಾಗಿ ಅಯ್ಯಪ್ಪನು ಹೊರಡುತ್ತಾನೆ. ಅರಣ್ಯದಲ್ಲಿ ಎತ್ತಿನಿಂದ ಇಳಿದು ಎತ್ತನ್ನು ಒಂದೆಡೆ ಕಟ್ಟಿ ಮುಂದೆ ಸಾಗುತ್ತಾನೆ. (ಸ್ವಾಮಿಯು ಎತ್ತನ್ನು ಕಟ್ಟಿದ ಜಾಗವು ಇಂದಿಗೂ ಕಾಳಕಟ್ಟಿ ಎಂಬುದಾಗಿ ಪ್ರಸಿದ್ಧವಾಗಿದೆ.) ವಿವಿಧ ಎಡೆಗಳಿಂದ ಮುತ್ತಿಗೆಹಾಕಿ ಉದಯನನ ಸೈನಿಕರನ್ನೆಲ್ಲ ಸಂಹರಿಸಿ ಅಯ್ಯಪ್ಪ ಸ್ವಾಮಿಯ ಸೈನ್ಯದ ಉಪನಾಯಕನಾದ ಕಡುತನು ಉದಯನನನ್ನು ಸಮರದಲ್ಲಿ ಪರಾಜಯಗೊಳಿಸಿ ತುಂಡರಿಸುತ್ತಾನೆ. ಹೀಗೆ ಸ್ವಾಮಿಯ ನೇತೃತ್ವದಲ್ಲಿ ಲೋಕಕಂಟಕನ ವಧೆ ಆಗಿ ಶಾಂತಿಸ್ಥಾಪನೆ ಆಗುತ್ತದೆ. ಸಮರದ ವಿಜಯೋತ್ಸಾಹವನ್ನು ಸ್ವಾಮಿ ನೇತೃತ್ವದಲ್ಲಿ ಪಂಪಾನದೀತೀರದಲ್ಲಿ ದೀಪಸಾಲು ಬೆಳಗಿಸಿ ಪಟಾಕಿ ಹಾರಿಸಿ ವೈಭವದಿಂದ ಆಚರಿಸುತ್ತಾರೆ. ಮಾರನೆಯ ದಿನ ಸಮರದಲ್ಲಿ ಮರಣವನ್ನು ಅಪ್ಪಿದವರಿಗೆಲ್ಲ ತರ್ಪಣಾದಿಶ್ರಾದ್ಧಕ್ರಿಯೆಗಳನ್ನು ನಡೆಸುತ್ತಾರೆ. ಆಮೇಲೆ ಎಲ್ಲರಿಗೂ ಶಬರಿಯಲ್ಲಿನ ಶ್ರೀ ಧರ್ಮಷಷ್ಠ ದೇವನ ಮಂದಿರಕ್ಕೆ ಯಾತ್ರೆಗೆ ಹೊರಡುತ್ತಾರೆ. ಮಂದಿರಕ್ಕೆ ಇನ್ನೂ ಒಂದೂವರೆ ಮೈಲು ದೂರ ಇದೆ ಎನ್ನುವಾಗ ಅಯ್ಯಪ್ಪಸ್ವಾಮಿಯು ಒಂದು ಅಶ್ವತ್ಥಮರದ ಅಡಿಗೆ ಬಂದು ನಿಂತು ಅಲ್ಲಿ ಎಲ್ಲರೂ ತಮ್ಮ ತಮ್ಮ ಆಯುಧಗಳನ್ನು ಇಡಬೇಕೆಂದು ಆಜ್ಞಾಪಿಸುತ್ತಾನೆ. (ಇಂದಲ್ಲಿ ಮರ ಇಲ್ಲದಿದ್ದರೂ ಸರಮು ಕಟ್ಟೆಯಾಲ ಎಂದು ಸ್ಥಳವು ಪ್ರಸಿದ್ಧವಾಗಿದೆ. ಯಾತ್ರಿಕರು ಇಂದಿಗೂ ತಮ್ಮ ಕೈಯಲ್ಲಿ ಕೋಲು-ದೊಣ್ಣೆ ಇತ್ಯಾದಿಗಳನ್ನು ಆಯುಧಗಳ ಸಂಕೇತ ಎಂದು ಯಾತ್ರಾವೇಳೆ ಕೊಂಡು ಹೋಗಿ ಈ ಸ್ಥಳದಲ್ಲಿ ಇಟ್ಟು ಮುನ್ನಡೆಯುತ್ತಾರೆ.) ಆಯುಧಗಳನ್ನು ಸ್ವಾಮಿ ಅಪ್ಪಣೆಯಂತೆ ಇಟ್ಟು ಎಲ್ಲರೂ ಸ್ವಾಮಿಯನ್ನು ನೋಡುತ್ತಾ 'ಶರಣಮ್'—'ಸ್ವಾಮಿ ಶರಣಮ್' ಎಂದು ಹೇಳಿ ಅಲ್ಲಿಂದ ಮುಂದಕ್ಕೆ ದೇವಮಂದಿರದ ಎಡೆಗೆ ಸಾಗುತ್ತಾರೆ. ಅಷ್ಟರಲ್ಲಿ ಮಂದಿರಕ್ಕೆ ಅಯ್ಯಪ್ಪ ಸ್ವಾಮಿಯ ತಾಯಿತಂದೆಯರು, ಪಂದಾಳ ಅರಸು ಪರಿವಾರ ಸಹಿತ ಆಗಲೇ ಬಂದು ನೆರೆದಿದ್ದರು. ಸ್ವಾಮಿ ಶರಣಮ್ ಎಂಬ ಘೋಷಣೆ ಕೇಳುತ್ತಲೇ ಮಂದಿರದ ಎಡೆಯಿಂದ ಅವರೆಲ್ಲರೂ ಹಾಗೆಯೇ ಘೋಷಿಸಿದರು.

ಶ್ರೀ ಧರ್ಮಶಾಸ್ತ ದೇವಮಂದಿರದ ಜೀರ್ಣೋದ್ಧಾರಕಾರ್ಯಕ್ರಮದ ಅಂಗವಾಗಿ ಮುಖ್ಯವಾದ ದೇವಪ್ರತಿಷ್ಠಾಕಾರ್ಯಕ್ರಮ ಪ್ರಾರಂಭವಾಯಿತು. ಎಲ್ಲರ ಪ್ರಾರ್ಥನೆಯಂತೆ ಶ್ರೀ ಅಯ್ಯಪ್ಪಸ್ವಾಮಿಯೇ ನೂತನ ಧರ್ಮಷಷ್ಠ ದೇವಮೂರ್ತಿಯ ಪ್ರತಿಷ್ಠಾಪನೆ ಮಾಡಲೊಪ್ಪುತ್ತಾನೆ. ಪ್ರತಿಷ್ಠಾಪನೆ ಮಹೋತ್ಸವದ ಅಂಗವಾಗಿ ಪಾಂಡ್ಯ ರಾಜಮನೆತನದ ಕುಲದೇವತೆ ಮೀನಾಕ್ಷೀದೇವಿಯ ವಿಗ್ರಹದ ಪ್ರತಿಷ್ಠಾಪನೆಯ ಕಾರ್ಯವೂ ನಡೆಯುತ್ತದೆ. ಅದಕ್ಕೆ ಮಾಳಿಕಾಪುರತಮ್ಮ ಎಂಬ ಅಭಿಧಾನವನ್ನಿತ್ತು ಶಕ್ತಿಕ್ಷೇತ್ರವಾಗಿ ಬೆಳಗಲಿ ಎಂದು ಸ್ವಾಮಿ ಹಾರೈಸುತ್ತಾನೆ. ಆಮೇಲೆ ಅಯ್ಯಪ್ಪಸ್ವಾಮಿಯು ವಿಧಿಯುಕ್ತವಾಗಿ ಮಂದಿರಕ್ಕೆ ಸೇರಲಿರುವ ಹದಿನೆಂಟು ಮೆಟ್ಟಿಲುಗಳನ್ನು ಏರಲು ಮುಂದಾದರು. ಸೈನಿಕರೆಲ್ಲ ತನ್ನನ್ನು ಹಿಂಬಾಲಿಸಬೇಕೆಂದು ಹೇಳಿದರು. ಮೆಟ್ಟಿಲುಗಳನ್ನು ಏರಿದನಂತರ

ಅಯ್ಯಪ್ಪಸ್ವಾಮಿಯು ತನ್ನ ಅಷ್ಟ ಆಯುಧಗಳು ಮತ್ತು ಖಡ್ಗವನ್ನು ಪಂದಾಳ ರಾಜನಾದ ರಾಜಶೇಖರನಿಗೆ ಆಶೀರ್ವಾದಪೂರ್ವಕವಾಗಿ ನೀಡಿದನು. ಎಲ್ಲರೂ ನಿತ್ಯ ಧರ್ಮ, ಭಗವದ್ಭಕ್ತಿ ಇವುಗಳಿಂದ ಕೂಡಿ ಬಾಳಬೇಕೆಂದೂ ಅದಕ್ಕೆ ಎಲ್ಲೆಲ್ಲೂ ಜಯ ಲಭಿಸುವುದೆಂದೂ ಅದನ್ನು ಅನುಸರಿಸುವವರಿಗೆ ದೈವಾನುಗ್ರಹ ಕೂಡಿಬರುವುದೆಂದೂ ದಿವ್ಯಧರ್ಮೋಪದೇಶ ಮಾಡಿದನು.

ಆದಾದನಂತರ ದೇವಮಂದಿರದಲ್ಲಿ ಪಾವನವಿಗ್ರಹದ ಪ್ರತಿಷ್ಠಾಪನೆ ಪ್ರಾರಂಭ ವಾಯಿತು. ಅಷ್ಟರಲ್ಲಿ ವೇದಮಂತ್ರಘೋಷಣೆ, "ಶರಣಮ್ ಸ್ವಾಮಿ ಶರಣಮ್" ಮಹಾಮಂತ್ರದ ಸಂಕೀರ್ತನೆಯ ಪುಣ್ಯಧ್ವನಿ ಗಗನಕ್ಕೇರಿತು. ಚಂಡೆ ಶಂಖ ಜಾಗಟೆ ಇತ್ಯಾದಿ ವಾದ್ಯತಾಳಗಳ ಮಂಜುಳನಿನಾದ ಪಾವನಸಂದರ್ಭಕ್ಕೆ ನೂತನ ಉತ್ಸಾಹ ಆವೇಶಗಳನ್ನು ತುಂಬುತ್ತಿತ್ತು. ಅಷ್ಟರಲ್ಲಿ ಅಯ್ಯಪ್ಪ ಸ್ವಾಮಿಯು ಮಂದಿರದಲ್ಲಿನ ನೂತನ ವಿಗ್ರಹವನ್ನು ದಿಟ್ಟಿಸಿ ನೋಡುತ್ತಾ ನಿಂತಿದ್ದಂತೆ ಒಮ್ಮೆಗೇ ಆದ ದಿವ್ಯಬೆಳಕಿನ ಮಿಂಚಾಗಿ ಪರಿವರ್ತನೆಗೊಂಡು ದೇವಾಲಯದೊಳಗಿನ ಪಾವನಮೂರ್ತಿಯಲ್ಲಿ ಆ ಬೆಳಕು ಲೀನವಾಯಿತು! ಅಲ್ಲಿದ್ದ ರಾಜನು ಆಗ 'ಓ ಎನ್ನ ಅಯ್ಯಪ್ಪಾ' ಎಂದು ದುಃಖ ದಿಂದ ಉದ್ಗರಿಸಿದ! ಅಷ್ಟರಲ್ಲಿ ಜನಸ್ತೋಮ 'ಸ್ವಾಮಿಯೇ ಶರಣಂ ಅಯ್ಯಪ್ಪ' ಎಂದು ಘೋಷಿಸಿದರು! ಹೀಗೆ ಧರ್ಮಶಾಸ್ತ ಅವತಾರವಾದ ಶ್ರೀ ಅಯ್ಯಪ್ಪ ಸ್ವಾಮಿಯ ಲೀಲಾ ವಿವರಗಳು ಸಮಾಪ್ತಗೊಂಡುವು.

ಪಂದಾಳ ಅರಸು ರಾಜಶೇಖರನು ಕೆಲಕಾಲ ಬಾಳಿ ಮುಂದೆ ಅವನ ವಂಶಜರು ಸುಖ ವಾಗಿ ಬಾಳಿಬೆಳಗಿದರು. ಆಮೇಲೆ ಕಾಲವು ಸರಿದಂತೆ ಪಂದಾಳ ರಾಜ್ಯವು ತಿರುವಾಂಕೂರು ಸಂಸ್ಥಾನದಲ್ಲಿ ವಿಲೀನವಾಯಿತು. ಮುಂದೆ ಶಬರಿಗಿರಿ ಮಂದಿರ ತಿರುವಾಂಕೂರು ದೇವಸ್ಥಾನ ಆಡಳಿತ ಸಮಿತಿಯ ಆಡಳಿತಕ್ಕೆ ಒಳಪಟ್ಟಿತು. ಆದರೆ ಇಂದಿಗೂ ಪಂದಾಳಂ ರಾಜಮನೆತನದವರು ಶಬರಿಮಲೆ ಶ್ರೀ ಅಯ್ಯಪ್ಪ ಕ್ಷೇತ್ರದ ಧಾರ್ಮಿಕ ವಿಧಿಗಳ ಮಟ್ಟಿಗೆ ಗೌರವಯುತವಾದ ಅಧಿಕಾರಿಗಳು ಎಂದು ಪರಿಗಣಿಸಲಾಗುತ್ತಿದೆ. ಅಷ್ಟೇ ಅಲ್ಲ, ಶ್ರೀ ಶಬರಿಮಲೆ ಅಯ್ಯಪ್ಪಸ್ವಾಮಿ ಮಂದಿರದ ಸ್ವರ್ಣಾಭರಣಗಳ ಭಂಡಾರವನ್ನು ಇಂದಿಗೂ ಪಂದಾಳ ರಾಜಮನೆತನದವರು ಭಯಭಕ್ತಿಯಿಂದ ಕೂಡಿ ಕಾಯ್ದಿರಿಸಿಕೊಂಡು ಬರುತ್ತಿದ್ದಾರೆ. ವರ್ಷಕ್ಕೊಮ್ಮೆ ಕೂಡಿಬರುವ ಮಕರಸಂಕ್ರಾಂತಿಯ ಮಹಾಉತ್ಸವದಂದು ಶ್ರೀ ಅಯ್ಯಪ್ಪಸ್ವಾಮಿ ಕ್ಷೇತ್ರಕ್ಕೆ ತಲಪುವಂತೆ ವಿಧಿಪ್ರಕಾರವಾಗಿ ಈ ಆಭರಣಗಳನ್ನು ಅರಮನೆಯಿಂದ ದೇವಮಂದಿರಕ್ಕೆ ಸಕಲ ರಾಜಗೌರವರಕ್ಷಣೆಗಳೊಡನೆ ಮೆರವಣಿಗೆಯಲ್ಲಿ ಹೊತ್ತು ತರುತ್ತಾರೆ.

ಶ್ರೀ ಅಯ್ಯಪ್ಪಸ್ವಾಮಿ ದರ್ಶನಕ್ಕೆ ತೆರಳಲು ವಿಧಿಪ್ರಕಾರವಾಗಿ ಮಾಲೆ ಧರಿಸಿದವರೆಲ್ಲ ಅಯ್ಯಪ್ಪಸ್ವಾಮಿಗಳೆಂದು ಗೌರವಿಸಲ್ಪಡುತ್ತಾರೆ. ಭಗವಾನ್ ಶ್ರೀ ಅಯ್ಯಪ್ಪಸ್ವಾಮಿಯು ಬೇರೆಯಲ್ಲ—ಸ್ವಾಮಿ ಭಕ್ತರು ಬೇರೆ ಅಲ್ಲ ಎಂಬುದು ಈ ನಿಲುವಿನ ತಾತ್ಪರ್ಯ. ಅನುಸಾರವಾಗಿ ಮಾಲಾಧಾರಿ 'ಸ್ವಾಮಿ'ಗಳನ್ನು ಕಂಡಾಗ, ಪರಸ್ಪರ ಭೇಟಿ ಆದಾಗ 'ಸ್ವಾಮಿ ಶರಣಂ' ಎಂದು ಹೇಳಬೇಕು. ವ್ರತ ಮುಗಿಯುವ ತನಕ 'ಸ್ವಾಮಿ'ಗಳನ್ನು ಬೇರೆ ಯಾವ ಹೆಸರಲ್ಲೂ ಕರೆಯಕೂಡದು ಎಂಬ ಸಂಪ್ರದಾಯವಿದೆ. ಕರಿ ಅಥವಾ

ನೀಲಿ ಇಲ್ಲವೇ ಕಾವಿ ಬಣ್ಣದ ಪಂಚೆಯನ್ನು ಅಯ್ಯಪ್ಪಸ್ವಾಮಿವ್ರತಧಾರಿಗಳು ತೊಡುತ್ತಾರೆ. ಕರಿ ಬಣ್ಣವು ಸಾವು-ನಷ್ಟ-ನೋವು ಇವುಗಳ ಸಂಕೇತ. ಈ ಪ್ರಪಂಚದ ಆಸೆ-ಆಮಿಷಗಳು—ಇವುಗಳ ಮಟ್ಟಿಗೆ ಅಯ್ಯಪ್ಪವ್ರತಧಾರಿಯು ಜೀವಂತನಲ್ಲ ಎಂಬುದರ ಅಂದರೆ ಅವನ್ನೆಲ್ಲ ತ್ಯಾಗಮಾಡಲಾಗಿದೆ ಎಂಬುದರ ಸಂಕೇತವಾಗಿ ಕರಿ ಬಣ್ಣದ ಉಡುಪು ಧರಿಸುತ್ತಾರೆ. ನೀಲಿಯು ಸರ್ವವ್ಯಾಪಕವಾದ ಆಕಾಶದ ಬಣ್ಣ—ಭಗವಂತನ ಸರ್ವ ವ್ಯಾಪಕತೆಯ ಸಂಕೇತ. ಭಗವಂತನನ್ನು ಎಲ್ಲೆಲ್ಲೂ ಇದ್ದಾನೆಂದು ಗ್ರಹಿಸಿ ಭಗವಂತನು ತನ್ನಲ್ಲೂ ಇದ್ದಾನೆಂದು ನಂಬಿ ಬಾಳಬೇಕು ಎನ್ನುವುದರ ಸಂಕೇತವಾಗಿ ನೀಲಿ ಬಣ್ಣದ ಉಡುಪು ಧರಿಸುವುದಾಗಿದೆ. ಕಾವಿ ಬಣ್ಣ ಅಗ್ನಿಯ, ತ್ಯಾಗದ ಸಂಕೇತ. ಅಗ್ನಿ ಎಲ್ಲವನ್ನೂ ದಹಿಸಿಬಿಡುತ್ತದೆ. ತ್ಯಾಗದಿಂದ ಅಮೃತತ್ವ ಲಭಿಸುತ್ತದೆ, ಆನಂದ ಲಭಿಸುತ್ತದೆ. ಭಗವದ್ಭಕ್ತಿ ಎನ್ನುವ ಅಗ್ನಿಕುಂಡದಲ್ಲಿ ಕಾಮಕ್ರೋಧಾದಿಗಳನ್ನು ಅರ್ಪಿಸಿ ನಿರ್ಮಲನೂ ನಿಶ್ಚಿಂತನೂ ಆಗಬೇಕು. ಕಾಮಕ್ರೋಧಾದಿಗಳ ತ್ಯಾಗದಿಂದ ಮಾತ್ರ ಚಿತ್ತಶಾಂತಿ, ಚಿತ್ತ ಶಾಂತಿಯಿದ್ದರೆ ಮಾತ್ರ ಭಗವಂತನ ದರ್ಶನ ಸಾಧ್ಯ ಎಂಬುದರ ಸಂಕೇತವೇ ಕಾವಿ ಬಟ್ಟೆಯ ಧಾರಣೆಯ ಮೂಲ ತಾತ್ಪರ್ಯ.

ಅಯ್ಯಪ್ಪಸ್ವಾಮಿ ವ್ರತವನ್ನು ಮಂಡಲವ್ರತವೆಂದು ಕರೆಯಲಾಗಿದ್ದು ಅದರ ಅವಧಿ ನಲ್ವತ್ತೊಂದು ದಿವಸವಾಗಿರುತ್ತದೆ. ವ್ರತದ ಅವಧಿಯು ವೃಶ್ಚಿಕಮಾಸದ ಮೊದಲ ದಿನ ಆರಂಭವಾಗುತ್ತದೆ (ನವಂಬರ್ ತಿಂಗಳಲ್ಲಿ). ಮಂಡಲವ್ರತ ಮುಗಿದಾಗ ಶಬರಿಮಲೆಯಲ್ಲಿ ಮಂಡಲ ಉತ್ಸವ ನಡೆಯುತ್ತದೆ. ಅದಾದನಂತರ ಮಕರಸಂಕ್ರಾಂತಿಯ ದಿವಸ ಮಹಾ ಮಂಗಲಕರವಾದ ಮಕರಜ್ಯೋತಿದರ್ಶನ ಉತ್ಸವ, ಶ್ರೀ ಅಯ್ಯಪ್ಪಸ್ವಾಮಿ ದಿವ್ಯದರ್ಶನ ವಾರ್ಷಿಕೋತ್ಸವ ನಡೆಯುತ್ತದೆ. ವರ್ಷದಲ್ಲಿ ಮಾರ್ಚ್-ಏಪ್ರಿಲ್‌ನಲ್ಲಿ ಕೂಡಿಬರುವ ಪಂಗುಣೀ ಉತ್ತರ ನಕ್ಷತ್ರ ಹಬ್ಬೋತ್ಸವ, ವಿಷುಸಂಕ್ರಮಣದ ದಿವಸ, ಮೇ-ಜೂನ್ ತಿಂಗಳಲ್ಲಿ ಕೂಡಿಬರುವ ದೇವಪ್ರತಿಷ್ಠಾ ದಿವಸ, ಆಗಸ್ಟ್-ಸೆಪ್ಟಂಬರದಲ್ಲಿ ಕೂಡಿಬರುವ ಓಣಂ ಹಬ್ಬದ ದಿವಸ, ನವಂಬರ್-ದಶಂಬರದಲ್ಲಿ ಕೂಡಿಬರುವ ಮಂಡಲ ಉತ್ಸವದ ೪೧ ದಿನಗಳ ಅವಧಿ, ಜನವರಿಯಲ್ಲಿ ಕೂಡಿಬರುವ ಮಕರಜ್ಯೋತಿದರ್ಶನ ಉತ್ಸವದ ಅವಧಿಗಳಲ್ಲಿ ಮಾತ್ರ ಶಬರಿಗಿರಿ ಕ್ಷೇತ್ರದಲ್ಲಿ ಯಾತ್ರಿಕರಿಗೆ ತೆರಳಲು ವಿಶೇಷವಾದ ಅವಕಾಶದೊಡನೆ ದೇವಸ್ಥಾನದ ದ್ವಾರವು ತೆರೆದಿರುತ್ತದೆ. ಮಲೆಯಾಳ ಸಂಪ್ರದಾಯದ ತಿಂಗಳ ಲೆಕ್ಕದಂತೆ ಪ್ರತಿ ತಿಂಗಳ ಮೊದಲನೇ ತೇದಿಯಿಂದ ಐದನೆಯ ತೇದಿವರೆಗೆ ಮಾತ್ರ ಇಲ್ಲಿ ದೇಗುಲದಲ್ಲಿ ನಿತ್ಯಪೂಜೆ ನಡೆಯುತ್ತದೆ. ಉಳಿದ ದಿವಸಗಳಲ್ಲಿ ಅಂದರೆ ಹಬ್ಬೋತ್ಸವ ದಿವಸಗಳನ್ನು ಬಿಟ್ಟು ಎಲ್ಲ ದಿವಸಗಳಲ್ಲೂ ದೇವಾಲಯವು ಪೂರ್ತಿಯಾಗಿ ಮುಚ್ಚಿರುತ್ತದೆ.

ಶಬರಿಗಿರಿ ಯಾತ್ರೆಗೆ ವಿಶೇಷವಾದ ವಿಧಿ-ವ್ರತದ ನಿಯಮಗಳಿವೆ. ಅವನ್ನು ಸಾರಾಂಶ ವಾಗಿ ಆಹಾರ, ನಡೆನುಡಿ ಎಲ್ಲದರಲ್ಲೂ ಹಿತ-ಮಿತ ಹಾಗೂ ತೀರಾ ಸಾತ್ವಿಕವಾಗಿರಬೇಕು ಎನ್ನಬಹುದು. ಕಠಿಣವಾದ ಬ್ರಹ್ಮಚರ್ಯಪಾಲನೆ, ಸತ್ಯ, ಅಹಿಂಸಾ, ಅಸ್ತೇಯ ಇತ್ಯಾದಿ ಕಟ್ಟುನಿಟ್ಟುಗಳ ಪಾಲನೆಯನ್ನು ಅಯ್ಯಪ್ಪವ್ರತಧಾರಿಗಳು ಅಗತ್ಯವಾಗಿ ನಡೆಸಬೇಕಾಗಿದೆ. ಈ ವಿಚಾರವಾಗಿ ಸೂಕ್ತವಾದ ಅಯ್ಯಪ್ಪ ಪಂಥದ ಗುರುಗಳಿಂದ ಉಪದೇಶ ಪಡೆಯ

ಬೇಕಾಗಿದೆ. ಅಯ್ಯಪ್ಪವ್ರತಧಾರಿಯಾಗಿ ಶಬರಿಗಿರಿಯಾತ್ರೆ ಅನೇಕ ಬಾರಿ ನಡೆಸಿ ಅನುಭವವಿರುವ ಹಿರಿಯರೇ ಅಯ್ಯಪ್ಪ ಪಂಥದ ಮಾಲಾಧಾರಣ ದೀಕ್ಷಾಗುರುಗಳು (ಗುರುಸ್ವಾಮಿಗಳು). ಗುರುವಿನಿಂದ ಜಪಮಾಲಾ ಸ್ವೀಕರಣೆ, ವ್ರತನಿರ್ಧಾರ, ಬೆಳಿಗ್ಗೆ ಸಂಜೆ ಎರಡು ಬಾರಿ ತಣ್ಣೀರು ಸ್ನಾನ, ತನ್ನ ಸಂಸಾರದಿಂದ ದೂರದಲ್ಲಿ ವಾಸ, ಭಗವದ್ಭಜನೆ—ಇವೆಲ್ಲ ಅಯ್ಯಪ್ಪವ್ರತಧಾರಿಗಳು ಅನುಸರಿಸಬೇಕಾದ ಕೆಲವು ವಿಧಿನಿಯಮಗಳು. ಶಬರಿಮಲೆ ಯಾತ್ರೆಗೆ ಊರಿಂದ ಹೊರಡುವ ಮುನ್ನ ಇರುಮುಡಿ ಕಟ್ಟುವುದು ಎಂಬ ಕ್ರಿಯೆಯನ್ನು ನಡೆಸುತ್ತಾರೆ. ಅದು ಬಹಳ ಪ್ರಮುಖವಾದ ಕ್ರಿಯೆ ಆಗಿರುತ್ತದೆ. ಇರುಮುಡಿ ಎಂದರೆ ಎರಡು ಬದಿಯಲ್ಲಿ ಒಂದೊಂದು ಚೀಲವನ್ನು ಒಳಗೊಂಡ ಉದ್ದನೆಯ ಬಟ್ಟೆಯ ಚೀಲ. ಮುಂಭಾಗದ ಚೀಲದಲ್ಲಿ ಶ್ರೀ ಅಯ್ಯಪ್ಪ ದೇವರಿಗೆ ಅಭಿಷೇಕ ಮಾಡಿಸಲು ಶುದ್ಧವಾದ ತುಪ್ಪವನ್ನು ತುಂಬಿದ ತೆಂಗಿನಕಾಯಿ, ಕರ್ಪೂರ, ಪನ್ನೀರುಕುಪ್ಪಿ, ಕಲ್ಲುಸಕ್ಕರೆ, ದ್ರಾಕ್ಷಿ, ಗೋಡಂಬಿ, ಖರ್ಜೂರ, ಜೇನುತುಪ್ಪ, ಬೆಲ್ಲ, ಅರಳು, ದೇವರ ಕಾಣಿಕೆ ಹಣ ಇತ್ಯಾದಿ ದೇವರ ಪೂಜಾಸಾಮಗ್ರಿಗಳು ಇರುತ್ತವೆ. ಹಿಂಭಾಗದ ಚೀಲವು ಅಕ್ಕಿ, ಬೇಳೆ, ಸಂಬಾರ ಪದಾರ್ಥಗಳನ್ನು ಒಳಗೊಂಡಿರುತ್ತದೆ. ಇರುಮುಡಿ ಕಟ್ಟನ್ನು ಗುರುಸ್ವಾಮಿಯ ನೇತೃತ್ವದಲ್ಲಿ ವಿಧಿಪ್ರಕಾರವಾಗಿ ಅಯ್ಯಪ್ಪ ವ್ರತಧಾರಿಗಳು ಶಬರಿಯಾತ್ರೆಗೆ ಹೊರಡುವ ಮುನ್ನ ಕಟ್ಟಬೇಕು. ಆಮೇಲೆ ಇರುಮುಡಿ ಕಟ್ಟನ್ನು ತಲೆಯ ಮೇಲೆ ಹೊತ್ತುಕೊಂಡು ಊರಿನ ದೇವಾಲಯಕ್ಕೆ ತೆರಳಿ ಶಬರಿಗಿರಿ ಎಡೆಗೆ ಯಾತ್ರೆ ಹೊರಡಬೇಕು.

ಅಯ್ಯಪ್ಪವ್ರತಧಾರಿ ಶಬರಿಗಿರಿಗೆ ತಲಪಿದಂತೆ ಅಯ್ಯಪ್ಪಸ್ವಾಮಿ ದೇಗುಲವನ್ನು ತಲಪುವ ಮುನ್ನ ಪವಿತ್ರವಾದ ಹದಿನೆಂಟು ಮೆಟ್ಟಲುಗಳನ್ನು ವಿಧಿಯುಕ್ತವಾಗಿ ಹತ್ತಿ ಹೋಗಬೇಕು. ಮಾನವನನ್ನು ಭವಬಂಧನದಲ್ಲಿ ಸಿಲುಕಿಸಿರುವ ಪಂಚ ಇಂದ್ರಿಯಗಳು, ಅಷ್ಟರಾಗಗಳು, ತ್ರಿಗುಣಗಳು, ಎರಡು ವಿದ್ಯೆಗಳು ಎಂಬ ಈ ಹದಿನೆಂಟು ಅಂಶಗಳನ್ನು ತಪೋವ್ರತದಿಂದ ಮೆಟ್ಟಿ ಬಿಡಿಸಿಕೊಂಡು ಮೇಲೇರಿಹೋಗಬೇಕು. ಹೋದರೆ ದೇವರ ದರ್ಶನವಾಗಿ ಭವಬಂಧನದಿಂದ ಮುಕ್ತಿ ಆಗುತ್ತದೆ ಎಂಬುದರ ಸಂಕೇತವಾಗಿ ಈ ಹದಿನೆಂಟು ಮೆಟ್ಟಲುಗಳನ್ನು ಅಲ್ಲಿ ನಿರ್ಮಿಸಿದ್ದು. ಶ್ರೀ ಅಯ್ಯಪ್ಪವ್ರತಧಾರಿಗಳು ಅದನ್ನು ಹತ್ತಿ ಶ್ರೀ ಅಯ್ಯಪ್ಪಸ್ವಾಮಿ ದೇಗುಲಕ್ಕೆ ತೆರಳಬೇಕೆನ್ನುವ ನಿಯಮವನ್ನು ಅಯ್ಯಪ್ಪವ್ರತದ ಅಂಗವೆಂದು ಪರಿಗಣಿಸಲಾಗಿದೆ. ಶಬರಿಗಿರಿ ಯಾತ್ರೆಯನ್ನು ಸ್ತ್ರೀಯರಲ್ಲಿ ಎಳೆಯ ಬಾಲಕಿಯರು ಹಾಗೂ ವೃದ್ಧೆಯರು ಮಾತ್ರ ಕೈಗೊಳ್ಳಲು ದೇವಾಲಯದ ನಿಯಮಾವಳಿಯಂತೆ ಅನುಮತಿ ಇದೆ ಎನ್ನುವುದು ಗಮನಾರ್ಹವಾದ ವೈಶಿಷ್ಟ್ಯವಾಗಿದೆ.

ಕೇರಳ ರಾಜ್ಯದಲ್ಲಿ ದಟ್ಟವಾದ ಅರಣ್ಯಪ್ರದೇಶವನ್ನು ಒಳಗೊಂಡಿರುವ ಶಬರಿಗಿರಿಯಲ್ಲಿ ನೆಲೆಗೊಂಡಿರುವ ಶಬರಿಮಲೆ ಶ್ರೀ ಅಯ್ಯಪ್ಪಸ್ವಾಮಿ ಕ್ಷೇತ್ರ ಇಂದು ಮಹತ್ ಪ್ರಸಿದ್ಧಿಯ ಪುಣ್ಯಕ್ಷೇತ್ರ. ಪರಮಾತ್ಮನ ಅವತಾರವಾದ ಅಯ್ಯಪ್ಪಸ್ವಾಮಿ ಇಂದು ಕೋಟ್ಯಂತರ ಮಂದಿಯ ಪಾಲಿಗೆ ಪುಣ್ಯಶಕ್ತಿಯ ಪ್ರತೀಕ, ಅನುಗ್ರಹದ ಸಂಕೇತ, ಅಭಯಾಶೀರ್ವಾದದ ಮಹಾಮೂರ್ತಸ್ವರೂಪ.

ಜೀವಾತ್ಮನ ಪರಮಾತ್ಮನೆಡೆಗೆ ಸಾಗುವ ಸಾಧನಯಾತ್ರೆಯ ಕುರಿತಾದ ಪ್ರಾಯೋಗಿಕ

ವಿವರಣೆಯಂತಿರುವ ಶ್ರೀ ಶಬರಿಗಿರಿ ಯಾತ್ರೆ–ವ್ರತಗಳು ಆಧುನಿಕ ಯುಗದಲ್ಲಿ ಜೀವಂತವಾಗಿರುವ ಹಿಂದೂಧರ್ಮದ ಒಂದು ಸುಂದರ ಮುಖ! ವರ್ಷದಿಂದ ವರ್ಷಕ್ಕೆ, ಪೀಳಿಗೆಯಿಂದ ಪೀಳಿಗೆಗೆ ಅಸಂಖ್ಯಾತ ಭಕ್ತರನ್ನು ಆಕರ್ಷಿಸಿ ಅನುಗ್ರಹಿಸುವ ಶ್ರೀ ಅಯ್ಯಪ್ಪ ಸ್ವಾಮಿಯು ಭಗವಂತನ ದಿವ್ಯಮಂಗಳಮಹಿಮೆಯ ಕುರಿತಾದ ಒಂದು ನಿತ್ಯನೂತನ ವಿಶ್ವವ್ಯಾಪಕ ನಿದರ್ಶನವಾಗಿ ಬೆಳಗುತ್ತಿದ್ದಾನೆ.

## ೫. ಹರೇಕೃಷ್ಣ ಪಂಥ

ಹರೇಕೃಷ್ಣ ಪಂಥದವರು ಎಂದರೆ ಶ್ರೀಕೃಷ್ಣನನ್ನೇ ಪ್ರಕಟಿತ ಪರಮಾತ್ಮ ಎಂದು ನಂಬಿ ಅವನ ಜೀವನಲೀಲಾವೃತ್ತಾಂತಗಳ ಕುರಿತು ಧ್ಯಾನ-ಚಿಂತನೆ ಮಾಡುತ್ತಾ ಭವಬಂಧ ವಿಮುಕ್ತಿಗಾಗಿ ಸಾಧಿಸುವವರು ಎಂದು ತಾತ್ಪರ್ಯ. ಇವರು ವೈಷ್ಣವಪಂಥದವರಾಗಿದ್ದು ಈ ಪಂಥಕ್ಕೆ ಪ್ರಾಚೀನವಾಗಿ ಬಂಗಾಳದ ನವದ್ವೀಪದ ಸ್ವಾಮಿ ಶ್ರೀ ಚೈತನ್ಯ ಮಹಾಪ್ರಭುಗಳು ಮತಪ್ರವರ್ತನಾಚಾರ್ಯರು ಆಗಿರುತ್ತಾರೆ. ಶ್ರೀ ಚೈತನ್ಯ ಮಹಾಪ್ರಭುಗಳಿಂದ ಮೂಲವಾಗಿ ಪ್ರಣೀತವಾದ ಈ ಪಂಥಕ್ಕೆ ತಾತ್ತ್ವಿಕವಾಗಿ ಅಚಿಂತ್ಯಭೇದಾಭೇದ ಪಂಥ ಎಂದೂ, ಸಾಂಪ್ರದಾಯಿಕವಾಗಿ ಗೌಡೀಯ ಪಂಥ, ವಂಗಪಂಥ ಎಂದೂ ಹೆಸರಿದೆ.

ಸುಮಾರು ೧೫ನೇ ಶತಮಾನದಲ್ಲಿ ಬಂಗಾಳದಲ್ಲಿ ಅವತರಿಸಿದ ಶ್ರೀ ಚೈತನ್ಯ ಮಹಾಪ್ರಭುಗಳ (ಶ್ರೀ ಗೌರಾಂಗ ಮಹಾಪ್ರಭುಗಳ) ಅಚಿಂತ್ಯಭೇದಾಭೇದ ವೈಷ್ಣವಪಂಥದ ನೂತನ ಸಂಸ್ಕರಣವೇ ಹರೇಕೃಷ್ಣ ಪಂಥ. ಈ ಪಂಥದವರ ಸಾಧನಾಸೂತ್ರಗಳಲ್ಲಿ ಸಂಕೀರ್ತನೆ ಬಹಳ ಪ್ರಾಮುಖ್ಯವಾದ ಅಂಶವಾಗಿದೆ. ಹಾಗಾಗಿ ಈ ಪಂಥಕ್ಕೆ ಸಂಕೀರ್ತನ ಪಂಥ ಎಂದೂ ಸಾಮಾನ್ಯವಾಗಿ ಹೇಳುವುದಿದೆ.

ಹರೇಕೃಷ್ಣ ಪಂಥವನ್ನು ಆಧುನಿಕ ಕಾಲದಲ್ಲಿ ಸಂಸ್ಥಾಪಿಸಿ ಲೋಕಪ್ರಿಯಗೊಳಿಸಿದ ಕೀರ್ತಿ ಶ್ರೀ ಅಭಯಚರಣ ಭಕ್ತಿವೇದಾಂತ ಸ್ವಾಮಿ ಪ್ರಭುಪಾದರವರಿಗೆ ಸಲ್ಲುತ್ತದೆ.

ಶ್ರೀಕೃಷ್ಣನನ್ನೇ ಸರ್ವೋತ್ಕೃಷ್ಟ ಬ್ರಹ್ಮ ಎಂದು ಹೇಳಿ ಬ್ರಹ್ಮ ಎಂದರೆ ಮಾಯಾವಂತ ಮತ್ತು ಮಹಿಮೆಯನ್ನು ಉಂಟುಮಾಡತಕ್ಕವ ಎಂಬ ಎರಡು ಅರ್ಥವೂ ಇದೆ ಎಂದು ಈ ಪಂಥದವರು ಹೇಳುತ್ತಾರೆ. ಅಚಿಂತ್ಯ ಎಂದರೆ ಬ್ರಹ್ಮ ಮತ್ತು ಜೀವ ಇವರೊಳಗೆ ಸಮಗ್ರವಾದ ಭೇದವೆಂದಾಗಲಿ, ಸಮಗ್ರವಾದ ಅಭೇದ ಎಂದಾಗಲಿ ತಿಳಿಯಲು ಸಾಧ್ಯವಾಗದು. ಹೇಗೆ ಬೆಂಕಿ ಮತ್ತು ಅದರ ಶಾಖವು ಬೇರೆ ಬೇರೆ ಎನ್ನುವುದು ಹೌದು ಹಾಗೂ ಅಲ್ಲ ಎಂಬಂತಿದೆಯೋ ಹಾಗೆಯೇ ಬ್ರಹ್ಮ ಮತ್ತು ಜೀವಜಗತ್ತುಗಳ ಒಳಗಿನ ಸಂಬಂಧವನ್ನು ಸ್ಪಷ್ಟೀಕರಿಸಲಾಗುವಂತಿಲ್ಲ ಎಂಬುದಾಗಿ ಈ ಪಂಥದವರು ಹೇಳುತ್ತಾರೆ. ಹಾಗಾಗಿ ಈ ಪಂಥಕ್ಕೆ ಅಚಿಂತ್ಯಭೇದಾಭೇದ ಪಂಥ ಎಂಬ ಹೆಸರು ಬಂದಿರುತ್ತದೆ.

ಹಾಗಾದರೆ ಈ ಪಂಥದವರಿಗೆ ಶ್ರೀಕೃಷ್ಣ ಏಕೆ ಬ್ರಹ್ಮನಾದ? ಬ್ರಹ್ಮನು ಸತ್ಯ, ಶಿವ ಹಾಗೂ ಸುಂದರ. ಬ್ರಹ್ಮನು ಆನಂದಮಯನಾಗಿದ್ದು ಮಧುರವೂ, ಪ್ರೀತ್ಯಾಸ್ಪದನೂ

ಆಗಿರುತ್ತಾನೆ. ಹಾಗಾಗಿ ಅತ್ಯಂತ ಆಕರ್ಷಿತನಾಗಿರುತ್ತಾನೆ. ಆದುದರಿಂದ ಅವನು ಕೃಷ್ಣನೆಂದು ಕರೆಯಲ್ಪಡುತ್ತಾನೆ. ಕೃಷ್ಣನೆಂದರೆ ಆಕರ್ಷಣೆ ಉಂಟುಮಾಡುವವ, ಆಕರ್ಷಕ ಶಕ್ತಿಯಿಂದ ಸಂಪನ್ನನಾದವ ಎಂದು ತಾತ್ಪರ್ಯ. ಕೃಷ್ಣನು ಪರಮೋತ್ಕೃಷ್ಟವಾದ ಆಕರ್ಷಕ ಕೇಂದ್ರಶಕ್ತಿ, ದಿವ್ಯಶಕ್ತಿ. ಅವನು ಇಳೆಯಲ್ಲಿ ಲೋಕೋದ್ಧಾರಕ್ಕಾಗಿ ಅವತರಿಸು ತ್ತಾನೆ. ಬ್ರಹ್ಮ-ವಿಷ್ಣು-ಶಿವ ಇವೆಲ್ಲ ಕೃಷ್ಣನ ವಿಕಾಸಗೊಂಡ ದಿವ್ಯಸ್ವರೂಪಗಳು, ಅವುಗಳಲ್ಲಿ ಮಹಾವಿಷ್ಣುವು ಮುಖ್ಯವಾದುದು, ಪ್ರಭಾವಪೂರ್ಣವಾದುದು. ಮಹಾ ವಿಷ್ಣುವು ಜಗನ್ನಿಯಾಮಕ-ಜಗತ್ಕಾರಣ ಮಹಾಶಕ್ತಿ. ಅವನ ಎರಡನೇ ಸ್ವರೂಪವೇ ಗರ್ಭೋದಕಶಾಯಿ ವಿಷ್ಣು (ಹಿರಣ್ಯಗರ್ಭ). ಇವನು ವಿಶ್ವದ ಒಡೆಯ. ಇವನಿಂದ ರಕ್ತ ವರ್ಣದ ಪದ್ಮ ಹುಟ್ಟಿ ಅದರಲ್ಲಿ ಬ್ರಹ್ಮನು ಬೆಳಗುತ್ತಾನೆ. ಅವನೇ ಜಗತ್ತಿನ ಚರಾಚರ ವಸ್ತುಗಳ ಸೃಷ್ಟಿಕಾರಕ. ಅವನಲ್ಲಿ ಕೃಷ್ಣನ ಪೂರ್ಣದಿವ್ಯಕಲೆಯ ಎಪ್ಪತ್ತೆಂಟು ಅಂಶಗಳಿವೆ. ಅವನಿಂದ ಸೃಷ್ಟಿಸಲ್ಪಟ್ಟ ಜೀವರುಗಳಲ್ಲಿಯೂ ಈ ಅಂಶ ಕಿರುಪ್ರಮಾಣದಲ್ಲಿ ಇವೆ. ಬ್ರಹ್ಮನು ನೂರುವರ್ಷದ ಆಯುಸ್ಸಿನ ಕೊನೆಯಲ್ಲಿ ಜಗತ್ತಿನಲ್ಲಿ ಪ್ರಳಯವನ್ನು ಉಂಟು ಮಾಡಲು ಹಿರಣ್ಯಗರ್ಭವಿಷ್ಣುವು ಶಿವನ ಸ್ವರೂಪ ತಾಳುತ್ತಾನೆ. ವಿಷ್ಣುವಿನ ಮೂರನೇ ಸ್ವರೂಪವೇ ಕ್ಷೀರೋದಕಶಾಯಿ ವಿಷ್ಣು. ಅವನು ಎಲ್ಲರ ಹೃದಯದಲ್ಲಿ ನೆಲೆಸಿದ್ದು ಜಗನ್ನಿಯಾಮಕನಾಗಿದ್ದಾನೆ. ಕರ್ಮನಿಯಮಗಳನ್ನು ನಿಯಂತ್ರಿಸುತ್ತಾನೆ. ಮಹಾವಿಷ್ಣುವು ಮತ್ಸ್ಯ, ಕೂರ್ಮ, ವರಾಹ, ವಾಮನ ಇತ್ಯಾದಿ ಅವತಾರಗಳನ್ನು ಎತ್ತಿರುತ್ತಾನೆ. ಆಮೇಲೆ ಸುಮಾರು ಐದು ಸಾವಿರ ವರ್ಷಗಳ ಹಿಂದೆ ಶ್ರೀಕೃಷ್ಣನಾಗಿ ಮಥುರಾನಗರದಲ್ಲಿ ಅವತರಿಸಿ ಬೃಂದಾವನದಲ್ಲಿ ಅವತಾರಲೀಲೆಯನ್ನು ನಡೆಸಿರುತ್ತಾನೆ. ಅದೇ ಮಹಾ ಪರಮಾತ್ಮಶಕ್ತಿಯ ಪೂರ್ಣ ಅವತಾರ. ಆದುದರಿಂದ ಶ್ರೀಕೃಷ್ಣ ಪೂರ್ಣಾವತಾರಿ ಪುಣ್ಯ ಚರಿತ. ಆ ಕೃಷ್ಣನ ಚಿಂತನೆ, ಭಜನೆ, ಧ್ಯಾನಗಳಿಂದ ಈ ಯುಗದಲ್ಲಿ ಜೀವಿಗಳಿಗೆ ಮುಕ್ತಿ. ಇಹದಲ್ಲಿ ಶ್ರೀಕೃಷ್ಣನೊಬ್ಬನೇ ಪುರುಷ. ಉಳಿದ ಜೀವರುಗಳೆಲ್ಲ ಸ್ತ್ರೀಯರು. ಸ್ತ್ರೀ-ಪುರುಷರೆಂಬ ಲಿಂಗಭೇದ ಕೇವಲ ಶಾರೀರಿಕ-ಭೌತಿಕ. ಅದಕ್ಕೆ ಅನುಗುಣವಾಗಿ ಎಲ್ಲರೂ ಶ್ರೀಕೃಷ್ಣನ ದಾಸ-ದಾಸಿಯರು. ಶ್ರೀಕೃಷ್ಣನನ್ನು ಪ್ರೇಮಪೂರ್ವಕ ಆರಾಧಿಸಿ ಅವನನ್ನು ತನ್ನ ಹೃದಯದಲ್ಲಿ ಹಾಗೂ ಎಲ್ಲೆಲ್ಲೂ ಕಾಣುವುದೇ ದಿವ್ಯಾನಂದ. ಇದೇ ಶ್ರೀಕೃಷ್ಣ ಪ್ರಜ್ಞೆ. ಇದೇ ಬಾಳಿನ ಗುರಿ. ಇದರ ಸಾಧನೆಗೆ ಕೃಷ್ಣಭಕ್ತಿ-ಭಜನೆ-ನಾಮಸಂಕೀರ್ತನೆ, ಕೃಷ್ಣಭಕ್ತರ ಸತ್ಸಂಗ, ಕೃಷ್ಣಲೀಲಾಕಥಾಶ್ರವಣ, ಶ್ರೀಕೃಷ್ಣ ಅವತಾರಲೀಲಾಧಾಮವಾದ ಬೃಂದಾವನದ ವಾಸ (ಭೌತಿಕವಾಗಿ ಆಗದಿದ್ದರೆ ಮಾನಸಿಕವಾಗಿಯಾದರೂ ವಾಸ); ರಾಧಾಸಮೇತ ಶ್ರೀಕೃಷ್ಣಮೂರ್ತಿಯನ್ನು ಸಾಕ್ಷಾತ್ ಶ್ರೀಕೃಷ್ಣ ಎಂಬ ಭಕ್ತಿಶ್ರದ್ಧೆಗಳಿಂದ ಕೂಡಿ ಪೂಜಿಸುವಿಕೆ ಇವುಗಳು ಅನುಕೂಲಸಾಧನಾವಿಧಾನಗಳು. ಶ್ರೀಕೃಷ್ಣನ ಭೂಲೋಕ ದಲ್ಲಿನ ದಿವ್ಯಲೀಲಾಸ್ಥಳವೇ ಮಥುರಾನಗರದ ಬಳಿಯ ಬೃಂದಾವನ (ವೃಂದಾವನ). ಅವನ ಮಹೋನ್ನತ ನಾರಾಯಣಸ್ವರೂಪದ ದಿವ್ಯಧಾಮವೇ ಭೂಲೋಕದಿಂದ ಬೇರೆ ಯಾಗಿರುವ ಪಾವನ ವೈಕುಂಠಲೋಕ. ಶ್ರೀಕೃಷ್ಣಭಕ್ತಿಯಲ್ಲಿ ಸಿದ್ಧಿಹೊಂದಿದವರು ಶ್ರೀಕೃಷ್ಣನಲ್ಲಿ ವೃಂದಾವನದಲ್ಲಿ ಸೇರಿ ಸೇವಿಸುತ್ತಾರೆ. ಈ ಪದವಿಗೆ ಪ್ರಾಪ್ತಿ ಎಂದು ಹೆಸರು. ಇನ್ನು ಅನೇಕರು ವೈಕುಂಠವನ್ನು ಸೇರಿ ಶ್ರೀಮನ್ನಾರಾಯಣನ ಪಾವನ

ಸಾಮೀಪ್ಯದಲ್ಲಿ ಮುಕ್ತಿ ಆನಂದವನ್ನು ಅನುಭವಿಸುತ್ತಿರುತ್ತಾರೆ—ಎಂಬುದು ಈ ಪಂಥದವರ ಸಾಧನೆ-ಮುಕ್ತಿವಿಚಾರಗಳ ಬಗೆಗೆ ಮುಖ್ಯ ನಂಬಿಕೆಯಾಗಿದೆ.

ಹರೇಕೃಷ್ಣ ಪಂಥದವರಿಗೆ ವೇದೋಪನಿಷತ್ತುಗಳು ಪರಮ ಆಧಾರಗ್ರಂಥಗಳು. ಮಹರ್ಷಿ ವೇದವ್ಯಾಸಪ್ರಣೀತವಾದ 'ಬ್ರಹ್ಮಸೂತ್ರಗಳು' ಮಾನ್ಯಗ್ರಂಥವಾಗಿದೆ. ಆದರೆ ಮಹರ್ಷಿ ವೇದವ್ಯಾಸರಿಂದ ರಚಿತವಾದ ಭಕ್ತಿ-ಜ್ಞಾನಸಮ್ಮಿಶ್ರವಾದ, ಶ್ರೀಕೃಷ್ಣ ಅವತಾರ ಲೀಲಾಕಥನವನ್ನು ಒಳಗೊಂಡ ಶ್ರೀಮದ್ಭಾಗವತ ಮಹಾಪುರಾಣಗ್ರಂಥ ಬ್ರಹ್ಮಸೂತ್ರಗಳಿಗೆ ಬರೆದ ಭಾಷ್ಯದಂತಿದೆ ಎನ್ನುವುದು ಈ ಪಂಥದವರ ನಿಲವು-ಒಲವು. ಹಾಗಾಗಿ ಶ್ರೀಮದ್ಭಾಗವತವು ಹರೇಕೃಷ್ಣ ಪಂಥದವರಿಗೆ ಅತ್ಯಂತ ಆದರಣೀಯ ಆಧಾರಗ್ರಂಥವಾಗಿದೆ. ಶ್ರೀಮದ್ಭಗವದ್ಗೀತೆಯು ಶ್ರೀಕೃಷ್ಣನ ಅಮರವಾಣಿ ಎಂದು ಈ ಪಂಥದವರಿಗೆ ಭಾಗವತದಂತೆಯೇ ಗೌರವಾನ್ವಿತ ಗ್ರಂಥ. ನಿತ್ಯಪಾರಾಯಣದ ಪಾವನ ಗ್ರಂಥ. ಜೊತೆಗೆ ಈ ಪಂಥದ ಆದ್ಯಪ್ರವರ್ತನ ಆಚಾರ್ಯರಾದ ಶ್ರೀಕೃಷ್ಣಚೈತನ್ಯ ಮಹಾಪ್ರಭುಗಳ ಜೀವನ-ಸಂದೇಶಗಳನ್ನು ಒಳಗೊಂಡ ಶ್ರೀಚೈತನ್ಯಲೀಲಾಮೃತ ಈ ಪಂಥದವರಿಗೆ ನಿತ್ಯ ಪೂಜ್ಯವಾದ ಸ್ಫೂರ್ತಿದಾಯಕವಾದ ಆಧಾರಗ್ರಂಥವಾಗಿದೆ.

ವರ್ಣಾಶ್ರಮ, ವರ್ಣಧರ್ಮ ಇವುಗಳನ್ನು ಗುಣಕರ್ಮಗಳ ಆಧಾರದಲ್ಲಿ ಮಾನ್ಯ ಮಾಡುವ ಹರೇಕೃಷ್ಣ ಪಂಥದವರಿಗೆ ಜಾತಿ-ಮತ-ಜನಾಂಗಗಳ ಭೇದಭಾವ ಇಲ್ಲ. ಎಲ್ಲರೂ ಬ್ರಾಹ್ಮಣತ್ವದ ಉನ್ನತ ಆದರ್ಶವನ್ನು ಪರಿಪಾಲಿಸುವವರು ಆಗಬೇಕು ಎಂಬುದು ಈ ಪಂಥದವರ ಬಯಕೆ-ಧ್ಯೇಯಧೋರಣೆ. ಹಾಗಾಗಿ ಈ ಪಂಥಕ್ಕೆ ಸೇರಬೇಕಾದವರು ಬ್ರಾಹ್ಮಣತ್ವದ ದೀಕ್ಷೆಹೊಂದಿ, ಜನಿವಾರ ಧರಿಸಿ, ಗಾಯತ್ರೀಮಂತ್ರ ಜಪಿಸುತ್ತ, ಆಶ್ರಮಧರ್ಮಕ್ಕೆ ತಕ್ಕಂತೆ ಬಾಳಬೇಕು. ಹರೇಕೃಷ್ಣ ಮಹಾಮಂತ್ರವು ಸರ್ವದುಃಖ, ಬಂಧನ, ಗಂಡಾಂತರಗಳನ್ನು ಎಲ್ಲ ಕಾಲದಲ್ಲೂ ತಪ್ಪಿಸಿ ಜೀವಿಯನ್ನು ರಕ್ಷಿಸಿ ಮುಕ್ತಿಯನ್ನು ನೀಡುವ ಮಹಾಮಂತ್ರ. ಹಾಗಾಗಿ ಅದನ್ನು ಸಾಧ್ಯವಾದಾಗಲೆಲ್ಲ ದೇಶ-ಕಾಲ-ಸನ್ನಿವೇಶಗಳ ಅಡೆತಡೆ ಇಲ್ಲದೆ ಮನಸ್ಸಿನಲ್ಲಿ ಗಟ್ಟಿಯಾಗಿ ಹೇಳುತ್ತಿರಬೇಕು. ಅದರಿಂದ ದೇಹ-ಮನ-ಬುದ್ಧಿಗಳ ಶುದ್ಧಿಯಾಗಿ ದಿವ್ಯಚೈತನ್ಯ ಉದ್ದೀಪನಗೊಂಡು ಶ್ರೀಕೃಷ್ಣಪ್ರಜ್ಞೆ ಅಂತರಂಗದಲ್ಲಿ ಮೂಡುತ್ತದೆ ಎಂಬುದು ಈ ಪಂಥದವರ ಪರಂಪರಾಗತ ನಂಬಿಕೆ, ನಿತ್ಯಾನುಷ್ಠಾನ ಸಾಧನಾಸೂತ್ರ.

ಹರೇಕೃಷ್ಣ ಪಂಥದ ಮಹಾಮಂತ್ರದ ಪೂರ್ಣಪಾಠ ಹೀಗಿದೆ :

ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ ।
ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ ॥

ಹರೇಕೃಷ್ಣ ಪಂಥಕ್ಕೆ ಸೇರಬೇಕಾದವರು ಅರ್ಹತೆಪಡೆಯಲು ಮುಖ್ಯವಾಗಿ ಈ ನಾಲ್ಕು ಅಂಶಗಳನ್ನು ಪೂರ್ತಿಯಾಗಿ ತ್ಯಜಿಸಿದವರಾಗಿರಬೇಕು :

೧. ಮಾಂಸಾಹಾರಸೇವನೆ.

೨. ಮದ್ಯಪಾನ.

೩. ಪರಸ್ತ್ರೀಗಮನ.

೪. ಜೂಜಾಟ ಹಾಗೂ ದುಷ್ಟವಿಚಾರಗಳ ಕುರಿತು ಚಿಂತನೆ-ಸಂಕಲ್ಪಗಳು.

ಹರೇಕೃಷ್ಣ ಪಂಥದವರು ಈ ಪಂಚತತ್ತ್ವಗಳಿಗೆ ಬದ್ಧರಾಗಿರುತ್ತಾರೆ :

೧. ನಾನು ಈ ಶರೀರವಲ್ಲ, ದಿವ್ಯಚೈತನ್ಯ.
೨. ಶ್ರೀಕೃಷ್ಣನೇ ಪರಮೋನ್ನತ ಸಾಕಾರಪ್ರಕಾಶ.
೩. ಶ್ರೀಕೃಷ್ಣನು ನಾಮರೂಪಗಳಲ್ಲಿ ಅಭೇದನು.
೪. ಜೀವಿಗಳು ಶ್ರೀಕೃಷ್ಣನ ನಿರಂತರ ದಾಸ–ದಾಸಿಯರು (ಸೇವಕರು).
೫. ಜೀವನದ ಗುರಿಯು ಶ್ರೀಕೃಷ್ಣಪ್ರಜ್ಞೆಯನ್ನು ಹೊಂದಿ ಅವನೊಡನೆ ಚಿರಮಧುರ ಸಂಬಂಧವನ್ನು ಬೆಳೆಸುವುದು.

ಹರೇಕೃಷ್ಣ ಪಂಥದಲ್ಲಿ ಶಾಸ್ತ್ರಸಮ್ಮತವಾದ ರೀತಿಯಲ್ಲಿ ವಿವಾಹವಾಗಿ ಗೃಹಸ್ಥಭಕ್ತನಾಗಿ ಬಾಳಬಹುದು. ವಿಧಿಯುಕ್ತವಾಗಿ ಸಂನ್ಯಾಸ ಸ್ವೀಕರಿಸಿ ಜೀವನ ನಡೆಸಬಹುದು. ಹೀಗೆ ಆಶ್ರಮಧರ್ಮವನ್ನು ಕಟ್ಟುನಿಟ್ಟಾಗಿ ಪಾಲಿಸುವ, ರಾಧಾಸಮೇತ ಶ್ರೀಕೃಷ್ಣನ ದಿವ್ಯಲೀಲೆಗಳ ಚಿಂತನೆ, ನಾಮಸಂಕೀರ್ತನೆ, ಪೂಜಾದಿಗಳನ್ನು ಮುಖ್ಯ ಆಧ್ಯಾತ್ಮಿಕ ಸಾಧನಾಸೂತ್ರವಾಗಿ ಇಟ್ಟುಕೊಂಡಿರುವ ಹರೇಕೃಷ್ಣ ಪಂಥದವರು ಮೂಲತಃ ವೈದಿಕ ಪರಂಪರೆಯವರು. ಆಚರಣೆಯಲ್ಲಿ ಶುದ್ಧವೈಷ್ಣವರು.

ಅನೇಕ ಶತಮಾನಗಳಿಂದ ಭಾರತದಲ್ಲಿ ಮುಖ್ಯವಾಗಿ ಬಂಗಾಳ, ಬಿಹಾರ, ಪಂಜಾಬು. ಉತ್ತರಪ್ರದೇಶಗಳಲ್ಲಿ ಹೆಚ್ಚು ವ್ಯಾಪಕವಾಗಿ ಹರಡಿದ್ದ ಶ್ರೀ ಚೈತನ್ಯ ಸಂಪ್ರದಾಯದ ವೈಷ್ಣವ ಪಂಥ 'ಗೋಸ್ವಾಮಿ ಪಂಥ' ಎಂದೂ ಕರೆಯಲ್ಪಡುತ್ತಿತ್ತು. ಶ್ರೀ ಚೈತನ್ಯ ಸಂಪ್ರದಾಯದ ಮಠಗಳಿಗೆಲ್ಲ ಗೌಡೀಯ ಮಠ, ಗೋಸ್ವಾಮಿ ಮಠ ಎಂಬ ಹೆಸರು ಪ್ರಚಾರದಲ್ಲಿತ್ತು. ಆದರೆ ೧೯೬೫ರಲ್ಲಿ ಕಲ್ಕತ್ತಾ ನಗರದಲ್ಲಿದ್ದ ಶ್ರೀ ಚೈತನ್ಯ ಪಂಥದ ಶ್ರೀ ಅಭಯಚರಣ ಭಕ್ತಿವೇದಾಂತ ಸ್ವಾಮಿ ಪ್ರಭುಪಾದರು ಭಗವತ್ಪ್ರೇರಣೆಯಂತೆ ಅಮೆರಿಕಾಕ್ಕೆ ತೆರಳಿ ಮಹಾಮಂತ್ರವಾದ ಹರೇಕೃಷ್ಣ ಮಂತ್ರವನ್ನು ಜನರಿಗೆ ಉಪದೇಶಿಸಿ ಗೌಡೀಯ ಪಂಥವನ್ನು ನವೀಕರಿಸಿ ಹರೇಕೃಷ್ಣ ಪಂಥ ಎಂದು ಪ್ರಚಾರಮಾಡಿದರು. ಅಂದು ಹಂತಹಂತವಾಗಿ ಜನಪ್ರಿಯತೆ ಗಳಿಸಿ ಅಮೆರಿಕಾ, ಇಂಗ್ಲೆಂಡ್, ಫ್ರಾನ್ಸ್, ಆಸ್ಟ್ರೇಲಿಯಾ ಎಂದು ಜಗತ್ತಿನ ಬೇರೆ ಬೇರೆ ಭಾಗಗಳಿಗೆ ವ್ಯಾಪಕವಾಗಿ ಹರಡಿತು. ಹರೇಕೃಷ್ಣ ಪಂಥವು ಇಳೆಯಲ್ಲಿ ಇಂದು ನೂರಾರು ಶಾಖೆಗಳನ್ನು ಹೊಂದಿದೆ. ಅಲ್ಲೆಲ್ಲಾ ಸುಸಜ್ಜಿತವಾದ, ಭವ್ಯವಾದ ಶ್ರೀರಾಧಾಕೃಷ್ಣ ಮಂದಿರಗಳಿವೆ. ಅಸಂಖ್ಯಾತ ಮಂದಿ ಭಕ್ತರು, ಹಲವಾರು ಸಾಧುಗಳು ಈ ಪಂಥದ ಆಶ್ರಯದಲ್ಲಿ ವೈಷ್ಣವತತ್ತ್ವಾನುಸಾರಿ ಜೀವನ ಮಾಡುತ್ತಾ ಧಾರ್ಮಿಕ ಗ್ರಂಥಪ್ರಕಟಣೆ, ಪ್ರಚಾರಕಾರ್ಯಗಳನ್ನು ನಡೆಸುತ್ತಾ ನೆಮ್ಮದಿಯಿಂದ ಬಾಳುತ್ತಿದ್ದಾರೆ. ಇನ್ನೊಂದೆಡೆಯಲ್ಲಿ ಹಳೆಯ ಸಂಪ್ರದಾಯದಂತೆ ಗೌಡೀಯ ಮಠ-ಸ್ವಾಮಿಗಳ ಪರಂಪರೆ ಎಲ್ಲವೂ ಭಾರತದಲ್ಲಿ ಹಿಂದಿನಂತೆ ಇಂದೂ ನಡೆದುಕೊಂಡುಬರುತ್ತಿದೆ.

ಹರೇಕೃಷ್ಣ ಪಂಥದ ಅಂತರರಾಷ್ಟ್ರೀಯ ಕೇಂದ್ರವು ಅಮೆರಿಕಾದ ನ್ಯೂಯಾರ್ಕ್ ನಗರದಲ್ಲಿದೆ. ಭಾರತದಲ್ಲಿ ಡೆಲ್ಲಿ, ಕಲ್ಕತ್ತ, ಮುಂಬಯಿ, ಬೆಂಗಳೂರು ಇತ್ಯಾದಿ ಮುಖ್ಯ

ನಗರಗಳಲ್ಲಿ ಈ ಪಂಥದ ಶಾಖೆ-ಮಂದಿರಗಳು ಇವೆ. ಭಾರತದಲ್ಲಿ ಹರೇಕೃಷ್ಣ ಪಂಥದ ಪ್ರಮುಖ ಕೇಂದ್ರವು ಮಥುರಾನಗರದ ಬಳಿಯ ಬೃಂದಾವನದ ಪುಣ್ಯಕ್ಷೇತ್ರದಲ್ಲಿದೆ.

## ೬. ಆರ್ಯಸಮಾಜ

ಆರ್ಯರೆಂದರೆ ಧಾರ್ಮಿಕರು, ವಿದ್ವಾಂಸರು, ಆಪ್ತರು, ಶ್ರೇಷ್ಠರು ಎಂದು ತಾತ್ಪರ್ಯ. ಅಂತಹ ಜನರಿಂದ ಕೂಡಿದ ಸಮಾಜವೇ ಆರ್ಯಸಮಾಜ. ಆರ್ಯಸಮಾಜವು ವೇದ ಧರ್ಮಪರಿಪಾಲನೆ ಮತ್ತು ಲೋಕಕಲ್ಯಾಣಕ್ಕಾಗಿ ಮೀಸಲಾಗಿರುವ ಧಾರ್ಮಿಕ ಸಂಸ್ಥೆ. ಪರಮಹಂಸ ಸ್ವಾಮಿ ದಯಾನಂದ ಸರಸ್ವತಿಗಳವರು ಈ ಸಂಸ್ಥೆಯ ಸಂಸ್ಥಾಪಕರು. ಇವರಿಗೆ ಮಹರ್ಷಿ ದಯಾನಂದ ಸರಸ್ವತಿಗಳು ಎಂದೂ ಪ್ರಚಲಿತ ನಾಮವಿದೆ. ಪರಮ ಯೋಗಿಗಳೂ, ಸಂಸ್ಕೃತ ಮತ್ತು ಹಿಂದೀ ಭಾಷೆಗಳಲ್ಲಿ ಪ್ರಗಲ್ಭಪಂಡಿತರೂ, ಸರ್ವಸಂಗ ಪರಿತ್ಯಾಗಿಯಾದ ಸನ್ಯಾಸಿಗಳೂ ಆಗಿದ್ದ ಸ್ವಾಮಿ ದಯಾನಂದರು ೧೮೨೪ನೇ ಇಸವಿಯಲ್ಲಿ ಸೌರಾಷ್ಟ್ರ ಪ್ರಾಂತದ ಮೋರವೀ ಸಂಸ್ಥಾನದ ಟಂಕಾರಾ ಗ್ರಾಮದಲ್ಲಿ ಜನ್ಮವೆತ್ತಿದರು. ನಿಷ್ಠಾವಂತ ಶೈವಬ್ರಾಹ್ಮಣ ಮನೆತನದಲ್ಲಿ ಜನಿಸಿದ ಮಹರ್ಷಿ ದಯಾನಂದರ ಪೂರ್ವಾಶ್ರಮದಲ್ಲಿ ಬಾಲ್ಯದ ಹೆಸರು ಮೂಲಾಶಂಕರ. ಬೆಳೆದು ಯುವಕನಾದಂತೆ ನೈಷ್ಠಿಕ ಬ್ರಹ್ಮಚರ್ಯದೀಕ್ಷೆಯನ್ನು ಹೊಂದಿ 'ಬ್ರಹ್ಮಚಾರಿ ಶುದ್ಧಚೈತನ್ಯ' ಎಂದು ನೂತನ ಹೆಸರನ್ನು ಪಡೆದನು. ಆಮೇಲೆ ಬ್ರಹ್ಮಚಾರಿ ಶುದ್ಧಚೈತನ್ಯನು ದಾಕ್ಷಿಣಾತ್ಯ ಸಂನ್ಯಾಸಿ ಸ್ವಾಮಿ ಪೂರ್ಣಾನಂದ ಸರಸ್ವತಿಗಳಿಂದ ಸಂನ್ಯಾಸದೀಕ್ಷೆಯನ್ನು ಪಡೆದು ಸ್ವಾಮಿ ದಯಾನಂದ ಸರಸ್ವತಿ ಎಂದು ಘೋಷಿಸಲ್ಪಟ್ಟರು. ಸಂನ್ಯಾಸ ಸ್ವೀಕಾರದನಂತರ ಸ್ವಾಮಿ ದಯಾನಂದರು ಮಥುರೆಗೆ ಬಂದರು. ಅಲ್ಲಿ ಯಮುನಾತೀರವಾಸಿಯಾಗಿದ್ದ ಪ್ರಜ್ಞಾಚಕ್ಷು ಸ್ವಾಮಿ ವಿರಜಾನಂದ ದಂಡೀಶ್ವರ ಮಹಾಸ್ವಾಮಿಗಳ ಪದತಲದಲ್ಲಿ ಕುಳಿತು ವೇದವೇದಾಂತ ಶಿಕ್ಷಣಹೊಂದಿ ದಿವ್ಯಜ್ಞಾನಸಂಪನ್ನರಾದರು. ದೇಶದ ಉದ್ಧಾರವು ವೇದಧರ್ಮ ಪ್ರಚಾರ-ಪರಿಪಾಲನೆಯಿಂದ ಮಾತ್ರ ಸಾಧ್ಯ ಎಂದು ಸ್ವಾಮಿ ದಯಾನಂದರು ಮನ ಗಂಡರು ಮೂರ್ತಿಪೂಜೆ, ಅವತಾರವಾದ, ಬೇರೆಬೇರೆ ದೇವತೆಗಳ ಉಪಾಸನೆ, ಇವನ್ನೆಲ್ಲ ದಯಾನಂದ ಸರಸ್ವತಿಗಳು ಖಂಡಿಸಿದರು. ವೇದದಲ್ಲಿ ಹೇಳಿದಂತೆ ಏಕದೇವತಾ ಉಪಾಸನೆಯನ್ನು ಸಾರಿದರು. ಅಸ್ಪೃಶ್ಯತೆಯು ಮಹಾಪಾಪ, ವೇದವಿರುದ್ಧ ಎಂದು ಘೋಷಿಸಿದರು. ಜಾತಿ-ಮತ ಭೇದಗಳು ಇರಕೂಡದು ಎಂದು ಸ್ಪಷ್ಟಪಡಿಸಿದರು. ಪ್ರತಿಯೊಬ್ಬನೂ ಅವನವನ ಕರ್ಮದಿಂದ ವಿಕಾಸದ ಪಥದಲ್ಲಿ ಸಾಗಿ ಮುಕ್ತಿಯನ್ನು ಪಡೆಯಲು ಸಾಧ್ಯ. ಅದಕ್ಕೆ ದೇವಸ್ಥಾನಗಳು, ತೀರ್ಥಯಾತ್ರೆ, ಪುರೋಹಿತರು, ಗುರುಗಳು ಇವೆಲ್ಲ ಅಗತ್ಯವಿಲ್ಲ ಎಂದು ಉಪದೇಶಿಸಿದರು. ವೇದವೇ ಪರಮಪ್ರಮಾಣ—ಪರಮಮಾರ್ಗದರ್ಶಕ ದಿವ್ಯ ಗ್ರಂಥ—ದಿವ್ಯಶಕ್ತಿ ಎಂದು ಬೋಧಿಸಿದರು. ಸನಾತನ ಹಿಂದೂಧರ್ಮದಿಂದ ಅನ್ಯಮತಕ್ಕೆ ಮತಾಂತರಗೊಂಡವರನ್ನು ಮರಳಿ ಶುದ್ಧೀಕರಣದ ಮೂಲಕ ಹಿಂದೂಮತಕ್ಕೆ ಸೇರಿಸಿ ಕೊಳ್ಳಲು ಸಾಧ್ಯ ಎಂದು ಸಾರಿದರು. ಅದರಂತೆ ಸ್ವಾಮಿಗಳು ತಮ್ಮ ತತ್ತ್ವಗಳ ಪ್ರಚಾರಕ್ಕೆ,

ಸಂರಕ್ಷಣೆಗೆ ನೆರವಾಗುವುದಕ್ಕಾಗಿ ವ್ಯವಸ್ಥಿತವಾಗಿ, 'ಆರ್ಯಸಮಾಜ' ಎಂಬ ಧಾರ್ಮಿಕ ಲೋಕಸೇವಾ ಸಂಸ್ಥೆಯನ್ನು ೧೮೭೫ನೇ ಏಪ್ರಿಲ್ ತಿಂಗಳ ೭ನೇ ತೇದಿಯಂದು ಮುಂಬಯಿಯಲ್ಲಿ ಸ್ಥಾಪಿಸಿದರು.

ಆರ್ಯಸಮಾಜವು ದಿನಗಳೆದಂತೆ ಪ್ರವರ್ಧಮಾನವಾಗಿ ಬೆಳಗಿ ಭಾರತದ ವಿವಿಧ ಭಾಗಗಳಲ್ಲಿ ಶಾಖೆಗಳನ್ನು ಪೊಂದುವಂತಾಯಿತು. ಆರ್ಯಸಮಾಜದ ತತ್ತ್ವಗಳಿಂದ ಸ್ಫೂರ್ತಿಗೊಂಡು ಅದರ ಪ್ರಚಾರ ಹಾಗೂ ಆಚರಣೆಗಾಗಿ ಜನಬೆಂಬಲದಿಂದ ಆರ್ಯಸಮಾಜ ವಿದ್ಯಾಪೀಠಗಳು ಪಂಜಾಬು, ಉತ್ತರಪ್ರದೇಶ ಮೊದಲಾದ ರಾಜ್ಯದ ವಿವಿಧ ಎಡೆಗಳಲ್ಲಿ ಸ್ಥಾಪನೆಗೊಂಡುವು. ಆರ್ಯಸಮಾಜದ ತತ್ತ್ವಪ್ರಚಾರಕ್ಕಾಗಿ ಸಂನ್ಯಾಸಿಗಳ ತಂಡ ಒಂದೆಡೆ ಮೂಡಿಬಂದಂತೆ ಆರ್ಯಸಮಾಜದ ಧ್ಯೇಯಧೋರಣೆಗಳ ಪ್ರಸಾರಕರಾಗಿ ಬ್ರಹ್ಮಚಾರಿಗಳು–ಗೃಹಸ್ಥ ಸೇವಕರ ತಂಡ ಇನ್ನೊಂದೆಡೆ ಮೂಡಿಬಂತು. ದೇಶದಾದ್ಯಂತ ವೇದಗಳ ಪಠಣ–ವೈದಿಕಧರ್ಮಪರಿಪಾಲನೆ, ಹೋಮಹವನಗಳ ಮೂಲಕ ಶುದ್ಧೀಕರಣ ಕ್ರಿಯೆ, ಇತ್ಯಾದಿಗಳ ವಿಚಾರವಾಗಿ ಸಕ್ರಿಯ ಪ್ರಚಾರ ಪ್ರಾರಂಭವಾಯಿತು.

ಆರ್ಯಸಮಾಜದ ಮೂಲ ಧಾರ್ಮಿಕ ತತ್ತ್ವಗಳನ್ನು ದಶನಿಯಮಗಳೆಂದು ಕರೆಯಲಾಗಿದ್ದು ಅತ್ಯಂತ ಮುಖ್ಯವಾದ ಆ ನಿಯಮಗಳ ವಿವರ ಹೀಗಿದೆ :

(೧) ಪರಮೇಶ್ವರನು ಸಕಲ ವಿದ್ಯೆಗಳ ಮತ್ತು ಆ ವಿದ್ಯೆಗಳಿಂದ ಯಾವ ವಸ್ತುಗಳು ತಿಳಿಯಲ್ಪಡುತ್ತವೆಯೋ ಅವೆಲ್ಲವುಗಳ ಆದಿಮೂಲನು.

(೨) ಪರಮಾತ್ಮನು—ಈಶ್ವರನು, ಸಚ್ಚಿದಾನಂದಸ್ವರೂಪನು, ಅವನು ನಿರಾಕಾರನು, ಸರ್ವಶಕ್ತನು. ನ್ಯಾಯಕಾರಿ, ದಯಾಳುವೂ, ಜನ್ಮರಹಿತನೂ, ಅನಂತನೂ, ನಿರ್ವಿಕಾರನೂ, ಅನಾದಿಯೂ, ಅನುಪಮನೂ, ಸಕಲ ಆಧಾರನೂ, ಸಕಲೇಶ್ವರನೂ, ಸರ್ವವ್ಯಾಪಕನೂ, ಸರ್ವಾಂತರ್ಯಾಮಿಯೂ, ನಿತ್ಯನೂ, ಅಭಯನೂ, ಪವಿತ್ರನೂ, ಸೃಷ್ಟಿಕರ್ತನೂ ಆಗಿದ್ದಾನೆ. ಕೇವಲ ಅವನ ಉಪಾಸನೆಯನ್ನೇ ಮಾಡುವುದು ಉತ್ತಮವಾಗಿದೆ.

(೩) ವೇದವು ಸಕಲ ಸತ್ಯವಿದ್ಯೆಗಳ ಆಗರವಾಗಿದೆ. ವೇದಗಳ ಪಠಣ, ಪಾರಾಯಣ ಮತ್ತು ಶ್ರವಣ ಮಾಡುವುದು ಸಮಸ್ತ ಆರ್ಯರ ಪರಮಧರ್ಮ ಆಗಿದೆ.

(೪) ಸತ್ಯವನ್ನು ಗ್ರಹಿಸಲು, ಅಸತ್ಯವನ್ನು ಪರಿತ್ಯಜಿಸಲು ಸದಾ ಸಿದ್ಧರಾಗಿರಬೇಕು.

(೫) ಸತ್ಯದ ಮತ್ತು ಅಸತ್ಯದ ವಿಮರ್ಶೆಯನ್ನು ಮಾಡಿ ಎಲ್ಲ ಕಾರ್ಯಗಳನ್ನೂ ಧರ್ಮಸಮ್ಮತವಾಗಿ ಮಾಡಬೇಕು.

(೬) ಶಾರೀರಿಕ, ಆತ್ಮಿಕ ಮತ್ತು ಸಾಮಾಜಿಕ ಉನ್ನತಿಯನ್ನು ಸಾಧಿಸಲು ನೆರವಾಗುವುದರ ಮೂಲಕ ಜಗತ್ತಿಗೆ ಸೇವೆಸಲ್ಲಿಸುವುದು ಆರ್ಯಸಮಾಜದ ಮುಖ್ಯ ಉದ್ದೇಶ.

(೭) ಸರ್ವರೊಂದಿಗೂ ಪ್ರೀತಿಪೂರ್ವಕವಾಗಿ, ಧರ್ಮಾನುಸಾರವಾಗಿ, ಯೋಗ್ಯತಾನುಗುಣವಾಗಿ ವ್ಯವಹರಿಸಬೇಕು.

(೮) ಅವಿದ್ಯೆಯ ನಾಶವನ್ನೂ ಮತ್ತು ವಿದ್ಯೆಯ ವೃದ್ಧಿಯನ್ನೂ ಸಾಧಿಸಬೇಕು.

(೯) ಯಾರೂ ಕೂಡ ತನ್ನ ಉನ್ನತಿಯಿಂದಲೇ ಅಷ್ಟಕ್ಕೇ ಸಂತುಷ್ಟನಾಗಬಾರದು. ಆದರೆ ಸರ್ವರ ಉನ್ನತಿಯಲ್ಲಿ ತನ್ನ ಉನ್ನತಿಯು ಸೇರಿದೆ ಎಂದು ತಿಳಿದಿರಬೇಕು.

(೧೦) ಮಾನವ ಬಳಗದವರೆಲ್ಲ ಸರ್ವಕಲ್ಯಾಣಕಾರಿ ಸಾಮಾಜಿಕ ನಿಯಮಗಳನ್ನು

ಪಾಲಿಸುವುದರಲ್ಲಿ ಪರತಂತ್ರರಾಗಿರಬೇಕು. ಆದರೆ ವೈಯಕ್ತಿಕ ಹಿತಕಾರಿ ನಿಯಮ ಪರಿಪಾಲನೆಯಲ್ಲಿ ಸಕಲರೂ ಸ್ವತಂತ್ರರಾಗಿರಬೇಕು.

ಆರ್ಯಸಮಾಜಕ್ಕೆ ಸದಸ್ಯರಾಗಿ ಸೇರುವವರು ಈ ಮುಖ್ಯವಾದ ದಶನಿಯಮಗಳಿಗೆ ತ್ರಿಕರಣಪೂರ್ವಕವಾಗಿ ಬದ್ಧರಾಗಬೇಕು. ಆರ್ಯಸಮಾಜದ ಲೋಕಕಲ್ಯಾಣಕಾರಿ ಕೆಲಸಗಳನ್ನು ಮುಖ್ಯವಾಗಿ ಹೀಗೆ ವರ್ಗೀಕರಿಸಬಹುದು :

(೧) ದುಷ್ಟಪದ್ಧತಿಗಳು, ಮೂಢನಂಬಿಕೆಗಳ ಸಂಬಂಧದ ಆಚರಣೆಗಳು, ಮೂರ್ತಿಪೂಜೆ, ಮಂತ್ರ-ತಂತ್ರ. ಸ್ವಾರ್ಥದೃಷ್ಟಿಯ ಸಾಧನೆಗಾಗಿ ನಡೆಸುವ ಹೋಮಾದಿ ವಿಧಿಗಳ ಆಚರಣೆ, ವಿವಾಹಸಂದರ್ಭಗಳಲ್ಲಿ ದುಂದುವೆಚ್ಚ ಮಾಡುವಿಕೆ, ವರದಕ್ಷಿಣೆ ನೀಡುವಿಕೆ—ಇವುಗಳನ್ನು ಹಿಂದೂಸಮಾಜದಿಂದ ನಿರ್ಮೂಲಮಾಡುವುದು.

(೨) ಜಾತಿಯು ಹುಟ್ಟಿನಿಂದ ನಿಷ್ಕರ್ಷೆ ಆಗುವುದಿಲ್ಲ—ಬದಲು, ಕರ್ಮದಿಂದ ಎಂಬುದನ್ನು ಸ್ಪಷ್ಟಪಡಿಸಿ, ಅದರಂತೆ ವರ್ಣವ್ಯವಸ್ಥೆಯನ್ನು ಪುನರುಜ್ಜೀವನಗೊಳಿಸುವುದು.

(೩) ಕನ್ಯೆಯರಿಗೆ ವಿದ್ಯಾಭ್ಯಾಸಕ್ಕಾಗಿ ಅವಕಾಶ. ಮಹಿಳೆಯರು ಅಧ್ಯಾಪಿಕೆಯರಾಗಿ, ದಾದಿಯರಾಗಿ ಸಾರ್ವಜನಿಕ ಕ್ಷೇತ್ರದಲ್ಲಿ ದುಡಿಯಲು ಅನುಕೂಲ ಕಲ್ಪಿಸಿಕೊಡುವುದು, ವಿಧವಾವಿವಾಹ, ಪರ್ದಾ ಪದ್ಧತಿಯ ರದ್ಧತಿ ಇವುಗಳನ್ನು ಸಾಧಿಸುವುದು.

(೪) ಹಿಂದೂಧರ್ಮದಿಂದ ಮತಾಂತರಗೊಂಡು ಮುಸ್ಲಿಂ, ಕ್ರಿಶ್ಚಿಯನ್ ಹಾಗೂ ಇತರ ಮತಗಳನ್ನು ಅವಲಂಬಿಸಿರುವವರನ್ನು ಮರಳಿ ಮಾತೃಧರ್ಮಕ್ಕೆ ಶುದ್ಧೀಕರಣ ಸಂಸ್ಕಾರದ ಮೂಲಕ ಸೇರಿಸಿಕೊಳ್ಳುವುದು. ಹಾಗೆಯೇ ಹಿಂದೂಧರ್ಮಕ್ಕೆ ಸೇರಲು ಇಷ್ಟಪಡುವ ಯಾವುದೇ ಮತದವರನ್ನು ಯುಕ್ತವಾದ ವೈದಿಕ ಸಂಸ್ಕಾರದ ಮೂಲಕ ಸೇರಿಸಿಕೊಳ್ಳುವುದು.

(೫) ದೀನದಲಿತವರ್ಗದವರ ಉದ್ಧಾರಕ್ಕಾಗಿ ಶ್ರಮಿಸುವುದು. ಬರಗಾಲ, ನೆರೆ, ಸಾಂಕ್ರಾಮಿಕ ಕಾಹಿಲೆ ಇತ್ಯಾದಿ ಹಾವಳಿಗಳಿಂದ ಪೀಡಿತರಾದವರಿಗೆ ಪರಿಹಾರಕಾರ್ಯ ನಡೆಸಿ ಜೀವನಸೌಕರ್ಯವನ್ನು ಕಲ್ಪಿಸಿಕೊಡುವುದು.

### ಆರ್ಯಸಮಾಜದ ತಾತ್ತ್ವಿಕ ಸಿದ್ಧಾಂತ

ಆರ್ಯಸಮಾಜದ ತಾತ್ತ್ವಿಕ ಸಿದ್ಧಾಂತದಂತೆ ಈಶ್ವರ, ಜೀವ, ಪ್ರಕೃತಿ ಇವು ಮೂರನ್ನು ಅನಾದಿ ಎಂದು ಪರಿಗಣಿಸಲಾಗಿದೆ. ಈಶ್ವರನು ಏಕನು, ಸಚ್ಚಿದಾನಂದನು ಎಂದಿರುವ ಈ ಸಿದ್ಧಾಂತ ಜೀವಿಗಳು ಅನೇಕ ಎಂದು ಹೇಳಿರುತ್ತದೆ. ಜೀವ ಮತ್ತು ಈಶ್ವರ ಪರಸ್ಪರ ಭಿನ್ನ ಮತ್ತು ವ್ಯಾಪ್ಯ-ವ್ಯಾಪಕ ಸಂಬಂಧಯುಕ್ತವಾದುದು ಎನ್ನುತ್ತಾ ಪ್ರಕೃತಿಯು ಜಡವಾಗಿದ್ದು ನಾನಾ ದ್ರವ್ಯಗಳ ರೂಪದಲ್ಲಿ ಲೋಕದಲ್ಲಿ ಕಾಣುತ್ತಿದೆ ಎಂಬುದು ಆರ್ಯಸಮಾಜದ ಮತವಾಗಿದೆ. ಪಾಪ-ಪುಣ್ಯಗಳನ್ನು ನಂಬಿರುವ ಆರ್ಯಸಮಾಜದವರು ವಿದ್ಯಾದಿ ಶುಭಗುಣಗಳ ದಾನ ಮತ್ತು ಭಾಷಣ, ಸತ್ಯವ್ಯವಹಾರ ನಡೆಸುವುದು ಪುಣ್ಯ ಎಂದೂ ಅದಕ್ಕಿಂತ ಮೀರಿದುದು-ವಿರೋಧವಾದುದಾದ ಕ್ರಿಯೆಗಳೆಲ್ಲ ಪಾಪ ಎಂದೂ ನಂಬಿರುತ್ತಾರೆ. ಸ್ವರ್ಗ-ನರಕ ಎಂದರೆ ಬೇರೆ ಲೋಕವಲ್ಲ, ಇಹದಲ್ಲಿ ಜೀವವು ತನ್ನ ಕರ್ಮಕ್ಕೆ ಫಲವಾಗಿ ಅನುಭವಿಸುವ ಸುಖ ಹಾಗೂ ಕಷ್ಟದ ಸ್ಥಿತಿ ಎಂದು

ಹೇಳುವ ಆರ್ಯಸಮಾಜದ ಸಿದ್ಧಾಂತದಂತೆ ಜೀವಿಗಳಿಗೆ ಕರ್ಮಕ್ಕೆ ಅನುಗುಣವಾಗಿ ಪುನರ್ಜನ್ಮ ಇದೆ ಎಂದು ಹೇಳಲಾಗಿದೆ. ಮುಕ್ತಿ ಎಂದರೆ ಜೀವಿಯು ಸಕಲ ಕೆಟ್ಟ ಕೆಲಸ ಮತ್ತು ಜನ್ಮಮರಣಾದಿ ದುಃಖಸಾಗರದಿಂದ ವಿಮೋಚನೆಹೊಂದಿ ಶಾಶ್ವತ ಸುಖರೂಪಿ ಪರಮೇಶ್ವರನನ್ನು ಸೇರಿ ದಿವ್ಯಸುಖದಲ್ಲಿ ನೆಲೆಗೊಳ್ಳುವುದಾಗಿದೆ.

**ಆರ್ಯಸಮಾಜದ ಪರಂಪರೆಯಂತೆ ಸಾಧನವಿಧಾನ**

ಜೀವಿಯು ಮುಕ್ತಿಗಾಗಿ ಉಪಾಸನೆ ಮಾಡಬೇಕು. ಏಕದೇವ ಪರಮೇಶ್ವರನ ಸ್ತುತಿ, ಪ್ರಾರ್ಥನೆಗಳು ಉಪಾಸನೆಯ ಅಂಗ. ಆದರ ಜೊತೆಗೆ ದಿವಸಂಪ್ರತಿ ಸಪ್ತಮಹಾಯಜ್ಞ ವನ್ನು ಮಾಡಬೇಕು : ಬ್ರಹ್ಮಯಜ್ಞ, ಸ್ವಾಧ್ಯಾಯ, ದೇವಯಜ್ಞ, ಪಿತೃಯಜ್ಞ, ಜೀವಿತ ಗುರು ಇಲ್ಲವೇ ಮಾತಾಪಿತೃಗಳ ಸೇವೆ, ಭೂತಯಜ್ಞ, ಅತಿಥಿಯಜ್ಞ ಎಂಬವುಗಳೇ ಸಪ್ತಯಜ್ಞಗಳು. (ಇದು ಗೃಹಸ್ಥರಿಗೆ ಅನ್ವಯಿಸುವುದು. ಸಂನ್ಯಾಸಿಗಳ ಉಪಾಸನೆ-ಜೀವನ ಕ್ರಮ ಗೃಹಸ್ಥರಿಂದ ಭಿನ್ನವಾಗಿದೆ.) ಆರ್ಯಸಮಾಜದ ಸಿದ್ಧಾಂತದಂತೆ ಜೀವಿಗೆ ಹುಟ್ಟಿನಿಂದ ಮರಣದ ತನಕ ಷೋಡಶ ಸಂಸ್ಕಾರಗಳು ಮಾಡಬೇಕಾಗಿದೆ. ಶವಸಂಸ್ಕಾರಕ್ಕೆ ಮಶಾನವನ ಎಲ್ಲ ಸಂಸ್ಕಾರಗಳೂ ಮುಗಿಯುತ್ತವೆ. ಆಮೇಲಿನ ಪಿಂಡ, ತರ್ಪಣ, ಶ್ರಾದ್ಧ ಇತ್ಯಾದಿ ಯಾವುದೇ ಮರಣೋತ್ತರಸಂಸ್ಕಾರಗಳನ್ನು ಆರ್ಯಸಮಾಜದವರು ಅನುಸರಿಸು ವುದಿಲ್ಲ, ಮಾನಿಸುವುದಿಲ್ಲ.

**ಆರ್ಯಸಮಾಜದ ಸದಸ್ಯತನ-ಕರ್ತವ್ಯಗಳು**

ಆರ್ಯಸಮಾಜಕ್ಕೆ ಹದಿನೆಂಟು ವರ್ಷಕ್ಕೆ ಮೇಲ್ಪಟ್ಟವರು ಜಾತಿ, ಮತ, ಲಿಂಗಗಳ ಭೇದವಿಲ್ಲದೆ ಯಾರು ಬೇಕಾದರೂ ಸೇರಬಹುದು. ಆರ್ಯಸಮಾಜದ ತತ್ತ್ವ-ನಿಬಂಧನೆ ಗಳಿಗೆ ಒಪ್ಪಿ ಅದರಂತೆ ಬಾಳಲು ಸಿದ್ಧರಿರುವವರನ್ನು ಸಮಾಜಕ್ಕೆ ಸೇರಿಸಿಕೊಂಡನಂತರ ಅವರನ್ನು ಆರ್ಯಸದಸ್ಯ ಎಂದು ಕರೆಯಲಾಗುವುದು. ಆರ್ಯಸಮಾಜದ ಮಂದಿರಗಳಲ್ಲಿ ಪ್ರತಿ ವಾರಕ್ಕೊಮ್ಮೆ ಸಾಮೂಹಿಕ ಪ್ರಾರ್ಥನೆ, ಹವನ ಮತ್ತು ಧಾರ್ಮಿಕ ಉಪದೇಶ ಕಾರ್ಯಕ್ರಮ ನಡೆಯುತ್ತದೆ. ಇದರಲ್ಲಿ ತಪ್ಪದೆ ಭಾಗಿಯಾಗುವುದು ಆರ್ಯಸದಸ್ಯರೆಲ್ಲರ ಕರ್ತವ್ಯವಾಗಿದೆ. ಆರ್ಯಸಮಾಜದಲ್ಲಿ ಆರ್ಯಸದಸ್ಯನಾಗಿ ಎರಡು ವರ್ಷ ನಿಯಮ ಪ್ರಕಾರವಾಗಿ ಸಕ್ರಿಯ ಪಾತ್ರವಹಿಸುತ್ತಾ ಬಂದರೆ ಆಮೇಲೆ ಆ ಸದಸ್ಯನು ಆರ್ಯಸಭಾ ಸದಸ್ಯ ಎಂಬ ಉನ್ನತಶ್ರೇಣಿಯ ಸದಸ್ಯನಾಗಲು ಅರ್ಹನಾಗುತ್ತಾನೆ. ಆರ್ಯಸಮಾಜದ ಸಭೆಗಳಲ್ಲಿ ಮತ ನೀಡುವ ಹಕ್ಕು ಈ ಸದಸ್ಯರಿಗೆ ಇರುತ್ತದೆ. ಆರ್ಯಸಭಾಸದಸ್ಯರು ಮುಂದೆ ತನ್ನವರಿಂದ ಚುನಾಯಿತನಾದಂತೆ ಆರ್ಯಸಮಾಜದ ಉನ್ನತಮಟ್ಟದ ರಾಜ್ಯ ಸಾರ್ವದೇಶಿಕ ಸಂಘಟನಾ ಘಟಕದ ಸದಸ್ಯನಾಗಲು ಅರ್ಹನಾಗುತ್ತಾನೆ. ಆರ್ಯಸಮಾಜದ ಎಲ್ಲ ವರ್ಗದ ಸದಸ್ಯರೂ ಕೂಡ ಸಂಧ್ಯಾದಿ ನಿತ್ಯಕರ್ಮ, ಶುದ್ಧನೈತಿಕ ಜೀವನ, ವೇದ ವಿಚಾರ ಅಧ್ಯಯನ, ಶ್ರವಣ ಇತ್ಯಾದಿಗಳನ್ನು ಪ್ರಾಮಾಣಿಕವಾಗಿ ಅನುಸರಿಸಬೇಕು.

ಆರ್ಯಸಮಾಜದ ಮೂಲಗುರಿಯು ವೇದಧರ್ಮದ ತತ್ತ್ವಸೂತ್ರಗಳ ಬೆಳಕಿನಲ್ಲಿ ಸನಾತನ ಹಿಂದೂಸಮಾಜದ ಸಂಘಟನೆ, ರಕ್ಷಣೆ, ಆ ಮೂಲಕ ವಿಶ್ವಕುಟುಂಬದ ಸಾಧನೆ

ಎಂಬುದಾಗಿದ್ದು ಆದರ ಪರಿಪಾಲನೆಗೆ ವಿವಿಧ ರೀತಿಯ ಕಾರ್ಯಕ್ರಮಗಳೊಡನೆ ಈ ಸಂಸ್ಥೆಯು ದುಡಿಯುತ್ತಾಬಂದಿದೆ. ಅನುಸಾರದಾಗಿ ಆರ್ಯಸಮಾಜದ ಆಶ್ರಯದಲ್ಲಿ ಅಖಿಲ ಭಾರತ ದಯಾನಂದ ಮೋಕ್ಷ ಸಂಸ್ಥೆ, ಅಖಿಲ ಭಾರತೀಯ ಶುದ್ಧಿ ಸಭಾ, ದಯಾನಂದ ದಲಿತೋದ್ಧಾರ ಸಭಾ, ದಯಾನಂದ ವಿದ್ಯಾಲಯಗಳು (ಡಿ.ಎ.ವಿ. ವಿದ್ಯಾಲಯಗಳು), ಆರ್ಯವೀರದಲ, ಅನಾಥಾಲಯ, ವನಿತಾಶ್ರಮ ಇತ್ಯಾದಿ ಅನೇಕ ಲೋಕೋಪಯೋಗಿ ಸಂಸ್ಥೆಗಳು ಸ್ಥಾಪನೆಗೊಂಡು ಮಾನವಕಲ್ಯಾಣಕ್ಕಾಗಿ ದುಡಿಯುತ್ತಿವೆ.

ಸ್ವತಂತ್ರ ಭಾರತದ ಮತೀಯವಾದ ಜಾಗೃತಿಯ ಈ ಕಾಲದಲ್ಲಿ ಆರ್ಯಸಮಾಜವು ಮತೀಯವಾದ ಶುದ್ಧೀಕರಣ, ವಿಭಿನ್ನಜಾತಿಯವರ ಒಳಗೆ ಪರಸ್ಪರ ವಿವಾಹ, ವೇದಧರ್ಮಪರಿಪಾಲನೆ, ಸಂಸ್ಕೃತ ಮತ್ತು ಹಿಂದಿ ಭಾಷೆಗಳ ಪ್ರಚಾರ ಹಾಗೂ ರಕ್ಷಣೆ ಬಗ್ಗೆ ತುಂಬ ಆಸಕ್ತಿಯಿಂದ ದೇಶವಿದೇಶಗಳಲ್ಲಿ ಅನೇಕ ಕಡೆಗಳಲ್ಲಿ ಹರಡಿರುವ ಶಾಖೆ, ಕಾರ್ಯಸಂಘಟನಾ ಘಟಕಗಳ ಮೂಲಕ ದುಡಿಯುತ್ತಿದೆ. ಆರ್ಯಸಮಾಜದ ಕೇಂದ್ರ ಆಡಳಿತ ಕಛೇರಿಯು ನವದೆಹಲಿಯಲ್ಲಿದೆ. ಕರ್ನಾಟಕದಲ್ಲಿ ಆರ್ಯಸಮಾಜದ ಪ್ರಮುಖ ಶಾಖೆಗಳು ಬೆಂಗಳೂರು, ಮಂಗಳೂರು ಹಾಗೂ ಮೈಸೂರು ನಗರಗಳಲ್ಲಿವೆ.

## ೭. ಶ್ರೀರಾಮಕೃಷ್ಣ ಮಠ ಮತ್ತು ಮಿಶನ್ ಸಂಸ್ಥೆ

ಶ್ರೀರಾಮಕೃಷ್ಣ ಮಠ ಮತ್ತು ಮಿಶನ್ ಸಂಸ್ಥೆಯು ವಿಶ್ವವ್ಯಾಪ್ತಿಯಾದ ಧಾರ್ಮಿಕ ಹಾಗೂ ಸಾಮಾಜಿಕ ಸೇವಾ ಸಂಸ್ಥೆ. ಇದನ್ನು ಮೂಲತಃ ಶ್ರೀ ರಾಮಕೃಷ್ಣ ಪರಮಹಂಸರೇ ೧೮೮೭ರಲ್ಲಿ ತಮ್ಮ ಅಂತರಂಗಶಿಷ್ಯರಿಗೆ ಸಂನ್ಯಾಸ ನೀಡಿ ಅನುಗ್ರಹಿಸುವುದರ ಮೂಲಕ ಸಂಸ್ಥಾಪಿಸಿದರು. ಅವರ ಮಹಾಸಮಾಧಿಯನಂತರ ಅವರ ಪರಮಶ್ರೇಷ್ಠ ಶಿಷ್ಯರಾದ ಸ್ವಾಮಿ ವಿವೇಕಾನಂದರ ನೇತೃತ್ವದಲ್ಲಿ ೧೮೯೭ರಲ್ಲಿ ವ್ಯವಸ್ಥಿತ ರೀತಿಯಲ್ಲಿ ಸಂಸ್ಥೆಯು ರೂಪುಗೊಂಡಿತು. ಈ ಸಂಸ್ಥೆಯ ಕೇಂದ್ರ ಕಛೇರಿಯು ಕಲ್ಕತ್ತೆಯ ಬಳಿ ಗಂಗಾತೀರದಲ್ಲಿ ಬೇಲೂರು ಮಠ ಎಂಬಲ್ಲಿದೆ. ಅಲ್ಲಿ ಶ್ರೀರಾಮಕೃಷ್ಣ ಪರಮಹಂಸರು, ಶ್ರೀಮಾತೆ ಶಾರದಾದೇವಿ, ಶ್ರೀ ಸ್ವಾಮಿ ವಿವೇಕಾನಂದರು ಮತ್ತು ಶ್ರೀ ಸ್ವಾಮಿ ಬ್ರಹ್ಮಾನಂದರು ಇವರ ಪಾವನ ಮಂದಿರಗಳಿವೆ.

ಶ್ರೀ ರಾಮಕೃಷ್ಣ ಪರಮಹಂಸರು, ಶ್ರೀಶಾರದಾಮಣಿದೇವಿಯವರು ಮತ್ತು ಸ್ವಾಮಿ ವಿವೇಕಾನಂದರು ಲೋಕಕ್ಕೆ ಸಾರಿದ ಸನಾತನ ಹಿಂದೂಧರ್ಮದ ದಿವ್ಯಸಂದೇಶಗಳನ್ನು ಪೀಳಿಗೆಯಿಂದ ಪೀಳಿಗೆಗೆ ಬೋಧಿಸುತ್ತಾ ಮಾರ್ಗದರ್ಶನ ನೀಡಲು ಸಮರ್ಥರಾದ ಸಂನ್ಯಾಸಿಗಳ ತಂಡವನ್ನು ಶ್ರೀರಾಮಕೃಷ್ಣಮಿಶನ್ ಸಂಸ್ಥೆಯು ಯುಕ್ತತರಬೇತಿಯೊಡನೆ ರೂಪಿಸುತ್ತಾಬಂದಿದೆ. ಅದಕ್ಕೆ ಅಗತ್ಯವಾದ ಎಲ್ಲ ವ್ಯವಸ್ಥೆಯನ್ನು ತನ್ನ ಕೇಂದ್ರ ಕಛೇರಿಯಾದ ಬೇಲೂರು ಮಠದಲ್ಲಿ ಹೊಂದಿದ್ದು ಶ್ರೀರಾಮಕೃಷ್ಣ ಮಿಶನ್‌ನಲ್ಲಿ ಇಂದು ಏಳುನೂರಕ್ಕೂ ಹೆಚ್ಚು ಸಂನ್ಯಾಸಿಗಳು ಲೋಕಕಲ್ಯಾಣಕ್ಕಾಗಿ ದುಡಿಯುತ್ತಿದ್ದಾರೆ. ಮುನ್ನೂರಕ್ಕೂ ಹೆಚ್ಚು ಮಂದಿ ಬ್ರಹ್ಮಚಾರಿಗಳು ಪ್ರಸ್ತುತ ಈ ಸಂಸ್ಥೆಯಲ್ಲಿ ದಿವ್ಯಜೀವನ–

ಸನಾತನಧರ್ಮದ ಅನುಷ್ಠಾನ–ಪ್ರಚಾರಗಳಿಗಾಗಿ ತಮ್ಮ ಜೀವನವನ್ನು ಮುಡಿಪಾಗಿಟ್ಟು ಕಾರ್ಯೋನ್ಮುಖರಾಗಿರುತ್ತಾರೆ. 'ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ'— ಆತ್ಮದ ಮುಕ್ತಿಗೂ ಮತ್ತು ಜಗತ್ತಿನ ಹಿತಕ್ಕಾಗಿ ಸೇವೆಮಾಡುವುದು ಎಂಬುದು ಶ್ರೀರಾಮ ಕೃಷ್ಣ ಮಹಾಸಂಘದ ಧ್ಯೇಯಮಂತ್ರವಾಗಿದೆ.

ಶ್ರೀ ರಾಮಕೃಷ್ಣ ಮಿಶನ್ನಿನ ಶಾಖೆಗಳು ದೇಶವಿದೇಶಗಳಲ್ಲಿ ಇಂದು ಹರಡಿವೆ. ಇಡೀ ಸಂಸ್ಥೆಗೆ ಅನುಗ್ರಹ ನೀಡಿ ಮಾರ್ಗದರ್ಶನ ಮಾಡಲು ಸಂಸ್ಥೆಯ ಕೇಂದ್ರ ಕಛೇರಿಯಲ್ಲಿ ಸಂಘದ ಅಧ್ಯಕ್ಷರು ಇದ್ದಾರೆ. ಅವರು ಇಡೀ ಸಂಘಕ್ಕೆ ಹಿರಿಯ ಗುರುಗಳಾಗಿರುತ್ತಾರೆ. ಅವರಿಗೆ ನೆರವಾಗಲು ಸಂನ್ಯಾಸಿಗಳಿಂದಲೇ ಕೂಡಿದ ಒಂದು ವಿಶ್ವಸ್ಥ ಸಮಿತಿ ಇದೆ. ಸಂಸ್ಥೆಯ ಕಾರ್ಯನಿರ್ವಹಣೆಗೆ ಉಪಾಧ್ಯಕ್ಷರು, ಮುಖ್ಯಕಾರ್ಯದರ್ಶಿಗಳು ಇವರನ್ನು ಒಳಗೊಂಡ ಆಡಳಿತವ್ಯವಸ್ಥೆ ಇದೆ.

ಆಧ್ಯಾತ್ಮಿಕ ಜೀವನದಲ್ಲಿ ಪ್ರಾಯೋಗಿಕವಾಗಿ ಆಸಕ್ತಿ ಇರುವ ಬ್ರಹ್ಮಚಾರಿ, ಗೃಹಸ್ಥರು ಇವರಿಗೆಲ್ಲ ಜಾತಿ-ಮತಗಳ ಭೇದಭಾವನೆ ಇಲ್ಲದೆ ದಿವ್ಯಮಂತ್ರದೀಕ್ಷೆಯನ್ನು ಶ್ರೀರಾಮ ಕೃಷ್ಣ ಮಿಶನ್ನಿನ ಮಹಾಧ್ಯಕ್ಷರು ಮತ್ತು ಉಪಾಧ್ಯಕ್ಷರು ನೀಡಿ ಅನುಗ್ರಹಿಸುವ ವಿಶೇಷ ವ್ಯವಸ್ಥೆ ಇರುವುದು ಶ್ರೀರಾಮಕೃಷ್ಣ ಮಿಶನ್ನಿನ ವೈಶಿಷ್ಟ್ಯವಾಗಿದೆ. ಹಾಗೆಯೇ ಸನಾತನ ಹಿಂದೂಧರ್ಮದ ಪೋಷಣೆಗಾಗಿ ಬ್ರಹ್ಮಚಾರಿ ಮತ್ತು ಸಂನ್ಯಾಸಿಗಳ ತಂಡ ಪರಂಪರೆಯಾಗಿ ಬೆಳೆದುಕೊಂಡು ಹೋಗುವಂತೆ ಸಮರ್ಥರಾದ ಸ್ವಾಮಿಗಳ ನೇತೃತ್ವದಲ್ಲಿ ಸುಯೋಗ್ಯವಾದ ಶಿಕ್ಷಣ ಹಾಗೂ ತರಬೇತಿವ್ಯವಸ್ಥೆ ಹೊಂದಿರುವುದು ಶ್ರೀರಾಮ ಕೃಷ್ಣ ಮಿಶನ್ನಿನ ಇನ್ನೊಂದು ವೈಶಿಷ್ಟ್ಯವಾಗಿದೆ. ಈ ಸಂಸ್ಥೆಯು ಲೌಕಿಕ ಹಾಗೂ ಆಧ್ಯಾತ್ಮಿಕ ಎರಡು ದೃಷ್ಟಿಯಿಂದಲೂ ಮಾನವಕಲ್ಯಾಣಾಧಿಕಾರಿ ಧಾರ್ಮಿಕ ಸಂಸ್ಥೆಯಾಗಿರುವುದರಿಂದ ಮತ್ತೊಂದು ವೈಶಿಷ್ಟ್ಯವಾಗಿದೆ.

ಶ್ರೀರಾಮಕೃಷ್ಣ ಮಹಾಸಂಘದ ಶಾಖಾಮಠಗಳಲ್ಲಿ ಮುಖ್ಯಸ್ಥರನ್ನು ಮಹಂತರೆಂದು ಹೇಳುತ್ತಾರೆ. ಶಿಕ್ಷಣ, ವೈದ್ಯಕೀಯ ಚಿಕಿತ್ಸೆ ಇತ್ಯಾದಿ ಸಾರ್ವಜನಿಕ ಉಪಯೋಗಿ ಸಾಮಾಜಿಕ ಸೇವಾಕಾರ್ಯಗಳನ್ನು ನಡೆಸುವ ಶಾಖೆಯಾದರೆ ಅದನ್ನು ಶ್ರೀ ರಾಮಕೃಷ್ಣ ಮಿಶನ್ ಶಾಖೆ ಎಂದು ಹೇಳುತ್ತಾರೆ. ಅದರ ಅಧ್ಯಕ್ಷರು ಸಾಮಾಜಿಕ ವಲಯದಿಂದ ಪ್ರತಿಷ್ಠಿತ ವ್ಯಕ್ತಿಯೊಬ್ಬರಾಗಿದ್ದು ಸಂಸ್ಥೆಯ ಜವಾಬ್ದಾರಿಯನ್ನು ನಿರ್ವಹಿಸುವವರು ಮಿಶನ್ನಿನ ಸ್ವಾಮಿಗಳು ಆಗಿರುತ್ತಾರೆ. ಅವರನ್ನು ಕಾರ್ಯದರ್ಶಿ ಎಂದು ವ್ಯಾವಹಾರಿಕವಾಗಿ ಕರೆಯುತ್ತಾರೆ. ಧಾರ್ಮಿಕ ಗ್ರಂಥಪ್ರಕಟಣೆ, ಪ್ರವಚನ, ಮಂದಿರದಲ್ಲಿ ನಿತ್ಯ ಪೂಜಾರಾಧನೆ ಇತ್ಯಾದಿಗಳನ್ನು ಮಾತ್ರ ನಡೆಸಿ ಸೇವಾಕಾರ್ಯನಿರ್ವಹಿಸುವ ಶಾಖೆಗಳನ್ನು ಮಠ ಎಂದು ಹೇಳುತ್ತಾರೆ. ಮಠಗಳಲ್ಲಿ ಸ್ವಾಮಿಗಳೊಬ್ಬರು ಅಧ್ಯಕ್ಷರಾಗಿ ಪೂರ್ಣ ಜವಾಬ್ದಾರಿ ಹೊಂದಿರುತ್ತಾರೆ. ಶ್ರೀರಾಮಕೃಷ್ಣ ಮಹಾ ಸಂಸ್ಥೆಯ ಪ್ರತಿ ಶಾಖಾ ಕೇಂದ್ರಗಳಲ್ಲೂ ಗೃಹಸ್ಥಶಿಷ್ಯರು-ಸಂನ್ಯಾಸಿಗಳಲ್ಲದ ಭಕ್ತರು ಇವರಿಂದ ಒಳಗೊಂಡ ಒಂದು ಮಾರ್ಗದರ್ಶನ ಸಮಿತಿ ಇರುತ್ತದೆ.

ಶ್ರೀ ರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರು, ಶ್ರೀ ಶಾರದಾಮಣಿ ದೇವಿಯವರು ಇವರ ಜೀವನ–ಸಂದೇಶಗಳಲ್ಲಿ ಪ್ರೀತಿ–ಶ್ರದ್ಧೆ ಇರುವವರು ಯಾರು

ಬೇಕಾದರೂ ಜಾತಿ–ಮತ–ಜನಾಂಗಗಳ ಭೇದವಿಲ್ಲದೆ ಶ್ರೀರಾಮಕೃಷ್ಣ ಮಹಾಸಂಘಕ್ಕೆ ಸೇರಬಹುದು ಶ್ರೀರಾಮಕೃಷ್ಣ ಮಠ ಮತ್ತು ಮಿಶನ್ ಸಂಸ್ಥೆಯಲ್ಲಿನ ಸದಸ್ಯರಲ್ಲಿ ತಮ್ಮ ಸರ್ವಸ್ವವನ್ನೂ ಸಂಘಕ್ಕಾಗಿ ತ್ಯಾಗಮಾಡಿ ಸಂಘದಲ್ಲೇ ಇದ್ದು ಸೇವಾಜೀವನ ನಡೆಸುವ ಬ್ರಹ್ಮಚಾರಿ ಮತ್ತು ಸಂನ್ಯಾಸಿ ಸದಸ್ಯರು, ಸಮಾಜದಲ್ಲಿ ಗೃಹಸ್ಥರು, ಭಕ್ತರಾಗಿ ಉಳಿದು ಸಂಘದ ಆದರ್ಶಗಳನ್ನು ಮಾನ್ಯಮಾಡುತ್ತಾ ಬಾಳುವ ಸಂಘದ ಬಾಹ್ಯವಲಯದ ಬೆಂಬಲಿಗ ಸದಸ್ಯರು ಎಂದು ಎರಡು ವಿಭಾಗವಿದೆ. ಬಾಹ್ಯ ವಿಭಾಗದ ಸದಸ್ಯರು ಸ್ತ್ರೀಪುರುಷರೆಂಬ ಭೇದವಿಲ್ಲದೆ ಮಂತ್ರದೀಕ್ಷೆಯನ್ನು ಸಂಘದ ಮಹಾಧ್ಯಕ್ಷರು ಇಲ್ಲವೇ ಅವರಿಂದ ಅಧಿಕಾರಪಟ್ಟವರಿಂದ ಪಡೆದುಕೊಂಡು ತಮ್ಮ ಮನೆಗಳಲ್ಲೇ ಸಾಧನನಿರತರಾಗಿ ಆಗಾಗ್ಗೆ ಶ್ರೀ ರಾಮಕೃಷ್ಣ ಸಂಘದ ಶಾಖೆಗಳಿಗೆ, ಕೇಂದ್ರ ಕಛೇರಿಗೆ ಅನುಕೂಲವಾದಂತೆ ಭೇಟಿ ನೀಡುತ್ತಾ, ಸ್ವಾಮಿಗಳಿಂದ ಮಾರ್ಗದರ್ಶನ ಪಡೆಯುತ್ತಾ, ಶ್ರೀರಾಮಕೃಷ್ಣ ಮಠ ಸಂಸ್ಥೆಗೆ ಆರ್ಥಿಕ ಹಾಗೂ ನೈತಿಕವಾಗಿ ಬೆಂಬಲವೀಯುತ್ತಾ ಬಾಳುತ್ತಾರೆ. ಶ್ರೀರಾಮಕೃಷ್ಣ ಮಠ ಮತ್ತು ಮಿಶನ್ ಸಂಸ್ಥೆಯಲ್ಲಿ ಶ್ರೀರಾಮಕೃಷ್ಣ ಪರಮಹಂಸರನ್ನು ನವಯುಗಾವತಾರಿ ಭಗವಂತ ಎಂದು ಪರಿಗಣಿಸಿ ಅವರನ್ನೇ ಆರಾಧ್ಯದೇವರಾಗಿ ಪೂಜಿಸುತ್ತಾರೆ.

ಸಂಘದ ಒಳಗಿನ ಕಾರ್ಯನಿರತ ಸಂನ್ಯಾಸಿ-ಸದಸ್ಯರಾಗಿ ಸೇರಲು ೧೮ ರಿಂದ ೨೫ ವಯಸ್ಸಿನ ಒಳಗಿನವರೂ, ಕನಿಷ್ಠ ಎಸ್.ಎಸ್.ಎಲ್.ಸಿ. ತೇರ್ಗಡೆಹೊಂದಿರುವವರೂ ಆಗಿದ್ದು. ಒಳ್ಳೆಯ ಆರೋಗ್ಯ ಹಾಗೂ ಗುಣನಡತೆಯುಳ್ಳವರಾಗಿರಬೇಕು ಎಂಬುದಲ್ಲದೆ ಪುರುಷರಿಗೆ ಮಾತ್ರ ಅವಕಾಶ ಎಂಬ ನಿಬಂಧನೆ ಇದೆ. ಸಂನ್ಯಾಸಿಗಳಾಗಲು ಸಂಘಕ್ಕೆ ಸೇರಿದನಂತರ ಒಂದು ವರ್ಷದವರೆಗೆ ನೂತನ ಜೀವನಕ್ಕೆ ತಯಾರಿಯ ವರ್ಷ ಎಂದು ಕಾರ್ಯನಿರತರಾಗಿರಬೇಕು. ಆಮೇಲೆ ಎರಡು ವರ್ಷ ಬ್ರಹ್ಮಚರ್ಯಜೀವನಕ್ಕೆ ತರಬೇತಿ ಅವಧಿ ಎಂದು ಜೀವಿಸಬೇಕು. ಅದಾದನಂತರ ರಾಮಕೃಷ್ಣ ಮಠ ಮತ್ತು ಮಿಶನ್ ಸಂಸ್ಥೆಯ ಕೇಂದ್ರ ಕಛೇರಿಯಾದ ಬೇಲೂರು ಮಠದಲ್ಲಿರುವ ಮಠೀಯ ಶಿಕ್ಷಣ ತರಬೇತು ವಿದ್ಯಾಪೀಠಕ್ಕೆ ಎರಡು ವರ್ಷದ ಧಾರ್ಮಿಕ ಶಿಕ್ಷಣಕ್ಕಾಗಿ ತೆರಳಬೇಕಾಗುತ್ತದೆ. ಧಾರ್ಮಿಕ ಶಿಕ್ಷಣ ಅವಧಿ ಮುಗಿದಂತೆ ಬೇಲೂರು ಮಠದಲ್ಲಿ ಅಭ್ಯರ್ಥಿಗಳಿಗೆ ಬ್ರಹ್ಮಚರ್ಯಜೀವನದ ದೀಕ್ಷೆನೀಡಲಾಗುವುದು. ಆ ಸಂದರ್ಭದಲ್ಲಿ ಜೀವಾವಧಿ ಪರಿಶುದ್ಧ ಬ್ರಹ್ಮಚರ್ಯಪಾಲನೆ, ಸಿರಿವಂತಿಕೆಯ ತ್ಯಾಗ, ಸೇವಾವೃತ್ತಿ ಇತ್ಯಾದಿ ಹನ್ನೆರಡು ಮುಖ್ಯವಾದ ಪ್ರತಿಜ್ಞೆಗಳನ್ನು ವಿಧಿಯುಕ್ತವಾಗಿ ಬ್ರಹ್ಮಚರ್ಯದೀಕ್ಷಾರ್ಥಿಗಳು ಸ್ವೀಕರಿಸಬೇಕಾಗಿದೆ. ಆಮೇಲೆ ಬ್ರಹ್ಮಚಾರಿಗಳನ್ನು ಹೊಸದಾದ ಹೆಸರಿನಿಂದ ಒಡಗೂಡಿ ಚೈತನ್ಯಮಹಾರಾಜ್ ಎಂದು ಗೌರವದಿಂದ ಕರೆಯಲಾಗುತ್ತದೆ. ಬ್ರಹ್ಮಚರ್ಯದೀಕ್ಷೆಪಡೆದನಂತರ ನಾಲ್ಕು ವರ್ಷಗಳವರೆಗೆ ಬ್ರಹ್ಮಚರ್ಯವ್ರತದ ಕಟ್ಟುನಿಟ್ಟುಗಳನ್ನು ಪಾಲಿಸಿ ಅಭ್ಯರ್ಥಿಯು ಜೀವಿಸಬೇಕು. ಈ ಅವಧಿಯ ಅಂತ್ಯದಲ್ಲಿ ಸಂಘದ ಹಿರಿಯ ಸ್ವಾಮಿಗಳ ನಿರೀಕ್ಷಣೆಗೆ ಸರಿಯಾಗಿ ಬ್ರಹ್ಮಚಾರಿಗಳು ಅರಳಿ ಬೆಳಗಿದ್ದಾರೆ ಎಂದು ಕಂಡುಬಂದರೆ ಅವರಿಗೆ ವಿಧಿಯುಕ್ತವಾಗಿ ಬೇಲೂರು ಮಠದಲ್ಲಿ ಸಂನ್ಯಾಸದೀಕ್ಷೆಯನ್ನು ನೀಡಲಾಗುವುದು. ಆಮೇಲೆ ಅವರು ಸಂಘದ ಅಧಿಕೃತ ಸಂನ್ಯಾಸೀ ಸದಸ್ಯರಾಗಿ ಧಾರ್ಮಿಕ ಜೀವನ ನಡೆಸುತ್ತಾ ಲೋಕಕಲ್ಯಾಣ ಸೇವಾಕಾರ್ಯಗಳಲ್ಲಿ ನಿರತರಾಗುತ್ತಾರೆ.

ಶ್ರೀ ರಾಮಕೃಷ್ಣ ಮಠದ ಸಂಪ್ರದಾಯವು ತಾತ್ತ್ವಿಕವಾಗಿ ಶ್ರೀಮಜ್ಜಗದ್ಗುರು ಆದಿಶಂಕರಾಚಾರ್ಯರಿಂದ ಸ್ಥಾಪಿತವಾದ ದಶನಾಮ ಸಂನ್ಯಾಸ ಸಂಪ್ರದಾಯದ ಪುರಿ ಪಂಥಕ್ಕೆ ಸೇರಿದುದಾಗಿದೆ. ಆದರೂ ಕೂಡ, ಆಧುನಿಕ ಕಾಲದಲ್ಲಿ ಮೂಡಿಬಂದ ಶಂಕರಾಚಾರ್ಯರೆಂದು ವಿಖ್ಯಾತರಾದ ಸ್ವಾಮಿ ವಿವೇಕಾನಂದರಿಂದ ಮಠದ ಸಂಪ್ರದಾಯದ ಬಗ್ಗೆ ಸ್ವಲ್ಪ ಬದಲಾವಣೆ ಮಾಡಲ್ಪಟ್ಟಿದೆ. ರಾಮಕೃಷ್ಣ ಮಠದ ಸ್ವಾಮಿಗಳಲ್ಲಿ ಆಧುನಿಕ ವಿದ್ಯಾಭ್ಯಾಸ, ಸಮಾಜಸೇವೆ, ಜಾತಿ-ಜನಾಂಗ-ಭೇದವಿಲ್ಲದೆ ಅರ್ಹರಾದವರಿಗೆ ಧಾರ್ಮಿಕ ಬೋಧನ, ಜಗತ್ತಿನಲ್ಲಿ ಸನಾತನ ಹಿಂದೂಧರ್ಮಪ್ರಚಾರಮಾಡಿ ಶಾಂತಿ ಸ್ಥಾಪಿಸಬೇಕೆಂಬ ಧ್ಯೇಯನಿಷ್ಠೆ, ಸುವ್ಯವಸ್ಥಿತವಾದ ಸಂನ್ಯಾಸಿಗಳ ಸಹೋದರತ್ವ, ಸಮರ್ಥರಾದ ಸಂನ್ಯಾಸಿಗಳ ತಂಡದ ನಿರ್ಮಾಣದ ವ್ಯವಸ್ಥೆ, ಸದ್ಗೃಹಸ್ಥರು ಬಹುಸಂಖ್ಯೆಯಲ್ಲಿ ಅರಳಿ ಬೆಳಗುವುದಕ್ಕೆ ಪ್ರಯತ್ನ-ಪ್ರೋತ್ಸಾಹಗಳು, ಸಮಾಜದಲ್ಲಿ ಶಿಕ್ಷಣ, ವೈದ್ಯಕೀಯ ಸೇವೆಯ ಜೊತೆಗೆ ದೀನದಲಿತರ ಉದ್ಧಾರ, ಬರಗಾಲ, ಪ್ರವಾಹ ಇತ್ಯಾದಿ ಪ್ರಕೃತಿ ವಿಕೋಪಗಳಿಗೆ ತುತ್ತಾದವರಿಗೆ ಪರಿಹಾರ ಒದಗಿಸಿ ಜೀವನಾನುಕೂಲ ಏರ್ಪಡಿಸುವುದು ಇವುಗಳೆಲ್ಲ ಎದ್ದುಕಾಣುವ ಜೀವನದೃಷ್ಟಿ ಹಾಗೂ ಆಚರಣಾ ಕ್ರಮಗಳು ಇದಕ್ಕೆಲ್ಲ ಸರಕಾರ ಹಾಗೂ ಸಮಾಜದಲ್ಲಿನ ಗೃಹಸ್ಥಭಕ್ತರು, ಹಿತೈಷಿಗಳು ಎಲ್ಲರ ನೆರವನ್ನು ಪಡೆದು ಸಹಕಾರ ಭಾವನೆಯಿಂದ ಕೂಡಿ ಪ್ರಾಮಾಣಿಕವಾಗಿ, ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುವುದು ಶ್ರೀರಾಮಕೃಷ್ಣ ಮಠ ಅಥವಾ ಮಿಶನ್ ಸಂಸ್ಥೆಯ ಹಿರಿಮೆ ಆಗಿದೆ.

ರಾಮಕೃಷ್ಣ ಮಠದ ಶಾಖೆಗಳಲ್ಲಿ ಸಾಮಾನ್ಯವಾಗಿ ಸಾರ್ವಜನಿಕರಿಗಾಗಿ ವಾರಕ್ಕೊಮ್ಮೆ ಧಾರ್ಮಿಕ ಉಪನ್ಯಾಸಗಳು, ತಿಂಗಳಿಗೊಮ್ಮೆ ಪ್ರಾಯೋಗಿಕ ವೇದಾಂತ ಅಥವಾ ಅಂತರ್ಯೋಗ ಶಿಬಿರಗಳು ಸ್ವಾಮಿಗಳ ನೇತೃತ್ವದಲ್ಲಿ ನಡೆಸಲ್ಪಡುತ್ತವೆ. ಆಧ್ಯಾತ್ಮಿಕ ಸಾಧನಾಜೀವನ ನಡೆಸಲು ಅನುಕೂಲವಾಗುವಂತೆ ಭಕ್ತಿಶ್ರದ್ಧೆಯಿಂದ ಕೂಡಿ ಅಪೇಕ್ಷಿಸುವ ಎಲ್ಲರಿಗೂ ಸಂಘದ ಮಹಾಧ್ಯಕ್ಷರಿಂದ ಮಂತ್ರದೀಕ್ಷೆ ಸಿಗುವ ವಿಶೇಷ ಸೌಲಭ್ಯ ಇರುವುದು ಶ್ರೀ ರಾಮಕೃಷ್ಣ ಮಠದ ಗಣನೀಯವಾದ ವೈಶಿಷ್ಟ್ಯವಾಗಿದೆ. ಜೊತೆಗೆ ವರ್ಷಕ್ಕೊಮ್ಮೆ ಹರಿಕಥೆ, ಪ್ರವಚನ, ಭಜನೆ, ವಿಶೇಷ ಉಪನ್ಯಾಸಗಳು ಇತ್ಯಾದಿ ಕಾರ್ಯಕ್ರಮಗಳಿಂದ ಕೂಡಿ ಶ್ರೀರಾಮಕೃಷ್ಣ-ಶ್ರೀಮಾತೆ ಶಾರದಾದೇವಿ ಮತ್ತು ಸ್ವಾಮಿ ವಿವೇಕಾನಂದರ ಜಯಂತ್ಯುತ್ಸವ, ನವರಾತ್ರಿ ಸಂದರ್ಭದಲ್ಲಿ ಶ್ರೀದುರ್ಗಾಪೂಜಾ ಇವುಗಳನ್ನು ವಿಜೃಂಭಣೆಯಿಂದ ಸಂಸ್ಥೆಯ ಎಲ್ಲ ಶಾಖೆಗಳಲ್ಲೂ ಆಚರಿಸುವಿಕೆ, ಧಾರ್ಮಿಕ ಗ್ರಂಥಗಳ ಪ್ರಕಟಣೆ ಇವುಗಳ ಮೂಲಕ ಜನರಿಗೆ ಧರ್ಮಪ್ರಚಾರಮಾಡುವ ಕಾರ್ಯಕ್ರಮ ಹೊಂದಿರುವುದು ಇನ್ನೊಂದು ವಿಶೇಷತೆಯಾಗಿದೆ.

ದೇಶವಿದೇಶಗಳಲ್ಲಿ ಶಾಖೆಗಳ ಮೂಲಕ, ಸಂಚಾರ ಕಾರ್ಯಕ್ರಮಗಳ ಮೂಲಕ ಆಧ್ಯಾತ್ಮಿಕ ನವಜಾಗೃತಿಯನ್ನುಂಟುಮಾಡುವುದು, ಆಧುನಿಕ ವೈಜ್ಞಾನಿಕ ದೃಷ್ಟಿಯ ಬೆಳಕಿನಲ್ಲಿ ಸನಾತನ ಹಿಂದೂವೇದಾಂತಧರ್ಮದ ತಿರುಳನ್ನು ಜನರಿಗೆ ತಿಳಿಯಹೇಳುವುದು, ಶ್ರೀರಾಮಕೃಷ್ಣ-ವಿವೇಕಾನಂದರ ಸರ್ವಧರ್ಮಸಮನ್ವಯ ಸಂದೇಶವನ್ನು ಸಾರುವುದು,

ಸಾಮಾಜಿಕವಾಗಿ ಶಿಕ್ಷಣ, ಆರೋಗ್ಯ, ಸಂಸ್ಕೃತಿ ವಿಚಾರಗಳಲ್ಲಿ ಜನಸಾಮಾನ್ಯರಿಂದ ಮೇಲು ವರ್ಗದವರವರೆಗೆ ಎಲ್ಲರಿಗೂ ಅಭ್ಯುದಯ ಸಾಧಿಸಲು ವಿವಿಧ ಕಾರ್ಯಕ್ರಮಗಳ ಮೂಲಕ ನೆರವಾಗುವುದು, ಜಾತಿ, ಮತ, ಜನಾಂಗಗಳ ಭೇದಪೂರಿತ ದ್ವೇಷ–ಅನೈಕ್ಯದ ಭಾವವನ್ನು ಜನಜೀವನದಲ್ಲಿ ನಿರ್ನಾಮಮಾಡಿ ಎಲ್ಲರೂ ತಮ್ಮ ಅಂತರ್ಯದ ದಿವ್ಯಶಕ್ತಿಯ ಪ್ರಕಾಶ ದೊಡನೆ ಪರಸ್ಪರ ದೈವಿಕ ಸಂಬಂಧದ ಅರಿವಿನ ಸ್ನೇಹ-ಸಹಕಾರಯುಕ್ತರಾಗಿ ಬಾಳುವಂತೆ ರಚನಾತ್ಮಕ ಮಾರ್ಗದರ್ಶನ ನೀಡಿ ಪ್ರೋತ್ಸಾಹಿಸುವುದು, ರಾಜಕೀಯ ಚಟುವಟಿಕೆಗಳಿಂದ ಪೂರ್ತಿಯಾಗಿ ಹೊರತಾಗಿರುವುದು, ವೇಷಭೂಷಣ, ಆಚಾರವಿಚಾರಗಳಲ್ಲಿ ಹಳೆಯ ಸಂಪ್ರದಾಯದ ಸ್ವಾಮಿಗಳಂತೆ ಸಂಪ್ರದಾಯಬದ್ಧರಾಗಿ ಇರದೆ ಆಧುನಿಕ ಕಾಲದ ಸಮಾಜ-ಸನ್ನಿವೇಶಗಳ ಅಗತ್ಯದಂತೆ ಹೊಂದಿಕೊಂಡು ಹಾಗಿದ್ದರೂ ಕೂಡ ಧರ್ಮ ಸಮ್ಮತವಾಗಿ ನಡೆದುಕೊಳ್ಳುತ್ತಾ ಬಾಳುವುದು ಶ್ರೀರಾಮಕೃಷ್ಣ ಮಹಾಸಂಘದ ಅಂತಃಶಕ್ತಿಯ ಧಾರ್ಮಿಕ ತತ್ತ್ವಸೂತ್ರದ ಅಭಿವ್ಯಕ್ತಿಯಾಗಿದೆ.

## ೮. ಶ್ರೀ ಶಾರದಾ ಮಠ

ಶ್ರೀಮಾತೆ ಶ್ರೀ ಶಾರದಾದೇವಿಯವರ ದಿವ್ಯ ಆದರ್ಶ ಮತ್ತು ಸಂದೇಶಗಳನ್ನು ಕೇಂದ್ರವಾಗಿಟ್ಟು ಅವರ ಪುಣ್ಯಜೀವನದ ಮತ್ತು ಅಲೌಕಿಕ ದಿವ್ಯವ್ಯಕ್ತಿತ್ವವನ್ನು ಆಧಾರ ವಾಗಿಟ್ಟುಕೊಂಡು ಮಹಿಯಲ್ಲಿ ಮಹಿಳೋದ್ಧಾರಕ್ಕಾಗಿ ಜನ್ಮತಳೆದ ಲೋಕಸೇವಾ ಸಂನ್ಯಾಸಿನಿಯರ ಸಂಸ್ಥೆಯೇ ಶ್ರೀ ಶಾರದಾ ಮಠ. ಈ ಸಂಸ್ಥೆಯು ಶ್ರೀಮಾತೆ ಶಾರದಾ ದೇವಿಯವರ ಜನ್ಮಶತಾಬ್ದಿ ವರ್ಷದಲ್ಲಿ (೧೯೫೪) ಸಂಸ್ಥಾಪಿಸಲ್ಪಟ್ಟಿತು. ಇದರ ಕೇಂದ್ರೀಯ ಕಛೇರಿಯು ಕಲ್ಕತ್ತೆಯ ಬಳಿಯ ದಕ್ಷಿಣೇಶ್ವರದಲ್ಲಿ ಪಾವನ ಭಾಗೀರಥೀ ತೀರದಲ್ಲಿದೆ.

ಶ್ರೀರಾಮಕೃಷ್ಣ ಮಹಾಸಂಘದ ಎಲ್ಲ ಧ್ಯೇಯನಿಯಮಗಳನ್ನು ಹೊಂದಿರುವ ಈ ಸಂಸ್ಥೆಯು ಲೋಕದ ವನಿತೆಯರ ಆಧ್ಯಾತ್ಮಿಕ ಹಾಗೂ ಸಾಮಾಜಿಕ ಕಲ್ಯಾಣಕ್ಕಾಗಿ ಪ್ರತ್ಯೇಕವಾಗಿ ರೂಪುಗೊಂಡಿದೆ. ಈ ಸಂಸ್ಥೆಗೂ ಶ್ರೀರಾಮಕೃಷ್ಣ ಮಹಾಸಂಘಕ್ಕೂ ಆಡಳಿತ, ಅಧಿಕಾರ ಯಾವುದೇ ರೀತಿಯಲ್ಲಿ ಸಂಬಂಧವಿರದೆ ಇದೊಂದು ಸಂಪೂರ್ಣ ಸ್ವತಂತ್ರವಾದ ಸಂಸ್ಥೆ ಆಗಿದೆ. ಆದರೆ ಆದರ್ಶ ಹಾಗೂ ಆಧ್ಯಾತ್ಮಿಕ ತತ್ತ್ವಪಾಲನೆಯ ಮಟ್ಟಿಗೆ ಶ್ರೀರಾಮಕೃಷ್ಣ ಮಹಾಸಂಘಕ್ಕೂ ಈ ಸಂಸ್ಥೆಗೂ ಹೋಲಿಕೆ ಇದೆ. ಧರ್ಮ ಸಮ್ಮತವಾದ, ಗೌರವಪೂರ್ಣ ಸಂಬಂಧವಿದೆ.

ಶ್ರೀರಾಮಕೃಷ್ಣ ಮಹಾಸಂಘಕ್ಕೆ ಸದಸ್ಯರು ಸೇರಲು ಇರುವ ನಿಯಮಗಳೇ ಈ ಸಂಸ್ಥೆಯಲ್ಲೂ ಪಾಲಿಸಲ್ಪಡುತ್ತವೆ. ಯುವತಿಯರನ್ನು ಬ್ರಹ್ಮಚಾರಿಣಿಯರಾಗಿ ತರಬೇತು ನೀಡಲು ಸೇರಿಸಿಕೊಂಡು ಸಂನ್ಯಾಸದೀಕ್ಷೆ ನೀಡಿ ಸಂಘದ ಅಂತರಂಗದ ಸದಸ್ಯರಾಗಿ ಸ್ವೀಕ ರಿಸುವ ವ್ಯವಸ್ಥೆ ಈ ಸಂಸ್ಥೆಯಲ್ಲಿದೆ. ಆದರೆ ಈ ಸಂಸ್ಥೆಯು ಪೂರ್ತಿಯಾಗಿ ಮಹಿಳೆಯ ರಿಂದಲೇ ನಡೆಸಲ್ಪಡುತ್ತಿದ್ದು ಮಹಿಳೆಯರಿಗಾಗಿ ಮಾತ್ರ ಮೀಸಲಾಗಿರುವ ಸಂಸ್ಥೆ ಎನ್ನುವುದು ಇದರ ವೈಶಿಷ್ಟ್ಯವಾಗಿದೆ.

ಸನಾತನ ಧರ್ಮದ ತತ್ತ್ವಗಳ ಅನುಷ್ಠಾನ, ಪ್ರಚಾರ, ಶಿಕ್ಷಣ, ವೈದ್ಯಕೀಯ ಸೇವೆ ಇತ್ಯಾದಿ ಸಾಮಾಜಿಕ, ಧಾರ್ಮಿಕ ರಂಗಗಳಲ್ಲಿ ವಿನೂತನ ಪ್ರಭಾವ ಬೀರುತ್ತಾ ಶಾಖೆಗಳನ್ನು ದೇಶ-ವಿದೇಶಗಳಲ್ಲಿ ಹರಡುತ್ತಾ ಬೆಳೆದು ಬೆಳಗುತ್ತಿರುವ ಈ ಸಂಸ್ಥೆ ಸ್ತ್ರೀವರ್ಗದ ಸರ್ವಾಂಗೀಣ ಕಲ್ಯಾಣಸಾಧನೆಗಾಗಿ ಆಧುನಿಕ ಯುಗದಲ್ಲಿ ರೂಪುಗೊಂಡಿರುವ ಸನಾತನ ಧರ್ಮದ ಶಕ್ತಿಯ ಕೇಂದ್ರ-ಪ್ರಯೋಗಮಂದಿರವಾಗಿದೆ. ಉನ್ನತ ಜೀವನ ಬೇಕೆಂದು ಬಯಸುವ ಮಹಿಳೆಯರಿಗೆಲ್ಲ ಮಹಾಮಾತೆ ಶ್ರೀ ಶಾರದೇವಿಯವರ ಅಭಯ-ಆಶೀರ್ವಾದಗಳ ಪುಣ್ಯಧಾಮ—ಶ್ರೀ ಶಾರದಾ ಮಠವಾಗಿದೆ.

## ೯. ಭಾರತೀಯ ಯೋಗೋದಾ ಸತ್ಸಂಗ ಸಂಸ್ಥೆ (Y.S.S.) ಮತ್ತು ಆತ್ಮಸಾಕ್ಷಾತ್ಕಾರ ಸಹಯೋಗತ್ವ ಸಂಸ್ಥೆ (S.R.F.)

ಸನಾತನ ಧರ್ಮದ ನಿತ್ಯನೂತನ ಯೋಗ ವೇದಾಂತ ಸಂದೇಶವನ್ನು ಪೂರ್ವ-ಪಶ್ಚಿಮ ರಾಷ್ಟ್ರಗಳಲ್ಲಿ ಪ್ರಭಾವಶಾಲಿಯಾಗಿ ಬೀರಿದ ಆಧುನಿಕ ಮಹಾಪುರುಷರಲ್ಲಿ ಪರಮಹಂಸ ಸ್ವಾಮಿಯೋಗಾನಂದರು ಗಣ್ಯರಾಗಿರುತ್ತಾರೆ. ಅವರು ಸ್ಥಾಪಿಸಿದ ಯೋಗೋದಾ ಸತ್ಸಂಗ ಸಂಸ್ಥೆ ಮತ್ತು ಆತ್ಮಸಾಕ್ಷಾತ್ಕಾರ ಸಹಯೋಗ ಸಂಸ್ಥೆ ಇವುಗಳು ದೇಶವಿದೇಶಗಳಲ್ಲಿ ಅಸಂಖ್ಯಾತ ಮಂದಿಯ ಬದುಕಿಗೆ ಆಧ್ಯಾತ್ಮಿಕ ಬೆಳಕನ್ನು ಬೀಸಿ, ಸಂತೃಪ್ತಿಯನ್ನು ತುಂಬಿವೆ. ಇಂದು ಭಾರತ ಹಾಗೂ ಇಂಗ್ಲೆಂಡ್, ಇಟಲಿ, ಆಫ್ರಿಕಾ, ಆಸ್ಟ್ರೇಲಿಯಾ ಇತ್ಯಾದಿ ರಾಷ್ಟ್ರಗಳಲ್ಲಿ ನೂರಾರು ಶಾಖೆಗಳನ್ನು ಹೊಂದಿ ವ್ಯಾಪಕವಾಗಿ ಹಬ್ಬಿರುವ ಈ ಲೋಕಕಲ್ಯಾಣಕಾರಿ ಸಂಸ್ಥೆ ಭಾರತದ ಆಧ್ಯಾತ್ಮಿಕ ಸಂಪತ್ತನ್ನು ಮನುಕುಲಕ್ಕೆ ಯಥೋಚಿತವಾಗಿ ವಿತರಣೆ ಮಾಡುತ್ತಿದೆ.

ಪರಮಹಂಸ ಸ್ವಾಮಿ ಯೋಗಾನಂದರ ಪೂರ್ವಾಶ್ರಮದಲ್ಲಿ ಬಾಲ್ಯದ ಹೆಸರು ಮುಕುಂದಲಾಲ ಘೋಷ್. ಬಂಗಾಳ ಪ್ರಾಂತದ ಇಚ್ಛಾಪುರದ ಕಾಯಸ್ಥ ಕುಟುಂಬ ಭಗವತಿಚರಣ ಘೋಷರು ತಂದೆ. ಮುಕುಂದನು ೧೮೯೩ನೇ ಜನವರಿ ತಾ. ೫ರಂದು ಘೋರಕಪುರದಲ್ಲಿ ಜನ್ಮತಳೆದನು. ಕಲ್ಕತ್ತೆಯ ಪರಿಸರದಲ್ಲಿ ಬೆಳೆದನು. ನಿಷ್ಠಾಪೂರ್ಣ ಆಧ್ಯಾತ್ಮಿಕ ಸಾಧನಸಂಪತ್ತನ್ನು ಹೊಂದಿದ್ದ ತಾಯಿತಂದೆಯರಿಂದ ಮುಕುಂದಲಾಲನಿಗೆ ವಿಶೇಷವಾಗಿ ಆಧ್ಯಾತ್ಮಿಕ ಒಲವು ಬಾಲ್ಯದಲ್ಲೇ ಹರಿದುಬಂದಂತಿತ್ತು. ಮುಕುಂದಲಾಲನ ತಾಯಿ ಪರಮಯೋಗಿ ಮಹಾವತಾರ ಬಾಬಾ ಸ್ವಾಮಿಗಳ ಗೃಹಸ್ಥಶಿಷ್ಯರಾದ ಮಹಾಯೋಗಿ ಶ್ರೀ ಲಹರಿ ಮಹಾಶಯರ ಮಂತ್ರದೀಕ್ಷಿತ ಶಿಷ್ಯೆ ಆಗಿದ್ದರು. ಶ್ರೀ ಲಹರಿ ಮಹಾಶಯರ ಶಿಷ್ಯರು ಸ್ವಾಮಿ ಯುಕ್ತೇಶ್ವರ ಮಹಾರಾಜ್‌ರವರು. ಅವರಿಂದ ಮುಕುಂದಲಾಲನು ಜಗದ್ಗುರು ಶ್ರೀ ಶಂಕರಾಚಾರ್ಯರ ಪರಂಪರೆಯಂತೆ ವಿಧಿಯುಕ್ತವಾಗಿ ಸಂನ್ಯಾಸ ಸ್ವೀಕರಿಸಿ ಸ್ವಾಮಿ ಯೋಗಾನಂದಗಿರಿ ಎಂದು ಅರಳಿ ಬೆಳಗಿದರು. ಮುಂದೆ ಗುರುಗಳಿಂದ ವಿಶೇಷ ಯೋಗಾನುಗ್ರಹಕ್ಕೆ ಪಾತ್ರರಾಗಿ ಪರಮಹಂಸ ಸ್ವಾಮಿ ಯೋಗಾನಂದ ಎಂದು ಪ್ರಸಿದ್ಧರಾದರು.

ತಮ್ಮ ಗುರುಗಳ ಅಪ್ಪಣೆ ಹಾಗೂ ಮಾರ್ಗದರ್ಶನದಂತೆ ಸ್ವಾಮಿ ಯೋಗಾನಂದರು ಸನಾತನಧರ್ಮದ ಯೋಗವೇದಾಂತಪ್ರಚಾರಕ್ಕಾಗಿ ಅಮೇರಿಕಾಕ್ಕೆ ೧೯೨೦ರಲ್ಲಿ ತೆರಳಿದರು. ಪಾಶ್ಚಾತ್ಯ ಮತ್ತು ಪೌರ್ವಾತ್ಯ ಧರ್ಮ, ವಿಜ್ಞಾನ ಹಾಗೂ ಸಮಾಜಶಾಸ್ತ್ರಗಳಲ್ಲಿ ಆಳವಾದ ಅಧ್ಯಯನ ನಡೆಸಿದ್ದು ಪೂರ್ವಾಶ್ರಮದಲ್ಲಿ ಕಲ್ಕತ್ತ ವಿಶ್ವವಿದ್ಯಾನಿಲಯದ ಪದವೀಧರರಾಗಿದ್ದ ಸ್ವಾಮಿ ಯೋಗಾನಂದರು ಯೋಗವಿದ್ಯಾಸಿದ್ಧಪುರುಷರಾಗಿದ್ದರು.

ಹಿಂದೂ ಸನಾತನ ಧರ್ಮದ ಪ್ರಾಚೀನ ಮಹರ್ಷಿಗಳಿಂದ ಉಪದೇಶಿಸಲ್ಪಟ್ಟ, ಯೋಗಶಾಸ್ತ್ರದಲ್ಲಿ ಹೇಳಿರುವ ಕ್ರಿಯಾಯೋಗದ ಬಗ್ಗೆ ಸ್ವಾಮಿ ಯೋಗಾನಂದರು ಪರಮೋತ್ಕೃಷ್ಟವಾದ ಅರಿವು-ಅನುಭವಗಳನ್ನು ಗುರುಪರಂಪರೆಯಾಗಿ ಪಡೆದಿದ್ದರು. ಜೀವನದ ಎಲ್ಲ ಆಗುಹೋಗುಗಳಿಗೆ ಮಾನವನ ಮನಸ್ಸಿನ ಯೋಚನೆಯೇ ಕಾರಣ. ದೇಹ–ಮನಸ್ಸು–ಬುದ್ಧಿಗಳ ಸಮತೋಲನವಾದ ವಿಕಾಸ, ಆರೋಗ್ಯ, ಪರಿಶುದ್ಧತೆಗಳನ್ನು ಸಾಧಿಸಿದರೆ ವ್ಯಕ್ತಿಯ ಜೀವನ ಸಫಲವೂ ಸಾರ್ಥಕಯುಕ್ತವೂ ಆಗುತ್ತದೆ. ಅಂತಹ ವ್ಯಕ್ತಿಗಳಿಂದ ಕೂಡಿದ ಸಮಾಜ ಶಾಂತಿ-ಸುಖಿಗಳ ನೆಲೆ ಆಗುತ್ತದೆ ಎನ್ನುವುದು ಸ್ವಾಮಿ ಯೋಗಾನಂದರ ಜೀವನದೃಷ್ಟಿ. ಇದನ್ನು ಸಾಧಿಸಲು ಕ್ರಿಯಾಯೋಗದೀಕ್ಷೆಹೊಂದಿ ಅನುಷ್ಠಾನಮಾಡಿದಾಗ ಸಾಧ್ಯವಾಗುತ್ತದೆ ಎಂಬುದು ಸ್ವಾಮಿಗಳ ಆಶ್ವಾಸನೆ ಹಾಗೂ ಕರೆ. ಯೋಗ, ಪ್ರಾಣಾಯಾಮ, ಮಂತ್ರಜಪ, ನೈತಿಕತತ್ತ್ವಗಳ ಪಾಲನೆ, ಬೌದ್ಧಿಕ ಚಿಂತನೆ, ಆತ್ಮಧ್ಯಾನ, ಪರಮಾತ್ಮನಲ್ಲಿ ಅಚಲಶ್ರದ್ಧೆ ಮತ್ತು ಶರಣಾಗತಿ ಇತ್ಯಾದಿ ಸಾಧನಾ ಅಂಶಗಳು ಕ್ರಿಯಾಯೋಗದಲ್ಲಿ ಅಡಗಿರುವ ಮುಖ್ಯ ವಿಚಾರಗಳು. ವೇದೋಪನಿಷತ್ತುಗಳು, ಪಾತಂಜಲ ಯೋಗಸೂತ್ರಗಳು, ಶ್ರೀಮದ್ಭಗವದ್ಗೀತೆ ಎಂಬ ಸನಾತನಧರ್ಮಶಾಸ್ತ್ರಗ್ರಂಥಗಳು ಇವಕ್ಕೆಲ್ಲ ಆಧಾರಗ್ರಂಥಗಳು. ಸ್ವಾಮಿ ಯೋಗಾನಂದರು ಸಹಸ್ರಾರುಮಂದಿಗೆ ಕ್ರಿಯಾಯೋಗದ ದೀಕ್ಷೆನೀಡಿ ದಿವ್ಯಜೀವನಸೌಭಾಗ್ಯವನ್ನು ಅವರಿಗೆಲ್ಲಾ ಅನುಗ್ರಹಿಸಿದರು. ಯೋಗದೀಕ್ಷೆ, ಸಾಧಕರಿಗೆ ಮಾರ್ಗದರ್ಶನ, ವೇದಾಂತೋಪನ್ಯಾಸ ಎಂದು ಸ್ವಾಮಿಗಳು ಅವಿಶ್ರಾಂತವಾಗಿ ಮೂರು ದಶಕಕ್ಕೂ ಹೆಚ್ಚುಕಾಲ ದುಡಿದರು. ದೇಶವಿದೇಶಗಳಲ್ಲಿ ಸಂಚಾರ ಕೈಕೊಂಡು ತೆರಳಿದಲ್ಲೆಲ್ಲಾ ಜನಸಮೂಹಕ್ಕೆ ದಿವ್ಯಜೀವನದ ಸಂದೇಶ ಬೀರಿದರು.

ಕ್ರಿಯಾಯೋಗವಿದ್ಯೆ, ವೇದಾಂತಜ್ಞಾನ ಇವುಗಳ ರಕ್ಷಣೆ, ಪೋಷಣೆ ಮತ್ತು ಪ್ರಚಾರಕ್ಕಾಗಿ ಅನುಕೂಲವಾಗುವಂತೆ ಸ್ವಾಮಿಗಳು ೧೯೧೭ರಲ್ಲಿ ಬಿಹಾರ ಪ್ರಾಂತ್ಯದ ರಾಂಚಿಯಲ್ಲಿ ಯೋಗೋದ ಸತ್ಸಂಗ ಬ್ರಹ್ಮಚರ್ಯ ವಿದ್ಯಾಲಯವನ್ನು ಸ್ಥಾಪಿಸಿದರು. ಅಲ್ಲಿ ವಿದ್ಯಾರ್ಥಿಗಳಿಗೆ ಲೌಕಿಕ ಮತ್ತು ಪಾರಲೌಕಿಕ ವಿದ್ಯೆಯಲ್ಲಿ ಶಿಕ್ಷಣ ದೊರಕುವಂತಾಯಿತು.

೧೯೨೦ರಲ್ಲಿ ಅಮೇರಿಕಾಕ್ಕೆ ತೆರಳಿದ ಸ್ವಾಮಿಗಳು ಅಲ್ಲಿ ಕ್ಯಾಲಿಫೋರ್ನಿಯಾದ ಲಾಸ್ ಎಂಜಲೀಸ್ ನಗರದಲ್ಲಿ ಆತ್ಮಸಾಕ್ಷಾತ್ಕಾರದ ಸಹಯೋಗತ್ವದ ಸಂಸ್ಥೆಯನ್ನು (Self-Realisation Fellowship Organization) ಸ್ಥಾಪಿಸಿದರು. ಅದರ ಶಾಖೆಗಳು ಇಂದು ವಿಶ್ವದ ವಿವಿಧ ಎಡೆಗಳಿಗೆ ಹರಡಿವೆ.

ಭಾರತದಲ್ಲಿ ರಾಂಚಿಯಲ್ಲಿನ ಸಂಸ್ಥೆಯು ಭಾರತದ ಮಟ್ಟಿಗೆ ಕೇಂದ್ರಸಂಸ್ಥೆಯಾಗಿ ಬೆಳೆಯಿತು. ಅಂತರರಾಷ್ಟ್ರೀಯ ವಲಯದಲ್ಲಿ ಅಮೇರಿಕಾದ ಲಾಸ್ ಎಂಜಲೀಸ್‌ನಲ್ಲಿರುವ ಸಂಸ್ಥೆಯು ಕೇಂದ್ರಸಂಸ್ಥೆ ಎಂದಾಯಿತು. ಹಾಗೆಯೇ ಮುಂದೆ ಯೋಗೋದ ಸತ್ಸಂಗ

ಸಂಸ್ಥೆಯ ಸಾಧುಗಳು ನೆಲಸುವ ಕೇಂದ್ರಸಂಸ್ಥೆ ಎಂದು ಕಲ್ಕತ್ತೆಯ ದಕ್ಷಿಣೇಶ್ವರದಲ್ಲಿ ಒಂದು ವಿಶಿಷ್ಟವಾದ ಶಾಖೆಯು ಸ್ಥಾಪನೆಗೊಂಡಿತು.

ಸನಾತನಧರ್ಮದ ತತ್ತ್ವಗಳ ವಿವರಣೆಯನ್ನೊಳಗೊಂಡ, ಮುಖ್ಯವಾಗಿ ಯೋಗ, ಭಗವದ್ಗೀತೆ ಹಾಗೂ ವೇದಾಂತ ವಿಚಾರಪರವಾದ ಗ್ರಂಥಗಳ ಪ್ರಕಟಣೆ-ಪ್ರಚಾರ, ಯೋಗೋದ ಸಂಸ್ಥೆಯ ಸೇವಾಕಾರ್ಯದ ಅಂಶಗಳಲ್ಲಿ ಒಂದಾಗಿದೆ. ಸಂನ್ಯಾಸಿಗಳ ತಂಡದ ನಿರ್ಮಾಣ, ಗೃಹಸ್ಥ ಹಾಗೂ ಇತರಾಶ್ರಮದ ಭಕ್ತರಿಗೆ ಜಾತಿಮತಪಂಥಗಳ ಭೇದವಿಲ್ಲದೆ ಯೋಗವಿದ್ಯಾದೀಕ್ಷೆ-ಅನುಷ್ಠಾನಕ್ಕೆ ಅಗತ್ಯದ ಮಾರ್ಗದರ್ಶನ ನೀಡುವುದು ಇನ್ನೊಂದು ಮುಖ್ಯಾಂಶವಾಗಿದೆ. ಸಾಧ್ಯವಾದ ಎಡೆಗಳಲ್ಲೆಲ್ಲಾ ಧ್ಯಾನಕೇಂದ್ರಗಳನ್ನು ಸ್ಥಾಪಿಸಿ ಜನ ಮಲಯದಲ್ಲಿ ದಿವ್ಯಜೀವನ-ಧ್ಯಾನಸಾಧನಗಳ ಬಗ್ಗೆ ಆಸಕ್ತಿಮೂಡಿಸಿ ಅರಿವನ್ನು ಅರಳಿ ಸುವುದಕ್ಕೆ ಯುಕ್ತ ಕಾರ್ಯಕ್ರಮ ಕೈಗೊಳ್ಳುವುದು ಮತ್ತೊಂದು ಮುಖ್ಯಾಂಶವಾಗಿದೆ.

ಸನಾತನ ಧರ್ಮದ ಬಗ್ಗೆ ವೈಜ್ಞಾನಿಕ ಯುಗದಲ್ಲಿ ಸಮರ್ಥವಾದ ರೀತಿಯಲ್ಲಿ ಪೂರ್ವ-ಪಶ್ಚಿಮ ರಾಷ್ಟ್ರಗಳಲ್ಲಿ ಯೋಗ-ವೇದಾಂತ ವಿಚಾರದ ಮೂಲತತ್ತ್ವ-ಅನು ಷ್ಠಾನಗಳ ಕುರಿತಾದ ವಿಶೇಷ ಪ್ರಚಾರ ನಡೆಸಿ ಪ್ರಭಾವ ಬೀರಿದ ಹಿರಿಮೆ ಪರಮಹಂಸ ಸ್ವಾಮಿ ಯೋಗಾನಂದರದ್ದಾಗಿದೆ. ೧೯೫೨ರ ಮಾರ್ಚ್ ೭ರಂದು ಮಹಾಸಮಾಧಿ ಹೊಂದಿದ ಸ್ವಾಮಿ ಯೋಗಾನಂದರು ಲೋಕಕಲ್ಯಾಣಕ್ಕಾಗಿ ಒಳ್ಳೆಯ ಸಂನ್ಯಾಸಿ–ಶಿಷ್ಯರ ತಂಡ ಹಾಗೂ ಸಮರ್ಥ ಗೃಹಸ್ಥ ಹಾಗೂ ಇತರ ಶಿಷ್ಯರು, ಅಭಿಮಾನಿಗಳಿಂದ ಕೂಡಿದ ಇನ್ನೊಂದು ತಂಡವನ್ನು ರೂಪಿಸಿ ಈ ಲೋಕದಿಂದ ಕಣ್ಮರೆಯಾಗಿರುತ್ತಾರೆ.

ಪರಮಹಂಸ ಸ್ವಾಮಿ ಯೋಗಾನಂದರು ಸಂಸ್ಥಾಪಿಸಿದ ಭಾರತೀಯ ಯೋಗೋದ ಸತ್ಸಂಗ ಸಂಸ್ಥೆ ಹಾಗೂ ಸಾಕ್ಷಾತ್ಕಾರದ ಸಹಯೋಗದ ಸಂಸ್ಥೆಗಳು ಸನಾತನಧರ್ಮ ಪ್ರಚಾರ, ಮತೀಯ ಸಮನ್ವಯತೆ, ಸೌಹಾರ್ದತೆಗಳ ಸಾಧನೆ, ಮಾನವನು ದೈಹಿಕ ಕಾಹಿಲೆ ಕಷ್ಟಗಳು, ಮಾನಸಿಕ ಅಸ್ವಸ್ಥತೆ, ಆಧ್ಯಾತ್ಮಿಕ ಅಜ್ಞಾನ ಇವುಗಳಿಂದ ಮುಕ್ತನಾ ಗಲು ಮಾರ್ಗದರ್ಶನ ನೀಡುವಿಕೆ, ಸರ್ವೋದಯ ದೃಷ್ಟಿಯಿಂದ ಲೋಕಸೇವೆಮಾಡುವುದು ಎಂಬಿತ್ಯಾದಿ ವಿಶ್ವಕಲ್ಯಾಣಕಾರಿ ಧ್ಯೇಯಧೋರಣೆಗಳನ್ನಿಟ್ಟುಕೊಂಡು ವಿಶಿಷ್ಟವಾದ ರೀತಿಯಲ್ಲಿ ಬೆಳೆದು ಬೆಳಗುತ್ತಿವೆ. ಕರ್ನಾಟಕದಲ್ಲಿ ಯೋಗೋದ ಸತ್ಸಂಗ ಸಂಸ್ಥೆಯ ಪ್ರಮುಖ ಶಾಖೆಗಳು ಬೆಂಗಳೂರು ಹಾಗೂ ಮಂಗಳೂರು ನಗರಗಳಲ್ಲಿವೆ.

## ೧೦. ಶ್ರೀ ಅರವಿಂದರ ಪಂಥ

ಆಧುನಿಕ ಯುಗದಲ್ಲಿ ಆತ್ಮಸಾಧನೆಯನ್ನು ಕೈಗೊಂಡು ಸಾಕ್ಷಾತ್ಕಾರದ ಗಿರಿಯನ್ನೇರಿ ದಿವ್ಯದರ್ಶನ ಹೊಂದಿ ಅದನ್ನು ತಮ್ಮದೇ ಆದ ವೈಶಿಷ್ಟ್ಯಪೂರ್ಣವಾದ ರೀತಿಯಲ್ಲಿ ಇಳೆಗೆ ಸಾರಿದ ಅರ್ವಾಚೀನ ಮಹರ್ಷಿಗಳು ಶ್ರೀ ಅರವಿಂದರು. ಲೋಕಕ್ಕೆ ದಿವ್ಯಜೀವನದ ಸೂತ್ರಗಳನ್ನು ವಿವರಿಸಿ, ಭಾರತೀಯ ಸಂಸ್ಕೃತಿಯ ಅಡಿಪಾಯದ ಹಿರಿಮೆಯನ್ನು ಬಣ್ಣಿಸಿ ಯೋಗಸಮನ್ವಯದ, ಪೂರ್ಣಯೋಗದ ಸಂದೇಶವನ್ನು ಮನುಕುಲಕ್ಕೆ ಸಾರಿದ

ಹಿರಿಮೆ ಶ್ರೀ ಅರವಿಂದರದ್ದಾಗಿದೆ. ಸನಾತನ ವೈದಿಕಧರ್ಮದ ನಿತ್ಯನೂತನ ತತ್ತ್ವಗಳ ಬೆಳಕಿನ ಹಾದಿಯಲ್ಲಿ ಆಧ್ಯಾತ್ಮಿಕ ಸಾಧನೆ ಕೈಗೊಂಡು ತಾವು ಪಡೆದ ದಿವ್ಯಸಾಕ್ಷಾತ್ಕಾರದ ಅನುಭವದ ಆಧಾರದಿಂದ ಸನಾತನಧರ್ಮದ ಸಾರಸಂದೇಶವನ್ನು ಲೋಕಕ್ಕೆ ಸಾರಿದ ಮಹಾನುಭಾವರು ಶ್ರೀ ಅರವಿಂದರು. ವೇದೋಪನಿಷತ್ತುಗಳನ್ನು ಪ್ರಮಾಣವಾಗಿ ಸ್ವೀಕರಿಸಿದ ಪ್ರಾಚೀನ ಮಹರ್ಷಿಗಳ ಮೂಲಕ ವಿವಿಧ ದರ್ಶನಗಳು ಲೋಕದ ಜನಕ್ಕೆ ದೊರೆತಂತೆ ಆಧುನಿಕ ಯುಗದಲ್ಲಿ ಮನುಕುಲಕ್ಕೆ ಮಹರ್ಷಿ ಅರವಿಂದರ ಮೂಲಕ 'ಅರವಿಂದ ದರ್ಶನ' ಲಭಿಸಿರುತ್ತದೆ. ಮಹರ್ಷಿ ಅರವಿಂದರು ವೇದೋಪನಿಷತ್ತುಗಳನ್ನು ಮಾನ್ಯಮಾಡಿರುವುದಾದರೂ ಹಿಂದಿನ ಎಲ್ಲ ದರ್ಶನಗಳಂತೆ ಅವರ ದರ್ಶನವು ತಾತ್ತ್ವಿಕ ವಿಚಾರದಲ್ಲಿ ಕೆಲವೊಂದು ವಿಶಿಷ್ಟ ಅಭಿಪ್ರಾಯಗಳನ್ನು ಹೊಂದಿರುತ್ತದೆ. ಹಾಗಾಗಿ ಅದನ್ನು 'ಅರವಿಂದ ದರ್ಶನ' ಎಂದು ಕರೆಯಲಾಗಿದೆ. ಅರವಿಂದ-ದರ್ಶನ ಸೂತ್ರಗಳನ್ನು ಅನುಸರಿಸಿ ಬಾಳುವವರು ಅರವಿಂದ ಪಂಥದವರು.

ಶ್ರೀ ಅರವಿಂದರ ಬಾಲ್ಯದ ಹೆಸರು ಅರವಿಂದ ಘೋಷ್. ೧೮೭೨ನೇ ಆಗಸ್ಟ್ ೧೫ ರಂದು ಕಲ್ಕತ್ತಾ ನಗರದಲ್ಲಿ ಜನಿಸಿದ ಶ್ರೀ ಅರವಿಂದರ ತಂದೆಯ ಹೆಸರು ಶ್ರೀ ಕೃಷ್ಣಧನ ಘೋಷ್. ತಾಯಿಯ ಹೆಸರು ಶ್ರೀಮತಿ ಸ್ವರ್ಣಲತಾದೇವಿ. ಶ್ರೀ ಅರವಿಂದರು ಇಂಗ್ಲೆಂಡಿನಲ್ಲಿ ತಮ್ಮ ಪೂರ್ತಿ ವಿದ್ಯಾಭ್ಯಾಸವನ್ನು ಮಾಡಿ ಭಾರತಕ್ಕೆ ಮರಳಿ ಬಂದು ಬರೋಡಾ ಸಂಸ್ಥಾನದಲ್ಲಿ ಮಹಾರಾಜರ ಆಪ್ತಕಾರ್ಯದರ್ಶಿಯಾಗಿ ಜೀವನ ಪ್ರಾರಂಭಿಸಿದರು. ಹಾಗೆಯೇ ಬರೋಡಾ ಕಾಲೇಜಿನ ಪ್ರಿನ್ಸಿಪಾಲರಾಗಿಯೂ ಸ್ವಲ್ಪ ಕಾಲ ಉದ್ಯೋಗಿಯಾಗಿದ್ದರು. ೧೯೦೧ರಲ್ಲಿ ಶ್ರೀಮತಿ ಮೃಣಾಲಿನಿ ಎಂಬ ಕನ್ಯೆಯನ್ನು ಲಗ್ನವಾಗಿ ಗೃಹಸ್ಥಾಶ್ರಮವನ್ನು ಸ್ವೀಕರಿಸಿದರು. ಮುಂದೆ ಭಾರತದ ಸ್ವಾತಂತ್ರ್ಯಸಂಗ್ರಾಮದಲ್ಲಿ ಭಾಗ ವಹಿಸಿ ತಮ್ಮ ಉಜ್ವಲವಾದ ಉಪನ್ಯಾಸ-ಬರಹಗಳಿಂದ ಜನತೆಯಲ್ಲಿ ರಾಷ್ಟ್ರಭಕ್ತಿಯನ್ನು ಉದ್ದೀಪನಗೊಳಿಸಿದರು. ಬರೋಡಾದಲ್ಲಿ ಶ್ರೀ ವಿಷ್ಣು ಭಾಸ್ಕರ ಲೇಲೆ ಎಂಬ ಮಹಾಯೋಗಿಗಳ ದರ್ಶನವಾಗಿ ಅವರಿಂದ ವಿಶೇಷವಾಗಿ ಯೋಗದೀಕ್ಷೆಯನ್ನು ಹೊಂದಿ ಯೋಗಸಾಧಕರಾದರು. ಬರೋಡದಿಂದ ಕಲ್ಕತ್ತಾ ನಗರಕ್ಕೆ ಹಿಂತಿರುಗಿ ಬಂದು ಅಲ್ಲೇ ನೆಲಸಿದರು. 'ವಂದೇ ಮಾತರಂ' ಪತ್ರಿಕೆಯ ಮೂಲಕ ತೇಜಃಪೂರ್ಣವಾದ ಲೇಖನವನ್ನು ಬರೆದು ಭಾರತೀಯರನ್ನು ಮತ್ತೆ ಸ್ವಾತಂತ್ರ್ಯಸಂಗ್ರಾಮದಲ್ಲಿ ಹುರಿದುಂಬಿಸಿದರು. ಇದರಿಂದ ಅಂದಿನ ಆಳರಸರಾಗಿದ್ದ ಬ್ರಿಟಿಷರ ಕೋಪಕ್ಕೆ ತುತ್ತಾಗಿ ಕಾರಾಗೃಹಶಿಕ್ಷೆಗೆ ಒಳಗಾದರು. ಕಾರಾಗೃಹವಾಸಿಗಳಾಗಿದ್ದಾಗ ವೇದೋಪನಿಷದಾದಿ ಧಾರ್ಮಿಕ ಗ್ರಂಥಗಳ ಆಳವಾದ ಅಧ್ಯಯನ, ಯೋಗಾಭ್ಯಾಸಗಳನ್ನು ನಡೆಸಿ ಭಗವತ್ಸಾಕ್ಷಾತ್ಕಾರವನ್ನು ಹೊಂದಿದರು. ಕಾರಾಗೃಹದಿಂದ ಹೊರಬಂದ ಶ್ರೀ ಅರವಿಂದರು ಪೂರ್ಣ ಆಧ್ಯಾತ್ಮ ಜೀವಿಗಳಾದರು. ಆದರೆ ಬ್ರಿಟಿಷ್ ಸರಕಾರವು ಅವರ ಚಲನವಲನಗಳ ಮೇಲೆ ವಿಶೇಷ ದೃಷ್ಟಿಯನ್ನು ಇಟ್ಟುಕೊಂಡಿತ್ತು. ಅದನ್ನು ತಪ್ಪಿಸಿ ನೆಮ್ಮದಿಯಿಂದ ಯೋಗಾರೂಢರಾಗಿ ಜೀವನ ಕಾರ್ಯ ನಿರ್ವಹಿಸಲು ಶ್ರೀ ಅರವಿಂದರು ಅಂದು ಫ್ರೆಂಚ್ ವಸಾಹತಾಗಿದ್ದ ಪಾಂಡಿಚೇರಿಗೆ ಬಂದು ನೆಲಸಿದರು. ಯೋಗಸಾಧಕಿ ಶ್ರೀಮತಿ ರಿಚರ್ಡ್ ಮೇರಿ

ಎಂಬ ಫ್ರೆಂಚ್ ಮಹಿಳೆ ಅವರ ಪ್ರಮುಖ ಶಿಷ್ಯೆಯಾಗಿ ಅರವಿಂದಾಶ್ರಮದಲ್ಲಿ ನೆಲಸಿದಳು. ಆಕೆಯು ಯೋಗಸಿದ್ಧ ಮಹಾಮಾತಾಯಿಯಾಗಿ ಭಕ್ತರು, ಸಾಧಕರು ಮತ್ತು ಶಿಷ್ಯರ ಪಾಲಿಗೆ ಅರವಿಂದ ಆಶ್ರಮದ ಶ್ರೀಮಾತೆಯಾಗಿ ಬೆಳಗಿದರು. ಶ್ರೀ ಅರವಿಂದರು ಮಹಾಯೋಗಿಗಳಾಗಿ, ಮಹರ್ಷಿಗಳಾಗಿ, ತಮ್ಮ ಆಧ್ಯಾತ್ಮಿಕ ಸಿದ್ಧಿಯ ಅನುಭವದ ಬೆಳಕಿನಲ್ಲಿ ದಿವ್ಯಜೀವನ, ಯೋಗಸಮನ್ವಯ, ಸಾವಿತ್ರಿ, ಗೀತಾ ಪ್ರಬಂಧಗಳು, ಭಾರತೀಯ ಸಂಸ್ಕೃತಿಯ ಅಸ್ತಿಭಾರ ಎಂಬ ಮಹಾನ್ ಕೃತಿಗಳನ್ನು ಮೂಲವಾಗಿ ಇಂಗ್ಲಿಷ್ ಭಾಷೆಯಲ್ಲಿ ರಚಿಸಿ ಆ ಮೂಲಕ ಲೋಕಕ್ಕೆ ಪೂರ್ಣಯೋಗದ ದಿವ್ಯಜೀವನ ಹಾದಿಯನ್ನು ತೋರಿದರು. ದೇಶವಿದೇಶಗಳಿಂದ ಅಸಂಖ್ಯಾತ ಜಿಜ್ಞಾಸುಗಳು, ಸಾಧಕರು, ಶಿಷ್ಯರು, ಶ್ರೀ ಅರವಿಂದ ಮಹರ್ಷಿಗಳ ಉಪದೇಶವನ್ನು ಪಡೆದು ಧನ್ಯರಾದರು. ಕೊನೆಗೆ ಮಹಾಯೋಗಿ ಶ್ರೀ ಅರವಿಂದ ಮಹರ್ಷಿಗಳು ೧೯೫೦ನೇ ಡಿಸೆಂಬರ್ ೫ರಂದು ಮಹಾಸಮಾಧಿ ಹೊಂದಿದರು.

ದ್ವೈತ, ವಿಶಿಷ್ಟಾದ್ವೈತ, ಅದ್ವೈತ ಮತಗಳ ತತ್ತ್ವವಿಚಾರವನ್ನು ವಿಶೇಷವಾದ ರೀತಿಯಲ್ಲಿ ಆರಿಸಿ ಅಳವಡಿಸಿಕೊಂಡು ಜೊತೆಗೆ ನೂತನವಾದ 'ದರ್ಶನ' ವಿವರಗಳನ್ನೂ ಒಳಗೊಂಡಿರುವ ಪಂಥ ಅರವಿಂದರ ಪಂಥ. ಅರವಿಂದಪಂಥದಲ್ಲಿ ಗುರು, ಶಾಸ್ತ್ರ, ಶಿಷ್ಯ, ಯೋಗಸಾಧನೆ, ಶರಣಾಗತಿ, ದೇವರು, ದೇವರ ಅವತಾರ, ದೇವರ ಕೃಪೆ, ದೇವರ ವಿವಿಧ ರೂಪಗಳು, ಪರಿಶುದ್ಧ ಜೀವನ, ಜೀವನದಲ್ಲಿ ಆನಂದಸಿದ್ಧಿ ಎಲ್ಲದಕ್ಕೂ ಸ್ಥಾನವಿದೆ. ಅದ್ವೈತವೇದಾಂತದ ಬ್ರಹ್ಮ ಸತ್ಯ ಎನ್ನುವುದನ್ನು ಒಪ್ಪಿ ಜಗನ್ಮಿಥ್ಯೆ ಎಂಬುದನ್ನು ಅರವಿಂದ ಪಂಥ ಒಪ್ಪುವುದಿಲ್ಲ. ಅರವಿಂದ ದರ್ಶನದ ಮೂಲತತ್ತ್ವ ಜಡವಸ್ತು ಮತ್ತು ಶಕ್ತಿತತ್ತ್ವ ಎಲ್ಲವೂ ಸತ್ಯ ಮತ್ತು ದಿವ್ಯ ಎಂಬುದಾಗಿದೆ. ಜಗತ್ತು ಪರಮಾತ್ಮನ ಸೃಷ್ಟಿ. ಹಾಗಾಗಿ ಪರಮಾತ್ಮನು ಸತ್ಯ ಹಾಗೂ ದಿವ್ಯ ಆಗಿರುವಂತೆ ಜಗತ್ತೂ ಸತ್ಯ ಮತ್ತು ದಿವ್ಯ. (The universe is a manifestation of an infinite and eternal All-existence : the Divine being dwells in all that is ; we ourselves are that in our self, in our own deepest being ; our soul, the secret indwelling psychic entity, is a portion of the Divine consciousness and Essence.—(*Life Divine*, Chap. IV). ಜೀವಿಯು (ಪರಮಾತ್ಮನ) ಒಂದು ಕಿಡಿ ಇದ್ದಂತೆ. (The Soul is a spark of the Divine.) ಮಾನವನು ಭೌತಿಕ ದೇಹದಿಂದ ಕೂಡಿದ್ದಾನೆ. ಆದರೆ ಅಜ್ಞಾನದಿಂದಾಗಿ ತನ್ನ ದಿವ್ಯಶಕ್ತಿಯನ್ನು, ದಿವ್ಯತೆಯನ್ನು ಮರೆತಿದ್ದಾನೆ. ಮಾನವನ ಅಂತರಂಗದಲ್ಲಿ ಅಡಗಿರುವ ದಿವ್ಯಶಕ್ತಿಯು ವಿಕಾಸವಾಗಬೇಕು. ಅದು ಮೊದಲು ಮಾನವನ ವ್ಯಕ್ತಿಗತವಾದ ನೆಲೆಯಲ್ಲಿ ಆಗಬೇಕು. ಆಮೇಲೆ, ಸಾಮೂಹಿಕ ನೆಲೆಯಲ್ಲಿ ಸಾಧಿತವಾಗಲು ಅವನು ಸಹಾಯ ನೀಡುವಂತಾಗಬೇಕು. ವಿಶ್ವವನ್ನೆಲ್ಲ ವ್ಯಾಪಿಸಿರುವ ದಿವ್ಯಪರಮಾತ್ಮಶಕ್ತಿಯನ್ನು ಜಡದಲ್ಲೂ ಪ್ರಕಾಶಗೊಳಿಸಬೇಕು. ಮಾನವನು ತನ್ನಲ್ಲಿನ ದಿವ್ಯತೆಯ ಪ್ರಕಾಶದಿಂದ ಜಗದಲ್ಲಿ ಅದರ ಪ್ರಭಾವ

ಬೇರೆ ದಿವ್ಯಶಕ್ತಿಯ ವಿಶೇಷ ಪ್ರಕಾಶಕ್ಕೆ ಅವಕಾಶ ಮಾಡಬೇಕು ಎಂಬುದು ಅರವಿಂದ ದರ್ಶನದ ಕೆಲವು ಮುಖ್ಯಾಂಶಗಳಾಗಿವೆ.

ಅರವಿಂದರ ದರ್ಶನದಲ್ಲಿ ಕಂಡುಬರುವ ಅತ್ಯಂತ ವೈಶಿಷ್ಟ್ಯಪೂರ್ಣವಾದ ಅಂಶಗಳೇ ಅತಿಮಾನಸ ಮತ್ತು ದೈವೀಮಾನವ ಎಂಬ ಎರಡು ವಿಚಾರಗಳು. ಪರಮಾತ್ಮನು ಸಚ್ಚಿದಾನಂದ. ಅವನಿಂದ ಈ ಜಗತ್ತು-ಜೀವಿಗಳು ಎಲ್ಲ ಸೃಷ್ಟಿ ಆಗಿವೆ, ಜೀವಿಯಲ್ಲಿ ಮನಸ್ಸಿದೆ. ಅಂತರ್ಯದಲ್ಲಿ ದಿವ್ಯತೆ ಇದೆ. ಅದು ಅಜ್ಞಾನದಿಂದ ಆವೃತವಾಗಿದೆ. ಜೀವಿಗೂ ಪರಮಾತ್ಮನಿಗೂ ಸಂಬಂಧ ಕಲ್ಪಿಸಲು ಮನಸ್ಸಿಗೆ ಶಕ್ತಿ ಸಾಲದು. ಹೀಗೆ ಮನಸ್ಸಿಗೂ ಪರಮಾತ್ಮನಿಗೂ ಸಂಬಂಧ ಕಲ್ಪಿಸುವ ಕೊಂಡಿಯೇ ಅತಿಮಾನಸ. (Super-mind is an intermediate fermulation which refers back to a term above it and forward to another below it. It is the link and means by which the inferior develops out of the superior and the link and means by which it may develop back again towards its source. —*Life Divine*, Vol. I)

ಅತಿಮಾನಸ ಅಥವಾ ಅತಿಮನಸ್ಸು ಎಂದರೆ ಸಚ್ಚಿದಾನಂದಪರಮಾತ್ಮನ ಕ್ರಿಯೆ, ಕೃತು, ಜ್ಞಾನಶಕ್ತಿಯಾಗಿದೆ. ಅದರ ಪ್ರಭಾವದಿಂದಲೇ ಜೀವಿಯ ನಿವರ್ತನೆ-ವಿವರ್ತನೆ ಆಗುತ್ತದೆ. ಅತಿಮಾನಸದ ನೆರವಿನಿಂದಲೇ ಮನ-ಪ್ರಾಣ-ಜಡಗಳಲ್ಲಿ ದಿವ್ಯತ್ವವನ್ನು ನೆಲೆಗೊಳಿಸಲು ಜೀವಿಗೆ ಸಾಧ್ಯ. ಅತಿಮಾನಸಕ್ಕೆ ತ್ರಿಕಾಲದೃಷ್ಟಿ ಇದೆ. ಅದು ಪರಮಾತ್ಮನ ಅಭಿವ್ಯಕ್ತಿ ಆಗಿರುತ್ತದೆ. ಅದು ಕ್ರಮವಾದ ರೀತಿಯಲ್ಲಿ ಜೀವಿಯು ಅಂತರಂಗ ಯೋಗ ಸಾಧನೆ ಮಾಡಿರುವುದರಿಂದ ಅದರ ಫಲವಾಗಿ ಅತಿಮಾನಸಪ್ರಜ್ಞೆಯನ್ನು ಪಡೆಯುತ್ತಾನೆ. ಈ ಪ್ರಜ್ಞೆ ಪಡೆಯಲು ಮಾನವ ತನ್ನ ಅಂತರಂಗವನ್ನು ಪರಿಶುದ್ಧ ಮಾಡಿಕೊಳ್ಳಬೇಕು. ಅದು ಹಾಗಾಗಿ ಕ್ಷೇತ್ರ ಸಿದ್ಧವಾದರೆ ಅತಿಮಾನಸ ದಿವ್ಯಶಕ್ತಿ ಅಲ್ಲಿಗೆ ಹರಿದಿಳಿದು ಬರುತ್ತದೆ. ಆ ಮೂಲಕ ಮಾನವಜೀವನ ದಿವ್ಯವಾಗುತ್ತದೆ ಎಂಬುದು ಅರವಿಂದ ದರ್ಶನದಲ್ಲಿ ಕಂಡುಬರುವ ಒಂದು ವಿಶಿಷ್ಟಾಂಶ.

ಮಾನವನ ಮನಸ್ಸಿಗೆ ಉನ್ನತ ದಿವ್ಯ ಪರಮಾತ್ಮ ವಲಯದಿಂದ ಆಧ್ಯಾತ್ಮಿಕ ಶಕ್ತಿ ಸಂದೇಶಗಳನ್ನು ತಲಪಿಸುತ್ತಾ ಸಂಪರ್ಕ ಬೆಳಸುವ ಶಕ್ತಿವಾಹಕಕ್ಕೆ ಅಂತರ್‌ದೃಷ್ಟಿಯ ಮನಸ್ಸು, ಸಹಜ ಮನಸ್ಸು ಎಂದು ಅರವಿಂದರು ಕರೆದಿದ್ದಾರೆ. ಮನಸ್ಸಿಗೆ ದಿವ್ಯತೆಯ ಬಗ್ಗೆ ಸಾಧಾರಣವಾಗಿ ಹೊಂದಲು ಆಗದ ಸತ್ಯದ ದರ್ಶನವನ್ನು ಅಂತರ್‌ದೃಷ್ಟಿಯ ಮನಸ್ಸು ಮೂಡಿಸುತ್ತದೆ. ಹಾಗಾಗಿ ಮನಸ್ಸಿಗೂ ಅತಿಮನಸ್ಸಿಗೂ ಸಂಪರ್ಕ ಬೆಳೆಸುವ ಒಂದು ಸಂಬಂಧವಾಹಕವೇ ಅಂತರ್‌ದೃಷ್ಟಿಯ ಮನಸ್ಸು ಎಂದು ಹೇಳುವುದಾಗಿದೆ. ಆದರೆ ಈ ಮನಸ್ಸಿಗೆ ಪೂರ್ಣವಾದ ಸ್ವಾತಂತ್ರ್ಯ ಇಲ್ಲ. ಮನಸ್ಸಿನ ಯೋಚನಾತರಂಗಗಳಿಂದ ಇದು ಪ್ರಭಾವಿತವಾಗಲೂ ಸಾಧ್ಯವಿದೆ. ಆದರೆ ಇದರ ಆಧಾರದ ಮೂಲವೊಂದು ಇದ್ದು ಅದನ್ನು ಅಧಿಮನಸ್ಸು (Over-mind) ಎಂದು ಅರವಿಂದರು ಹೆಸರಿಸಿದ್ದಾರೆ. ಇದು ಅತ್ಯಂತ ಪ್ರಭಾವಶಾಲಿಯಾದ ಪ್ರಜ್ಞಾಶಕ್ತಿಯಿಂದ ಕೂಡಿದ್ದು ಮನಸ್ಸಿಗೂ ಸರಿಯಾದ ಸಂಪರ್ಕವಾಹಕ ಆಗಿದೆ. ಜೀವಿಯ ಅಂತರ್‌ದೃಷ್ಟಿಯ ಮನಸ್ಸು ಪರಿಶುದ್ಧ

ವಾದಂತೆ ಅಧಿಮನಸ್ಸು ಪ್ರಕಾಶಮಯವಾಗಿ ಪ್ರಭಾವ ಬೀರುತ್ತದೆ. ನಮ್ಮ ಅಂತರಾಳದಲ್ಲಿ ದಿವ್ಯಚೇತನ ಹುದುಗಿದೆ. ಅದನ್ನು ಚೈತನ್ಯಪುರುಷ ಎಂದು ಅರವಿಂದರು ಕರೆದಿದ್ದಾರೆ. ಈ ಚೈತನ್ಯದ ವಿಕಾಸವಾದಾಗ ವಿಶ್ವವ್ಯಾಪಕ ಪರಮಾತ್ಮಶಕ್ತಿಯ ದಿವ್ಯ ಪ್ರಕಟಣೆ ಪ್ರಕಾಶಕ್ಕೆ ಅನುಕೂಲವಾಗುತ್ತದೆ. ಅಂದರೆ ದಿವ್ಯಪರಮಾತ್ಮಶಕ್ತಿಪ್ರಕಾಶ ಚೈತನ್ಯ ಪುರುಷನಲ್ಲಿ, ಹಾಗೆಂದರೆ ನಮ್ಮ ಆತ್ಮದಲ್ಲಿ, ಪ್ರಕಾಶಗೊಳ್ಳಲು ಅನುಕೂಲವಾಗುತ್ತದೆ.

ಸೃಷ್ಟಿ ಎಂದರೇನು ? ಸೃಷ್ಟಿ ಎಂದರೆ ದಿವ್ಯಪರಾಶಕ್ತಿಯು ಅಜ್ಞಾನಕ್ಕೆ ಧುಮುಕುವುದಾಗಿದೆ ಎಂಬುದು ಅರವಿಂದ ದರ್ಶನದಲ್ಲಿ ಕಂಡುಬರುವ ತತ್ತ್ವಸಿದ್ಧಾಂತ. ಅಜ್ಞಾನಕ್ಕೆ ಧುಮುಕುವುದು ಏಕೆ ? ಅಜ್ಞಾನದಿಂದ ಮೇಲೆ ಪುನಃ ದಿವ್ಯತೆಯು ನೆಲೆಗೆ ವಿಕಾಸವಾಗಿ ಬರಲು ಧುಮುಕುವುದಾಗಿದೆ. ಈ ರೀತಿ ದಿವ್ಯಪರಮಾತ್ಮಶಕ್ತಿ ಧುಮುಕುವುದು-ಸಂಕೋಚವಾಗುವುದು, ಆಮೇಲೆ ವಿಕಾಸವಾಗುವುದು—ಇದು ಸೃಷ್ಟಿಯ ಸಹಜನಿಯಮ-ಕ್ರಮ. ಈ ಜಗತ್ತು-ಜೀವನ ಎಂದರೆ ಮಹೋನ್ನತ ಪರಾಶಕ್ತಿ ಪರಮಾತ್ಮ ಶಿವನ ದಿವ್ಯಾನಂದ ತಾಂಡವ ನೃತ್ಯ. ಅದರಿಂದಾಗಿ ಪ್ರಯೋಜನವೇನು ? ಪ್ರಯೋಜನ ಪರಾಶಕ್ತಿಗೆ ಶಿವನಿಗೆ ನಿತ್ಯಾನಂದಪಡೆಯುವುದು ಎಂಬುದು ಅರವಿಂದ ದರ್ಶನದಲ್ಲಿ ಕಂಡುಬರುವ ಸೃಷ್ಟಿ ವಿವರದ ಕುರಿತಾದ ಹೇಳಿಕೆಯಾಗಿದೆ.

"World existence is the ecstatic dance of Shiva which multiplies the body of the God numberlessly to the view, it leaves, that white existence precisely where and what it was, ever is and ever will be. It's soul absolute object is the joy of the dancing." ಪರಾಶಕ್ತಿಯಲ್ಲಿ ಶಿವ-ಕಾಳಿ ಎಂದು ಎರಡು ಶಕ್ತಿಪ್ರಭೇದಗಳು ಇವೆಯೆಂದು ಹೇಳುತ್ತಾ "We must accept the double fact, admit both Shiva and Kali" ಎಂದು ಶ್ರೀ ಅರವಿಂದರು ಹೇಳಿರುತ್ತಾರೆ. (*Life Divine*, Vol. I).

ದೇಹದಲ್ಲಿ ದಿವ್ಯಚೇತನ-ಅಂತರಾತ್ಮವು ಪ್ರಾಣದ ಪ್ರವೃತ್ತಿಗಳು, ಮನದ ಮಿತಿಗಳು, ಅಹಂಕಾರ, ಅಜ್ಞಾನ ಇವುಗಳಿಂದಾಗಿ ಬಂಧಿಸಲ್ಪಟ್ಟಿದೆ. ಆದರೆ ಈ ಬಂಧನದಿಂದ ವ್ಯಕ್ತಿ ಮಾತ್ರ ಬಿಡುಗಡೆಹೊಂದಲು ಸಾಧ್ಯ ಎಂದಿಲ್ಲ. ತಾನು ಬಿಡುಗಡೆಹೊಂದಿ ಜಗದ ಜನಕೋಟಿಯ ಬಿಡುಗಡೆಗೆ ಅನುಕೂಲದ ಅವಕಾಶ ಮಾಡಿಕೊಡಬಹುದು. ಅಂದರೆ ದಿವ್ಯ ಶಕ್ತಿ-ಅತಿಮಾನವಶಕ್ತಿ ಮಾನವನ ಅಂತರಂಗಕ್ಕೆ ಅವತರಿಸಿ ಬರುವಂತೆ ಮಾಡಿ ಅದರಲ್ಲಿ ನೆಲೆಗೊಳ್ಳುವಂತೆ ಮಾಡಬಹುದು. ಆಗ ಆ ವ್ಯಕ್ತಿ (Gnostic being) ಆಧ್ಯಾತ್ಮಿಕ ಮಾನವ, ದೇವಮಾನವನಾಗುತ್ತಾನೆ. ಅವನ ದಿವ್ಯತೆಯ ಪ್ರಭಾವದಿಂದ ಅವನು ಇತರರನ್ನು ಪ್ರಭಾವಿಸಿ ಅವರೂ ಆಧ್ಯಾತ್ಮಿಕ ಮಾನವರಾಗಲು ಅನುಕೂಲವಾಗುತ್ತದೆ. ಆದರಂತೆ ಮಾನವರಲ್ಲಿ ಆಧ್ಯಾತ್ಮಿಕಶಕ್ತಿ ಪ್ರಕಾಶಗೊಂಡಾಗ ಲೋಕಕಲ್ಯಾಣ ವಿಶೇಷ ರೀತಿಯಲ್ಲಿ ಸಾಧ್ಯವಾಗುತ್ತದೆ. ಅದಕ್ಕಾಗಿ ಒಬ್ಬ ವ್ಯಕ್ತಿಯ ವಿಕಾಸ-ಪ್ರಕಾಶಗಳು ಸಾಲದು. ವಿಕಾಸ–ಪ್ರಕಾಶಸಂಪನ್ನರಾದ ದೇವಮಾನವರ ಒಂದು ತಂಡವೇ ಬೇಕು ಎಂದು ಅರವಿಂದರು ಹೇಳಿರುತ್ತಾರೆ. ಈ ರೀತಿ ವಿಕಸಿತಗೊಂಡ ದಿವ್ಯಮಾನವರ,

ಮಹಾಜ್ಞಾನಿಗಳ ತಂಡದಲ್ಲೂ ಎಲ್ಲರೂ ಒಂದೇ ರೀತಿಯ ದಿವ್ಯಶಕ್ತಿಪ್ರಕಾಶ, ದಿವ್ಯಾನಂದದ ಪ್ರಭಾವನಿಂದ ಕೂಡಿರುತ್ತಾರೆಯೇ ? ಇಲ್ಲ. ಅವರಲ್ಲಿ ಆನಂದ, ಶಕ್ತಿಪ್ರಕಾಶಗಳ ತಾರತಮ್ಯ ಇರುತ್ತದೆ. ಏಕೆಂದರೆ ಅತಿಮಾನಸದ ನಿಯಮವೇ ಅನೇಕದಲ್ಲಿ ಏಕತೆಯಾಗಿರುತ್ತದೆ. ಹಾಗೆಯೇ ಅತಿಮಾನವರಲ್ಲಿ ಶಕ್ತಿಪ್ರಕಾಶ ಜೀವನ ರೀತಿನೀತಿಯಲ್ಲಿ ವ್ಯತ್ಯಾಸ ಸಹಜವಾಗಿ ಇರುತ್ತದೆ. ಆದರೆ ಇವರೊಳಗೆ ಅಂತರಾಳದಲ್ಲಿ ಪರಸ್ಪರ ರಚನೆ, ಸರ್ವ ಪ್ರಕಾಶ ಮತ್ತು ದಿವ್ಯಪರಮ ಆತ್ಮಶಕ್ತಿಯ ಏಕತೆಯ ವ್ಯಾಪಕತೆಯಲ್ಲಿ ಸಮಾನತೆ-ಏಕತೆಗಳು ಇದ್ದೇ ಇದೆ ಎಂದು ಸ್ಪಷ್ಟಪಡಿಸಿರುತ್ತಾರೆ. "A Supramental or gnostic race of beings would not be a race made according to a single type, moulded in a single fixed pattern; for the law of the supermind is unity fulfilled in diversity, and therefore, there would be an infinite diversity in the manifestation of the agnostic consciousness, although that conciousness would still be one in its basis, in its constitution "in its all-revealing and all uniting order." (—*Life Divine*, Vol. I.)

ದಿವ್ಯ ಜೀವಿಗಳು–ಅತಿಮಾನವರು ಎಂದರೆ ಅಜ್ಞಾನವಿಲ್ಲದವರು. ಮಂಗದಿಂದ ಮಾನವನಾದಂತೆ ವಿಕಾಸವಾದದ ಹಾದಿಯಲ್ಲಿ ಮಾನವನಿಂದ ಅತಿಮಾನವ-ದೇವಮಾನವ ಆಗುವುದು ಮುಂದಿನ ಸಹಜ ಬೆಳವಣಿಗೆ ಎನ್ನುವುದು ಅರವಿಂದ ದರ್ಶನದಲ್ಲಿ ಕಂಡುಬರುವ ಆಶ್ವಾಸನೆ. ಈ ಬೆಳವಣಿಗೆ ಸಾಧ್ಯವಾಗಲು ಶತಶತಮಾನಗಳು ಕಾಯಬೇಕಾಗಿಲ್ಲ. ಪ್ರಾಮಾಣಿಕವಾಗಿ ಯೋಗಸಾಧನೆಯಿಂದ ವ್ಯಕ್ತಿಗತ ಹಾಗೂ ಸಾಮಾಜಿಕ ನೆಲೆಯಲ್ಲಿ ಕೆಲವೇ ವರ್ಷಗಳಲ್ಲಿ ಸಾಧಿಸಲು ಸಾಧ್ಯ ಎಂದು ಅರವಿಂದ ದರ್ಶನದಲ್ಲಿ ಭರವಸೆ ಕಂಡುಬರುತ್ತದೆ.

ದಿವ್ಯಮಾನವರೆಂದರೆ ಅಜ್ಞಾನವಿಲ್ಲದವರು. ಅವರ ಬದುಕು ಹೇಗಿರುತ್ತದೆ ? ಅವರು ವಿಶ್ವ ಏಕತಾ ಜಾಗತಿಕ ಪ್ರಜ್ಞೆಯಿಂದ ತಮ್ಮ ವೈಯಕ್ತಿಕ ಅಂತರಂಗದ ನೆಲೆಗೂ ವೈಯಕ್ತಿಕ ಮನದ ನೆಲೆಗೂ ವಿಶ್ವದ ಸಮಷ್ಟಿ ಮನ ಹಾಗೂ ವಿಶ್ವಾತ್ಮ ಪರಮಾತ್ಮನಿಗೂ ಯೋಚನೆ, ಕ್ರಿಯೆ, ಎಲ್ಲವುಗಳಲ್ಲೂ ಸಮರಸದ ಸಂಬಂಧದಿಂದ ಬಾಳುತ್ತಾರೆ. (He would act in a universal awareness and a harmony of his individual self with the total self of his individual will with the total will of his individual action with the total action. —*Life Divine*, Vol. II).

ದೇವಮಾನವನಿಗೆ ನಮ್ಮಂತೆ ಜಗದಲ್ಲಿ ಇತರರ ಒಡನೆ ಹೊಂದಿ ಬಾಳಲು ಕಷ್ಟವಿಲ್ಲ. ಏಕೆಂದರೆ ಅವನಲ್ಲಿ ಅಹಂಕಾರವಿರುವುದಿಲ್ಲ. ಅಹಂಕಾರದಿಂದಾಗಿ ಮಾನವ–ಮಾನವರ ಒಳಗೆ ಮಧ್ಯ ಸ್ವಾರ್ಥದ ಅಡ್ಡಗೋಡೆ ಇದೆ. ಅದು ದಿವ್ಯಮಾನವರಿಗೆ ಸಂಬಂಧಿಸಿರುವುದಿಲ್ಲ. ಅವರಲ್ಲಿ ಅಹಂಕಾರ ಅಡಗಿ ಎಲ್ಲರೊಡನೆ ಹೊಂದಿ ಇತರರಿಂದ ನಡೆ–ನುಡಿಗಳ ಮಟ್ಟಿಗೆ ಪ್ರಭಾವಿತರಾಗದೆ ಬಾಳುವ ಶಕ್ತಿ ತುಂಬಿರುತ್ತದೆ. ದೇವಮಾನವರಿಗೆ ಆಸೆ-ಕ್ರೋಧಗಳ ಬಾಧೆ ಇಲ್ಲ ಏಕೆಂದರೆ ಅವರು ಮೂಲಪರಾಶಕ್ತಿಯ ಪ್ರಕಾಶದ ಬಲದಿಂದ

ಅರಳಿ ಬೆಳಗುವವರಿದ್ದಾರೆ. ಅವರಿಗೂ ದೇಹಕ್ಕೂ ಸಂಬಂಧವೇನು ? ಸಾಮಾನ್ಯರಂತೆ ದೇಹ-ಮನ-ಇಂದ್ರಿಯಗಳ ಪ್ರಭಾವದ ಸಂಬಂಧವಿಲ್ಲ. ದೇಹದ ಭಾಗಗಳೆಲ್ಲ ದಿವ್ಯತೆಯ ಪ್ರಕಾಶದಿಂದಾಗಿ ದಿವ್ಯವಾಗಿರುತ್ತವೆ ಮನಸ್ಸು ಪ್ರಚಂಡ ದಿವ್ಯಪ್ರಭೆಯಿಂದ ಕೂಡಿ ಬೆಳಗುತ್ತಿರುತ್ತದೆ. ಹಾಗಾಗಿ ಇಂದ್ರಿಯಗಳು ಅವರನ್ನು ಏನೂ ಮಾಡುವಂತಿಲ್ಲ. ದೇವ ಮಾನವರು ದೇಹದ-ಇಂದ್ರಿಯಗಳ ಗುಲಾಮರಲ್ಲ. ಬದಲು ದಿವ್ಯತೆಯ ಮಹಾ ಪ್ರಕಾಶವು ಚೈತನ್ಯ ಹಾಗೂ ಜಡದ ಮೂಲಕ ಆಗುತ್ತಿದ್ದು ಅದಕ್ಕೆ ದೇಹವು ಅವರಿಗೆ ಅತ್ಯಂತ ಉತ್ತಮ ರೀತಿಯಲ್ಲಿ ನೆರವಾಗುತ್ತಿರುತ್ತದೆ. ಜಗದ ಜೀವಕೋಟಿಯಲ್ಲಿ ಅವರು ಪರಾಶಕ್ತಿಯ ಪ್ರಕಾಶ ಕಾಣುತ್ತಿದ್ದು ತಮಗೂ ಜೀವಕೋಟಿಗೂ ಅಂತರಾಳದಲ್ಲಿ ಅನಿರ್ಬಾಧಿತವಾದ ಸಂಬಂಧ ಇದೆ ಎಂಬ ವಿಶೇಷ ಪ್ರಜ್ಞೆ, ಅದರ ಆನಂದ ಎಲ್ಲ ಕಾಲದಲ್ಲೂ ಅವರಿಗೆ ಇರುತ್ತದೆ.

ದಿವ್ಯಮಾನವರ ನೆಲಸುವ ಸ್ಥಳ ಲೋಕದ ಜನಕೋಟಿಯ ಬದುಕಿನಲ್ಲಿ ದಿವ್ಯತೆಯ ಮಹಾಪ್ರಕಾಶ ಹೊಮ್ಮುವಂತೆ ಮಾಡಲು ಸ್ಫೂರ್ತಿ-ಶಕ್ತಿಯ ಕೇಂದ್ರವಾಗಬೇಕು ಎಂಬುದು ಅರವಿಂದರ ದರ್ಶನದಲ್ಲಿ ಕಂಡುಬರುವ ಆದರ್ಶದ ವಿವರವಾಗಿದೆ.*

ದಿವ್ಯಮಾನವನಿಗೆ ಮುಕ್ತಿ ಎಂಬುದಿದೆಯೋ ? ದೇಹ ಬಿಡುತ್ತಾನೆಯೋ ? ದಿವ್ಯಜ್ಞಾನಿ-ದಿವ್ಯಮಾನವನಿಗೆ ದೇಹ ಬೇರೆ ಎಂಬ ಪರಿಸ್ಥಿತಿಯೇ ಇಲ್ಲ. ಜಡದಲ್ಲಿ ಚೈತನ್ಯ ಪ್ರಕಾಶ ಗೊಂಡಿರುತ್ತದೆ. ಹಾಗಾಗಿ ದಿವ್ಯಜ್ಞಾನಿಯ ಅಂತರಂಗದಲ್ಲಿ ಅವತರಿಸಿ ಅರಳಿದ ದಿವ್ಯ ಪರಮಾತ್ಮಶಕ್ತಿವಿಕಾಸದ ಲೀಲೆಯ ಅನುಸಾರವಾಗಿ ಪೂರ್ಣ ಬ್ರಹ್ಮಾಂಡ ಪರಮಾತ್ಮಶಕ್ತಿಯಲ್ಲಿ ಒಂದಾಗಬಹುದು. ಬಿಂದು ಸಿಂಧುವಿನಲ್ಲಿ ಒಂದಾಗಬಹುದು. ಇದೇ ಮುಕ್ತಿ. ಇದೇ ದಿವ್ಯಾನಂದದ ಸ್ಥಿತಿ. ಇದೇ ಜನ್ಮಮೃತ್ಯುಗಳಿಗೆ ಅತೀತವಾದ ಅಮರತ್ವದ ದಿವ್ಯಸ್ಥಿತಿ. ಅಲ್ಲಿ ಪರಿಶುದ್ಧ ಜ್ಞಾನ, ಅಮೋಘ ಸಾಮರಸ್ಯ, ಶಾಶ್ವತ ದೈವೀ ಆನಂದ ಪರಿಪೂರ್ಣವಾಗಿರುತ್ತದೆ. (It would return to itself - or if it end as individual is to return unto its absolute, if could make that return also—not through a frustration of life but through a spiritual completeness of itself in life. —*Life Divine*, Vol. II).

ಈ ಜೀವನದಲ್ಲಿ ಅಡಗಿರುವ ಅಂತರ್ಯದ ದಿವ್ಯಶಕ್ತಿ ಸೃಷ್ಟಿಲೀಲೆಯ ಅಂಗವಾಗಿ ಅಜ್ಞಾನಕ್ಕೆ ಇಳಿದುಬಂತು. ಅದೇ ದಿವ್ಯಶಕ್ತಿಯ ನಿವರ್ತನ. ಅದು ಯಾವಾಗ ಪ್ರಾರಂಭ ವಾಯಿತು ಎನ್ನುವಂತಿಲ್ಲ. ಅದು ಅನಾದಿ. ನಿವರ್ತನವಾದುದು ವಿವರ್ತನವಾಗಲೇಬೇಕು. ಅಂದರೆ ಏರುತ್ತಾ ಮೇಲೇರಬೇಕು. ಏರಿ ಅರಳಬೇಕು. ಅದಕ್ಕೆ ಮಾನವ ಸಾಧನೆ ಮಾಡಬೇಕು. ಏಕೆಂದರೆ ಅವನು ಅಜ್ಞಾನದಲ್ಲಿ ಇದ್ದಾನೆ. ಆ ಸಾಧನೆಯಿಂದ ಜೀವಾತ್ಮ-

* ಈ ಆದರ್ಶದ ಸಾಧನೆಗೆ ಅರುಣೋದಯನಗರ 'ಆರೋವಿಲೆ' ಎಂಬ ಕೇಂದ್ರವನ್ನು ಪಾಂಡಿಚೇರಿಯ ಬಳಿ ಸ್ಥಾಪಿಸಿ ಬೆಳೆಸಲು ಈಗಾಗಲೇ ಪ್ರಯತ್ನ ನಡೆದು ನಗರನಿರ್ಮಾಣದ ಬಗ್ಗೆ ಅಲ್ಪಸ್ವಲ್ಪ ಕೆಲಸವಾಗಿ ಕಾರಣಾಂತರದಿಂದ ನಗರನಿರ್ಮಾಣ ಕೆಲಸ ಅಲ್ಲಿಗೇ ಸ್ಥಗಿತಗೊಂಡಿದೆ.

ಪರಮಾತ್ಮ ಐಕ್ಯವಾಗುತ್ತದೆ. ದಿವ್ಯತೆಯ ಪ್ರಕಾಶ ಅಂತರಂಗದಲ್ಲಿ ಬೆಳಗುತ್ತದೆ. ಆ ಸಾಧನಾವಿಧಾನವನ್ನು ಅರವಿಂದರು 'ಪೂರ್ಣಯೋಗ' ಎಂದು ಕರೆದಿರುತ್ತಾರೆ.

ಯೋಗದ ಹಾದಿಯನ್ನು ಸಾಧಕನು ನಡೆಯಲು ಪ್ರಾರಂಭಿಸುವ ಮುನ್ನ ಅವನು ಪ್ರಮುಖವಾಗಿ ಗುರು, ಶಾಸ್ತ್ರ, ಉತ್ಸಾಹ, ಕಾಲ ಎಂಬ ನಾಲ್ಕು ಅಂಶಗಳನ್ನು ಅವಲಂಬಿಸಬೇಕು. ಜೊತೆಗೆ ಪರಾಶಕ್ತಿಯ ಕೃಪೆಗೆ ತನ್ನನ್ನು ಸಂಪೂರ್ಣವಾಗಿ, ಪ್ರಾರ್ಥನಾಪೂರ್ವಕವಾಗಿ ಸಮರ್ಪಿಸಿಕೊಳ್ಳಬೇಕು. ಜಗದಾದಿಶಕ್ತಿಗೆ ಶರಣಾಗತನಾಗ ಬೇಕು. ಗುರು ಎಂದರೆ ಸಾಧಕನಿಗೆ ಮಾರ್ಗದರ್ಶನ ನೀಡಬಲ್ಲ ಯೋಗಸಿದ್ಧ, ಯೋಗೇಶ್ವರ. ಶಾಸ್ತ್ರ ಎಂದರೆ ಭಾರತದಲ್ಲಿ ಪರಂಪರಾಗತವಾಗಿ ಮಹರ್ಷಿಗಳು, ಯೋಗಿಗಳು ಅನುಭವಪಟ್ಟು ಬಿಟ್ಟುಹೋಗಿರುವ ದಿವ್ಯಜೀವನದ ಪ್ರಯೋಗ-ಪರಂಪರೆ ಗಳನ್ನು ಒಳಗೊಂಡ ಯೋಗಶಾಸ್ತ್ರ. ಉತ್ಸಾಹ ಎಂದರೆ ನಿತ್ಯವೂ ತನ್ನಲ್ಲಿ ನಂದದ ದಿವ್ಯ ಜೀವನಸಿದ್ಧಿಯ ಅಭೀಪ್ಸೆ. ಕಾಲ ಎಂದರೆ ಯೋಗಸಾಧನೆ ಮಾಡುತ್ತಾ ಅದರ ಸಿದ್ಧಿಗೆ ಕಾಲ ಪಕ್ವವಾಗುವ ಅವಧಿ. ಯೋಗಸಾಧಕನು ಸಿದ್ಧಿಗಾಗಿ ಕಾಲ ಪಕ್ವವಾಗಲು ತಾಳ್ಮೆ ಹಾಗೂ ಶರಣಾಗತಿ ಭಾವನೆಯಿಂದ ಕಾದಿರಬೇಕು.

ಅರವಿಂದರು ಜಗತ್ತು ಬ್ರಹ್ಮನ ಸೃಷ್ಟಿ ಎಂದು ಕರೆದು ಬಂಗಾರದಿಂದ ಆದ ಆಭರಣ ಹೇಗೆ ಬಂಗಾರವೋ ಹಾಗೆಯೇ ಬ್ರಹ್ಮನಿಂದ ಆದ ಜಗತ್ತೂ ಸತ್ಯ ಎಂದು ಕರೆದರು. ಹಾಗಾಗಿ ಅವರು ಜಗತ್ತಿನಲ್ಲಿ ಜನಿಸಿದ ಜೀವಿ ಜಗದೀಶ್ವರನ ಸಾಕ್ಷಾತ್ಕಾರಮಾಡಲು ಜಗದೊಡೆಯನ ಸೃಷ್ಟಿಯಾದ ಜಗತ್ತನ್ನು ತ್ಯಾಜ್ಯಮಾಡಬೇಕೆಂದು ಅಥವಾ ಕೀಳಾಗಿ ಕಾಣಬೇಕೆಂದು ಹೇಳಲಿಲ್ಲ. ಪರಮಾತ್ಮಸಾಕ್ಷಾತ್ಕಾರಕ್ಕೆ ಸಂನ್ಯಾಸ ಆಶ್ರಮ ಸ್ವೀಕರಿಸ ಬೇಕು ಎನ್ನುವುದನ್ನು ಮಹರ್ಷಿ ಅರವಿಂದರು ಅಗತ್ಯವಿಲ್ಲ ಎಂದರು. ಇದ್ದ ನೆಲೆಯಲ್ಲೇ, ಪರಿಸ್ಥಿತಿಯಲ್ಲೇ ಕ್ರಮಬದ್ಧವಾದ ಸಾಧನೆಯ ಮೂಲಕ ಪರಮಾತ್ಮಪ್ರಜ್ಞೆ ಪಡೆದು ಧನ್ಯರಾಗಬಹುದೆಂದು ಘೋಷಿಸಿದರು. ಜಗತ್ತು ದಿವ್ಯ ಎಂದು ಭಾವಿಸಿ ಹಾಗೆಯೇ ದೇಹ-ಮನ—ಎಲ್ಲವನ್ನೂ ದಿವ್ಯವೆಂದು ಪರಿಗಣಿಸಿ, ಅದನ್ನು ಅನುಭವಿಸಲು ಜಗತ್ತನ್ನು-ದೇಹಮನಸ್ಸುಗಳನ್ನು ಕೌಶಲ್ಯಪೂರ್ಣವಾಗಿ, ಯೋಗಾತ್ಮಕವಾಗಿ ಬಳಸಬೇಕು. ಜೀವನ ದಲ್ಲಿನ ತನ್ನ ಸ್ಥಿತಿಗತಿಗಳನ್ನು, ವೃತ್ತಿವಿಚಾರಗಳನ್ನು ಸತ್ಯಪ್ರಕಾಶಕ್ಕೆ ನೆರವಾಗುವ ಮೆಟ್ಟಲು ಎಂದು ಭಾವಿಸಬೇಕು ಎಂದರು ಜೀವನವಿಡೀ ಯೋಗ ಎಂದು ಅವರು ಕರೆದರು. ಆದರಂತೆ ಎಲ್ಲಾ ಕೆಲಸಗಳನ್ನು—ಎಲ್ಲಾ ವಸ್ತುಗಳನ್ನು ದಿವ್ಯತೆಯ ಪ್ರಕಾಶ ಕ್ಕಾಗಿ ಬಳಸಬೇಕು. ದೈವೀಪ್ರಜ್ಞೆಯಿಂದ ದಿವ್ಯಶಕ್ತಿಗೆ ಸಮರ್ಪಣಭಾವದಿಂದ ಜೀವನ ವನ್ನು ನಿರ್ವಹಿಸಬೇಕು ಎಂದು ಬೋಧಿಸಿದರು. ಹಾಗಾಗಿ ದೇಹ, ಮನ, ಬುದ್ಧಿ, ಜಗತ್ತು, ಜೀವನ ಎಲ್ಲವನ್ನೂ ಯೋಗದ ಸಾರ್ಥಕತೆಗೆ ಬಳಸಬೇಕು ಎಂದು ಹೇಳಿದ ಅರವಿಂದ ಮಹರ್ಷಿಗಳು ಯೋಗಸಾಧನಾ ಹಾದಿಯನ್ನು ಪೂರ್ಣಯೋಗವೆಂದು ಕರೆದರು. ಅದರ ತಾತ್ತ್ವಿಕ ವಿವರಣೆಯನ್ನು ಅರವಿಂದರು ಹೀಗೆ ನಿರೂಪಿಸಿದ್ದಾರೆ :

"ಈ ಜಗತ್ತಿನಿಂದ, ಜೀವನದಿಂದ ಜಾರಿ ತಪ್ಪಿಸಿಕೊಂಡು ಹೋಗುವುದು ಉಪಾಯ ವಲ್ಲ. ನನ್ನ ಯೋಗಮಾರ್ಗದಲ್ಲಿ ಇಹಲೋಕ-ಪರಲೋಕ ಎರಡನ್ನೂ ಅಳವಡಿಸಿ

ಪ್ರಯತ್ನಮಾಡಿದ್ದೇನೆ. ಹಾಗೂ ಮಾನವನ ಹೃದಯದಲ್ಲಿ ಈ ಲೋಕದ ಜೀವನದಲ್ಲಿ ದೈವೀಪ್ರಜ್ಞೆ ಹಾಗೂ ದಿವ್ಯಶಕ್ತಿಯನ್ನು ನೆಲೆಗೊಳಿಸಲು ಪ್ರಯತ್ನಿಸಿದ್ದೇನೆ. ಈ ಪ್ರಯತ್ನ ವ್ಯಕ್ತಿಗತ ಮುಕ್ತಿಗೆ ಅಲ್ಲವಾಗಿದ್ದು ದಿವ್ಯಜೀವನವನ್ನು ಭೂಲೋಕದಲ್ಲಿ ನೆಲೆಗೊಳಿಸಲಾಗಿದೆ. ಈ ಲೋಕದಲ್ಲಿ ವಾಸಿಸಿ ಜೀವನ ನಿರ್ವಹಿಸುವುದು ಆಧ್ಯಾತ್ಮಿಕತೆಗೆ ಏನೂ ಕಲಂಕದಾಯಕವಲ್ಲ.. ಸತ್ಯದ ಕುರಿತಾಗಿ, ಈ ಜಗತ್ತಿನ ಬಗ್ಗೆ, ದೇವರ ವಿಷಯವಾಗಿ ಇದೇ ನನ್ನ ನಿಲುವು. ಇದೇ ನನ್ನ ಅನುಭವ. ಅದನ್ನು ಪಡೆಯಲು ನಾನು ಮಾಡಿದ ಪ್ರಯತ್ನಕ್ಕೆ ಪೂರ್ಣಯೋಗ ಎಂದು ಕರೆದಿದ್ದೇನೆ.

ನನ್ನ ಯೋಗಸಾಧನಾಪಥದ ಗುರಿ ಏನೆಂದರೆ ದೈವೀಸತ್ಯದ ಜ್ಯೋತಿ, ಶಕ್ತಿ ಮತ್ತು ಆನಂದವನ್ನು ಬಾಳಿನೊಳಕ್ಕೆ ತಂದು ಇಳಿಸಿಕೊಂಡು ಈ ಬದುಕನ್ನೇ ದಿವ್ಯವಾಗಿ ಪರಿವರ್ತಿಸುವುದು."—*Sri Aurobindo on Himself*, PP. 147-49. ಶ್ರೀ ಅರವಿಂದರ ಯೋಗಸಾಧನಾ ಹಾದಿಯ ವೈಶಿಷ್ಟ್ಯತೆಯಾದರೂ ಏನು ? ಅದನ್ನು ಅವರೇ ಹೀಗೆ ಬಣ್ಣಿಸಿದ್ದಾರೆ :

". ಇತರ ಯೋಗ ಪದ್ಧತಿಗಳಲ್ಲಿ ಜೀವ, ಆರೋಹಣ ಕ್ರಮದಿಂದ ಮೇಲಕ್ಕೆ ಹೋಗಿ ಒಂದಾಗಿಬಿಡುವುದಾಗಿದೆ. ಜೀವ ಅವರೋಹಣವಾಗುವುದು ಅವರಿಗೆ ಕೇವಲ ಗೌಣ. ಅವರಿಗೆ ಆರೋಹಣವೇ ನಿಜಸ್ಥಿತಿ. ಆದರೆ ನನ್ನ ಯೋಗಪದ್ಧತಿಯಲ್ಲಿ ಆರೋಹಣ ಪ್ರಾರಂಭದ ಹೆಜ್ಜೆ. ಅದು ಅವರೋಹಣಕ್ಕೆ ಸಾಧನ ಮಾತ್ರ...ಇದರಲ್ಲಿ ಜೀವನದ ದೈವೀಸಾರ್ಥಕತೆಯೇ ಗುರಿ. —*Sri Aurobindo on Himself*, Pp. 167. ಪೂರ್ಣಯೋಗದ ಸಿದ್ಧಿ ಹೇಗೆ ಲಭಿಸುತ್ತದೆ ? ಎಂಬುದಕ್ಕೆ ಶ್ರೀ ಅರವಿಂದರು ನೀಡಿರುವ ವಿವರಣೆ ಹೀಗಿದೆ :

"ಈ ಯೋಗಸಾಧನೆಯು ವ್ಯಾಕುಲತೆ, ಆತ್ಮಶಕ್ತಿಯ ಅಂತರ್ಮುಖವಾದ ಕೇಂದ್ರೀಯ ಹಾಗೂ ದಿವ್ಯಪರಾಶಕ್ತಿಯ ಪ್ರಭಾವ ಮತ್ತು ಕ್ರಿಯೆಗಳಿಗೆ ಒಳಬರಲು ಅನುಕೂಲವಾಗುವಂತೆ ಹೃದಯದ ಹಾದಿ ತೆರೆದಿಡುವುದು ಅಲ್ಲದೆ ಈ ವಿಚಾರಗಳಿಗೆ ವಿರುದ್ಧವಾದ ಎಲ್ಲ ಶಕ್ತಿ ಹಾಗೂ ಪ್ರಭಾವಗಳನ್ನು ತಿರಸ್ಕರಿಸುವುದರ ಮೂಲಕ ಪ್ರಗತಿಹೊಂದುತ್ತದೆ. ಅಂತರಾತ್ಮನ ಅರಳುವಿಕೆಯು ಶ್ರದ್ಧೆ, ವ್ಯಾಕುಲತೆ ಮತ್ತು ಶರಣಾಗತಿಯಿಂದ ಮಾತ್ರ ಸಾಧ್ಯವಾಗುತ್ತದೆ." —*The teaching of Sri Aurobindo*, Pp 16.

ಅರವಿಂದ ದರ್ಶನದಲ್ಲಿ ಮೋಕ್ಷ ಹಾಗೂ ಪರಿಪೂರ್ಣತೆ ಎರಡೂ ಬಾಳಿನ ಗುರಿ ಎಂಬುದನ್ನು ಸ್ಪಷ್ಟಪಡಿಸಲಾಗಿದ್ದು ಮೋಕ್ಷ ಹಾಗೂ ಪರಿಪೂರ್ಣತೆಗಳೆಂದರೇನು ಎಂಬುದನ್ನು ವಿವರಿಸುತ್ತಾ ಪ್ರಪಂಚದಲ್ಲಿ ದೇವರೊಡನೆ, ಮಾನವನಲ್ಲಿ ದೇವರೊಡನೆ ಮತ್ತು ಮಾನವ ಹಾಗೂ ಪ್ರಪಂಚದಿಂದ ಮೀರಿದ ನೆಲೆಯಲ್ಲಿ ದೇವರೊಡನೆ ಸಂಪರ್ಕಹೊಂದಿ ಒಂದಾಗುವುದು ಮುಕ್ತಿಯ ಅರ್ಥ ಮತ್ತು ಪರಿಪೂರ್ಣತೆಯ ರಹಸ್ಯ ಎಂದು ಮಹರ್ಷಿ ಅರವಿಂದರು ಹೇಳಿರುತ್ತಾರೆ :

"To be made oneself with God above and God in man and God in the world is the sense of liberation and the secret of perfection"
—*Essays on Gita*, Pp. 191

ಶ್ರೀ ಅರವಿಂದ ಮಹರ್ಷಿಗಳ ಪಂಥವನ್ನು ಅನುಸರಿಸಿ ದಿವ್ಯಜೀವನ ನಡೆಸುವ ಮಂದಿ ಬಹುಸಂಖ್ಯೆಯಲ್ಲಿ ಇಂದು ದೇಶವಿದೇಶಗಳಲ್ಲಿ ನೆಲಸಿರುತ್ತಾರೆ. ಶ್ರೀ ಅರವಿಂದರು ರಚಿಸಿರುವ ದಿವ್ಯಜೀವನ (*Life Divine*), ಯೋಗಸಮನ್ವಯ (*Synthesis of Yoga*), ಗೀತಾ ಪ್ರಬಂಧಗಳು (*Essays on the Giha*), ವೇದದ ರಹಸ್ಯ (*Secrets of Vedas*). ಸಾವಿತ್ರಿ (ಮಹಾಕಾವ್ಯ), ಶ್ರೀ ಅರವಿಂದ ಪತ್ರಾವಳಿ (*Letters of Sri Aurobindo*) ಈ ಗ್ರಂಥಗಳು ಶ್ರೀ ಅರವಿಂದ ದರ್ಶನದ ಕುರಿತಾಗಿ ಪ್ರಮುಖ ಆಧಾರಗ್ರಂಥಗಳಾಗಿವೆ. ಶ್ರೀ ಅರವಿಂದ ಧ್ಯಾನಕೇಂದ್ರಗಳು, ಅರವಿಂದ ಅಧ್ಯಯನ ಮಂಡಳಿಗಳು ದೇಶವಿದೇಶಗಳಲ್ಲಿ ರೂಪುಗೊಂಡು ಬೆಳೆಯುತ್ತಿವೆ. ಕರ್ನಾಟಕದಲ್ಲಿ ಬೆಂಗಳೂರು, ಹುಬ್ಬಳ್ಳಿ, ಧಾರವಾಡ, ಬೆಳಗಾಂವ ಎಂಬ ಈ ಸ್ಥಳಗಳಲ್ಲಿ ಶ್ರೀ ಅರವಿಂದ ದರ್ಶನ ಅಧ್ಯಯನ-ಸಾಧನ ಕೇಂದ್ರಗಳಿವೆ. ಪಾಂಡಿಚೇರಿಯಲ್ಲಿರುವ ಶ್ರೀ ಅರವಿಂದಾಶ್ರಮವು ಶ್ರೀ ಅರವಿಂದ ಪಂಥಕ್ಕೆ ಸಂಬಂಧಿಸಿದಂತೆ ದೇಶವಿದೇಶಗಳಲ್ಲಿ ಹಬ್ಬಿರುವ ಅನುಯಾಯಿಗಳು ಹಾಗೂ ಭಕ್ತಜನರಿಗೆ ಆಧ್ಯಾತ್ಮಿಕ ಹಾಗೂ ವ್ಯಾವಹಾರಿಕ ಆಡಳಿತ ಮತ್ತು ಮಾರ್ಗದರ್ಶನ ನೀಡುವ ಮೂಲಕೇಂದ್ರವಾಗಿರುತ್ತದೆ.

## ೧೧. ಮಹರ್ಷಿ ಮಹೇಶ ಯೋಗಿಗಳ ಭಾವಾತೀತ ಧ್ಯಾನಯೋಗ ಪಂಥ

ವಿಶ್ವವಿಖ್ಯಾತವಾಗಿರುವ ಭಾವಾತೀತ ಧ್ಯಾನಯೋಗ ಪಂಥದ ಪ್ರವರ್ತನಾಚಾರ್ಯರು ಭಾರತದ ಮಹರ್ಷಿ ಶ್ರೀ ಮಹೇಶ ಯೋಗಿಗಳು. ಭಾವಾತೀತ ಧ್ಯಾನಯೋಗಕ್ಕೆ ಅತೀಂದ್ರಿಯ ಧ್ಯಾನಯೋಗ ಎಂಬ ಹೆಸರೂ ಇದೆ. ಟಿ.ಎಂ. ಎನ್ನುವುದು ಇದರ ಇನ್ನೊಂದು ಆಂಗ್ಲೀಕೃತ ಪ್ರಸಿದ್ಧ ಹೆಸರು. ಅತೀಂದ್ರಿಯ ಧ್ಯಾನಯೋಗವು ಇಂದು ಅಮೆರಿಕಾ, ಇಂಗ್ಲೆಂಡ್, ಜರ್ಮನಿ, ಸ್ವಿಟ್ಸರ್‌ಲೆಂಡ್, ಸ್ವೀಡನ್, ಆಸ್ಟ್ರೇಲಿಯಾ, ನ್ಯೂಜಿಲೆಂಡ್, ಕೆನಡಾ, ದಕ್ಷಿಣ ಆಫ್ರಿಕಾ ಇತ್ಯಾದಿ ಎಡೆಗಳಲ್ಲಿ ತುಂಬ ಜನಪ್ರಿಯವಾಗಿದೆ. ಅಮೆರಿಕಾದಲ್ಲಿ ಹಾರ್ವರ್ಡ್, ಯಾಲೆ, ಸ್ಟಾನ್‌ಫೋರ್ಡ್, ಯಾರ್ಕ್, ಕ್ಯಾಲಿಫೋರ್ನಿಯಾ, ಕೊಲರಾಡೊ ಇತ್ಯಾದಿ ೨೮ ವಿಶ್ವವಿದ್ಯಾಲಯಗಳಲ್ಲಿ ಟಿ.ಎಂ.ನ ಶಿಕ್ಷಣವಿಷಯವನ್ನು ಪಾಠಪಟ್ಟಿಗಳಲ್ಲಿ ಸೇರಿಸಲಾಗಿದೆ. ಟಿ.ಎಂ.ನ ಯೋಗ್ಯತೆ, ಉಪಯುಕ್ತತೆ ಮತ್ತು ತಾಂತ್ರಿಕ ವಿಚಾರಗಳ ಬಗ್ಗೆ ಅಮೆರಿಕಾ, ಇಂಗ್ಲೆಂಡ್, ಫ್ರಾನ್ಸ್, ಜರ್ಮನಿ ಮುಂತಾದ ರಾಷ್ಟ್ರಗಳಲ್ಲಿ ಸುಮಾರು ಎಪ್ಪತ್ತಕ್ಕೂ ಹೆಚ್ಚು ವೈಜ್ಞಾನಿಕ ಸಂಶೋಧನಾ ಸಂಸ್ಥೆಗಳು, ಪ್ರಾಯೋಗಿಕ ಅಧ್ಯಯನ ನಡೆಸಿ ಒಪ್ಪಲಾಗಿದೆ. ನಾರ್ತ್ ಅಮೆರಿಕನ್ ಸ್ಪೇಸ್ ಎಡ್‌ಮಿನಿಸ್ಟ್ರೇಷನ್‌ನ (NASA) ಆಸ್ಟ್ರೋನಾಟ್ ರಸ್ಸೆಲ್ ಸ್ವೀಕಾರ್ಟ್‌ರವರು ಅತೀಂದ್ರಿಯಧ್ಯಾನದ ಬಗ್ಗೆ ವಿಶೇಷ ಆಸಕ್ತಿ ವ್ಯಕ್ತಪಡಿಸಿರುತ್ತಾರೆ. ಮಹರ್ಷಿ ಮಹೇಶ ಯೋಗಿಗಳನ್ನು ತಮ್ಮಲ್ಲಿಗೆ ಕರೆಸಿ ಗೌರವಿಸಿರುತ್ತಾರೆ, ಹಾಗೆಯೇ

ಅಮೆರಿಕಾದ ಅನೇಕ ನಗರಗಳ ಮೇಯರುಗಳಿಂದ ಮಹರ್ಷಿ ಮಹೇಶಯೋಗಿಗಳು ಜನಕೋಟಿಗೆ ಶಾಂತಿ-ಸೌಖ್ಯಗಳನ್ನು ಗಳಿಸುವುದರಲ್ಲಿ ನೆರವಾಗಿ ಸೇವೆಸಲ್ಲಿಸಿರುತ್ತಾರೆ ಎಂದು ಗೌರವಪ್ರಶಸ್ತಿ-ನಗರಕೀಲಿಗಳನ್ನು ಹೊಂದಿರುತ್ತಾರೆ.

ಮಿಲಿಯಾಂತರ ಮಂದಿಯ ಹೃದಯಮಂಡಲದಲ್ಲಿ ಗೌರವಕ್ಕೆ ಪಾತ್ರರಾಗಿರುವ ಮಹರ್ಷಿ ಮಹೇಶಯೋಗಿಗಳು ಪ್ರಚಾರಮಾಡಿರುವ ಭಾವಾತೀತ ಧ್ಯಾನತಂತ್ರ ಆಧುನಿಕ ಆವಿಷ್ಕಾರವೇನಲ್ಲ. ಅತ್ಯಂತ ಪ್ರಾಚೀನವಾದ ಭಾರತೀಯ ವೈದಿಕ ಋಷಿಮುನಿಗಳಿಂದ ರೂಪಿಸಲ್ಪಟ್ಟುದು ಎಂದು ಮಹರ್ಷಿಗಳೇ ಸ್ಪಷ್ಟೀಕರಿಸಿ ಪರಂಪರೆಯಿಂದ ಪಡೆದು ನವಕಾಲಕ್ಕೆ ಸರಿಯಾಗಿ ಅದನ್ನು ಹೊಂದಿಸಿ ನೀಡಿರುವುದಷ್ಟೇ' ತನ್ನ ಕೆಲಸ ಎಂದು ಹೇಳಿರುತ್ತಾರೆ.

ಭಾವಾತೀತ ಧ್ಯಾನಕ್ಕೆ ಆಧುನಿಕ ಯುಗದ ನೂರೆಂಟು ರೀತಿಯ ಮಾನಸಿಕ ಒತ್ತಡ ವ್ಯಾಧಿಗಳಿಗೆ ತುತ್ತಾದವರು, ಅಶಾಂತಿಗೆ ಒಳಗಾದವರು, ಶ್ರೀಮಂತರು, ವಿದ್ಯಾವಂತರು, ಕಲಾವಿದರು, ಯೋಧರು ಎಲ್ಲರೂ ಬಹುಸಂಖ್ಯೆಯಲ್ಲಿ ಭಾವಾತೀತಧ್ಯಾನಕ್ಕೆ ಆಕರ್ಷಿತರಾಗಿರುತ್ತಾರೆ. ಭಾರತದಲ್ಲಿಯೂ ಅನೇಕ ಪ್ರಮುಖ ನಗರ ಹಾಗೂ ಊರುಗಳಲ್ಲಿ ಮಹರ್ಷಿಗಳ ಅತೀಂದ್ರಿಯ ಧ್ಯಾನತಂತ್ರ ಶಿಕ್ಷಣಕೇಂದ್ರಗಳಿವೆ. ಈ ಶಾಖೆಗಳಿಗೆಲ್ಲ ಮೂಲಕೇಂದ್ರವು ಹೃಷೀಕೇಶದಲ್ಲಿ ಪಾವನಗಂಗಾತೀರದಲ್ಲಿದೆ. ಅಲ್ಲಿ ಅತೀಂದ್ರಿಯಧ್ಯಾನ ತಂತ್ರದ ಪ್ರಾರಂಭ ಹಾಗೂ ಮುಂದುವರಿದ ಹಂತಗಳ ಶಿಕ್ಷಣವನ್ನು ನುರಿತ ಶಿಕ್ಷಕರು ನೀಡುತ್ತಾರೆ.

ಭಾವಾತೀತ ಧ್ಯಾನತಂತ್ರವಿಚಾರಗಳನ್ನು ತುಂಬ ವೈಜ್ಞಾನಿಕವಾದುದು ಎಂದು ಕಂಡು ಬಂದಂತೆ ಅದಕ್ಕೆ ಸೃಜನಾತ್ಮಕ ಜ್ಞಾನ ವಿದ್ಯಾಶಾಸ್ತ್ರ (Science of Creative Intelligence) ಎಂದೂ ಹೆಸರನ್ನು ನೀಡಲಾಗಿದೆ ವ್ಯಕ್ತಿಯ ಅಂತರಂಗದಲ್ಲಿ ಅಡಗಿರುವ ಸೃಜನಾತ್ಮಕ ಶಕ್ತಿ, ಜ್ಞಾನಶಕ್ತಿ, ಆನಂದ ಇವುಗಳ ಬಹುಪಾಲು ವ್ಯಕ್ತಿಗೇ ಅವನ್ನು ಸರಿಯಾಗಿ ವಿಕಾಸಗೊಳಿಸಿ ಪ್ರಕಾಶಪಡಿಸಿ ಬಳಸಲು ಅರಿಯದೆ ನಿರುಪಯುಕ್ತವಾಗಿ ಉಳಿದಿರುತ್ತದೆ. ಅದನ್ನು ಭಾವಾತೀತ ಧ್ಯಾನತಂತ್ರದಿಂದ ಬಳಕೆಗೆ ಬರುವಂತೆ ಮಾಡಿ ವ್ಯಕ್ತಿಯ ಪೂರ್ಣವಿಕಾಸಕ್ಕೆ ಅನುಕೂಲವನ್ನು ಉಂಟುಮಾಡಲು ಸಾಧ್ಯವಾಗುತ್ತದೆ. ವ್ಯಕ್ತಿಯು ಪೂರ್ಣ ವಿಕಸಿತನಾಗಿ ದೇಹ, ಮನ, ಬುದ್ಧಿಗಳಲ್ಲಿ ಸಮರ್ಥನಾದರೆ ಅವನ ನಡೆನುಡಿಗಳಲ್ಲಿ ಗುಣಯೋಗ್ಯತೆಗಳು ಪೂರ್ತಿ ಪ್ರಕಾಶಗೊಂಡು ಅವನ ಮನೆ–ಸಂಸಾರ, ಅಂತಹ ವ್ಯಕ್ತಿಗಳಿಂದ ಕೂಡಿದ ಸಂಘಸಂಸ್ಥೆ, ಸಮಾಜ ಎಲ್ಲವೂ ಉತ್ತಮವಾಗುವುದು ಎನ್ನುವುದು ಮಹರ್ಷಿಗಳ ಆಶ್ವಾಸನೆ—ಆಧುನಿಕ ಜಗತ್ತಿಗೆ ಕರೆ.

ಭಾವಾತೀತಧ್ಯಾನಕ್ಕೆ ಯುಕ್ತವಾದ ರೀತಿಯಲ್ಲಿ ದೀಕ್ಷೆಯನ್ನು ನುರಿತ ಶಿಕ್ಷಕರಿಂದ ಕಡ್ಡಾಯವಾಗಿ ಪಡೆಯಬೇಕು. ದೀಕ್ಷಾಸಂದರ್ಭದಲ್ಲಿ ಯಥೋಚಿತವಾದ ಮಂತ್ರವೊಂದನ್ನು ಶಿಕ್ಷಕರು ದೀಕ್ಷಾರ್ಥಿಗೆ ನೀಡುತ್ತಾರೆ. ಆ ಸಂದರ್ಭದದಲ್ಲಿ ಭಾವಾತೀತಧ್ಯಾನ ತಂತ್ರವನ್ನು ಇಳೆಗೆ ನೀಡಿದ ಪ್ರಾಚೀನ ಆಚಾರ್ಯಪರಂಪರೆಗೆ ಗೌರವಕೃತಜ್ಞತೆಗಳನ್ನು ಸಮರ್ಪಿಸುವ ಕಾರ್ಯಕ್ರಮವು ಒಂದಿದೆ. ಅದರಂತೆ ಶ್ರೀ ಆದಿಶಂಕರಾಚಾರ್ಯರ

ಪರಂಪರೆಯಲ್ಲಿ ಬಂದ ಮಹರ್ಷಿ ಮಹೇಶಯೋಗಿಗಳ ಗುರುಗಳಾದ ಜಗದ್ಗುರು ಸ್ವಾಮಿ ಬ್ರಹ್ಮಾನಂದ ಸರಸ್ವತಿ ಮಹಾಸ್ವಾಮಿಗಳನ್ನು ದೀಕ್ಷಾರ್ಥಿಯು ವಂದಿಸಿ ಆ ಮೂಲಕ ಪ್ರಾಚೀನ ಆಚಾರ್ಯಪರಂಪರೆಗೆ ಕೃತಜ್ಞತೆ ಸಲ್ಲಿಸುವ ಹಾಗೂ ತಾನು ಅತ್ಯಂತ ಪ್ರಾಚೀನ ಪರಂಪರಾವಿದ್ಯೆಯನ್ನು ಪಡೆಯುತ್ತಿದ್ದೇನೆ ಎಂದು ಅಭಿಮಾನಪಡುವುದಕ್ಕೆ ಅವಕಾಶ ವಾಗುವ ಕಾರ್ಯಕ್ರಮ ಅನುಸರಿಸಬೇಕಾಗಿದೆ.

ದೀಕ್ಷಾರ್ಥಿಯು ವಿಧಿಯುಕ್ತವಾದ ದೀಕ್ಷಾಮೂಲಕ ಭಾವಾತೀತ ಧ್ಯಾನತಂತ್ರ ಶಿಕ್ಷಕರಿಂದ ಪಡೆದ ಮಂತ್ರದ ಉಚ್ಚಾರಣೆಯ ನೆರವಿನಿಂದ ಮನಸ್ಸನ್ನು ಸ್ಥೂಲನೆಲೆಯಿಂದ ಸೂಕ್ಷ್ಮನೆಲೆಗೆ ತಂದು ಆಮೇಲೆ ಸೂಕ್ಷ್ಮಾತೀತನೆಲೆಗೆ, ಅತೀಂದ್ರಿಯನೆಲೆಗೆ ಸೇರಿಸುವುದೇ ಭಾವಾತೀತ ಧ್ಯಾನತಂತ್ರದ ತಾತ್ಪರ್ಯ. ಭಾವಾತೀತಧ್ಯಾನ ಎಂದರೆ ಒಂದು ವಸ್ತುವಿನ, ದೇವತೆಯ ಕುರಿತಾದ ಧ್ಯಾನವಲ್ಲ. ಅಥವಾ ಮನಸ್ಸನ್ನು ಕೇಂದ್ರೀಕರಿಸುವುದೂ ಅಲ್ಲ. ವಸ್ತುವಿನ ಕುರಿತಾದ ಧ್ಯಾನ ಮತ್ತು ಮನಸ್ಸಿನ ಕೇಂದ್ರೀಕರಣವು ಮನಸ್ಸನ್ನು ಆಲೋಚನಾಪ್ರಜ್ಞೆಯ ಹಂತದಲ್ಲಿ ನೆಲೆಗೊಳಿಸುತ್ತದೆ. ಆದರೆ ಭಾವಾತೀತಧ್ಯಾನವು ಕ್ರಮಬದ್ಧ ವಾಗಿ ಮನಸ್ಸನ್ನು ಯೋಚನೆಯ ಮೂಲನೆಲೆಗೆ, ಪರಿಶುದ್ಧವಾದ ರಚನಾತ್ಮಕ ತಿಳಿವಿನ ನೆಲೆಗೆ (Creative Intelligence Field) ಕೊಂಡೊಯ್ಯುತ್ತದೆ. ನಮ್ಮ ಎಲ್ಲ ಕೆಲಸ ಕಾರ್ಯಗಳಿಗೆ ಯೋಚನೆಯೇ ಮೂಲಕಾರಣ. ಯೋಚನಾತರಂಗವು ನಮ್ಮ ಅಂತರಂಗದ ಆಳದಿಂದ, ರಚನಾತ್ಮಕ ಕೇಂದ್ರದಿಂದ, ಸಾಗರದ ಆಳದಿಂದ ನೀರಿನ ಗುಳ್ಳೆ ಎದ್ದುಬರು ವಂತೆ ಸೂಕ್ಷ್ಮವಾಗಿ ಮೂಡಿ ಮೇಲೇರಿ ಮನಸ್ಸಿನ ಪ್ರಜ್ಞಾನೆಲೆಗೆ ಬಂದಾಗ ಅದು ಪೂರ್ತಿಯಾಗಿ ಬೆಳೆದು ಯೋಜನಾರೂಪ ತಳೆದು ಅಲ್ಲಿಂದ ಮಾತು ಮತ್ತು ಕ್ರಿಯೆಯ ರೂಪವನ್ನು ಹೊಂದಲು ಸಿದ್ಧವಾಗುತ್ತದೆ. ಯೋಚನೆಯ ಮೂಲನೆಲೆಯಾದ ಅಂತ ರಂಗದ ಆಳದ ನೆಲೆಯೇ ಆತ್ಮತತ್ತ್ವದ–ಸೃಷ್ಟಿನಿಯಮದ ನೆಲೆಯಾಗಿದ್ದು ಪರಮ ಪರಿಶುದ್ಧಿ, ಪರಮಶಕ್ತಿಶಾಲಿಯಾದ ಸ್ವಯಂ ಆತ್ಮಪ್ರಜ್ಞೆಯ ಕೇಂದ್ರವಾಗಿರುತ್ತದೆ. ಮನಸ್ಸು ಈ ಕೇಂದ್ರದ ಸಂಪರ್ಕವನ್ನು ಭಾವಾತೀತಧ್ಯಾನದ ಮೂಲಕ ಪಡೆದು ಮತ್ತೆ ಚಟುವಟಿಕೆಗಳ ಸಾಪೇಕ್ಷ ಕ್ಷೇತ್ರದ ನೆಲೆಗೆ ಬಂದಾಗ ಆ ಮನಸ್ಸಿಗೆ ಬಹಳ ಪರಿಶುದ್ಧವಾದ. ಮೇಲ್ಮಟ್ಟದ ಶಕ್ತಿ ಇರುತ್ತದೆ. ಅದರಿಂದಾಗಿ ಇಹದ ಲೋಕವ್ಯವಹಾರದ ಕೆಲಸಕಾರ್ಯ ಗಳನ್ನೆಲ್ಲ ತುಂಬ ಸುಲಲಿತವಾಗಿ ಸಮರ್ಪಕವಾಗಿ ನಿರ್ವಹಿಸಲು ಸಾಧ್ಯವಾಗುತ್ತದೆ. ಭಾವಾ ತೀತಧ್ಯಾನದಿಂದ ದೇಹ, ಮನ, ಬುದ್ಧಿಗಳಿಗೆ ವಿಶೇಷವಾದ ಪ್ರಜ್ಞಾಶಕ್ತಿ ಬರುತ್ತದೆ. ಆರೋಗ್ಯ ತುಂಬಿಬರುತ್ತದೆ. ಕರ್ಮಕುಶಲತೆ. ವಿಶೇಷವಾಗಿ ಹೆಚ್ಚುತ್ತದೆ. ವಿವೇಕವು ವರ್ಧಿಸುತ್ತದೆ.

ಭಾವಾತೀತಧ್ಯಾನಕ್ಕೆ ದಿವಸದಲ್ಲಿ ಆಹಾರ ಸ್ವೀಕರಣೆಗೆ ಮುನ್ನ ಬೆಳಗ್ಗೆ-ಸಂಜೆ ಎರಡು ಬಾರಿ ಪ್ರತಿ ಸರ್ತಿಗೆ ಇಪ್ಪತ್ತು ನಿಮಿಷಗಳಂತೆ ಸಮಯವನ್ನು ಬಳಸಲು ತೆರವಾಗಿಟ್ಟರೆ ಸಾಕು. ಆಹಾರ-ವಿಹಾರಗಳಲ್ಲಿ, ಜೀವನಕ್ರಮದಲ್ಲಿ, ಮತಧರ್ಮದ ನಂಬಿಕೆ ಆಚರಣೆ ಗಳಲ್ಲಿ ಏನೂ ಬದಲಾವಣೆಯನ್ನು ಮಾಡಬೇಕಾಗಿಲ್ಲ. ಭಾವಾತೀತಧ್ಯಾನ ಮುಂದುವರಿ ದಂತೆ ವ್ಯಕ್ತಿ ತನ್ನ ಯೋಚನೆ—ನಡವಳಿಕೆ—ಗುರಿಗಳ ಮಟ್ಟಿಗೆ ತುಂಬ ಉನ್ನತ ಗುಣ

ಮಟ್ಟಕ್ಕೆ ಏರುತ್ತಾನೆ. ಸಾರ್ಥಕ ಜೀವನ ನಡೆಸುವಂತಾಗುತ್ತಾನೆ. ಅವನ ಎಲ್ಲ ಕೆಲಸ ಕಾರ್ಯಗಳಿಗೆ ವಿಶೇಷವಾದ ಬಲ ಮತ್ತು ಬೆಳಕು ಸೃಷ್ಟಿಸಿಯುವುದ ಮೂಲಸ್ರೋತದಿಂದ ಸದಾ ದೊರಕುತ್ತಿರುತ್ತದೆ. ಹೀಗೆ ಭಾವಾತೀತಧ್ಯಾನದ ವಿವರಾಂಶಗಳನ್ನು ಒಳಗೊಂಡ ಈ ನೂತನ ಪಂಥವು ದೇಶವಿದೇಶಗಳಲ್ಲಿ ಹೆಚ್ಚೆಚ್ಚು ಜನಪ್ರಿಯವಾಗುತ್ತಿದೆ.

ಈ ಪಂಥದವರು ಭಾವಾತೀತಧ್ಯಾನತಂತ್ರಕ್ಕೆ ವೇದದಲ್ಲಿ ಆಧಾರವಿದೆ ಎಂದು ಹೇಳುತ್ತಾರೆ. ಆಚಾರ್ಯ ಶ್ರೀ ಆದಿಶಂಕರ ಭಗವತ್ಪಾದರ ಪರಂಪರೆಯ ಜ್ಯೋತಿರ್ಮಠದ ಜಗದ್ಗುರು ಶ್ರೀ ಶಂಕರಾಚಾರ್ಯ ಸ್ವಾಮಿ ಬ್ರಹ್ಮಾನಂದ ಸರಸ್ವತಿ ಸ್ವಾಮಿಗಳು ನೂತನ ಯುಗದಲ್ಲಿ ಪರಂಪರಾಗತವಾಗಿ ತಮಗೆ ದೊರೆತ ಧ್ಯಾನತಂತ್ರ ವಿದ್ಯೆಯನ್ನು ತಮ್ಮ ಶಿಷ್ಯರಾದ ಮಹರ್ಷಿ ಮಹೇಶಯೋಗಿಗಳಿಗೆ ಬೋಧಿಸಿದರು. ಹಾಗಾಗಿ ಭಾವಾತೀತ ಧ್ಯಾನತಂತ್ರವು ಪ್ರಾಚೀನವಾದ ದಿವ್ಯವಿದ್ಯೆ. ಆಧುನಿಕ ಜಗತ್ತಿಗೆ ಭಾರತದ ವಿನೂತನ ಕೊಡುಗೆಯಾಗಿದೆ.

ಅರ್ವಾಚೀನ ಕಾಲದಲ್ಲಿ ಈ ಪ್ರಾಚೀನ ಧ್ಯಾನಯೋಗವಿದ್ಯೆಯನ್ನು ಪ್ರಚಾರಮಾಡಿರುವ ಮಹರ್ಷಿ ಮಹೇಶಯೋಗಿಗಳು ಭಾರತದಲ್ಲಿ ಉತ್ತರಕಾಶಿಯಲ್ಲಿ ೧೯೧೮ರಲ್ಲಿ ಜನ್ಮ ತಳೆದರು. ಕಾಯಸ್ಥ ಕುಟುಂಬಕ್ಕೆ ಸೇರಿದ್ದ ಮಹೇಶಯೋಗಿಗಳ ತಂದೆ ಸರಕಾರಿ ಅರಣ್ಯ ಇಲಾಖೆಯಲ್ಲಿ ಉದ್ಯೋಗಿಯಾಗಿದ್ದರು. ತನ್ನ ತಂದೆಯ ನಾಲ್ವರು ಮಕ್ಕಳಲ್ಲಿ ಮೂರನೆಯವರಾದ ಶ್ರೀ ಮಹೇಶಯೋಗಿಗಳ ಪೂರ್ವಾಶ್ರಮದ ಹೆಸರು ಮಹೇಶ ಪ್ರಸಾದ ವರ್ಮ. ೧೯೪೨ರಲ್ಲಿ ಅಲಾಹಾಬಾದ್ ವಿಶ್ವವಿದ್ಯಾನಿಲಯದಿಂದ ವಿಜ್ಞಾನ ವಿಷಯದಲ್ಲಿ ಪದವೀಧರರಾಗಿ ಹೊರಬಂದ ಮಹೇಶಯೋಗಿಗಳು ಕೈಗಾರಿಕಾ ಸಂಸ್ಥೆಯೊಂದರಲ್ಲಿ ಉದ್ಯೋಗಿಯಾಗಿ ಸೇರಿದರು, ಪ್ರಾಚೀನ ಧರ್ಮ-ಸಂಸ್ಕೃತಿಯಲ್ಲಿ ಆಸಕ್ತರಾದ ಮಹೇಶ ಪ್ರಸಾದರು ಸಂಸ್ಕೃತಭಾಷಾಭ್ಯಾಸ ಮಾಡಿದರು. ಸಂದರ್ಭವಶಾತ್ ಮಹೇಶ ಪ್ರಸಾದರು ಜ್ಯೋತಿರ್ಮಠದ ಜಗದ್ಗುರು ಶಂಕರಾಚಾರ್ಯ ಶ್ರೀ ಬ್ರಹ್ಮಾನಂದ ಸರಸ್ವತಿ ಮಹಾಸ್ವಾಮಿಗಳನ್ನು ಭೇಟಿಯಾದರು. ಅದರಿಂದ ಪ್ರಭಾವಿತರಾಗಿ ಸಂಸಾರಜೀವನದಲ್ಲಿ ವಿರಕ್ತರಾದರು. ಜ್ಯೋತಿರ್ಮಠದಲ್ಲಿ ಜಗದ್ಗುರುಗಳ ಶಿಷ್ಯರಾಗಿ ಹದಿಮೂರು ವರ್ಷಗಳಷ್ಟು ಕಾಲ ನಿಂತು ವೇದಾದಿಶಾಸ್ತ್ರಗಳ ಅಧ್ಯಯನ, ಅನುಷ್ಠಾನ ನಡೆಸಿದರು. ಜಗದ್ಗುರುಗಳು ತಮ್ಮ ದೇಹ ಬಿಡುವ ವೇಳೆಯಲ್ಲಿ ತಾವು ಪರಂಪರೆಯಿಂದ ಪಡೆದು ತಿಳಿದಿದ್ದ ಅತ್ಯಂತ ಪ್ರಾಚೀನವೂ ಪರಿಣಾಮಕಾರಿಯೂ ಆದ ಧ್ಯಾನತಂತ್ರ ಒಂದನ್ನು ಲೋಕದಲ್ಲೆಲ್ಲಾ ಜನಸಾಮಾನ್ಯರಿಗೂ ಕೂಡ ತಲುಪುವಂತೆ ಮಾಡಲು ತಮಗೆ ಅನುಕೂಲವಾಗಲಿಲ್ಲ. ಅದನ್ನು ಮಹೇಶಯೋಗಿಗಳಿಗೆ ಉಪದೇಶಿಸುತ್ತಿದ್ದೇನೆ ಎಂದೂ ಅದನ್ನು ಮಹೇಶಯೋಗಿಗಳು ಲೋಕದಲ್ಲಿ ಪ್ರಚಾರಮಾಡಬೇಕೆಂದೂ ಹೇಳಿ ಅತೀಂದ್ರಿಯಧ್ಯಾನತಂತ್ರದ ರಹಸ್ಯವಿದ್ಯೆಯನ್ನು ಮಹೇಶಯೋಗಿಗಳಿಗೆ ಉಪದೇಶಿಸಿದರು. ಗುರುಗಳಿಂದ ಪಡೆದ ಅತೀಂದ್ರಿಯಧ್ಯಾನವಿದ್ಯೆಯನ್ನು ಮಹೇಶಯೋಗಿಗಳು ಎರಡು ವರ್ಷಗಳಷ್ಟು ಕಾಲ ಹಿಮಾಲಯ ಪರ್ವತದಲ್ಲಿ ಒಂದೆಡೆ ಏಕಾಂತವಾಗಿ ನೆಲಸಿ ಅನುಷ್ಠಾನಮಾಡಿ ಸಿದ್ಧಿಯನ್ನು ಹೊಂದಿದರು, ೧೯೫೯ರಲ್ಲಿ ಮಹರ್ಷಿ ಮಹೇಶಯೋಗಿಗಳೆಂದು ಹೊರಜಗತ್ತಿಗೆ

ಬಂದು ಪ್ರಭಾವಶಾಲಿಗಳಾಗಿ ಬೆಳಗಿದರು. ೧೯೫೯ರಲ್ಲಿ ಪಾಶ್ಚಿಮಾತ್ಯ ದೇಶಕ್ಕೆ ಸಂಚಾರ ಪ್ರಾರಂಭಿಸಿ ಲಂಡನ್ನಿಗೆ ಬಂದು ತಾವು ಸಿದ್ಧಿಮಾಡಿಕೊಂಡ ನೂತನ ಧ್ಯಾನತಂತ್ರವನ್ನು ಪ್ರಚಾರಮಾಡಿದರು. ಅಲ್ಲಿಂದ ಅಮೆರಿಕಾಕ್ಕೆ ತೆರಳಿ ಅಲ್ಲಿ ತಮ್ಮ ಅತೀಂದ್ರಿಯಧ್ಯಾನ ತಂತ್ರವನ್ನು ಅನೇಕರಿಗೆ ಉಪದೇಶಿಸಿದರು. ಆಮೇಲೆ ಅನೇಕ ಬಾರಿ ವಿಶ್ವಪರ್ಯಟನೆ ಕೈಕೊಂಡು ಅಸಂಖ್ಯಾತ ಮಂದಿಗೆ ಧ್ಯಾನತಂತ್ರವನ್ನು ತಿಳಿಸಿ ಮಹರ್ಷಿಗಳು ಮಹತ್ ಪ್ರಸಿದ್ಧರಾದರು.

ಇಂದು ವಿಶ್ವದ ವಿವಿಧ ಭಾಗಗಳಲ್ಲಿ ಸಾವಿರಕ್ಕೂ ಹೆಚ್ಚು ಟಿ. ಎಂ. ಕೇಂದ್ರಗಳಿವೆ, ಅವುಗಳ ಸಂಖ್ಯೆ ದಿನಗಳದಂತೆ ವೃದ್ಧಿ ಆಗುತ್ತಿದೆ. ಟಿ.ಎಂ. ತಂತ್ರವನ್ನು ಉಪದೇಶಿಸುವುದಕ್ಕೆ ಶಿಕ್ಷಕರು ಬಹುಸಂಖ್ಯೆಯಲ್ಲಿ ತಯಾರಾಗುತ್ತಿದ್ದಾರೆ. ಏಳು ದಿವಸಗಳ ಶಿಕ್ಷಣ ಶಿಬಿರದಲ್ಲಿ ಟಿ.ಎಂ. ತಂತ್ರವನ್ನು ಅರಿತು ಪೂರ್ತಿಯಾಗಿ ಅನುಷ್ಠಾನಕ್ಕೆ ಅಳವಡಿಸಿಕೊಳ್ಳಬಹುದು ಎನ್ನುವುದು ಈ ಪಂಥದವರ ಹೇಳಿಕೆಯಾಗಿದೆ.' ಉನ್ನತಮಟ್ಟದ ಧ್ಯಾನ ಜೀವನಕ್ಕೆ ದೀರ್ಘಾವಧಿಯ ವ್ಯವಸ್ಥಿತವಾದ ಶಿಕ್ಷಣ ನೀಡುವ ಏರ್ಪಾಡು ಭಾರತದ ಹೃಷೀಕೇಶದಲ್ಲಿನ ಮಹರ್ಷಿಗಳ ಅಂತರರಾಷ್ಟ್ರೀಯ ಧ್ಯಾನಕೇಂದ್ರದಲ್ಲಿ ಇದೆ. ಹೊರ ದೇಶದಲ್ಲಿ ಲಂಡನ್, ಜಿನೇವಾ ಹಾಗೂ ಲಾಸ್ ಏಂಜಲೀಸ್‌ಗಳಲ್ಲಿ ಅತೀಂದ್ರಿಯ ಧ್ಯಾನದ ಅಂತರರಾಷ್ಟ್ರೀಯ ಕೇಂದ್ರಗಳಿವೆ. ಭಾರತದಲ್ಲಿ ಪ್ರಮುಖ ನಗರಗಳಾದ ಡೆಲ್ಲಿ, ಕಲ್ಕತ್ತ, ಮುಂಬಯಿ, ಮದ್ರಾಸ್, ಮಂಗಳೂರು, ಬೆಂಗಳೂರು, ಮೈಸೂರು ಇಲ್ಲೆಲ್ಲಾ ಮಹರ್ಷಿ ಮಹೇಶಯೋಗಿಗಳ ಧ್ಯಾನಶಿಕ್ಷಣಕೇಂದ್ರಗಳಿವೆ.

ಭಾವಾತೀತ ಧ್ಯಾನಮಾಡುವವರು ನೆಲಸಿರುವ ಊರಿನಲ್ಲಿ ಧ್ಯಾನದಿಂದಾಗಿ ಇತರರ ಮನಸ್ಸಿನ ಮೇಲೆ ಧ್ಯಾನದ ಮಹತ್ತರವಾದ ಶಾಂತಿ—ಪ್ರೇಮಗಳ ಪ್ರಭಾವ ಬೀರುವಂತಾಗುತ್ತದೆ. ಜಗತ್ತಿನಲ್ಲೆಲ್ಲಾ ಭಾವಾತೀತ ಧ್ಯಾನಮಾಡುವವರ ಸಂಖ್ಯೆ ಹೆಚ್ಚಾದಂತೆ ಆದರಿಂದ ವಿಶ್ವದಲ್ಲೆಲ್ಲಾ ಶಾಂತಿಯ ಅಲೆಗಳು ತುಂಬಿ ಜಗತ್ತಿನಲ್ಲಿ ಶಾಂತಿಸೌಹಾರ್ದಗಳು ನೆಲೆಗೊಳ್ಳಲು ಅನುಕೂಲವಾಗುತ್ತದೆ. ಭಾವಾತೀತಧ್ಯಾನದಿಂದ ವ್ಯಕ್ತಿಯ ದೇಹ-ಮನಗಳು ಪರಿಶುದ್ಧವಾಗಿ ಅಸತ್ಯ—ಅನ್ಯಾಯ, ಅವ್ಯವಸ್ಥೆಗೆ ಕಾರಣವಾಗುವಂತೆ ವರ್ತಿಸುವುದಕ್ಕೆ ಅವಕಾಶವಾಗುವುದಿಲ್ಲ ಎನ್ನುವುದು ಲೋಕಕ್ಕೆ ಮಹರ್ಷಿ ಮಹೇಶಯೋಗಿಗಳ ಆಶ್ವಾಸನೆ–ಸ್ವಾನುಭವಗಮ್ಯವಾದ ಶಾಂತಿ ಕ್ಷೇಮಗಳ ಸಂದೇಶ. ದೇಶವಿದೇಶಗಳಲ್ಲಿ ಈಗಾಗಲೇ ಲಕ್ಷಾಂತರ ಮಂದಿ ಅತೀಂದ್ರಿಯಧ್ಯಾನದೀಕ್ಷೆಹೊಂದಿ ಅದರ ಫಲವಾಗಿ ಶಾಂತಿಮಯ ಜೀವನ ನಡೆಸುತ್ತಿದ್ದಾರೆ ಎಂಬುದು ಈ ಪಂಥದವರ ಅಭಿಮಾನಪೂರ್ಣವಾದ ಹೇಳಿಕೆ, ಪ್ರಕಟಗೊಂಡಿರುವ ಸತ್ಯಾಂಶ.

ಅತೀಂದ್ರಿಯಧ್ಯಾನದ ಗುರಿ ಇತರ ಯೋಗದ ಹಾದಿಯಂತೆ ದಿವ್ಯತೆಯ ಸಾಕ್ಷಾತ್ಕಾರ. ಆದರೆ ಅದನ್ನು ಪಡೆಯುವ ಸಾಧನೆಯ ಹಾದಿಯಲ್ಲಿ–ತಂತ್ರದಲ್ಲಿ ಇದು ಇತರ ಹಾದಿಗಳಿಗಿಂತ ಸುಲಭ, ಶೀಘ್ರ ಪರಿಣಾಮಕಾರಿ, ಸರ್ವರಿಗೂ ಅನುಷ್ಠಾನಸಾಧ್ಯ ಎಂದು ಪ್ರಸಿದ್ಧಿಯಾಗಿದೆ.

## ೧೨. ಸಂತ ಭದ್ರಗಿರಿ ಶ್ರೀ ಕೇಶವದಾಸರ ದಾಸಪಂಥ ಮತ್ತು ದಾಸಾಶ್ರಮ

ನವಯುಗದಲ್ಲಿ ಹಿಂದೂಧರ್ಮದ ರಕ್ಷಣೆ ಮತ್ತು ಪ್ರಚಾರಕ್ಕಾಗಿ ಭದ್ರಗಿರಿಯ ಸಂತ ಸದ್ಗುರು ಶ್ರೀ ಕೇಶವದಾಸರು ವಿಶೇಷವಾಗಿ ದೇಶವಿದೇಶಗಳಲ್ಲಿ ಕಾರ್ಯಭಾರಗಳನ್ನು ನಿರ್ವಹಿಸಿ ವಿಖ್ಯಾತರಾಗಿರುತ್ತಾರೆ. ಧರ್ಮಪ್ರಚಾರಕ್ಕಾಗಿ ಹಲವಾರು ಬಾರಿ ವಿಶ್ವ ಪರ್ಯಟನ ಕೈಗೊಂಡಿರುವ ಇವರು ಕನಕ-ಪುರಂದರ-ತುಕಾರಾಮರಾದಿಯಾಗಿ ಪ್ರಾತಃ ಸ್ಮರಣೀಯರಾದ ಹರಿದಾಸ ಪರಂಪರೆಯವರು. ಸಂತ ಶ್ರೀ ಕೇಶವದಾಸರು ತಮ್ಮ ಉಜ್ವಲ ಹರಿಕಥಾಕಾರ್ಯಕ್ರಮ, ಧಾರ್ಮಿಕ ಉಪನ್ಯಾಸ, 'ದಾಸವಾಣಿ' ಎಂಬ ಪತ್ರಿಕೆ ಹಾಗು ಗ್ರಂಥಗಳ ಪ್ರಕಟಣೆ, ಸತ್ಸಂಗಯಾತ್ರೆ ಇವುಗಳ ಮೂಲಕ ಇಳೆಯಲ್ಲಿ ಅಸಂಖ್ಯಾತ ಮಂದಿಯ ಬಾಳಿಗೆ ಸನಾತನ ಧರ್ಮದ ನಿತ್ಯನೂತನ ಸಂದೇಶದ ಬೆಳಕನ್ನು ಬೀರುತ್ತಾ ಬಂದಿರುತ್ತಾರೆ.

೧೯೬೦ರಲ್ಲಿ ಬೆಂಗಳೂರು ಮಹಾನಗರದಲ್ಲಿ ಸಂತ ಶ್ರೀ ಕೇಶವದಾಸರು ಸನಾತನ ಧರ್ಮಪ್ರಚಾರ ಹಾಗೂ ಸಂರಕ್ಷಣೆಯ ಉದ್ದೇಶದಿಂದ ದಾಸಾಶ್ರಮ ಎಂಬ ಅಂತರ ರಾಷ್ಟ್ರೀಯ ಸಂಸ್ಥೆಯನ್ನು ಸ್ಥಾಪಿಸಿದರು. ಹರಿಕಥೆ, ಧಾರ್ಮಿಕ ಪ್ರವಚನಗಳು ಇವುಗಳ ಬಗ್ಗೆ ಪ್ರಥಮ ಬಾರಿಗೆ ಸುವ್ಯವಸ್ಥಿತವಾದ ರೀತಿಯಲ್ಲಿ ಶಿಕ್ಷಣ ನೀಡಿ ಧರ್ಮಪ್ರಚಾರಕ್ಕೆ ಸಮರ್ಥರನ್ನು ಸಿದ್ಧಗೊಳಿಸಲು ಅಗತ್ಯದ ಶಿಕ್ಷಣ ತರಬೇತಿ ಸಂಸ್ಥೆಗಳನ್ನು ಸಂಸ್ಥಾಪಿಸಿ ದರು.

ದಾಸಪಂಥ—ಭಕ್ತಿಮಾರ್ಗದ ಪೋಷಕ ಆಚಾರ್ಯರಾಗಿ ಶ್ರೀ ಭದ್ರಗಿರಿ ಕೇಶವ ದಾಸರು ದಾಸವರೇಣ್ಯ ಶ್ರೀ ಪುರಂದರದಾಸರ ಮಂದಿರ, ಭಗವಾನ್ ಶ್ರೀಕೃಷ್ಣ ಮತ್ತು ರುಕ್ಮಿಣೀದೇವಿ ಮಂದಿರಗಳನ್ನು ದೇಶ—ವಿದೇಶಗಳಲ್ಲಿ ಸ್ಥಾಪಿಸಿ ಜನಕೋಟಿಯಲ್ಲಿ ಧರ್ಮ ಜಾಗೃತಿಯನ್ನು ಉಂಟುಮಾಡಿದರು. ಬೆಂಗಳೂರಿನಲ್ಲಿ ಕೇಂದ್ರ ಕಛೇರಿಯನ್ನು ಹೊಂದಿ ರುವ ದಾಸಾಶ್ರಮದ ಶಾಖೆಗಳು ಇಂದು ದೇಶ—ವಿದೇಶಗಳಲ್ಲಿ ವ್ಯಾಪಕವಾಗಿ ಹಬ್ಬ ತೊಡಗಿವೆ.

೧೯೩೪ರಲ್ಲಿ ಉಡುಪಿಯ ಬಳಿ ಭದ್ರಗಿರಿ ಎಂಬಲ್ಲಿ ಜನಿಸಿದ ಸಂತ ಶ್ರೀ ಕೇಶವದಾಸರು ಇಂದು ಜಾಗತಿಕ ಪ್ರಸಿದ್ಧಿಯ ಪ್ರಭಾವಶಾಲಿ ಸದ್ಗುರುಗಳಾಗಿ ಸನಾತನಧರ್ಮದ ಸತ್ವ ಶಾಲಿ ಸಂದೇಶವಾಹಕರಾಗಿ ಬೆಳಗುತ್ತಿದ್ದಾರೆ.

# ಸಿಖ್ ಧರ್ಮ

## ೧. ಸಿಖ್ ಧರ್ಮ

ಸಿಖ್ ಧರ್ಮವನ್ನು ಪರಿಪಾಲಿಸುವವರು ಸಿಖ್ಖರು. ಸಿಖ್ ಎಂದರೆ ಪಂಜಾಬಿ ಭಾಷೆಯಲ್ಲಿ ಶಿಷ್ಯ ಎಂದು ತಾತ್ಪರ್ಯ. ಸಂಸ್ಕೃತದ ಶಿಷ್ಯ ಎಂಬುದು ಪಂಜಾಬಿನ ಭಾಷೆಯಲ್ಲಿ ಸಿಖ್ ಎಂದಾಗಿದೆ. ಗುರುವಿನಿಂದ ಶಿಷ್ಯನಿಗೆ ಬೋಧಿಸಲ್ಪಟ್ಟ ಧರ್ಮ ಸಿಖ್ ಧರ್ಮ. ಸಿಖ್ ಧರ್ಮಕ್ಕೆ ದಶಗುರು ಪರಂಪರೆ, ಮಹೋನ್ನತ ಪೂಜನೀಯ ಪಾವನ ಗ್ರಂಥ 'ಗ್ರಂಥಸಾಹೇಬ'. ಇವುಗಳು ಆಧಾರವಾಗಿವೆ. ಇವನ್ನು ನಂಬಿ ಬಾಳಿನಲ್ಲಿ ಅಳವಡಿಸಿ ಆಚರಿಸಿಕೊಂಡು ಬರುವವನೇ ಸಿಖ್ ಎಂದು ಕರೆಯಲ್ಪಡುತ್ತಾನೆ.

ಸಿಖ್ ಮತದ ಸಂಸ್ಥಾಪಕರು ಗುರು ನಾನಕರು. ಸಿಖ್ ಮತವು ಹಿಂದೂ ಹಾಗೂ ಇಸ್ಲಾಂ ಧರ್ಮದ ತತ್ತ್ವಗಳಿಂದ ಪರಿಪೋಷಿತವಾಗಿ ಮೂಡಿಬಂದಿರುವ ನೂತನ ಮತವಾಗಿದೆ. ಹಾಗೆಯೇ ಹಿಂದೂ ಮತ್ತು ಮುಸ್ಲಿಂ ಪಂಥದ ಗುರುಗಳ ಬೋಧನೆಗಳನ್ನು ಒಳಗೊಂಡಿರುವ ಸಿಖ್ ಪಂಥ ತನ್ನದೇ ಆದ ಧಾರ್ಮಿಕ ಗ್ರಂಥ, ವಿಶಿಷ್ಟ ಪರಂಪರೆಗಳಿಂದ ಕೂಡಿರುತ್ತದೆ. ಆಚಾರವಿಚಾರಗಳಲ್ಲಿ ಸಿಖ್ ಧರ್ಮವು ತಾತ್ತ್ವಿಕವಾಗಿ ಬಹುಮಟ್ಟಿಗೆ ಹಿಂದೂಧರ್ಮವನ್ನೇ ಹೋಲುತ್ತದೆ. ಹಾಗಾಗಿ ಸಿಖ್ ಧರ್ಮವನ್ನು ಹಿಂದೂ ಧರ್ಮದ ಒಂದು ಶಾಖಾಪಂಥ ಎಂದು ಹೇಳಬಹುದು.

ಸಿಖ್ ಧರ್ಮದ ಸಂಸ್ಥಾಪಕರಾದ ಗುರು ನಾನಕರು ೧೪೬೯ರಲ್ಲಿ ಈಗಿನ ಪಶ್ಚಿಮ ಪಾಕಿಸ್ತಾನದ ಪಂಜಾಬಿನ ಶೇಖ್‌ಪುರ ಜಿಲ್ಲೆಯ ತಳವಾಂಡಿ ಗ್ರಾಮದಲ್ಲಿ ಕಾರ್ತಿಕ ಪೂರ್ಣಿಮೆಯ ದಿನ ಜನ್ಮತಳೆದರು. ಗುರು ನಾನಕರ ತಂದೆಯ ಹೆಸರು ಕಾಲೂಚಂದ್. ತಾಯಿಯ ಹೆಸರು ತೃಪ್ತಾ. ಮಗುವಿನ ಜನನ ಅಜ್ಜನ ಮನೆಯಲ್ಲಿ ಆಯಿತು. ತಾಯಿಯ ತಂದೆಮನೆಗೆ ಪಂಜಾಬಿ ಭಾಷೆಯಲ್ಲಿ 'ನಾನಕ' ಎಂದು ಹೇಳುತ್ತಾರೆ. ತಾಯಿಯ ತೌರಿನಲ್ಲಿ ಮಗುವಿನ ಜನ್ಮವಾದ್ದರಿಂದ ಆ ನೆನಪಿಗಾಗಿ ನಾನಕಚಂದ ಎಂದು ಕಾಲೂಚಂದ್ ದಂಪತಿಗಳು ಪುತ್ರನಿಗೆ ನಾಮಕರಣ ಮಾಡಿದರು.

ಗುರು ನಾನಕರು ಮೂಲತಃ ಕ್ಷತ್ರಿಯರಾಗಿದ್ದರು. ಬಾಲ್ಯದಲ್ಲಿ ಬಾಳುತ್ತಿದ್ದಾಗಲೇ ಲೌಕಿಕ ವಿಧ್ಯೆಯಿಂತ ಮಾನವನ ನಿಜವಾದ ಸುಖ ಸಿದ್ಧಿ ಆಗುವುದಿಲ್ಲ ಎಂದು ಕಂಡು

ಕೊಂಡರು. ಭಗವಂತನ ಮಹಿಮೆಗೆ ಮನಸೋತು ಪರಮಾತ್ಮಸಾಕ್ಷಾತ್ಕಾರಕ್ಕೆ ನಾನಕರು ಹಂಬಲಿಸಿದರು. ಲೌಕಿಕ ವ್ಯವಹಾರದಲ್ಲಿ ನಿರುತ್ಸಾಹಿಗಳಾದರು. ಅವರ ಮನೆಯವರು ನಾನಕರಿಗೆ ಮದುವೆ ಮಾಡಿಸಿದರು. ಗೃಹಸ್ಥರಾಗಿ ನಾನಕರು ಕೆಲಕಾಲ ಬಾಳಿದರು. ಅವರಿಗೆ ಇಬ್ಬರು ಮಂದಿ ಮಕ್ಕಳು ಜನಿಸಿದರು. ಗೃಹಸ್ಥಜೀವನಸೌಖ್ಯ ನಾನಕರಿಗೆ ರುಚಿಸಲಿಲ್ಲ, ವೈರಾಗ್ಯಪ್ರವೃತ್ತಿ ಅವರಲ್ಲಿ ತೀವ್ರವಾಗಿ ಬೆಳೆಯಿತು. ನಾನಕರು ಗೃಹವನ್ನು ತ್ಯಜಿಸಿ ಪರಮಾತ್ಮಪಥದಲ್ಲಿ ಪರಿವ್ರಾಜಕರಾಗಿ ಹೊರಟರು.

ಪರಿವ್ರಾಜಕರಾಗಿ ಹೊರಟಂತೆ ಹಿಂದೂ-ಮುಸ್ಲಿಂರ ಒಳಗೆ ದೇಶದಲ್ಲಿ ಮೂಡಿಬಂದಿದ್ದ ದ್ವೇಷ, ಅಸೂಯೆ, ಘರ್ಷಣೆಗಳ ಬಗ್ಗೆ ನಾನಕರು ಚಿಂತಾಕ್ರಾಂತರಾದರು. ಮತೀಯವಾದ ಸೌಹಾರ್ದವನ್ನು ಬೆಳೆಸಲು ಹಾದಿ ಹುಡುಕಲು ಮುಂದಾದರು. ಹಿಂದೂ, ಮುಸ್ಲಿಂ ಪಂಥದವರಿಗೆ ಮಾನ್ಯರಾಗಿದ್ದ ರಾಮಾನಂದ, ನಾಮದೇವ್, ಕಬೀರ್, ಫರೀದ್ ಮೊದಲಾದವರ ಜೀವನಸಂದೇಶಗಳನ್ನು ನಾನಕರು ಅಧ್ಯಯನ ಮಾಡಿದರು. ಹಿಂದೂ-ಮುಸ್ಲಿಂ ಪಂಥಗಳಲ್ಲಿ ತಾತ್ತ್ವಿಕವಾಗಿ ಹಲವು ವಿಚಾರಗಳಲ್ಲಿ ಹೊಂದಾಣಿಕೆ ಇದೆ, ಅದನ್ನು ಅರಿತು ಬಾಳಿದರೆ ಸಮಾಜದಲ್ಲಿ ಶಾಂತಿ ಸಾಧ್ಯ ಎಂಬುದು ನಾನಕರ ನಿಶ್ಚಯದ ನಿಲುವು ಆಯಿತು. ಅದರಂತೆ ನೂತನ ಸಮಾಜದ ನಿರ್ಮಾಣಕ್ಕಾಗಿ ವಿನೂತನ ಮತೀಯ ತತ್ತ್ವವಿಚಾರಗಳ ರೂಪಿಸುವಿಕೆಗಾಗಿ ನಾನಕರು ಮುಂದಾದರು. ಭಾರತದ ಆದ್ಯಂತ ಸಂಚರಿಸಿದರು. ಮಾತ್ರವಲ್ಲ, ವಿದೇಶದಲ್ಲಿ ಸಿಂಹಳದ್ವೀಪ, ಅರೆಬಿಯಾದ ಮಕ್ಕ-ಮದೀನ ಕ್ಷೇತ್ರಗಳಿಗೂ ಯಾತ್ರೆ ಕೈಗೊಂಡರು. ಹಿಂದೂ ಪುಣ್ಯಸ್ಥಳಗಳು-ಮುಸ್ಲಿಂ ಪವಿತ್ರ ಕ್ಷೇತ್ರಗಳನ್ನು ಸಂದರ್ಶಿಸಿ ತಾವು ತೆರಳಿದಲ್ಲೆಲ್ಲಾ ಭಗವಂತನ ದಿವ್ಯ ಆರಾಧನೆಯನ್ನು ಮಾಡಿದರು. ವಿವಿಧ ರೂಪದಲ್ಲಿ ಕಾಣುವುದು ಹೌದಾದರೂ ಭಗವಂತ ಒಬ್ಬನೇ ಎಂದು ಅನುಭವದ ಆಧಾರದಿಂದ ಘೋಷಿಸಿದರು. ಜಾತಿ-ಮತ-ಪಂಥಗಳ ಭೇದ ತೀರಾ ಕೃತಕ, ಸಮಾಜ ಘಾತಕ ಎಂದು ಹೇಳಿದರು. ಮಾನವಪ್ರೇಮ-ಏಕದೇವನ ಆರಾಧನೆ ಇವನ್ನು ಹೆಚ್ಚು ಪ್ರಭಾವಶಾಲಿಯಾಗಿ ಜನಮನಕ್ಕೆ ಬೋಧಿಸಿದರು. ಹಳೆಯ ಅರ್ಥಹೀನ ಸಂಪ್ರದಾಯಗಳು, ಮೂಢ ಆಚರಣೆಗಳನ್ನು ತಿರಸ್ಕರಿಸಲು ಕರೆ ನೀಡಿದರು. ಅನೇಕ ಮಂದಿ ಶಿಷ್ಯರು, ಹಿತೈಷಿಗಳು-ಅಭಿಮಾನಿಗಳು ಈ ನೂತನ ಮತಪ್ರವಾದಿಯ ಪ್ರಭಾವಕ್ಕೆ ಒಳಗಾದರು. ಅವರಿಗೆಲ್ಲ ನಾನಕರು ಗುರುನಾನಕರಾದರು. ಹೀಗೆ ಗುರುವಿನಿಂದ ಶಿಷ್ಯಭಾವದಿಂದ ಕೂಡಿ ಕಲಿತ ಉಪದೇಶಗಳೆಲ್ಲ ಒಟ್ಟಾಗಿ ಸಿಖ್ ಮತ ಎಂದಾಯಿತು.

ಸಿಖ್ ಮತದ ಆದಿಗುರು ನಾನಕರು ಸೇರಿದಂತೆ ಹತ್ತು ಮಂದಿ ಗುರುಗಳ ಉನ್ನತ ಪರಂಪರೆ ಈ ಮತಕ್ಕಿದೆ. ಸಿಖ್ ಮತದ ಪರಂಪರೆಯಲ್ಲಿ ಹತ್ತು ಮಂದಿ ಮಾತ್ರ ಗುರುಗಳೆಂದು ಗೌರವಿಸಲ್ಪಡುತ್ತಿದ್ದು ಅದು ಈ ಮತದ ವೈಶಿಷ್ಟ್ಯಗಳಲ್ಲಿ ಒಂದಾಗಿದೆ. ಸಿಖ್ ಮತದ ದಶಗುರುಗಳಲ್ಲಿ ಆದಿಗುರು ನಾನಕರು ; ಅಂತ್ಯದ ಗುರು ಗುರುಗೋವಿಂದಸಿಂಗ್, ಗುರು ಅಂಗದ, ಗುರು ಅಮರದಾಸ, ಗುರು ರಾಯದಾಸ, ಗುರು ಅರ್ಜುನದೇವ, ಗುರು ಹರಗೋವಿಂದ, ಗುರು ಹರರಾಮ, ಗುರು ಹರಕೃಷ್ಣ, ಗುರು ತೇಗಬಹದ್ದೂರ (ತೇಜಬಹದ್ದೂರ) ಎಂಬ ಎಂಟು ಮಂದಿ ಗುರುಗಳು ಈ ದಶಗುರುಪರಂಪರೆಗೆ ಸೇರಿದವರು.

ಸಿಖ್ಖರ ಗುರುಪರಂಪರೆಯಲ್ಲಿ ಹತ್ತನೆಯವರಾಗಿ ಬಂದ ಗುರು ಗೋವಿಂದ ಸಿಂಹರು, ಮತ್ತಿನ್ನು ಗುರುಪರಂಪರೆ ಬೇಕಿಲ್ಲವೆಂದೂ ಪರಂಪರಾಗತ ಗುರುಗಳ ಬೋಧನೆಗಳೇ ಮುಂದಿನ್ನು 'ಗುರು' ಎಂದೂ ಘೋಷಿಸಿದರು. ಅದರಂತೆ ಹಿಂದಿನ ಎಲ್ಲ ಗುರುಗಳ ಬೋಧನೆಗಳನ್ನು ಕ್ರೋಢೀಕರಿಸಿ, ಗುರು ಗೋವಿಂದ ಸಿಂಹರು ಗ್ರಂಥವನ್ನು ರೂಪಿಸಿ, ಅದನ್ನು ಆದಿಗ್ರಂಥ ಎಂದು ಕರೆದರು. ಅದು 'ಗ್ರಂಥಸಾಹೇಬ್' ಎಂದು ಪಾವನ ಪ್ರಸಿದ್ಧಿಯನ್ನು ಹೊಂದಿತು. ಅದೇ ಇಂದು ಸಿಖ್‌ರ ಧರ್ಮದ ಬಗ್ಗೆ ಆಧಾರಗ್ರಂಥ. ಅತ್ಯಂತ ಪವಿತ್ರವಾದ, ಪರಮಾತ್ಮಪ್ರತೀಕವಾದ ಪುಣ್ಯವೇದಗ್ರಂಥ. ಸಿಖ್ ಧರ್ಮಾನು ಯಾಯಿಗಳಿಗೆ ಅವರ ಗುರುಗಳ-ಉಪದೇಶಕರ ನುಡಿಗಳನ್ನು ಒಳಗೊಂಡ ಬೇರೆ ಕೆಲವು ಗ್ರಂಥಗಳು ಮಾನ್ಯವೆಂದಾಗಿವೆ. ಅವುಗಳಲ್ಲಿ ಗುರು ಗೋವಿಂದ ಸಿಂಹರ ಉಪದೇಶಗಳನ್ನು ಒಳಗೊಂಡ ದಶಮ್ ಗ್ರಂಥ ಎನ್ನುವುದು ಗಣನೀಯವಾದುದು.

ಕಾಲಕಾಲದಲ್ಲಿ ಸಿಖ್ ಗುರುಗಳು ಹಾಗೂ ಜನಾಂಗದವರು ಮುಸ್ಲಿಂ ಅರಸರ ವಿಧ ವಿಧವಾದ ಕ್ರೂರಕೌರ್ಯ, ದೌರ್ಜನ್ಯಗಳಿಗೆ ಒಳಗಾಗುವಂತಾಯಿತು. ಸಿಖ್ ಧರ್ಮದ ಪ್ರಖ್ಯಾತ ಗುರು ತೇಗ್‌ಬಹದ್ದೂರನನ್ನು ಮೊಗಲರ ಔರಂಗಜೇಬನು ಕೊಲ್ಲಿಸಿದನು. ಗುರು ತೇಗ್‌ಬಹದ್ದೂರನ ಮಗ ಗುರು ಗೋವಿಂದ ಸಿಂಹನು ತನ್ನ ತಂದೆಗಾದ ಅನ್ಯಾಯದ ವಿರುದ್ಧ ಸೇಡು ತೀರಿಸಲು ಕಂಕಣಬದ್ಧನಾದನು. ಹಾಗಾಗಿ ಸಿಖ್ ಜನಾಂಗವನ್ನು ಸೈನಿಕಶಿಕ್ಷಣಕ್ಕೆ ಒಳಪಡಿಸಿ ಅವರನ್ನು ವೀರಜನಾಂಗವನ್ನಾಗಿ ಮಾರ್ಪಡಿಸಿದನು. ಗುರು ಗೋವಿಂದ ಸಿಂಗನು ಸಿಖ್‌ರಲ್ಲಿ ಖಲ್ಸಾ ಎಂದರೆ ಪವಿತ್ರರು ಎಂಬ ನೂತನ ಗುಂಪನ್ನು ಸ್ಥಾಪಿಸಿದನು. ತನ್ನ ಅನುಯಾಯಿಗಳಲ್ಲಿ ಮೊದಲು ಐದು ಮಂದಿಯನ್ನು ೧೬೯೯ರ ವೈಶಾಖ ಪೂರ್ಣಿಮೆಯ ದಿವಸ ಈಗಿನ ಭಕ್ರಾ-ನಂಗಲ್ ಅಣೆಕಟ್ಟಿನ ಸಮೀಪದಲ್ಲಿರುವ ಆನಂದಪುರ ಎಂಬಲ್ಲಿ ಸೇರಿಸಿ ಅವರಿಗೆ ಪವಿತ್ರ ದೀಕ್ಷಾಸ್ನಾನ ಮಾಡಿಸಿದನು. ಕಬ್ಬಿಣದ ಒಂದು ಪಾತ್ರೆಯಲ್ಲಿ ಸಿಹಿನೀರನ್ನು ತುಂಬಿ ಎರಡು ಕಠಾರಿಯ ಅಲುಗಿನಿಂದ ಅದನ್ನು ಅಲುಗಿಸಿದನು. ಅದು 'ಅಮೃತ' ಎಂದಾಯಿತು. ಅದು ಪ್ರಸಾದ ಆಯಿತು. ಅದನ್ನು ಕುಡಿದನಂತರ ಕುಡಿದವರೆಲ್ಲಾ 'ಖಲ್ಸಾ' (ಶ್ರದ್ಧೆಯ ದೀಕ್ಷೆ) ಬಂಧುಗಳೆಂದಾದರು. ಈ ಕ್ರಮ ಸಿಖ್‌ರಲ್ಲಿ ಇಂದಿಗೂ ದೀಕ್ಷಾಕ್ರಮವಾಗಿರುತ್ತದೆ. ಖಲ್ಸಾ ಪಂಥಕ್ಕೆ ಸೇರಿದವರು ಐದು 'ಕ'ಗಳನ್ನು ಅರಿತು ಆಚರಿಸುವ ಪ್ರತಿಜ್ಞೆ ಮಾಡಬೇಕೆಂದು ಗುರು ಗೋವಿಂದ ಸಿಂಗರು ಅಂದರು. ಅವಾವುವೆಂದರೆ ತಲೆಕೂದಲು, ಗಡ್ಡಗಳನ್ನು ಕತ್ತರಿಸದೆ ಇರುವುದು—ಕೇಶ, ಯುದ್ಧಸಿದ್ಧತೆಯ ಚಡ್ಡಿಗಳನ್ನು ಸದಾ ಧರಿಸಿಕೊಂಡು ಇರುವುದು—ಕಾಚ, ತಲೆ ಯಲ್ಲಿಯೇ ಸದಾ ಬಾಚಣಿಗೆಯೊಂದನ್ನು ಸಿಕ್ಕಿಸಿರುವುದು—ಕಂಗಾ, ಕರದಲ್ಲಿ ಸದಾ ಕಬ್ಬಿಣದ ಬಳೆಯೊಂದನ್ನು ಧರಿಸಿರುವುದು—ಕರ, ಜೊತೆಯಲ್ಲಿ ಯಾವಾಗಲೂ ಒಂದು ಕತ್ತಿಯನ್ನು ಹೊಂದಿರುವುದು-ಕಿರ್ಪಾಣಾ. ಇದೇ ಪಂಚ 'ಕ' ಗಳು. ಇವುಗಳು ಖಲ್ಸಾ ಪಂಥದ ಆಧಾರಸ್ತಂಭಗಳು. ಹೀಗೆ ಗುರು ಗೋವಿಂದ ಸಿಂಹರ ಕಾಲದಿಂದ ಸಿಖ್ಖರೆಲ್ಲಾ ಖಲ್ಸಾ ವ್ರತಧಾರಿಗಳಾದರು. ಅವರು ಮುಸ್ಲಿಮರ ಹಾಗು ತಮ್ಮ ಧರ್ಮಕ್ಕೆ ವಿರೋಧ ಬರುವವರೆಲ್ಲರ ವಿರುದ್ಧ, ಅನ್ಯಾಯದ ವಿರುದ್ಧ ಹೋರಾಡುವ ಧೀರಸಿಂಹಗಳು ಎಂದು

ಘೋಷಿಸಿ ಗುರು ಗೋವಿಂದ ಸಿಂಹರಿಂದ ಆಶೀರ್ವದಿಸಲ್ಪಟ್ಟರು. ಹಾಗಾಗಿ ಸಿಖ್ಖರ ಹೆಸರಿನ ಮುಂದೆ ಸಿಂಹ (ಸಿಂಗ್) ಎಂಬ ಅಭಿಧಾನ ಕೂಡಿಬರುವಂತಾಯಿತು. ಗುರು ಗೋವಿಂದ ಸಿಂಹರ ಕಾಲದಲ್ಲಿ ಮುಸ್ಲಿಮ್ ಅರಸರ ವಿರುದ್ಧ ಅನೇಕ ಬಾರಿ ಹೋರಾಟ ನಡೆಸಿದ ಸಿಖ್ಖರು ಮುಂದೆ ವೀರಜನಾಂಗವಾಗಿ ಬೆಳೆದು ಬೆಳಗಿ ಭಾರತದ ಇತಿಹಾಸದಲ್ಲಿ ಪ್ರಸಿದ್ಧರಾಗುವಂತಾಯಿತು. ಸಿಖ್ಖರು ಸೈನ್ಯ ಹಾಗೂ ಕ್ರೀಡಾರಂಗಗಳಲ್ಲಿ ಅತ್ಯಂತ ಪ್ರಭಾವಶಾಲಿಯಾದ ಪಾತ್ರವನ್ನು ಸದಾ ವಹಿಸುವಂತಾಯಿತು. ತ್ಯಾಗ ಮತ್ತು ಸೇವೆ ಅವರ ಬಾಳಿನ ಆದರ್ಶವೇ ದಾಯಿತು.

ಸಿಖ್ ಧರ್ಮದಲ್ಲಿ ಗುರು, ದೇವರು, ಪೂಜೆ, ಪ್ರಾರ್ಥನೆ, ದೇವಸ್ಥಾನ, ಹಬ್ಬ, ಉತ್ಸವ ಎಲ್ಲದಕ್ಕೂ ಸ್ಥಾನವಿದೆ. ಆದರೆ ಅವೆಲ್ಲವೂ ಸಿಖ್ ಪಂಥದ ರೀತಿಯಲ್ಲಿ ನಡೆಯುತ್ತಿದ್ದು ಅದರಲ್ಲಿ ಹಿಂದೂಧರ್ಮದ ತತ್ತ್ವಸಂಪ್ರದಾಯಗಳ ಪ್ರಭಾವ ಬಹುಪಾಲು ನೆಲೆಗೊಂಡಿದೆ. ಹಾಗಾಗಿ ಸಿಖ್ಖರು ಹಿಂದುಗಳೆಂದು ಅಂದಿನಿಂದ ಇಂದಿನ ತನಕವೂ ತಾತ್ತ್ವಿಕವಾಗಿ ಪರಿಗಣಿಸಿ ಗೌರವಿಸಲ್ಪಡುವಂತಾಗಿರುತ್ತದೆ. ಹಿಂದೂಧರ್ಮ ಎಂಬ ಮಹಾ ಅಶ್ವತ್ಥವೃಕ್ಷದ ಒಂದು ನೂತನ ಶಾಖೆ ಸಿಖ್ ಧರ್ಮ ಎನ್ನುವ ಅಭಿಮಾನ ಪ್ರಜ್ಞಾವಂತ ಹಿಂದೂಗಳೆಲ್ಲರಲ್ಲೂ ಇದೆ.

### ಸಿಖ್ಖರ ಧರ್ಮತತ್ತ್ವ ಮತ್ತು ಗ್ರಂಥಗಳು

ಈಗಾಗಲೇ ಪ್ರಸ್ತಾಪಿಸಿರುವಂತೆ ಸಿಖ್ಖರ ಧರ್ಮಕ್ಕೆ ಮೂಲ ಆಧಾರಗ್ರಂಥವು ಆದಿಗ್ರಂಥ-ಗ್ರಂಥಸಾಹೇಬ್ ಆಗಿರುತ್ತದೆ. ಇದನ್ನು ಗುರುಗ್ರಂಥ ಎಂದೂ ಕರೆಯುತ್ತಾರೆ. ಇದು ಗುರುವಿನ ಸಮಾನ. ಇದರಲ್ಲಿ ಅಡಗಿರುವ ಪವಿತ್ರ ವಾಣಿ-ಸಂದೇಶಗಳು ಸಾಕ್ಷಾತ್ ಗುರುವಿನ ಸಂದೇಶವೇ ಸರಿ. ಈ ಗ್ರಂಥವನ್ನು ಸಿಖ್‌ರ ಐದನೇ ಗುರು ಗೋವಿಂದ ಸಿಂಗರು ಸಂಪಾದಿಸಿ ಗ್ರಂಥರೂಪವನ್ನಿತ್ತು ಗುರುಸಮಾನವೆಂದು ಘೋಷಿಸಿದರು. ಗ್ರಂಥಸಾಹೇಬದಲ್ಲಿ ಗುರುನಾನಕರಾದಿಯಾಗಿ ಪ್ರಥಮ ಐದು ಮಂದಿ ಗುರುಗಳ ವಚನರಚನೆಗಳು ಇರುವುದಲ್ಲದೆ ಹದಿನಾರು ಸಂತ ಮಹಾತ್ಮರ ಕೃತಿಗಳೂ ಸೇರಿವೆ. ಮುಖ್ಯವಾಗಿ ಜಯದೇವ, ನಾಮದೇವ, ತ್ರಿಲೋಚನ, ಪ್ರೇಮಾನಂದ, ರಮಾನಂದ, ಕಬೀರ, ಸೂರದಾಸ, ಮೀರಾಬಾಯಿ ಮೊದಲಾದವರ ವಚನ-ಸಂದೇಶಗಳು ಗ್ರಂಥ ಸಾಹೇಬದಲ್ಲಿ ಸೇರಿರುವುದು ಗಮನಾರ್ಹವಾದ ಅಂಶವಾಗಿದೆ. ಈ ಗ್ರಂಥದಲ್ಲಿ ಪ್ರಮುಖವಾಗಿ ಎರಡು ಭಾಗಗಳಿವೆ. ಮೊದಲ ಭಾಗದಲ್ಲಿ ಗುರುನಾನಕರ ರಚನೆ-ಸಂದೇಶಗಳಿವೆ. ಗುರುನಾನಕರ ರಚನೆಗಳಲ್ಲಿ 'ಜಪ್‌ಜಿ' ಎಂಬುದು ಬಹಳ ಮುಖ್ಯವಾದುದು. 'ಜಪ್‌ಜಿ' ಸಂಕಲನದಲ್ಲಿ ಗುರುನಾನಕರು ಬೋಧಿಸಿದ ಆಧ್ಯಾತ್ಮಿಕ ಹಾಗೂ ನೈತಿಕ ತತ್ತ್ವಗಳಿವೆ. ಸಾಧಕನು ಮುಕ್ತಿಯನ್ನು ಹೊಂದಲು ಐದು ಹಂತಗಳನ್ನು ಹಾದುಹೋಗಬೇಕೆಂದು ನಾನಕರು ಹೇಳಿ ಅದರ ವಿವರಣೆ 'ಜಪ್‌ಜಿ'ಯಲ್ಲಿ ನೀಡಿರುತ್ತಾರೆ. ಧರ್ಮಖಂಡ, ಜ್ಞಾನಖಂಡ, ಸ್ಮರಣಖಂಡ, ಕರಮ್‌ಖಂಡ, ಸಚ್‌ಖಂಡ ಎಂಬುವುಗಳೇ ಈ ಐದು ಸಾಧನಾ ಖಂಡಗಳು. ಮೊದಲನೆಯ ಖಂಡದಲ್ಲಿ ಮಾನವ ಕರ್ತವ್ಯ-ಸತ್ಕರ್ಮಗಳ ಆಚರಣೆಯು

ಅಗತ್ಯಗಳನ್ನು ವಿವರಿಸಲಾಗಿದೆ. ಎರಡನೆಯ ಖಂಡದಲ್ಲಿ ಮಾನವನು ಸುಜ್ಞಾನಿ ಆಗ ಬೇಕು ಎಂದು ಬೋಧಿಸಿದ್ದರೆ ಮೂರನೆಯ ಖಂಡದಲ್ಲಿ ಮಾನವನು ಅನುಸರಿಸಬೇಕಾದ ಜೀವನಮಾರ್ಗದ ಬೋಧನೆ ಇದೆ. ಸತ್ಕರ್ಮದಿಂದ ಆತ್ಮಶಕ್ತಿಯ ತೇಜಸ್ಸು ಪ್ರಾಪ್ತಿ ಆಗುತ್ತದೆ ಎಂಬುದು ನಾಲ್ಕನೆಯ ಖಂಡದಲ್ಲಿ ವರ್ಣಿಸಲ್ಪಟ್ಟಿದೆ. ಕೊನೆಯ ಖಂಡದಲ್ಲಿ ದೈವೀಸಾಕ್ಷಾತ್ಕಾರದ ಮಹಿಮೆ, ನಾಮಸಂಕೀರ್ತನೆ-ಜಪಗಳ ಹಿರಿಮೆ, ದಿವ್ಯಜೀವನದ ಮೇಲ್ಮೆ ಇವನ್ನೆಲ್ಲ ಬಣ್ಣಿಸಲಾಗಿದೆ. ಗ್ರಂಥಸಾಹೇಬದ ಎರಡನೇ ಭಾಗದಲ್ಲಿ ಸಿಖ್ ಗುರುಗಳು ಹಾಗೂ ಇತರ ಸಂತಮಹಾತ್ಮರ ವಚನಸಂದೇಶಗಳಿವೆ. ಸಿಖ್ ಧರ್ಮದ ತತ್ತ್ವಸಾರವನ್ನು ಒಳಗೊಂಡ ಈ ಗ್ರಂಥದಲ್ಲಿ ೧೩೬೮ ಮೂಲಮಂತ್ರಗಳಿವೆ. ಸುಮಾರು ೬೦೦೦ಕ್ಕೂ ಹೆಚ್ಚು ದಿವ್ಯಕೀರ್ತನಾರಚನೆಗಳಿವೆ.

ಗ್ರಂಥಸಾಹೇಬವನ್ನು ಸಿಖ್ಖರ ದೇವಮಂದಿರಗಳಲ್ಲಿ ತುಂಬ ಸುಂದರವಾದ ಪೀಠದಲ್ಲಿ ಭವ್ಯವಾಗಿ ಅಲಂಕರಿಸಿಟ್ಟು ಪೂಜಿಸುತ್ತಾರೆ. ಮಂದಿರಗಳಲ್ಲಿ ಬೇರೆ ದೇವಮೂರ್ತಿಗಳಿರು ವುದಿಲ್ಲ. 'ಗ್ರಂಥಸಾಹೇಬ'ವೇ ಸರ್ವಸ್ವವಾಗಿರುತ್ತದೆ. ಹಾಗೆಂದು ಸಿಖ್ಖರು ಗ್ರಂಥಸಾಹೇಬ ವನ್ನು ಪೂರ್ತಿಯಾಗಿ ದೇವಮೂರ್ತಿ ಎಂದು ಪರಿಗಣಿಸುವುದಿಲ್ಲ. ಸಮಸ್ತ ಜಗದ ಆಗು ಹೋಗುಗಳಿಗೆ ಕಾರಣನಾದ ಭಗವಂತನ ಧ್ಯಾನಚಿಂತನೆಗಳಿಗೆ ಮೂಲಪ್ರೇರಕಶಕ್ತಿಯ ಸ್ಥಾನ, ಪರಮಪೂಜ್ಯ ಗುರುಗಳ ಅಮರವಾಣಿಯನ್ನು ಒಳಗೊಂಡ ಪಾವನಶಕ್ತಿಯ ಗ್ರಂಥ ಎಂಬ ಭಾವನೆಯಿಂದ ಅದನ್ನು ಬಹಳ ಭಕ್ತಿಗೌರವಗಳಿಂದ ಕಾಣುತ್ತಾರೆ. ಸಿಖ್ಖರ ದೇವಮಂದಿರಗಳಿಗೆ 'ಗುರುದ್ವಾರ' ಎಂದು ಹೇಳುತ್ತಾರೆ. ಗ್ರಂಥಸಾಹೇಬವನ್ನು ಮನೆ ಮನೆಗಳಲ್ಲಿ ಸಿಖ್ಖರು ಇಟ್ಟು ಪೂಜಿಸುತ್ತಾರೆ. ಗ್ರಂಥಸಾಹೇಬದ ವಿಧಿಯುಕ್ತವಾದ ಪಠಣ ಪಾರಾಯಣಗಳು ಸಿಖ್ ಮಂದಿರಗಳಲ್ಲಿ, ಮನೆಗಳಲ್ಲಿ ನಡೆಯುತ್ತವೆ. ಗ್ರಂಥಸಾಹೇಬದ ಪಠಣದ ಸಪ್ತಾಹ ಕಾರ್ಯಕ್ರಮ ನಡೆಯುತ್ತಿರುತ್ತವೆ. ಹಾಗೆಯೇ ಗ್ರಂಥಸಾಹೇಬದ ಅಖಂಡಪಠಣಕಾರ್ಯಕ್ರಮವನ್ನು ಸಿಖ್ ಭಕ್ತರು ಸೇರಿ ಮನೆಗಳಲ್ಲಿ, ಗುರುದ್ವಾರಗಳಲ್ಲಿ, ಪುಣ್ಯಸ್ಥಳಗಳಲ್ಲಿ ನಡೆಸುತ್ತಾರೆ. ಪಂಗಡಪಂಗಡವಾಗಿ ಸರತಿಯಂತೆ ಗ್ರಂಥದ ಪಠಣ ವನ್ನು ಅಖಂಡವಾಗಿ ನಡೆಸುವುದೇ ಅಖಂಡಪಠಣಕಾರ್ಯಕ್ರಮ. ಈ ಕಾರ್ಯಕ್ರಮಕ್ಕೆ ಎರಡು ಹಗಲು-ಎರಡು ರಾತ್ರಿ ಎಂದು ಒಟ್ಟು ನಾಲ್ವತ್ತೆಂಟು ಗಂಟೆಗಳ ಕಾಲಾವಕಾಶ ಬೇಕಾಗುತ್ತದೆ.

### ಸಿಖ್ ಮತದ ತತ್ತ್ವ ಮತ್ತು ಅನುಷ್ಠಾನ ಮಾರ್ಗ

ಸಿಖ್ ಮತವು ಜೀವನದ ಬಗ್ಗೆ-ಧರ್ಮಾಚರಣೆ ಬಗ್ಗೆ ಮೂಲತಃ ಹಿಂದೂಧರ್ಮದ ಸಿದ್ಧಾಂತಗಳನ್ನೇ ಆಧರಿಸಿಕೊಂಡಿರುತ್ತದೆ. ಹಿಂದೂಧರ್ಮದ ಭಕ್ತಿಸೂತ್ರಗಳೇ ಸಿಖ್ ಧರ್ಮದ ಸಾರಸರ್ವಸ್ವವಾಗಿ ಆ ಧರ್ಮದಲ್ಲಿ ರೂಪುಗೊಂಡಿವೆ ಎಂದು ಹೇಳಬಹುದು.

### ದೇವರು

ಸಿಖ್ ಮತದಂತೆ ದೇವರು ಒಬ್ಬನೆ. ಅವನು ಸತ್ಯನು. ಯಾವಾಗಲೂ ಇರತಕ್ಕವನು. ಸರ್ವಶಕ್ತನು. ಅವನು ಓಂಕಾರ ಎಂಬ ವಾಚಕವಾಗಿರುವ ಪರತತ್ತ್ವ. ಅವನು ಸ್ವಯಂ

ಪ್ರಕಾಶನು. ಗುರುಕೃಪೆಯಿಂದ ಅವನ ಸಾಕ್ಷಾತ್ಕಾರ ಸಾಧ್ಯ. ಭಗವಂತನು ಸರ್ವರ ಜನಕನು ಮತ್ತು ಸ್ವತಃ ತನ್ನ ಕೃತಿಯಲ್ಲಿ ವ್ಯಾಪ್ತನು. ಅವನು ಸರ್ವವ್ಯಾಪಕನು, ನಿರ್ಲಿಪ್ತನು. ಗುರುನಾನಕರ ಮಾತಿನಲ್ಲಿ ಪರಮಾತ್ಮನು—

ಅಲಖ ಅಪಾರ ಅಗಂಮ ಅಗೋಚರ ನಾ ತಿಸು ಕಾಲು ನಾ ಕರಮಾ ।
ಜಾತಿ ಅಜಾತಿ ಅಜೋನಿಸಂಭವು ನಾ ತಿಸು ಭಾವುನ ಭರಮಾ ॥೧॥

—ಗುರುನಾನಕವಾಣಿ—೧೫

"ಪರಮಾತ್ಮನು ಅಜ್ಞೇಯನು, ಅಪಾರನು, ಅಗಮನು, ಅಗೋಚರನು, ಕಾಲರಹಿತನು, ಕರ್ಮರಹಿತನು. ಅವನು ಜಾತಿರಹಿತ, ಅಯೋನಿಜ, ಸ್ವಯಂಭೂ. ಅವನಿಗೆ ಭಾವವು ಇಲ್ಲ, ಭ್ರಮೆಯೂ ಇಲ್ಲ."

### ಜಗದ ಉತ್ಪತ್ತಿ

ಈ ಜಗತ್ತು ಯಾವಾಗ ಸೃಷ್ಟಿಯಾಯಿತು ಎನ್ನುವಂತಿಲ್ಲ. ಆದರೆ ಜಗತ್ತು ಪರಮಾತ್ಮನ ಸೃಷ್ಟಿ ಎನ್ನುತ್ತದೆ ಸಿಖ್ ಧರ್ಮ—

ಜಾತಿಸು ಭಾಣಾ ತಾ ಜಗತು ಉಪಾಯಿಯಾ ॥
ಬಾಝು ಕಲಾ ಆಡಾಣು ರಹಾಯಿಯಾ ।
ಬ್ರಹಮಾ ಬಿಸನು ಮಹೇಸು ಉಪಾಯೇ ಮಾಯಿಯಾಮೋಹುವಧಾಯಿದಾ ॥

—ಗುರುನಾನಕವಾಣಿ—೨೦

"ತನಗಿಚ್ಛೆಯುಂಟಾದಂತೆ ಅವನು ಈ ಲೋಕವನ್ನು ಸೃಷ್ಟಿಸಿದನು. ಆಧಾರವಿಲ್ಲದ ಆಕಾಶವನ್ನು ನಿಲ್ಲಿಸಿದನು ಅದಾದನಂತರ ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಹುಟ್ಟಿಸಿದನು. ಆಮೇಲೆ ಮಾಯೆಯ ಮೋಹವನ್ನು ಹಬ್ಬಿಸಿದನು."

ಈ ಜಗತ್ತು ಪರಮಾತ್ಮನ ಸೃಷ್ಟಿ. ಹಾಗಾಗಿ ಪರಮಾತ್ಮನೂ ಸತ್ಯ, ಜಗತ್ತೂ ಸತ್ಯ ಎನ್ನುತ್ತದೆ ಸಿಖ್ ಧರ್ಮ—

ಸಚೆ ತೇರೇ ಖಂಡ ಸಚೆ ಬ್ರಹಮಂಕಡ ॥
ಸಚೆ ತೇರೇ ಲೋಅ ಸಚೆ ಆಕಾರ ॥
ಸಚೆ ತೇರೇ ಕರಣೆ ಸರಬ ಬೀಚಾರ ॥
ಸಚಾ ತೇರಾ ಅಮರು ಸಚಾ ದೀಬಾಣು ॥ —ಗುರುನಾನಕವಾಣಿ-೨೫

"ಪರಮಾತ್ಮಸೃಷ್ಟಿಖಂಡಗಳೂ ಸತ್ಯ, ಬ್ರಹ್ಮಾಂಡಗಳೂ ಸತ್ಯ. ಲೋಕವೂ ಸತ್ಯ, ಆಕಾರವೂ ಸತ್ಯ, ಸತ್ಯ ನಿನ್ನ ಕಾರ್ಯಗಳು, ಸಕಲ ವಿಚಾರಗಳು ; ಹೇ ಪರಮಾತ್ಮ, ನಿನ್ನ ಶಾಸನವು ಸತ್ಯ, ನಿನ್ನ ದರಬಾರು ಸತ್ಯ, ನಿನ್ನ ಹುಕುಂ ಸತ್ಯ, ಫರಮಾನು ಸತ್ಯ."

### ಜೀವಾತ್ಮ

ಸಿಖ್ ಧರ್ಮದಲ್ಲಿ ಹಿಂದೂಧರ್ಮದ ಧಾಟಿಯಲ್ಲಿಯೇ ಜೀವಾತ್ಮ-ಪರಮಾತ್ಮ ಭೇದಗಳು, ಕರ್ಮಸಿದ್ಧಾಂತ ಇವುಗಳನ್ನು ಪ್ರತಿಪಾದಿಸಲಾಗಿದೆ.

ಜೀವಾತ್ಮನ ಆತ್ಮನು ಪರಮಾತ್ಮ ಎಂದು ಸಿಖ್ ಮತದಲ್ಲಿ ಸ್ಪಷ್ಟಪಡಿಸಲಾಗಿದೆ.

ಆತಮು ಮಾಹೀ ರಾಮು
ರಾಮು ಮಹಿ ಆತಮು .. ಗುರುನಾನಕವಾಣಿ–೩೧

"ಆತ್ಮನಲ್ಲಿ ರಾಮನು, ರಾಮನಲ್ಲಿ ಆತ್ಮನು."

**ಕರ್ಮಸಿದ್ಧಾಂತ**

ಕರ್ಮಕ್ಕೆ ತಕ್ಕ ಫಲ ಇದ್ದೇ ಇದೆ. ಈ ಬದುಕಿನ ಸ್ಥಿತಿಗತಿಗಳಿಗೆಲ್ಲ ಹಿಂದಿನ ಜನ್ಮದ ಕರ್ಮವೇ ಕಾರಣವು. ಎಲ್ಲವೂ ಭಗವಂತನಿಂದಲೇ ಹಂಚಲ್ಪಡುತ್ತವೆ ಎಂಬುದು ಸಿಖ್ ಧರ್ಮದ ನಿಲುವು.

ಪದೈ ದೋಸು ನ ದೇವು ಕಿಸೈ ದೋಸು ಕರಮಾ ಆಪಣಿಯಾ ।
ಜೋ ಮೈ ಕಿಯಾ ಸೋ ಮೈ ಪಾಯಾ ದೋಸು ದೀಜೇ ಅವರಜನಾ ॥
ಧಧೈ ಧಾರಿ ಕಲಾಜಿನಿ ಛೋಡೀ ಹರಿ ಚೀಜೀ ಜಿನೀರಂಗಕೀ ಯಾ ।
ತಿಸಾ ದಾದೀಅ ಸಬನೀ ಲೀಯಾ ಕರಮಿ ಕರಮು ಹುಕುಮುಪಾಯಾ ॥
—ಗುರುನಾನಕವಾಣಿ–೩೪

"ದೋಷವನ್ನು ಯಾರ ಮೇಲೆ ಏಕೆ ಹೊರಿಸುವೆ? ದೋಷವು ನಮ್ಮ ಕರ್ಮಗಳದ್ದು. ನಾನು ಮಾಡಿದುದರ ಫಲವನ್ನೇ ಹೊಂದಿರುವೆನು. ಹಾಗಾಗಿ ಬೇರಾರ ಮೇಲೂ ಇದರ ದೋಷವಿಲ್ಲ. ತನ್ನ ತಲೆಯಿಂದ ಯಾರು ಈ ಜಗತ್ತನ್ನು ಧಾರಣ ಮಾಡಿದ್ದಾನೋ ಯಾರು ಎಲ್ಲ ವಸ್ತುಗಳಿಗೂ ಬಣ್ಣವಿತ್ತಿದ್ದಾನೋ ಅವನು ಅವರವರ ಕರ್ಮಾನುಸಾರವಾಗಿ ಆಜ್ಞೆ ನೀಡಿ ಏನನ್ನು ಕೊಡುತ್ತಾನೋ ಅದೇ ಎಲ್ಲರಿಗೂ ಲಭಿಸುವುದು."

**ಬದುಕಿನ ಗುರಿ**

ಬದುಕಿನ ಗುರಿ ಭಗವಂತನ ಸಾಕ್ಷಾತ್ಕಾರ ಎಂಬುದು ಸಿಖ್ ಧರ್ಮದ ಅಮರ ಸಂದೇಶ. ಭಗವಂತನ ಸಾಕ್ಷಾತ್ಕಾರಪಡೆದವರು ಇಳೆಗೊಂದು ವಿಶೇಷ ಅನುಗ್ರಹ ಇದ್ದಂತೆ. ಅವರಿಂದ ಬಹುಮಂದಿ ಬಂಧಮುಕ್ತರಾಗುತ್ತಾರೆ ಎಂಬುದು ಗುರುನಾನಕರ ಉಪದೇಶ.

ಜಿನಿ ನಾಮು ಧಿ ಆಯಿಯಾ ಗಯೇ ಮುಸಕತಿ ಘಾಲಿ ।
ನಾನಕ ತೇ ಮುಖ ಉಜಲೆ ಕೇತೀ ಚಿಂಟೀ ನಾಲಿ ॥
—ಗುರುನಾನಕವಾಣಿ (ಜಪ್‌ಜೀ–೮)

"ಪರಮಾತ್ಮನಲ್ಲಿ ಯಾರು ಮನವನ್ನು ನೆಟ್ಟಿರುವನೋ ಯಾರು ಶ್ರಮಪೂರ್ವಕವಾಗಿ ತಮ್ಮ ಕರ್ತವ್ಯವನ್ನು ನಿರ್ವಹಿಸುವರೋ ಅವರ ಮುಖವು ಉಜ್ವಲವಾಗಿರುವುದು, ಅದೆಷ್ಟೋ ಜನರು ಅವರಿಂದಾಗಿಯೇ ಬಂಧಮುಕ್ತರಾದರು."

**ಸಾಧನೆ**

ಭಗವಂತನ ಸಾಕ್ಷಾತ್ಕಾರಕ್ಕೆ ಸಾಧನೆ ಆಗತ್ಯ. ಕರ್ಮದ ಜಾಲಕ್ಕೆ ಸಿಲುಕಿದ ಮಾನವ ಕಷ್ಟನೋವುಗಳಿಂದ ಕೂಡಿದ್ದಾನೆ. ಅದಕ್ಕೆ ಅವನ ಅಹಂಕಾರ-ಭಗವಂತನ ವಿಸ್ಮೃತಿಯೇ ಕಾರಣ. ಅದಕ್ಕಾಗಿ ಭಗವಂತನ ನಾಮಸ್ಮರಣೆ, ಭಗವಂತನಲ್ಲಿ ಶರಣಾಗುವುದು ಒಂದೇ ದಾರಿ ಎಂಬುದು ಸಿಖ್ ಮತದ ಸಾಧನತತ್ತ್ವವಾಗಿದೆ.

**ಹವು ಹವು ಕರತ ನಹಿ ಸ ಚು ಪಾಯಿಯಾ ಆಯಿ ।**
**ಹವು ಮೈ ಜಾಯಿ ಪರಮಪದು ಪಾಯಿಆಜಯಿ ॥** —ಗುರುನಾನಕವಾಣಿ-೩೨

"ಅಹಂಕಾರ ಇರುವ ವರೆಗೆ ಸತ್ಯವನ್ನು ಪಡೆಯಲಾರರು. ಅಹಂಕಾರದ ನಾಶದಿಂದಲೇ ಪರಮಪದ ದೊರೆಯುವುದು."

**ರಾಮು ಭಗತಿ ಸುಖು ಪಾಇಮೈ.** —ಗುರುನಾನಕವಾಣಿ-೩೨

"ರಾಮನ ಭಕ್ತಿಯಿಂದಲೇ ಸುಖ ಪ್ರಾಪ್ತಿ."

**ನಾಮಜಪ**

ಜೀವಿಯು ಭವಬಂಧನಕ್ಕೆ ಸಿಲುಕಿ ಕಷ್ಟಪಡುತ್ತಿದ್ದಾನೆ. ಆ ಬಂಧನದಿಂದ ಬಿಡುಗಡೆ ಹೊಂದಲು ನಾಮಜಪಸಾಧನೆ ಅತ್ಯಂತ ಫಲದಾಯಕವಾದುದು ಎಂಬುದು ಗುರುನಾನಕ ಪಂಥದ ಅಮರಸಂದೇಶ. ಸಿಖ್ ಮತದಲ್ಲಿ ನಾಮಜಪ, ನಾಮಸ್ಮರಣೆಗೆ ಬಹಳ ಮುಖ್ಯವಾದ ಸ್ಥಾನ ನೀಡಲಾಗಿದೆ. ಭಕ್ತಿಯೋಗದ ಮೂಲತತ್ತ್ವವಾದ ನಾಮಸ್ಮರಣೆಯನ್ನು ಸಾಧಕನಿಗೆ ಬೋಧಿಸುವುದು ಸಿಖ್ ಮತದಲ್ಲಿ ಕಂಡುಬರುವ ತತ್ತ್ವವೈಶಿಷ್ಟ್ಯವಾಗಿದೆ. ಸಿಖ್ ಧರ್ಮಗ್ರಂಥದ ಉದ್ದಕ್ಕೂ ಎಂಬಂತೆ ನಾಮಮಹಾತ್ಮ್ಯೆಯನ್ನು ಅತ್ಯಂತ ಪರಿಣಾಮಕಾರಿಯಾದ ರೀತಿಯಲ್ಲಿ ಬಣ್ಣಿಸಲಾಗಿದೆ.

**ಭರೀಯೈ ಮತಿ ಪಾಪಾಕೈ ಸಕಗಿ ।**
**ಓಹು ಧೋಪೈ ನಾ ವೈ ಕೆ ರಕಗಿ ॥** —ಗುರುನಾನಕವಾಣಿ-೮೯

"ಪಾಪಗಳಿಂದ ಮನಸ್ಸು ಮಲಿನವಾಗುವುದು. ಅದು ನಾಮದಿಂದ ತೊಳೆದು ಶುದ್ಧವಾಗುವುದು."

ನಾಮದ ಘನತೆ, ಮಹಿಮೆಗಳು ಆಗಣ್ಯ, ಅವರ್ಣನೀಯ ಎನ್ನುವುದು ಸಿಖ್ ಧರ್ಮದ ಗುರೂಪದೇಶವಾಗಿದೆ.

**ಪಕಖೀ ಹೋಯಿಆ ಕೈ ಜೀಭವಾ ಸೈ ಆಸಮಾನೀ ಜಾವ್ರಾ ।**
**ನದರೀ ಕಿಸೈ ನ ಆವವು ನಾ ಕಿಛು ಪಿಯಾ ನಾ ಖಾವ್ರಾ ॥**
**ಭೀ ತೇರೀ ಕೀಮತಿ ನಾ ಪವೈ ಹವು ಕೇವಡು ಆಖನಾವ್ರು ।**
**ನಾನಕ ಕಾಗದ ಲಖ ಮಣಾ ಪಡಿ ಕೀಚೈ ಭಾವು ॥**
**ಮಸೋಟಿ ನೆ ಆವಯಿಆ ಲೇಖಣಿ ಪವುಣು ಚಲಾವು ।**
**ಭೀ ತೇರೀ ಕೀಮತಿ ನಾ ಪವೈ ಹವು ಕೇವಡ ಆಖಾ ನಾವು ॥**
—ಗುರುನಾನಕವಾಣಿ-೯೯

"ಹೇ ಪರಮಾತ್ಮಾ, ನಿನ್ನ ಪುಣ್ಯನಾಮ ಎಷ್ಟು ಘನವಾದುದು ಎಂದು ನಾನು ಏನು ಹೇಳಲಿ ? ಪಕ್ಷಿಯಾಗಿ ಹಾರಿ ಶತ-ಶತ ಆಕಾಶಗಳನ್ನು ದಾಟಿಹೋಗಲೇ ? ಯಾರಿಗೂ ಕಾಣಿಸದೇ ಇದ್ದರೂ, ಏನನ್ನು ತಿನ್ನದೇ ಇದ್ದರೂ, ಕುಡಿಯದೇ ಇದ್ದರೂ, ಏನೇ ಸಾಧಿಸಿದರೂ ನಾನು ನಿನ್ನ ಬೆಲೆಯನ್ನು ಕಟ್ಟಲಾರೆನು. ನಿನ್ನ ಪುಣ್ಯನಾಮ ಎಷ್ಟು ದೊಡ್ಡದೆಂಬುದನ್ನು ನಾನು ಏನೆಂದು ಹೇಳಲಿ ? ಲಕ್ಷಗಟ್ಟಲೆ ಮಣದಷ್ಟು ಕಾಗದಗಳನ್ನು ಓದಿದರೂ ಅವುಗಳ ಭಾವವನ್ನು ಹುಡುಕಿದರೂ ಅಕ್ಷಯಮಸಿಯನ್ನು ಬಳಸಿದರೂ ವಾಯುವೇಗದಲ್ಲಿ ಲೇಖನಿಯನ್ನು ಕಾಗದದ ಮೇಲೆ ಓಡಿಸಿದರೂ ನಿನ್ನ ಬೆಲೆಯನ್ನು ಕಟ್ಟಲಾರೆನು. ನಿನ್ನ ದಿವ್ಯನಾಮ ಎಷ್ಟು ಘನತರವಾದುದು ಎಂಬುದನ್ನು ನಾನು ಹೇಳಲಾರೆ."

ಸಂಸಾರಬಂಧವಿಮೋಚನೆಗೆ ನಾಮವೇ ಪರಿಹಾರಮಾರ್ಗ ಎನ್ನುವುದನ್ನು ಸ್ಪಷ್ಟಪಡಿಸುತ್ತಾ, ಗುರುನಾನಕರು ಹೀಗೆ ಬೋಧಿಸಿರುತ್ತಾರೆ :

"ತೀರಥ ನಾಮ ಹೈ"—ಪರಮಾತ್ಮನ ನಾಮವೇ ತೀರ್ಥ.

"ಸಂಸಾರು ರೋಗೀ ನಾಮು ದಾರೂ"—ಸಂಸಾರವು ರೋಗಿ. ದೇವರ ನಾಮವೇ ರೋಗಿಗೆ ಪರಮ ಔಷಧಿ.

**ಜೀವನ್ಮುಕ್ತಿ**

ಜೀವನ್ಮುಕ್ತಿಗಾಗಿ ಜೀವಿಯ ಜೀವನವು ಪ್ರಯತ್ನದ ಹಾದಿಯಲ್ಲಿ ಸಾಗಬೇಕು ಎಂಬುದು ನಾನಕರ ಸಂದೇಶ. ಮನದಲ್ಲಿ ನಾಮವು ನೆಲಸಿದರೆ ಜೀವನ್ಮುಕ್ತಿ ಸಾಧ್ಯ ಎಂಬುದಾಗಿ ಗುರುನಾನಕರು ಆಶ್ವಾಸನೆ ನೀಡುತ್ತಾರೆ.

**ಜೀವನ ಮುಕುತಿ ಮನಿ ನಾಮು ಬಸಾಏ** —ಗುರುನಾನಕವಾಣಿ-೪೨೨

"ಮನದಲ್ಲಿ ನಾಮವು ನೆಲಸಿದರೆ ಜೀವನ್ಮುಕ್ತಿ ಲಭಿಸುವುದು."

ಪರಮಾತ್ಮನ ಸಾಕ್ಷಾತ್ಕಾರ ನಾಮ-ಜಪ-ಸ್ಮರಣೆಗಳಿಂದ ಸಾಧ್ಯ ಎನ್ನುವ ಗುರುನಾನಕರು ಆದರ್ಶ ಮಾನವನು ಜಾತಿ, ಮತಗಳ ಭೇದಗಳಿಗೆ ಅತೀತ ಎಂದು ಸಾರಿರುತ್ತಾರೆ :

**ಐಸೇ ಜನ ಬಿರಲೆ ಜಗ ಅಕದಿದ ಪರಖಿ ಖಜಾನೈ ಪಾಯಿಆಯಾ ।**
**ಜಾತಿ ವರನ ತೇ ಭಯೇ ಅತೀತಾ ಮಮತಾ ಲೋಭು ಚುಕಾಯಿಆ ॥**
**ನಾಮಿರತೇ ತೀರಥ ನಿರಿಮಲ ದುಖುಹವು ಮೈ ಮೈಲು ಚುಕಾಯಿಆ ॥**
—ಗುರುನಾನಕವಾಣಿ—೧೭೮

"ಪರಮಾತ್ಮನು ಪರೀಕ್ಷೆಯನ್ನು ಮಾಡಿ ತನ್ನ ಬಳಿ ಸೇರಿಸಿಕೊಳ್ಳುವಂಥ ಜನರು ಅಪರೂಪ. ಅವರು ಜಾತಿ—ವರ್ಣದ ಭೇದಗಳನ್ನು ಎಣಿಸದವರು. ಮಮತ್ವ—ಲೋಭ ಇವುಗಳನ್ನು ತ್ಯಜಿಸಿದವರು. ತೀರ್ಥಗಳಂತೆ ಪರಿಶುದ್ಧರಾಗಿದ್ದು ನಾಮರತರಾಗಿದ್ದವರು ಅವರು. ಅಹಂಕಾರನಾಶಮಾಡಿದವರು, ದುಃಖ-ಪಾಪಗಳಿಂದ ದೂರವಾಗಿದ್ದವರು.

ನಾನಕನು ಇಂಥವರ ಪಾದ ತೊಳೆಯುತ್ತಾನೆ. ಸತ್ಪುರುಷರೊಡನೆ ಪ್ರೇಮವು ಸದ್ಗುರು ಉಪದೇಶದಿಂದ ಆಯಿತು."

ಇಹಲೋಕದಲ್ಲಿನ ಬದುಕು ಹೇಯವಲ್ಲ. ಬದುಕನ್ನು ಭಗವಂತನ ಸಾಕ್ಷಾತ್ಕಾರಕ್ಕಾಗಿ ಬಳಸಬೇಕು. ಸೇವೆ ಅದರ ಸೂತ್ರವಾಗಬೇಕು. ಈ ಸೂತ್ರದ ಸರಿಯಾದ ಪಾಲನೆಯಿಂದ ಸಾಕ್ಷಾತ್ಕಾರ ಸಿದ್ಧಿಸುತ್ತದೆ ಎಂಬುದು ಸಿಖ್ ಧರ್ಮದ ನಿತ್ಯನೂತನ ಸಂದೇಶ.

**ಇಕು ತನಿ ಲಾಗೈ ಬಾಣೀ ಅ।**
**ಸುಖು ಹೋವೈ ಸೇವ ಕಮಾಣೀಯಾ ॥**
**ಸಭ ದೇನೀಯಾ ಆವಣ ಜಾಣೀಯಾ ।**
**ವಿಚಿ ದುನಿಯಾ ಸೇವ ಕಮಾಯ್ಯೈ ॥**
**ತಾ ದರಗಹ ಬೈಸಣು ಪಾಯಿಯಾಯ್ಯೈ ।**
**ಕಹು ನಾನಕ ಬಾಹಲುಡಾಯಿಯಾಯ್ಯೈ ॥** —ಗುರುನಾನಕವಾಣಿ–೧೨೦

"ಈ ದೇಹಕ್ಕೆ ಇಚ್ಛೆಯ ಬಾಣಗಳು ತಗಲಿದರೂ ಕೂಡ ಸೇವೆಯಿಂದ ಸುಖ ಸಿಕ್ಕುವ್ರದು. ಸಂಸಾರವು ಬರುವ್ರದು, ಹೋಗುವ್ರದು. ಪ್ರಪಂಚದಲ್ಲಿ ಸೇವೆಮಾಡುವುದರಿಂದ ಪರಮಾತ್ಮನ ಪಾದಗಳ ಬಳಿ ಸೇರಿ ಇರಲು ಸಾಧ್ಯವಾಗುವ್ರದು. ಪರಮಾತ್ಮನ ಬಳಿಗೆ ಸೇವೆಯಿಂದ ಕೈಬೀಸುತ್ತಾ ಸುಖವಾಗಿ ಹೋಗಿ ಸೇರುವಿರಿ" ಎಂದು ನಾನಕನು ಹೇಳುತ್ತಾನೆ.

**ಬಿನು ಸೇವಾ ಫಲು ಕಬಹು ।**
**ನ ಪಾವಸಿ ಸೇವಾ ಕರಣೀ ಸಾರೀ ॥** —ಗುರುನಾನಕವಾಣಿ–೧೨೨

"ಸೇವೆ ಮಾಡದೇ ಫಲವನ್ನು ಪಡೆಯಲಾರಿರಿ; ಸೇವೆಯು ಶ್ರೇಷ್ಠವಾದುದು."

ಪ್ರಪಂಚದ ಜನರಲ್ಲಿ ಜಾತಿಮತಗಳ ಭೇದವೆಣಿಸದ ನಾನಕರು ಅವರನ್ನು ಎರಡು ಪಂಗಡಗಳಾಗಿ ಗುರುತಿಸಿದ್ದಾರೆ :

೧. ಮನಮುಖರು, ೨. ಗುರುಮುಖರು.

ಮನಮುಖರು ಎಂದರೆ ಮನಸ್ಸಿನ ಹಲವಾರು ವಿಕಾರಗಳಿಂದ ಕಾಮಕ್ರೋಧಾದಿಗಳಿಗೆ ತುತ್ತಾಗಿ ಸತ್ಯ—ಸನ್ಮಾರ್ಗವನ್ನು ಮರೆತವರು. ಇಹದ ಸುಖವೇ ಸರ್ವಸ್ವ ಎಂದು ಪರಿಗಣಿಸಿ ಬಾಳುವವರು. ಗುರುಮುಖರೆಂದರೆ ಗುರುವಾಣಿಯಲ್ಲಿ ಶ್ರದ್ಧೆ ಇಟ್ಟು ಸೇವಾ ತತ್ಪರರಾಗಿ ಅದರಂತೆ ಪರಮಾತ್ಮಸಾಕ್ಷಾತ್ಕಾರಕ್ಕಾಗಿ ಬದುಕನ್ನು ಪವಿತ್ರವೂ ಪರಿಶುದ್ಧವೂ ಆದ ರೀತಿಯಲ್ಲಿ ಬಾಳುವವರು. ಮನಮುಖರಿಗೆ ಮುಕ್ತಿ ಇಲ್ಲ. ಅವರಿಗೆ ಭವಬಂಧನ ಸದಾ ಇರುತ್ತದೆ. ಗುರುಮುಖರಿಗೆ ಮುಕ್ತಿ ಲಭಿಸುತ್ತದೆ. ಅವರು ಭವಸಾಗರವನ್ನು ದಾಟುತ್ತಾರೆ.

**ಮನಮುಖ ಭವುಜಲಿ ಪಚಿ ಮುಯೇ ಗುರುಮುಖಿ ತರೆ ಅಥಾಹು ॥**
—ಗುರುನಾನಕವಾಣಿ–೫೫

"ಮನಮುಖರು ಭವಬಂಧನದಲ್ಲಿ ಉಳಿಯುತ್ತಾರೆ. ಗುರುಮುಖರು ಭವಸಾಗರವನ್ನು ದಾಟುತ್ತಾರೆ."

ಸಿಖ್ ಧರ್ಮದಲ್ಲಿ ಗುರುವಿನ ಸ್ಥಾನ ಅತ್ಯಂತ ಮಹತ್ವ ಹಾಗೂ ಶ್ರೇಷ್ಠವಾದುದು. ಹಿಂದೂಧರ್ಮದಲ್ಲಿ ಹೇಳಿರುವಂತೆ ಸಿಖ್‌ರಿಗೆ ಗುರುವೇ ಜ್ಞಾನದಾಯಕ, ಮುಕ್ತಿದಾಯಕ, ಸರ್ವಕಲ್ಯಾಣದಾತ. ಸಿಖ್ ಸಂಪ್ರದಾಯದ ಗುರುಗಳ ಬೋಧನೆಗಳನ್ನು ಒಳಗೊಂಡ ಗ್ರಂಥ ಸಿಖ್‌ರಿಗೆಲ್ಲ ಗುರುಗ್ರಂಥ. ಅದರ ವಚನಗಳು ಅವರಿಗೆ ಪರಮವೇದ. ಗುರುಭಕ್ತಿ-ಗುರುಪಾದದಲ್ಲಿ ಶರಣಾಗುವಿಕೆ ಇದರಿಂದ ಮಾತ್ರ ; ಬದುಕಿದಲ್ಲಿ ಸೌಖ್ಯ-ಜೀವನ್ಮುಕ್ತಿ ಸಿದ್ಧಿ. ಕೊನೆಗೆ ಭವಬಂಧವಿಮುಕ್ತಿ ಎನ್ನುವುದು ಸಿಖ್ ಧರ್ಮದ ಉಪದೇಶದ ಪಲ್ಲವಿಯಾಗಿರುತ್ತದೆ.

**ಬಿನು ಸತಿಗುರ ಕಿನ್ನೈ ಪಾಯಿಯೊ ।**
**ಬಿನು ಸತಿಗುರ ಕಿನ್ನೈ ನ ಪಾಯಿಯಾ ॥** —ಗುರುನಾನಕವಾಣಿ–೬೭

"ಸದ್ ಗುರುವಿನ ಕೃಪೆ ಇಲ್ಲದೆ ಯಾರೂ ಅವನನ್ನು (ಪರಮಾತ್ಮನನ್ನು) ಎಂದೂ ಪಡೆದಿಲ್ಲ, ಎಂದೂ ಯಾರೂ ಪಡೆದಿಲ್ಲ."

ಗುರು ಮತ್ತು ಗುರುವಿನ ಉಪದೇಶದ ಹಿರಿಮೆ-ಮಹಿಮೆಗಳನ್ನು ಸಿಖ್ಖರ ಆದಿ ಗುರು ನಾನಕರು ಹೀಗೆ ಬಣ್ಣಿಸಿ ಬೋಧಿಸಿರುತ್ತಾರೆ :

**ಗುರು ಉಪದೇಸಿ ಜವಾಹರ ಮಾಣಿಕ ಸೇವೆ ಸಿಖು ಸೋ ಖೋಜಿ ಲಹೈ ॥**
**ಗುರು ಸಮಾನಿ ತೀರಥ ನಹೀ ಕೋಯಿ ।**
**ಸರು ಸಂತೋಖು ತಾಸು ಗುರು ಹೋಯಿ ರಹಾವು ।**
**ಗುರು ದರವು ಸದಾಜಲ ನಿರಮಲು ಮಿಲಿಯಾ ದುರಮತಿ ಮೈಲು ಹರೈ ।**
**ಸತಿಗರಿ ಪಾಯಿಯೈ ಪುರಾ ನಾವಣು ಪಸೂ ಪರೇತಹಂ ದೇವಕರೈ ॥**
**ರತಾಸಚಿ ನಾಮಿ ತಲ ಹೀ ಆಲು ಸೋ ಗುರು ಪರಮಲು ಕಹೀಯೈ ।**
**ಜಾಕೀವಾಸು ಬನಾಸಪತಿ ಸವುರೈ ತಾಸು ಚರಣ ಲಿವ ರಹೀಯೈ ।**
**ಗುರುಮುಖಿ ಜೀಯಾ ಪ್ರಾನ ಉಪಜಹಿ ಗುರುಮುಖಿ ಸಿವ ಘರಿ ಜಾಯಿಯೈ ।**
**ಗುರುಮುಖಿ ನಾನಕ ಸಚಿ ಸಮಾಯಿಯೈ ಗುರುಮುಖಿ ನಿಜಪದು ಪಾಯಿಯೈ ॥**
—ಗುರುನಾನಕವಾಣಿ–೭೩

"ಗುರುವಿನ ಉಪದೇಶವು ವಜ್ರ-ಮಾಣಿಕ್ಯಕ್ಕೆ ಸಮಾನವಾದುದು. ಗುರುವಿನ ಸೇವೆ ಮಾಡುವ ಶಿಷ್ಯನಿಗೆ ಹುಡುಕಾಡಿದರೆ ಅದು ಲಭಿಸುವುದು. ಗುರುವಿಗೆ ಸಮಾನವಾದ ಬೇರೆ ಇನ್ನು ತೀರ್ಥವಿಲ್ಲ. ಗುರುವು ಸಂತೋಷದ ಸರೋವರ. ಗುರು ಸದಾ ನಿರ್ಮಲವಾಗಿರುವ ನದಿ. ಗುರುವನ್ನು ಸೇರುವುದರಿಂದ ದುಷ್ಟಮನಸ್ಸಿನ ಕೊಳೆಯು ತೊಳೆದು ಹೋಗುವುದು. ಸದ್ಗುರುವಿನ ಮಿಲನವೇ ಪೂರ್ಣಸ್ನಾನ. ಸದ್ಗುರುವು ಪಶುವನ್ನೂ ಪಿಶಾಚಿಯನ್ನೂ ದೇವತೆಯಾಗಿ ಮಾಡುತ್ತಾನೆ. ಗುರುವು ತೂಕವಾದ ಮನದ ಮೂಲಕ ನಾಮಸ್ಮರಣೆಯಲ್ಲಿ ತಲ್ಲೀನನಾಗಿರುತ್ತಾನೆ. ಗುರುವಿಗೆ ಪರಿಮಳ ಎಂದೂ ಹೇಳುತ್ತಾರೆ. ಅವನ ಸುಗಂಧದಿಂದ ವನಸ್ಪತಿಗಳು ಸುಗಂಧಿಗಳಾಗುವುವು. ಗುರುವಿನ ಚರಣದಲ್ಲಿ ಧ್ಯಾನಮಗ್ನರಾಗಿರಿ. ಗುರುವಿನ ಮೂಲಕ ಜೀವದಲ್ಲಿ ಪುನಃ ಪ್ರಾಣಸಂಚಾರ ಆಗುವುದು.

ಗುರುವಿನ ಮೂಲಕ ಮಾತ್ರವೇ ಶಿವಗೃಹದಲ್ಲಿ ಪ್ರವೇಶ ಲಭಿಸಬಹುದು. ಗುರುವಿನ ಮುಖಾಂತರವೇ ಸತ್ಯದಲ್ಲಿ ಸಮಾವೇಶಗೊಂಡು ನಿಜಪದದ ಪ್ರಾಪ್ತಿಯಾಗುವುದು."

ಗುರುಭಕ್ತಿ, ನಾಮಸ್ಮರಣೆ, ಸೇವೆ ಇವುಗಳಿಂದ ಕೂಡಿ ಬಾಳುವ ಜೀವಿಯ ಒದುಕು ಬಂಗಾರವಾಗುವುದು,. ಸಾರ್ಥಕವಾಗುವುದು ಎಂಬುದು ಸಿಖ್ ಧರ್ಮದ ಆಶ್ವಾಸನೆ. ಗುರುನಾನಕರು ಜೀವಿಯು ಯೋಗಪಥದಲ್ಲಿ ಸಾಗಬೇಕು ಎನ್ನುತ್ತಾ ಅವರದೇ ಆದ ಸೂತ್ರಗಳನ್ನು ಒಳಗೊಂಡ ಅಷ್ಟಾಂಗಯೋಗವನ್ನು ಸಾಧಕರಿಗೆ ಹೇಳಿರುತ್ತಾರೆ ನಾನಕರು ಬೋಧಿಸಿದ ಯೋಗವು ಪಾತಂಜಲ ಯೋಗದರ್ಶನಕ್ಕೆ ಸರಿಹೊಂದಿಬರುವುದಿಲ್ಲ. ಗುರು ನಾನಕರು ಉಪದೇಶಿಸಿದ ಅಷ್ಟಾಂಗಯೋಗದ ಮೆಟ್ಟಲುಗಳು ಯಾವುವೆಂದರೆ :

೧. ಸಂತೋಷ, ೨. ಸೇವೆ, ೩, ಗುರುವಾಣಿಯ ಪಾಠ, ೪. ಗುರುವಿನ ಉಪದೇಶ ದಂತೆ ಆಚರಣೆಯ ಪ್ರಯತ್ನ, ೫. ಸತ್ಸಂಗ, ೬. ಕೀರ್ತನೆ, ೭. ದೇವರ ನಾಮಜಪ, ೮, ಪರಮಾತ್ಮಸ್ಮರಣೆ.

**ಸಿಖ್ ಮತದ ಪುಣ್ಯಕ್ಷೇತ್ರಗಳು**

೧. ಪಂಜಾಬುಪ್ರಾಂತ್ಯದ ಅಮೃತಸರನಗರದಲ್ಲಿನ ಸ್ವರ್ಣಮಂದಿರವೆಂದು ವಿಖ್ಯಾತ ವಾಗಿರುವ 'ಶ್ರೀಹರಿ ಮಂದಿರ'ವು ಸಿಖ್ಖರ ಅತ್ಯಂತ ಪವಿತ್ರವಾದ ಪುಣ್ಯಕ್ಷೇತ್ರವಾಗಿದೆ. ಇದನ್ನು ಸಿಖ್ ಮತೀಯರ 'ಕಾಶಿ' ಎನ್ನಬಹುದು. ಇದು ಸಿಖ್ ಜನಾಂಗದವರ ಚಟುವಟಿಕೆಯ ಕೇಂದ್ರಸ್ಥಳವೂ ಹೌದು. ಇಲ್ಲಿ ಹರಿ ಎಂದರೆ ಭಗವಂತ ಎಂದು ತಾತ್ಪರ್ಯ. ಈ ಮಂದಿರಕ್ಕೆ ಬೇಕಾದ ಸ್ಥಳವನ್ನು ಸಿಖ್ಖರ ಮೂರನೇ ಗುರುವಿಗೆ ಮೊಗಲ್ ಅರಸ ಅಕ್ಬರನು ನೀಡಿದನು. ಮಂದಿರದ ಮುಂದಿನ ಅಮೃತಸರೋವರವನ್ನು ಗುರು ಅಮರ ದಾಸನ ಅಳಿಯನು ತೋಡಿಸಿ ಕಟ್ಟಿಸಿದನು. ಶ್ರೀಹರಿ ಮಂದಿರವನ್ನು ಸಿಖ್ಖರ ಐದನೆಯ ಗುರು ಶ್ರೀ ಅರ್ಜುನಸಿಂಹನು ಕಟ್ಟಿಸಿದನು. ಇಲ್ಲೇ ಗುರು ಗೋವಿಂದ ಸಿಂಹನು 'ಗ್ರಂಥ ಸಾಹೇಬ'ವನ್ನು ರೂಪಿಸಿದನು. ಅನೇಕ ಬಾರಿ ಮುಸ್ಲಿಂರ ದಾಳಿಗೆ ಒಳಗಾಗಿ ಜರ್ಝರಿತ ವಾದ ಈ ಮಂದಿರವನ್ನು ಸಿಖ್ಖರ ಮಹಾರಾಜ ರಣಜಿತಸಿಂಗನು ಅಮೃತಶಿಲೆಯಿಂದ ಭವ್ಯವಾಗಿ ಕಟ್ಟಿಸಿ ಸುವರ್ಣಗೋಪುರವನ್ನು ನಿರ್ಮಾಣಮಾಡಿ ಜೀರ್ಣೋದ್ಧಾರಮಾಡಿ ದನು. ಈ ಮಂದಿರದಲ್ಲಿ ಸಿಖ್ಖರ ಪಾವನಗ್ರಂಥ ಗ್ರಂಥಸಾಹೇಬವನ್ನು ಅತ್ಯಂತ ಶ್ರೇಷ್ಠ ವಾದ ರೀತಿಯಲ್ಲಿ ಅಲಂಕೃತವಾದ ಪೀಠದಲ್ಲಿ ಸಿಂಗರಿಸಿ ಇಟ್ಟು ದಿವಸಂಪ್ರತಿ ಧೂಪ, ದೀಪ, ನೈವೇದ್ಯ, ಛತ್ರ, ಚಾಮರಸೇವಾದಿಗಳಿಂದ ಕೂಡಿ ಪೂಜಿಸುತ್ತಾರೆ.

೨. ಆನಂದಪುರ ಘರ್ ಸಾಹೇಬ್ : ಇದು ಗುರು ಗೋವಿಂದ ಸಿಂಹನು ಧರ್ಮ ವಿರೋಧಿಗಳ ವಿರುದ್ಧ ಸಮರವೆಸಗಿದ ತಾಣ (ಅಂಬಾಲ ಜಿಲ್ಲೆಯಲ್ಲಿದೆ).

೩. ಆನಂದಪುರ ಸಾಹೇಬ್ : ಮೊದಲ ಬಾರಿಗೆ ಖಲ್ಸಾ (ಶುದ್ಧೀಕರಣದೀಕ್ಷೆ) ನಡೆದ ಪುಣ್ಯಸ್ಥಳ (ಅಂಬಾಲ ಜಿಲ್ಲೆಯಲ್ಲಿದೆ).

೪. ಶ್ರೀ ಜನಮ ಅಸ್ಥಾನ್ : ಗುರು ಗೋವಿಂದ ಸಿಂಗನ ಜನ್ಮಸ್ಥಾನ (ಪಾಟ್ನಾನಗರ ದಲ್ಲಿದೆ).

೫. ನಾನಕಾನಾ ಸಾಹೇಬ್ : ಶ್ರೀ ಗುರುನಾನಕರ ಜನ್ಮಸ್ಥಳ (ಈಗ ಪಾಕಿಸ್ತಾನದಲ್ಲಿದೆ).

೬. ದುಃಖ ನಿವಾರನ್ ಗುರುದ್ವಾರ : ಸಂಕಷ್ಟಪರಿಹಾರಕ ಪುಣ್ಯಕ್ಷೇತ್ರ ಎಂದು ಪ್ರಸಿದ್ಧವಾಗಿದೆ (ಪಾಟಿಯಾಲದಲ್ಲಿದೆ).

೭. ಶೀಶ್‌ಗಂಜ್ : ಗುರು ತೇಜಬಹದ್ದೂರ್ ಬಲಿದಾನ ಮೂಲಕ ದೇಹತ್ಯಾಗ ಮಾಡಿದ ಪುಣ್ಯಕ್ಷೇತ್ರ (ದೆಹಲಿಯಲ್ಲಿದೆ).

ಸಿಖ್ಖರ ಪಾವನಯಾತ್ರಾಕ್ಷೇತ್ರಗಳಿಗೆ ಸಾಹೇಬ್ ಎಂದೂ ಹೇಳುತ್ತಾರೆ. ಅಲ್ಲೆಲ್ಲಾ ಭವ್ಯವಾದ ಗುರುದ್ವಾರಗಳು, ಸ್ಮಾರಕ ಸೌಧಗಳು ಇದ್ದು ಅವುಗಳು ಸಿಖ್ ಜನಾಂಗದವರಿಗೆ ಲೌಕಿಕ ಹಾಗೂ ಆಧ್ಯಾತ್ಮಿಕ ಸ್ಫೂರ್ತಿಯ ಕೇಂದ್ರಗಳಾಗಿವೆ. ಎಲ್ಲ ಗುರುದ್ವಾರಗಳಲ್ಲಿ ಸಿಖ್ ಸಾಧುಸಂತರು, ಮತಪ್ರಚಾರಕರು ಸಾಮಾನ್ಯವಾಗಿ ಇರುತ್ತಾರೆ.

ಸಿಖ್ ಧರ್ಮದಲ್ಲಿ ಗುಣಕರ್ಮಗಳಿಗೆ ಅನುಗುಣವಾಗಿ ಅನೇಕ ಒಳಪಂಗಡಗಳು ಸಾಮಾಜಿಕವಾಗಿ ಇವೆ. ಮುಖ್ಯವಾಗಿ ಇಂದು ಸಿಖ್ಖರಲ್ಲಿ ಜಾಟರು (ಕೃಷಿಕವರ್ಗ), ಉದಾಸೀ ಮತ್ತು ನಿರಮಲರು (ಪುರೋಹಿತ ವರ್ಗದವರು ಮತ್ತು ಕ್ಷತ್ರಿಯರು), ಸಿಖ್ ಜನಾಂಗದಲ್ಲಿನ ಒಳಪಂಗಡದವರು. ಹಾಗೆಯೇ ವೈಶ್ಯರೂ ಈ ಜನಾಂಗದಲ್ಲಿದ್ದಾರೆ. ಸಿಖ್ ಜನಾಂಗದಲ್ಲಿ ಹಿಂದುಳಿದ ಪಂಗಡದವರೂ ಇದ್ದು ಅವರನ್ನು ಮುಸಾಬಿಗಳೆಂದು ಕರೆಯುತ್ತಾರೆ. ಪಾವ್ಲ್ ಅಥವಾ ಖಲ್ಸಾ ಎನ್ನುವ ಶುದ್ಧಿಕ್ರಿಯೆದೀಕ್ಷೆಹೊಂದಿದವರು ಎಲ್ಲರೂ ಒಂದು ಬಳಗದವರಂತೆ ಪ್ರೀತಿಯಿಂದ ಹೊಂದಿ ಬಾಳಬೇಕು ಎನ್ನುವುದು ಈ ಧರ್ಮದ ಕರೆ ಆಗಿರುತ್ತದೆ.

ಕಾಲವು ಕಳೆದಂತೆ ಸಿಖ್ ಮತೀಯರಲ್ಲಿ ತಾತ್ತ್ವಿಕವಾಗಿ ಮತಭೇದ ಉಂಟಾಯಿತು. ಆದರ ಫಲವಾಗಿ ಕೆಲವು ಹೊಸ ಪಂಥಗಳು ಹುಟ್ಟಿಕೊಂಡವು. ಅವುಗಳು ಸಿಖ್ ಮತದ ಮೂಲಸಿದ್ಧಾಂತಗಳನ್ನು ಸ್ವಲ್ಪ ಉಳಿಸಿಕೊಂಡು ಕೆಲವು ವಿಚಾರಗಳಲ್ಲಿ ತಮ್ಮದೇ ಆದ ನಿಲವನ್ನು ತಳೆದವು. ಹೀಗೆ ಮೂಡಿಬಂದ ಮುಖ್ಯವಾದ ಹೊಸ ಪಂಥಗಳು ಮೂರು. ಅವು ಯಾವುವೆಂದರೆ :

೧. ನಿರಂಕಾರಿ ಪಂಥ, ೨. ನಾಮಧಾರಿ ಪಂಥ, ೩. ರಾಧಾಸ್ವಾಮಿ ಪಂಥ,

ಈ ಪಂಥದವರು ತಾವು ಸಿಖ್ ಪಂಥದವರಲ್ಲ ಎಂದು ಹೇಳಿ ನೂತನ ಪಂಥದವರು ಎಂಬುದಾಗಿ ಬಾಳುತ್ತಿದ್ದಾರೆ. ಆದರೆ ವೇಷಭೂಷಣಗಳಲ್ಲಿ, ಅನೇಕ ಆಚಾರವಿಚಾರಗಳಲ್ಲಿ ಸಿಖ್ ಮತದ ತತ್ತ್ವವಿಚಾರಗಳನ್ನು ಹೊಂದಿರುತ್ತಾರೆ. ಗುರು, ನಾಮಜಪ, ಧ್ಯಾನ, ಗುರುಭಕ್ತರೆಲ್ಲ ಒಂದು ಬಳಗದವರು ಎಂಬ ಭಾವನೆ ಈ ಎಲ್ಲ ಪಂಗಡದವರಲ್ಲೂ ಇವೆ. ಈ ಮೂರು ಪಂಥದವರಿಗೂ ಇಂದು ಬೇರೆ ಬೇರೆ ಗುರುಪರಂಪರೆ, ಆರಾಧನಾಕೇಂದ್ರಗಳು, ಧರ್ಮಪರಿಪಾಲನಾ ಸೇವಾಸಂಸ್ಥೆಗಳು ಭಾರತದಲ್ಲಿ ಮಾತ್ರವಲ್ಲ ಹೊರದೇಶಗಳಲ್ಲೂ ಇವೆ.

ಸಿಖ್ಖರು ಪರಸ್ಪರ ಭೇಟಿಯಾದಾಗ ತಮ್ಮ ಧರ್ಮಸಂಪ್ರದಾಯದಂತೆ ಗುರುಭಕ್ತಿ ಪ್ರಬೋಧಕವಾದ ನುಡಿಗಟ್ಟಿನೊಡನೆ ಸಂಬೋಧಿಸುತ್ತಾರೆ. 'ಸತ್ ಶ್ರೀ ಅಕಾಲ್' ಎಂದರೆ ಸತ್ಯವೇ ದೇವರು ಎಂಬುದಾಗಿ ತಾತ್ಪರ್ಯ.

'ವಾಹ ಗುರುಜಿ ಕ ಖಲ್ಸಾ' ಎಂಬುದು ಇನ್ನೊಂದು ನುಡಿಗಟ್ಟು. ಸಿಖ್ಖರು ಭಗವಂತ ನಿಂದ ಆರಿಸಲ್ಪಟ್ಟವರು ಎನ್ನುವುದು ಇದರ ಅರ್ಥ. ಇದಕ್ಕೆ ಉತ್ತರವಾಗಿ 'ವಾಹ್ ಗುರುಜಿ ಕೆ ಫತೇ' ಎನ್ನುವುದು ಕ್ರಮ. ಅಂದರೆ ಪರಮಾತ್ಮನಿಗೆ (ಗುರುದೇವನಿಗೆ) ಜಯವಾಗಲಿ ಎಂದು ಇದರ ತಾತ್ಪರ್ಯ.

ಈ ನುಡಿರೂಪಗಳನ್ನು ಸಿಖ್ಖರು ಪರಸ್ಪರ ಭೇಟಿ ಆದಾಗ, ಸಭೆಸಮಾರಂಭಗಳಲ್ಲಿ ವಿಜಯಕ್ಕಾಗಿ ಹಾರೈಸುವಾಗ, ಪ್ರಾರ್ಥಿಸುವಾಗ, ಘೋಷಿಸುವಾಗ ಬಳಸುತ್ತಾರೆ.

**ಸಿಖ್‌ರ ದೇವಮಂದಿರವಾದ ಗುರುದ್ವಾರದಲ್ಲಿ ನಡವಳಿಕೆಗಳು**

ಸಿಖ್ಖರ ಗುರುದ್ವಾರದಲ್ಲಿ ಪ್ರತಿದಿವಸ ಕ್ಲಪ್ತ ಸಮಯದಲ್ಲಿ ಗ್ರಂಥಸಾಹೇಬ್‌ಗೆ ಪೂಜೋಪಚಾರಗಳು ನಡೆಯುತ್ತವೆ. ಗ್ರಂಥಸಾಹೇಬವನ್ನು ಸುಂದರ ಕಸೂತಿ, ಅಲಂಕಾರದಿಂದ ಕೂಡಿದ ರೇಶ್ಮೆವಸ್ತ್ರದಲ್ಲಿ ಶೃಂಗರಿಸಿ ಯಥೋಚಿತವಾದ ಪೀಠದಲ್ಲಿ ಇಟ್ಟಿರುತ್ತಾರೆ. ಪ್ರತಿದಿವಸ ಪ್ರಾತಃಕಾಲದಲ್ಲಿ ವಿಧಿಯುಕ್ತವಾಗಿ ಈ ಪುಣ್ಯಗ್ರಂಥವನ್ನು ಪುಟ ತೆರೆದು ಬಿಡಿಸಿ ಇಡುತ್ತಾರೆ. ಸಂಜೆ ವೇಳೆಗೆ ವಿಧಿಯುಕ್ತವಾಗಿ ಪುಟ ಮುಚ್ಚಿ ರೇಷ್ಮೆ ಪಟ್ಟೆಯಿಂದ ಹೊದಿಸಿ ವಿಶ್ರಾಂತಿಯಲ್ಲಿರಿಸುತ್ತಾರೆ. ಭಕ್ತಾದಿಗಳು ಮಂದಿರಕ್ಕೆ ಪ್ರವೇಶಿಸು ವಾಗ ಶಿರವಸ್ತ್ರಧಾರಿಗಳಾಗಿಯೇ ಇರಬೇಕು. ಪ್ರವೇಶಿಸಿ ಗುರುಗ್ರಂಥಸಾಹೇಬ್ ಬಳಿ ತೆರಳಿ ಯಥಾಸುಶಕ್ತಿ ಕಾಣಿಕೆಯನ್ನು ಪವಿತ್ರ ಗ್ರಂಥದ ಮೇಲೆ ಇಡಬೇಕು. ಆಮೇಲೆ ಮೊಣಕಾಲೂರಿ ಶಿರಬಾಗಿ ನೆಲಕ್ಕೆ ಹಣೆ ಮುಟ್ಟಿಸಿ ಪರಮಗುರು-ಪರಮಾತ್ಮಶಕ್ತಿಯ ಮೂರ್ತಸ್ವರೂಪವೇ ಎಂಬ ಭಕ್ತಿಭಾವದಿಂದ ಗ್ರಂಥಸಾಹೇಬ್‌ಗೆ ನಮಸ್ಕರಿಸಬೇಕು. ಗ್ರಂಥಸಾಹೇಬದ ಪುಟಗಳನ್ನು ಭಕ್ತಾದಿಗಳು ಓದಿ ಗುರುಸೇವೆ ಮಾಡುವುದು ಸಿಖ್ ಗುರುದ್ವಾರಗಳಲ್ಲಿ ಕಂಡುಬರುವ ಸೇವಾವೈಶಿಷ್ಟ್ಯ. ಧಾರ್ಮಿಕ ಪ್ರವಚನ, ಸಂಗೀತ, ಅನ್ನಸಂತರ್ಪಣೆ, ಸಿಹಿತಿಂಡಿ ಪ್ರಸಾದವಿತರಣೆ, ಇವೆಲ್ಲ ಸಿಖ್ ಗುರುದ್ವಾರದಲ್ಲಿ ಕಂಡು ಬರುವ ಧಾರ್ಮಿಕ ವಿಧಿ-ಆಚರಣೆಗಳ ವೈಶಿಷ್ಟ್ಯವಾಗಿವೆ.

**ಸಿಖ್‌ರ ಹಬ್ಬಹರಿದಿನಗಳು**

ಸಿಖ್ಖರು ತಮ್ಮದೇ ಆದ ಮುಖ್ಯವಾದ ಆರು ಹಬ್ಬಗಳನ್ನು ವರ್ಷದಲ್ಲಿ ಆಚರಿಸುತ್ತಾರೆ. ಜೊತೆಗೆ ಹೋಳಿ ಮತ್ತು ದೀಪಾವಳಿ ಹಬ್ಬಗಳನ್ನು ವಿಶಿಷ್ಟ ರೀತಿಯಲ್ಲಿ ಆಚರಿಸುತ್ತಾರೆ. ಸಿಖ್ಖರ ಪ್ರಮುಖ ಹಬ್ಬಗಳು ಯಾವುವೆಂದರೆ :

೧. ಗುರುನಾನಕರ ಜನ್ಮದಿನ.

೨. ಗುರು ಗೋವಿಂದ ಸಿಂಗರ ಜನ್ಮದಿನ,

೩. ಐದನೇ ಗುರು ಅರ್ಜುನ ಸಿಂಹರ ಬಲಿದಾನದ ದಿನ.

೪. ಒಂಬತ್ತನೇ ಗುರು ತೇಜಬಹದ್ದೂರರ ಬಲಿದಾನದ ದಿನ.

೫. ಗುರು ಗೋವಿಂದ ಸಿಂಗರು ಮೂಲತಃ ಖಲ್ಸಾ (ಶುದ್ಧೀಕರಣಕ್ರಿಯೆ) ಪ್ರಾರಂಭ ಮಾಡಿದ ಪವಿತ್ರ ದಿವಸ.

೬. ಹೋಲ ಮೊಹಲ್ಲಾ (ಜನಾಂಗದವರ ಬಾಂಧವ್ಯದ ಆಚರಣಾದಿವಸ).

ಹಿಂದೂಗಳು ಆಚರಿಸುವ ಸಂತ ಮಹಾತ್ಮರ ಜಯಂತಿ ಹಾಗೂ ಇತರ ಪರ್ವಕಾಲದ ಆಚರಣೆಗಳಲ್ಲಿ ಅನೇಕವನ್ನು ಸಿಖ್ ಜನಾಂಗದವರು ಆಚರಿಸುತ್ತಾರೆ. ಆಚರಣೆಗಳು ಗುರುದ್ವಾರದಲ್ಲಿ ಆರಾಧನೆ, ಊರಿನ ಬೀದಿಗಳಲ್ಲಿ ಉತ್ಸವ ಮೂಲಕ ಮೆರವಣಿಗೆ, ಪ್ರಸಾದವಿತರಣೆ—ಸಂಗೀತ, ನೃತ್ಯ ಇತ್ಯಾದಿ ಕಾರ್ಯಕ್ರಮಗಳಿಂದ ಕೂಡಿರುತ್ತವೆ. ಮೆರವಣಿಗೆ ಎಂದರೆ 'ಗ್ರಂಥಸಾಹೇಬ'ವನ್ನು ಸಾಲಂಕೃತ ತೇರಿನಲ್ಲಿಟ್ಟು ವಾದ್ಯಘೋಷ, ನೃತ್ಯ, ಸಂಗೀತ ಇತ್ಯಾದಿ ಕಾರ್ಯಚಟುವಟಿಕೆಗಳಿಂದ ಕೂಡಿ ನಡೆಸುವ ಕಾರ್ಯಕ್ರಮ.

ಸಿಖ್ಖರು ವೀರಜನಾಂಗದವರು. ಧರ್ಮಕ್ಕಾಗಿ, ಸತ್ಯಕ್ಕಾಗಿ ತಮ್ಮ ಸರ್ವಸ್ವವನ್ನೂ ಅರ್ಪಿಸಿ ಹೋರಾಟ ನಡೆಸಿ ಜನಾಂಗ ಹಾಗೂ ದೇಶವನ್ನು ರಕ್ಷಿಸಿದ ವೀರರು. ವೀರತನ ಜೀವನದಲ್ಲಿ ಅಗತ್ಯ, ಹೋರಾಟ ಅನಿವಾರ್ಯ, ತತ್ತ್ವಸಂರಕ್ಷಣೆಗಾಗಿ, ಆದರ್ಶಪಾಲನೆಗಾಗಿ ಪ್ರಾಣಾರ್ಪಣೆ ಮಾಡಲು ಎಲ್ಲರೂ ಸಿದ್ಧರಿರಬೇಕು ಎಂಬುದಾಗಿ ನಂಬಿರುವ ಸಿಖ್ಖರು ಸತ್ವಶಾಲಿ, ಸಾಹಸಿ ಜನಾಂಗದವರು. ಪ್ರಬಲವಾದ ಸಿಖ್ ಸಾಮ್ರಾಜ್ಯವನ್ನು ಕಟ್ಟಿ ಸಾಹಸ-ವೈಭವಗಳಿಂದ ಬಾಳಿ ಬೆಳಗಿದ ಸಿಖ್ ಜನಾಂಗದವರು ಭಾರತದಲ್ಲಿ ಇಂದು ಶಕ್ತಿಶಾಲಿಯಾದ ರಾಷ್ಟ್ರನಿರ್ಮಾಪಕ, ರಾಷ್ಟ್ರರಕ್ಷಕ, ಧರ್ಮಪರಿಪಾಲಕ ಜನಾಂಗವಾಗಿ ಬೆಳಗುತ್ತಿದ್ದಾರೆ. ಹಿಂದೂಧರ್ಮದ ಸನಾತನಶಕ್ತಿಯ ಅಭಿವ್ಯಕ್ತಿಯಾಗಿ ಬೆಳಗಿ ಬಾಳುತ್ತಿರುವ ಸಿಖ್ ಜನಾಂಗದವರು ಸಾಗರದಲ್ಲಿ ಕಾಣುವ ಅಲೆಯಂತೆ ಹಿಂದೂಧರ್ಮದಿಂದ ಬೇರೆಯಾಗಿದ್ದಾರೆ. ಅಲೆಗೂ ಸಾಗರಕ್ಕೂ ಸಂಬಂಧವಿರುವಂತೆ ಹಿಂದೂಧರ್ಮಕ್ಕೆ ಮೂಲವಾಗಿ ಸಂಬಂಧವುಳ್ಳವರಾಗಿದ್ದಾರೆ.

ವೀರಜನಾಂಗವಾದ ಸಿಖ್ಖರ ಧಾರ್ಮಿಕ ಹಾಗೂ ಸಾಮಾಜಿಕ ಚಿಹ್ನೆ ಅವರ ಸತ್ವ-ಸಾಹಸದ ಪ್ರತೀಕದಂತಿದೆ. ಸಿಖ್ಖರ ಗುರುದ್ವಾರಗಳಲ್ಲಿ-ಗೌರವಾನ್ವಿತ ಸ್ಥಳಗಳಲ್ಲಿ ಕಂಡು ಬರುವ ಅರಸಿನ ವರ್ಣದ ಸಿಖ್ ಧ್ವಜದಲ್ಲಿ ಅಡ್ಡಲಾಗಿ ಕೂಡಿ ಆವೃತವಾಗಿರುವ ಎರಡು ಖಡ್ಗಗಳು, ಮಧ್ಯೆ ಒಂದು ಕಬ್ಬಿಣದ ಬಳೆ, ಅದರ ಮಧ್ಯೆ ಒಂದು ಚುಚ್ಚುಕತ್ತಿ ಇವಿಷ್ಟು ಅಂಕಿತಗೊಳಿಸಲ್ಪಟ್ಟಿವೆ.

ಸಿಖ್ ಧರ್ಮದ ಅತ್ಯಂತ ಪ್ರಸಿದ್ಧ ಹಾಗೂ ಪ್ರಮುಖವಾದ ನಾಮಜಪ, ಸಿಖ್ ಜನಾಂಗದವರ ಪರಮ ಗಾಯಿತ್ರಿಮಂತ್ರ ಎನ್ನುವಂತಹ ಪಾವನ ಗುರುಮಂತ್ರ ಸಿಖ್ಖರಿಗೆಲ್ಲ ಮಹತ್ವಪೂರ್ಣವಾದ ಮಂತ್ರವಾದಂತೆ ಇತರರಿಗೂ ಕೂಡ ಸ್ಫೂರ್ತಿದಾಯಕವಾದ ಮಂತ್ರವೇ ಸರಿ.

**ಓಂಕಾರ ಸತಿ ನಾಮು ಕರತಾ ಪುರುಖ ನಿರಭೌ ನಿರವೈರು,**
**ಅಕಾಲ ಮೂರತಿ, ಅಜೂನಿ, ಸೈಭಂಗ ಗುರುಪ್ರಸಾದಿ**

**-ಮೂಲಮಂತ್ರ, ಜಪ್‌ಜೀ**

"ಓಂ ಎಂದು ವಾಚಕವಾಗಿರುವ ಪರಮತತ್ತ್ವ ಒಬ್ಬನೇ. ಅವನು ಸತ್ಯನು ಅಥವಾ ಯಾವಾಗಲೂ ಇರತಕ್ಕವನು. ಅವನು ಸೃಷ್ಟಿಕರ್ತನು ಹೇಗೋ ಹಾಗೆಯೇ ಸೃಷ್ಟಿಯಲ್ಲಿ ವ್ಯಾಪ್ತನೂ ಆಗಿದ್ದಾನೆ. ಅವನು ನಿರ್ಭಯನು. ಅವನಿಗೆ ಯಾರ ಒಡನೆಯೂ ಹಗೆತನವಿಲ್ಲ. ಅವನ ಅಸ್ತಿತ್ವದ ಮೇಲೆ ಕಾಲದ ಪ್ರಭಾವ ಇಲ್ಲ. ಅವನು ಹುಟ್ಟುವುದಿಲ್ಲ. ಅವನು ಸ್ವಯಂಪ್ರಕಾಶನು. ಅವನ ಸಾಕ್ಷಾತ್ಕಾರ ಗುರುಕೃಪೆಯಿಂದ ಮಾತ್ರ ಸಾಧ್ಯ."

# ಥಿಯೋಸೊಫಿ ಮತ್ತು ಥಿಯೋಸೊಫಿಕಲ್ ಸೊಸೈಟಿ

## ೧. ಬ್ರಹ್ಮವಿದ್ಯೆ ಮತ್ತು ಬ್ರಹ್ಮವಿದ್ಯಾಸಂಸ್ಥೆ

(ವಿ.ಸೂ.—ಥಿಯೋಸೊಫಿಕಲ್ ಸೊಸೈಟಿಯು ನೇರವಾಗಿ ಹಿಂದೂಧರ್ಮವನ್ನು ಆಧರಿಸಿರುವ ಸಂಸ್ಥೆ ಅಲ್ಲ. ಆದರೆ ಅದು ಬಹುಮಟ್ಟಿಗೆ ಹಿಂದೂಧರ್ಮದ ಸಿದ್ಧಾಂತಗಳನ್ನು ಪುಷ್ಟೀಕರಿಸಿ ನಡೆದುಕೊಳ್ಳುವ, ತತ್ತ್ವಪ್ರಚಾರಮಾಡುವ ಸಂಸ್ಥೆಯಾಗಿದೆ. ಬಹುಮಂದಿ ಹಿಂದೂ ಬಾಂಧವರು ಅದರಲ್ಲಿ ಸೇರಿ ಧರ್ಮಜಾಗೃತಿಗಾಗಿ ದುಡಿಯುತ್ತಿದ್ದಾರೆ. ಹಾಗಾಗಿ ಈ ಸಂಸ್ಥೆಯ ಸ್ಥೂಲ ಪರಿಚಯವನ್ನು ಓದುಗರಿಗೆ ಇಲ್ಲಿ ನೀಡಲಾಗಿದೆ.)

ಥಿಯೋಸೊಫಿ ಎಂದರೆ ಬ್ರಹ್ಮವಿದ್ಯೆ ಎಂದು ತಾತ್ಪರ್ಯ. ಥಿಯೋಸೊಫಿ ಎನ್ನುವುದು ಮೂಲವಾಗಿ ಗ್ರೀಕ್ ಭಾಷೆಯ ಶಬ್ದ. ಥಿಯೋಸೊಫಿಯಾ ಎಂಬುದರ ಆಂಗ್ಲ ರೂಪಾಂತರ. ಥಿಯೊಸ್ ಎಂದರೆ ದೇವರು ಎಂದು ಗ್ರೀಕ್ ಭಾಷೆಯಲ್ಲಿ ತಾತ್ಪರ್ಯ. ಸೊಫಿಯಾ ಎಂದರೆ ವಿದ್ಯೆ ಎಂದು ಸಾರಾರ್ಥ. ಹಾಗಾಗಿ ಥಿಯೋಸೊಫಿ ಎಂದರೆ 'ಬ್ರಹ್ಮವಿದ್ಯೆ' ಎಂದು ಸಾರಾಂಶವಾಗಿ ಹೇಳಬಹುದು. ಹಿಂದೂಧರ್ಮದಲ್ಲಿ ವಿಶ್ವಕ್ಕೆಲ್ಲ ಮೂಲಭೂತವಾಗಿರುವ, ಮಾನವನ ಅಂತರ್ಯದಲ್ಲಿ ಹುದುಗಿರುವ, ಅವನು ಜೀವನಾಂತ್ಯದಲ್ಲಿ ಸೇರುವ ಪರಾತ್ಪರ ಚೈತನ್ಯಕ್ಕೆ ಬ್ರಹ್ಮ ಎನ್ನುತ್ತಾರೆ. ಅದರ ತಿಳಿವಳಿಕೆಯನ್ನೇ ಗ್ರೀಕ್ ಭಾಷೆಯಲ್ಲಿ ಥಿಯೋಸೊಫಿ ಎಂದು ಕರೆದಿರುತ್ತಾರೆ. ಮಾನವನು ಇಡೀ ವಿಶ್ವದ ಮೂಲವಾದ ದಿವ್ಯಪರಾತ್ಪರಚೈತನ್ಯ, ತನ್ನಲ್ಲಿ ಅಡಗಿರುವ ದಿವ್ಯಚೈತನ್ಯ ಇವುಗಳನ್ನು ಅರಿತುಕೊಂಡು ದೈವೀಸಂಕಲ್ಪವನ್ನು ಅರ್ಥಮಾಡಿಕೊಂಡು ತನ್ನ ಪ್ರಜ್ಞೆಯನ್ನು ಕ್ರಮೇಣ ವಿಕಾಸಪಡಿಸುತ್ತಾ ಕೊನೆಗೆ ಪರಾತ್ಪರಚೈತನ್ಯದಲ್ಲಿ ಲೀನವಾಗುತ್ತಾನೆ. ಈ ದೈವಿಕ ನಿಯಮವೆಂದರೇನು ? ಸ್ವಭಾವವೇನು ? ಮಾನವನ ನಿಜವಾದ ಸ್ವರೂಪವೇನು ? ವಿಶ್ವವನ್ನು ನಿಯಮಿಸತಕ್ಕ ಕಟ್ಟಳೆಗಳಾವುವು ? ಇವುಗಳಿಗೆ ಸಂಬಂಧಿಸಿದಂತೆ ದಿವ್ಯಜ್ಞಾನವನ್ನು ಪ್ರಸಾರಮಾಡುವ ಸಂಸ್ಥೆಯೇ ಥಿಯೋಸೊಫಿಕಲ್ ಸೊಸೈಟಿ. ಇದರ ಇನ್ನೊಂದು ಹೆಸರು 'ಬ್ರಹ್ಮವಿದ್ಯಾಸಮಾಜ.'

ಥಿಯೋಸೊಫಿ ಎಂದರೆ ಎಲ್ಲ ಧರ್ಮಗಳ ಸಾರಸರ್ವಸ್ವವಾದ ಒಂದು ಪಂಥ. ಅದು ಯಾವುದೇ ಒಂದು ಮತ ಅಥವಾ ಜನಾಂಗದವರ ಪಂಥವಾಗಿಲ್ಲ. ಆಗಲೂ ಸಾಧ್ಯವಿಲ್ಲ. ಬ್ರಹ್ಮವಿದ್ಯಾಸಮಾಜವು ನೀಡುವ ತತ್ತ್ವದ ತಿಳಿವಳಿಕೆಯಿಂದ ಜೀವನವು ಅರ್ಥಪೂರ್ಣ ಆಗುವುದು ಮಾತ್ರವಲ್ಲದೆ ಜೀವನವಿಕಾಸಕ್ಕೆ ಬೇಕಾದ ಪ್ರೇಮ ಹಾಗೂ ನ್ಯಾಯದ ಅರಿವನ್ನುಂಟುಮಾಡುತ್ತದೆ. ಮಾನವನು ಅಂತರ್ಯದಲ್ಲಿ ದಿವ್ಯಚೈತನ್ಯವನ್ನು ಪಡೆದಿರುತ್ತಾನೆ. ದೇಹೇಂದ್ರಿಯಗಳು ಮಾನವನ ಸೇವಕರು. ಸಾವು ಎಂದರೆ ಮಾನವಜೀವನ ಪ್ರವಾಹದಲ್ಲಿ ಒಂದು ಘಟ್ಟ. ಮಾನವನ ಜೀವಿತವು ಕರ್ಮಕಟ್ಟಳೆಗಳಿಗೆ ಒಳಪಟ್ಟಿದೆ. ಜನ್ಮ-ಪುನರ್ಜನ್ಮಗಳು ಮಾನವನಿಗೆ ಅನಿವಾರ್ಯ. ಸ್ವಪ್ರಯತ್ನದಿಂದ ಪರಿಶುದ್ಧವಾದ ಜೀವಿತದಿಂದ ಜೀವಿಯು ಜೀವನವಿಕಾಸ ಹಾದಿಯಲ್ಲಿ ಪ್ರಗತಿಹೊಂದುತ್ತಾನೆ. ಪ್ರಗತಿ ಹೊಂದುತ್ತಾ ಕೊನೆಗೆ ನಿತ್ಯತ್ವಕ್ಕೆ ಸಂಬಂಧಿಸಿದ ಸಾಕ್ಷಾತ್ಕಾರಪಡೆಯುತ್ತಾನೆ. ಮಾನವನ ನಡೆನುಡಿಗಳು ತನ್ನ ಮೇಲೆ ಪ್ರಭಾವ ಬೀರುವಂತೆ ತನ್ನ ಸಮಾಜದ ಮೇಲೂ ಪ್ರಪಂಚದ ಮೇಲೂ ಪ್ರಭಾವ ಬೀರುತ್ತದೆ. ಈ ಪ್ರಪಂಚದ ಎಲ್ಲ ಆಗುಹೋಗುಗಳನ್ನೂ ಪ್ರಭಾವಿಸುವ ಬೃಹತ್ತಾದ ದೈವಿಕ ಯೋಜನೆ–ನಿಯಮವೊಂದಿದೆ. ಮನುಷ್ಯನು ತನ್ನಲ್ಲಿ ಅಡಗಿರುವ ದೈವಿಕ ಶಕ್ತಿಯನ್ನು ಪೂರ್ತಿಯಾಗಿ ಬೆಳಸಿ ಪ್ರಕಟಪಡಿಸಿ ಪರಮಶಾಂತಿಯನ್ನು ಪಡೆಯಬೇಕಾದರೆ ವಿಶ್ವದ ದೈವಿಕ ನಿಯಮವು ಫಲಕಾರಿಯಾಗುವಂತೆ ಸಹಕರಿಸಿ ದುಡಿಯಬೇಕು. ಅದಕ್ಕಾಗಿ ಮಾನವಕುಲ ಒಂದು—ಮಾನವ ಒಳಗದಲ್ಲಿ ಒಲವು-ಒಗ್ಗಟ್ಟು ಮೂಡಿಬರುವಂತೆ ನಡೆನುಡಿಗಳಿಂದ ವರ್ತಿಸುತ್ತ ಬಾಳಬೇಕು ಎಂಬುದು ಥಿಯೋಸೊಫಿ ಪಂಥದ ನಿಲುವು.

ಥಿಯೋಸೋಫಿಯು (ಬ್ರಹ್ಮವಿದ್ಯೆಯು) ಎಲ್ಲ ಮತಗಳಿಗೂ ಮೂಲಸ್ವರೂಪವಾದ ಸನಾತನಬ್ರಹ್ಮವಿದ್ಯೆ. ಎಲ್ಲ ಮತಗಳಿಗೂ ಮೂಲತತ್ತ್ವವಾದ ಏಕದೇವರು, ಅವನ ಸೃಷ್ಟಿ, ಸ್ಥಿತಿ, ಸಂಹಾರತತ್ತ್ವಗಳು, ಸಾಧುಸಂತರ ಸಮಾಜ, ಜೀವನದಲ್ಲಿ ನೀತಿನಡತೆಗಳ ಆತ್ಮ, ಉಪಾಸನೆಯ ಮಹತ್ವ, ನಿಃಸ್ವಾರ್ಥಸೇವೆ, ಜೀವಾತ್ಮ–ಪರಮಾತ್ಮರ ಐಕ್ಯತೆಯ ಸಾಧನೆ ಬಗ್ಗೆ ರಹಸ್ಯ ದೀಕ್ಷೆ, ಬೋಧನೆ, ಬ್ರಹ್ಮಾಂಡಕ್ಕೂ ಪಿಂಡಾಂಡಕ್ಕೂ ಇರುವ ಸಂಬಂಧ, ದೇವರ ಅನೇಕರೂಪಗಳಲ್ಲಿ ಏಕತ್ವ, ಪರಮಾತ್ಮನ ಸಾಕ್ಷಾತ್ಕಾರಕ್ಕೆ ಇರುವ ವಿವಿಧ ಸಾಧನಾಪಥಗಳು ಇವನ್ನೆಲ್ಲ ಸಾರತಃ ಥಿಯೋಸೊಫಿ ಪಂಥದವರು ಒಪ್ಪುತ್ತಾರೆ. ಹಾಗಾಗಿ ಬ್ರಹ್ಮವಿದ್ಯಾ ಸಮಾಜದಲ್ಲಿ ಹಿಂದು, ಮುಸ್ಲಿಂ, ಕ್ರೈಸ್ತ, ಪಾರ್ಸಿ, ಬೌದ್ಧ ಇತ್ಯಾದಿ ವಿವಿಧ ಮತದವರಿಗೂ, ಒಳಪಂಥದವರಿಗೂ ಸದಸ್ಯರಾಗಿ ಪರಸ್ಪರ ಪ್ರೀತಿ-ಸಾಮರಸ್ಯದಿಂದ ಬಾಳಲು ಅವಕಾಶವಿದೆ.

ಈ ಹಿನ್ನೆಲೆಯೊಡನೆ ಬ್ರಹ್ಮವಿದ್ಯಾ ಸಮಾಜದ ಉದ್ದೇಶಗಳ ವಿವರ ಹೀಗಿದೆ :

(೧) ಜಾತಿ, ಕುಲ, ಮತ, ಲಿಂಗ, ದೇಶ ಅಥವಾ ವರ್ಣಗಳ ಭೇದವನ್ನು ಗಣನೆಗೆ ತೆಗೆದುಕೊಳ್ಳದೆ ಮಾನವರೆಲ್ಲರ ಸಾರ್ವತ್ರಿಕ ಸಹೋದರಭಾವದ ಒಂದು ಅಂಕುರವನ್ನು ರೂಪಿಸುವುದು.

(೨) ವಿಭಿನ್ನ ಧಾರ್ಮಿಕ ಮತ, ತತ್ತ್ವ, ವಿಜ್ಞಾನಗಳ ತುಲನಾತ್ಮಕ ಅಧ್ಯಯನಕ್ಕೆ ಪ್ರೋತ್ಸಾಹ ನೀಡುವುದು.

(೩) ಪ್ರಕೃತಿಯ ನಿಗೂಢ ನಿಯಮಗಳನ್ನು ಮತ್ತು ಮಾನವನಲ್ಲಿ ಅಡಗಿರುವ ಸುಪ್ತ ಶಕ್ತಿಗಳ ಮಹತ್ವ–ಪ್ರಕಾಶನವನ್ನು ಕಂಡುಹಿಡಿಯುವುದು.

ಥಿಯೋಸೊಫಿ ಪಂಥದಲ್ಲಿ ಈ ಮೂರು ಮಹಾನ್ ಸತ್ಯವನ್ನು ಅಂಗೀಕರಿಸಲಾಗಿದೆ :

(೧) ಮಾನವನ ಆತ್ಮವು ಅಮರವಾದುದು. ಅದರ ವಿಕಾಸ–ಪ್ರಕಾಶಗಳಿಗೆ ಮಿತಿ ಇಲ್ಲ,

(೨) ಜೀವನ ಚೇತನ ನಮ್ಮ ದೇಹದಲ್ಲಿ ಅಡಗಿದೆ. ಅದರ ಅರಿವನ್ನು ಬಯಸು ವವನಿಗೆ, ಯತ್ನಶೀಲನಾದವನಿಗೆ ಅದು ಪ್ರಜ್ಞಾಮೂಲಕ ಗೋಚರಿಸುತ್ತದೆ.

(೩) ಪ್ರತಿಯೊಬ್ಬನೂ ಅವನವನ ಮೇಲ್ಮೆ-ಕೀಳ್ಮೆಗಳನ್ನು ರೂಪಿಸಿಕೊಳ್ಳುವುದರಲ್ಲಿ ಸ್ವತಂತ್ರನಾಗಿರುತ್ತಾನೆ. ಅವನವನ ಕರ್ಮಕ್ಕೆ ಅನುಗುಣವಾಗಿ ಅವನಿಗೆ ಜಯ-ಅಪಜಯ ಗಳು ಲಭಿಸುತ್ತವೆ. ಜೀವಿಯ ಜೀವಿತದಲ್ಲಿ ಎಲ್ಲ ಆಗುಹೋಗುಗಳೂ ಕಾರ್ಯ-ಕಾರಣ ನಿಯಮದಿಂದ ಆಗುತ್ತವೆ.

ಬ್ರಹ್ಮವಿದ್ಯಾ ಸಮಾಜದ ತತ್ತ್ವ ಹಾಗೂ ನಂಬಿಕೆಯ ವಿಚಾರದಲ್ಲಿ ಬಹಳ ಕುತೂಹಲ ಕಾರಿಯಾದ ಹಾಗೂ ವಿಶೇಷವಾದ ಅಂಶವೆಂದರೆ ದಿವ್ಯವಿದ್ಯಾಯೋಗಿ ಪ್ರಭುಗಳು. ಇಡೀ ಜಗದ ಹಾಗೂ ಜನಕೋಟಿಯ ಆಗುಹೋಗುಗಳನ್ನು ನಿಯಂತ್ರಿಸುವವರು ದಿವ್ಯವಿದ್ಯಾ ಯೋಗಿ ಪ್ರಭುಗಳು-ಮಹಾತ್ಮರು ಎಂಬುದಾಗಿ ಬ್ರಹ್ಮವಿದ್ಯಾವಾದಿಗಳು ನಂಬುತ್ತಾರೆ. ಆಯಾಯ ಯುಗ, ಕಾಲಭಾಗಗಳಿಗೆ ಅನುಗುಣವಾಗಿ ಈ ದಿವ್ಯವಿದ್ಯಾಯೋಗಿಗಳು ಮಾನವದೇಹಧಾರಿಗಳು ಆಗುತ್ತಾರೆ. ದಿವ್ಯವಿದ್ಯಾಯೋಗಿಗಳ ಸೋದರವರ್ಗವೊಂದಿದೆ (Brotherhood). ಅದನ್ನು ಮಹಾನ್ ಶ್ವೇತ ಸಹೋದರ ಬಳಗ (Great White Brotherhood) ಎನ್ನುತ್ತಾರೆ. ಈ ಮಹಾತ್ಮರು ಮಾನವ ಬಳಗ ಹಾಗೂ ಅತಿಮಾನವ-ದೇವತಾಲೋಕದ ಬಳಗಕ್ಕೆ ಸಂಬಂಧದ ಸೇತುವೆಯಂತೆ ಇರುತ್ತಾರೆ, ಕೆಲವು ನಿಶ್ಚಿತ ಆಧ್ಯಾತ್ಮಿಕ ರಹಸ್ಯನಿಯಮಗಳನ್ನು ಪಾಲಿಸಿ ಪರಿಣತರಾದವರು ಈ ಮಹಾತ್ಮರ ನೇರ ಶಿಷ್ಯರಾಗಲು ಅವಕಾಶಹೊಂದುತ್ತಾರೆ. ಆಮೇಲೆ ಅವರೂ ಕೂಡ ಈ ದಿವ್ಯಸೋದರ ಬಳಗಕ್ಕೆ ಸೇರುತ್ತಾರೆ, ಜಗದ ಜನಕೋಟಿಯ ಆಧ್ಯಾತ್ಮಿಕ ಹಾಗೂ ಲೌಕಿಕ ಕಲ್ಯಾಣ ಕ್ಕಾಗಿ ನೆರವು ನೀಡುತ್ತಾ ದುಡಿಯಲು ಅರ್ಹರಾಗುತ್ತಾರೆ. ಈ ದಿವ್ಯಯೋಗಿಪ್ರಭುಗಳು (ಮಹಾತ್ಮರು) ದಿವ್ಯಶರೀರಧಾರಿಗಳಾಗಿ ಯುಗಧರ್ಮದ ಅಗತ್ಯಕ್ಕೆ ತಕ್ಕಂತೆ ಭೂಲೋಕದಲ್ಲಿ ಹಾಗೂ ಇತರ ಲೋಕಗಳಲ್ಲಿ ಇರುತ್ತಾರೆ, ಹಿಮಾಲಯ ಪರ್ವತಾ ವಳಿಯ ಪ್ರದೇಶದಲ್ಲಿ–ಟಿಬೆಟಿನಲ್ಲಿ ಈ ಯುಗಕ್ಕೆ ಸಂಬಂಧಿಸಿದಂತೆ ಜಗದ ಜನಕೋಟಿಯ ಒಳಿತಿಗಾಗಿ ಮಾರ್ಗದರ್ಶನ ನೀಡುವ ಮಹಾತ್ಮರು ನೆಲಸಿರುತ್ತಾರೆ. ಈ ಮಹಾತ್ಮರ ಜವಾಬ್ದಾರಿಯುತ ಒಕ್ಕೂಟ ಯುಗಯುಗಕ್ಕೆ ಬದಲಾಗುತ್ತದೆ. ಅವರಲ್ಲೂ ವಿವಿಧ ಯೋಗ್ಯತೆ, ಜವಾಬ್ದಾರಿ ಹಂತಗಳಿವೆ. ಮಹಾತ್ಮರನ್ನು ಬ್ರಹ್ಮವಿದ್ಯಾ ಸಮಾಜದವರಲ್ಲಿ ಕೆಲವರು ದರ್ಶನ ಮಾಡಿರುತ್ತಾರೆ. ಬ್ರಹ್ಮವಿದ್ಯಾತತ್ತ್ವಗಳ ಪ್ರಾಮಾಣಿಕ ಅನುಷ್ಠಾನ ದಿಂದ ಅವರನ್ನು ಇತರರೂ ಕಾಣಲು ಸಾಧ್ಯವಿದೆ. ಅವರಿಂದ ಬ್ರಹ್ಮವಿದ್ಯಾ ಸಮಾಜದ

ಮುಂದುವರಿದ ಸಾಧಕವರ್ಗದವರಿಗೆ ವಿವಿಧ ರೀತಿಯಲ್ಲಿ ಆಗಿಂದಾಗ್ಗೆ ಅರ್ಹತೆ ಮೇರೆ ಬೆಳಕು-ಮಾರ್ಗದರ್ಶನ ಸಿಗುತ್ತದೆ.

ಬ್ರಹ್ಮವಿದ್ಯಾ ಸಮಾಜಕ್ಕೆ ಸೇರಲು ಇರುವ ಪ್ರಮುಖ ಆಕರ್ಷಣೆಗಳು, ಉದ್ದೇಶ ಗಳನ್ನು ಹೀಗೆ ಕ್ರೋಢೀಕರಿಸಬಹುದು :

(೧) ಮಾನವ ಮಾನವರು ಪರಸ್ಪರ ಕರ್ಮದ ಕಟ್ಟುಕಟ್ಟಳೆಗಳನ್ನು ಸಡಿಲಿಸಲು ನೆರವಾಗಿ ತನ್ಮೂಲಕ ಜಗದ ಒಟ್ಟು ಕರ್ಮಕಟ್ಟಳೆಯ ಭಾರವನ್ನು ಸ್ವಲ್ಪವಾದರೂ ಕಡಿಮೆ ಮಾಡುವುದು.

(೨) ತಮ್ಮ ವಿಕಾಸದಿಂದ ಇತರರ ವಿಕಾಸಕ್ಕೆ ಪ್ರೇಮಪೂರ್ವಕವಾದ ಶುದ್ಧ ನಡೆನುಡಿ ಗಳ ಮೂಲಕ ಸಹಕಾರಿಯಾಗುವುದು.

(೩) ಜಗದ ಏಳಿಗೆಗಾಗಿ ಮತ, ಪಂಥ, ಜಾತಿ, ಜನಾಂಗಗಳ ಭೇದವನ್ನು ಭೇದಿಸಿ ಪ್ರೇಮ, ಸಹಾನುಭೂತಿ, ಸಹಕಾರ, ವಿವೇಕಗಳಿಂದ ಕೂಡಿ ವ್ಯಕ್ತಿ ನೆಲೆ ಹಾಗೂ ಸಾಂಘಿಕ ನೆಲೆಯಲ್ಲಿ ದುಡಿಯುವುದು.

(೪) ಯೋಗಸಾಧನೆ, ಮತೀಯ ಬಾಂಧವ್ಯ, ವಿವಿಧ ಮತಗಳ ಸಹನಾಶೀಲ-ಸ್ನೇಹಪೂರ್ಣ ಅಧ್ಯಯನ, ಮರಣಾನಂತರ ಜೀವನ, ಬ್ರಹ್ಮಾಂಡದ ಬೇರೆ ಬೇರೆ ಲೋಕ ಗಳ ವಿಚಾರ ತಿಳಿಯುವುದು, ದೇಹ ಹಾಗೂ ಜೀವನಕ್ಕೆ ಸಂಬಂಧಿಸಿದಂತೆ ಅಂತರಾಂತರದ ವಿವರ—ಕರ್ಮನಿಯಮಗಳ ರಹಸ್ಯವನ್ನು ಅರಿಯುವುದು, ಬ್ರಹ್ಮವಿದ್ಯಾ ಅನುಷ್ಠಾನ ಮಾಡುವುದು.

ಬ್ರಹ್ಮವಿದ್ಯಾಸಮಾಜವನ್ನು ಮೂಲತಃ ೧೮೭೫ರಲ್ಲಿ ದಿವ್ಯ ಮಹಾತ್ಮರ ಅಲೌಕಿಕ ರೀತಿಯ ದರ್ಶನ-ಮಾರ್ಗದರ್ಶನದಂತೆ ಮಹಾಮನೀಷಿ ಹಾಗೂ ಅತೀಂದ್ರಿಯಶಕ್ತಿ ಸಂಪನ್ನೆಯಾಗಿದ್ದ ರಷ್ಯನ್ ಮಹಿಳೆ ಮ್ಯಾಡಮ್ ಎಚ್. ಪಿ. ಬ್ಲಾವಟ್ಸ್ಕಿ ಮತ್ತು ಯೋಗವಿದ್ಯಾಸಂಪನ್ನ ಕರ್ನಲ್ ಎಚ್. ಎಸ್. ಓಲ್‌ಕಟ್ ಎಂಬವರು ಅಮೆರಿಕಾದಲ್ಲಿ ಸ್ಥಾಪಿಸಿದರು. ಭಾರತದ ಸನಾತನ ಧರ್ಮದ ದಿವ್ಯತತ್ತ್ವಗಳ ಬಹು ಅಂಶಗಳನ್ನು ಅಳವಡಿಸಿ, ಅನುಷ್ಠಾನದಲ್ಲಿ ಒಳಗೊಂಡ ಬ್ರಹ್ಮವಿದ್ಯಾ ಸಮಾಜವು ಅಮೆರಿಕಾದಿಂದ ಬದಲಿಸಿ ೧೮೮೦ರಲ್ಲಿ ಭಾರತದಲ್ಲಿ ತನ್ನ ಕೇಂದ್ರ ಕಛೇರಿಯನ್ನು ಸಂಸ್ಥಾಪಿಸಿತು. ಅಂತರ ರಾಷ್ಟ್ರೀಯ ವ್ಯಾಪ್ತಿಯ ಈ ಸಂಸ್ಥೆ ನೂರಾರು ಶಾಖೆಗಳನ್ನು ಹೊಂದಿದ್ದು ಇಂದು ಜಗತ್ತಿನ ವಿವಿಧೆಡೆ ೫೮ ರಾಷ್ಟ್ರಗಳಲ್ಲಿ ವ್ಯಾಪಕವಾಗಿ ಹರಡಿದೆ. ಈ ಸಂಸ್ಥೆಯ ಅಂತರ ರಾಷ್ಟ್ರೀಯ ಪ್ರಧಾನ ಕೇಂದ್ರವು ಮದ್ರಾಸ್‌ನ ಅಡ್ಯಾರು ಎಂಬಲ್ಲಿದೆ. ಅಲ್ಲಿ ಸಂಸ್ಥೆಯ ಅಧ್ಯಕ್ಷರು ನೆಲಸುತ್ತಾರೆ. ಭಾರತ ವಿಭಾಗಕ್ಕೆ ಸಂಬಂಧಿಸಿದಂತೆ ಬ್ರಹ್ಮವಿದ್ಯಾ ಸಮಾಜದ ಕೇಂದ್ರ ಕಛೇರಿಯು ವಾರಾಣಾಸಿಯಲ್ಲಿದೆ.

ಬ್ರಹ್ಮವಿದ್ಯಾ ಸಮಾಜದ ಶಾಖೆಗಳು ಭಾರತದ ಪ್ರಮುಖ ನಗರಗಳಲ್ಲಿ ಹಲವು ಪಟ್ಟಣ-ಊರುಗಳಲ್ಲಿಯೂ ಇವೆ. ಕಾಲವು ಕಳೆದಂತೆ ಬ್ರಹ್ಮವಿದ್ಯಾಸಮಾಜದವರಲ್ಲಿ ಕೆಲವೊಂದು ತಾತ್ತ್ವಿಕ ಭೇದಗಳನ್ನು ಅನುಸರಿಸಿ ಎರಡು ವರ್ಗವಾಗಿ ಬೇರೆಬೇರೆ ಎರಡು ಸಂಸ್ಥೆಗಳು ಬೆಳೆದುಬಂದಿವೆ. ಮೂಲವಾದ ಸಂಸ್ಥೆ ತುಂಬ ಹೆಚ್ಚಿನ ಶಾಖೆ ಹಾಗೂ ಸದಸ್ಯರನ್ನು ಹೊಂದಿದ್ದು ಅದು ದಿ ಥಿಯೋಸೊಫಿಕಲ್ ಸೊಸೈಟಿ (ಬ್ರಹ್ಮವಿದ್ಯಾ

ಸಮಾಜ) ಎಂಬ ಹೆಸರಿನಿಂದಲೇ ಮುಂದುವರಿದು ಬೆಳೆಯುತ್ತಿದೆ. ಸಂಸ್ಥೆಯಿಂದ ತಾತ್ತ್ವಿಕ ಭೇದಗಳೊಡನೆ ೧೯೦೯ರಲ್ಲಿ ಬೇರೆ ನೆಲೆಗೊಂಡ ಸಂಸ್ಥೆಯು ಯುನೈಟೆಡ್ ಲಾಡ್ಜ್ ಆಫ್ ಥಿಯೋಸೊಫಿಸ್ಟ್ಸ್ (ಬ್ರಹ್ಮವಿದ್ಯಾವಾದಿಗಳ ಸಂಯುಕ್ತ ಘಟಕ) ಎಂದು ದೇಶವಿದೇಶಗಳಲ್ಲಿ ಶಾಖೆಯನ್ನು ಒಳಗೊಂಡು ಬೆಳೆದು ಬಾಳುತ್ತಿದೆ. ಈ ಸಂಸ್ಥೆಯನ್ನು ಸ್ಥಾಪಿಸಿದವರು ಮಿ॥ ರಾಬರ್ಟ್ ಕ್ರೂಸ್‌ಬಿ ಎಂಬವರು. ಇದರ ಅಂತರರಾಷ್ಟ್ರೀಯ ಕೇಂದ್ರ ಕಛೇರಿ ಅಮೆರಿಕಾದ ಲಾಸ್ ಎಂಜಲೀಸ್ ನಗರದಲ್ಲಿದೆ. ಭಾರತದ ಮಟ್ಟಿಗೆ ಕೇಂದ್ರ ಕಛೇರಿಯು ಮುಂಬಯಿಯಲ್ಲಿದೆ.

ವಾರಕ್ಕೊಮ್ಮೆ, ತಿಂಗಳಿಗೊಮ್ಮೆ, ವರ್ಷಕ್ಕೊಮ್ಮೆ ಎಂದು ವಿವಿಧ ರೀತಿಯ ಕಾರ್ಯಕ್ರಮಗಳು, ಬ್ರಹ್ಮವಿದ್ಯೆ ಹಾಗೂ ಧಾರ್ಮಿಕ ವಿಚಾರಗೋಷ್ಠಿಗಳು, ವ್ಯಾಸಂಗಗೋಷ್ಠಿಗಳು, ಉಪನ್ಯಾಸ ಕಾರ್ಯಕ್ರಮಗಳು, ಸ್ನೇಹಕೂಟಗಳು, ಉಪಾಸನೆ-ಸೋದರತ್ವದ ಒಕ್ಕೂಟಗಳು—ಎಂಬುದಾಗಿ ವಿವಿಧ ರೀತಿಯ ಕಾರ್ಯಕ್ರಮಗಳು ಬ್ರಹ್ಮವಿದ್ಯಾ ಸಮಾಜದ ಶಾಖೆಗಳಲ್ಲಿ ನಡೆಯುತ್ತಿರುತ್ತವೆ.

ಬ್ರಹ್ಮವಿದ್ಯಾ ಸಮಾಜಕ್ಕೆ ಸದಸ್ಯರಾಗಿ ಸೇರಿದವರು ಹೊರಾಂಗಣದ ಸಾಮಾನ್ಯ ಸದಸ್ಯರೆಂದು ಮೊದಲು ಪರಿಗಣಿಸಲ್ಪಡುತ್ತಾರೆ. ಅವರಲ್ಲಿ ಯಾರು ಪೂರ್ತಿ ನೈತಿಕ ಪರಿಶುದ್ಧಿ, ನಿರಹಂಕಾರ ಸ್ವಭಾವದಿಂದ ಕೂಡಿ ಮಾನವಕಲ್ಯಾಣಕ್ಕಾಗಿ ಶ್ರಮಿಸುತ್ತಾರೋ ಅವರಿಗೆ ಬ್ರಹ್ಮವಿದ್ಯಾಸಮಾಜದ ಅಂತರಂಗವರ್ತುಲಕ್ಕೆ ಪ್ರವೇಶ ಲಭಿಸುತ್ತದೆ. ಆಮೇಲೆ ಅವರು ಹಿರಿಯ ಬ್ರಹ್ಮವಿದ್ಯಾ ಸದಸ್ಯರಿಂದ ಬ್ರಹ್ಮವಿದ್ಯಾರಹಸ್ಯತತ್ತ್ವಗಳನ್ನು ತಿಳಿದು ತಮ್ಮ ತಮ್ಮ ಪರಿಶುದ್ಧ ಪ್ರಾಮಾಣಿಕ ಸಾಧನೆಯಿಂತೆ ದಿವ್ಯಯೋಗಿ ಮಹಾತ್ಮರ ಭೇಟಿ, ವಿಶೇಷ ಮಾರ್ಗದರ್ಶನ, ಅನುಗ್ರಹಗಳನ್ನು ಪಡೆಯಲು ಸಮರ್ಥರಾಗುತ್ತಾರೆ.

ಥಿಯೋಸೊಫಿ ಸಂಸ್ಥೆಯನ್ನು ಮ್ಯಾಡಮ್ ಬ್ಲಾವಟಸ್ಕಿ ಹಾಗೂ ಕರ್ನಲ್ ಓಲ್‌ಕಟ್ ಮಹಾಶಯರು ಸಂಸ್ಥಾಪಿಸಿದರೆ ಅದನ್ನು ವ್ರವರ್ಧಮಾನವಾಗಿ ಬೆಳೆಸಿದ ಕೀರ್ತಿ ಇಂಗ್ಲೆಂಡಿನ ಯೋಗಿ ಚಾರ್ಲ್ಸ್ ವಿಲಿಯಮ್ ಲೆಡ್‌ಬೀಟರ್ ಮತ್ತು ಲಂಡನ್ನಿನಲ್ಲಿ ಜನಿಸಿದ ಮಹಾಯೋಗಿನಿ ಡಾ॥ ಅನ್ನಿಬೆಸೆಂಟ್ ಮಹಿಳಾಮಣಿಗೆ ಸಲ್ಲುತ್ತದೆ. ಈ ನಾಲ್ವರು ಪ್ರಮುಖರು ಬ್ರಹ್ಮವಿದ್ಯಾ ಸಮಾಜದ ಸದಸ್ಯರ ಪಾಲಿಗೆ ನಿತ್ಯಸ್ಮರಣೀಯರೂ ಸ್ಫೂರ್ತಿದಾಯಕರೂ ಆಗಿರುತ್ತಾರೆ.

ಥಿಯೋಸೊಫಿ ಸೊಸೈಟಿಯಿಂದಾಗಿ ಸನಾತನ ಹಿಂದೂ ಧರ್ಮ ಹಾಗೂ ಜಗತ್ತಿನ ವಿಭಿನ್ನ ಧರ್ಮಗಳ ಶಾಸ್ತ್ರಗ್ರಂಥಗಳನ್ನು ವಿವಿಧ ಭಾಷೆಗಳಿಗೆ ಭಾಷಾಂತರಿಸುವುದು, ಕರ್ಮ, ಪುನರ್ಜನ್ಮ, ಲೋಕಾಂತರವಿಚಾರ, ಅತೀಂದ್ರಿಯಶಕ್ತಿ ಮಾಹಿತಿ, ಮಹಾತ್ಮರು, ದೇವತೆಗಳು, ಸಿದ್ಧಪುರುಷರುಗಳ ವಿಚಾರ, ಯೋಗಸಾಧನೆ, ಯೋಗದರ್ಶನಗಳ ಕುರಿತಾಗಿ ಬಹಳಷ್ಟು ಗ್ರಂಥಗಳ ಪ್ರಕಟಣೆ ಪ್ರಯೋಗ-ಪ್ರಸಾರಕಾರ್ಯಗಳು ನಡೆದಿವೆ. ಇದರಿಂದಾಗಿ ಜಗದಲ್ಲಿ ಮತೀಯ ಸೌಹಾರ್ದತೆ, ಮತೀಯ ತಾತ್ತ್ವಿಕ ವಿಚಾರಗಳ ತಾರತಮ್ಯಗಳ ಸೌಹಾರ್ದಪೂರ್ಣ ಅರಿವುಗಳಿಗೆ ಅವಕಾಶವಾಗಿದೆ. ಜಾತಿ, ಮತ, ಪಂಥಗಳ ಕಟ್ಟಿನಿಂದ ಮೀರಿ ಮಾನವನು ವಿಶ್ವಕುಟುಂಬಿಯಾಗಿ ಬಾಳಲು ಬ್ರಹ್ಮವಿದ್ಯಾ ಸಮಾಜವು ತನ್ನದೇ ಆದ ರೀತಿಯಲ್ಲಿ ನೆರವಾಗುತ್ತಾ ಬಂದಿದೆ.

# ಹಿಂದೂ ಸಂಘಟನೆಯ ಅಗತ್ಯ ಮತ್ತು ರಹಸ್ಯ

ಹಿಂದೂಸ್ಥಾನದಲ್ಲಿ ಹಿಂದುಗಳ ಸಂಘಟನೆಯ ಅಗತ್ಯ ಎಂದಿಗಿಂತಲೂ ಇಂದು ಹೆಚ್ಚಾಗಿದೆ. ಹಿಂದೂ ಸಮಾಜದ ಬಲ ಮತ್ತು ಬೆಳವಣಿಗೆಗೆ ಇಂದು ಸಂಘಟನೆ ವ್ಯಷ್ಟಿ ಮತ್ತು ಸಮಷ್ಟಿಜೀವನದಲ್ಲಿ ಅತ್ಯಂತ ಅಗತ್ಯವಾಗಿದೆ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಹಿಂದೂಗಳು ಆತ್ಮವಿಸ್ಮರಣೆ ಮತ್ತು ಪರಾನುಕರಣೆಯ ಕಾರಣದಿಂದಾಗಿ ಒಂದು ಸಶಕ್ತ ಜನಾಂಗ ಎಂದು ಇಳೆಯಲ್ಲಿ ಬೆಳಗಲು ಬೇಕಷ್ಟು ಶಕ್ತಿವಂತರಾಗಿರುವುದಿಲ್ಲ. ಸಾಮಾಜಿಕವಾಗಿ ಅನೈಕ್ಯತೆ, ಧಾರ್ಮಿಕವಾಗಿ ಅಭಿಮಾನಶೂನ್ಯತೆ, ಆಧ್ಯಾತ್ಮಿಕವಾಗಿ ಅನುಷ್ಠಾನಹೀನತೆ, ಇವುಗಳಿಂದಾಗಿ ಹಿಂದುವಿಂದು ಎಲ್ಲದರಲ್ಲಿಯೂ 'ಹಿಂದೆ' ಎಂಬಂತಾಗಿದೆ. ಆದರೆ ಒಂದು ರಾಷ್ಟ್ರದ ಸ್ವಾತಂತ್ರ್ಯೋತ್ತರಜೀವನದಲ್ಲಿ ಇಂತಹ ಕಷ್ಟದ, ಕತ್ತಲಿನ ಸಂದರ್ಭಗಳು ಬರುವುದೂ ಸಹಜವೂ ಹೌದು. ಹಾಗೆಂದು ಹಿಂದುಗಳಾದ ನಾವು ಅಧೀರರಾಗಿ ಕುಳಿತಿರಬೇಕಾಗಿಲ್ಲ. 'ಉದ್ಧರೇದಾತ್ಮನಾತ್ಮಾನಂ' ಎಂಬ ಶ್ರೀಕೃಷ್ಣಭಗವಂತನ ಸಂದೇಶದಂತೆ ನಮ್ಮನ್ನು ನಾವು ಉದ್ಧಾರ ಮಾಡಿಕೊಳ್ಳಬೇಕು. ಅದಕ್ಕಾಗಿ ಕರ್ತವ್ಯಶೀಲರಾಗಬೇಕು.

**ಸಂಘಟನೆಯ ಕರೆ**

ಹಿಂದೂ ಸಂಘಟನೆಯ ಕರೆ ಇಂದು ದೇಶದಾದ್ಯಂತ ಬೇರೆ ಬೇರೆ ಸಂದರ್ಭಗಳಲ್ಲಿ ಕೇಳಿಬರುತ್ತಿದೆ. ಹಿಂದೂ ಸಮಾಜ ಉತ್ಸವಗಳೆಂದು ಅಲ್ಲಲ್ಲಿ ವೈಭವದ ಕಾರ್ಯಕ್ರಮಗಳು ರೂಪುಗೊಳ್ಳತೊಡಗಿವೆ. ಯಜ್ಞಯಾಗಾದಿಗಳು, ವಿಚಾರಗೋಷ್ಠಿಗಳು, ಪೂಜೆಪುರಸ್ಕಾರಗಳು, ಹರಿಕೀರ್ತನೆ–ಸಂಕೀರ್ತನಾ ಕಾರ್ಯಕ್ರಮಗಳು ಮಠಮಂದಿರಗಳಲ್ಲಿ ರಾಷ್ಟ್ರದ ಬೇರೆಬೇರೆ ಎಡೆಗಳಲ್ಲಿ ನಡೆಯುವಂತಾಗಿವೆ. ಒಂದೆಡೆ ಹಿಂದೂಧರ್ಮದ ರಕ್ಷಣೆ ಹಾಗೂ ಪೋಷಣೆ ಬಗ್ಗೆ ವಿವಿಧ ಕಾರ್ಯಕ್ರಮಗಳು ನಡೆಯುತ್ತಿವೆಯಾದರೆ ಇನ್ನೊಂದೆಡೆ ಹಿಂದೂ ಸಮಾಜದಲ್ಲಿ ಅನೈಕ್ಯತೆ, ಅವ್ಯವಸ್ಥೆ, ಅನ್ಯಾಯಗಳ ರಕ್ಷಣೆ ಮತ್ತು ಅಭಿವೃದ್ಧಿಗಳ ಕಾರ್ಯಕ್ರಮಗಳೂ ನಡೆಯುವುದು ಕಾಣುತ್ತಿದೆ! ಎಷ್ಟೋ ಸಂಘಸಂಸ್ಥೆಗಳಲ್ಲಿ ಹಣದ ದುರುಪಯೋಗ, ಮಠಮಂದಿರಗಳಲ್ಲಿ ಧಾರ್ಮಿಕ ವ್ಯವಹಾರಯೋಗ್ಯತೆಯ ದಾರಿದ್ರ್ಯ, ಅದೆಷ್ಟೋ ಹಿಂದೂ ಮನೆಗಳಲ್ಲಿ ಹಿಂದೂಧರ್ಮದ ತತ್ತ್ವವಿಚಾರಗಳ ಅನುಷ್ಠಾನ ಶೂನ್ಯತೆ, ಹಿಂದುಗಳು ನಡೆಸುವ ವಾಣಿಜ್ಯ ಕೈಗಾರಿಕೆ ಉದ್ಯಮವಲಯಗಳಲ್ಲಿ ಅನ್ಯಾಯದ

ವರ್ತನೆ, ರಾಜಕೀಯ ರಂಗದಲ್ಲಿ ಹಣ-ಅಧಿಕಾರಗಳ ದುರುಪಯೋಗ, ಸಾರ್ವಜನಿಕ ಕಛೇರಿಗಳಲ್ಲಿ ಹಿಂದೂ ಅಧಿಕಾರಿಗಳು-ನೌಕರ ವರ್ಗದವರಿಂದ ತಮ್ಮ ಸ್ಥಾನಮಾನಕ್ಕೆ ತಕ್ಕುದಲ್ಲದ ವರ್ತನೆ, ಇತ್ಯಾದಿಯಾಗಿ ನೂರೆಂಟು ಬೇಡದ ಬೇಸರದ ವಿಚಾರಗಳನ್ನು ನಾವು ಇದೀಗ ಹಿಂದೂ ಸಮಾಜದಲ್ಲಿ ಕಾಣುತ್ತಿದ್ದೇವೆ. ಈ ಪರಿಸ್ಥಿತಿ ಹೀಗೆ ವೃದ್ಧಿ ಆಗಲು ಕಾರಣವೇನು ?—ಎಂಬುದನ್ನು ಮೊದಲು ಯೋಚಿಸಿ ಪರಿಹಾರ ಕಂಡುಕೊಳ್ಳ ಬೇಕಾದುದು ಹಿಂದೂ ಸಂಘಟನೆಯ ಹಾದಿಯಲ್ಲಿ ತುಂಬ ಮುಖ್ಯವಾದ ಕೆಲಸವಾಗಿದೆ.

ಹಿಂದೂ ಸಮಾಜದ ಬಹುಪಾಲಿನ ಕೆಲಸ-ಪರಿಸ್ಥಿಗಳೆಲ್ಲ ಹಾಳಾಗಲು ಹಿಂದೂಗಳ ಲ್ಲಿರುವ ಆಧ್ಯಾತ್ಮಿಕ ಶಕ್ತಿ, ನೈತಿಕ ಬಲ, ಧರ್ಮಾಭಿಮಾನ ಇವುಗಳ ದಾರಿದ್ರ್ಯವೇ ಆಗಿದೆ. ಹಾಗಾಗಿ ಹಿಂದೂ ಸಂಘಟನೆ ಎಂದರೆ ಇಂದು ಮೊಟ್ಟಮೊದಲಿಗೆ ಹಿಂದುವು ತನ್ನ ಆಧ್ಯಾತ್ಮಿಕ ಶಕ್ತಿಯನ್ನು ವೃದ್ಧಿಪಡಿಸಬೇಕು. ಆಧ್ಯಾತ್ಮಿಕ ಶಕ್ತಿಯನ್ನು ವೃದ್ಧಿಪಡಿಸುವು ದನ್ನೇ ನಿಜವಾದ ಸಂಘಟನೆ ಎನ್ನಬಹುದು. ಇದನ್ನೇ ಸ್ವಾಮಿ ವಿವೇಕಾನಂದರು ತಮ್ಮ ಸ್ಫೂರ್ತಿವಾಣಿಯಲ್ಲಿ ಭಾರತದಲ್ಲಿ ಸಂಘಟನೆ ಎಂದರೆ 'ಹರಡಿಹೋಗಿರುವ ಆಧ್ಯಾತ್ಮಿಕ ಶಕ್ತಿಗಳನ್ನು ಒಟ್ಟುಗೂಡಿಸುವುದು' ಎಂಬುದಾಗಿ ಹೇಳಿರುತ್ತಾರೆ. ಹಾಗಾಗಿ ನಮ್ಮ ದೇಶ ಕ್ಕಿಂದು ಹಿಂದುಗಳಲ್ಲಿ ಆಧ್ಯಾತ್ಮಿಕ ಶಕ್ತಿಯ ಸಂಘಟನೆಯೇ ಆಗಬೇಕಾಗಿದೆ. ಸರಿಯಾದ ಸಂಘಟನೆಯೆಂದರೆ ಅದೇ ಆಗಿರುತ್ತದೆ. 'ಆಧ್ಯಾತ್ಮಿಕ ಶಕ್ತಿಯ ಸಂಘಟನೆ ಎಂದರೆ ಆಧ್ಯಾ ತ್ಮಿಕ ಶಕ್ತಿಗಳ ಅನುಷ್ಠಾನವೇ ಆಗಿದೆ. ಹಾಗಾಗಿ ಹಿಂದೂ ಸಂಘಟನೆ ಎಂದರೆ ಹಿಂದೂ ತತ್ತ್ವಗಳ ಆಚರಣೆ ಎಂಬುದು ಸ್ಪಷ್ಟವಾಗುತ್ತದೆ. ಧರ್ಮ ಎಂದರೆ ಧರಿಸಿ ನಿಲ್ಲುವ ಶಕ್ತಿ ಉಳ್ಳದ್ದಾಗಿರಬೇಕು. ಯಾವುದು ನಮ್ಮನ್ನು ನಮ್ಮ ಜೀವನದಲ್ಲಿ ನಾವು ವಿಕಾಸದ ಪಥ ದಲ್ಲಿ ಅಭ್ಯುದಯ ಮತ್ತು ನಿಃಶ್ರೇಯಸವನ್ನು ಸಾಧಿಸುತ್ತಾ ಸಾಗಲು ನೆರವಾಗುತ್ತದೋ ಅದೇ ಧರ್ಮ. ಹಿಂದೂಧರ್ಮ ಹಿಂದುವಿನ ಬದುಕನ್ನು ಪರಿಶುದ್ಧ, ಪರಿಪಕ್ವ ಮತ್ತು ಪರಮಾತ್ಮಸಾಕ್ಷಾತ್ಕಾರ ಸಾಧ್ಯವಾಗುವಂತೆ ಅರಳಿಸಿ ಬೆಳಗಿಸುತ್ತದೆ. ಈ ಧರ್ಮ ಬರೀ ತತ್ತ್ವದಲ್ಲಿಲ್ಲ, ಪೂರ್ತಿಯಾಗಿ ಅನುಷ್ಠಾನದಲ್ಲಿದೆ. ಸ್ವಾಮಿ ವಿವೇಕಾನಂದರು ಇದನ್ನು ಸ್ಪಷ್ಟಪಡಿಸುತ್ತಾ 'ಧರ್ಮ ಎಂದರೆ ಸಾಕ್ಷಾತ್ಕಾರ, ಆತ್ಮನಂತೆ ಇರುವುದು, ಅದರಂತೆ ಆಗುವುದೇ ಧರ್ಮ' ಎಂದು ಸಾರಿರುತ್ತಾರೆ. ಹಿಂದೂ ಸಮಾಜವೆಂದರೆ ಹಿಂದುಗಳಿಂದ ಕೂಡಿದ ಸಮಾಜ. ಹಿಂದೂ ಸಮಾಜದ ಸಂಘಟನೆ ಎಂದರೆ ಹಿಂದೂಧರ್ಮದ ಅರಿವಿನ ಶಕ್ತಿಸಂಪನ್ನವಾದ ಮಂದಿಯ ಒಕ್ಕೂಟ ಎಂದು ಇನ್ನೊಂದು ರೀತಿಯಲ್ಲಿ ಹೇಳಬಹುದು.

### ಸಂಘಟನೆಯ ಆಗತ್ಯ

ಹಿಂದೂದೇಶವಿಂದು ಜಾತ್ಯತೀತ, ಸರ್ವಮತಸಮಾನದೃಷ್ಟಿಯ ರಾಷ್ಟ್ರವಾಗಿದೆ. ಇಲ್ಲಿ ಹಿಂದು, ಮುಸ್ಲಿಂ, ಕ್ರಿಶ್ಚಿಯನ್, ಪಾರ್ಸಿ, ಸಿಖ್ಖ, ಬೌದ್ಧ, ಜೈನ ಎಂಬುದಾಗಿ ವಿವಿಧ ಮತದವರು ಪ್ರಜೆಗಳಾಗಿ ಬಾಳುತ್ತಿದ್ದಾರೆ. ಹಾಗಾಗಿ ಹಿಂದೂ ಸಂಘಟನೆ ಎಂದರೆ ಇನ್ನಿತರ ಮತದವರ ವಿರುದ್ಧ ಶಕ್ತಿಪ್ರದರ್ಶನ, ಸಮರಘೋಷಣೆಯೇ ?—ಎಂಬುದಾಗಿ ಸಹಜವಾದ ಪ್ರಶ್ನೆಯೊಂದು ಏಳುತ್ತದೆ. ಆದರೆ ಹಿಂದುವಿನ ದೃಷ್ಟಿಯಲ್ಲಿ ವಿಭಿನ್ನಮತ ಗಳಿದ್ದರೂ ಅವೆಲ್ಲ ಒಂದೇ ಸತ್ಯದ ವಿವಿಧ ಮುಖಗಳು ! 'ಏಕಂ ಸತ್ ವಿಪ್ರಾ ಬಹುಧಾ

ವದಂತಿ' ಎಂಬುದಾಗಿ ವೈದಿಕ ಋಷಿಗಳು ಇಳೆಯಲ್ಲಿ ಮನುಕುಲಕ್ಕೆ ಈ ನೆಲದಿಂದ 'ಇರುವ ಸತ್ಯವೊಂದೇ—ಆದರೆ ಅದಕ್ಕೆ ನಾಮರೂಪಗಳು ಹಲವು' ಎಂಬುದಾಗಿ ಧರ್ಮ ಸಹಿಷ್ಣುತೆ, ಧರ್ಮಸಮನ್ವಯದ ಸಂದೇಶ ಸಾರಿರುತ್ತಾರೆ. ಹಿಂದೂಧರ್ಮದ ಸನಾತನ ಸಂದೇಶವೇ ಅದು. ಹಾಗಾಗಿ ಹಿಂದು ಇತರ ಮತೀಯರ ವಿರುದ್ಧ ಎಂದಿಗೂ ಮತದ ಹೆಸರಿನಲ್ಲಿ ಸಮರ ಘೋಷಿಸಲು ಹೊರಡಲಾರ. ಇದು ಐತಿಹಾಸಿಕ ಸತ್ಯವೂ ಹೌದು, ವಾಸ್ತವಿಕ ಪರಿಸ್ಥಿತಿಯೂ ಹೌದು. ಹಿಂದುಗಳ ಸಂಘಟನೆ ಹಾಗಾದರೆ ಯಾರಿಗಾಗಿ? ಹಿಂದುಗಳ ಏಳಿಗೆಗಾಗಿ, ಅಷ್ಟೇ ಅಲ್ಲ, ತನ್ಮೂಲಕ ಇತರರ ಏಳಿಗೆಗಾಗಿಯೂ ಹಿಂದೂ ಸಂಘಟನೆ ಆಗಬೇಕಾಗಿದೆ. ಹಿಂದು ಎನ್ನುವುದು ಒಂದು ಜೀವನದ ದೃಷ್ಟಿಯೂ ಹೌದು, ಜೀವನಕ್ರಮವೂ ಹೌದು, ಮಾತ್ರವಲ್ಲ ಜೀವನಶಕ್ತಿಯೂ ಹೌದು. ಆತ್ಮಶಕ್ತಿಯ ಪೂರ್ಣ ಪ್ರಕಾಶಗೊಂಡವನೇ ಪರಿಪೂರ್ಣನಾದ ಹಿಂದು. ಅವನು ತನ್ನೊಳಗೆ, ತನ್ನ ಸಂಸಾರದಲ್ಲಿ, ತನ್ನ ಕೆಲಸಕಾರ್ಯಗಳ ಕ್ಷೇತ್ರದಲ್ಲಿ ತನ್ನ ದೇಶದ ಜನಸಮೂಹದಲ್ಲಿ ಇಳೆಯ ಉದ್ದಗಲದಲ್ಲಿ ಇರುವ ಒಬ್ಬನೇ ಭಗವಂತನ ದಿವ್ಯಶಕ್ತಿಯ ಲೀಲಾವೈಭವವನ್ನು ಕಾಣುತ್ತಾನೆ. ಹಾಗೆ ಆತನಿಗೆ ತಾನು ಮಾಡುವ ಕೆಲಸ ಬರೇ ಕೆಲಸ ಎಂದಾಗದೆ ಯೋಗ ಎಂದಾಗುತ್ತದೆ. ಅವನು ಬಂಡಿ ಹೊಡೆಯುವವನೇ ಆಗಲಿ, ಮಂದಿರದಲ್ಲಿ ಪೂಜೆ ಮಾಡುವವನೇ ಆಗಲಿ, ಅಂಗಡಿ ಯಲ್ಲಿ ವ್ಯಾಪಾರ ಮಾಡುವವನೇ ಆಗಲಿ, ಅಧಿಕಾರದ ಗದ್ದುಗೆಯನ್ನೇರಿ ರಾಜ್ಯವಾಳುವ ವನೇ ಆಗಲಿ, ಅವನಿಗೆ ತನ್ನ ಬದುಕು, ತನ್ನ ಕೆಲಸ, ತಾನು ಒಡನಾಡುವ ಜನ—ಎಲ್ಲವೂ ಭಗವಂತನ ಶಕ್ತಿಯ ಮಹಿಮೆ, ದಿವ್ಯತೆಯ ಸಾಕ್ಷಾತ್ಕಾರಕ್ಕಾಗಿ ಸಂತೋಷದ ಪ್ರಯತ್ನ, ಜೀವನ್ಮುಕ್ತಿಯ ಸಾರ್ಥಕ ಅನುಭವದ ಸಾಧನೆ ಎಂದು ಕಂಡುಬರುತ್ತದೆ. ಇದು ಹಿಂದೂ ಧರ್ಮದ ಸಾಮರ್ಥ್ಯ, ಅದರ ಹಿರಿಮೆ ಹಾಗೂ ವೈಶಿಷ್ಟ್ಯವಾಗಿದೆ.

ಆದರಿಂದು ಭಾರತದಲ್ಲಿ ಹಿಂದುಗಳು ಆಧ್ಯಾತ್ಮಿಕವಾಗಿ ಸಾಕಷ್ಟು ಶಕ್ತಿಶಾಲಿಗಳಾಗಿಲ್ಲ. ಸಾಮಾಜಿಕವಾಗಿ ಧರ್ಮಪ್ರಜ್ಞೆ, ಧರ್ಮಾಭಿಮಾನ ಇವನ್ನು ಕಳಕೊಂಡು ನಿಸ್ತೇಜರೂ, ನಿರ್ವೀರ್ಯರೂ ಆಗಹೊರಟಿರುತ್ತಾರೆ. ತೀರಾ ಭೌತಿಕವಾದದ ಮಾಯೆಗೆ ಸಿಲುಕಿ ಹಳೆಯದೆಲ್ಲ ಹಾಳು, ಹೊಸದೇನೂ ಕಾಣದು ಎಂಬಂತೆ ತ್ರಿಶಂಕುಸ್ಥಿತಿಯಲ್ಲಿದ್ದಾರೆ. ಬಾಳಿನಲ್ಲಿ ಹಿರಿಯ ಆದರ್ಶ ಬೇಡ ಎನ್ನುತ್ತಾ ಅಲ್ಪಸಂತೋಷ, ಅಲ್ಪತೃಪ್ತರಾಗುತ್ತಿ ದ್ದಾರೆ. ಬೌದ್ಧಿಕ ಶಕ್ತಿ, ನೈತಿಕ ಆರೋಗ್ಯ, ಆಧ್ಯಾತ್ಮಿಕವಾಗಿ ಸಾಮರ್ಥ್ಯ ತೀರಾ ಕುಂಠಿತ ವಾಗಹತ್ತಿದೆ. ಇದರಿಂದಾಗಿ ಗ್ರಾಮಗಳಲ್ಲಿ, ನಗರಗಳಲ್ಲಿ ಹಿಂದೂವಿಗೆ ಸ್ಫೂರ್ತಿ–ಬೆಳಕನ್ನು ಈಯುವ ಪ್ರಾಚೀನ ಸಂಪ್ರದಾಯ–ಪರಂಪರೆಯ ವೈಭವದ ಆಚಾರವಿಚಾರಗಳಲ್ಲಿ, ಮಠ-ಮಂದಿರಗಳಲ್ಲಿ ಶ್ರದ್ಧೆ ಕಡಿಮೆ ಆಗಹತ್ತಿದೆ. ಪರಿಣಾಮವಾಗಿ ಹಿಂದೂಗಳಾದ ನಮ್ಮ ಬದುಕಿನಲ್ಲಿ ಯಾವುದು ಬೆಳಗಿನಿಂದ ರಾತ್ರಿ ಮಲಗುವ ತನಕ ನಮ್ಮ ಚಟುವಟಿಕೆಗಳಲ್ಲಿ ಶಕ್ತಿ ಮತ್ತು ಬೆಳಕಾಗಿರಬೇಕಾಗಿತ್ತೋ ಆ ಧರ್ಮ ಎನ್ನುವುದರಲ್ಲಿ ವಿಶ್ವಾಸ ಹೊರಟು ಹೋಗುತ್ತಲಿದೆ. ಆದರಿಂದಾಗಿ ಜೀವನದ ಕೆಲಸಕಾರ್ಯಗಳಲ್ಲಿ ನಿಯಂತ್ರಣ ತಪ್ಪಿದೆ. ಆದರ್ಶ ಪ್ರಜ್ಞೆ ಶೂನ್ಯವಾಗಹತ್ತಿದೆ. ಜೊತೆಗೆ ವ್ಯಕ್ತಿ ಹಾಗೂ ಸಾಮೂಹಿಕವಾದ ರಾಷ್ಟ್ರೋನ್ನತಿಯ ಕರ್ತವ್ಯ-ಜವಾಬ್ದಾರಿಗಳ ನೆನಪೂ ಹಾರತೊಡಗಿದೆ! ಹಾಗಾಗಿ ಇದೀಗ

ಹಿಂದೂಗಳ ಸಂಘಟನೆ ಹಿಂದೂಗಳ ಉದ್ಧಾರಕ್ಕಾಗಿ ವ್ಯಕ್ತಿ ಹಾಗೂ ಸಮಷ್ಟಿರಂಗದಲ್ಲಿ ಅತ್ಯಂತ ಆಗತ್ಯವಾಗಿ ಆಗಲೇಬೇಕಾಗಿದೆ. ಹಿಂದುಗಳ ಉದ್ಧಾರವಾದರೆ ಮಾತ್ರ ಹಿಂದೂ ದೇಶ ಉಳಿದೀತು. ಹಿಂದೂದೇಶ ಉಳಿದರೆ ಮಾತ್ರ ಜಗತ್ತಿಗೊಂದು ವಿಶಿಷ್ಟವಾದ ರೀತಿಯ ಶಾಂತಿರಕ್ಷಣೆಯು ದೊರೆತೀತು. ಏಕೆಂದರೆ ಜಗತ್ತಿಗೆ ಆಧ್ಯಾತ್ಮಿಕ ಸಂಪತ್ತನ್ನು ನೀಡುವುದೇ ಭಾರತದ ಬದುಕಿನ ಗುರಿಯಾಗಿದ್ದು, ಆಧ್ಯಾತ್ಮಿಕ ಸಂಪತ್ತಿನ ಮಹಾಗಣಿ ಭಾರತವಾಗಿದ್ದು, ಭಾರತವು ಹಿಂದೂಧರ್ಮದ ತವರಾಗಿದ್ದು, ಹಿಂದುಗಳು ಹಿಂದೂ ಧರ್ಮದ ರಕ್ಷಕರೂ ಪೋಷಕರೂ ಆಗಿದ್ದು ಹಿಂದೂ ಸಂಘಟನೆ, ಹಿಂದೂದೇಶದ ಅಭಿವೃದ್ಧಿ, ಜಗತ್ತಿನ ಕಲ್ಯಾಣ—ಇವೆಲ್ಲ ಹೀಗೆ ಒಂದಕ್ಕೊಂದು ತುಂಬ ಅರ್ಥವತ್ತಾದ ರೀತಿಯಲ್ಲಿ ಸಂಬಂಧಗೊಂಡಿರುತ್ತವೆ.

ಹಿಂದೂ ಸಮಾಜ ಸಂಘಟಿತವಾಗಿ ಸಶಕ್ತವೂ ಹಿಂದೂಧರ್ಮಾಭಿಮಾನಸಂಪನ್ನವೂ ಆದರೆ ಭಾರತದಲ್ಲಿ ಮಾತ್ರವಲ್ಲ ಜಗತ್ತಿನಲ್ಲೇ ಒಂದು ಆದರ್ಶ ಜನಾಂಗವಾಗಿ ಅವರಿಂದ ಮನುಕುಲಕ್ಕೆ ಕಲ್ಯಾಣವಾದೀತೆನ್ನುವುದು ನಮ್ಮ ಪ್ರಾಚೀನ ಮಹರ್ಷಿಗಳು, ಆಚಾರ್ಯ ಸ್ವಾಮಿಗಳು, ಆಧುನಿಕ ಕಾಲದ ಮಹಾಪುರುಷರು, ಎಲ್ಲರ ಅಭಿಮತವಾಗಿದೆ. ಸ್ವಾಮಿ ವಿವೇಕಾನಂದರು, ಮಹಾತ್ಮಾ ಗಾಂಧೀಜಿಯವರು, ಮಹರ್ಷಿ ಅರವಿಂದರು, ಇವರೇ ಮೊದಲಾದ ಆಧುನಿಕ ಆಚಾರ್ಯಪುರುಷರು ಭಾರತದಲ್ಲಿ ಆಗುವ ಎಲ್ಲ ಕೆಲಸಗಳೂ ಧರ್ಮದ ಆಧಾರದಲ್ಲಿಯೇ ನೆರವೇರಬೇಕು, ಹಾಗಾದಾಗ ಮಾತ್ರ ಅದರಿಂದ ಜನತೆಗೂ ರಾಷ್ಟ್ರಕ್ಕೂ ಕ್ಷೇಮ ಎಂದು ಸಾರಿ ಸಾರಿ ಹೇಳಿರುತ್ತಾರೆ. ಜಗತ್ತಿನಲ್ಲಿಂದು ಇಂಗ್ಲೆಂಡ್, ಅಮೆರಿಕಾ, ಜರ್ಮನಿ, ಫ್ರಾನ್ಸ್, ರಷ್ಯಾ, ಚೀಣಾ—ಹೀಗೆ ಬೇರೆಬೇರೆ ಎಡೆಗಳಲ್ಲಿ ಭೌತಿಕ ಸುಖದ ಮಾಯೆಯ ಪ್ರಭಾವಕ್ಕೆ ಜನಕೋಟಿ ಒಳಗಾಗಿ ಅದಲ್ಲಿ ಅನೇಕರು ಭಾರತದ ಸನಾತನ ಹಿಂದೂಧರ್ಮದಿಂದ ಶಕ್ತಿ ಪಡೆದು ಜೀವನ ಕಷ್ಟದಿಂದ ಬಿಡುಗಡೆಯನ್ನು ಹೊಂದಲು ಮುಂಬರುತ್ತಿದ್ದಾರೆ.

ಈ ಸಂದರ್ಭದಲ್ಲಿ ಪ್ರತಿಯೊಬ್ಬ ಹಿಂದುವೂ ಧಾರ್ಮಿಕ ಶಕ್ತಿಯ ಉಜ್ವಲ ಪ್ರಕಾಶನದ ಕೇಂದ್ರ ಎಂದಾಗಬೇಕಾದುದು ವ್ಯಕ್ತಿಗತ ಹಾಗೂ ರಾಷ್ಟ್ರೀಯವಾದ ಕರ್ತವ್ಯವಾಗಿದೆ ಈ ದೃಷ್ಟಿಯಿಂದಲೂ ಹಿಂದೂ ಸಂಘಟನೆ ಅತ್ಯಂತ ಅಪೇಕ್ಷಣೀಯವಾಗಿದೆ.

**ಸಂಘಟನೆಯ ರಹಸ್ಯ**

ಹಿಂದೂ ಸಂಘಟನೆ ಎಂದಾಕ್ಷಣ ನಮ್ಮ ಮುಂದೆ ಶೈವ, ವೈಷ್ಣವ, ಶಾಕ್ತ ಮುಂತಾದ ಅನೇಕ ಹಿಂದೂ ಒಳಪಂಗಡಗಳು ಎದ್ದು ಕಾಣುತ್ತವೆ. ಹಾಗೆಯೇ ಶಿವ, ಗಣೇಶ, ದುರ್ಗೆ. ವಿಷ್ಣು, ರಾಮ, ಕೃಷ್ಣ, ಅಯ್ಯಪ್ಪ ಇತ್ಯಾದಿ ಅನೇಕ ದೇವದೇವಿಯರ ಪುಣ್ಯಸ್ಮರಣೆ ಮೂಡಿಬರುತ್ತದೆ. ಅದರಂತೆಯೇ ಶಂಕರ, ರಾಮಾನುಜ, ಮಧ್ವ, ರಾಮಕೃಷ್ಣ ಪರಮ ಹಂಸ, ರಾಘವೇಂದ್ರಸ್ವಾಮಿ, ರಮಣಮಹರ್ಷಿ, ಸತ್ಯಸಾಯಿಬಾಬಾ, ಹೀಗೆ ಒಂದೆರಡಲ್ಲ ನೂರಾರು ಪಾವನಚರಿತರ, ಪುಣ್ಯ ಆಚಾರ್ಯ ಸ್ವಾಮಿಗಳ ನೆನಪು ಹೊಳೆಯುತ್ತದೆ. ಜೊತೆಗೆ ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣದವರು, ಅವರೊಳಗಿನ

ನೂರಾರು ಒಳಪಂಗಡಗಳೂ ಕಣ್ಮುಂದೆ ನಿಲ್ಲುತ್ತದೆ. ಮೇಲಾಗಿ ಬಡವರು, ಶ್ರೀಮಂತರು, ವಿದ್ಯಾವಂತರು, ಅವಿದ್ಯಾವಂತರು, ಕಾಂಗ್ರೆಸ್ ಪಕ್ಷದವರು, ಭಾರತೀಯ ಜನತಾ ಪಕ್ಷದವರು, ಕಮ್ಯುನಿಸ್ಟರು—ಹೀಗೆ ಹತ್ತಾರು ರೀತಿಯ ಆರ್ಥಿಕ ರಾಜಕೀಯ ಹಿನ್ನೆಲೆಯ ಪಂಗಡಗಳನ್ನೂ ಕಾಣುತ್ತೇವೆ. ಹಾಗಾದರೆ ಇವರೊಳಗೆ ಸಂಘಟನೆ ಹೇಗೆ ಸಾಧ್ಯ ? ಈ ಪ್ರಶ್ನೆ-ಸಮಸ್ಯೆ ಇಂದುನಿನ್ನೆಯದಲ್ಲ. ಅತ್ಯಂತ ಪ್ರಾಚೀನ ಕಾಲದಲ್ಲೂ ಇತ್ತು. ಅದಕ್ಕೆ ನಮ್ಮ ಹಿರಿಯರು ಸರಿಯಾದ ಸೂತ್ರವನ್ನು ಕಂಡುಹಿಡಿದಿದ್ದರು. ಅದರ ಅನುಸರಣೆ ಕಡಿಮೆಯಾದಂತೆ ಹಿಂದುಗಳ ಸಂಘಟನೆಗೆ ಬಲ ಕಡಿಮೆಯಾಯಿತು.

ಪಂಥ ಯಾವುದೇ ಇರಲಿ, ಆಚಾರ್ಯರು ನಮಗೆ ಯಾರೇ ಇರಲಿ, ವರ್ಣ ನಮ್ಮದು ಯಾವುದೇ ಇರಲಿ, ಮೂಲ ತತ್ತ್ವ ಒಂದೇ. ಜೀವನದಲ್ಲಿ ಹಿಂದುವು ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳನ್ನು ಸಂಪಾದಿಸಬೇಕು. ಅದಕ್ಕೆ ಬಂಡವಾಳವಾಗಿ ಧರ್ಮ ಅವನಲ್ಲಿರಬೇಕು. ಧರ್ಮದ ಕಟ್ಟುಕಟ್ಟಳೆಗೆ ಮೀರಿ ಜೀವನ ನಡೆಯಬಾರದು. ಎಲ್ಲ ಪಂಥದವರಿಗೂ, ಎಲ್ಲ ಆಚಾರ್ಯರ ಉಪದೇಶಗಳಲ್ಲೂ ಈ ಮೂಲ ತತ್ತ್ವಗಳ ವಿವರಣೆ ಇದೆ. ಅದನ್ನು ಆಯಾಯ ಪಂಥದವರು ತಮ್ಮ ತಮ್ಮ ಪರಂಪರೆ, ಧರ್ಮಕ್ಕೆ ಅನುಸರಿಸಿ ಬಾಳಬೇಕು. ಹಾಗೆಯೇ ಇತರರನ್ನು ಗೌರವಿಸಿ, ಪ್ರೀತಿಸಿ, ಬಾಳಲು ಬಿಡಬೇಕು. ಸಾಮೂಹಿಕ ಏಳಿಗೆಗೆ ಎಲ್ಲ ಪಂಥದವರೂ ನೆರವು ನೀಡುವಂತಾಗಬೇಕು. ಒಂದು ಗ್ರಾಮದಲ್ಲಿ ಬೇರೆ ಬೇರೆ ಮನೆತನದವರು ಇದ್ದು ಸೌಹಾರ್ದದಿಂದ ಬಾಳುತ್ತಾ ತಮ್ಮ ತಮ್ಮ ಮನೆತನದ ಹಿರಿಮೆ, ಪರಂಪರೆಗಳನ್ನು ಬಿಡದೆ ಊರಿನ ಶಾಲೆ, ಸಹಕಾರ ಸಂಘ, ಆಸ್ಪತ್ರೆ, ಪಂಚಾಯಿತಿ, ದೇವಸ್ಥಾನ ಇವುಗಳೆಲ್ಲದರ ಏಳಿಗೆಗೆ ಒಟ್ಟಾಗಿ ದುಡಿಯುವಂತೆ ಹಿಂದೂ ಬಂಧುಗಳೆಲ್ಲ ಒಂದಾಗಿ ಬಾಳಬೇಕು. ಇದೇ ಹಿಂದೂ ಸಂಘಟನೆಯ ರಹಸ್ಯ. ಈ ಬಗ್ಗೆ ಸ್ವಾಮಿ ವಿವೇಕಾನಂದರು ತುಂಬ ಪ್ರಾಯೋಗಿಕವಾದ ಸಲಹೆ ನೀಡುತ್ತಾ, 'ನಮ್ಮ ಏಕಮಾತ್ರ ಸಮ್ಮಿಲನ ಭೂಮಿಯೇ ಹಿಂದಿನಿಂದ ಬಂದ ಪರಂಪರೆ ಮತ್ತು ಧರ್ಮ. ಅದೊಂದೇ ಏಕಮಾತ್ರ ಸಾಧಾರಣ ಭೂಮಿ. ಅದರ ಮೇಲೆ ಮಾತ್ರ ಜನಾಂಗದ ಸಂಘಟನೆ ಸಾಧ್ಯ' ಎಂದು ಘೋಷಿಸಿರುತ್ತಾರೆ.

ಈ ದಿಸೆಯಲ್ಲಿ ಹಿಂದೂ ಮನೆಮನೆಗಳಲ್ಲಿ, ಮಠಮಂದಿರಗಳಲ್ಲಿ, ಕಚೇರಿಕಟ್ಟೆಗಳಲ್ಲಿ ನಮ್ಮ ಸತ್‌ಪರಂಪರೆ ಹಾಗೂ ಧರ್ಮದ ಬೆಳಕು ಪರಿಣಾಮಕಾರಿಯಾದ ರೀತಿಯಲ್ಲಿ ಬೆಳಗುವಂತಾಗಬೇಕು. ಆ ದಿವ್ಯಬೆಳಕಿನಲ್ಲಿ ಹಿಂದುಗಳೆಲ್ಲರ ಬದುಕು ಬಂಗಾರವಾಗಬೇಕು.

---

# ಪ್ರಮಾಣ ಗ್ರಂಥಾವಳಿ


೧. ಈಶ, ಕೇನ, ಕಠ ಇತ್ಯಾದಿ ಉಪನಿಷತ್ತು ಗ್ರಂಥಗಳು (ಕನ್ನಡ ಅನುವಾದ) —ಸ್ವಾಮಿ ಆದಿದೇವಾನಂದ

೨. ಬ್ರಹ್ಮಸೂತ್ರಗಳು (ಶ್ರೀಮದಾಚಾರ್ಯರ ಭಾಷ್ಯ ವಿವರ ಸಹಿತ) ಕನ್ನಡ ಭಾಷಾಂತರ —ಸ್ವಾಮಿ ಆದಿದೇವಾನಂದ

೩. ಶ್ರೀಮದ್‌ಭಗವದ್ಗೀತಾ (ಕನ್ನಡ ಅನುವಾದ) —ಸ್ವಾಮಿ ಆದಿದೇವಾನಂದ

೪. ಶ್ರೀಮದ್ ಜಗದ್ಗುರು ಆದಿಶಂಕರಾಚಾರ್ಯರು ರಚಿಸಿದ ಉಪನಿಷತ್ತು, ಬ್ರಹ್ಮಸೂತ್ರ ಮತ್ತು ಶ್ರೀಮದ್ಭಗವದ್ಗೀತಾ ಭಾಷ್ಯಗಳು (ಕನ್ನಡ ಭಾಷಾಂತರ) —ಶ್ರೀ ಸಚ್ಚಿದಾನಂದೇಂದ್ರಸರಸ್ವತಿ ಸ್ವಾಮಿಗಳು

೫. ವಿವೇಕಚೂಡಾಮಣಿ (ಕನ್ನಡ ಅನುವಾದ) —ಶ್ರೀ ಸಚ್ಚಿದಾನಂದೇಂದ್ರಸರಸ್ವತಿ ಸ್ವಾಮಿಗಳು

೬. ಗೀತಾರಹಸ್ಯ —ಲೋಕಮಾನ್ಯ ಬಾಲ ಗಂಗಾಧರ ತಿಲಕ

೭. ಭಾರತೀಯ ಸಂಸ್ಕೃತಿ —ಡಾ|| ಎಸ್. ಶ್ರೀಕಂಠಶಾಸ್ತ್ರೀ

೮. ಭಾರತೀಯ ಸಂಸ್ಕೃತಿ ದರ್ಶನ —ಸಂಪಾದಕರು : ಅ. ನ. ಕೃಷ್ಣರಾಯ

೯. ಶ್ರೀರಾಮಕೃಷ್ಣಲೀಲಾ ಪ್ರಸಂಗ (ಕನ್ನಡ ಅನುವಾದ) —ಸ್ವಾಮಿ ಪ್ರಣವೇಶಾನಂದ

೧೦. ಹಿಂದೂದರ್ಶನಸಾರ —ಲಕ್ಷ್ಮೀಪುರಂ ಶ್ರೀನಿವಾಸ ಆಚಾರ್ಯ

೧೧. ಸತ್ಯಾರ್ಥಪ್ರಕಾಶ (ಕನ್ನಡ ಅನುವಾದ) —ಪಂ|| ಸುಧಾಕರ ಚತುರ್ವೇದಿ

೧೨. ಗುರುನಾನಕವಾಣಿ (ಕನ್ನಡ ಅನುವಾದ) —ಗುರುನಾಥ ಜೋಶಿ

1. *Rigveda Samhita* (Eng. Translation) —Manmath Nath Dutta
2. *The Call of the Vedas* —A. C. Bose
3. *Indian Philosophy* I, II Volumes —Dr. S. Radhakrishnan
4. *2500 Years of Buddhism* —P. V. Bapat (Ed)
5. *Outlines of Jainism* —J. L. Jaini
6. *Vedantasara of Sadananda* (Translation and Note) —Swami Nikhilananda
7. *Atma Bodha of Sri Shankaracharya* (Translation with Notes) —Swami Nikhilananda
8. *The Hindu View of Life* —Dr. S. Radhakrishnan
9. *Outlines of Hinduism* —T. M. P. Mahadevan
10. *Hinduism at a Glance* —Swami Nirvedananda
11. *Hinduism, Doctrine and Way of Life* —C. Rajagopalachari
12. *Hinduism Through the Ages* —D. S. Sharma
13. *Madhwa's Teachings in His Own Words* —B. N. K. Sharma
14. *Ramanuja's Teachings in His Own Words* —Prof. M. Yamunacharya
15. *Sadhana* —Swami Shivananda
16. *Vedanta for Modern Man* (A collection of articles by different authors) —Edited by Christopher Isherwood
17. *The Adventures in Religious Life* —Swami Yatishwarananda
18. *All Religions Are True* —Mahatma Gandhi
19. *Gorakhnath and the Kanpat Yogis* —G. W. Briggs
20. *Hand Book of Veerashaivism* —S. C. Nandimath
21. *Principles of Tantra* —Sir John Woodroffe
22. *The Shaiva School of Hinduism* —S. Shivapada Sundaram
23. *History of Dharma Shastra* Vol. I-IV —Dr. P. V. Kane
24. *History of Ramakrishna Math and Mission* —Swami Gambhirananda
25. *Life of Swami Vivekananda* —Eastern and Western Disciples

26. *Complete Works of Swami Vivekananda,* Volumes I-VIII
27. *Autobiography of a Yogi* —Paramahamsa Yogananda
28. *Life Divine* —Sri Aurobindo
29. *Synthesis of Yoga* —Sri Aurobindo
30. *Eassys on Githa* —Sri Aurobindo
31. *Letters on Yoga* —Sri Aurobindo
32. *Saints and Sages of India* —Pritam Singh
33. *Obscure Religious Cults* —S. B. Das Gupta
34. *Pilgrimage to Sabari* —K. R. Vaidyanathan
35. *The Strange World of the Hare Krishnas* —Faye Levine
36. *Maharshi, The Guru* —Martin Eban (Ed.)
37. *Key to Theosophy* —H. P. Blavatsky
38. *The Masters and the Path* —C. W. Leadbeater
39. *Essays in Sikhism* —Teja Singh
40. *The Sikhs To-day* —Kushwant Singh

## ನಿಯತಕಾಲಿಕ ಪತ್ರಿಕೆಗಳು

1. *Prabuddha Bharatha*
2. *Vedanta Kesari*
3. *Kalyan Kalpataru*
4. *Bhavan's Journal*
5. *Tapovan Prasad*



ಈ

ಗ್ರಂಥದ ಕುರಿತಾಗಿ

## ಗುರು-ಹಿರಿಯರ

● ಅನುಗ್ರಹ ● ಆಶೀರ್ವಾದ ● ಅಭಿಪ್ರಾಯ

श्री श्री शृंगेरी जगद्गुरु महासंस्थानम्, शृंगेरीमठ शारदा पीठम्
पो शृंगेरी – कडूर (मैसूर स्टेट)

**Sri Sri Sringeri Jagadguru Mahasamsthanam**
**Sringeri Mutt Sharada Peetham**
P.O. Sringeri-Kadur (Karnataka)

**N. Lakshmi Narayan Shastry**
*Private Secretary*

**Office of the Private Secretary to**
**His Holiness The Jagadguru**
**Shri Shankaracharya of**
**Sri Sringeri Mutt**

Camp : ಬೆಂಗಳೂರು
**Ref. No. 367/68** **Dated : 28-2-1968**

ಭಾಗಮಂಡಲದ ಶ್ರೀ ಎ. ಕೆ. ಶಂಕರನಾರಾಯಣ ಭಟ್ಟರು ತಾವು ರಚಿಸಿರುವ 'ಹಿಂದೂಧರ್ಮದ ಪರಿಚಯ' ಎಂಬ ಪುಸ್ತಕವನ್ನು ಶ್ರೀ ಶ್ರೀ ಜಗದ್ಗುರು ಮಹಾಸ್ವಾಮಿಗಳವರ ಅವಗಾಹನೆಗೆ ತಂದಿರುತ್ತಾರೆ. ಶ್ರೀ ಶ್ರೀಗಳವರು ಕೆಲವು ಪುಟಗಳನ್ನು ಅಲ್ಲಲ್ಲಿ ಓದಿಸಿ ಕೇಳಿರುತ್ತಾರೆ. ಎಲ್ಲಾ ಮತಗಳ ವೇದಾಂತವನ್ನೂ ಯಾವ ಮತದವರಿಗೂ ಮನಸ್ಸು ನೋಯಲು ಅವಕಾಶವಿಲ್ಲದಂತೆ, ಪಾಮರರಿಗೂ ಸಹ ಚೆನ್ನಾಗಿ ತಿಳಿಯುವಂತೆ ಬರೆದಿರುತ್ತಾರೆಂದೂ ಶ್ರೀ ಶ್ರೀಗಳವರು ಅಭಿಪ್ರಾಯಪಟ್ಟಿರುತ್ತಾರೆ ಮತ್ತು ಈ ರಚನೆಯು ಜನಾದರಣೆ ಪಡೆಯಲೆಂದೂ ಆಶೀರ್ವದಿಸಿರುತ್ತಾರೆ.

ಎನ್. ಲಕ್ಷ್ಮೀನಾರಾಯಣ ಶಾಸ್ತ್ರಿ
ಶ್ರೀ ಶ್ರೀ ಶೃಂಗೇರಿ ಜಗದ್ಗುರು ಶಂಕರಾಚಾರ್ಯ
ಮಹಾಸ್ವಾಮಿಗಳವರ ಆಪ್ತಕಾರ್ಯದರ್ಶಿಗಳು
ಶೃಂಗೇರಿ ಮಠ

॥ ಪ್ರಸೀದತು ಶ್ರೀರಾಮಚಂದ್ರಃ ॥

ಗ.ಸಂ. ೨೦೩೫

श्री राम

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಶ್ರೀಮಜ್ಜಗದ್ಗುರು
ಶಂಕರಾಚಾರ್ಯ ಶ್ರೀರಾಮಚಂದ್ರಾಪುರ ಮಠಸ್ಥ

**ಶ್ರೀಮದ್ರಾಘವೇಂದ್ರ ಭಾರತೀ ಶ್ರೀ ಸ್ವಾಮಿಭಿಃ ।**

ಶ್ರೀಯುತ ವಿದ್ವಾನ್ ಎದುರ್ಕಳ ಕೆ. ಶಂಕರನಾರಾಯಣ ಭಟ್ಟ, ಶ್ರೀರಾಮಕೃಷ್ಣ ನಿಲಯ, ಭಾಗಮಂಡಲ, ಕೊಡಗು—ಇವರಿಗೆ,

॥ ಶ್ರೀಮನ್ನಾರಾಯಣಸ್ಮರಣಪುರಸ್ಸರಂ ಸಂದಿಷ್ಟೋಽಯಂ ಸಂದೇಶಃ ॥

ಅದಾಗಿ,

ನೀವು ರಚಿಸಿರುವ 'ಹಿಂದೂಧರ್ಮದ ಪರಿಚಯ' ಎಂಬ ಗ್ರಂಥವನ್ನು ಅವಲೋಕಿಸಲಾಯಿತು. ಹಿಂದೂಧರ್ಮದ ತತ್ತ್ವ ಮತ್ತು ಅನುಷ್ಠಾನದ ಬಗೆಗೆ ಇಷ್ಟೊಂದು ಉಪಯುಕ್ತ ಮಾಹಿತಿಗಳಿಂದ ಕೂಡಿ ಸರಳ ಸುಂದರ ನಿರೂಪಣೆಯನ್ನು ಒಳಗೊಂಡ ಈ ಗ್ರಂಥ ಕನ್ನಡ ಧಾರ್ಮಿಕ ವಾಙ್ಮಯದಲ್ಲಿ ಅಪೂರ್ವವೇ ಸರಿ.

ಹಿಂದೂಧರ್ಮವು ಸನಾತನವಾಗಿದ್ದು ಬದುಕಿಗೆ ಅರ್ಥಪೂರ್ಣವೂ ಶಕ್ತಿದಾಯಕವೂ ಆಗಿರುತ್ತದೆ. ಅರಿವು-ಆಚರಣೆಗಳು ಸನಾತನ ಧರ್ಮದ ಸಾರ್ಥಕತೆ ಮತ್ತು ಸೌಂದರ್ಯದ ರಹಸ್ಯವಾಗಿರುತ್ತದೆ.

ಎಂದಿಗಿಂತಲೂ ಹೆಚ್ಚು ಹಿಂದೂ ಸಮಾಜದಲ್ಲಿ ನೂತನ ಜಾಗೃತಿ ಉಂಟಾಗಬೇಕಾಗಿರುವ ಈ ಕಾಲದಲ್ಲಿ ಈ ವಿಧದ ವಿವರಣಾತ್ಮಕ ಧರ್ಮಗ್ರಂಥಗಳ ಪಾತ್ರ ಮಹತ್ತರವಾದುದು.

ಇಂತಹ ಅಗತ್ಯದ ಗ್ರಂಥವನ್ನು ರಚಿಸಿ ಅದರ ತೃತೀಯ ಆವೃತ್ತಿಯನ್ನು ಪ್ರಕಟಿಸುತ್ತಿರುವ ನೀವು ಹಿಂದೂಸಮಾಜಕ್ಕೆ ವಿಶೇಷವಾಗಿ ಸೇವೆಸಲ್ಲಿಸುತ್ತಿರುವುದು ಸುತರಾಂ ಪ್ರಶಂಸಾರ್ಹ.

ಈ ಬೃಹತ್ ಧಾರ್ಮಿಕ ಗ್ರಂಥವು ಹಿಂದುಗಳೆಲ್ಲರ ಮನೆಯನ್ನು ಅಲಂಕರಿಸಲಿ. ನಿಮ್ಮಿಂದ ಇದೇ ರೀತಿ ಬಹುವಿಧ ಅಮೂಲ್ಯ ಗ್ರಂಥರಚನೆಯಾಗಿ ಜನರಲ್ಲಿ ಪ್ರಚುರಗೊಂಡು ಕರ್ತವ್ಯಪ್ರಜ್ಞೆ ಉಂಟಾಗಲೆಂದೂ ಶ್ರೀ ಸೀತಾರಾಮಚಂದ್ರ, ಚಂದ್ರಮೌಳೀಶ್ವರರ ಪರಮಪ್ರಸಾದದಿಂದ ನೀವು ಬಹುಕಾಲ ಸಾರ್ಥಕ ಜೀವನ ನಡೆಸುತ್ತ, ಉತ್ತರೋತ್ತರ ಅಭಿವೃದ್ಧಿ ಹೊಂದಲೆಂದೂ ಹಾರೈಸುತ್ತೇವೆ.

ಇತಿ

ಶ್ರೀಮನ್ನಾರಾಯಣ ಸ್ಮೃತಯಃ

ಶ್ರೀ ದುರ್ಮತಿ ಸಂ।ದ
ಕಾರ್ತಿಕ ಕೃಷ್ಣ ೪ಯು
ದಿನಾಂಕ : ೧೫-೧೧-೧೯೮೧
ವಸತಿ : ತೀರ್ಥರಾಜಪುರವಿರಾಜಿತ ಶ್ರೀಮದ್ರಾಮಚಂದ್ರಾಪುರ ಮಠ,
ಶಿವಮೊಗ್ಗ ಜಿಲ್ಲಾ

॥ ಶ್ರೀ ರಾಜ-ರಾಜೇಶ್ವರೀ ಪ್ರಸನ್ನ ॥

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯೇತ್ಯಾದಿ ಬಿರುದಭೂಷಿತ ಅದ್ವೈತಸಿದ್ಧಾಂತ ಪ್ರಬಂಧಪ್ರವರ್ತಕ ಶ್ರೀಮತ್ಸುಧಾಪುರವರಸಿಂಹಾಸನಾಧೀಶ್ವರ ಸರ್ವತಂತ್ರಸ್ವತಂತ್ರ ವ್ಯಾಖ್ಯಾನ ಸಿಂಹಾಸನಾಧಿಷ್ಠಿತ ರಾಜಾಧಿರಾಜದೇಶಿಕ ಗೋಕರ್ಣಮಂಡಲಾಧೀಶ್ವರ ಸಹ್ಯಾದ್ರಿಪುರವರಾಧೀಶ್ವರ ಶಾಲ್ಮಲೀತೀರವಾಸ ಶ್ರೀಮಲ್ಲಕ್ಷ್ಮೀನೃಸಿಂಹ ಚಂದ್ರಮೌಳಿಪದಪಂಕೇರುಹರಸಗ್ರಾಸಾಳಿವನ್ಮಾನಸ ಶ್ರೀಮತ್ಸೋಂದಾ ಸ್ವರ್ಣವಲ್ಲೀಮಹಾಸಂಸ್ಥಾನಾಧೀಶ್ವರ

ಶ್ರೀಮತ್ ಸರ್ವಜ್ಞೇಂದ್ರ ಸರಸ್ವತೀ ಶ್ರೀ ಸ್ವಾಮಿ ಕರಕಮಲಸಂಜಾತ

# ಶ್ರೀಮದ್ಗಂಗಾಧರೇಂದ್ರ ಸರಸ್ವತೀ ಸ್ವಾಮಿ

ಶ್ರೀ ಸ್ವರ್ಣವಲ್ಲೀಮಠ
ಅಂಚೆ: ಮಠದೇವಳ 581 336
ತಾಲ್ಲೂಕು : ಶಿರಸಿ (ಉ.ಕ.)

ಪ್ರಜಾಪತಿ ಸಂವತ್ಸರ
ಅ. ವೈಶಾಖ ಮಾಸ ಶುದ್ಧ ಪಕ್ಷ
ತಿಥಿ ಷಷ್ಠಿ ರವಿವಾರ

ನಂ.

ದಿನಾಂಕ : 5-5-1991

"ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ" (ನಾರಾಯಣೋಪನಿಷತ್) ಎಂಬ ಉಕ್ತಿಯಂತೆ ಸಮಸ್ತ ಜಗತ್ತಿಗೂ ಮೂಲಾಧಾರಸ್ವರೂಪವಾದ ಸನಾತನಧರ್ಮವನ್ನು ಹಿಂದೂಧರ್ಮ ಎನ್ನುತ್ತೇವೆ. ಅಂಥ ಹಿಂದೂಧರ್ಮವನ್ನು ಸಾರವತ್ತಾಗಿಯೂ, ಸಂಕ್ಷೇಪವಾಗಿಯೂ ಚಿತ್ರಿಸುವುದು ಕಷ್ಟಸಾಧ್ಯ. ಅದರಲ್ಲಿ ಮನೋಹರವಾಗಿ ಬರೆಯುವುದು ಇನ್ನೂ ಕಷ್ಟಸಾಧ್ಯ. ಹೀಗಿರುವಾಗ ಹಿಂದೂಧರ್ಮದ ಸಾರಭೂತಾರ್ಥವನ್ನು ಬಿಡದೆ, ಸಂಕ್ಷೇಪದಲ್ಲಿ ಹೃದಯಕ್ಕೆ ತಲುಪುವಂತೆ ರಚಿಸಲ್ಪಟ್ಟಿದೆ "ಹಿಂದೂಧರ್ಮದ ಪರಿಚಯ" ಎಂಬ ಗ್ರಂಥ.

ಶ್ರೀ ಭಟ್ಟರಿಗೆ ಈ ಕಾರ್ಯದಲ್ಲಿ ಇತೋಪ್ಯತಿಶಯವಾದ ಶಕ್ತಿ, ಧೃತಿ, ಉತ್ಸಾಹ, ಸಾಧನಗಳು ದೊರೆಯಲಿ ಎಂದು ನಮ್ಮ ಆರಾಧ್ಯದೇವತೆಯಾದ ಶ್ರೀ ರಾಜರಾಜೇಶ್ವರೀ, ಶ್ರೀ ಲಕ್ಷ್ಮೀನರಸಿಂಹ, ಶ್ರೀ ಚಂದ್ರಮೌಳೀಶ್ವರರಲ್ಲಿಯೂ ಪ್ರಾರ್ಥಿಸುವದಾಗಿದೆ.

ಶ್ರೀಮದ್ ಗಂಗಾಧರೇಂದ್ರ ಸರಸ್ವತೀ ಸ್ವಾಮಿಗಳವರು

ಫೋನ್ ನಂ. ೫೩೬

॥ ಶ್ರೀಃ ॥

॥ ಶ್ರೀಲಕ್ಷ್ಮೀಹಯವದನಲಕ್ಷ್ಮೀನಾರಾಯಣಾಭ್ಯಾಂ ನಮಃ ॥

॥ ಶ್ರೀಮತೇ ರಾಮಾನುಜಾಯ ನಮಃ ॥

॥ ಶ್ರೀಮತೇ ನಿಗಮಾಂತಮಹಾದೇಶಿಕಾಯ ನಮಃ ॥

॥ ಶ್ರೀಬ್ರಹ್ಮತಂತ್ರಸ್ವತಂತ್ರ ಪರಕಾಲಗುರುಪರಂಪರಾಯೈ ನಮಃ ॥

ಶ್ರೀ ಬ್ರಹ್ಮತಂತ್ರಸ್ವತಂತ್ರ ಪರಕಾಲ ಆಸ್ಥಾನಮ್

ಮೈಸೂರು

ತಾ॥ ೨೫-೨-೧೯೬೮

ಭಾಗಮಂಡಲದಲ್ಲಿರುವ ಶ್ರೀ ಎದುರ್ಕಳ ಕೆ. ಶಂಕರನಾರಾಯಣ ಭಟ್ಟರು ಬರೆದಿರುವ "ಹಿಂದೂಧರ್ಮದ ಪರಿಚಯ" ಎಂಬ ಗ್ರಂಥವನ್ನು ಪರಿಶೀಲಿಸಿದ್ದಲ್ಲಿ ಯಾವ ಮತದವರಿಗೂ ಉದ್ವೇಗವಾಗದಂತೆ ಆಯಾಯ ಮತವನ್ನು ನಿರೂಪಣೆ ಮಾಡಿರುವುದು ಕಂಡುಬಂದಿದ್ದು ಅದು ಶ್ಲಾಘನೀಯವಾಗಿರುತ್ತದೆ. ಇದರಿಂದ ಸಾಮಾನ್ಯ ಜನರಿಗೂ ಸಹ ಉಪಕಾರವಾಗುತ್ತದೆ. ಈಗಿನ ಕಾಲದಲ್ಲಿ ಯಾವ ಮತವನ್ನೂ ಖಂಡಿಸದೆ ಗ್ರಂಥ ರಚಿಸುವುದು ಉತ್ತಮವಾದ ಮಾರ್ಗ. ಆದುದರಿಂದ ಈ ಗ್ರಂಥವು ಸರ್ವರಿಗೂ ಆದರಣೀಯವಾಗುತ್ತದೆ. ಹೀಗೆಯೇ ಈ ಗ್ರಂಥಕಾರರಿಗೆ ಅತಿಶಯಿತ ಜ್ಞಾನವನ್ನು ಶ್ರೀ ಶ್ರೀ ಲಕ್ಷ್ಮೀಹಯಗ್ರೀವರು ಅನುಗ್ರಹಿಸಲಿ ಎಂದು ಶ್ರೀ ಶ್ರೀ ಶ್ರೀಮದಭಿನವ ಶ್ರೀನಿವಾಸ ಬ್ರಹ್ಮತಂತ್ರ ಪರಕಾಲ ಸ್ವಾಮಿಗಳು ಅಪ್ಪಣೆಕೊಡಿಸಿರುತ್ತಾರೆ.

ಶ್ರೀ ನರಸಿಂಹರಾಘವಾಚಾರ್

**Agent or Mukhami Adviser**
**Sri Brahmatantra Parakala Mutt**
**Mysore**

**H. H. Vishweshatirtha Swamiji**
Sri Pajawara Mutt
Jagadguru Madhwacharya Samsthanam
Udipi

श्री विश्वेशतीर्थ स्वामीजी
श्री पेजावर मठ
जगद्गुरु मध्वाचार्य संस्थान
उडुपी
मुक्काम ಉಡುಪಿ
ता. 20-2-68

ಎ. ಕೆ. ಶಂಕರನಾರಾಯಣ ಭಟ್ಟರು ಬರೆದಿರುವ "ಹಿಂದೂಧರ್ಮದ ಪರಿಚಯ" ಪುಸ್ತಕವನ್ನು ಅವಲೋಕಿಸಿದೆವು. ಹಿಂದೂಧರ್ಮದ ಎಲ್ಲಾ ಮುಖಗಳ ಸಂಕ್ಷಿಪ್ತ, ಪರಿಚಯವನ್ನು ಮಾಡಿಸುವ ಈ ಪುಸ್ತಕವು ಅತ್ಯಂತ ಉಪಯುಕ್ತವಾದ ಕೃತಿಯಾಗಿದೆ. ಹಿಂದೂಗಳಾಗಿದ್ದರೂ ತಮ್ಮ ಧರ್ಮದ ಏನೂ ಪರಿಚಯವಿಲ್ಲದೆ ಧಾರ್ಮಿಕ ಜೀವನದಲ್ಲಿ ಹಿಂದುಳಿದಿರುವ ನಮ್ಮ ದೇಶದ ಸಾಮಾನ್ಯ ಜನರಿಗಾಗಿ ಇಂತಹ ಪುಸ್ತಕಗಳು ಹೆಚ್ಚು ಪ್ರಮಾಣದಿಂದ ಹೊರಬೀಳಬೇಕಾಗಿದೆ. ಇಂತಹ ಉತ್ತಮ ಕಾರ್ಯವನ್ನು ನಡೆಸಿದ ಬಗ್ಗೆ ಕೆ. ಶಂಕರನಾರಾಯಣ ಭಟ್ಟರನ್ನು ಅಭಿನಂದಿಸಿ ಅವರಿಗೆ ಶ್ರೀಕೃಷ್ಣನ ಅನುಗ್ರಹವನ್ನು ಹಾರೈಸುವೆವು.

**ಶ್ರೀ ಶ್ರೀ ವಿಶ್ವೇಶತೀರ್ಥಸ್ವಾಮಿ ಶ್ರೀಪಾದಂಗಳವರು**



# H. H. SHRIMAD SUDHINDRATHIRTHA SWAMI
## SHREE KASHI MATH SAMSTHAN
## BANARAS

ಕ್ಯಾಂಪ್ ಶ್ರೀ ವೆಂಕಟರಮಣ ದೇವಸ್ಥಾನ
ಕಲ್ಯಾಣಪುರ 576 114
ದಿನಾಂಕ : 8-1-1990

ನಮ್ಮ ಪ್ರಿಯ ಭಕ್ತರಾದ ಭಾಗಮಂಡಲದ ಎದುರ್ಕಳ ಕೆ. ಶಂಕರನಾರಾಯಣ ಭಟ್ಟರಿಗೆ ಶ್ರೀಮನ್ನಾರಾಯಣ ಸ್ಮರಣೆಗಳೊಡನೆ ಆಶೀರ್ವಾದಗಳು.

ನೀವು 'ಹಿಂದೂಧರ್ಮದ ಪರಿಚಯ' ಗ್ರಂಥದ ನಾಲ್ಕನೇ ಆವೃತ್ತಿಯನ್ನು ಇನ್ನು ಕೆಲವು ತಿಂಗಳುಗಳಲ್ಲಿ ಪ್ರಕಟಿಸಲಿದ್ದೀರಿ ಎಂದು ತಿಳಿದು ನಮಗೆ ತುಂಬ ಸಂತೋಷವಾಗಿರುತ್ತದೆ. ಈ ಗ್ರಂಥವು ಹಿಂದುಗಳಲ್ಲಿ ಆಧ್ಯಾತ್ಮಿಕ ಜಾಗೃತಿಯನ್ನು ಉಂಟುಮಾಡುತ್ತದೆ ಎಂಬುದಾಗಿ ನಾವು ನಂಬಿದ್ದೇವೆ. ನಿಮ್ಮ ಈ ಗ್ರಂಥಪ್ರಕಾಶನವು ಧರ್ಮಶ್ರದ್ಧೆಯುಳ್ಳ ಬಹುಮಂದಿ ಹಿಂದುಗಳ ಸರ್ವವಿಧದ ಸಹಕಾರದಿಂದ ಸಂಪೂರ್ಣ ಯಶಸ್ವಿಯಾಗಲಿ ಎಂಬುದಾಗಿ ಶ್ರೀ ವ್ಯಾಸರಘುಪತಿ ದೇವರ ಪ್ರಾರ್ಥನೆಯೊಡನೆ ಆಶೀರ್ವದಿಸುತ್ತೇವೆ.

—ಶ್ರೀ ಶ್ರೀ ಸುಧೀಂದ್ರತೀರ್ಥ ಸ್ವಾಮಿ ಶ್ರೀಪಾದಂಗಳವರು




ದೂರವಾಣಿ : 353920

ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠ

**ವಿಜಯನಗರ, ಬೆಂಗಳೂರು - 560 040**

**Sri Adi Chunchanagiri Mahasamstana Mutt**

Bangalore Branch, Vijayanagara

Bangalore-560 040


Date : 06-07-89

ಕೊಡಗು ಜಿಲ್ಲೆಯ ಭಾಗಮಂಡಲದ ಶ್ರೀ ಎದುರ್ಕಳ ಶಂಕರನಾರಾಯಣ ಭಟ್ಟರು ಬರೆದಿರುವ "ಹಿಂದೂಧರ್ಮದ ಪರಿಚಯ" ಎಂಬ ಅಪೂರ್ವವಾದ ಗ್ರಂಥವು ಶ್ಲಾಘನೀಯವಾದ ಧಾರ್ಮಿಕ ಸೇವೆಗೆ ಸಮಾಜಕ್ಕೆ ಅನುಕೂಲ ಮಾಡಿಕೊಡುತ್ತದೆ. ಶ್ರೀ ಶಂಕರನಾರಾಯಣ ಭಟ್ಟರು ಈ "ಹಿಂದೂಧರ್ಮದ ಪರಿಚಯ" ಗ್ರಂಥದ ಜನಪ್ರಿಯ ಆವೃತ್ತಿಯನ್ನು ಪ್ರಕಟಿಸಿ ತನ್ಮೂಲಕ ಹಿಂದೂಧರ್ಮಪ್ರಚಾರಸೇವೆಯನ್ನು ಮಾಡಬೇಕೆಂಬ ಸಂಕಲ್ಪಮಾಡಿರುವುದು ನಮಗಂತೂ ತುಂಬ ಹರ್ಷವನ್ನು ಉಂಟು ಮಾಡಿದೆ.

ಇಂದಿನ ನಮ್ಮ ಸಾಮಾಜಿಕ ಪರಿಸ್ಥಿತಿಯಲ್ಲಿ ಇಂತಹ ಧಾರ್ಮಿಕ ಪ್ರಜ್ಞೆಯು ತುಂಬಾ ಅವಶ್ಯಕ. ಶ್ರೀ ಶಂಕರನಾರಾಯಣ ಭಟ್ಟರಿಗೆ ಪೂರ್ಣ ಸಹಕಾರವು ಅತ್ಯವಶ್ಯಕ. ಮಹಾಜನರು ಈ ಕಾರ್ಯಕ್ಕೆ ಸರ್ವ ರೀತಿಯ ಸಹಕಾರವನ್ನು ಕೊಟ್ಟು ಪ್ರೋತ್ಸಾಹಿಸುತ್ತೀರೆಂದು ಆಶಿಸುತ್ತೇವೆ.

**ಜಗದ್ಗುರು ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು**
ಅಧ್ಯಕ್ಷರು
ಕ್ಷೇತ್ರದ ಪೀಠಾಧ್ಯಕ್ಷರು
ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠ



ಫೋನ್ ನಂ. ೩೯

ಶಿವಕುಮಾರ ಸ್ವಾಮಿಗಳವರು
ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲಾ

ದಿನಾಂಕ : ೧೪-೨-೧೯೬೮

ಶ್ರೀ ಎ. ಕೆ. ಶಂಕರನಾರಾಯಣ ಭಟ್ ಇವರು "ಹಿಂದೂಧರ್ಮದ ಪರಿಚಯ" ಎನ್ನುವ ಗ್ರಂಥವನ್ನು ರಚಿಸಿ ತನ್ಮುಖೇನ ಜನತೆಯು ಹಿಂದೂಧರ್ಮದ ಪವಿತ್ರ ತತ್ತ್ವಗಳನ್ನು ತಿಳಿಯಲು ಮಹದುಪಕಾರ ಮಾಡಿದ್ದಾರೆ. ಆಳವಾಗಿ ಅಭ್ಯಾಸ ಮಾಡಿ ತತ್ತ್ವಗಳನ್ನು ಜೀರ್ಣಿಸಿಕೊಂಡು ಬರೆದಿರುವ ಈ ಗ್ರಂಥವು ಹಿಂದೂಧರ್ಮತತ್ತ್ವಗಳ ವೈಶಾಲ್ಯವನ್ನು ಅರಿತು ಅಳವಡಿಸಿಕೊಳ್ಳಲು ತುಂಬಾ ಸಹಾಯಕವಾಗಿದೆ. ಧರ್ಮಶ್ರದ್ಧೆಯು ಕ್ಷೀಣಿಸುತ್ತಿರುವ ಈ ಕಾಲದಲ್ಲಿ ಸರಳವಾಗಿ ಸುಲಭವಾಗಿ ರಚಿತವಾಗಿರುವ ಇಂತಹ ಗ್ರಂಥಗಳು ಓದುಗರ ಮನಸ್ಸನ್ನು ಆಕರ್ಷಿಸಿ ಧರ್ಮದಲ್ಲಿ ಅಭಿರುಚಿಯನ್ನುಂಟು ಮಾಡುತ್ತವೆ. ಹೆಚ್ಚು ಮಂದಿ ಈ ಗ್ರಂಥವನ್ನು ಓದಿ ಉಪಯೋಗಪಡೆಯಲೆಂದು ಹಾರೈಸುತ್ತೇವೆ.

ಶ್ರೀ ಶಿವಕುಮಾರ ಸ್ವಾಮಿಗಳು
ಸಿದ್ಧಗಂಗಾ ಕ್ಷೇತ್ರ



ಸ್ವಾಮಿ ಆದಿದೇವಾನಂದ
ಶ್ರೀ ರಾಮಕೃಷ್ಣ ಮಠ ಮತ್ತು ಮಿಶನ್ ಸಂಸ್ಥೆ

ಶ್ರೀರಾಮಕೃಷ್ಣ ಆಶ್ರಮ

ಬಸವನಗುಡಿ ರಸ್ತೆ
ಬೆಂಗಳೂರು-೧೯

ತಾ॥ ೨೮-೨-೧೯೬೮

ಶ್ರೀ ಎಡಮರ್ಕಳ ಕೆ. ಶಂಕರನಾರಾಯಣ ಭಟ್ಟರು ಬರೆದಿರುವ 'ಹಿಂದೂಧರ್ಮದ ಪರಿಚಯ' ಎಂಬ ಗ್ರಂಥವನ್ನು ನೋಡಿ ನನಗೆ ಪರಮಾನಂದವಾಯಿತು. ಹಿಂದೂ ಧರ್ಮದ ಪರಿಚಯವಾಗಿ ಇಂಥ ಬೃಹದ್‌ಗ್ರಂಥ ನಿರ್ಮಿಸಿರುವುದು ಇದೇ ಮೊದಲ ಸಲ ಇಲ್ಲಿ ಆಸ್ತಿಕ ದರ್ಶನಗಳಲ್ಲದೆ ನಾಸ್ತಿಕ ದರ್ಶನಗಳ ಪರಿಚಯವನ್ನೂ ಕೊಟ್ಟಿದೆ. ಶ್ರೀ ಭಟ್ಟರು ಭಗವದ್ ಶ್ರೀರಾಮಕೃಷ್ಣರ ಪಂಥವನ್ನೂ ಪಥವನ್ನೂ ಅನುಸರಿಸಿ ಎಲ್ಲಾ ದರ್ಶನಗಳ ಉಪಯುಕ್ತವಾದ ವಿಷಯಗಳನ್ನೂ ಸಾಮರಸ್ಯದಿಂದ ಮತ್ತು, ಸಹಾನು ಭೂತಿಯಿಂದ ವಿವರಿಸಿರುತ್ತಾರೆ. ಓದುಗರು ಈ ಗ್ರಂಥವನ್ನು ಸ್ವೀಕರಿಸಲಿ ಎಂಬುದು ನನ್ನ ಪ್ರಾರ್ಥನೆ.

ಸ್ವಾಮಿ ಆದಿದೇವಾನಂದ



ಫೋನ್ { ಪರ್ಸನಲ್ : ೨೨
ಆಫೀಸು : ೨೦ }

**ಶ್ರೀ ಡಿ. ವೀರೇಂದ್ರ ಹೆಗ್ಗಡೆಯವರು**
ಶ್ರೀ ಧರ್ಮಸ್ಥಳ–೫೭೪ ೨೧೬
(ದಕ್ಷಿಣ ಕನ್ನಡ)

ತಾ|| ೧-೯-೧೯೮೦

ಹಿಂದೂಧರ್ಮದ ಬಗ್ಗೆ ಪ್ರಕಟವಾದ ಪುಸ್ತಕಗಳಲ್ಲಿ ಅತ್ಯಂತ ಸುಲಭ ಶೈಲಿಯಲ್ಲಿ ಜನಸಾಮಾನ್ಯರೂ ಕೂಡಾ ಹಿಂದೂಧರ್ಮದ ಪರಿಚಯ ಮಾಡಿಕೊಳ್ಳಲು ಇದು ಯೋಗ್ಯವಾದ ಪುಸ್ತಕವಾಗಿದೆ. ಹಿಂದುಗಳಿಗೆ ಇದುವರೆಗೆ ತಮ್ಮ ಧರ್ಮದ ಬಗ್ಗೆ, ಪುರಾಣಗಳ ಬಗ್ಗೆ, ಉಪನಿಷತ್ತುಗಳ ಬಗ್ಗೆ, ಗುರುಪರಂಪರೆ ಸಂತರು ಮತ್ತು ಇತರ ಧರ್ಮಗಳ ಸಂಕ್ಷಿಪ್ತ ಪರಿಚಯ ಇಷ್ಟು ಸಂಕ್ಷಿಪ್ತವಾಗಿ ಬೇರೆ ಯಾವುದೇ ಪುಸ್ತಕದಲ್ಲಿ ದೊರಕುವುದಿಲ್ಲ. ಇದನ್ನು ಬರೆದ ಶ್ರೀ ಎದುರ್ಕಳ ಕೆ. ಶಂಕರನಾರಾಯಣ ಭಟ್ಟರು ಅಭಿನಂದನಾರ್ಹರು. ಹಾಗೂ ಈ ಗ್ರಂಥ ಪ್ರತಿಯೋರ್ವ ಹಿಂದೂವಿನ ಮನೆಯಲ್ಲಿ ಸಂಗ್ರಹ ಮಾಡಿ ಇಡಲು ಸೂಕ್ತವಾಗಿದೆ.

ಈ ಪುಸ್ತಕ ಮೂರನೇ ಬಾರಿ ಮುದ್ರಣ ಕಾಣುತ್ತಿರುವುದು ಸಂತೋಷದ ವಿಚಾರ. ಹಿಂದೂಧರ್ಮದ ಬಗ್ಗೆ ಇಂತಹ ಹೆಚ್ಚು ಹೆಚ್ಚು ಕೃತಿಗಳನ್ನು ಶ್ರೀ ಭಟ್ಟರು ರಚಿಸಿ ಹೆಚ್ಚಿನ ಸೇವೆಸಲ್ಲಿಸುವಂತೆ ಶ್ರೀ ಮಂಜುನಾಥಸ್ವಾಮಿಯು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

**ಡಿ. ವೀರೇಂದ್ರ ಹೆಗ್ಗಡೆಯವರು**
ಶ್ರೀಧರ್ಮಸ್ಥಳ



## GOVERNMENT OF MYSORE

**K. Shankara Gowda,** *B.Sc., LL.B.*
**Minister for Education**

**Vidhana Soudha**
**Bangalore-1**

**Dated 3-3-1968**

ಭಾಗಮಂಡಲದ ಶ್ರೀ ಎ. ಕೆ. ಶಂಕರನಾರಾಯಣ ಭಟ್‌ರವರು ರಚಿಸಿರುವ "ಹಿಂದೂಧರ್ಮದ ಪರಿಚಯ" ಎಂಬ ಪುಸ್ತಕವನ್ನು ನೋಡಿರುತ್ತೇನೆ. ಹಿಂದೂ ಧರ್ಮದ ವಿವಿಧ ಮುಖಗಳ ಪರಿಚಯ ಮಾಡಿಕೊಡುವ ಈ ಗ್ರಂಥವು ಬರೇ ತತ್ತ್ವಗಳನ್ನು ಮಾತ್ರ ಹೇಳದೆ ಅನುಷ್ಠಾನವನ್ನೂ ಇತಿಹಾಸ ಸಂಗತಿಗಳನ್ನೂ ಹೇಳಿ ಆಧುನಿಕ ಕಾಲದಲ್ಲೂ ಕೂಡ ಧರ್ಮವು ಎಷ್ಟು ಅಗತ್ಯ ಎಂಬುದನ್ನು ವಿವರಿಸುತ್ತದೆ. ವೇದಾಂತಕ್ಕೂ—ವಿಜ್ಞಾನಕ್ಕೂ ಇರುವ ಪರಸ್ಪರ ಸಂಬಂಧ ಮತ್ತು ಜೀವನದಲ್ಲಿ ಅದರ ಸ್ಥಾನ ಇವುಗಳನ್ನು ವಿವರಿಸಿದಂತೆ ಆದರ್ಶ ಹಿಂದು ಎಂದರೆ ಯಾರು ? ಅವನ ದಿನಚರಿ ಹೇಗಿರಬೇಕು ಎಂಬುದನ್ನೂ ಅತಿಸೂಕ್ಷ್ಮವೂ ಹೆಚ್ಚು ವಿಸ್ತಾರವೂ ಅಲ್ಲದ ರೀತಿಯಲ್ಲಿ ಹೇಳಿ, ನೀತಿವಿಚಾರ, ಯೋಗವಿಚಾರ ಇತ್ಯಾದಿ ಹಿಂದೂಧರ್ಮದ ವಿವಿಧ ಮುಖಗಳ ಪರಿಣಾಮಕಾರಿಯಾದ ಪರಿಚಯವನ್ನು ಶ್ರೀ ಭಟ್ಟರು ತಮ್ಮ ಈ ಗ್ರಂಥದಲ್ಲಿ ತುಂಬಾ ಆಕರ್ಷಣೀಯವಾದ ಮತ್ತು ವಿದ್ವತ್ಪೂರ್ಣವಾದ ರೀತಿಯಲ್ಲಿ ಮಾಡಿರುತ್ತಾರೆ. ಧರ್ಮದ ಕುರಿತಾಗಿ ಕ್ಷೀಣವಾಗುತ್ತಿರುವ ಶ್ರದ್ಧೆ, ಹಿಂದೂಧರ್ಮ ಎಂದರೇನು ? ಎಂದು ತಿಳಿಯದೆ ಇರುವ ನಮ್ಮ ಸಮಾಜದಲ್ಲಿನ ಅನೇಕರ ಪರಿಸ್ಥಿತಿ, ಬೆಳೆದುಬರುತ್ತಿರುವ ದೇಶದ ವಿದ್ಯಾರ್ಥಿಗಳು—ಈ ದೃಷ್ಟಿಯಿಂದ ನೋಡಿದರೆ ಶ್ರೀ ಭಟ್ಟರ ಈ ಗ್ರಂಥವು ಅತ್ಯಂತ ಉಪಯುಕ್ತ ಹಾಗೂ ಸ್ವಾಗತಾರ್ಹ ಗ್ರಂಥವಾಗಿದೆ. ಅವರಿಗೆ ಎಲ್ಲ ವಿಧದ ಯಶಸ್ಸುಂಟಾಗಲಿ ಎಂದು ಹಾರೈಸುತ್ತೇವೆ.

**ಕೆ. ವಿ. ಶಂಕರಗೌಡ**
**Minister for Education**

3-3-1968

# BANGALORE UNIVERSITY

**Dr. V. K. GoKAK**
**Vice-Chancellor**

**Bangalore-1**
**Dated 1-3-1968**

ಶ್ರೀಮಾನ್ ಶಂಕರನಾರಾಯಣ ಭಟ್ ಅವರು ರಚಿಸಿದ 'ಹಿಂದೂಧರ್ಮದ ಪರಿಚಯ' ಎಂಬ ಉದ್ಗ್ರಂಥವನ್ನು ನೋಡಿದ್ದೇನೆ ಸನಾತನ ಅಶ್ವತ್ಥವೃಕ್ಷದಂತೆ ಮಹಾವ್ಯಾಪಿಯಾದ ಹಿಂದೂಧರ್ಮದ ಬೇರುಗಳನ್ನು ಗುರುತಿಸಿ ಶಾಖೋಪಶಾಖೆಯಾಗಿರುವ ಅದರ ವಿಕಾಸವನ್ನು ಸಹ ಶ್ರೀಮಾನ್ ಶಂಕರನಾರಾಯಣ ಭಟ್ ಅವರು ಇಲ್ಲಿ ವಿವರವಾಗಿ ರೂಪಿಸಿದ್ದಾರೆ. ಒಂದು ಧರ್ಮದ ಸಮಗ್ರ, ಇತಿಹಾಸ, ತತ್ತ್ವದರ್ಶನ, ನೀತಿಶಾಸ್ತ್ರ, ಸಾಮಾಜಿಕ ರೂಢಿ ಹಾಗೂ ಚೌಕಟ್ಟು, ಅದರದೇ ಆದ ಮನಃಶಾಸ್ತ್ರ, ಭೌಗೋಲಿಕ ಪ್ರಾಶಸ್ತ್ಯ, ಕರ್ಮಕಾಂಡ ಇವೇ ಮೊದಲಾದ ವಿಷಯಗಳು ಇಲ್ಲಿ ವಿವರಪೂರ್ಣವಾಗಿ ಬಂದಿವೆ. ಐತಿಹಾಸಿಕ ದೃಷ್ಟಿ ಎಲ್ಲೆಡೆಯಲ್ಲಿ ತೋರಿಸಿಕೊಂಡಿದ್ದರೂ, ಗ್ರಂಥರಚನಾಶೈಲಿ ವಿವರಪೂರ್ಣ ಹಾಗು ವರ್ಣನಾಪರವಾಗಿದೆ. ಹಿಂದೂಧರ್ಮವು ಧರ್ಮವೇ ಅಲ್ಲವೆಂದು ಸಾಧಿಸುವವರು ಇದ್ದಾರೆ. ಅದು ಅಷ್ಟೊಂದು ವಿಶ್ವವ್ಯಾಪಿಯಾಗದೆ ಏನು ಮಾಡೀತು ? ಆದರೂ ಅದೊಂದು ಧರ್ಮ ಹಾಗು ಪ್ರಾಚೀನತಮವಾದ ಧರ್ಮವೆಂದು ಈ ಗ್ರಂಥವನ್ನು ಅಭ್ಯಸಿಸಿ ಗ್ರಹಿಸಬಹುದು. ಇಂತಹ ವಿಶಿಷ್ಟ ಕಾರ್ಯಕ್ಕಾಗಿ ಶ್ರೀಮಾನ್ ಶಂಕರನಾರಾಯಣ ಭಟ್ ಅವರು ತಮ್ಮ ಜೀವನವನ್ನು ಮುಡುಪಿಟ್ಟಂತೆ ಕಾಣುತ್ತದೆ. ಅವರಿಗೆ ಎಲ್ಲ ಯಶಸ್ಸಿರಲಿ.

ವಿ. ಕೃ. ಗೋಕಾಕ್

ಬೆಂಗಳೂರು
೧-೩-೧೯೬೮

ಫೋನ್ : ೨೪೮೭೬

ಕನ್ನಡ ಸಾಹಿತ್ಯ ಪರಿಷತ್ತು

ಅಧ್ಯಕ್ಷರು

ಜಿ. ವೆಂಕಟಸುಬ್ಬಯ್ಯ, ಎಂ ಎ., ಬಿ ಟಿ.

ಪಂಪಮಹಾಕವಿ ರಸ್ತೆ
ಚಾಮರಾಜಪೇಟೆ
ಬೆಂಗಳೂರು-೧೮

ದಿನಾಂಕ : ೨-೩-೧೯೭೮

"ಹಿಂದೂಧರ್ಮವು ಒಂದು ಧರ್ಮವೇ ಅಲ್ಲ; ಅದು ಮತವೂ ಅಲ್ಲ" ಎಂದು ಅಪಹಾಸ್ಯಮಾಡುವ ಅನೇಕ ಮಂದಿ ಇಂದೂ ಇದ್ದಾರೆ. ಸ್ವಾಮಿ ವಿವೇಕಾನಂದರಂಥ ಮಹಾನುಭಾವರಿಂದ ಹಿಂದೂಧರ್ಮದ ಸಾರವೇನೆಂಬುದನ್ನು ಗ್ರಹಣಮಾಡಿದ ಪಾಶ್ಚಾತ್ಯರಲ್ಲಿ ಹಿಂದೂಧರ್ಮದ ಬಗ್ಗೆ ಆದರ ಹೆಚ್ಚಿರುವಾಗ ಕೂಡ ಭಾರತದ ಭೇದ ಬುದ್ಧಿಗಳು ಈ ಅಪಪ್ರಚಾರದಲ್ಲಿ ತೊಡಗಿರುವುದು ಕಾಣಬರುತ್ತದೆ. ಆದರೆ ಹಿಂದೂ ಧರ್ಮವೇನೆಂಬುದನ್ನು ಎರಡು ಮಾತುಗಳಲ್ಲಿ ಮಾತ್ರ ಹೇಳಿಬಿಡುವುದು ಸಾಧ್ಯವಲ್ಲ. ಇದಕ್ಕೆ ಆಳವಾದ ಪಾಂಡಿತ್ಯ, ವಿಸ್ತಾರವಾದ ವೇದಶಾಸ್ತ್ರ ಪುರಾಣ ಸಾಹಿತ್ಯ ಪರಿಚಯ ಅಗತ್ಯ. ಹಿಂದೂಧರ್ಮವು ನಾಲ್ಕು ಸೂತ್ರಗಳ ಕ್ರೋಢೀಕರಣವಲ್ಲ; ಅದೊಂದು ಜೀವನಮಾರ್ಗವೆಂಬುದನ್ನು ಈ ಗ್ರಂಥ ತುಂಬ ಸಾರವತ್ತಾಗಿ ಪ್ರತಿಪಾದಿಸಿದೆ. ಶ್ರೀ ಎದುರ್ಕಳ ಕೆ. ಶಂಕರನಾರಾಯಣ ಭಟ್ಟರು ರಚಿಸಿರುವ 'ಹಿಂದೂಧರ್ಮದ ಪರಿಚಯ' ಎಂಬ ಹೆಸರಿನ ಈ ಗ್ರಂಥದಲ್ಲಿ ಹಿಂದೂಧರ್ಮದ ಎಲ್ಲ ಮುಖಗಳ ಸ್ಪಷ್ಟ ಪರಿಚಯ ವಿದೆ. ನಿಸ್ಸಂಶಯವಾಗಿ ಹೀಗೆ ಶಾಸ್ತ್ರವಿವರಣೆ ನೀಡಬೇಕಾದರೆ ದೀರ್ಘಕಾಲದ ವ್ಯಾಸಂಗ-ಪರಿಶ್ರಮಗಳು ಅಗತ್ಯ.

ಈ ಗ್ರಂಥವು ಕೇವಲ ಪಾಂಡಿತ್ಯದ ಕಬ್ಬಿಣದ ಕಡಲೆಯಾಗಿರದೆ ಪಾಮರರಿಗೂ ಅರ್ಥವಾಗುವ ರೀತಿಯಲ್ಲಿ ರಚಿತವಾಗಿದೆ. ಕನ್ನಡದ ಶೈಲಿ ಸುಲಭವೂ ಸರಳವೂ ಆಕರ್ಷಕವೂ ಆಗಿದೆ.

ಶಾಲೆಕಾಲೇಜುಗಳಲ್ಲಿ ಇಂಥದೊಂದು ಕೈಪಿಡಿ ಇದ್ದಲ್ಲಿ ಅಧ್ಯಾಪಕರಿಗೂ ವಿದ್ಯಾರ್ಥಿಗಳಿಗೂ ತುಂಬ ಪ್ರಯೋಜನವುಂಟು. ಸಾಹಿತ್ಯಾಭ್ಯಾಸಿಗಳಿಗಂತೂ ಇದು ಒಂದು ವರವೇ ಆಗಿದೆ. ಈ ಗ್ರಂಥವು ಸಾವಿರಾರು ಪ್ರತಿಗಳಾಗಿ ಅಚ್ಚಾಗಿ ನಾಡಿನ ಮೂಲೆಮೂಲೆಗಳಲ್ಲೂ ಸಿಕ್ಕುವಂತಾಗಲಿ.

೨-೩-೧೯೭೮

ಜಿ. ವೆಂಕಟಸುಬ್ಬಯ್ಯ

**Prof. S. S. RAGAHAVACHAR, M.A.**
Professor and Head of the Department of
Post-Graduate Studies in Philosophy,
University of Mysore, Manasa Gangotri
Mysore-6

Mysore

Date : 10-3-1968

ಶ್ರೀಮಾನ್ ಎದುರ್ಕಳ ಕೆ. ಶಂಕರನಾರಾಯಣ ಭಟ್ಟರ 'ಹಿಂದೂಧರ್ಮದ ಪರಿಚಯ'ವನ್ನು ಆಮೂಲಾಗ್ರವಾಗಿ ಅವಲೋಕನ ಮಾಡಿದ್ದೇನೆ ಶ್ರೀ ಭಟ್ಟರಿಗೆ ಅವರ ಗುರುಗಳಾದ ಪರಮಪೂಜ್ಯ ಶ್ರೀಮತ್ ಸ್ವಾಮೀ ಯತೀಶ್ವರಾನಂದರ ಅನುಗ್ರಹ ಪೂರ್ಣವಾಗಿರುವುದರಿಂದ ಈ ಮಹತ್ಕಾರ್ಯಕ್ಕೆ ಬೇಕಾದ ಸಾತ್ವಿಕ ಸ್ಫೂರ್ತಿ—ಉತ್ಸಾಹ ಮತ್ತು ನಿರೂಪಣೀಯ ಪ್ರಮೇಯಗಳ ವಿಷಯದಲ್ಲಿ ವಿಶಾಲವಾದ ಪಾಂಡಿತ್ಯ ಒದಗಿದೆ. ಅವರ ಗ್ರಂಥ ಪರಿಶುದ್ಧವಾದ ಭಾವದಿಂದ ಹೊರಟು ಸಾಮಾನ್ಯವಾಗಿ ಧರ್ಮದಲ್ಲಿ ಶ್ರದ್ಧೆಯನ್ನು ಹುಟ್ಟಿಸುವುದಲ್ಲದೆ ಹಿಂದೂಧರ್ಮದ ವೈಶಿಷ್ಟ್ಯವನ್ನು ಹೃದಯಂಗಮವಾಗಿ ಚಿತ್ರಿಸಿ ಅದರ ಶಾಖೋಪಶಾಖೆಗಳ ಪರಿಚಯವನ್ನು ಪ್ರಾಮಾಣಿಕವಾಗಿಯೂ ಸ್ಫುಟವಾಗಿಯೂ ಉಂಟುಮಾಡುತ್ತದೆ. ದೊಡ್ಡ ವಸ್ತುವನ್ನು ಕುರಿತ ಬರವಣಿಗೆಯನ್ನು ಇಷ್ಟು ಸಮರ್ಪಕವಾಗಿ ನಿರ್ವಹಿಸಿರುವುದು ಅತ್ಯಂತ ಶ್ಲಾಘನೀಯವಾಗಿದೆ. ಪಾಮರರಿಗೆ ಧರ್ಮಬೋಧೆಯನ್ನು ಮಾಡಬೇಕೆಂದು ಗ್ರಂಥಕಾರರ ಉದ್ದೇಶವಾಗಿದ್ದರೂ ಪಂಡಿತರೂ ಇದರಿಂದ ವಿಶೇಷ ಉಪಕಾರವನ್ನು ಹೊಂದುವಂತೆ ಗ್ರಂಥವು ಹೊರಬಿದ್ದಿದೆ. ವಿಸ್ತಾರವಾಗಿ ಹೇಳಬೇಕಾದ ವಿಷಯವನ್ನು ಲೋಪವಿಲ್ಲವೆ ಹೇಳುವುದರಲ್ಲಿಯೂ ಸಾರತತ್ತ್ವಗಳನ್ನು ಚಾಚೂ ತಪ್ಪದೆ ನಿರೂಪಣೆ ಮಾಡುವುದರಲ್ಲಿಯೂ ಮತ್ತು ಗ್ರಹಣಕ್ಕೆ ಸೌಕರ್ಯವಾಗುವಂತೆ ಜಟಿಲವಾದ ಪ್ರಮೇಯಗಳನ್ನು ಸರಿಯಾಗಿ ವಿಭಜನೆ ಮಾಡಿಕೊಂಡು ಪ್ರತಿಪಾದನೆ ಮಾಡುವುದರಲ್ಲಿಯೂ ಗ್ರಂಥಕರ್ತರು ಬಹಳ ಯಶಸ್ವಿಯಾಗಿ ಕೆಲಸ ಮಾಡಿದ್ದಾರೆ.

ಒಳ್ಳೆಯ ಭಾಷೆಯಲ್ಲಿ ಮಹತ್ವಪೂರ್ಣ ವಿಷಯಗಳನ್ನು, ಹೃದಯಸ್ಪರ್ಶಿಯೂ ಬೋಧಪ್ರದವೂ ಆದ ರೀತಿಯಲ್ಲಿ ಪ್ರವಚನ ಮಾಡಿದ್ದಾರೆ. ಕನ್ನಡನಾಡಿನ ಧರ್ಮಜಿಜ್ಞಾಸುಗಳಿಗೆ ಈ ಗ್ರಂಥವು ಮಹೋಪಕಾರವಾಗಿದೆ. ಅತ್ಯಂತ ಹರ್ಷದಿಂದ ಗ್ರಂಥಕರ್ತರಿಗೆ ಈ ಅಭಿನಂದನೆಯನ್ನು ನೀಡುತ್ತಿದ್ದೇನೆ.

**ಎಸ್. ಎಸ್. ರಾಘವಾಚಾರ್**

॥ ಶ್ರೀ ॥

ಪುರಾಣ-ಉಪನ್ಯಾಸಕೇಸರಿ,
ವಿದ್ಯಾಭೂಷಣ, ವೇದಾಂತನಿಪುಣ,
ಅಭಿನವವಾಲ್ಮೀಕಿ, ಪಂಡಿತರಾಜ,
ಎನ್. ಟಿ. ಶ್ರೀನಿವಾಸ ಅಯ್ಯಂಗಾರ್
ವ್ಯಾಕರಣಸಾಹಿತ್ಯ ವಿದ್ವಾನ್

ಸಂಸ್ಕೃತಿ ಪ್ರಚಾರ ಕಾರ್ಯಾಲಯ
ನಂ. ೧೩, ರಂಗರಾವ್ ರಸ್ತೆ
ಶಂಕರಪುರಂ
ಬೆಂಗಳೂರು-೪
೨೦-೨-೧೯೬೮

ಶ್ರೀಮಾನ್ ಎ. ಕೆ. ಶಂಕರನಾರಾಯಣ ಭಟ್
ಭಾಗಮಂಡಲ-ಕೊಡಗು

ನೀವು ಅನೇಕ ಗ್ರಂಥಗಳನ್ನು ಶ್ರದ್ಧೆಯಿಂದ ಅಧ್ಯಯನ ಮಾಡಿ ಅವುಗಳಲ್ಲಿ ಅಡಕವಾಗಿರುವ ತತ್ತ್ವಗಳನ್ನು ಸಂಗ್ರಹಿಸಿ ಸಾರಭಾಗಗಳನ್ನು ಆರಿಸಿ ಜಾಗರೂಕತೆಯಿಂದ ಸಂಕಲನ ಮಾಡಿ ಪಾಮರರಿಗೂ ತಿಳಿಯುವಂತೆ ಪಂಡಿತರೂ ಒಪ್ಪುವಂತೆ ಮನೋಹರವಾಗಿ ಗ್ರಂಥರೂಪದಲ್ಲಿ ಚಿತ್ರಿಸಿರುವಿರಿ. ಅರ್ಥಮಾಡಿಕೊಳ್ಳುವ ಪಾಂಡಿತ್ಯ, ಸಾರಾಸಾರ ವಿವೇಚನೆ ಮಾಡುವ ಬುದ್ಧಿಶಕ್ತಿ, ಸಂವಿಧಾನಕೌಶಲಿ, ತಿಳಿಯಾಗಿ ತಿಳಿಯಪಡಿಸುವ ಜಾಣ್ಮೆ, ಸುಂದರವಾಗಿ ರಚಿಸುವ ವಾಕ್ಯಶೈಲಿ ಮುಂತಾದ ಗುಣಗಳು ಭಗವಂತನ ಕೃಪೆಯಿಂದ ನಿಮ್ಮಲ್ಲಿ ತುಂಬಿವೆ. ಗಹನವಾದ ತತ್ತ್ವಗಳನ್ನು, ಭಾರತೀಯರ ಸಂಸ್ಕೃತಿಯನ್ನು, ಹಿಂದೂಧರ್ಮದ ಮರ್ಮವನ್ನು ಜನಸಾಮಾನ್ಯಕ್ಕೆ ಬೋಧನೆಯಾಗುವ ಹಾಗೆ ಮಾಡಬೇಕೆಂಬ ಉದಾತ್ತವಾದ ಆಕಾಂಕ್ಷೆ, ದೇಶದಲ್ಲಿ ಹರಡಿರುವ ಅನೇಕ ಮತಗಳಿಗೂ ಭಾರತೀಯರ ಆರ್ಷೇಯ ಅಥವಾ ವೈದಿಕಮತಕ್ಕೂ ಇರುವ ಅಂತರ, ಹಾಗೂ ಅನಾದಿ ಕಾಲದಿಂದ ಅಳಿಯದೆ ಬೆಳೆದುಬಂದಿರುವ ಈ ಮತದ ಹಿರಿಮೆ ಮುಂತಾದುವುಗಳನ್ನು ಎತ್ತಿತೋರಬೇಕೆಂಬ ಹೆಬ್ಬಯಕೆ ವಾಸ್ತವವಾಗಿ ಸ್ತುತ್ಯ. ನೀವು ಶ್ರಮವಹಿಸಿ ಬರೆದಿರುವ 'ಹಿಂದೂಧರ್ಮದ ಪರಿಚಯ' ಎಂಬ ಉತ್ತಮ ಹಾಗೂ ಉಪಕಾರಕ ಗ್ರಂಥವನ್ನು ನಿಮ್ಮಿಂದ ಓದಿಸಿ ಕೇಳುವ ಭಾಗ್ಯ ನನಗೆ ದೊರೆತುದು ಸಂತೋಷದ ಸಂಗತಿ ನಿಮ್ಮ ಈ ಗ್ರಂಥವು ದಯಾಮಯನಾದ ಸರ್ವೇಶ್ವರನ ಪರಮಾನುಗ್ರಹದಿಂದ ಬೇಗನೆ ಮುದ್ರಿತವಾಗಿ ಕನ್ನಡಿಗರೆಲ್ಲರಿಗೂ ಉಪಕಾರವಾಗಲಿ. ಇದರಿಂದ ನಮ್ಮ ಜನರು ನಮ್ಮ ಸಾಂಸ್ಕೃತಿಕಯ ಹಿರಿಮೆಯನ್ನು ಅರಿತು ಪರಸಂಸ್ಕೃತಿಯ ಮೋಹವನ್ನು ಕಳೆದುಕೊಳ್ಳುವಂತಾಗಲಿ, ಪರಕೀಯರ ಮಾತಿನ ಬಲೆಗೆ ಸಿಕ್ಕಿ ಬಾಧೆಪಡದಂತಾಗಲಿ. ನಮ್ಮ ಸಂಸ್ಕೃತಿ ಧರ್ಮ ಮತ ಚಿರವಾಗಿ ಸರ್ವಾಂಗಸುಂದರತೆಯಿಂದ ಬಾಳಲಿ ಎಂದು ಮನಃಪೂರ್ವಕವಾಗಿ ಹಾರೈಸುತ್ತೇನೆ.

ಎನ್. ಟಿ. ಶ್ರೀನಿವಾಸ ಅಯ್ಯಂಗಾರ್

Vidyalankara Prof. S. K. RAMACHANDRA RAO, M.A.
Principal
College of Oriental Studies
Bangalore-20

ಭಾಗಮಂಡಲದ ಶ್ರೀ ಎದುರ್ಕಳ ಕೆ. ಶಂಕರನಾರಾಯಣ ಭಟ್ಟರು ಬರೆದಿರುವ ಹಿಂದೂಧರ್ಮದ ಪರಿಚಯಾತ್ಮಕವಾದ ಗ್ರಂಥವನ್ನು ಅವಲೋಕಿಸುವ ಅವಕಾಶವಾಯಿತು. ಹಿಂದೂಧರ್ಮದ ವ್ಯಾಪ್ತಿ ಎಷ್ಟು ವಿಶಾಲವಾದುದೋ ಭಟ್ಟರ ಗ್ರಂಥವೂ ಅಷ್ಟೇ ವಿಶಾಲವಾಗಿದೆ ಹಿಂದೂಧರ್ಮಕ್ಕೆ ಸಂಬಂಧಪಟ್ಟ ವಿಶಿಷ್ಟ ವಿವರಗಳನ್ನೂ ಸಾರವರಿತು ಇಲ್ಲಿ ತುಂಬಿಸಿದ್ದಾರೆ ; ದರ್ಶನಗಳ ಪ್ರಕ್ರಿಯೆಗಳಿಂದ ಹಿಡಿದು ತೀರ್ಥಕ್ಷೇತ್ರಗಳವರೆಗೆ, ಪ್ರಸ್ಥಾನತ್ರಯಗಳಿಂದ ಹಿಡಿದು ಸಂಧ್ಯಾಗಾಯತ್ರಿಯವರೆಗೆ, ಮತತ್ರಯಗಳಿಂದ ಹಿಡಿದು ಷೋಡಶಸಂಸ್ಕಾರಗಳವರೆಗೆ, ವೈದಿಕವಾಙ್ಮಯದಿಂದ ಹಿಡಿದು ಸೆಕ್ಯುಲರ್ ರಾಜ್ಯದವರೆಗೆ ಎಲ್ಲ ವಿಷಯಗಳನ್ನೂ ಸಮಗ್ರವಾಗಿ, ಸಂಕ್ಷೇಪವಾಗಿ ನಿರೂಪಿಸಿದ್ದಾರೆ. ಹಿಂದೂಧರ್ಮಕ್ಕೆ ಸಂಬಂಧಿಸಿದಂತೆ ಕನ್ನಡದಲ್ಲಿ ಈ ಬಗೆಯ ಕಿರಿದೊಂದು ವಿಶ್ವಕೋಶ ಇಲ್ಲಿಯವರೆಗೆ ಬಂದುದಿಲ್ಲ. ಭಾಷೆ ತಿಳಿಯಾಗಿದೆಯಾಗಿ, ವಿಷಯ ಗಹನವಾದಾಗಲೂ ಪುಸ್ತಕ ಜಟಿಲವೆನಿಸುವುದಿಲ್ಲ, ವಿವರಗಳ ಸ್ವಾರಸ್ಯ ಕುಗ್ಗುವುದಿಲ್ಲ. ಶ್ರೀರಾಮಕೃಷ್ಣರ ಆಶ್ರಮದ ಹಿರಿಯರಿಂದ ನೆರವನ್ನು ಪಡೆದು, ಪ್ರೌಢಿಮೆಯನ್ನು ಗಳಿಸಿಕೊಂಡ ಶ್ರೀ ಭಟ್ಟರು, ಅವಿರತವಾದ ವ್ಯವಸಾಯದಿಂದಲೂ ನಿಶ್ಚಲವಾದ ಶ್ರದ್ಧೆಯಿಂದಲೂ ವೈದುಷ್ಯವನ್ನು ಪಡೆದುಕೊಂಡು ಈ ಬೃಹದ್ಗ್ರಂಥವನ್ನು ಸಿದ್ಧಪಡಿಸಿದ್ದಾರೆ. ಶ್ರೀ ಭಟ್ಟರು ಸರಳರು, ಸಂಪನ್ನರು, ವಿವೇಕಿಗಳು, ವಿದ್ಯಾವಂತರು. ಧರ್ಮದ ಬಗ್ಗೆ ಅವರಿಗೆ ಇರುವ ವಿಶ್ವಾಸ ಅಪಾರವಾದುದು. ದಕ್ಷಿಣದೇಶವನ್ನೆಲ್ಲ ಫಲವತ್ತಾಗಿಸಿದ ಪುಣ್ಯನದಿ ಕಾವೇರಿಯ ಮೂಲಸ್ಥಾನದಲ್ಲಿ ನೆಲೆಸಿರುವ ಭಟ್ಟರು ಕಾವೇರಿಯಂತೆಯೇ ತಮ್ಮ ಸಾರಸ್ವತ ಸ್ರೋತದಿಂದ ಕನ್ನಡನಾಡನ್ನು ಶುದ್ಧಿಗೊಳಿಸಲಿ. ಧರ್ಮಶ್ರದ್ಧೆ ಜಾರುತ್ತಿರುವ ಈ ಕಾಲದಲ್ಲಿ ಇಂಥ ಗ್ರಂಥಗಳ ಅಗತ್ಯ ವಿಶೇಷವಾಗಿ ಉಂಟು. ಉತ್ಸುಕರಾದ ಯುವಕರಿಗೆ ಮಾರ್ಗದರ್ಶನ ಮಾಡುವ ಪುಸ್ತಕಗಳು ಬೇಕಾಗಿವೆ. ಹಲವಾರು ಗ್ರಂಥಗಳನ್ನು ಆಲೋಚನೆಮಾಡಿ ಗಳಿಸಿಕೊಳ್ಳಬಹುದಾದ ಸಾರಸ್ವತ ಸಂಪತ್ತು, ಒಂದೇ ಗ್ರಂಥದಲ್ಲಿ ದೊರಕುವಂತೆ ಶ್ರೀ ಭಟ್ಟರು ಪ್ರಯತ್ನಪಟ್ಟಿದ್ದಾರೆ. ಅವರ ಪ್ರಯತ್ನ ಯಶಸ್ವಿಯೂ ಆಗಿದೆ. ಅದು ಸಾರ್ಥಕವಾಗಬೇಕಾದರೆ ನಾಡಿನ ಜನ ಇದರ ಪ್ರಯೋಜನವನ್ನು ಪಡೆದುಕೊಳ್ಳಬೇಕು. ದೀರ್ಘನಿದ್ರೆಯಿಂದ ಇದೀಗ ಏಳುತ್ತಿರುವ ಹಮ್ಮವರು ಹಾಗೆ ಮಾಡಿಯಾರೆಂದು ನನಗನಿಸುತ್ತದೆ.

ಬೆಂಗಳೂರು
೨೮-೨-೧೯೭೮

ಎಸ್. ಕೆ. ರಾಮಚಂದ್ರರಾವ್

|| ಸಿರಿಗನ್ನಡಂ ಗೆಲ್ಗೆ—ಬಾಳ್ಗೆ ||

ಫೋನ್ : ೨೨೭೩೪

ಶರಣ ಸಾಹಿತ್ಯ—ಸ್ವತಂತ್ರ ಕರ್ನಾಟಕ ಕಾರ್ಯಾಲಯ

ಆಸ್ಥಾನವಿದ್ವಾನ್, ಪಂಡಿತರತ್ನಂ, ಕೀರ್ತನಾಚಾರ್ಯ, ಕರ್ನಾಟಕವಿಭೂಷಣ, ವಿದ್ಯಾವಾರಿಧಿ

ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರೀ

ಸಂಪಾದಕರು ಶರಣಸಾಹಿತ್ಯ

---

ಓಂ

೧೪೧, ರಂಗಸ್ವಾಮಿಗುಡಿ ಬೀದಿ
ಬೆಂಗಳೂರು—೨

ತಾ|| ೩-೩-೧೯೬೮

ಕನ್ನಡನಾಡಿನ ಬೆಡಗಿನ ಸೀಮೆ ಎನಿಸಿರುವ ಕೊಡಗು ಜಿಲ್ಲೆಯ ಭಾಗಮಂಡಲದಲ್ಲಿನ ನಿವಾಸಿಗಳಾಗಿರುವ, ಎಲೆಯ ಮರೆಯ ಕಾಯಿಯಂತೆ ನಾಡುನುಡಿಗಳ ಸೇವೆಯನ್ನು ವಿನಮ್ರವಾಗಿ ನಡೆಸುತ್ತಿರುವ ಶ್ರೀ ಎ. ಕೆ. ಶಂಕರನಾರಾಯಣ ಭಟ್ ಅವರು ಶ್ರದ್ಧಾ ಸಕ್ತಿಯಿಂದ ಬರೆದಿರುವ 'ಹಿಂದೂಧರ್ಮದ ಪರಿಚಯ' ಎಂಬ ಗ್ರಂಥವನ್ನು ನಾನು ಕುತೂಹಲದಿಂದ, ವಿಹಂಗಮ ದೃಷ್ಟಿಯಿಂದ ಓದಿನೋಡಿದ್ದೇನೆ. ಈ ಪುಸ್ತಕದಲ್ಲಿ ಹಿಂದೂಧರ್ಮ ಎಂದರೇನು ? ಹಿಂದೂಧರ್ಮದ ಗ್ರಂಥಗಳು ಯಾವುವು ? ಹಿಂದೂ ದರ್ಶನಗಳ ವೈಶಿಷ್ಟ್ಯವೇನು ? ಹಿಂದೂ ಧರ್ಮಕ್ಕೂ ಯೋಗಶಾಸ್ತ್ರಕ್ಕೂ ಇರುವ ಸಂಬಂಧವೇನು ? ಚತುರ್ವರ್ಣಗಳ ಗುಟ್ಟು-ಗುರಿ ಏನು ? ಹಿಂದೂಧರ್ಮದ ಉಪಾಸನಾಮಾರ್ಗ ಹೇಗೆ ? ಹಿಂದೂಗಳ ಹಬ್ಬಹರಿದಿನಗಳ ರಹಸ್ಯವೇನು ? ಹಿಂದೂಧರ್ಮದ ಋಷಿಗಳು—ಆಚಾರ್ಯರು-ಸಂತರು ಇವರ ಮಹತ್ವವೇನು ? ಹಿಂದೂಧರ್ಮದ ಗುರು ಮಠಗಳ ಸ್ಥಿತಿಗತಿ ಏನು ? ಧರ್ಮವು ಸಾಗಿಬಂದ ದಾರಿ, ವಿಜ್ಞಾನ ದೃಷ್ಟಿಯಲ್ಲಿ ಹಿಂದೂ ಧರ್ಮದ ಸ್ಥಾನ, ಹಿಂದೂಧರ್ಮ ಮತ್ತು ಆಧುನಿಕ ಭಾರತ, ಹಿಂದೂಧರ್ಮವು ಜಗತ್ತಿನ ಸನಾತನಧರ್ಮವೆಂದು ಯಾತಕ್ಕಾಗಿ ಹೇಳಿಸಿಕೊಂಡಿದೆ ?—ಇತ್ಯಾದಿ ವಿಷಯಗಳನ್ನು ಕುರಿತು ಸರಳವಾದ ಭಾಷೆಯಲ್ಲಿ ಸ್ವಾರಸ್ಯವಾಗಿ ಮತ್ತು ಶಾಸ್ತ್ರಾಧಾರಪೂರ್ಣವಾಗಿ ನಿರೂಪಿಸಿದ್ದಾರೆ. ಕನ್ನಡದಲ್ಲಿ ಹಿಂದೂಧರ್ಮದ ಸಾರ, ಹಿಂದೂದರ್ಶನಸಾರ, ಭಾರತೀಯ ಸಂಸ್ಕೃತಿ, ಭಾರತೀಯ ತತ್ತ್ವಮೀಮಾಂಸೆ, ಉಪನಿಷತ್ತುಗಳು, ಬ್ರಹ್ಮ ಸೂತ್ರಗಳು, ಭಗವದ್ಗೀತೆ, ವೇದಮಂತ್ರಾರ್ಥಗಳು, ಶಿವಾಗಮಗಳು, ಸ್ಮೃತಿಗ್ರಂಥಗಳು, ಇತ್ಯಾದಿಗಳನ್ನು ಕುರಿತು ಹಲವು ಹೊತ್ತಗೆಗಳು ರಚನೆಯಾಗಿಬೆಳಕಿಗೆ ಬಂದಿವೆ. ಮೈಸೂರು ಶ್ರೀಮನ್ ಮಹಾರಾಜರವರಾದ ಶ್ರೀ ಜಯಚಾಮರಾಜ ಒಡೆಯರವರ ಸತ್‌ಸಂಕಲ್ಪದ ಫಲವಾಗಿ ಋಗ್ವೇದ, ಗೀತಾಭಾಷ್ಯ, ಹದಿನೆಂಟು ಪುರಾಣಗಳು ಮೊದಲಾದವುಗಳು ಎಲ್ಲವೂ ಈಗ ಕನ್ನಡಕ್ಕೆ ಟೀಕೆಟಿಪ್ಪಣಿ ಸಮೇತ ಭಾಷಾಂತರವಾಗಿವೆ. ಲೋಕಮಾನ್ಯ ತಿಲಕರ ಗೀತಾರಹಸ್ಯ, ಆಚಾರ್ಯ ರಾನಡೆಯವರ ಪರಮಾರ್ಥ ಪಥ ಮತ್ತು ಉಪನಿಷತ್ ರಹಸ್ಯ ಮೊದಲಾದ ಗ್ರಂಥಗಳು ಕನ್ನಡದಲ್ಲಿ ಬೆಳಕಿಗೆ

ಬಂದಿವೆ. ಶಿವಶರಣರ ವಚನಶಾಸ್ತ್ರ, ಹರಿದಾಸಭಕ್ತಿಸಾಹಿತ್ಯ ಇವೆಲ್ಲವೂ ಸಹ ಕನ್ನಡದಲ್ಲಿ ಬೆಳಕನ್ನು ಕಂಡಿವೆ. ಈ ಮೇಲೆ ಕಂಡ ಎಲ್ಲ ಗ್ರಂಥಗಳೂ ಸನಾತನವಾದ ಹಿಂದೂ ಧರ್ಮದ ತತ್ತ್ವಗಳನ್ನೇ ಬೇರೆ ಬೇರೆ ರೀತಿಯಲ್ಲಿ ನಿರೂಪಿಸುತ್ತವೆ ಎಂದು ಹೇಳ ಬಹುದು. ಇತ್ತೀಚೆಗೆ ಶ್ರೀರಾಮಕೃಷ್ಣಮಠ, ಅರವಿಂದಾಶ್ರಮ, ರಮಣಾಶ್ರಮ, ಗಾಂಧೀ ಸ್ಮಾರಕ ನಿಧಿ, ಬ್ರಹ್ಮಜ್ಞಾನ ಸಮಾಜ, ಆರ್ಯಸಮಾಜ, ಬಸವ ಸಮಿತಿ ಮೊದಲಾದ ಸಂಘಸಂಸ್ಥೆಗಳಿಂದ ಹಿಂದೂದರ್ಶನ, ಸಂಸ್ಕೃತಿಗಳನ್ನು ಕುರಿತಾದ ಹಲವಾರು ಗ್ರಂಥಗಳು ಪ್ರಕಟವಾಗಿವೆ. ಈ ಎಲ್ಲ ಗ್ರಂಥಗಳ ಸಾರಸಂಗ್ರಹವೇ ಪ್ರಕೃತ ಗ್ರಂಥವಾದ 'ಹಿಂದೂ ಧರ್ಮದ ಪರಿಚಯು' ಎಂಬುದು.

ತತ್ತ್ವಜಿಜ್ಞಾಸುಗಳಾದ ಶ್ರೀ ಎ. ಕೆ. ಶಂಕರನಾರಾಯಣ ಭಟ್ಟರು ಹಿಂದೂ ಸಂಘಟನೆ, ಹಿಂದೂಧರ್ಮದ ಪ್ರಸಾರ, ಜನಸಾಮಾನ್ಯರಲ್ಲಿ ಹಿಂದೂಧರ್ಮದ ಜಾಗೃತಿ ಯನ್ನುಂಟುಮಾಡೋಣ ಎಂಬ ದೃಷ್ಟಿಯನ್ನು ಉಳ್ಳವರಾಗಿಯೇ ಈ ಗ್ರಂಥವನ್ನು ಬರೆದಿರುವರೆಂದು ನಾವು ನಂಬಬಹುದು. ಈ ಪುಸ್ತಕದಲ್ಲಿ ದ್ವೈತ, ವಿಶಿಷ್ಟಾದ್ವೈತ, ಅದ್ವೈತ, ಶೈವ, ವೈಷ್ಣವ, ವೀರಶೈವ, ಜೈನ, ಬೌದ್ಧ, ಶಾಕ್ತ, ನ್ಯಾಯ, ಸಾಂಖ್ಯ ಇತ್ಯಾದಿ ಭಾರತೀಯ ದರ್ಶನಗಳ ವಿಚಾರವನ್ನು ಸಂಗ್ರಹವಾಗಿ ನಿರೂಪಿಸಲಾಗಿದೆ. ಹೀಗೆ ಮತಮತಗಳ ವಿಷಯವನ್ನು ಬರೆಯುವಾಗ ವಿಭಿನ್ನದರ್ಶನಗಳಲ್ಲಿ ಇರುವ ಸಾಮಾನ್ಯ ಹೋಲಿಕೆಗಳನ್ನು ಗಮನಿಸಿ ಜನರಲ್ಲಿ ಭಾವೈಕ್ಯತೆಗೆ ಅನುಕೂಲವಾಗುವ ರೀತಿಯಲ್ಲಿ ಭಾರತದ ರಾಜ್ಯಾಂಗವನ್ನು ಅನುಲಕ್ಷಿಸಿ ವಿಷಯಗಳನ್ನು ಇಂದಿನ ಪರಿಸ್ಥಿತಿಗೆ ನಿರೂಪಿಸಿ ರುವುದು ಈ ಗ್ರಂಥಕರ್ತರ ವಿವೇಕವನ್ನೂ ಸಹೃದಯಭಾವವನ್ನೂ ಸೂಚಿಸುತ್ತದೆ.

ಐದನೆಯ ಪ್ರಕರಣದಲ್ಲಿ ಕರ್ಮ, ಭಕ್ತಿ, ರಾಜ ಮತ್ತು ಜ್ಞಾನಯೋಗಗಳನ್ನು ಪ್ರಸ್ತಾಪಿಸಲಾಗಿದೆ. ಈ ನಾಲ್ಕು ಯೋಗಗಳಿಗೆ ಮಿಗಿಲಾದ ಶಿವಶರಣರು ಅನುಸರಿಸಿದ ಶಿವಾಗಮಪ್ರತಿಪಾದಿತವಾದ ಶಿವಯೋಗವನ್ನು ಕುರಿತು ಪ್ರಸ್ತಾಪಿಸಿದ್ದರೆ ಈ ಯೋಗ ಪ್ರಕರಣ ಓದುಗರಿಗೆ ಇನ್ನೂ ಹೆಚ್ಚು ಪ್ರಯೋಜನವಾಗುತ್ತಿತ್ತೆಂದು ನನ್ನ ಅಭಿಪ್ರಾಯ ವಾಗಿದೆ.

ಹಿಂದೂಸಮಾಜದಲ್ಲಿ ವಾದಗ್ರಸ್ತವಾಗಿರುವ ವರ್ಣಾಶ್ರಮಗಳನ್ನು ಕುರಿತು ಈ ಗ್ರಂಥದ ಏಳನೇ ಪ್ರಕರಣದಲ್ಲಿ ವಿಸ್ತಾರವಾಗಿ ಪ್ರಕಟಿಸಲಾಗಿದೆ. ಇಂದು ಭಾರತದಲ್ಲಿ ವರ್ಣಾಶ್ರಮ ವ್ಯವಸ್ಥೆ ನಿಲ್ಲುವುದಕ್ಕೆ ಪ್ರತಿಕೂಲವಾದ ಸನ್ನಿವೇಶವಿದೆ. ರಾಜ್ಯಾಂಗದಲ್ಲಿ ಇದಕ್ಕೆ ಸ್ಥಳವಿಲ್ಲ. ವಿಚಾರವಂತರ ಬೆಂಬಲ ಇದಕ್ಕೆ ಲಭಿಸಲಿಲ್ಲ. ಅಲ್ಲದೆ ಪ್ರಾಚೀನಕಾಲ ದಿಂದಲೂ ಅತಿವರ್ಣಾಶ್ರಮಿಗಳ ಒಂದು ಪರಂಪರೆ ಶಿವಾಗಮಗಳಿಂದ ಸ್ಫೂರ್ತಿ ಯನ್ನು ಪಡೆದು ಸಮಾಜದಲ್ಲಿ ಅನುಷ್ಠಾನಕ್ಕೆ ಬಂದಿದೆ. ಆದುದರಿಂದ ಈ ವಿಷಯವನ್ನು ಸರ್ವಸಮ್ಮತವಾಗಿ ತೀರ್ಮಾನಮಾಡುವುದು ಕಷ್ಟಕರ. ಈ ವಿಷಯದ ತೀರ್ಮಾನವನ್ನು ಓದುಗರ ಮೇಲೆ ಬಿಟ್ಟಿರುವುದು ಲೇಖಕರ ಜಾಣತನಕ್ಕೆ ನಿದರ್ಶನವಾಗಿದೆ. ಈ ಗ್ರಂಥದ ಒಂಬತ್ತನೇ ಪ್ರಕರಣದಲ್ಲಿ ಕರ್ಮ, ಪುನರ್ಜನ್ಮ, ಅವತಾರ ಇತ್ಯಾದಿ ಹಿಂದೂಧರ್ಮದಲ್ಲಿ ಬಹುಕಾಲದಿಂದ ಅಂಟಿಕೊಂಡುಬಂದಿರುವ ಮತ್ತು ಸಮಸ್ಯಾತ್ಮಕವಾಗಿರುವ ಸಿದ್ಧಾಂತ

ಇವುಗಳ ಕುರಿತು ಪ್ರಸ್ತಾಪಿಸಿರುವ ಆ ಸಂಬಂಧಪಾದ ಆಕ್ಷೇಪಗಳನ್ನು ಎತ್ತಿತೋರಿಸಿ ಅದಕ್ಕೆ ಸಮಾಧಾನ ಹೇಳಿಸುವುದು ಈ ಗ್ರಂಥದ ಒಂದು ಉಪಯುಕ್ತ ವಿಧಾನವಾಗಿದೆ.

ಹಿಂದೂಧರ್ಮದ ಹಬ್ಬಹುಣ್ಣಿಮೆಗಳು, ಆಚಾರವಿಚಾರಗಳು, ವ್ರತನಿಯಮಗಳು, ಗುರುಪೀಠಗಳು, ಋಷಿಗಳು, ಆಚಾರ್ಯರು, ಸಂತರು ಇತ್ಯಾದಿ ವಿಚಾರಗಳನ್ನೂ ಹಿಂದೂಧರ್ಮವು ಸಾಗಿಬಂದ ದಾರಿ ಎಂಬುದನ್ನೂ ಸುಂದರವಾಗಿ ನಿರೂಪಿಸಿರುವುದು ಇಂದು ಹಿಂದೂ ಎನ್ನಿಸಿಕೊಳ್ಳುವ ಪ್ರತಿಯೊಬ್ಬನೂ ಈ ಗ್ರಂಥವನ್ನು ಓದುವುದು ಲಾಭಪ್ರದ ಎನ್ನುವಂತಿದೆ. ವಿಜ್ಞಾನಯುಗದಲ್ಲಿ ಹಿಂದೂಧರ್ಮದ ಸ್ಥಾನ, ಹಿಂದೂ ಧರ್ಮ ಮತ್ತು ಆಧುನಿಕ ಭಾರತ ಎಂಬ ಕಡೇ ಎರಡು ಪ್ರಕರಣಗಳು ಗ್ರಂಥಕರ್ತರ ಲೋಕಾನುಭವ ಮತ್ತು ಶಾಸ್ತ್ರಾನುಭವಕ್ಕೆ ನಿದರ್ಶನವಾಗಿದೆ. ಈ ಗ್ರಂಥದಲ್ಲಿ ಬೇಕಾದಷ್ಟು ಪ್ರಾಚೀನ ಗ್ರಂಥಗಳ ಪ್ರಮಾಣಗಳನ್ನು ಕೊಟ್ಟಿರುವುದರಿಂದ ಲೇಖಕರು ಹೇಳುವ ಸಂಗತಿಗಳು ಆಧಾರಪೂರ್ಣ ಎನಿಸಿವೆ.

ಒಟ್ಟಿನಲ್ಲಿ ಹಿಂದೂಧರ್ಮದ ತತ್ತ್ವಗಳನ್ನು, ಆಚಾರವಿಚಾರಗಳನ್ನು ಆಬಾಲವೃದ್ಧರಾಗಿ ಎಲ್ಲರೂ ಸುಲಭವಾಗಿ ತಿಳಿಯಲು ಈ ಗ್ರಂಥವು ಕೈಗನ್ನಡಿಯಂತಿದೆ. ಕನ್ನಡ ನಾಡುನುಡಿಗಳ ಅಭಿಮಾನಿಗಳೂ ಹಿಂದೂಧರ್ಮದಲ್ಲಿ ಆಸಕ್ತಿಯುಳ್ಳವರೂ ಅಗತ್ಯವಾಗಿ ಈ ಗ್ರಂಥವನ್ನು ಓದಿ ಇದರ ಪ್ರಯೋಜನವನ್ನು ಪಡೆಯಬೇಕೆಂದು ನಾನು ಬಿನ್ನವಿಸುತ್ತೇನೆ.

ಈಗ ಭಾರತದಲ್ಲಿಯೂ, ಕರ್ಣಾಟಕದಲ್ಲಿಯೂ ವಿಶ್ವ ಹಿಂದೂ ಪರಿಷತ್ ಎಂಬ ಹೆಸರು ಕೇಳಿಬರುತ್ತಿದೆ. ಹಿಂದೂಧರ್ಮವು ವಿಶ್ವವ್ಯಾಪಕವಾದುದು, ಹಿಂದೂಗಳ ಅಸ್ತಿತ್ವವು ವಿಶ್ವದಲ್ಲೆಲ್ಲಾ ಇದೆ ಎಂಬ ಅರ್ಥವನ್ನು ಈ ಪರಿಷತ್ ಬೋಧಿಸುತ್ತದೆ. ವಿಶ್ವ ಹಿಂದೂ ಪರಿಷತ್ತಿನ ಅಭಿಮಾನಿಗಳು ಹಿಂದೂಧರ್ಮದ ಸರಳಸುಂದರ ಪರಿಚಯವನ್ನು ಮಾಡುವ ಈ ಗ್ರಂಥವನ್ನು ಅವಲೋಕಿಸುವುದರಿಂದ ಅವರು ಹೆಚ್ಚಿನ ಧರ್ಮ ಸ್ಫೂರ್ತಿ ಪಡೆಯಬಹುದೆಂದು ನಾನು ನಂಬುತ್ತೇನೆ.

ದಕ್ಷಿಣ ಭಾರತದ ಗಂಗಾನದಿಯೆಂದು ಪ್ರಸಿದ್ಧವಾಗಿರುವ ಕಾವೇರಿ ನದಿಯು ಹುಟ್ಟಿರುವ ತಲಕಾವೇರಿ-ಭಾಗಮಂಡಲ ಪ್ರದೇಶದಲ್ಲಿ ವಾಸವಾಗಿರುವ, ಶ್ರೀಕಾವೇರಿದೇವಿಯ ಪೂರ್ಣಾನುಗ್ರಹಕ್ಕೆ ಪಾತ್ರರಾಗಿರುವ ಶ್ರೀ ಎದುರ್ಕಳ ಕೆ. ಶಂಕರನಾರಾಯಣ ಭಟ್ಟರು ಇಂತಹ ಉಪಯುಕ್ತವಾದ ಇನ್ನೂ ಹಲವು ಗ್ರಂಥಗಳನ್ನು ಬರೆದು ಕನ್ನಡಿಗರಿಗೆ ಹೆಚ್ಚಿನ ಸೇವೆಯನ್ನು ಸಲ್ಲಿಸುವಂತೆ ಭಗವಾನ್ ಶಂಕರನಾರಾಯಣರು ಅವರಿಗೆ ಇತೋಪ್ಯತಿಶಯವಾದ ಆಯುರಾರೋಗ್ಯಭಾಗ್ಯಗಳನ್ನು, ಉತ್ಸಾಹ-ಸ್ಫೂರ್ತಿ-ಆವೇಶಗಳನ್ನು ಅನುಗ್ರಹಿಸಲೆಂದು ನಾನು ಹಾರೈಸುತ್ತೇನೆ.

**ಸತ್ಯಂ ಶಿವಂ ಸುಂದರಂ**

ಇಂತು

**ಬಿ. ಶಿವಮೂರ್ತಿಶಾಸ್ತ್ರೀ**

ಡಾ|| ಸಿದ್ದಯ್ಯ ಪುರಾಣಿಕ, ಐ.ಎ.ಎಸ್.

ಅಲಿ ಅಸ್ಗರ್ ರೋಡ್
ಬೆಂಗಳೂರು–೫೨

೧-೩-೧೯೬೮

ಕನ್ನಡ ನಾಡಿನ ಸೊಬಗಿನ ಸೀಮೆ ಕೊಡಗಿನ ಭಾಗಮಂಡಲವು ಕಾವೇರಿ–ಕನ್ನಿಕೆ–ಸುಜ್ಯೋತಿಯರ ತ್ರಿವೇಣೀಸಂಗಮದಿಂದ ಪವಿತ್ರವೂ ಪ್ರಖ್ಯಾತವೂ ಆಗಿರುವ ಕ್ಷೇತ್ರವಾಗಿದೆ. ಅಲ್ಲಿರುವ ದೇವಾಲಯವೂ ತ್ರಿಮೂರ್ತಿಗಳ ಸ್ಥಾನವಾಗಿದ್ದು ಸಮನ್ವಯದ ಸಂಕೇತವಾಗಿ ಶೋಭಿಸುತ್ತಿದೆ.

ಇಂಥ ವೈಶಿಷ್ಟ್ಯಪೂರ್ಣ ಕ್ಷೇತ್ರದಲ್ಲಿ ವಾಸಿಸುತ್ತ ಆತ್ಮವಿಕಾಸಕ್ಕಾಗಿ ಹಗಲಿರುಳು ಹಂಬಲಿಸುತ್ತಿರುವ ಶ್ರೀ ಎದುರ್ಕಳ ಕೆ. ಶಂಕರನಾರಾಯಣ ಭಟ್ಟರು ತ್ರಿಮತಾಚಾರ್ಯರ, ಕಾಂಡತ್ರಯಗಳ, ಷಡ್ದರ್ಶನಗಳ, ಪ್ರಸ್ಥಾನತ್ರಯಗಳ ಅಧ್ಯಯನಬಲದಿಂದ ಸಮಸ್ತ ಹಿಂದೂ ಬಾಂಧವರಿಗೆ ಉಪಯುಕ್ತವಾಗಬಲ್ಲ ಹೆಬ್ಬೊತ್ತಗೆಯೊಂದನ್ನು ರಚಿಸಿದ್ದಾರೆ— 'ಹಿಂದೂಧರ್ಮದ ಪರಿಚಯ' ಎಂದು ಹೆಸರಿಟ್ಟು.

ಇದು ನಿಜವಾಗಿಯೂ ಶ್ಲಾಘ್ಯ ಸಾಹಸ, ಸ್ತುತ್ಯ ಸಾಧನೆ. ಶ್ರೀ ಭಟ್ಟರ ವಾಙ್ಮಯ ತಪಸ್ಸು ಅವಿರತವಾಗಿ ಸಾಗಿ ಅನೇಕ ಅಮೃತಫಲಗಳನ್ನು ಕೊಡುವಂತೆ ಸಮಾಜ ಸಕ್ರಿಯವಾಗಿ ಸಹಕಾರವನ್ನು ನೀಡಬೇಕು. ನಾಡಿನ ಆಬಾಲವೃದ್ಧರಿಗೂ ರುಚಿಸುವಂತೆ ಸರಳ ಸುಲಭ ಶೈಲಿಯಲ್ಲಿ ರಚಿತವಾಗಿರುವ ಈ ಸತ್ಕೃತಿಗೆ ಸಕಲರ ಪ್ರೋತ್ಸಾಹ ದೊರೆಯಬೇಕು. ದೊರೆಯಲೆಂದು ಹಾರೈಸುತ್ತೇನೆ.

ಸಿದ್ದಯ್ಯ ಪುರಾಣಿಕ

'ಈಶಾವಾಸ್ಯ' ಅಂಬಲಪಾಡಿ

ಬನ್ನಂಜೆ ಗೋವಿಂದಾಚಾರ್ಯ

ಉಡುಪಿ 576 103

(ದ. ಕ. ಜಿಲ್ಲೆ) ಕರ್ನಾಟಕ

5-2-1982

ಶ್ರೀ ಎದುರ್ಕಳ ಶಂಕರನಾರಾಯಣ ಭಟ್ಟರು ಈ 'ಹಿಂದೂಧರ್ಮದ ಪರಿಚಯ'ವನ್ನು ಕನ್ನಡ ಜನತೆಗೆ ಒಪ್ಪಿಸುವ ಮೂಲಕ ತಮ್ಮ ಬದುಕಿನ ಸಾರ್ಥಕ್ಯದ ಒಂದು ಕೆಲಸವನ್ನು ಮಾಡಿದ್ದಾರೆ. ಭಾರತೀಯರು ತಮ್ಮ ಪರಂಪರೆಯ ಅರಿವು ಕಳೆದುಕೊಂಡು ತಾವು ಎಂಥ ಸಂಪತ್ತನ್ನು ಕಳೆದುಕೊಳ್ಳುತ್ತಿದ್ದೇವೆ ಎನ್ನುವ ಎಚ್ಚರವೂ ಇಲ್ಲದೆ ತಿಳಿಗೇಡಿಗಳಾಗಿ ಬದುಕುತ್ತಿದ್ದಾರೆ ಥಾಮಸ್ ಗಾಸ್ಪೆಲ್ಲಿನ ಒಂದು ಮಾತನ್ನು ಇಲ್ಲಿ ನೆನಪಿಸಿಕೊಳ್ಳಬೇಕು· "The Monarchy is like a man who had a treasure hidden in his field without knowing it. And after he died, he left it to his son The son did not know about it—he accepted that field, he sold it. And he who purchased it, he went—while he was plowing he found the treasure. He began to give money to whomever he wished."—(109)

ನಮ್ಮ ಪರಿಸ್ಥಿತಿಯೂ ಹೀಗೆಯೇ ಆಗಿದೆ. ನಮ್ಮ ತೋಟದಲ್ಲಿ ಹುದುಗಿದ್ದ ಸಂಪತ್ತನ್ನು ಯಾರುಯಾರೋ ಕಂಡುಕೊಂಡು ಶ್ರೀಮಂತರಾಗುತ್ತಾರೆ. ನಾವು ಅವರ ಶ್ರೀಮಂತಿಕೆಯನ್ನು ಕಂಡು ರೊಟ್ಟಿಗಾಗಿ ಅವರ ಮುಂದೆ ಕೈಯೊಡ್ಡುತ್ತಿದ್ದೇವೆ. ನಮ್ಮದೇ ಸಂಪತ್ತನ್ನು ಅವರು ನಮಗೆ ಹಂಚುತ್ತಿದ್ದಾರೆ ಎನ್ನುವ ಅರಿವೂ ನಮಗಿಲ್ಲ. ಇಂಥ ಒಂದು ವಿಚಿತ್ರವಾದ 'ಬುದ್ಧಿವಂತಿಕೆ'ಯ ಜನರ ನಡುವೆ ನಾವು ಬದುಕುತ್ತಿದ್ದೇವೆ. ಇಂಥ ಸಂದರ್ಭದಲ್ಲಿ ಅಗತ್ಯವಾಗಿ ನಡೆಯಬೇಕಾದ ಕೆಲಸ ಎಂದರೆ—'ನೀನು ಕೈಯೊಡ್ಡಿ ಬೇಡುತ್ತಿರುವ ಭಿಕ್ಷೆ ನಿಮ್ಮ ಮನೆಯದೆ ಮೂಲನಿಧಿ' ಎಂದು ಈ 'ಬಡವ'ರಿಗೆ ತಿಳಿಹೇಳುವುದು. ಮರೆತ ಶ್ರೀಮಂತಿಕೆಯನ್ನು ಮತ್ತೆ ನೆನಪಿಸುವ ಈ ಅತ್ಯಂತ ಮಹತ್ವದ ಕೆಲಸವನ್ನು ಮಾಡುವುದಕ್ಕಾಗಿ ತನ್ನ ಜೀವನವನ್ನು ಮುಡುಪಾಗಿಟ್ಟ ಶ್ರೀ ಶಂಕರನಾರಾಯಣ ಭಟ್ಟರನ್ನು ಎಷ್ಟು ಅಭಿನಂದಿಸಿದರೂ ಕಮ್ಮಿ. ಇಂಥ ಮಹತ್ವದ ಕಾರ್ಯ ಇನ್ನಷ್ಟು ಯಶಸ್ವಿಯಾಗಿ ಅವರಿಂದ ನಿರಂತರ ನಡೆಯುತ್ತಿರಲಿ.

ಬನ್ನಂಜೆ ಗೋವಿಂದಾಚಾರ್ಯ

# ತಿದ್ದುಪಡಿ

| | ಸಾಲು | ಅಶುದ್ಧ | ಶುದ್ಧ |
|---|---|---|---|
| ಪುಟ—೧೯ | ೩ | ೪೦ ಅಧ್ಯಾಯಗಳಿವೆ | ೮೪ ಅಧ್ಯಾಯಗಳಿವೆ |
| ಪುಟ—೧೪೧ | ೧೪ | ಲಿಂಗರೂಪದಲ್ಲಿದೆ | ಲಿಂಗರೂಪದಲ್ಲಿ |
| ಪುಟ—೧೪೪ | ೨೦ | ಶಿವ ಶಿವ ಭಕ್ತರ | ಶಿವಭಕ್ತರ |
| ಪುಟ—೪೮೮ | ೨೩ | ಸತ್ಕಕ್ಕೆ | ಸತ್ಯಕ್ಕೆ |

# ಈ ಗ್ರಂಥಕರ್ತರನ್ನು ಕುರಿತು....

ಶ್ರೀ ಎದುರ್ಕಳ ಕೆ. ಶಂಕರನಾರಾಯಣ ಭಟ್ಟರು ಭಾಗಮಂಡಲದಲ್ಲಿ ಜನಿಸಿ ತಮ್ಮ ಪ್ರೌಢಶಾಲಾ ವಿದ್ಯಾಭ್ಯಾಸವನ್ನು ಮಡಿಕೇರಿಯ ಸೆಂಟ್ರಲ್ ಹೈಸ್ಕೂಲಿನಲ್ಲಿ ಪೂರೈಸಿದರು ಕರ್ನಾಟಕ ವಿಶ್ವವಿದ್ಯಾಲಯದ ಬಿ. ಎ. ಪದವೀಧರರಾದ ಇವರು ಶ್ರೀ ರಾಮಕೃಷ್ಣ ಮಠ ಮತ್ತು ಮಿಶನ್ ಸಂಸ್ಥೆಯ ಹಿರಿಯ ಸ್ವಾಮಿಗಳಾಗಿದ್ದ ಶ್ರೀಮತ್ ಸ್ವಾಮಿ ಯತೀಶ್ವರಾನಂದಜೀ ಮಹಾರಾಜ್‌ರವರಿಂದ ಮಂತ್ರದೀಕ್ಷೆಯನ್ನು ಪಡೆದು ಸನಾತನ ವೈದಿಕಧರ್ಮ ಮತ್ತು ಸಂಸ್ಕೃತಿಯನ್ನು ಆಳವಾಗಿ ಅಧ್ಯಯನ ಮಾಡಿರುತ್ತಾರೆ. 'ಶ್ರೀ ಕಾವೇರಿ ದರ್ಶನ' ಎಂಬುದು ಇವರ ಮೊದಲ ಕೃತಿ ಶ್ರೀ ಭಟ್ಟರ 'ಹಿಂದೂಧರ್ಮದ ಪರಿಚಯ' ಎಂಬ ಬೃಹದ್‌ಗ್ರಂಥ ೧೯೬೮ರಲ್ಲಿ ಮೊದಲ ಬಾರಿಗೆ ಪ್ರಕಟವಾಯಿತು. ಮಹರ್ಷಿ ಯಾಜ್ಞವಲ್ಕ್ಯ, ಸ್ವಾಮಿ ವಿವೇಕಾನಂದ ದರ್ಶನ, ಎಳೆಯರ ಬದುಕು ಬೆಳಗಲು ಬೆಳಕು, ವಿಚಾರ ದೀಪಿಕೆ, ಪ್ರವಾಸಕಥನ ಎಂಬವುಗಳು ಇವರ ಇನ್ನಿತರ ಕೆಲವು ಕೃತಿಗಳು 'ಶ್ರೀ ಕಾವೇರಿ ವೈಭವ' ಎನ್ನುವುದು ಶ್ರೀ ಭಟ್ಟರ ಇನ್ನೊಂದು ಬೃಹದ್‌ಗ್ರಂಥ ತಲಕಾವೇರಿಯಿಂದ ಕಾವೇರಿ ಪೂಂಪಟ್ಟಣದವರೆಗೆ ಕಾವೇರಿ ನದಿ ಹರಿದು ಸಾಗಿದಂತೆ ಪಾದಯಾತ್ರೆ ಮಾಡಿ ಅಧ್ಯಯನ ನಡೆಸಿ ಶ್ರೀಯುತ ಭಟ್ಟರು ರಚಿಸಿದ ಶ್ರೀ ಕಾವೇರಿಯ ಲೌಕಿಕ ಹಾಗೂ ಆಧ್ಯಾತ್ಮಿಕ ವೈಭವಗಳನ್ನು ಒಳಗೊಂಡ 'ಶ್ರೀ ಕಾವೇರಿ ವೈಭವ' ಕನ್ನಡ ಸಾಹಿತ್ಯದಲ್ಲೊಂದು ಅಪೂರ್ವ ಕೃತಿಯಾಗಿ ಬೆಳಗುತ್ತಿದೆ. ಶ್ರೀರಾಮಕೃಷ್ಣ ಪರಮಹಂಸ ಮತ್ತು ಸ್ವಾಮಿ ವಿವೇಕಾನಂದರ ದಿವ್ಯೋಪದೇಶಗಳಿಂದ ಪ್ರಭಾವಿತರಾಗಿರುವ ಶ್ರೀಯುತ ಭಟ್ಟರು ಉತ್ತಮ ಬರಹಗಾರರಷ್ಟೇ ಅಲ್ಲದೆ ಶ್ರೇಷ್ಠ ವಾಗ್ಮಿಗಳೂ ಆಗಿದ್ದು ಸನಾತನ ಧರ್ಮದ ಆಚಾರ, ವಿಚಾರ ಮತ್ತು ಪ್ರಚಾರಗಳಿಗಾಗಿ ತಮ್ಮ ಬದುಕನ್ನೇ ಮುಡಿಪಾಗಿಟ್ಟು ದುಡಿಯುತ್ತಿರುವುದು ಇವರ ವೈಶಿಷ್ಟ್ಯವಾಗಿದೆ.

ಇದೀಗ ಜನಪ್ರಿಯ ಆವೃತ್ತಿಯಾಗಿ ಪ್ರಕಟಗೊಂಡಿರುವ 'ಹಿಂದೂ ಧರ್ಮದ ಪರಿಚಯ' ಎಂಬ ಈ ಗ್ರಂಥವು ಶ್ರೀ ಶಂಕರನಾರಾಯಣ ಭಟ್ಟರ ಆಳವಾದ ಅಧ್ಯಯನ, ಚಿಂತನಗಳ ಫಲವಾಗಿ ರೂಪುಗೊಂಡಿರುವ ಅನುಪಮ ಧಾರ್ಮಿಕ ಗ್ರಂಥವಾಗಿದೆ.

---

**This book is approved by the DPI and recommended for purchase by High Schools and Teacher's Trining Institutions out of the Reading Room Fund collections or library funds as the ease may be (No. TBC 29/68-66 : The Mysore Gazette Notiifcation Part III dated 22—11—1968.**




ಬೆಲೆ: ಇಪ್ಪತ್ತು ರೂಪಾಯಿಗಳು